ಶ್ರೀ ಗುರುಸಾರ್ವಭೌಮರ

# ಪರಿಮಳ ವಿಶೇಷಾಧ್ಯಯನ

ಸಂಪುಟ 2

ಬ್ರಹ್ಮಸೂತ್ರ ಅನುವ್ಯಾಖ್ಯಾನ
ಸನ್ನ್ಯಾಯರತ್ನಾವಳಿ ನಯಚಂದ್ರಿಕಾ
ಶ್ರೀಮನ್ ನ್ಯಾಯಸುಧಾ ಪರಿಮಳ
ವಾಕ್ಯಾರ್ಥಚಂದ್ರಿಕಾ ಯಾದುಪತ್ಯ

ಈ ಎಂಟು ಗ್ರಂಥಗಳ ಆಮೂಲಾಗ್ರ ಅನುವಾದ.



ಅಧ್ಯಕ್ಷರು:

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು.
ಪೀಠಾಧಿಪತಿಗಳು

ಸಂಪಾದನೆ ಹಾಗೂ ಅನುವಾದ:

ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.

॥ ಶ್ರೀಮನ್ ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

ಸಂಪುಟ -2

# ಪರಿಮಳ ವಿಶೇಷಾಧ್ಯಯನ

## ಜಿಜ್ಞಾಸಾಧಿಕರಣ

(ಅನುವ್ಯಾಖ್ಯಾನ ಶ್ಲೋಕ 4-8)

ಬ್ರಹ್ಮಸೂತ್ರ
ಅನುವ್ಯಾಖ್ಯಾನ
ಸನ್ನ್ಯಾಯರತ್ನಾವಳೀ
ನಯಚಂದ್ರಿಕಾ
ಶ್ರೀಮನ್ನ್ಯಾಯಸುಧಾ
ಪರಿಮಳ
ವಾಕ್ಯಾರ್ಥಚಂದ್ರಿಕಾ
ಯಾದುಪತ್ಯ

ಈ ಎಂಟೂ ಗ್ರಂಥಗಳ ಆಮೂಲಾಗ್ರ ಅನುವಾದ,
ರಾಯರ ಪರಿಮಳಗ್ರಂಥಕ್ಕೆ ವಿವರಣೆ, ವಿಶೇಷವಿಚಾರ,ಸಾರ,
ನೆನೆಪಿಡಿಗಳೊಂದಿಗೆ ಕನ್ನಡಾನುವಾದ,

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

'ಪರಿಮಳ-ವಿಶೇಷಾಧ್ಯಯನ -2': ಹೇಮಲಂಬಿನಾಮಸಂವತ್ಸರದ ಶ್ರಾವಣಮಾಸ ಕೃಷ್ಣಪಕ್ಷ ದ್ವಿತೀಯಾ ದಿನಾಂಕ 9-08-2017 ಶ್ರೀರಾಘವೇಂದ್ರಸ್ವಾಮಿಗಳ ಮಧ್ಯಾರಾಧನೆಯ ಶುಭಸಂದರ್ಭದಲ್ಲಿ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರು ಈ ಕೃತಿಯನ್ನು ರಾಘವೇಂದ್ರಸ್ವಾಮಿಗಳ ಅಂತರ್ಯಾಮಿಗಳಲ್ಲಿ ಸಮರ್ಪಣೆ ಮಾಡಿದರು.


| | |
|---|---|
| ಪ್ರಕಾಶನ | : ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,<br>ಬೆಂಗಳೂರು. ದೂರವಾಣಿ 9141495120 |
| ಪ್ರಥಮಮುದ್ರಣ | : 2017 |
| ಪುಟಗಳು | : **704** |
| ಬೆಲೆ | : 500 ರೂ |
| ಪ್ರತಿಗಳು | : 1000 |





ಅಕ್ಷರಜೋಡಣೆ :
ಸುಬ್ಬಣ್ಣ ಕೆಂಪದಾಳಿಹಳ್ಳಿ. (080-26761614)
ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

Srimanmularamo vijayate

Sri Gururajo vijayate

VOLUME - 2

# PARIMAḶA

## VIŚEṢĀDHYANA

### JIJNĀSĀDHIKARAṆA

ANUVYĀKYĀNA - STANZAS (4-8)

| | |
|---|---|
| BRAHMASŪTRAS | SRĪMANNYĀSUDHĀ |
| ANUVYĀKHYĀNA | PARIMAḶA |
| SATTARKADĪPĀVAḶĪ | VAKYĀRTHACHANDRIKĀ |
| NAYACHANDRIKĀ | YADUPATYA |

**with meanings in Kannada of the above eight great works**

**Notes, Q&A and Headings,**

**Explanatory Notes**

*****


PUBLISHERS

**SRI GURUSĀRVABHOUMA SAMŚHODHANA MANDIRA**

Jagaduguru Śrimanmadhvāchārya Mūlamahāsamsthāna

Sri Rāghavendraswāmigala Matha, Mantralayam- 518 345

ANDHRAPRADESH

**PARIMAḶA VIŚEṢĀDHYANA** was released on the auspicious occassion of Madhyaradhane of Sri Raghavendra swamiji on 9-8-2017. Sri Hemalambi Shravana Kṛṣṇa Dvitiyā at Mantralayam

PUBLISHERS : **SRI GURUSĀRVABHOUMA SAMŚHODHANA MANDIRA**
Jagaduguru Śrimanmadhvāchārya Mūlamahāsamsthāna
Sri Rāghavendraswāmigala Matha, Mantralayam- 518 345
ANDHRAPRADESH

**COMPILED, EDITED AND TRANSLATED BY** : **Vidwan Bemmatti Venkateshacharya,** Bangalore **Ph.** 9141495120

**YEAR OF PUBLICATION** : **2017**

**NO OF PAGES** : **704**
**PRICE** : **Rs 500 only**

**No of copies** : **1000**



**D.T.P.**
**Subbanna Kempadhali Halli (080-26761624)**

**PRINTERS:**
**MUKTIPATHA MUDRANALAYA,**
**BANGALORE**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಪರಿಮಳ

## ವಿಶೇಷಾಧ್ಯಯನ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ॥ ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

* * *

Srimanmularamo vijayate

Sri Gururajo vijayate

**VOLUME - 2**

# PARIMAḶA

## VIŚEṢĀDHYANA

* * * * * *

PRESIDENT

**HIS HOLINESS SRI SUBUDHENDRATIRTHA SWAMIJI,**

Pitadhipathi, Sri Rāghavendraswāmigala Matha, Mantralayam

HONOURARY EDITOR

**Vidwan RAJA S. GIRI ACHARYA**

Compiled, edited and translated by

**Vidwan BEMMATTI VENKATESHACHARYA**

Bengaluru.

* * * *

# ಎರಡನೆಯ ವಾಙ್ಮಯಪುಷ್ಪಗುಚ್ಛ ಸಮರ್ಪಣೆ

## ಪರಿಮಳ-ವಿಶೇಷಾಧ್ಯಯನ ಸಂಪುಟ-2



ರಾಯರು ಎಂದರೆ ಪರಿಮಳ ಪರಿಮಳ ಎಂದರೆ ರಾಯರು. ಆದ್ದರಿಂದಲೇ 'ಪರಿಮಳಾಚಾರ್ಯರು' ಎಂಬ ಬಿರುದು ಪಡೆದಿರುವರು. ಹೀಗೆ ರಾಯರ ಸ್ವರೂಪದಂತಿರುವ ಪರಿಮಳಗ್ರಂಥದ ಹೆಸರು ಕೇಳದ ಭಕುತರಿಲ್ಲ. ಆದರೆ ಇಲ್ಲಿಯ ತನಕ ಈ ಪರಿಮಳಗ್ರಂಥ ಕೇವಲ ಸಂಸ್ಕೃತಭಾಷೆಯಲ್ಲೇ ಉಳಿದಿತ್ತು. ಪರಿಮಳಗ್ರಂಥ ಪ್ರತಿಯೊಬ್ಬ ಜಿಜ್ಞಾಸುವಿಗೂ ತಲುಪಬೇಕೆಂಬ ಹೆಬ್ಬಯಕೆ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರದ್ದು. ಆದ್ದರಿಂದ ಇದೇ ಮೊದಲಬಾರಿ ಕನ್ನಡಭಾಷೆಯಲ್ಲಿ ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಪ್ರಕಟನೆ ಮಾಡುತ್ತಿರುವರು. ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮಧ್ವಾಚಾರ್ಯರ ಅಂತರ್ಯಾಮಿಯಾದ ಶ್ರೀಮನ್ಮೂಲರಾಮಚಂದ್ರದೇವರಿಗೆ ಎರಡನೆಯ ವಾಙ್ಮಯಪುಷ್ಪಗುಚ್ಛವನ್ನಾಗಿ ಈ ಗ್ರಂಥವನ್ನು ಸಮರ್ಪಣೆ ಮಾಡುತ್ತಿರುವರು.

# ವಿಷಯಾನುಕ್ರಮಣಿಕೆ


| | |
|---|---|
| ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ ।<br>ಯತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ ॥ | 1 |
| ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।<br>ಆಪ್ತವಾಕ್ಯತಯಾ ತೇನ | 86 |
| ಶ್ರುತಿಮೂಲತಯಾ ತಥಾ ।<br>ಯುಕ್ತಿಮೂಲತಯಾ ಚ | 219 |
| ಏವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।<br>ದೃಶ್ಯತೇ ಬ್ರಹ್ಮಸೂತ್ರಾಣಾಂ | 242 |
| ಏಕಧಾಽನ್ಯತ್ರ ಸರ್ವಶಃ ॥ | 259 |
| ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ । | 274 |
| ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ॥ | 299 |
| ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।<br>ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥ | 368 |
| ಸನ್ನ್ಯಾಯರತ್ನಾವಳೀ | 681 |
| ನಯಚಂದ್ರಿಕಾ | 687 |


* * * * * *

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ ।
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥

''ಶ್ರೀಮನ್ನ್ಯಾಯಸುಧಾ'' ಗ್ರಂಥಕ್ಕೆ ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರು ರಚನೆ ಮಾಡಿರುವ ಪರಿಮಳ ಗ್ರಂಥವನ್ನು ಅಧ್ಯಯನ ಮಾಡುವ ಅಪೇಕ್ಷೆ ಅನೇಕ ಜಜ್ಞಾಸುಗಳಿಗಿದೆ. ಕೆಲವರು ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಿ ಈ ಪರಿಮಳಗ್ರಂಥದ ಅಧ್ಯಯನದಲ್ಲಿ ತೊಡಗುತ್ತಾರೆ. ಇನ್ನು ಕೆಲವರಿಗೆ ಸಾಂಪ್ರ-ದಾಯಿಕವಾದ ಅಧ್ಯಯನ ಮಾಡಲು ಸಾಧ್ಯವಾಗದೇ ಪರಿಮಳಗ್ರಂಥದಲ್ಲಿರುವ ವಿಶೇಷತತ್ತ್ವವಿಚಾರಗಳನ್ನು ತಿಳಿದುಕೊಳ್ಳಲು ಉತ್ಸುಕರಾಗಿದ್ದಾರೆ. ಇಂಥವರಿಗೆ ಈ ''ಪರಿಮಳ ವಿಶೇಷಾಧ್ಯಯನ'' ಎಂಬ ಕೃತಿಯು ಅತ್ಯು-ಪಯುಕ್ತವಾಗಿದೆ. ಎಲ್ಲಾ ಬಗೆಯ ಜಿಜ್ಞಾಸುಗಳಿಗೆ ಈ ಕೃತಿಯು ಉಪಯುಕ್ತವಾಗುತ್ತಿದೆ.

ಕಳೆದ ಸಂಪುಟದಲ್ಲಿ ಮಂಗಳಾಚರಣೆಯ ಭಾಗವನ್ನು ಅಧ್ಯಯನ ಮಾಡಿದ್ದಾಯಿತು. ಮತ್ತು ಯಾವುದು ಪರವಿದ್ಯೆ ಎಂಬುದರ ಬಗ್ಗೆ ಕೂಲಂಕಷವಾದ ವಿಮರ್ಶೆಯನ್ನು ಕೂಡ ಮಾಡಿದ್ದಾಯಿತು. ಈ ಸಂಪುಟದಲ್ಲಿ ಬ್ರಹ್ಮಸೂತ್ರಕ್ಕೆ ಪರಮಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ. ಮತ್ತು ಜಿಜ್ಞಾಸಾಧಿಕರಣಕ್ಕೆ ಉಪಯುಕ್ತವಾದ ವಿಷಯ, ಸಂಶಯ, ಪೂರ್ವಪಕ್ಷಗಳನ್ನು ಆಮೂಲಾಗ್ರವಾಗಿ ಸಮರ್ಥಿಸಲಾಗಿದೆ. ಸೂತ್ರದಲ್ಲಿರುವ ಯಾವ ಪದಗಳಿಂದ ಹಾಗೂ ಅನುವ್ಯಾಖ್ಯಾನದ ಯಾವ ಪದ್ಯಗಳಿಂದ ಯಾವ ಪೂರ್ವಪಕ್ಷಗಳು ಪರಿಹಾರವಾಗುತ್ತವೆ

ಎಂಬುದನ್ನು ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರು ಪರಿಮಳ ಟಿಪ್ಪಣಿಯಲ್ಲಿ ಸಂಗ್ರಹಿಸಿ ನೀಡಿರುವುದು ಎಂಥ ವಿದ್ವಾಂಸರಿಗೂ ಕೂಡ ತಲೆದೂಗುವಂತಿದೆ. ಈ ಎಲ್ಲಾ ವಿಚಾರವನ್ನು ತಿಳಿದು ಜಿಜ್ಞಾಸುಗಳು ನ್ಯಾಯಸುಧಾ ಗ್ರಂಥದ ಜೊತೆ ಪರಿಮಳಗ್ರಂಥವನ್ನು ಮತ್ತಷ್ಟು ವಿಶೇಷವಾಗಿ ಅಧ್ಯಯನ ಮಾಡಬೇಕೆಂಬುದು ನಮ್ಮ ಅಪೇಕ್ಷೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರು ನಮ್ಮ ಪಂಚಮಚಾತುರ್ಮಾಸ್ಯಸಂದರ್ಭದ ಶ್ರೀರಾಯರ ಆರಾಧನೆಯಲ್ಲಿ ಈ ಎರಡನೆಯ ಸಂಪುಟವನ್ನು ಬರೆದು ನೀಡಿದ್ದಾರೆ. ಇವರಿಗೆ ಅಸ್ಮದುಪಾಸ್ಯ ಶ್ರೀಮೂಲ-ರಾಮಚಂದ್ರದೇವರು ವಿಶೇಷವಾಗಿ ಜ್ಞಾನಭಕ್ತಿ ವೈರಾಗ್ಯಗಳನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು.

ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು
ಪೀಠಾಧಿಪತಿಗಳು,
ಶ್ರೀರಾಘವೇಂದ್ರಸ್ವಾಮಿಗಳವರ ಮಠ,
ಮಂತ್ರಾಲಯ

# ಲೇಖಕ ಉವಾಚ

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ತಮ್ಮ ಪಂಚಮಚಾತುರ್ಮಾಸ್ಯ ಸಂದರ್ಭದಲ್ಲಿ 'ಪರಿಮಳವಿಶೇಷಾಧ್ಯಯನ' ಎಂಬ ಕೃತಿಯ ಎರಡನೆಯ ಸಂಪುಟವನ್ನು ಬರೆದು ನೀಡಲು ಆಜ್ಞೆಯನ್ನು ಮಾಡಿದರು. ಅವರ ಆಜ್ಞೆಯ ಬಲದಿಂದ ಇದನ್ನು ಬರೆದು ಶ್ರೀರಾಯರ ಆರಾಧನೆಯ ದಿನದಂದೇ ಸಮರ್ಪಿಸುವ ಭಾಗ್ಯ ನನಗೆ ಒದಗಿದೆ. ಪೂಜ್ಯಶ್ರೀಪಾದಂಗಳವರು ಮಾಡುವ ಅನುಗ್ರಹ, ನೀಡುವ ಸ್ಫೂರ್ತಿಗಳಿಂದ ಇಂಥ ಮಹತ್ಕಾರ್ಯಗಳನ್ನು ಸುಲಭವಾಗಿ ಮಾಡಲು ಸಾಧ್ಯವಾಗುತ್ತಿದೆ. ಶ್ರೀಪಾದಂಗಳವರ ಅನುಜ್ಞೆಯಂತೆ ಪ್ರಥಮಸಂಪುಟಕ್ಕಿಂತ ಕೆಲವು ಮಾರ್ಪಾಟುಗಳನ್ನು ಈ ಸಂಪುಟದಲ್ಲಿ ಮಾಡಲಾಗಿದೆ –

ನ್ಯಾಯಸುಧಾಗ್ರಂಥಕ್ಕೆ ಯಾದುಪತ್ಯಟಿಪ್ಪಣಿಯು ವಿದ್ವನ್ಮಾನ್ಯವಾಗಿದೆ. ಪರಿಮಳವಿಶೇಷಾಧ್ಯಯನದ ಜೊತೆ ಆ ಯಾದುಪತ್ಯಟಿಪ್ಪಣಿಯ ಆಮೂಲಾಗ್ರ ಅನುವಾದ ಹಾಗೂ ವಿವರಣೆಗಳನ್ನು ಈ ಸಂಪುಟದಿಂದ ಪ್ರಾರಂಭಿಸಲಾಗಿದೆ. ಮತ್ತು ಗ್ರಂಥಬಾಹುಲ್ಯದ ಭಯದಿಂದ ಗುರ್ವರ್ಥದೀಪಿಕಾ ಟಿಪ್ಪಣಿಯ ಅನುವಾದವನ್ನು ಕೈಬಿಡಲಾಗಿದೆ. ಅನೇಕ ಟಿಪ್ಪಣಿಗಳ ಆಯ್ದಭಾಗಗಳ ಅನುವಾದವೂ ಕೂಡ ಈ ಸಂಪುಟದಲ್ಲಿರುವುದಿಲ್ಲ. ಕಾರಣವೇನೆಂದರೆ, ರಾಯರ ಪರಿಮಳಗ್ರಂಥದಿಂದಲೇ ಹತ್ತಾರು ಟಿಪ್ಪಣಿಗಳ ವಿಚಾರವು ತಿಳಿಯುತ್ತದೆ. ಮತ್ತು ಶ್ರೀವಿದ್ಯಾಧೀಶತೀರ್ಥಶ್ರೀಪಾದರ ವಿವರವಾದ ವಾಕ್ಯಾರ್ಥಚಂದ್ರಿಕಾ ಟಿಪ್ಪಣಿಯನ್ನು ಯಾದವಾರ್ಯರ ಯಾದುಪತ್ಯ ಟಿಪ್ಪಣಿಯನ್ನು ಜೊತೆಯಲ್ಲಿ ಅಧ್ಯಯನ ಮಾಡಿದ ಮೇಲೆ ಹೆಚ್ಚಿನ ವಿಚಾರಗಳು ಉಳಿದಿರು-ವುದಿಲ್ಲ. ಈ ಕಾರಣದಿಂದ ಮತ್ತು ಗ್ರಂಥಗೌರವದ ಭಯದಿಂದಲೂ ಹತ್ತಾರು ಟಿಪ್ಪಣಿಗಳ ಸಿಂಹಾವಲೋಕ-ವನ್ನು ಇಲ್ಲಿ ನಡೆಸಿರುವುದಿಲ್ಲ. ಇದನ್ನು ಓದುಗರು ಗಮನಿಸಿ ಈ ಸಂಪುಟದ ಅಧ್ಯಯನದಲ್ಲಿ ತೊಡಗಬೇಕೆಂದು ಪ್ರಾರ್ಥಿಸುತ್ತೇನೆ. ಹಾಗೂ ಪರಿಮಳ, ವಾಕ್ಯಾರ್ಥಚಂದ್ರಿಕಾ ಯಾದುಪತ್ಯ ಟಿಪ್ಪಣಿಗಳನ್ನು ಕೇವಲ ಅನುವಾದ ಮಾಡದೇ ಪ್ರತಿಯೊಂದು ಕಡೆಯೂ ವಿದ್ಯಾರ್ಥಿಗಳಿಗೆ ಅನುಕೂಲವಾಗುವುದಕ್ಕಾಗಿ ವಿವರಣೆಯನ್ನು ನೀಡ-ಲಾಗಿದೆ. ನ್ಯಾಯಸುಧಾಗ್ರಂಥಕ್ಕೆ ಅವಶ್ಯವಿದ್ದರೆ ಮಾತ್ರ ವಿವರಣೆಯನ್ನು ಮಾಡಲಾಗಿದೆ.

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರ ಅನುಗ್ರಹದಿಂದ ಮೂರನೆಯ ಸಂಪುಟವನ್ನು ಇದೇ ವರ್ಷದ ರಾಯರ ವರ್ಧಂತಿಯಂದು ರಾಯರ ಅಂತರ್ಯಾಮಿಗೆ ಸಮರ್ಪಿಸಬೇಕೆಂದು ಅಪೇಕ್ಷೆಯಿದೆ. ಶ್ರೀಪಾದಂಗಳವರೂ ಕೂಡ ಹಾಗೆಯೇ ಅಪ್ಪಣೆ ಮಾಡಿದ್ದಾರೆ. ಶ್ರೀಹರಿವಾಯುಗುರುಗಳ ಅನುಗ್ರಹ ಶ್ರೀಪಾದಂಗಳವರ ಅನುಗ್ರಹ ಎಂದೆಂದೂ ಇರಲಿ ಎಂದು ಪ್ರಾರ್ಥಿಸುತ್ತಾ ಎಲ್ಲರಿಗೂ ಅನಂತಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು,

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ನಾಕನೆಯ ಶ್ಲೋಕ

**ಅನುವ್ಯಾಖ್ಯಾನಮ್-**

**ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ ।**

**ಯತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ ॥೪॥**

ಶ್ರೀವೇದವ್ಯಾಸದೇವರು ಜಗತ್ತಿಗೆ ಗುರುಗಳಾದ ಚತುರ್ಮುಖಬ್ರಹ್ಮಾದಿ-ಗಳಿಗೂ ಕೂಡ ಗುರುಗಳಾಗಿದ್ದಾರೆ. ಮಹಾಭಾರತ ಮೊದಲಾದ ಶಾಸ್ತ್ರಗಳ ಕರ್ತೃಗಳಾಗಿದ್ದಾರೆ. ವೇದಾದಿಶಾಸ್ತ್ರಗಳ ಪ್ರವರ್ತಕರಾಗಿದ್ದಾರೆ. ಇಂಥ ವೇದ-ವ್ಯಾಸದೇವರಿಂದ ಬ್ರಹ್ಮಾದಿ ದೇವತೆಗಳಿಗೆ ಪುರುಷಾರ್ಥವೆನಿಸಿದ ಮೋಕ್ಷ-ಕ್ಕೋಸ್ಕರ ಈ ಬ್ರಹ್ಮಮೀಮಾಂಸಾಶಾಸ್ತ್ರವು ಉಪದೇಶಿಸಲ್ಪಟ್ಟಿದೆ. ಆದ್ದರಿಂದ ಈ ಶಾಸ್ತ್ರವು ಪರಮಪ್ರಮಾಣವೆನಿಸಿದೆ.

## ಪ್ರಾಮಾಣ್ಯಸಮರ್ಥನೆಗಾಗಿ ಅನುಮಾನಪ್ರಮಾಣ

**ಶ್ರೀಮನ್ನ್ಯಾಯಸುಧಾ- ಏವಂ ತಾವದಾಗಮೇನ ಅಸ್ಯ ಶಾಸ್ತ್ರಸ್ಯ ಅನುತ್ತಮಂ ಪ್ರಾಮಾಣ್ಯಂ ಪ್ರಸಾಧ್ಯ , ಅಧುನಾ ಅನುಮಾನತೋಽಪಿ ತತ್ ಸಿಷಾಧಯಿಷುಃ ಆದೌ ತಾವತ್ ಪ್ರಾಮಾಣ್ಯಮಾತ್ರೇ ಅನುಮಾನಂ ವಕ್ತುಮಾಹ – ಗುರುರಿತಿ ॥**

ಹಿಂದೆ ಹೇಳಿದ ಆಗಮಪ್ರಮಾಣದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸರ್ವೋ-ತ್ತಮಪ್ರಾಮಾಣ್ಯವನ್ನು ಸಾಧನೆ ಮಾಡಿದ್ದಾಯಿತು. ಪ್ರಕೃತ ಅನುಮಾನದಿಂದಲೂ ಕೂಡ ಸರ್ವೋತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡುವ ಬಯಕೆಯುಳ್ಳವರಾಗಿದ್ದಾರೆ.

ಮೊದಲು ಪ್ರಾಮಾಣ್ಯವನ್ನಷ್ಟೇ ಸಮರ್ಥನೆ ಮಾಡಲು 'ಗುರುರ್ಗುರೂಣಾಮ್' ಇತ್ಯಾದಿ ಪದ್ಯವನ್ನು ಹೇಳುತ್ತಿದ್ದಾರೆ.

## ಪರಮಪ್ರಾಮಾಣ್ಯಸಮರ್ಥನೆಗಾಗಿ ಪ್ರಾಮಾಣ್ಯಮಾತ್ರದ ಸಾಧನೆ

ಪರಿಮಳ– ಆಗಮೇನ = 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾಗಮೇನ ಇತ್ಯರ್ಥಃ। ಅನುಮಾನತ ಇತಿ ॥ 'ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ' ಇತ್ಯಾದಿ ಗ್ರಂಥೇನ ಆಪ್ತವಾಕ್ಯತ್ವಾದಿಪ್ರಮಾಣತ್ರಯಾವಗತತ್ವಾತ್ ಬ್ರಹ್ಮತಂತ್ರಪ್ರಾಮಾಣ್ಯಮ್ ಅನುತ್ತಮಮ್ ಇತ್ಯನುಮಾನೇನ ಅನುತ್ತಮಪ್ರಾಮಾಣ್ಯಂ ಸಿಷಾಧಯಿಷುಃ - ಇತ್ಯರ್ಥಃ। ವಕ್ತುಮಾಹ ಇತಿ ॥ 'ಏತತ್ ಶಾಸ್ತ್ರಂ ಪ್ರಮಾಣಮ್ ಅನುಕೂಲವಕ್ತೃಶ್ರೋತೃಪ್ರಸಂಗವತ್ತ್ವಾತ್ ಭಾರತವತ್' ಇತ್ಯನುಮಾನಮ್ ಅತೋ ಮಾನಮ್ ಇತ್ಯಂಶೇನ ವಕ್ತುಮ್ ಅನುಕೂಲವಕ್ತ್ರಾದಿಮತ್ತ್ವರೂಪಹೇತುಸಾಧಕಾನ್ ಹೇತೂನ್ ಆಹ ಇತ್ಯರ್ಥಃ।

ಆಗಮೇನ – 'ದ್ವೇ ವಿದ್ಯೇ ವೇದಿತವ್ಯೇ' ಎಂಬ ಆಗಮದಿಂದ ಎಂದರ್ಥ.

ಅನುಮಾನತಃ – 'ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ' ಇತ್ಯಾದಿ ಗ್ರಂಥದಿಂದ ಆಪ್ತವಾಕ್ಯತ್ವವೇ ಮೊದಲಾದ ಮೂರು ಪ್ರಮಾಣಗಳಿಂದ ತಿಳಿಯುತ್ತಿರುವ ಕಾರಣ ಬ್ರಹ್ಮತಂತ್ರದ ಪ್ರಾಮಾಣ್ಯವು ಸರ್ವೋತ್ಕೃಷ್ಟವಾಗಿದೆ ಎಂಬ ಅನುಮಾನದಿಂದ ಅನುತ್ತಮಪ್ರಾಮಾಣ್ಯವನ್ನು ಸಾಧನೆ ಮಾಡುವ ಬಯಕೆಯುಳ್ಳವರಾಗಿ - ಎಂಬುದು ಇದರ ಅರ್ಥ.

ವಕ್ತುಮಾಹ – 'ಏತತ್ ಶಾಸ್ತ್ರಂ ಪ್ರಮಾಣಮ್ ಅನುಕೂಲವಕ್ತೃಶ್ರೋತೃಪ್ರಸಂಗತ್ವಾತ್ ಭಾರತವತ್' - 'ಈ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮಾಣವಾಗಿದೆ; ಅನುಕೂಲವಾದ ವಕ್ತೃಶ್ರೋತೃಪ್ರಸಂಗಗಳಿರುವುದರಿಂದ ಮಹಾಭಾರತದಂತೆ' ಎಂಬ ಅನುಮಾನದಿಂದ ಈ ಶಾಸ್ತ್ರವು ಪ್ರಮಾಣವಾಗುತ್ತದೆ. 'ಈ ಶಾಸ್ತ್ರವು ಪ್ರಮಾಣ' ಎಂಬ ಅಂಶದಿಂದ ಹೇಳಲು ವಕ್ತ್ರಾದ್ಯಾನುಕೂಲ್ಯತ್ವ ಮೊದಲಾದ ಯುಕ್ತಿಗಳನ್ನು ಸಮರ್ಥನೆ ಮಾಡುವ ಹೇತುಗಳನ್ನು ಹೇಳುತ್ತಿದ್ದಾರೆ ಎಂದರ್ಥ.

ವಿವರಣೆ – 'ದ್ವೇ ವಿದ್ಯೇ ವೇದಿತವ್ಯೇ' ಎಂಬ ಆಥರ್ವಣೋಪನಿಷತ್ತಿನ ವಾಕ್ಯದಿಂದ ಬ್ರಹ್ಮ-ಮೀಮಾಂಸಾಶಾಸ್ತ್ರಕ್ಕೆ ಪರಮಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾಯಿತು. ಪ್ರಕೃತ ಅನುಮಾನ ಪ್ರಮಾಣದಿಂದಲೂ ಸರ್ವೋತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ ಅನುವ್ಯಾಖ್ಯಾನದ ನಾಕನೆಯ ಶ್ಲೋಕವು ಹೊರಟಿದೆ. 'ಇದಂ ಬ್ರಹ್ಮತಂತ್ರಂ ಅನುತ್ತಮಂ ಪ್ರಮಾಣಂ ಆಪ್ತವಾಕ್ಯತ್ವಾತ್, ಶ್ರುತ್ಯಾದಿಮೂಲತ್ವಾತ್' ಇತ್ಯಾದಿಯಾಗಿ ಮುಂದೆ ಐದನೆಯ ಶ್ಲೋಕದಲ್ಲಿ ಅನುಮಾನದಿಂದ ಅನು-ತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡುತ್ತಾರೆ. ಪ್ರಕೃತ ಈ ನಾಕನೆಯ ಶ್ಲೋಕದಲ್ಲಿ ಅದಕ್ಕೆ ಪೂರಕವಾಗಿ ಪ್ರಾಮಾಣ್ಯವನ್ನಷ್ಟೇ ಸಮರ್ಥನೆ ಮಾಡುತ್ತಿದ್ದಾರೆ. ಈ ಶ್ಲೋಕದಿಂದ ತಿಳಿಯಬೇಕಾದ ಅನುಮಾನ ಹೀಗಿದೆ – 'ಏತತ್ ಶಾಸ್ತ್ರಂ ಪ್ರಮಾಣಮ್ ಅನುಕೂಲವಕ್ತೃಶ್ರೋತೃಪ್ರಸಂಗವತ್ತ್ವಾತ್ ಭಾರತವತ್'- ಮಹಾಭಾರತವು ಅನುಕೂಲವಾದ ವಕ್ತೃಶ್ರೋತೃಪ್ರಸಂಗಾನುಕೂಲ್ಯವನ್ನು ಹೊಂದಿದೆ ಮತ್ತು ಪ್ರಮಾಣವಾಗಿದೆ. ಅದರಂತೆ ಈ ಶಾಸ್ತ್ರವೂ ಅನುಕೂಲವಾದ ವಕ್ತೃಶ್ರೋತೃಪ್ರಸಂಗಾದಿಗಳಿಂದ ಕೂಡಿರುವ ಕಾರಣ ಪ್ರಮಾಣವಾಗಿದೆ.

## ಗುರುರ್ಗುರೂಣಾಂ ಎಂಬ ನಾಕನೆಯ ಪದ್ಯಕ್ಕೆ ಸಂಗತಿ ಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ನನು 'ಗುರುರ್ಗುರೂಣಾಮ್' ಇತ್ಯುತ್ತರಶ್ಲೋಕೇ ಪೂರ್ವ-ಶ್ಲೋಕೋಕ್ತಪ್ರಮಾಣಾನುಪಪಾದನಾತ್ ಪ್ರಮಾಣಾಂತರಸ್ಯಾಪಿ ಅಕಥನಾತ್ ತತ್ಕಥನಪರತ್ವೇ ವಾಽನುತ್ತಮತ್ವಸ್ಯ ಸರ್ವಥಾಽಕಥನಾತ್ ಉತ್ತರಶ್ಲೋಕೋಽಸಂಗತ ಇತ್ಯತ ಆಹ – ಏವಮಿತಿ ॥ 'ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ' ಇತಿ ನ್ಯಾಯಮನುಸಂಧಾಯ ತಾವತ್ ಶಬ್ದಪ್ರಯೋಗಃ ।

ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಪ್ರಾಮಾಣ್ಯದ "ಗುರುರ್ಗುರೂಣಾಮ್' ಎಂಬ ಈ ಶ್ಲೋಕ-ದಲ್ಲಿ ಸಮರ್ಥನೆಯು ಕಾಣಿಸುತ್ತಿಲ್ಲ. ಬೇರೆ ಪ್ರಮಾಣವನ್ನು ಕೂಡ ಇಲ್ಲಿ ಹೇಳುತ್ತಿಲ್ಲ. ಅಂಥ ಪ್ರಾಮಾಣ್ಯವನ್ನು ಹೇಳಿದರೂ ಅನುತ್ತಮತ್ವವನ್ನು ಆ ಪ್ರಾಮಾಣ್ಯದಲ್ಲಿ ಸರ್ವಥಾ ಹೇಳುತ್ತಿಲ್ಲ. ಈ ಕಾರಣದಿಂದ 'ಗುರುರ್ಗುರೂಣಾಮ್' ಎಂಬ ಶ್ಲೋಕವು ಹಿಂದಿನ ಶ್ಲೋಕದಿಂದ ಅಸಂಗತವಾಗಿ-ದಯಲ್ಲವೇ? ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ 'ಏವಮ್' ಇತ್ಯಾದಿ ಗ್ರಂಥವು ಹೊರಟಿದೆ. 'ಪೃಷ್ಟೇ-ನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ' - ಸಾಧ್ಯದ ಸಮರ್ಥನೆಗಾಗಿ ಮೊದಲು ಆಗಮವನ್ನೇ ಹೇಳಬೇಕು ಎಂಬ ನ್ಯಾಯದ ಅನುಸಂಧಾನಕ್ಕೋಸ್ಕರ 'ತಾವತ್' ಎಂಬ ಶಬ್ದಪ್ರಯೋಗವನ್ನು ಮಾಡಿ-ದ್ದಾರೆ.

ವಿವರಣೆ – 'ಏವಂ ತಾವದಾಗಮೇನ' ಎಂಬುದಾಗಿ ಸುಧೆಯಲ್ಲಿ 'ತಾವತ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಯಾವತ್' ಎಂದು ಎಲ್ಲಾದರೂ ಪ್ರಯೋಗ ಮಾಡಿದರೆ 'ಯಾವ ಕಾರಣದಿಂದ' ಎಂಬರ್ಥವನ್ನು ಅದಕ್ಕೆ ತಿಳಿಯಬೇಕು. 'ತಾವತ್' ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ ಅದಕ್ಕೆ 'ಮೊದಲು' ಎಂಬರ್ಥವನ್ನು ತಿಳಿಯಬೇಕು. ಇಲ್ಲಿರುವ 'ತಾವತ್' ಎಂಬ ಪದಕ್ಕೆ 'ಮೊದಲು' ಎಂದರ್ಥ. ವಾದಕಥೆಯಲ್ಲಿ ಸಾಧ್ಯವನ್ನು ಸಮರ್ಥನೆ ಮಾಡಲು ಮೊದಲು ಆಗಮಪ್ರಮಾಣವನ್ನೇ ಹೇಳಬೇಕು ಎಂಬುದು ನ್ಯಾಯಸಮ್ಮತವಾಗಿದೆ. – 'ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ' ಎಂಬ ನ್ಯಾಯವನ್ನು ಈ ತಾವತ್ ಎಂಬ ಪದವು ಸ್ಮರಣೆಗೆ ತಂದು ಕೊಡುತ್ತಿದೆ.

## ಗುರುರ್ಗುರೂಣಾಂ ಎಂಬ ಶ್ಲೋಕಕ್ಕೆ ಅನ್ವಯಾರ್ಥ

**ಶ್ರೀಮನ್ನ್ಯಾಯಸುಧಾ- ಯತೋ ಯತ್ಕಾರಣಂ, ಬಾದರಾಯಣೋ, ಗುರೂಣಾಂ ಜಗತಃ ತತ್ತ್ವೋಪದೇಶಕಾನಾಂ ಬ್ರಹ್ಮಾದೀನಾಂ, ಗುರುಃ ಉಪದೇಷ್ಟಾ । ಯತಶ್ಚ, ಶಾಸ್ತ್ರಾಣಾಂ ವೇದಾನಾಂ ಭಾರತಾದೀನಾಂ ಚ, ಯಥಾಸಂಭವಂ ಪ್ರಭವಃ, ಗುರೂಣಾಮ್ ಅಶೇಷಾರ್ಥಪ್ರತಿಪಾದಕಾನಾಂ ಸವಿಸ್ತರಾಣಾಂ ವೇದಾದಿ-ಶಾಸ್ತ್ರಾಣಾಂ ಗುರುರ್ಮುಖ್ಯಃ ಪ್ರಭವೋ ನ ತು ಸಂಪ್ರದಾಯಮಾತ್ರಪ್ರವರ್ತಕ ಇತಿ ವಾ । ಯತಶ್ಚ ಅಜಾದಿಭ್ಯಃ ಶ್ರೋತೃಭ್ಯಃ, ತೇಷಾಮರ್ಥೋ ಮೋಕ್ಷಸ್ತದರ್ಥಃ ತಸ್ಮೈ ತದರ್ಥತಃ । ತದುದಿತಂ ತೇನ ಬಾದರಾಯಣೇನೋಪದಿಷ್ಟಮ್ ಇದಂ ಶಾಸ್ತ್ರಮತೋ ಮಾನಂ ಭವಿತುಮರ್ಹತಿ ॥**

'ಯತಃ'=ಯಾವ ಕಾರಣದಿಂದ, 'ಬಾದರಾಯಣಃ'= ವೇದವ್ಯಾಸರು, 'ಗುರೂಣಾಂ' = ಜಗತ್ತಿಗೆ ತತ್ತ್ವವನ್ನು ಉಪದೇಶಿಸುವ ಬ್ರಹ್ಮಾದಿದೇವತೆಗಳಿಗೆ, 'ಗುರುಃ'= ಉಪ-ದೇಶಕರೋ, 'ಯತಃ' = ಯಾವ ಕಾರಣದಿಂದ 'ಶಾಸ್ತ್ರಾಣಾಂ' = ವೇದ, ಭಾರತಾದಿ ಶಾಸ್ತ್ರಗಳಿಗೆ ಯಥಾಯೋಗ್ಯವಾಗಿ, 'ಪ್ರಭವಃ'= ಪ್ರವರ್ತಕರೋ, ಅಥವಾ 'ಗುರೂಣಾಂ ಶಾಸ್ತ್ರಾಣಾಂ'= ಅಶೇಷಾರ್ಥಪ್ರತಿಪಾದಕಗಳಾದ ಸವಿಸ್ತರಗಳಾದ ವೇದಾದಿಶಾಸ್ತ್ರಾದಿಗಳಿಗೆ,

'ಗುರುಃ ಪ್ರಭವಃ'= ಕೇವಲ ಸಂಪ್ರದಾಯಪ್ರವರ್ತಕರಾಗದೆ ಮುಖ್ಯಪ್ರವರ್ತಕರಾಗಿ-ರುವರೋ, 'ಯತಃ'= ಯಾವ ಕಾರಣದಿಂದ, 'ಅಜಾದಿಭ್ಯಃ'= ಬ್ರಹ್ಮದೇವರೇ ಮೊದ-ಲಾದ ಶ್ರೋತೃಗಳಿಗಾಗಿ, ತದರ್ಥತಃ= ಅವರ ಪ್ರಯೋಜನವಾದ ಮೋಕ್ಷಕ್ಕೋಸ್ಕರ ಈ ಬ್ರಹ್ಮಮೀಮಾಂಸಾಶಾಸ್ತ್ರವು, 'ತದುದಿತಂ'= ಆ ವ್ಯಾಸರಿಂದ ಉಪದೇಶಿಸಲ್ಪಟ್ಟಿದೆಯೋ ಆದುದರಿಂದ ಪ್ರಮಾಣವಾಗುತ್ತದೆ.

## ಯತಃ ಎಂಬ ಪದಕ್ಕೆ ವ್ಯಾಖ್ಯಾನ

ಪರಿಮಳ– 'ಯತಃ' ಇತಿ ಹೇತೌ ಪಂಚಮೀತಿಭಾವೇನ ಪ್ರಕೃತಿಪ್ರತ್ಯಯಯೋ-ರರ್ಥಮಾಹ – ಯತ್ಕಾರಣಮಿತಿ ॥ 'ನಿಮಿತ್ತಕಾರಣಹೇತುಷು ಸರ್ವಾಸಾಮಿಷ್ಟಿಃ' ಇತ್ಯುಕ್ತೇಃ ಪ್ರಥಮೋಕ್ತಿಃ । 'ಯಸ್ಮಾತ್ ಕಾರಣಾತ್' ಇತ್ಯುಕ್ತಾವಪಿ ಪಂಚಮ್ಯೋಃ ಶಬ್ದಸಾಧುತ್ವ-ಮಾತ್ರಾರ್ಥತ್ವೇನಾಧಿಕಾರ್ಥತ್ವಾಭಾವಾತ್ । ಯದ್ವಾ 'ಯತಃ' ಇತ್ಯಸ್ಯ ನೇಯಮರ್ಥೋಕ್ತಿಃ ಕಿಂತು ಯತ್ಕಾರಣಂ ಯಸ್ಯ ಶಾಸ್ತ್ರಸ್ಯ ಕಾರಣಮಿತಿ ಬಾದರಾಯಣವಿಶೇಷಣಮ್ । ಯತ್ಕಾರಣಮಿತ್ಯುಕ್ತಯಚ್ಛಬ್ದಾರ್ಥಸ್ಯೇದಂ ಶಾಸ್ತ್ರಮ್ ಇತ್ಯನ್ವಯಃ । ಪೂರ್ವಸ್ಮಾದನುವೃತ್ತಿಂ ಮತ್ವಾಽಽಹ – ಜಗತ ಇತಿ ॥ ಅರ್ಥತಃ ಶಬ್ದತಶ್ಚ ಗುರುತ್ವಮಾಹ – ಅಶೇಷಾರ್ಥೇತಿ ॥ 'ಆದ್ಯಾದಿಭ್ಯ ಉಪಸಂಖ್ಯಾನಮ್' ಇತಿ ಸರ್ವವಿಭಕ್ತ್ಯರ್ಥೇ ತಸಿಪ್ರತ್ಯಯೋಕ್ತೇಶ್ಚತುರ್ಥ್ಯ-ರ್ಥೇ ತಸಿರಿತಿ ಭಾವೇನಾಹ – ತಸ್ಮೈ ತದರ್ಥತ ಇತಿ ॥

ಯತಃ ಎಂಬಲ್ಲಿರುವ ತಸಿಲ್‌ಪ್ರತ್ಯಯವು ಪಂಚಮ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಈ ಅಭಿಪ್ರಾಯದಿಂದ ಪ್ರಕೃತಿಪ್ರತ್ಯಯಗಳ ಅರ್ಥವನ್ನು 'ಯತ್ಕಾರಣಂ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ನಿಮಿತ್ತಕಾರಣಹೇತುಷು ಸರ್ವಾಸಾಂ ಇಷ್ಟಿಃ' ನಿಮಿತ್ತ, ಕಾರಣ, ಹೇತು ಈ ಮೂರು ಅರ್ಥಗಳಲ್ಲಿ ಪ್ರಥಮಾವಿಭಕ್ತಿಯು ಆಯಾ ವಾಚಕಪದಗಳಿಗೆ ಬರುತ್ತದೆ. ಪ್ರಕೃತ ಯಸ್ಮಾತ್ ಕಾರಣಾತ್ ಎಂದು ಹೇಳಿದ್ದರೂ ಕೂಡ ಎರಡು ಪಂಚಮೀವಿಭಕ್ತಿಗಳು ಕೇವಲ ಶಬ್ದಸಾಧುತ್ವಕ್ಕಾಗಿ ಪ್ರಯುಕ್ತವಾಗಿರುತ್ತವೆ. ಯಾವುದೇ ಹೆಚ್ಚಿನ ಅರ್ಥವು ವಿವಕ್ಷಿತವಲ್ಲ.

'ಯತಃ' ಎಂಬುದಕ್ಕೆ ಯತ್ಕಾರಣಂ ಎಂಬುದಾಗಿ ಹೇಳಿರುವುದು ಅರ್ಥವಿವರಣೆಯಲ್ಲ. ಮತ್ತೇನೆಂದರೆ ಯಸ್ಯ = ಯಾವ ಶಾಸ್ತ್ರಕ್ಕೆ, ಕಾರಣಂ = ಕಾರಣನು ಎಂಬುದಾಗಿ ವೇದವ್ಯಾಸದೇವರಿಗೆ ವಿಶೇಷಣರೂಪದಲ್ಲಿ ಹೇಳಿದ್ದಾರೆ, 'ಯತ್ಕಾರಣಂ' ಎಂಬಲ್ಲಿರುವ ಯತ್ ಎಂಬ ಶಬ್ದದ ಅರ್ಥಕ್ಕೆ 'ಇದಂ ಶಾಸ್ತ್ರಂ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು.

ಹಿಂದಿನ ಶ್ಲೋಕದಿಂದ 'ಜಗತ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂಬ ಅಭಿಪ್ರಾಯದಿಂದ 'ಜಗತಃ' ಎಂದಿದ್ದಾರೆ. ಅರ್ಥದಿಂದ ಹಾಗೂ ಶಬ್ದದಿಂದ ಗುರುತ್ವವನ್ನು ವಿವಕ್ಷಿಸಿ 'ಅಶೇಷಾರ್ಥಪ್ರತಿಪಾದಕಾನಾಂ' ಎಂಬುದಾಗಿ ಹೇಳಿರುತ್ತಾರೆ. 'ಆದ್ಯಾದಿಭ್ಯಃ ಉಪಸಂಖ್ಯಾನಮ್' ಎಂಬ ಸೂತ್ರದ ಪ್ರಕಾರ ಎಲ್ಲಾ ವಿಭಕ್ತ್ಯರ್ಥದಲ್ಲಿ ತಸಿಪ್ರತ್ಯಯವು ಪ್ರಯುಕ್ತವಾಗುತ್ತದೆ. ಪ್ರಕೃತ 'ತದರ್ಥತಃ' ಎಂಬಲ್ಲಿ ತಸಿಪ್ರತ್ಯಯವು ಚತುರ್ಥೀವಿಭಕ್ತಿಯ ಅರ್ಥದಲ್ಲಿ ಪ್ರಾಪ್ತವಾಗಿದೆ ಎಂಬ ಅಭಿಪ್ರಾಯದಿಂದ 'ತಸ್ಮೈ ತದರ್ಥತಃ' ಎಂದು ಟೀಕೆಯಲ್ಲಿ ವಿವರಿಸಿದ್ದಾರೆ.

ವಿವರಣೆ - ಟೀಕೆಯಲ್ಲಿ 'ಯತಃ' ಎಂಬ ಪದಕ್ಕೆ 'ಯತ್ಕಾರಣಂ' ಎಂಬ ಅರ್ಥವನ್ನು ಬರೆದಿದ್ದಾರೆ. ವಾಸ್ತವಿಕವಾಗಿ 'ಯಸ್ಮಾತ್ ಕಾರಣಾತ್' ಎಂಬರ್ಥವನ್ನು ಹೇಳಬೇಕಿತ್ತು. ಆದರೂ ಸಹ ಯತ್ಕಾರಣಂ ಎಂಬುದಾಗಿ ಪ್ರಥಮಾವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. ಏಕೆಂದರೆ 'ಯಸ್ಮಾತ್ ಕಾರಣಾತ್' ಎಂಬಲ್ಲಿರುವ ಎರಡೂ ಪಂಚಮೀ ವಿಭಕ್ತಿಗಳಿಗೆ ಯಾವುದೇ ಅರ್ಥ ಇರುವುದಿಲ್ಲ. ಕೇವಲ ಶಬ್ದಸಾಧುತ್ವಕ್ಕಾಗಿ ಹೇಳಬೇಕಾಗುತ್ತದೆ. 'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಎಂಬ ಕಾತ್ಯಾಯನನ ಮಾತಿನಂತೆ 'ಯತ್ಕಾರಣಂ' ಎಂಬಲ್ಲಿ ಕಾರಣಾರ್ಥದಲ್ಲಿ ಪ್ರಥಮಾವಿಭಕ್ತಿಯನ್ನು ಪ್ರಯೋಗಿಸಿದ್ದು ಸಾಧುವೇ ಆಗಿದೆ.

ಅಥವಾ ಯತ್ಕಾರಣಂ ಎಂಬುದು 'ಯತಃ' ಎಂಬುದರ ವ್ಯಾಖ್ಯಾನವೇ ಅಲ್ಲ. ಮುಂದಿರುವ ಬಾದರಾಯಣ ಎಂಬುದಕ್ಕೆ ವಿಶೇಷಣವಾಗಿದೆ. 'ಯತ್' ಎಂಬುವುದಕ್ಕೆ 'ಶಾಸ್ತ್ರಂ' ಎಂಬಲ್ಲಿ ಅನ್ವಯವನ್ನು ತಿಳಿದಾಗ ಯಾವ ಶಾಸ್ತ್ರಕ್ಕೆ ಬಾದರಾಯಣರು ಕಾರಣರಾಗಿದ್ದಾರೋ ಎಂಬರ್ಥವನ್ನು ತಿಳಿಸಿದಂತಾಗುತ್ತದೆ. 'ಗುರೂಣಾಂ' ಎಂಬುದು ಆಕಾಂಕ್ಷೆಯುಳ್ಳ ಪದವಾಗಿದೆ. ಯಾರ ಗುರು? ಎಂಬ ಆಕಾಂಕ್ಷೆಯು ಬಂದರೆ ತಮೇವ ಎಂಬ ಹಿಂದಿನ ಪದ್ಯದಲ್ಲಿರುವ ಜಗತ್ ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಆಗ ಜಗತ್ತಿಗೆ ಗುರು ಎಂಬುದಾಗಿ ಆಕಾಂಕ್ಷೆಯು ಶಾಂತವಾಗುತ್ತದೆ. ಇದನ್ನು 'ಜಗತಃ'

ಎಂಬ ಟೀಕಾವಾಕ್ಯದಿಂದ ತಿಳಿಸಿದ್ದಾರೆ. ಜಗತ್ತಿಗೆ ಬ್ರಹ್ಮಾದಿಗಳು ಗುರುಗಳಾಗಿದ್ದಾರೆ. ಅವರಿಗೂ ಕೂಡ ಬಾದರಾಯಣರು ಗುರುಗಳಾಗಿದ್ದಾರೆ ಎಂಬುದು ಇದರ ಅರ್ಥ. ಶಾಸ್ತ್ರಗಳು ಅರ್ಥದಿಂದಲೂ ಗುರುಭೂತವಾಗಿವೆ, ಶಬ್ದದಿಂದಲೂ ಕೂಡ ಗುರುಭೂತವಾಗಿವೆ. ಅಂಥ ಶಾಸ್ತ್ರಗಳಿಗೆ ಬಾದರಾಯಣರು ಗುರುಗಳಾಗಿದ್ದಾರೆ ಎಂದು ತಿಳಿಯಬೇಕು. ವೇದಾದಿಶಾಸ್ತ್ರಗಳನ್ನು ರಚನೆ ಮಾಡದ ಕಾರಣ ಅವುಗಳ ಸಂಪ್ರದಾಯಪ್ರವೃತ್ತಿಗೆ ಕಾರಣರಾಗಿದ್ದಾರೆ. ಮಹಾಭಾರತಾದಿಶಾಸ್ತ್ರಗಳಿಗೆ ನಿರ್ಮಾಪಕರಾಗಿದ್ದಾರೆ ಎಂದು ತಿಳಿಯಬೇಕು.

'ತದರ್ಥತಃ' ಎಂಬಲ್ಲಿರುವ ತಸಿಪ್ರತ್ಯಯವು ಚತುರ್ಥೀವಿಭಕ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. 'ಆದ್ಯಾದಿಭ್ಯಃ ಉಪಸಂಖ್ಯಾನಮ್' ಎಂಬ ಸೂತ್ರದಂತೆ ಎಲ್ಲಾ ವಿಭಕ್ತಿಯಲ್ಲೂ ತಸಿಪ್ರತ್ಯಯವನ್ನು ಹೇಳಬಹುದು. ಹಾಗಾಗಿ ಮೋಕ್ಷಪ್ರಯೋಜನಕ್ಕಾಗಿ ಎಂಬರ್ಥವು ಇದರಿಂದ ದೊರೆಯುತ್ತದೆ.

### ಸಾರಾಂಶ

ಬ್ರಹ್ಮಮೀಮಾಂಸಾಶಾಸ್ತ್ರವು ಪರಮಪ್ರಮಾಣವಾಗಿದೆ. ಏಕೆಂದರೆ ವೇದವ್ಯಾಸದೇವರಿಂದ ವಿರಚಿತವಾಗಿದೆ. ಇದನ್ನು ರಚಿಸಿದ ವೇದವ್ಯಾಸದೇವರು ಜಗತ್ತಿಗೆ ಗುರುಗಳಾದ ಬ್ರಹ್ಮಾದಿಗಳಿಗೂ ಗುರುಗಳಾಗಿದ್ದಾರೆ. ವೇದಾದಿ ಶಾಸ್ತ್ರಗಳಿಗೆ ಪ್ರವರ್ತಕರಾಗಿದ್ದಾರೆ. ಮಹಾಭಾರತಾದಿಗಳ ಉತ್ಪತ್ತಿಗೆ ಕಾರಣರಾಗಿದ್ದಾರೆ. ಸಂಪ್ರದಾಯ ಪ್ರವರ್ತಕರಷ್ಟೇ ಅಲ್ಲದೆ ಶಾಸ್ತ್ರಗಳಿಗೆ ಮುಖ್ಯಪ್ರವರ್ತಕರಾಗಿದ್ದಾರೆ. ಸಕಲರಿಗೂ ಪುರುಷಾರ್ಥವೆನಿಸಿದ ಮೋಕ್ಷದ ಬಗ್ಗೆ ಈ ಶಾಸ್ತ್ರದಲ್ಲಿ ತಿಳಿಸಿದ್ದಾರೆ. ಇಂಥಾ ವೇದವ್ಯಾಸದೇವರಿಂದ ರಚಿತವಾದ ಕಾರಣ ಬ್ರಹ್ಮಮೀಮಾಂಸಾಶಾಸ್ತ್ರವು ಪರಮ-ಪ್ರಮಾಣವಾಗಿದೆ.

## 'ಯತಃ' ಎಂಬ ಪದದ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– ಅತ್ರ 'ಗುರುರ್ಗುರೂಣಾಮ್' ಇತ್ಯಾದೇಃ 'ಮಾನಮ್' ಇತ್ಯಸ್ಯ ಚ ಸಾಧ್ಯಸಾಧನಭಾವಾಪ್ರತೀತೇಃ ತತ್ಸಮರ್ಪಕತ್ವಂ 'ಯತಃ' ಇತ್ಯಸ್ಯ ದರ್ಶಯಿತುಂ 'ನಿಮಿತ್ತ-ಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಇತ್ಯನುಸಂಧಾಯ 'ಯತಃ' ಇತ್ಯೇತದ್ ವ್ಯಾಖ್ಯಾತಿ – ಯತ್ಕಾರಣಮಿತಿ ॥

ಅನುವ್ಯಾಖ್ಯಾನಶ್ಲೋಕದಲ್ಲಿ 'ಗುರುರ್ಗುರೂಣಾಮ್' ಇತ್ಯಾದಿ ವಿಶೇಷಣಗಳಿಗೂ ಮಾನಮ್ ಎಂಬುದಕ್ಕೂ ಸಾಧ್ಯಸಾಧನಭಾವವು ತಿಳಿಯುತ್ತಲೇ ಇಲ್ಲ. ಆದ್ದರಿಂದ ಸಾಧ್ಯಸಾಧನಭಾವಕ್ಕೆ ಸಮ-

ರ್ಪಕವಾಗಿ 'ಯತಃ' ಎಂಬ ಪದವು ಪ್ರಯುಕ್ತವಾಗಿದೆ. 'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಎಂಬ ವಾರ್ತಿಕದ ಮಾತಿನಂತೆ ನಿಮಿತ್ತ, ಕಾರಣ ಹಾಗೂ ಹೇತುಗಳಲ್ಲಿ ಯತಃ ಎಂಬ ಪದವನ್ನು ಪ್ರಯೋಗ ಮಾಡಲಾಗುತ್ತದೆ. ಈ ದೃಷ್ಟಿಯಿಂದ ಟೀಕೆಯಲ್ಲಿ 'ಯತಃ' ಎಂಬುದಕ್ಕೆ ಯತ್ಕಾರಣಂ ಎಂಬರ್ಥವನ್ನು ಹೇಳಿದ್ದಾರೆ.

ವಿವರಣೆ – 'ಯತಃ' ಎಂಬುದಕ್ಕೆ ಯತ್ಕಾರಣಂ ಎಂದು ಪ್ರಥಮಾವಿಭಕ್ತಿಪ್ರಯೋಗದಲ್ಲಿ ಅರ್ಥವನ್ನು ಟೀಕೆಯಲ್ಲಿ ಬರೆದಿದ್ದಾರೆ. ಏಕೆಂದರೆ, ಯತಃ ಎಂಬಲ್ಲಿರುವ ತಸಿಲ್‌ಪ್ರತ್ಯಯವು ನಿಮಿತ್ತ, ಕಾರಣ ಹಾಗೂ ಹೇತು ಈ ಅರ್ಥಗಳಲ್ಲಿ ಪ್ರಯುಕ್ತವಾಗಿರುತ್ತದೆ. ಆದ್ದರಿಂದ ಕಾರಣಂ ಎಂದು ಪ್ರಥಮಾವಿಭಕ್ತಿಪ್ರಯೋಗವನ್ನು ಮಾಡಿದ್ದಾರೆ.

## ಗುರೂಣಾಂ ಗುರುತ್ವಾತ್' ಎಂಬುದು ವಿವಕ್ಷಿತಾರ್ಥತತ್ವಜ್ಞಾನಕ್ಕೆ ಹೇಗೆ ಸಾಧಕ?

ವಾಕ್ಯಾರ್ಥಚಂದ್ರಿಕಾ– ನನು 'ಗುರುರ್ಗುರೂಣಾಮಿತ್ಯಾದಿಹೇತೂನಾಮ್' ಇತ್ಯಾದಿ ವಕ್ಷ್ಯಮಾಣರೀತ್ಯಾ ಗುರುಗುರುತ್ವಾದೀನಾಂ ಹೇತೂನಾಂ ವಕ್ತ್ರಾದ್ಯಾನುಕೂಲಾನ್ಯೇವ ಸಾಧ್ಯಾನೀತಿ ತಾವನ್ನಿಷ್ಟಂಕಿತಮ್ । ಅತ್ರ ವಕ್ತ್ರಾನುಕೂಲ್ಯೈಕದೇಶವಿವಕ್ಷಿತಾರ್ಥತತ್ತ್ವಜ್ಞಾನಸಾಧಕತ್ವೇನ ಭವದಭಿಮತಸ್ಯ 'ಗುರೂಣಾಂ ಗುರುತ್ವ'ಸ್ಯ ನ ತತ್ಸಾಧಕತ್ವಂ ಯುಕ್ತಮ್, ಉಪದೇಶಕಾನಾಮುಪದೇಶಕತ್ವೇನ ವಕ್ಷ್ಯಮಾಣರೀತ್ಯಾ ತದಪೇಕ್ಷಯಾ ಅಧಿಕಜ್ಞಾನಸಿದ್ಧಾವಪಿ ತತ್ತ್ವಜ್ಞಾನಸಿದ್ಧೇಃ । ನಚ ತತ್ತ್ವೋಪದೇಶಕ ಏವ ಗುರುಶಬ್ದಸ್ಯ ಯೋಗರೂಢಿಭ್ಯಾಂ ಪ್ರವೃತ್ತತ್ವೇನ ತತ್ಸಿದ್ಧಿರಿತಿ ವಾಚ್ಯಮ್, ತಾವತಾಽಪಿ ತತ್ತ್ವೋಪದೇಶಕಾಂತರಾಪೇಕ್ಷಯಾಽಧಿಕತತ್ತ್ವಜ್ಞಾನಸಿದ್ಧಾವಪಿ ವಿವಕ್ಷಿತಾರ್ಥತತ್ತ್ವಜ್ಞಾನಾಸಿದ್ಧೇಃ।

ಆಕ್ಷೇಪ – 'ಗುರುರ್ಗುರೂಣಾಮ್ ಇತ್ಯಾದಿ ಹೇತೂನಾಮ್' ಎಂಬುದಾಗಿ ಮುಂದೆ ಹೇಳುತ್ತಾರೆ. ಇದರ ಪ್ರಕಾರ ಗುರುಗುರುತ್ವಾದಿ ಹೇತುಗಳು ವಕ್ತ್ರಾದ್ಯಾನುಕೂಲ್ಯಗಳನ್ನೇ ಸಾಧಿಸುತ್ತವೆ ಎಂಬುದರಲ್ಲಿ ಸಂದೇಹವಿಲ್ಲ. ಈ ವಕ್ತ್ರಾದ್ಯಾನುಕೂಲ್ಯದ ಏಕದೇಶವೆನಿಸಿದ ವಿವಕ್ಷಿತಾರ್ಥತತ್ವಜ್ಞಾನಕ್ಕೆ ಸಾಧಕವೆಂದು ನೀವು ಅಭಿಪ್ರಾಯಪಟ್ಟಿರುವ 'ಗುರೂಣಾಂ ಗುರುತ್ವಾತ್' ಎಂಬುದು ಸಾಧಕವೇ ಆಗುವುದಿಲ್ಲ. ಏಕೆಂದರೆ, ಮುಂದೆ ಹೇಳುವ ಪ್ರಕಾರ ಉಪದೇಶಕರಿಗೂ ಉಪದೇಶಕರಾಗಿದ್ದಾರೆ

ಎಂಬುದು ಇದರ ಅರ್ಥವಾಗುತ್ತದೆ. ಇದರ ಪ್ರಕಾರ ಬೇರೆ ಉಪದೇಶಕರಿಂದ ಬಾದರಾಯಣರಿಗೆ ಅಧಿಕವಾದ ಜ್ಞಾನವಿದೆ ಎಂದಷ್ಟೇ ಸಿದ್ಧವಾಗುತ್ತದೆ. ತತ್ವಜ್ಞಾನವಿದೆ ಎಂಬುದು ಸಿದ್ಧವಾಗುವುದಿಲ್ಲ.

ಗುರುಶಬ್ದಕ್ಕೆ 'ತತ್ತ್ವೋಪದೇಶಕಃ' ಎಂಬರ್ಥವು ಯೋಗ ಹಾಗೂ ರೂಢಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಗುರೂಣಾಂ ಗುರುತ್ವಾತ್ ಎಂಬ ಹೇತುವಿನಿಂದ ವಿಕ್ಷಿತಾರ್ಥತ್ವಜ್ಞಾನವಿದೆಯೆಂಬುದು ಸಿದ್ಧವಾಗುತ್ತದಲ್ಲವೇ?

ಹೀಗೂ ಹೇಳಬಾರದು. ಏಕೆಂದರೆ ಗುರು ಶಬ್ದಕ್ಕೆ ತತ್ತ್ವೋಪದೇಶಕ ಎಂಬರ್ಥವನ್ನು ವಿವಕ್ಷಿಸಿದರೂ ಸಹ ಉಳಿದ ತತ್ತ್ವೋಪದೇಶಕರಿಂದ ಅಧಿಕವಾದ ತತ್ವಜ್ಞಾನವಿದೆ ಎಂದಷ್ಟೇ ಸಿದ್ಧವಾಗುತ್ತದೆ. ವಿವಕ್ಷಿತಾರ್ಥತತ್ವಜ್ಞಾನವು ಸಿದ್ಧವಾಗುವುದಿಲ್ಲ.

ವಿವರಣೆ – 'ಬಾದರಾಯಣಃ ವಿವಕ್ಷಿತಾರ್ಥತತ್ವಜ್ಞಾನವಾನ್ ಗುರೂಣಾಂ ಗುರುತ್ವಾತ್' ಎಂಬುದಾಗಿ 'ಗುರೂಣಾಂ ಗುರುತ್ವಾತ್' ಎಂಬ ಹೇತುವಿನಿಂದ ವಿವಕ್ಷಿತಾರ್ಥತತ್ವಜ್ಞಾನವನ್ನು ಸಾಧಿಸುತ್ತಾರೆ. ಆದರೆ ಇದು ಯುಕ್ತವಲ್ಲ ಎಂಬುದನ್ನು ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆ. ಗುರು-ಗುರುತ್ವಾದಿಹೇತುಗಳಿಂದ ವಿವಕ್ಷಿತಾರ್ಥತತ್ವಜ್ಞಾನವನ್ನು ಸಾಧಿಸಲಾಗದು. ಏಕೆಂದರೆ, ಗುರುಗಳಿಗೆ ಗುರುವಾಗಿದ್ದಾರೆ ಎಂದು ಹೇಳಿದರೆ, ಉಳಿದ ಗುರುಗಳಿಗಿಂತ ಹೆಚ್ಚಿನ ತತ್ವಜ್ಞಾನವನ್ನು ಪಡೆದಿದ್ದಾರೆಂದಷ್ಟೇ ಅರ್ಥವಾಗುತ್ತದೆ. ವಿವಕ್ಷಿತಾರ್ಥತತ್ವಜ್ಞಾನವು ಸಿದ್ಧವಾಗುವುದಿಲ್ಲ. ಗುರುಶಬ್ದಕ್ಕೆ ತತ್ತ್ವೋಪದೇಶಕ ಎಂಬರ್ಥವನ್ನು ವಿವಕ್ಷಿಸಿದರೂ ಕೂಡ ಉಳಿದ ತತ್ತ್ವೋಪದೇಶಕರಿಗಿಂತ ಹೆಚ್ಚಿನ ತತ್ವಜ್ಞಾನವನ್ನು ಪಡೆದಿದ್ದಾರೆಂದಷ್ಟೇ ಅರ್ಥವಾಗುತ್ತದೆ. ಇದರಿಂದಲೂ ವಿವಕ್ಷಿತಾರ್ಥತತ್ವಜ್ಞಾನವು ಸಿದ್ಧವಾಗುವುದಿಲ್ಲ. ಆದ್ದರಿಂದ ಸಾಧ್ಯಸಾಧನಭಾವವು ಅಯುಕ್ತವಾಗಿದೆ ಎಂಬುದು ಇಲ್ಲಿ ಮಾಡುತ್ತಿರುವ ಆಕ್ಷೇಪದ ಅಭಿಪ್ರಾಯ.

## ಶಾಸ್ತ್ರಾಣಾಂ ಪ್ರಭವತ್ವವೂ ಕೂಡ ವಿವಕ್ಷಿತಾರ್ಥತತ್ವಜ್ಞಾನಕ್ಕೆ ಹೇಗೆ ಸಾಧಕ?

ವಾಕ್ಯಾರ್ಥಚಂದ್ರಿಕಾ– 'ಪ್ರಭವಃ ಶಾಸ್ತ್ರಾಣಾಮ್' ಇತ್ಯಸ್ಯ ತು 'ಯತಃ' ಇತ್ಯಸ್ಯ ಗುರುರ್ಗುರೂಣಾಮಿತ್ಯನೇನಾನ್ವಿತತಯಾ, ಹೇತುತ್ವಸಮರ್ಪಕಾಭಾವೇನ, ಹೇತುತ್ವಮೇವ ನ ಪ್ರತಿಪತ್ತುಂ ಶಕ್ಯಮ್ । ನ ಚ 'ಯತಃ' ಇತ್ಯಸ್ಯ ಆವೃತ್ತ್ಯಾ, ಯೋಗ್ಯತಯಾ ಚಶಬ್ದಾಧ್ಯಾಹಾರೇಣ

ತಸ್ಯಾಪಿ ಹೇತ್ವಂತರತ್ವಂ ಪ್ರತಿಪತ್ತುಂ ಶಕ್ಯಮಿತಿ ವಾಚ್ಯಮ್; ವೇದಾನಾಂ ಭಾರತಾದೀನಾಂ ಚ ಪ್ರಭವತ್ವೇನ ತದರ್ಥತತ್ತ್ವಜ್ಞಾನಸಿದ್ಧಾವಪಿ, ವಿವಕ್ಷಿತಾರ್ಥತತ್ತ್ವಜ್ಞಾನಾಲಾಭಾತ್ ।

'ಪ್ರಭವಃ ಶಾಸ್ತ್ರಾಣಾಮ್' ಎಂಬುದನ್ನು ವಿವಕ್ಷಿತಾರ್ಥತತ್ವಜ್ಞಾನಕ್ಕೆ ಮತ್ತೊಂದು ಹೇತುವೆಂದು ಹೇಗೆ ಹೇಳುತ್ತೀರಿ? 'ಯತಃ' ಎಂಬುದು ಹೇತುಸಮರ್ಪಕವಾದ ಪದವಾದ್ದರಿಂದ ಶಾಸ್ತ್ರಾಣಾಂ ಪ್ರಭವತ್ವವು ಹೇತುವೆಂದು ಹೇಳಬೇಕು. ಆದರೆ 'ಗುರುರ್ಗುರೂಣಾಮ್' ಎಂಬಲ್ಲಿ ಈ ಯತಃ ಎಂಬ ಹೇತುವಾಚಕಪದವು ಅನ್ವಯವನ್ನು ಹೊಂದಿದೆ. ಪುನಃ ಶಾಸ್ತ್ರಾಣಾಂ ಪ್ರಭವತ್ವಕ್ಕೆ ಹೇತುಸಮರ್ಪಕ ಆಗುವುದಿಲ್ಲ. ಆದ್ದರಿಂದ ಇದನ್ನು ವಿವಕ್ಷಿತಾರ್ಥತತ್ವಜ್ಞಾನಕ್ಕೆ ಹೇತುವೆಂದು ತಿಳಿಯಲು ಸಾಧ್ಯವೇ ಆಗುವುದಿಲ್ಲ.

'ಯತಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಯೋಗ್ಯತೆಯ 'ಚ'ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ 'ಶಾಸ್ತ್ರಾಣಾಂ ಪ್ರಭವತ್ವ'ವು ವಿವಕ್ಷಿತಾರ್ಥತತ್ವಜ್ಞಾನಕ್ಕೆ ಮತ್ತೊಂದು ಹೇತು-ವೆಂದು ತಿಳಿಯಬಹುದಲ್ಲವೇ?

ಇದೂ ಕೂಡ ತಪ್ಪು. ಏಕೆಂದರೆ, ಶಾಸ್ತ್ರಾಣಾಂ ಪ್ರಭವತ್ವ ಎಂಬ ಹೇತುವಿನಿಂದ ವೇದಗಳಿಗೆ ಹಾಗೂ ಮಹಾಭಾರತಾದಿ ಶಾಸ್ತ್ರಗಳಿಗೆ ಕಾರಣರಾಗಿದ್ದಾರೆ ಎಂಬರ್ಥವು ತಿಳಿಯುತ್ತದೆ. ತದ್ವಿಷಯಕವಾದ ತತ್ವಜ್ಞಾನವನ್ನು ಬಾದರಾಯಣರು ಹೊಂದಿದ್ದಾರೆಂದೂ ಕೂಡ ತಿಳಿಯುತ್ತದೆ. ಆದರೆ ಬ್ರಹ್ಮಸೂತ್ರಗಳ ರಚನೆಗೆ ಆವಶ್ಯಕವಾದ ವಿವಕ್ಷಿತಾರ್ಥತತ್ವಜ್ಞಾನವು ಇದರಿಂದ ಸಿದ್ಧವಾಗುವುದಿಲ್ಲ. ಹಾಗಾಗಿ ಶಾಸ್ತ್ರಾಣಾಂ ಪ್ರಭವತ್ವಹೇತುವು ವಿವಕ್ಷಿತಾರ್ಥತತ್ವಜ್ಞಾನಕ್ಕೆ ಹೇತುವಾಗುವುದಿಲ್ಲ.

## ವಕ್ತ್ರಾದ್ಯಾನುಕೂಲ್ಯಗಳಿಗೆ ಈ ಗುರುರ್ಗುರೂಣಾಂ ಎಂಬ ಶ್ಲೋಕವು ಹೇಗೆ ಹೇತುಸಮರ್ಪಕ?

ವಾಕ್ಯಾರ್ಥಚಂದ್ರಿಕಾ– ನ ಚಾತ್ರೋಭಯತ್ರ ಸರ್ವಜ್ಞತ್ವಸ್ಯ ಸಾಧ್ಯತಯಾ ವಿವಕ್ಷಿತತ್ವೇನ, ತನ್ಮುಖೇನ ವಿವಕ್ಷಿತಾರ್ಥತತ್ತ್ವಜ್ಞಾನಸಿದ್ಧಿರಿತಿ ವಾಚ್ಯಮ್, ಉಪದೇಶಕಾಂತರತತ್ತ್ವೋಪ-ದೇಶಕತ್ವಮಾತ್ರೇಣ, ವೇದಭಾರತಾದಿಪ್ರಭವತ್ವಮಾತ್ರೇಣ ಚ ಸಾರ್ವಜ್ಞಾಸಿದ್ಧೇಃ । ವೇದಾದಿ-ಪ್ರಭವತ್ವೇऽಪಿ ಅಪಟುಕರಣತ್ವಸಂಭವೇನ ತೇನ ಪಟುಕರಣತ್ವಾಸಿದ್ಧೇಶ್ಚ । 'ಯತಃ' ಇತ್ಯಸ್ಯ

ಪೂರ್ವಾರ್ಧೇಽನ್ವಯೇನ ಉತ್ತರಾರ್ಧೇ ಪಕ್ಷಸಾಧ್ಯಮಾತ್ರೋಕ್ತ್ಯಾ ಹೇತ್ವಭಾವೇನ, ವಕ್ತ್ರಾನುಕೂಲ್ಯೈಕದೇಶವಿವಕ್ಷಾಶ್ರೋತೃಪ್ರಸಂಗಾನುಕೂಲ್ಯಾಸಿದ್ಧೇಶ್ಚ । 'ಯತಶ್ಚ' ಇತ್ಯಸ್ಯಾವೃತ್ತ್ಯಾ 'ಅಜಾದಿಭ್ಯಸ್ತದರ್ಥತಃ' 'ತದುದಿತಮ್' ಇತ್ಯನೇನ ಅನ್ವಯೇಽಪಿ, 'ಬ್ರಹ್ಮಾದಿಭ್ಯಃ ತಜ್ಜ್ಞಾನಾರ್ಥಂ ಬಾದರಾಯಣಾದುತ್ಪನ್ನಮ್' ಇತ್ಯುಕ್ತಿಮಾತ್ರೇಣ ಶ್ರೋತೃಪ್ರಸಂಗಾನುಕೂಲ್ಯಾಭಾವಾತ್ । ಅತೋ ನ ವಕ್ತ್ರಾನುಕೂಲ್ಯಾದಿಹೇತುಸಮರ್ಪಕತ್ವಮಸ್ಯ ಶ್ಲೋಕಸ್ಯೇತ್ಯತಃ,

'ಗುರೂಣಾಂ ಗುರುತ್ವಾತ್' ಎಂಬ ಹೇತುವಿನಿಂದ ಮತ್ತು 'ಶಾಸ್ತ್ರಾಣಾಂ ಪ್ರಭವತ್ವಾತ್' ಎಂಬ ಹೇತುವಿನಿಂದ ವಿವಕ್ಷಿತಾರ್ಥತತ್ವಜ್ಞಾನವನ್ನು ನೇರವಾಗಿ ಸಾಧನೆ ಮಾಡುವುದಿಲ್ಲ. ಸರ್ವಜ್ಞತ್ವವನ್ನು ಸಾಧನೆ ಮಾಡುತ್ತೇವೆ. ಈ ಸರ್ವಜ್ಞತ್ವದಿಂದ ವಿವಕ್ಷಿತಾರ್ಥತತ್ವಜ್ಞಾನವನ್ನು ಸಾಧನೆ ಮಾಡುತ್ತೇವೆ?

ಹೀಗೆ ಹೇಳಲಾಗದು. ಏಕೆಂದರೆ 'ಗುರೂಣಾಂ ಗುರುತ್ವಾತ್' ಎಂಬ ಹೇತುವಿನಿಂದ ಬೇರೆ ಉಪದೇಶಕರಿಗೆ ತತ್ವವನ್ನು ಉಪದೇಶ ಮಾಡುವುದರಿಂದ ಅವರಿಗಿಂತ ಹೆಚ್ಚಿನ ತತ್ವಜ್ಞಾನವಿದೆ ಎಂದಷ್ಟೇ ಸಿದ್ಧವಾಗುತ್ತದೆ. ಮತ್ತು ವೇದಭಾರತಾದಿಪ್ರಭವತ್ವದಿಂದ ತದ್ವಿಷಯಕಜ್ಞಾನವಿದೆ ಎಂದಷ್ಟೇ ಸಿದ್ಧವಾಗುತ್ತದೆ. ಸಾರ್ವಜ್ಞ್ಯವು ಸಿದ್ಧವಾಗುವುದಿಲ್ಲ. ಮತ್ತು ವೇದಾದಿಪ್ರಭವತ್ವವಿದ್ದರೂ ಕೂಡ ಅಪಟುಕರಣತ್ವವೇ ಇರಬಹುದು. ಈ ಹೇತುವಿನಿಂದ ಪಟುಕರಣತ್ವವೂ ಕೂಡ ಸಿದ್ಧವಾಗುವುದಿಲ್ಲ.

'ಯತಃ ತದುದಿತಂ ಮಾನಮ್' ಎಂಬ ಉತ್ತರಾರ್ಧದಲ್ಲಿರುವ ಯತಃ ಎಂಬ ಪದಕ್ಕೆ ಪೂರ್ವಾರ್ಧದ ಜೊತೆ ಅನ್ವಯ ಮಾಡಬೇಕೆಂದು ಹೇಳಿದಿರಿ. ಹಾಗಾದರೆ ಉತ್ತರಾರ್ಧದಲ್ಲಿ ಪಕ್ಷಸಾಧ್ಯಗಳನ್ನಷ್ಟೇ ಹೇಳಿದ್ದಾರೆಂದಂತಾಯಿತು. ಹೇತುವನ್ನೇ ಹೇಳಿರುವುದಿಲ್ಲ. ಆದ್ದರಿಂದ ವಕ್ತ್ರಾದ್ಯಾನುಕೂಲ್ಯದ ಏಕದೇಶವಾದ ವಿವಕ್ಷೆಯು ಸಿದ್ಧವಾಗಲಿಲ್ಲ. ಮತ್ತು ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳೂ ಕೂಡ ಸಿದ್ಧವಾಗಲಿಲ್ಲ.

ಮತ್ತೊಂದು ದೋಷ – 'ಯತಶ್ಚ' ಎಂಬುದನ್ನು ಆವೃತ್ತಿಮಾಡಿಕೊಂಡು 'ಅಜಾದಿಭ್ಯಸ್ತದರ್ಥತಃ' ಎಂಬುದರ ಜೊತೆ ಮತ್ತು 'ತದುದಿತಮ್' ಎಂಬುದರ ಜೊತೆ ಅನ್ವಯ ಮಾಡಿದರೂ ಕೂಡ 'ಬ್ರಹ್ಮಾದಿಭ್ಯಃ ತಜ್ಜ್ಞಾನಾರ್ಥಂ ಬಾದರಾಯಣಾದುತ್ಪನ್ನಮ್' ಎಂಬ ಮಾತಿನಿಂದ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಶ್ಲೋಕವು ವಕ್ತ್ರಾದ್ಯಾನುಕೂಲ್ಯಗಳಿಗೆ ಹೇತುಸಮರ್ಪಕವಾಗಲಿಲ್ಲ. ಇಷ್ಟು ಆಕ್ಷೇಪ.

## ಹೇತುದ್ವಯಗಳಿಂದ ಸಾರ್ವಜ್ಞ್ಯವು ಸಿದ್ಧವಾಗುತ್ತದೆ

ವಾಕ್ಯಾರ್ಥಚಂದ್ರಿಕಾ– 'ಜಗದ್ಗುರೂಣಾಮಜಾದಿಭ್ಯಃ' ಇತ್ಯೇತತ್ಸನ್ನಿಧಾನಾದತ್ರ 'ಗುರೂಣಾಮ್' ಇತ್ಯನೇನ ಜಗತ್ತತ್ತ್ವೋಪದೇಶಕಬ್ರಹ್ಮಾದೀನಾಂ ಸರ್ವಜ್ಞಕಲ್ಪತ್ವಸ್ಯಾಭಿಪ್ರೇತತಯಾ, ಸರ್ವಜ್ಞಕಲ್ಪೋಪದೇಶಕತ್ವಸ್ಯ ಚ ಸಾರ್ವಜ್ಞಸಾಧಕತ್ವೋಪಪತ್ತೇಃ, ವೇದ-ಭಾರತಾದೀನಾಂ ಚಾಶೇಷಾರ್ಥಪ್ರತಿಪಾದಕತ್ವಸ್ಯ ವಿವಕ್ಷಿತತ್ವಾತ್ 'ಗುರೂಣಾಮ್' ಇತ್ಯಾದೇ-ರಾವೃತ್ತ್ಯಾ ಶಾಸ್ತ್ರಾದಿವಿಶೇಷಣತ್ವೇ ಚ ಸಾಕ್ಷಾದೇವ ಅಶೇಷಾರ್ಥಪ್ರತಿಪಾದಕತ್ವಲಾಭಾತ್ ಅಶೇ-ಷಾರ್ಥಪ್ರತಿಪಾದಕಶಾಸ್ತ್ರಪ್ರಭವತ್ವಸ್ಯ ಚ ಸಾರ್ವಜ್ಞಸಾಧಕತ್ವೋಪಪತ್ತೇಃ ನೋಭಯತ್ರಾಪಿ ಅನುಪಪತ್ತಿಃ।

ವಿವಕ್ಷಿತಾರ್ಥತತ್ತ್ವಜ್ಞಾನವನ್ನು ನೇರವಾಗಿ ಸಾಧನೆ ಮಾಡುವುದಿಲ್ಲ. ಸಾರ್ವಜ್ಞ್ಯವನ್ನಷ್ಟೇ ಸಾಧನೆ ಮಾಡುತ್ತೇವೆ. ಗುರೂಣಾಂ ಗುರುತ್ವಾತ್ ಎಂಬ ಹೇತುವಿನಿಂದ ಸಾರ್ವಜ್ಞ್ಯವು ಹೇಗೆ ಸಿದ್ಧವಾಗುತ್ತದೆ? ಎಂದರೆ 'ಜಗದ್ಗುರೂಣಾಂ ಗುರುಮಂಜಸೈವ' ಹಾಗೂ 'ಅಜಾದಿಭ್ಯಸ್ತದರ್ಥತಃ' ಎಂಬುದು ಹತ್ತಿರವಿರುವುದರಿಂದ ತತ್ಸನ್ನಿಧಾನದ ಬಲದಿಂದ ಗುರೂಣಾಂ ಎಂಬುದಕ್ಕೆ ಜಗತ್ತಿಗೆ ತತ್ತ್ವೋಪದೇಶವನ್ನು ಮಾಡುವ ಚತುರ್ಮುಖಬ್ರಹ್ಮಾದಿ ದೇವತೆಗಳು ಎಂಬರ್ಥವು ದೊರೆಯುತ್ತದೆ. ಈ ಚತುರ್ಮುಖಾದಿ ದೇವತೆಗಳು ಸರ್ವಜ್ಞಕಲ್ಪರೆಂದು ಅಭಿಪ್ರೇತರಾಗಿದ್ದಾರೆ. ಬಾದರಾಯಣರು ಸಾಮಾನ್ಯಗುರುಗಳಿಗಷ್ಟೇ ಗುರುಗಳಲ್ಲ; ಜಗದ್ಗುರುಗಳಾದ ಬ್ರಹ್ಮರುದ್ರಾದಿಗಳಿಗೆ ಗುರುಗಳಾಗಿದ್ದಾರೆ. ಸರ್ವಜ್ಞಕಲ್ಪರಾದವರಿಗೂ ಗುರುಗಳಾದ ಮೇಲೆ ಇವರು ಪರಿಪೂರ್ಣವಾದ ಸಾರ್ವಜ್ಞ್ಯವನ್ನು ಹೊಂದಿದ್ದಾರೆಂಬುದು ಸಿದ್ಧ-ವಾಗುತ್ತದೆ. ಆದ್ದರಿಂದ 'ಜಗದ್ಗುರೂಣಾಂ ಗುರುತ್ವಾತ್' ಎಂಬ ಹೇತುವು ಸಾರ್ವಜ್ಞ್ಯಕ್ಕೆ ಸಾಧಕ-ವಾಗುತ್ತದೆ. ಇದರಂತೆ 'ಶಾಸ್ತ್ರಾಣಾಂ ಪ್ರಭವತ್ವಾತ್' ಎಂಬ ಹೇತುವು ಕೂಡ ಸಾರ್ವಜ್ಞ್ಯಕ್ಕೆ ಸಾಧಕವಾಗುತ್ತದೆ. ಅದು ಹೀಗೆ – 'ಗುರೂಣಾಂ' ಎಂಬುದನ್ನು ಆವೃತ್ತಿ ಮಾಡಿಕೊಂಡು 'ಶಾಸ್ತ್ರಾಣಾಂ' ಎಂಬಲ್ಲೂ ಕೂಡ ಅನ್ವಯವನ್ನು ಮಾಡಿಕೊಳ್ಳಬೇಕು. ಆಗ ವೇದಭಾರತಾದಿ ಶಾಸ್ತ್ರಗಳು ಅಶೇಷಾರ್ಥಪ್ರತಿಪಾದಕವಾಗಿವೆ ಎಂದು ಹೇಳಿದಂತಾಗುತ್ತದೆ. ಸಮರ್ಥಶಾಸ್ತ್ರಾರ್ಥವನ್ನು ಪ್ರತಿಪಾದನೆ ಮಾಡುವ ವೇದಭಾರತಾದಿ ಶಾಸ್ತ್ರಗಳಿಗೆ ಪ್ರಭವರಾದ ಮೇಲೆ ಬಾದರಾಯಣರು ಸರ್ವಜ್ಞರೇ ಆಗಿರಬೇಕೆಂದು ಸಿದ್ಧವಾಗುತ್ತದೆ. ಆದ್ದರಿಂದ 'ಅಶೇಷಶಾಸ್ತ್ರಪ್ರಭವತ್ವಾತ್' ಎಂಬ ಹೇತುವು ಕೂಡ ಸಾರ್ವಜ್ಞ್ಯಸಾಧಕವಾಗುತ್ತದೆ.

# ವಿವಕ್ಷಾ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳೂ ಕೂಡ ಸಿದ್ಧವಾದವು

ವಾಕ್ಯಾರ್ಥಚಂದ್ರಿಕಾ– ಸವಿಸ್ತರತ್ವಾರ್ಥಕ'ಗುರೂಣಾಮ್' ಇತ್ಯಸ್ಯ ಶಾಸ್ತ್ರವಿಶೇಷಣತ್ವೇ ತತ್ಪ್ರಭವತ್ವೇನ ಪಟುಕರಣತ್ವಸಿದ್ಧಿಃ।

'ಗುರೂಣಾಮ್' ಇತ್ಯನೇನ ಬ್ರಹ್ಮಾದೀನಾಂ ತತ್ತ್ವೋಪದೇಶಕತ್ವೋಕ್ತೇಃ 'ಅಜಾದಿಭ್ಯಃ' ಇತ್ಯನೇನ ತೇಷಾಂ ಶ್ರೋತೃತ್ವಸ್ಯ, 'ಅರ್ಥ'ಪದೇನ ಮೋಕ್ಷಸ್ಯ, 'ತದುದಿತಮ್' ಇತಿ ಬಾದರಾಯಣೇನೋಪದಿಷ್ಟತ್ವಸ್ಯ ಚ ವಿವಕ್ಷಿತತಯಾ 'ಅಜಾದಿಭ್ಯಸ್ತದರ್ಥತಃ' 'ತದುದಿತಮ್' ಇತ್ಯುಕ್ತ-ಹೇತುಭಿರ್ವಿವಕ್ಷಾದಿಸಿದ್ಧಿರಿತಿ ನ ಕಾಽಪ್ಯನುಪಪತ್ತಿರಿತ್ಯಭಿಪ್ರೇತ್ಯಾಹ – ಬಾದರಾಯಣ ಇತ್ಯಾದಿನಾ ॥

ಟೀಕೆಯಲ್ಲಿ 'ಗುರೂಣಾಂ' ಎಂಬ ಪದಕ್ಕೆ 'ಸವಿಸ್ತರಾಣಾಂ' ಎಂಬರ್ಥವನ್ನು ಹೇಳಿದ್ದಾರೆ. ಆದ್ದರಿಂದ ಈ 'ಗುರೂಣಾಂ' ಎಂಬುದು ಶಾಸ್ತ್ರಕ್ಕೆ ವಿಶೇಷಣವಾದಾಗ ವಿಸ್ತಾರವಾದ ಶಾಸ್ತ್ರವನ್ನು ರಚಿಸಿದ್ದಾರೆಂಬರ್ಥವು ತಿಳಿಯುತ್ತದೆ. ಇದರಿಂದ ಶಾಸ್ತ್ರರಚನೆ ಮಾಡಿದ ಬಾದರಾಯಣರು ಪಟು-ಕರಣರೇ ಆಗಿದ್ದಾರೆಂಬುದು ಸಿದ್ಧವಾಗುತ್ತದೆ.

'ಗುರೂಣಾಂ' ಎಂಬ ವಿಶೇಷಣದಿಂದ ಬ್ರಹ್ಮಾದಿಗಳಿಗೆ ಪರಮಾತ್ಮನು ತತ್ತ್ವೋಪದೇಶಕ-ನಾಗಿದ್ದಾನೆಂದು ತಿಳಿಸಿದ್ದಾರೆ. ಮತ್ತು 'ಅಜಾದಿಭ್ಯಃ' ಎಂಬುದರಿಂದ ಬ್ರಹ್ಮಾದಿದೇವತೆಗಳಿಗೆ ಉಪ-ದೇಶಿಸಿದ್ದಾನೆಂಬರ್ಥವನ್ನು ಹೇಳಿದ್ದಾರೆ. ಇದರಿಂದ ಶ್ರೋತ್ರಾನುಕೂಲ್ಯವು ಸಿದ್ಧವಾಗುತ್ತದೆ. ಏಕೆಂದರೆ ಸಮಸ್ತಜಗತ್ತಿಗೆ ಉಪದೇಶ ಮಾಡುತ್ತಾರೆಂದರೆ ಅವರು ನಿಜವಾದ ಶ್ರೋತೃಗಳಾಗಿದ್ದಾರೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರೋತ್ರಾನುಕೂಲ್ಯವು ಸಿದ್ಧವಾಗುತ್ತದೆ. ಅರ್ಥ ಎಂಬ ಪದದಿಂದ ಮೋಕ್ಷ-ವನ್ನು ವಿವಕ್ಷಿಸಿದ್ದಾರೆ. 'ತದುದಿತಂ' ಎಂಬುದರಿಂದ ವೇದವ್ಯಾಸದೇವರಲ್ಲಿ ಉಪದೇಷ್ಟೃತ್ವವನ್ನು ವಿವಕ್ಷಿಸಿ-ದ್ದಾರೆ.

ಇದರಿಂದ ಪ್ರಸಂಗಾನುಕೂಲ್ಯವನ್ನು ಹಾಗೂ ವಕ್ತ್ರಾನುಕೂಲ್ಯವನ್ನು ತಿಳಿಸಿದಂತಾಯಿತು. ಹೀಗೆ 'ಅಜಾದಿಭ್ಯಸ್ತದರ್ಥತಃ' ಎಂಬುದರಿಂದ ಮತ್ತು 'ತದುದಿತಮ್' ಎಂಬುದರಿಂದ ವಿವಕ್ಷಾ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯ ಮೊದಲಾದವುಗಳನ್ನು ಸಾಧಿಸಿದಂತಾಯಿತು. ಆದ್ದರಿಂದ ಯಾವುದೇ ರೀತಿಯಲ್ಲಿ ಅನುಪಪತ್ತಿಯು ಇರುವುದಿಲ್ಲ.

ಯಾದುಪತ್ಕ– ಯತೋ ಯತ್ಕಾರಣಮಿತಿ ॥ 'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಇತಿ ಕಾತ್ಯಾಯನಸ್ಮರಣಾತ್ ಪ್ರಥಮಾ ಕೃತಾ । ಯಸ್ಮಾತ್ ಕಾರಣಾದಿತ್ಯರ್ಥಃ ।

'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಎಂಬ ಕಾತ್ಯಾಯನನ ವಾರ್ತಿಕದಂತೆ 'ಯತಃ' ಎಂಬ ಪದವನ್ನು ಪ್ರಥಮಾಂತವಾಗಿ ನಿರ್ದೇಶಿಸಲಾಗಿದೆ. 'ಯಸ್ಮಾತ್ ಕಾರಣಾತ್' ಎಂದರ್ಥ.

## ವಕ್ತ್ರಾದ್ಯಾನುಕೂಲ್ಯಗಳು ಸಾಕ್ಷಾತ್ ಸಾಧ್ಯಗಳು

**ಶ್ರೀಮನ್ನ್ಯಾಯಸುಧಾ– ಅತ್ರ 'ಗುರುರ್ಗುರೂಣಾಮ್' ಇತ್ಯಾದಿಹೇತೂನಾಂ ವಕ್ತೃಶ್ರೋತೃಪ್ರಸಂಗಾನುಕೂಲ್ಯಾನ್ಯೇವ ಸಾಕ್ಷಾತ್ಸಾಧ್ಯಾನಿ, ಮಾನಮಿತಿ ತು ಪರಮಸಾಧ್ಯನಿರ್ದೇಶ ಇತಿ ಜ್ಞಾತವ್ಯಮ್ ।**

**ತಥಾಹಿ – ವಿವಕ್ಷಿತಾರ್ಥತತ್ತ್ವಜ್ಞಾನಂ, ಕರಣಪಾಟವಂ, ವಿವಕ್ಷಾ ಚೇತಿ ತ್ರಯಂ ವಕ್ತುರಾನುಕೂಲ್ಯಂ ನಾಮ । ತತ್ತ್ವಜ್ಞಾನಯೋಗ್ಯತಾ ವಕ್ತೃಪ್ರೀತಿವಿಷಯತಾ ಚೇತಿ ದ್ವಯಂ ಶ್ರೋತುಃ । ಶ್ರೋತೃಪ್ರಯೋಜನೋದ್ದೇಶಃ ಪ್ರಸಂಗಸ್ಯ ।**

'ಈ ಮಂಗಳಶ್ಲೋಕದಲ್ಲಿ ಜಗದ್ಗುರುಗಳಿಗೂ ಗುರುಗಳಾದ ವೇದವ್ಯಾಸದೇವರಿಂದ ಪ್ರಣೀತವಾಗಿದೆ' ಇತ್ಯಾದಿ ಹೇತುಗಳಿಂದ ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳನ್ನು ನೇರವಾಗಿಯೇ ಸಾಧಿಸಲಾಗಿದೆ. ಇದರಿಂದ ಮುಂದೆ ಸಾಧಿಸಲ್ಪಡುವ 'ಮಾನಮ್' ಎಂಬುದು ಪರಮಸಾಧ್ಯದ ನಿರ್ದೇಶವಾಗಿದೆ ಎಂದು ತಿಳಿಯಬೇಕು.

ಅದು ಹೀಗೆ – ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವ ಹಾಗೂ ವಿವಕ್ಷೆ ಈ ಮೂರನ್ನೂ ವಕ್ತ್ರಾನುಕೂಲ್ಯ ಎನ್ನುವರು. ತತ್ತ್ವಜ್ಞಾನವನ್ನು ಪಡೆಯುವ ಅರ್ಹತೆ ವಕ್ತೃವಿನ ಪ್ರೀತಿಗೆ ಪಾತ್ರನಾಗಿರುವಿಕೆ ಇವುಗಳು ಶ್ರೋತ್ರಾನುಕೂಲ್ಯ ಎನಿಸಿವೆ. ಶ್ರೋತೃವಿನ ಪ್ರಯೋಜನಪ್ರಾಪ್ತಿಯು ಪ್ರಸಂಗಾನುಕೂಲ್ಯ ಎನಿಸುತ್ತದೆ.

## ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧಿಸುವ ಅನುಮಾನಗಳು

ಪರಿಮಳ– ಇತಿ ಜ್ಞಾತವ್ಯಮಿತಿ ॥ ಅಯಂ ಭಾವಃ – ಯತಃ ಇತಿ ಶ್ರವಣಾತ್ ಪ್ರಾಪ್ತಮತ ಇತ್ಯೇತದಾವರ್ತ್ಯಮ್ । ಅತ ಏತಚ್ಛಾಸ್ತ್ರಮನುಕೂಲವಕ್ತೃಕಂ ಶಾಸ್ತ್ರ-ಪ್ರಭವತ್ವಾದಿವಿಶಿಷ್ಟೇನೋಕ್ತತ್ವಾತ್ ಭಾರತಾದಿವತ್ । ವಿಮತಮನುಕೂಲಶ್ರೋತೃಕಂ ಜಗದುಪದೇಷ್ಟೃಭ್ಯೋ ಅಜಾದಿಭ್ಯ ಉಪದಿಷ್ಟತ್ವಾತ್ । ವಿಮತಮನುಕೂಲ-ಪ್ರಸಂಗೋಪೇತಂ ಶ್ರೋತೃಪ್ರಯೋಜನೋದ್ದೇಶಶಬ್ದತ್ವಾತ್ ಭಾರತವದೇವೇತ್ಯತಃ-ಶಬ್ದೋಕ್ತಹೇತುತ್ರಯಪರಾಮರ್ಶೇನ ಸಾಧ್ಯತ್ರಯಮ್ । ತಥೈತಚ್ಛಾಸ್ತ್ರಂ ಮಾನಂ ಭವಿತುಮರ್ಹತಿ ಅನುಕೂಲವಕ್ತ್ರಾದಿಮತ್ತ್ವಾತ್ ಭಾರತವದಿತಿ । ಅನುಕೂಲವಕ್ತೃತ್ವಾದಿಃ 'ಅತಃ'ಶಬ್ದಾರ್ಥ ಇತಿ । ಅನುಕೂಲವಕ್ತ್ರಾದಿಮತ್ತ್ವಮಪಿ ಪ್ರಾಮಾಣ್ಯೇ ಸಾಕ್ಷಾನ್ನ ಹೇತುಃ । ಕಿಂತು ಆಪ್ತವಾಕ್ಯತ್ವಸಾಧನದ್ವಾರಾ ಇತ್ಯಗ್ರೇ ವ್ಯಕ್ತಮಿತಿ ಪರಮಸಾಧ್ಯನಿರ್ದೇಶ ಇತ್ಯೇವೋಕ್ತಮ್ । ಆದ್ಯಸಾಧ್ಯತ್ರಯೇ ಹೇತುತ್ರಯಂ ನಾಪ್ರಯೋಜಕಮಿತಿ ಉಪ-ಪಾದಯತಿ – ತಥಾ ಹೀತ್ಯಾದಿನಾ ॥ ಶ್ರೋತುರಿತಿ ॥ 'ಅನುಕೂಲ್ಯಮ್' ಇತ್ಯನುಷಂಗಃ । ಏವಮಗ್ರೇಽಪಿ ॥

'ಇತಿ ಜ್ಞಾತವ್ಯಮ್' – ಇದು ಪ್ರಮಾಣ ಎಂಬ ವಚನವು ಪರಮಸಾಧ್ಯವನ್ನು ತಿಳಿಸುತ್ತದೆಂದು ತಿಳಿಯಬೇಕು. ಟೀಕಾರಾಯರ ಅಭಿಪ್ರಾಯ ಹೀಗಿದೆ – ಯಾವ ಕಾರಣದಿಂದ 'ಯತಃ' ಎಂಬ ಪದವನ್ನು ಅನುವ್ಯಾಖ್ಯಾನದಲ್ಲಿ ಪ್ರಯೋಗಿಸಿದ್ದಾರೋ ಅದಕ್ಕನುಗುಣವಾಗಿ 'ಅತಃ' ಎಂಬ ಪದವನ್ನು ಅಧ್ಯಾಹಾರ ಮಾಡಲೇಬೇಕು. ಆಗ ಈ ಅರ್ಥವು ತಿಳಿಯುತ್ತದೆ. ಅತಃ = ಈ ಕಾರಣದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ವಕ್ತೃವಿನ ಆನುಕೂಲ್ಯವನ್ನು ಹೊಂದಿದೆ. ಏಕೆಂದರೆ ಶಾಸ್ತ್ರಗಳನ್ನು ರಚನೆ ಮಾಡಿದ ವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದೆ; ಮಹಾಭಾರತವು ಇದಕ್ಕೆ ದೃಷ್ಟಾಂತವಾಗಿದೆ. ಅನುಮಾನಪ್ರಯೋಗವನ್ನು ಹೀಗೆ ತಿಳಿಯಬೇಕು –

'ಈ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರೋತೃವಿನ ಆನುಕೂಲ್ಯವನ್ನು ಹೊಂದಿದೆ. ಜಗತ್ತಿಗೆ ಉಪದೇಶವನ್ನು ಮಾಡುವ ಬ್ರಹ್ಮಾದಿಗಳಿಗೆ ಉಪದೇಶಿಸಲ್ಪಟ್ಟಿರುವುದರಿಂದ'

ಯಾದುಪತ್ಯ– ಯತೋ ಯತ್ಕಾರಣಮಿತಿ ॥ 'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಇತಿ ಕಾತ್ಯಾಯನಸ್ಮರಣಾತ್ ಪ್ರಥಮಾ ಕೃತಾ । ಯಸ್ಮಾತ್ ಕಾರಣಾದಿತ್ಯರ್ಥಃ ।

'ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಮ್' ಎಂಬ ಕಾತ್ಯಾಯನನ ವಾರ್ತಿಕದಂತೆ 'ಯತಃ' ಎಂಬ ಪದವನ್ನು ಪ್ರಥಮಾಂತವಾಗಿ ನಿರ್ದೇಶಿಸಲಾಗಿದೆ. 'ಯಸ್ಮಾತ್ ಕಾರಣಾತ್' ಎಂದರ್ಥ.

## ವಕ್ತ್ರಾದ್ಯಾನುಕೂಲ್ಯಗಳು ಸಾಕ್ಷಾತ್ ಸಾಧ್ಯಗಳು

**ಶ್ರೀಮನ್ನ್ಯಾಯಸುಧಾ– ಅತ್ರ 'ಗುರುರ್ಗುರೂಣಾಮ್' ಇತ್ಯಾದಿಹೇತೂನಾಂ ವಕ್ತೃಶ್ರೋತೃಪ್ರಸಂಗಾನುಕೂಲ್ಯಾನ್ಯೇವ ಸಾಕ್ಷಾತ್ಸಾಧ್ಯಾನಿ, ಮಾನಮಿತಿ ತು ಪರಮಸಾಧ್ಯನಿರ್ದೇಶ ಇತಿ ಜ್ಞಾತವ್ಯಮ್ ।**

**ತಥಾಹಿ – ವಿವಕ್ಷಿತಾರ್ಥತತ್ತ್ವಜ್ಞಾನಂ, ಕರಣಪಾಟವಂ, ವಿವಕ್ಷಾ ಚೇತಿ ತ್ರಯಂ ವಕ್ತುರಾನುಕೂಲ್ಯಂ ನಾಮ । ತತ್ತ್ವಜ್ಞಾನಯೋಗ್ಯತಾ ವಕ್ತೃಪ್ರೀತಿವಿಷಯತಾ ಚೇತಿ ದ್ವಯಂ ಶ್ರೋತುಃ । ಶ್ರೋತೃಪ್ರಯೋಜನೋದ್ದೇಶಃ ಪ್ರಸಂಗಸ್ಯ ।**

'ಈ ಮಂಗಳಶ್ಲೋಕದಲ್ಲಿ ಜಗದ್ಗುರುಗಳಿಗೂ ಗುರುಗಳಾದ ವೇದವ್ಯಾಸದೇವರಿಂದ ಪ್ರಣೀತವಾಗಿದೆ' ಇತ್ಯಾದಿ ಹೇತುಗಳಿಂದ ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳನ್ನು ನೇರವಾಗಿಯೇ ಸಾಧಿಸಲಾಗಿದೆ. ಇದರಿಂದ ಮುಂದೆ ಸಾಧಿಸಲ್ಪಡುವ 'ಮಾನಮ್' ಎಂಬುದು ಪರಮಸಾಧ್ಯದ ನಿರ್ದೇಶವಾಗಿದೆ ಎಂದು ತಿಳಿಯಬೇಕು.

ಅದು ಹೀಗೆ – ವಿವಕ್ಷಿತಾರ್ಥತತ್ತ್ವಜ್ಞಾನ, ಕರಣಪಾಟವ ಹಾಗೂ ವಿವಕ್ಷೆ ಈ ಮೂರನ್ನೂ ವಕ್ತ್ರಾನುಕೂಲ್ಯ ಎನ್ನುವರು. ತತ್ತ್ವಜ್ಞಾನವನ್ನು ಪಡೆಯುವ ಅರ್ಹತೆ ವಕ್ತೃವಿನ ಪ್ರೀತಿಗೆ ಪಾತ್ರನಾಗಿರುವಿಕೆ ಇವುಗಳು ಶ್ರೋತ್ರಾನುಕೂಲ್ಯ ಎನಿಸಿವೆ. ಶ್ರೋತೃವಿನ ಪ್ರಯೋಜನಪ್ರಾಪ್ತಿಯು ಪ್ರಸಂಗಾನುಕೂಲ್ಯ ಎನಿಸುತ್ತದೆ.

## ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧಿಸುವ ಅನುಮಾನಗಳು

ಪರಿಮಳ– ಇತಿ ಜ್ಞಾತವ್ಯಮಿತಿ ॥ ಅಯಂ ಭಾವಃ – ಯತಃ ಇತಿ ಶ್ರವಣಾತ್ ಪ್ರಾಪ್ತಮತ ಇತ್ಯೇತದಾವರ್ತ್ಯಮ್ । ಅತ ಏತಚ್ಛಾಸ್ತ್ರಮನುಕೂಲವಕ್ತೃಕಂ ಶಾಸ್ತ್ರ-ಪ್ರಭವತ್ವಾದಿವಿಶಿಷ್ಟೇನೋಕ್ತತ್ವಾತ್ ಭಾರತಾದಿವತ್ । ವಿಮತಮನುಕೂಲಶ್ರೋತೃಕಂ ಜಗದುಪದೇಷ್ಟೃಭ್ಯೋ ಅಜಾದಿಭ್ಯ ಉಪದಿಷ್ಟತ್ವಾತ್ । ವಿಮತಮನುಕೂಲ-ಪ್ರಸಂಗೋಪೇತಂ ಶ್ರೋತೃಪ್ರಯೋಜನೋದ್ದೇಶಶಬ್ದತ್ವಾತ್ ಭಾರತವದೇವೇತ್ಯತಃ-ಶಬ್ದೋಕ್ತಹೇತುತ್ರಯಪರಾಮರ್ಶೇನ ಸಾಧ್ಯತ್ರಯಮ್ । ತಥೈತಚ್ಛಾಸ್ತ್ರಂ ಮಾನಂ ಭವಿತುಮರ್ಹತಿ ಅನುಕೂಲವಕ್ತ್ರಾದಿಮತ್ತ್ವಾತ್ ಭಾರತವದಿತಿ । ಅನುಕೂಲವಕ್ತೃತ್ವಾದಿಃ 'ಅತಃ'ಶಬ್ದಾರ್ಥ ಇತಿ । ಅನುಕೂಲವಕ್ತ್ರಾದಿಮತ್ತ್ವಮಪಿ ಪ್ರಾಮಾಣ್ಯೇ ಸಾಕ್ಷಾನ್ನ ಹೇತುಃ । ಕಿಂತು ಆಪ್ತವಾಕ್ಯತ್ವಸಾಧನದ್ವಾರಾ ಇತ್ಯಗ್ರೇ ವ್ಯಕ್ತಮಿತಿ ಪರಮಸಾಧ್ಯನಿರ್ದೇಶ ಇತ್ಯೇವೋಕ್ತಮ್ । ಆದ್ಯಸಾಧ್ಯತ್ರಯೇ ಹೇತುತ್ರಯಂ ನಾಪ್ರಯೋಜಕಮಿತಿ ಉಪ-ಪಾದಯತಿ – ತಥಾ ಹೀತ್ಯಾದಿನಾ ॥ ಶ್ರೋತುರಿತಿ ॥ 'ಆನುಕೂಲ್ಯಮ್' ಇತ್ಯನುಷಂಗಃ । ಏವಮಗ್ರೇಽಪಿ ॥

'ಇತಿ ಜ್ಞಾತವ್ಯಮ್' – ಇದು ಪ್ರಮಾಣ ಎಂಬ ವಚನವು ಪರಮಸಾಧ್ಯವನ್ನು ತಿಳಿಸುತ್ತದೆಂದು ತಿಳಿಯಬೇಕು. ಟೀಕಾರಾಯರ ಅಭಿಪ್ರಾಯ ಹೀಗಿದೆ – ಯಾವ ಕಾರಣದಿಂದ 'ಯತಃ' ಎಂಬ ಪದವನ್ನು ಅನುವ್ಯಾಖ್ಯಾನದಲ್ಲಿ ಪ್ರಯೋಗಿಸಿದ್ದಾರೋ ಅದಕ್ಕನುಗುಣವಾಗಿ 'ಅತಃ' ಎಂಬ ಪದವನ್ನು ಅಧ್ಯಾಹಾರ ಮಾಡಲೇಬೇಕು. ಆಗ ಈ ಅರ್ಥವು ತಿಳಿಯುತ್ತದೆ. ಅತಃ = ಈ ಕಾರಣದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ವಕ್ತೃವಿನ ಆನುಕೂಲ್ಯವನ್ನು ಹೊಂದಿದೆ. ಏಕೆಂದರೆ ಶಾಸ್ತ್ರಗಳನ್ನು ರಚನೆ ಮಾಡಿದ ವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದೆ; ಮಹಾಭಾರತವು ಇದಕ್ಕೆ ದೃಷ್ಟಾಂತವಾಗಿದೆ. ಅನುಮಾನಪ್ರಯೋಗವನ್ನು ಹೀಗೆ ತಿಳಿಯಬೇಕು –

'ಈ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರೋತೃವಿನ ಆನುಕೂಲ್ಯವನ್ನು ಹೊಂದಿದೆ. ಜಗತ್ತಿಗೆ ಉಪದೇಶವನ್ನು ಮಾಡುವ ಬ್ರಹ್ಮಾದಿಗಳಿಗೆ ಉಪದೇಶಿಸಲ್ಪಟ್ಟಿರುವುದರಿಂದ'

'ಈ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಸಂಗಾನುಕೂಲ್ಯವನ್ನು ಹೊಂದಿದೆ. ಶ್ರೋತೃವಿನ ಪ್ರಯೋಜನವೆನಿಸಿದ ಮೋಕ್ಷೋದ್ದೇಶಕ್ಕಾಗಿ ಹೊರಟಿರುವುದರಿಂದ'

ಈ ಎಲ್ಲಾ ಯುಕ್ತಿಗಳಿಗೂ ಮಹಾಭಾರತವೇ ಉದಾಹರಣೆಯಾಗಿದೆ. 'ಅತಃ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದರಿಂದ ಈ ಮೂರು ಹೇತುಗಳನ್ನು ಪರಾಮರ್ಶೆ ಮಾಡಿ ಆ ಮೂರು ಹೇತುಗಳಿಂದ ಮೂರು ಬಗೆಯ ಸಾಧ್ಯಗಳನ್ನು ಕ್ರಮವಾಗಿ ಸಾಧನೆ ಮಾಡಿದಂತಾಗುತ್ತದೆ.

'ಈ ಶಾಸ್ತ್ರವು ಪ್ರಮಾಣವಾಗಿದೆ. ವಕ್ತ್ರಾದ್ಯಾನುಕೂಲ್ಯವನ್ನು ಹೊಂದಿರುವುದರಿಂದ ಮಹಾಭಾರತದಂತೆ' ಎಂಬುದಾಗಿ ಅನುಕೂಲವಕ್ತ್ರಾದಿಮತ್ತ್ವಾತ್ ಎಂಬುದೂ ಕೂಡ ಅತಃ ಎಂಬ ಪದದ ಅರ್ಥವಾಗಿದೆ. ಈ ವಕ್ತ್ರಾದ್ಯಾನುಕೂಲ್ಯಗಳು ಇರುವಿಕೆಯು ಪ್ರಾಮಾಣ್ಯದಲ್ಲಿ ನೇರವಾಗಿ ಹೇತುಗಳಾಗುವುದಿಲ್ಲ. ಆಪ್ತವಾಕ್ಯತ್ವವನ್ನು ಸಾಧಿಸುವ ಮೂಲಕ ಪ್ರಾಮಾಣ್ಯದಲ್ಲಿ ಹೇತುಗಳಾಗುತ್ತವೆಂಬ ವಿಚಾರವು ಮುಂದೆ ಸ್ಪಷ್ಟವಾಗುತ್ತದೆ. ಆದ್ದರಿಂದ 'ಮಾನಮ್ ಇತಿ ಪರಮಸಾಧ್ಯನಿರ್ದೇಶಃ' ಎಂದಷ್ಟೇ ಸಾಮಾನ್ಯವಾಗಿ ಹೇಳಿದ್ದಾರೆ. ಮೊದಲಿನ ಮೂರು ಸಾಧ್ಯಗಳಿಗೆ ಮೂರು ಹೇತುಗಳು ಅಪ್ರಯೋಜಕವಾಗಿದೆ ಎಂದು ತಿಳಿಯಬಾರದು. ಇದನ್ನು 'ತಥಾ ಹಿ' ಎಂಬ ವಾಕ್ಯವು ಉಪಪಾದನೆ ಮಾಡುತ್ತಿದೆ. 'ಶ್ರೋತುಃ' ಎಂಬಲ್ಲಿ 'ಆನುಕೂಲ್ಯಂ' ಎಂಬುದನ್ನು ಅನುಷಂಗ ಮಾಡಬೇಕು. ಮುಂದೂ ಕೂಡ ಹೀಗೆ ತಿಳಿಯಬೇಕು.

ವಿಶೇಷವಿಚಾರ – 'ಗುರುರ್ಗುರೂಣಾಂ' ಇತ್ಯಾದಿ ಪದ್ಯವನ್ನು ನೋಡಿದಾಗ ಒಟ್ಟು ಮೂರು ಹೇತುಗಳು ತಿಳಿಯುತ್ತವೆ.

೧. ಸಜ್ಜನಪ್ರಪಂಚಕ್ಕೆ ಉಪದೇಶಮಾಡುವ ಚತುರ್ಮುಖಬ್ರಹ್ಮದೇವರೇ ಮೊದಲಾದ ದೇವತೆಗಳಿಗೆ ಉಪದೇಶ ಮಾಡುವ ಶ್ರೀವೇದವ್ಯಾಸದೇವರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ರಚಿತವಾಗಿದೆ. (ಗುರುಗುರೂದಿತತ್ವ)

೨. ವೇದಾದಿಶಾಸ್ತ್ರಗಳಿಗೆ ಮುಖ್ಯಪ್ರಭವರಾದ ಶ್ರೀವೇದವ್ಯಾಸದೇವರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ವಿರಚಿತವಾಗಿದೆ. (ವೇದಾದಿಶಾಸ್ತ್ರಪ್ರಭವೋದಿತತ್ವ)

೩. ಬ್ರಹ್ಮಾದಿದೇವತೆಗಳಿಗೆ ಮೋಕ್ಷವೆಂಬ ಪ್ರಯೋಜನಕ್ಕೋಸ್ಕರ ಈ ಬ್ರಹ್ಮಮೀಮಾಂಸಾಶಾಸ್ತ್ರವು ವಿರಚಿತವಾಗಿದೆ. (ಶ್ರೋತೃಪ್ರಯೋಜನೋದ್ದೇಶೇನ ಉದಿತತ್ವ)

ಈ ಮೂರು ಹೇತುಗಳಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ನೇರವಾಗಿಯೇ ಸಮರ್ಥಿಸಿದಂತೆ ಕಾಣುತ್ತದೆ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾಮಾಣ್ಯವನ್ನು ಈ ಮೂರು ಹೇತುಗಳಿಂದ ನೇರವಾಗಿ ಸಾಧಿಸಲು ಸಾಧ್ಯವಿಲ್ಲ. ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನು-ಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿ ಆದರಿಂದ ಪ್ರಾಮಾಣ್ಯವನ್ನು ಸಮರ್ಥನೆ ಮಾಡ-ಬೇಕು. ಈ ಆನುಕೂಲ್ಯತ್ರಯಗಳಿಗೆ ಮೇಲಿನ ಮೂರು ಹೇತುಗಳು ಸಾಧಕವಾಗಿವೆ. ಈ ವಿಚಾರವು ಮುಂದಿನ ಗ್ರಂಥಭಾಗದಲ್ಲಿ ಸ್ಪಷ್ಟವಾಗುತ್ತದೆ. ವಕ್ತ್ರಾದ್ಯಾನುಕೂಲ್ಯಗಳು ಪ್ರಾಮಾಣ್ಯಕ್ಕೆ ನೇರವಾಗಿ ಸಾಧಕವಾಗದೇ ಪರಂಪರೆಯಿಂದ ಸಾಧಕವಾಗುತ್ತವೆಂಬ ವಿಚಾರವು 'ಅತಃ' ಎಂಬ ಪದದ ಅಧ್ಯಾಹಾರದಿಂದ ತಿಳಿಯುತ್ತದೆ. ಶ್ಲೋಕದಲ್ಲಿ ಯತಃ ಎಂಬ ಪದವಿರುವುದರಿಂದ ಅತಃ ಎಂಬ ಪದವು ಭಾಷ್ಯಕಾರರಿಗೆ ವಿವಕ್ಷಿತವಾಗಿದೆ.

ಯಾವುದೇ ಒಂದು ಗ್ರಂಥಕ್ಕೆ ಪ್ರಾಮಾಣ್ಯವು ಬರಬೇಕೆಂದರೆ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ ಮತ್ತು ಪ್ರಸಂಗಾನುಕೂಲ್ಯಗಳು ಇರಲೇಬೇಕು. ಈ ಮೂರು ಆನುಕೂಲ್ಯಗಳಿದ್ದಾಗ ಆಪ್ತವಾಕ್ಯತ್ವವು ಸಿದ್ಧವಾಗಿ ತನ್ಮೂಲಕ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮೂರು ಬಗೆಯ ಆನುಕೂಲ್ಯಗಳು ಇರುತ್ತವೆ. ಇದನ್ನು 'ಗುರುರ್ಗುರೂಣಾಂ' ಎಂಬ ಶ್ಲೋಕವೇ ಉಪಪಾದನೆ ಮಾಡಿದೆ. ಈ ಶ್ಲೋಕದಲ್ಲಿರುವ ಒಂದೊಂದು ಹೇತುಗಳೂ ಒಂದೊಂದು ಆನುಕೂಲ್ಯಕ್ಕೆ ಸಾಧಕ-ವಾಗಿವೆ.

'ಶಾಸ್ತ್ರಪ್ರಭವೋದಿತತ್ವ' ಎಂಬ ಹೇತುವು ವಕ್ತ್ರಾನುಕೂಲ್ಯವನ್ನು ಸಾಧಿಸುತ್ತಿದೆ – 'ಏತಚ್ಛಾಸ್ತ್ರಮ-ನುಕೂಲವಕ್ತೃಕಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನೋಕ್ತತ್ವಾತ್ ಭಾರತಾದಿವತ್'

ಗುರುಗುರೂದಿತ್ವವು ಶ್ರೋತ್ರಾನುಕೂಲ್ಯವನ್ನು ಸಾಧಿಸುತ್ತಿದೆ. 'ವಿಮತಮ್ ಅನುಕೂಲಶ್ರೋತೃಕಂ ಜಗದುಪದೇಷ್ಟೃಭ್ಯೋ ಅಜಾದಿಭ್ಯ ಉಪದಿಷ್ಟತ್ವಾತ್ ಮಹಾಭಾರತವತ್' ಎಂದು.

ಇದರಂತೆ ಶ್ರೋತೃಪ್ರಯೋಜನೋದ್ದೇಶ್ಯೇನ ಉದಿತತ್ವವು ಪ್ರಸಂಗಾನುಕೂಲ್ಯವನ್ನು ಸಾಧಿಸುತ್ತಿದೆ – 'ವಿಮತಮನುಕೂಲಪ್ರಸಂಗೋಪೇತಂ ಶ್ರೋತೃಪ್ರಯೋಜನೋದ್ದೇಶಶಬ್ದತ್ವಾತ್ ಮಹಾಭಾರತವತ್' ಎಂದು.

ಶ್ಲೋಕದಲ್ಲಿ ಮೂರು ಹೇತುಗಳನ್ನು ಮಾತ್ರ ಪ್ರಯೋಗ ಮಾಡಿದ್ದಾರೆ. ವಕ್ತ್ರಾದ್ಯಾನುಕೂಲ್ಯಗಳೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ಪ್ರಶ್ನೆ - 'ಏತಚ್ಛಾಸ್ತ್ರಂ ಮಾನಂ ಭವಿತುಮರ್ಹತಿ ಅನುಕೂಲವಕ್ತ್ರಾದಿಮತ್ತ್ವಾತ್ ಮಹಾಭಾರತವತ್' ಎಂಬುದಾಗಿ ವಕ್ತ್ರಾದ್ಯಾನುಕೂಲ್ಯಗಳಿಂದ ಪ್ರಾಮಾಣ್ಯವನ್ನು ನೇರವಾಗಿ ಸಾಧಿಸಬಹುದಲ್ಲವೇ?

ಉತ್ತರ – ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿ ತನ್ಮೂಲಕವಾಗಿಯೇ ಪ್ರಾಮಾಣ್ಯವನ್ನು ಸಮರ್ಥನೆ ಮಾಡಬೇಕು. ಆದ್ದರಿಂದಲೇ ಟೀಕಾರಾಯರು 'ಪರಮಸಾಧ್ಯನಿರ್ದೇಶಃ' ಎಂದು ಸಾಮಾನ್ಯವಾಗಿ ಹೇಳಿರುತ್ತಾರೆ.

'ಶಾಸ್ತ್ರಪ್ರಭವಾದಿವಿಶಿಷ್ಟೇನ ಉಕ್ತತ್ವ' ಇವೇ ಮೊದಲಾದ ಮೂರು ಹೇತುಗಳು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಇದೆ ಎಂದು ಒಪ್ಪೋಣ ಆದರೆ ವಕ್ತ್ರಾದ್ಯಾನುಕೂಲ್ಯಗಳಿವೆ ಎಂದು ಏಕೆ ಒಪ್ಪಬೇಕು? ಎಂಬುದಾಗಿ ಅನುಮಾನಕ್ಕೆ ಅಪ್ರಯೋಜಕತ್ವಾಶಂಕಾ ಮಾಡಿದರೆ 'ತಥಾ ಹಿ' ಇತ್ಯಾದಿ ಮುಂದಿನ ಗ್ರಂಥವು ಪರಿಹಾರ ಮಾಡುತ್ತಿದೆ. ಮೂರು ಆನುಕೂಲ್ಯಗಳ ಬಗ್ಗೆ ವಿವರಣೆಯನ್ನು ಮಾಡಿ ಈ ಮೂರೂ ಸಹ ಪಕ್ಷದಲ್ಲಿ ಇದ್ದೇ ಇರುತ್ತವೆ. ಇಲ್ಲವೆಂದು ಹೇಳಿದರೆ ಹೇತುವು ಕೂಡ ಇರದೇ ಇರಬೇಕಾದೀತು ಎಂಬುದಾಗಿ ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳುವ ಮೂಲಕ ಅನುಕೂಲತರ್ಕವನ್ನು ಹೇಳುತ್ತಿದ್ದಾರೆ.

## ಮಾನಂ ಎಂಬುದು ಪರಮಸಾಧ್ಯದ ನಿರ್ದೇಶ

ವಾಕ್ಯಾರ್ಥಚಂದ್ರಿಕಾ– ಅತ್ರ ಏತತ್‌ಶ್ಲೋಕೋಕ್ತಂ ಮಾನಮಿತ್ಯೇತತ್ ಏತಚ್ಛ್ಲೋಕೋಕ್ತಹೇತೂನ್ ಪ್ರತಿ ನ ಸಾಕ್ಷಾತ್ ಸಾಧ್ಯಮ್, ಅಪಿ ತು ಉತ್ತರಶ್ಲೋಕೋಕ್ತವಕ್ತ್ರಾದ್ಯಾನುಕೂಲ್ಯಾದೀನ್ಯೇವ ಸಾಕ್ಷಾತ್ ಸಾಧ್ಯಾನಿ, ಪರಮಸಾಧ್ಯನಿರ್ದೇಶತ್ವಾಚ್ಚ ಮಾನಮಿತ್ಯಸ್ಯ ನ ವೈಯರ್ಥ್ಯಮ್, ಉಪಪತ್ತಿಂ ತೂತ್ತರತ್ರ ವಕ್ಷ್ಯಾಮಃ ಇತ್ಯಭಿಪ್ರೇತ್ಯ ವಕ್ತ್ರಾದ್ಯಾನುಕೂಲ್ಯಾದೇರೇತ್ಯೈರ್ಹೇತುಹೇತುಮದ್ಭಾವಂ ಘಟಯಿತುಂ ವಕ್ತ್ರಾದ್ಯಾನುಕೂಲ್ಯಾದಿಸ್ವರೂಪವಿವೇಚನಾಯ ಪ್ರಸಕ್ತಿಮ್ ಆಹ – ಅತ್ರೇತ್ಯಾದಿನಾ ॥

ಈ ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ "ಮಾನಂ" ಎಂಬುದಕ್ಕೆ ಇದೇ ಶ್ಲೋಕದಲ್ಲಿ ಹೇಳಲ್ಪಟ್ಟ ಹೇತುಗಳಿಂದ ಸಾಕ್ಷಾತ್ ಸಾಧ್ಯವಾಗಿರುವುದಿಲ್ಲ. ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ

ವಕ್ತ್ರಾದ್ಯಾನುಕೂಲ್ಯಗಳೇ ಸಾಕ್ಷಾತ್ತಾದ ಸಾಧ್ಯಗಳಾಗಿವೆ. ಹಾಗಾದರೆ ಮಾನಮ್ ಎಂದು ಹೇಳಿದ್ದು ವ್ಯರ್ಥವಲ್ಲವೇ ಎಂದೂ ಪ್ರಶ್ನಿಸಬಾರದು. 'ಮಾನಂ' ಎಂಬುದು ಪರಮಸಾಧ್ಯವಾಗಿರುವುದರಿಂದ ಇದರ ನಿರ್ದೇಶನವು ಸಾರ್ಥಕವಾಗಿದೆ. ಇದಕ್ಕೆ ಕಾರಣವನ್ನು ಮುಂದೆ ಸಮರ್ಥಿಸುತ್ತೇವೆ. ಈ ಅಭಿಪ್ರಾಯದಿಂದ ವಕ್ತ್ರಾದ್ಯಾನುಕೂಲ್ಯಗಳಿಗೆ ಹಾಗೂ ಈ ಶ್ಲೋಕದಲ್ಲಿ ಹೇಳಿದ ಹೇತುಗಳಿಗೆ ಹೇತುಹೇತುಮದ್ಭಾವವನ್ನು ಸಮರ್ಥಿಸುವುದಕ್ಕಾಗಿ ಮೊದಲು ವಕ್ತ್ರಾದ್ಯಾನುಕೂಲ್ಯಗಳ ಸ್ವರೂಪವನ್ನು ವಿವೇಚನೆ ಮಾಡುತ್ತಿದ್ದಾರೆ. ಅದಕ್ಕೆ ಪ್ರಸಕ್ತಿಯನ್ನು "ಅತ್ರ" ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ.

## ವಕ್ತ್ರಾನುಕೂಲ್ಯಸಮರ್ಥನೆ

**ಶ್ರೀಮನ್ನ್ಯಾಯಸುಧಾ– ತತ್ರ 'ಗುರೂಣಾಂ ಗುರುಃ' ಇತಿ ವಕ್ತುರ್ಬಾದರಾಯಣಸ್ಯ ವಿವಕ್ಷಿತಾರ್ಥತತ್ತ್ವಜ್ಞಾನಸಾಧನೇ ಹೇತುಃ । ಯೋ ಹಿ ಯಸ್ಯ ತತ್ತ್ವೋಪದೇಷ್ಟಾ ಸ ತತೋಽಧಿಕತತ್ತ್ವಜ್ಞಾನವಾನುಪಲಬ್ಧಃ । ಅಯಂ ಚ ಸರ್ವಜ್ಞಕಲ್ಪಾನಾಂ ಬ್ರಹ್ಮಾದೀನಾಂ ತತ್ತ್ವೋಪದೇಷ್ಟಾ 'ಬ್ರಹ್ಮರುದ್ರಾದಿದೇವೇಷು' ಇತ್ಯಾದ್ಯಾಗಮಾದವಗತಃ । ಅತಃ ಸರ್ವಜ್ಞೋ ಭವಿತುಮರ್ಹತೀತಿ ॥**

**'ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ' ಇತ್ಯನೇನಾಪಿ ತತ್ತ್ವಜ್ಞಾನಂ ಕರಣಪಾಟವಂ ಚ ಸಾಧ್ಯತೇ । ಯೋ ಹಿ ಯಾವದರ್ಥಪ್ರತಿಪಾದಕಸ್ಯಾಗಮಸ್ಯ ಪ್ರಭವಃ ಸ ತಾವಂತಮರ್ಥಂ ತತ್ತ್ವತೋ ಜಾನನ್ನವಗತಃ ।**

**ಅಯಂ ಚಾಶೇಷಾರ್ಥಪ್ರತಿಪಾದಕಸ್ಯಾಗಮಸ್ಯ ಪ್ರಭವಃ, 'ಅನುಕ್ತಂ ಪಂಚಭಿರ್ವೇದೈಃ', 'ಉತ್ಸನ್ನಾನ್ ಭಗವಾನ್ ವೇದಾನ್' ಇತ್ಯಾದಿ ವಚನಾದವಗತಃ । ತತೋ ಭವಿತವ್ಯಮನೇನ ಸರ್ವಜ್ಞೇನ । ಯಶ್ಚ ಬಹೋರಾಗಮಸ್ಯ ಪ್ರಭವಃ ಸೋಽಸತಿ ನಿಮಿತ್ತಾಂತರೇ ಪಟುಕರಣೋ ದೃಷ್ಟಃ । ಅಯಂ ಚಾಪರಸ್ಯ ವೇದಾದೇಃ ಪ್ರಭವಃ ಕಥಮಪಟುಕರಣೋ ಭವೇದಿತಿ ॥**

**'ತದುದಿತಮ್' ಇತಿ ವಚನೇನ ಕಾರ್ಯೇಣ ವಕ್ತುರ್ವಿವಕ್ಷಾ ಕಾರಣಭೂತೋಪಪಾದಿತಾ ॥**

'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ 'ಗುರೂಣಾಂ ಗುರುಃ' ಎಂದು ಹೇಳಿದ್ದಾರೆ. ಜಗದ್ಗುರುಗಳಾದ ಬ್ರಹ್ಮಾದಿ ದೇವತೆಗಳಿಗೂ ಕೂಡ ಶ್ರೀವೇದವ್ಯಾಸದೇವರು ಗುರುಗಳಾಗಿದ್ದಾರೆ ಎಂಬುದು ಇದರ ಅರ್ಥ. ಈ ವಿಶೇಷಣವು ಉಪದೇಶಕರಾದ ಶ್ರೀವೇದವ್ಯಾಸದೇವರಲ್ಲಿ ವಿವಕ್ಷಿತಾರ್ಥತತ್ವಜ್ಞಾನವನ್ನು ಸಾಧನೆ ಮಾಡಲು ಹೇತುವಾಗಿದೆ. 'ಯಾರು ಯಾರಿಗೆ ತತ್ವವನ್ನು ಉಪದೇಶ ಮಾಡುತ್ತಾರೋ ಅವರು ಅವರಿಗಿಂತ ಅಧಿಕವಾದ ತತ್ವಜ್ಞಾನವನ್ನು ಹೊಂದಿರುತ್ತಾರೆ' ಎಂಬುದು ಲೋಕಸಿದ್ಧವಾಗಿದೆ. ಸರ್ವಜ್ಞಕಲ್ಪರಾದ ಚತುರ್ಮುಖಬ್ರಹ್ಮ ಮೊದಲಾದ ದೇವತೆಗಳಿಗೆ ಶ್ರೀವೇದವ್ಯಾಸದೇವರು ತತ್ವೋಪದೇಶಕರಾಗಿರುವುದರಿಂದ ಸರ್ವಜ್ಞರಾಗಿದ್ದಾರೆಂದು ಸಿದ್ಧವಾಗುತ್ತದೆ. 'ಬ್ರಹ್ಮರುದ್ರಾದಿದೇವೇಷು' ಇತ್ಯಾದಿ ಆಗಮಪ್ರಮಾಣದಿಂದ ಶ್ರೀವೇದವ್ಯಾಸದೇವರು ಬ್ರಹ್ಮಾದಿದೇವತೆಗಳಿಗೆ ಗುರುಗಳಾಗಿದ್ದಾರೆಂದು ತಿಳಿಯುತ್ತದೆ.

'ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ' 'ವೇದಭಾರತಾದಿ ಮಹಾಶಾಸ್ತ್ರಗಳ ಪ್ರಥಮೋಪದೇಶಕರೂ ಹಾಗೂ ನಿರ್ಮಾತೃಗಳೂ' ಎಂಬುದರಿಂದ ತತ್ವಜ್ಞಾನವು ಹಾಗೂ ಕರಣಪಾಟವವು ಶ್ರೀವೇದವ್ಯಾಸದೇವರಿಗೆ ಇದೆ ಎಂದು ಸಾಧಿಸಲ್ಪಡುತ್ತದೆ. ಅದು ಹೀಗೆ – ಯಾರು ಎಷ್ಟು ವಿಷಯಗಳನ್ನು ತಿಳಿಸುವ ಶಾಸ್ತ್ರಗಳನ್ನು ಪ್ರವರ್ತಿಸುವನೋ ಉಪದೇಶಿಸುವನೋ ಅವನು ಅಷ್ಟು ಅರ್ಥವನ್ನು ಯಥಾರ್ಥವಾಗಿ ತಿಳಿದಿರುತ್ತಾನೆ ಎಂಬುದು ಲೋಕಸಿದ್ಧವಾದ ನಿಯಮ. ಶ್ರೀವೇದವ್ಯಾಸದೇವರು ಅಶೇಷಾರ್ಥಪ್ರತಿಪಾದಕವಾದ ಆಗಮಗಳಿಗೆ ಕಾರಣರಾಗಿದ್ದಾರೆ. ಈ ವಿಷಯವು 'ಅನುಕ್ತಂ ಪಂಚಭಿರ್ವೇದ್ಯೈಃ' 'ಉತ್ಸನ್ನಾನ್ ಭಗವಾನ್ ವೇದಾನ್' ಇವೇ ಮೊದಲಾದ ಭಾಷ್ಯದಲ್ಲಿ ಉದಾಹರಿಸಿದ ಪುರಾಣವಚನಗಳಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಶ್ರೀವೇದವ್ಯಾಸದೇವರು ಸರ್ವಜ್ಞರೇ ಆಗಿರುತ್ತಾರೆ.

ಯಾರು ಬಹಳವಾದ ಆಗಮಗಳ ಪ್ರಥಮಪ್ರವರ್ತಕನಾಗಿರುವನೋ ಹಾಗೂ ಉತ್ಪಾದಕನಾಗಿರುವನೋ ಅವನು ಯಾವುದೇ ಬಾಧಕಗಳು ಇಲ್ಲದಿದ್ದರೆ ಇಂದ್ರಿಯಪಾಟವ -ವುಳ್ಳವನಾಗಿರುತ್ತಾನೆ ಎಂಬುದು ಲೋಕಸಿದ್ಧವಾದ ನಿಯಮ. ಈ ಬಾದರಾಯಣರು ಅಪಾರವಾದ ವೇದಾದಿಶಾಸ್ತ್ರಗಳಿಗೆ ಪ್ರಥಮಪ್ರವರ್ತಕರಾಗಿದ್ದಾರೆ; ಆದ್ದರಿಂದ ಇವರಿಗೆ ಇಂದ್ರಿಯಪಾಟವವಿಲ್ಲ ಎಂದು ಹೇಳುವುದು ಹೇಗೆ ಸಮಂಜಸವಾಗುತ್ತದೆ?

'ತದುದಿತಂ = ಆ ವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದ್ದೆ' ಎಂಬ ಈ ಮಾತು 'ಉಪದೇಶಮಾಡಿರುವುದರಿಂದ ಹೇಳಬೇಕೆಂಬ ಇಚ್ಛೆಯು ಶ್ರೀವೇದವ್ಯಾಸದೇವರಿಗೆ ಇದೆ' ಎಂಬುದನ್ನು (ಕಾರ್ಯದಿಂದ ಕಾರಣವನ್ನು ಊಹಿಸಬೇಕೆಂಬುದನ್ನು) ಉಪಪಾದನೆ ಮಾಡಿದಂತಾಯಿತು.

## ಶ್ರೀವೇದವ್ಯಾಸದೇವರು ಸರ್ವಜ್ಞರಾಗಿದ್ದಾರೆನ್ನಲು ಆಗಮವಾಕ್ಯಗಳು

**ಪರಿಮಳ– ಉಪಪಾದಯತಿ – ಇತ್ಯಾಗಮಾದಿತಿ ॥**

**'ಬ್ರಹ್ಮರುದ್ರಾದಿದೇವೇಷು ಮನುಷ್ಯಪಿತೃಪಕ್ಷಿಷು ।**

**ಜ್ಞಾನಂ ಸಂಸ್ಥಾಪ್ಯ ಭಗವಾನ್ ...'**

**ಇತಿ ಭಾಷ್ಯೋಕ್ತಾಗಮಾದಿತ್ಯರ್ಥಃ । 'ಅನುಕ್ತಂ ಪಂಚಭಿರ್ವೇದೈರ್ನ ವಸ್ತ್ವಸ್ತಿ ಕುತಶ್ಚನ' ಇತ್ಯೇಕಂ ವಾಕ್ಯಮ್ ।'ಉತ್ಸನ್ನಾನ್ ಭಗವಾನ್ ವೇದಾನುಜ್ಜಹಾರ ಹರಿಃ ಸ್ವಯಮ್' ಇತಿ ಅಪರಮ್ ।**

ವಕ್ತ್ರಾನುಕೂಲ್ಯದ ಉಪಪಾದನೆಗಾಗಿ ಆಗಮಪ್ರಮಾಣವನ್ನು ಹೇಳಿರುತ್ತಾರೆ. ಬ್ರಹ್ಮ-ರುದ್ರಾದಿ ಇತ್ಯಾದಿ ಆಗಮವಾಕ್ಯವು ಹೀಗಿದೆ –

'ಬ್ರಹ್ಮರುದ್ರಾದಿದೇವೇಷು ಮನುಷ್ಯಪಿತೃಪಕ್ಷಿಷು ।
ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ ಪುರುಷೋತ್ತಮಃ'

ಬ್ರಹ್ಮರುದ್ರ ಮೊದಲಾದ ದೇವತೆಗಳಲ್ಲಿ ಮನುಷ್ಯರಲ್ಲಿ ಪಿತೃಗಳಲ್ಲಿ ಪಕ್ಷಿಗಳಲ್ಲಿ ತತ್ವ-ಜ್ಞಾನವನ್ನು ಸ್ಥಾಪನೆ ಮಾಡಿ ಷಡ್ಗುಣೈಶ್ವರ್ಯಸಂಪನ್ನನಾದ ಸರ್ವೋತ್ತಮನಾದ ಮಹಾವಿಷ್ಣುವು ಕ್ರೀಡಿಸುತ್ತಾನೆ.

ಹೀಗೆ ಭಾಷ್ಯದಲ್ಲಿ ಉದಾಹರಿಸಿದ ಆಗಮವಾಕ್ಯದಿಂದ ಬ್ರಹ್ಮಾದಿದೇವತೆಗಳಿಗೆ ಪರ-ಮಾತ್ಮನೇ ಉಪದೇಶಕನಾಗಿದ್ದಾನೆಂದು ತಿಳಿಯುತ್ತದೆ. ಮತ್ತು 'ಅನುಕ್ತಂ ಪಂಚಭಿರ್ವೇದೈರ್ನ ವಸ್ತ್ವಸ್ತಿ ಕುತಶ್ಚನ' ಎಂಬ ಮತ್ತೊಂದು ವಾಕ್ಯದಲ್ಲಿ 'ಐದು ವೇದಗಳಲ್ಲಿ ಹೇಳದೇ ಇರುವ ವಿಷಯವೇ ಇಲ್ಲ' ಎಂಬ ಮಾತಿನಿಂದ ಶ್ರೀವೇದವ್ಯಾಸದೇವರು ಅಶೇಷಾರ್ಥಪ್ರತಿಪಾದಕವಾದ ವೇದಗಳಿಗೆ ಉಪದೇಶಕರಾಗಿದ್ದಾರೆಂದು ತಿಳಿಯುತ್ತದೆ. ಇದೇ ವಿಷಯದಲ್ಲಿ ಮತ್ತೊಂದು ವಾಕ್ಯ ಹೀಗಿದೆ – 'ಉತ್ಸನ್ನಾನ್ ಭಗವಾನ್ ವೇದಾನುಜ್ಜಹಾರ ಹರಿಃ ಸ್ವಯಮ್' 'ಮಿಶ್ರಿತವಾದ ವೇದಗಳನ್ನು ಸ್ವತಃ ಶ್ರೀಹರಿಯೇ ವಿಭಾಗ ಮಾಡಿದನು'. ಈ ಆಗಮವಾಕ್ಯದಿಂದಲೂ ವೇದ-ವ್ಯಾಸದೇವರು ಸರ್ವಜ್ಞರೆಂದು ತಿಳಿಯುತ್ತದೆ.

## ವಿವಕ್ಷಿತಾರ್ಥತತ್ವಜ್ಞಾನಸಾಧನಾನುಮಾನಕ್ಕೆ ಸಾಮಾನ್ಯಮುಖವ್ಯಾಪ್ತಿ

ವಾಕ್ಯಾರ್ಥಚಂದ್ರಿಕಾ – 'ಗುರುರ್ಗುರೂಣಾಮ್' ಇತ್ಯಾದ್ಯುಕ್ತಹೇತುತ್ರಯಸ್ಯ ಕ್ರಮೇಣಾನುಕೂಲ್ಯತ್ರಯೇ ಹೇತುತ್ವಮಿತಿ ಭ್ರಾಂತಿಂ ವಾರಯಿತುಂ ಯಥಾಯೋಗ್ಯಂ ಹೇತುಸಾಧ್ಯೇ ವಿವೇಚಯತಿ – ತತ್ರೇತಿ ॥ ಸಾರ್ವಜ್ಞಮುಖೇನ ವಿವಕ್ಷಿತಾರ್ಥತತ್ತ್ವಜ್ಞಾನಸಿದ್ಧೇರತ್ರಾಭಿಪ್ರೇತತ್ವಾತ್ 'ಬಾದರಾಯಣಃ ಸರ್ವಜ್ಞಃ ಸರ್ವಜ್ಞಕಲ್ಪೋಪದೇಷ್ಟೃತ್ವಾತ್' ಇತಿ ವಿವಕ್ಷಿತಾನುಮಾನೇ ಹೇತುಸಾಧ್ಯಯೋರ್ಯಥಾಸ್ಥಿತಯೋರ್ವ್ಯಾಪ್ತೇರ್ಲೋಕೇ ದೃಷ್ಟಾಂತಾಭಾವೇನ ದುರ್ಗ್ರಹತ್ವಾತ್ ಉಪದೇಶ್ಯಾಧಿಕತತ್ತ್ವಜ್ಞಾನರೂಪಸಾಮಾನ್ಯಮುಖೇನ ವ್ಯಾಪ್ತಿರನುಸಂಧೇಯಾ ಇತ್ಯಭಿಪ್ರಾಯೇಣ ಆಹ – ಯೋ ಹೀತಿ ॥ ಹೇತೋಃ ಪಕ್ಷಧರ್ಮತಾಮುಪಪಾದಯತಿ – ಅಯಂ ಚೇತಿ ॥

'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕದಿಂದ ಹೇಳಲ್ಪಟ್ಟ ಮೂರು ಹೇತುಗಳು ಕ್ರಮವಾಗಿ ಮೂರು ಆನುಕೂಲ್ಯಗಳಿಗೆ ಹೇತುವಾಗಿವೆ ಎಂಬ ಭ್ರಾಂತಿ ಬರುತ್ತದೆ. ಅದರ ಪರಿಹಾರಕ್ಕಾಗಿ ಯಥಾಯೋಗ್ಯವಾಗಿ ಹೇತುಸಾಧ್ಯಗಳನ್ನು ವಿವೇಚನೆ ಮಾಡಬೇಕು ಎಂಬುದನ್ನು ತಿಳಿಸಲು 'ತತ್ರ' ಇತ್ಯಾದಿ ಗ್ರಂಥವು ಹೊರಟಿದೆ.

ಸಾರ್ವಜ್ಞ್ಯದಿಂದ ವಿವಕ್ಷಿತಾರ್ಥತತ್ವಜ್ಞಾನವು ಸಿದ್ಧವಾಗುತ್ತದೆ' ಈ ಅಭಿಪ್ರಾಯದಿಂದ ಅನುಮಾನಪ್ರಯೋಗವನ್ನು ಹೀಗೆ ಮಾಡಿದ್ದಾರೆ. – 'ಬಾದರಾಯಣಃ ಸರ್ವಜ್ಞಃ ಸರ್ವಜ್ಞಕಲ್ಪೋಪದೇಷ್ಟೃತ್ವಾತ್' 'ಸರ್ವಜ್ಞಕಲ್ಪರಾದ ಬ್ರಹ್ಮಾದಿ ದೇವತೆಗಳಿಗೆ ಉಪದೇಶಕರಾಗಿರುವ ಕಾರಣ ಶ್ರೀವೇದವ್ಯಾಸದೇವರು ಸರ್ವಜ್ಞರಾಗಿದ್ದಾರೆ' ಎಂದು. 'ಯಾರು ಸರ್ವಜ್ಞಕಲ್ಪರಿಗೆ ಉಪದೇಶಕರಾಗಿದ್ದಾರೆ ಅವರು ಸರ್ವಜ್ಞರಾಗಿದ್ದಾರೆ' ಎಂಬ ವ್ಯಾಪ್ತಿಗೆ ಲೋಕದಲ್ಲಿ ಯಾವುದೇ ದೃಷ್ಟಾಂತವು ದೊರೆಯುವುದಿಲ್ಲ. ಆದ್ದರಿಂದ ಸಾಮಾನ್ಯಮುಖವ್ಯಾಪ್ತಿಯನ್ನು ತಿಳಿಯಬೇಕು. 'ಯಾರು ಯಾರಿಗೆ ಉಪದೇಶ ಮಾಡುತ್ತಾರೋ ಉಪದೇಶವನ್ನು ಪಡೆಯುವ ವ್ಯಕ್ತಿಗಳಿಂದ ಆ ಉಪದೇಶಕರು ಹೆಚ್ಚಿನ ಜ್ಞಾನವನ್ನು ಹೊಂದಿರುತ್ತಾರೆ' ಎಂಬುದು ಈ ಸಾಮಾನ್ಯಮುಖವ್ಯಾಪ್ತಿಯಾಗಿದೆ. 'ಸರ್ವಜ್ಞಕಲ್ಪೋಪದೇಷ್ಟೃತ್ವ' ಎಂಬ ಹೇತುವಿಗೆ ಪಕ್ಷಧರ್ಮತ್ವದ ಉಪದೇಶಕ್ಕಾಗಿ 'ಅಯಂ ಚ' ಇತ್ಯಾದಿ ಗ್ರಂಥವು ಹೊರಟಿದೆ.

## ಸಾಮಾನ್ಯಮುಖವ್ಯಾಪ್ತಿಯ ವಿವರಣೆ

**ವಾಕ್ಯಾರ್ಥಚಂದ್ರಿಕಾ– 'ಗುರೂಣಾಮ್' ಇತ್ಯಸ್ಯ ಪೂರ್ವೋಕ್ತಮರ್ಥದ್ವಯಮಭಿಪ್ರೇತ್ಯಾಹ – ಗುರೂಣಾಮಿತಿ ॥ 'ಬಾದರಾಯಣಃ ಸರ್ವಜ್ಞೋಽಶೇಷಾರ್ಥಪ್ರತಿಪಾದಕಾಗಮಪ್ರಭವತ್ವಾತ್' ಇತಿ ವಿವಕ್ಷಿತಾನುಮಾನೇಽಪಿ ಸಾಮಾನ್ಯವ್ಯಾಪ್ತಿಮೇವಾಹ – ಯೋ ಹೀತಿ ॥ ವೇದಾದ್ಯಾಗಮಸ್ಯ ಅಶೇಷಾರ್ಥಪ್ರತಿಪಾದಕತ್ವೇ, ತಸ್ಯ ಚ ತತ್ಪ್ರಭವತ್ವೇ, ಕ್ರಮೇಣ ಪ್ರಮಾಣಂ ವದನ್ ಅಸ್ಯಾಪಿ ಪಕ್ಷಧರ್ಮತಾಮ್ ಆಹ – ಅಯಂ ಚೇತಿ ॥**

'ಗುರೂಣಾಂ' ಎಂಬುದಕ್ಕೆ ಹಿಂದೆ ಹೇಳಿದ ಎರಡು ಅರ್ಥಗಳ ವಿವಕ್ಷೆಯಿಂದ ಗುರೂಣಾಂ ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. 'ಬಾದರಾಯಣಃ ಸರ್ವಜ್ಞಃ, ಅಶೇಷಾರ್ಥಪ್ರತಿಪಾದಕಾಗಮಪ್ರಭವತ್ವಾತ್' ಅಶೇಷಾರ್ಥಪ್ರತಿಪಾದಕವಾದ ಆಗಮಪ್ರವರ್ತಕರಾದ್ದರಿಂದ ಶ್ರೀವೇದವ್ಯಾಸದೇವರು ಸರ್ವಜ್ಞರಾಗಿದ್ದಾರೆ ಎಂಬ ವಿವಕ್ಷಿತಾನುಮಾನದಲ್ಲಿ ಸಾಮಾನ್ಯಮುಖವ್ಯಾಪ್ತಿಯನ್ನು 'ಯೋ ಹಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವೇದಾದ್ಯಾಗಮವು ಅಶೇಷಾರ್ಥಪ್ರತಿಪಾದಕವಾಗಿದೆ ಎಂಬ ವಿಷಯದಲ್ಲಿ, ಮತ್ತು ಆ ವೇದಾದ್ಯಾಗಮವು ಶ್ರೀವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದೆ ಎಂಬ ವಿಷಯದಲ್ಲಿ ಕ್ರಮವಾಗಿ ಪ್ರಮಾಣಗಳನ್ನು ಹೇಳುತ್ತಾ 'ಅಶೇಷಾರ್ಥಾಗಮಪ್ರಭವತ್ವ' ಎಂಬ ಹೇತುವಿಗೆ ಪಕ್ಷಧರ್ಮತ್ವವನ್ನು ಸಮರ್ಥಿಸುವುದಕ್ಕಾಗಿ 'ಅಯಂ ಚ' ಇತ್ಯಾದಿ ಗ್ರಂಥವು ಹೊರಟಿದೆ.

## ಅಸತಿ ನಿಮಿತ್ತಾಂತರೇ ಎಂಬುದಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– ಆದಿಪದೇನ –

.... .......... ವ್ಯಾಸೋ ಭೂತ್ವಾ ಚ ತೇನ ಚ ।
ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್ ॥

ಇತ್ಯಾದೇಃ ಸಂಗ್ರಹಃ ॥ 'ಬಾದರಾಯಣಃ ಪಟುಕರಣೋಽಪಾರವೇದಾದಿಪ್ರಭವತ್ವಾತ್' ಇತಿ ವಿವಕ್ಷಿತಾನುಮಾನೇ, ವಿಶೇಷೇ ವ್ಯಭಿಚಾರಶಂಕಾಽನವಕಾಶಾತ್ ಪಕ್ಷಧರ್ಮಕಥನಾವಸರೇ ವಿಶೇಷಣಮನುಪಾದಾಯ, ಬಹ್ವಾಗಮಪ್ರಭವಸ್ಯಾಪಿ ದೋಷವಶಾತ್ ಅಪಟುಕರಣತ್ವದರ್ಶನಾತ್ ಸಾಮಾನ್ಯವ್ಯಾಪ್ತೌ ತದವಕಾಶಾತ್ ತದ್ವ್ಯಾವರ್ತಕವಿಶೇಷಣಪ್ರಕ್ಷೇಪೇಣ ಸಾಮಾನ್ಯವ್ಯಾಪ್ತಿಮಾಹ – ಯಶ್ಚೇತಿ ॥ 'ಬಾದರಾಯಣೋ ವಿವಕ್ಷಾವಾನ್ ವಚನವತ್ತ್ವಾತ್' ಇತಿ ವಿವಕ್ಷಿತಾನುಮಾನೇ ವ್ಯಾಪ್ತಿಂ ಸೂಚಯಿತುಂ, ಕಾರ್ಯಕಾರಣಯೋರ್ವ್ಯಾಪ್ಯವ್ಯಾಪಕಭಾವಸ್ಯ ಸುಪ್ರಸಿದ್ಧತ್ವಾತ್ ಅನಯೋಃ ಕಾರ್ಯಕಾರಣಭಾವಂ ಸೂಚಯತಿ – ತದಿತಿ ॥

ಆದಿಪದದಿಂದ

.... .......... ವ್ಯಾಸೋ ಭೂತ್ವಾ ಚ ತೇನ ಚ ।
ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್ ॥

ಇತ್ಯಾದಿ ಪ್ರಮಾಣಗಳನ್ನು ಸಂಗ್ರಹ ಮಾಡಬೇಕು. 'ಬಾದರಾಯಣಃ ಪಟುಕರಣಃ ಅಪಾರ-ವೇದಾದಿಪ್ರಭವತ್ವಾತ್' 'ಅಪಾರವಾದ ವೇದೋಪದೇಶಕರಾದ್ದರಿಂದ ಶ್ರೀವೇದವ್ಯಾಸದೇವರು ಇಂದ್ರಿಯಪಾಟವವನ್ನು ಹೊಂದಿದ್ದಾರೆ'ಎಂಬುದು ವಿವಕ್ಷಿತವಾದ ಅನುಮಾನ. ಈ ಅನುಮಾನದಲ್ಲಿ 'ಯತ್ರ ಅಪಾರವೇದಾದಿಪ್ರಭವತ್ವಂ ತತ್ರ ಪಟುಕರಣತ್ವಂ' ಎಂಬುದು ವಿಶೇಷವ್ಯಾಪ್ತಿ. ಈ ವ್ಯಾಪ್ತಿಗೆ ವ್ಯಭಿಚಾರಶಂಕೆಗೆ ಅವಕಾಶವೇ ಇರುವುದಿಲ್ಲ. ಆದ್ದರಿಂದ ಹೇತುವಿಗೆ ಪಕ್ಷಧರ್ಮತ್ವವನ್ನು ತೋರಿಸುವ ಸಂದರ್ಭದಲ್ಲಿ ವಿಶೇಷಣವನ್ನು ಟೀಕಾರಾಯರು ಹೇಳಿರುವುದಿಲ್ಲ. ಆದರೆ ಅನೇಕ ಆಗಮಗಳಿಗೆ ಕಾರಣರಾಗಿದ್ದರೂ ಕೂಡ ದೋಷವಿದ್ದಾಗ ಪಟುಕರಣತ್ವವು ಇರುವುದಿಲ್ಲ. ಆದ್ದರಿಂದ ಸಾಮಾನ್ಯ-ಮುಖವ್ಯಾಪ್ತಿಗೆ ವ್ಯಭಿಚಾರವು ಪ್ರಾಪ್ತವಾಗುತ್ತದೆ. ಈ ವ್ಯಭಿಚಾರಪರಿಹಾರಕವಾಗಿ 'ಅಸತಿ ನಿಮಿತ್ತಾಂತರೇ' ಎಂಬುದಾಗಿ ವಿಶೇಷಣವನ್ನು ನೀಡುತ್ತಿದ್ದಾರೆ. ಈ ಎಲ್ಲಾ ವಿವಕ್ಷೆಯಿಂದ 'ಯಶ್ಚ' ಇತ್ಯಾದಿ ಗ್ರಂಥವು ಹೊರಟಿದೆ.

'ಬಾದರಾಯಣಃ ವಿವಕ್ಷಾವಾನ್ ವಚನವತ್ವಾತ್' ಎಂಬ ವಿವಕ್ಷಿತ ಅನುಮಾನದಲ್ಲಿ ವ್ಯಾಪ್ತಿ ಸೂಚನೆ ಮಾಡುವುದಕ್ಕಾಗಿ ಕಾರ್ಯಕಾರಣಗಳಿಗೆ ವ್ಯಾಪ್ಯವ್ಯಾಪಕವು ಪ್ರಸಿದ್ಧವಾಗಿರುವುದರಿಂದ ಪ್ರಕೃತ ಕಾರ್ಯಕಾರಣಭಾವವನ್ನು 'ತತ್' ಇತ್ಯಾದಿಯಾಗಿ ಸೂಚನೆ ಮಾಡಿದ್ದಾರೆ.

### ಸುಧಾಪರಿಮಳಸಾರ

'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ 'ಗುರೂಣಾಂ ಗುರುಃ' ಎಂಬುದರಿಂದ 'ಗುರೂಣಾಂ ಶಾಸ್ತ್ರಾಣಾಂ ಪ್ರಭವಃ' ಎಂಬುದರಿಂದಲೂ ವಕ್ತ್ರಾನುಕೂಲ್ಯವನ್ನು ಸಮರ್ಥನೆ ಮಾಡುತ್ತಿದ್ದಾರೆ. 'ಗುರೂಣಾಂ ಗುರುಃ' ಎಂದು ಹೇಳಿದಾಗ ಬ್ರಹ್ಮಾದಿದೇವತೆಗಳಿಗಿಂತ ಹೆಚ್ಚಿನ ತತ್ತ್ವಜ್ಞಾನವನ್ನು ವೇದವ್ಯಾಸದೇವರು ಪಡೆದಿದ್ದಾರೆಂದು ತಿಳಿಯುತ್ತದೆ. ಇದರಿಂದ ಸರ್ವಜ್ಞತ್ವವೇ ಸಾಧಿತವಾಗುತ್ತದೆ. 'ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ' ಎಂಬುದರಿಂದ ಸಮಸ್ತ ಅರ್ಥಗಳನ್ನು ಪ್ರತಿಪಾದನೆ ಮಾಡುವ ವೇದಶಾಸ್ತ್ರದ ಉಪದೇಶಕರಾದ್ದರಿಂದ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಕರಣಪಾಟವವೂ ಕೂಡ ಸಿದ್ಧವಾಗುತ್ತದೆ. ಮಹಾಭಾರತಾದಿ ಸಮಸ್ತಪೌರುಷೇಯಗ್ರಂಥಗಳನ್ನು ನಿರ್ಮಾಣಮಾಡಿರುವುದರಿಂದಲೂ ಕೂಡ ವಿವಕ್ಷಿತಾರ್ಥತತ್ತ್ವಜ್ಞಾನ, ಕರಣಪಾಟವ ಹಾಗೂ ಉಪದೇಶಮಾಡುವ ಇಚ್ಛೆ ಇವೆಲ್ಲವೂ ಕೂಡ ಸಿದ್ಧವಾಗುತ್ತವೆ. ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಕ್ತ್ರಾನುಕೂಲ್ಯವಿದೆ ಎಂದು ತಿಳಿಯತಕ್ಕದ್ದು.

## ಇಲ್ಲಿಯ ತನಕ ಸಾಧಿಸಿದ ಅನುಮಾನಗಳು

**ಶ್ರೀಮನ್ನ್ಯಾಯಸುಧಾ – 'ಗುರೂಣಾಮ್' ಇತಿ ಶ್ರೋತೃಣಾಂ ತತ್ತ್ವಜ್ಞಾನಯೋಗ್ಯತೋಪಪಾದನೇ ಹೇತುಃ । ನ ಹಿ ಸ್ವಯಂ ತತ್ತ್ವಜ್ಞಾನಾಯೋಗ್ಯಃ ಪರೇಷಾಂ ತತ್ತ್ವೋಪದೇಷ್ಟಾ ದೃಷ್ಟಃ ।**

**'ಅಜಾದಿಭ್ಯಃ' ಇತಿ ವಕ್ತೃಪ್ರೇಮಾಸ್ಪದತ್ವೋಪಪಾದನಮ್ । ಬ್ರಹ್ಮಾದಯೋ ಹಿ ಪರಮೇಶ್ವರಪ್ರೇಮವಿಷಯಾಃ ಸುಪ್ರಸಿದ್ಧಾಃ । 'ತದರ್ಥತಃ' ಇತಿ ಪ್ರಸಂಗಾನುಕೂಲ್ಯೋಪಪಾದನಮ್ । ಅತ್ರ ಸರ್ವತ್ರಾಕಾರಣಕಾರ್ಯೋತ್ಪತ್ತ್ಯಾದಿಪ್ರಸಂಗೋ ವಿಪಕ್ಷೇ ಬಾಧಕಸ್ತರ್ಕ ಉನ್ನೇಯಃ ।**

'ಗುರೂಣಾಂ' 'ಚತುರ್ಮುಖಬ್ರಹ್ಮದೇವರೇ ಮೊದಲಾದ ಗುರುಗಳಿಗೆ ಉಪದೇಶಕರಾಗಿದ್ದಾರೆ' ಎಂಬ ವಚನವು ಶ್ರೋತೃಗಳಿಗೆ ತತ್ವಜ್ಞಾನವನ್ನು ಪಡೆಯುವ ಅರ್ಹತೆ ಇದೆ ಎಂಬುದಕ್ಕೆ ಉಪಪಾದಕವಾಗಿದೆ. ಯಾವ ವ್ಯಕ್ತಿಯು ಸ್ವತಃ ತಾನೇ ತತ್ವಜ್ಞಾನಕ್ಕೆ ಯೋಗ್ಯನಾಗಿಲ್ಲವೋ ಅವನು ಮತ್ತೊಬ್ಬರಿಗೆ ತತ್ತ್ವೋಪದೇಶಕನಾಗಲು ಸಾಧ್ಯವಿಲ್ಲ.

'ಅಜಾದಿಭ್ಯಃ' ಎಂಬುದಕ್ಕೆ ಚತುರ್ಮುಖಬ್ರಹ್ಮ ಮೊದಲಾದವರಿಗೆ ಎಂದರ್ಥ. ವಕ್ತೃವಾದ ಶ್ರೀವೇದವ್ಯಾಸದೇವರ ಪರಮಪ್ರೀತಿಗೆ ಇವರು ಪಾತ್ರರಾಗಿದ್ದಾರೆ ಎಂಬುದು ಈ ವಿಶೇಷಣದಿಂದ ತಿಳಿಯುತ್ತದೆ. ಚತುರ್ಮುಖಬ್ರಹ್ಮದೇವರೇ ಮೊದಲಾದವರು ಪರಮಾತ್ಮನಿಗೆ ಅತ್ಯಂತ ಪ್ರೀತಿಪಾತ್ರರಾಗಿದ್ದಾರೆ ಎಂಬ ವಿಷಯವು ಬಹಳ ಪ್ರಸಿದ್ಧವೇ ಆಗಿದೆ.

'ತದರ್ಥತಃ' – ಚತುರ್ಮುಖಬ್ರಹ್ಮದೇವರೇ ಮೊದಲಾದ ಮುಮುಕ್ಷುಗಳಿಗೆ ಅಪೇಕ್ಷಿತವಾದ ಮೋಕ್ಷವೆಂಬ ಪ್ರಯೋಜನಕ್ಕಾಗಿ' ಎಂಬ ವಚನವು ಪ್ರಸಂಗಾನುಕೂಲ್ಯವನ್ನು ತಿಳಿಸುತ್ತಿದೆ.

'ಮೇಲೆ ಹೇಳಿದ ಎಲ್ಲಾ ಅನುಮಾನಗಳಲ್ಲಿ ಹೇತುಗಳು ಇರಲಿ; ಸಾಧ್ಯಗಳು ಇರುವುದು ಬೇಡ' ಎಂಬುದಾಗಿ ಅಪ್ರಯೋಜಕಶಂಕಾ ಮಾಡಿದರೆ ಹೇತುಸಾಧ್ಯಗಳಲ್ಲಿ ಕಾರ್ಯ -ಕಾರಣಭಾವವಿದೆ. ಹೇತುವಿದ್ದು ಸಾಧ್ಯವಿಲ್ಲದಿದ್ದಲ್ಲಿ ಕಾರಣವಿಲ್ಲದೇ ಕಾರ್ಯವು ಆಗಬೇಕಾದೀತು ಎಂಬ ವಿಪಕ್ಷದಲ್ಲಿ ಬಾಧಕತರ್ಕವಿದೆ. ಆದ್ದರಿಂದ ಎಲ್ಲಾ ಅನುಮಾನಗಳೂ ನಿರ್ದುಷ್ಟವಾಗಿವೆ.

## ವಿವಕ್ಷಿತಾರ್ಥತತ್ವಜ್ಞಾನ, ವಿವಕ್ಷಾ, ಕರಣಪಾಟವಗಳ ಸಮರ್ಥನೆ

ಪರಿಮಳ – ಅತ್ರ ಸರ್ವತ್ರೇತಿ ॥ 'ಗುರೂಣಾಂ ಗುರುತ್ವಾತ್ ತತ್ತ್ವಜ್ಞಾನವತ್ವಮ್' ಇತ್ಯತ್ರ, 'ಗುರುಶಾಸ್ತ್ರಪ್ರಭವತ್ವಾತ್ ಸಾರ್ವಜ್ಞ್ಯಂ ಕರಣಪಾಟವಂ ಚ' ಇತ್ಯತ್ರ, 'ವಕ್ತೃತ್ವಾತ್ ವಿವಕ್ಷಾವಾನ್' ಇತ್ಯತ್ರ, 'ಅಜಾದಿತ್ವಾತ್ ಪ್ರೇಮಾಸ್ಪದತ್ವಮ್' ಇತ್ಯತ್ರ ಚೇತ್ಯರ್ಥಃ ।

ವ್ಯಾಘಾತಪ್ರಮಾಣಬಾಧಾದಿಃ ಆದಿಪದಾರ್ಥಃ, ತೇನ 'ಅಜಾದಿತ್ವಾತ್ ಪ್ರೇಮಾಸ್ಪದತ್ವಮ್ ' ಇತ್ಯತ್ರಾಪಿ ವಿಪಕ್ಷೇ ಬಾಧಕಮುಕ್ತಂ ಧ್ಯೇಯಮ್ ॥

'ಅತ್ರ ಸರ್ವತ್ರ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ – ಜಗತ್ತಿಗೆ ಗುರುಗಳಾದ ಚತುರ್ಮುಖಬ್ರಹ್ಮದೇವರೇ ಮೊದಲಾದವರಿಗೆ ಗುರುಗಳಾಗಿರುವುದರಿಂದ ಶ್ರೀವೇದವ್ಯಾಸ-ದೇವರು ವಿವಕ್ಷಿತಾರ್ಥವಾದ ತತ್ವಜ್ಞಾನವನ್ನು ಹೊಂದಿರುತ್ತಾರೆ.

ಗುರುತರವಾದ ಶಾಸ್ತ್ರಗಳಿಗೆ ಪ್ರವರ್ತಕರಾಗಿರುವುದರಿಂದ ಅಥವಾ ನಿರ್ಮಾತೃಗಳಾಗಿ-ರುವುದರಿಂದ ಸರ್ವಜ್ಞರಾಗಿದ್ದಾರೆ.

ಶಾಸ್ತ್ರಗಳನ್ನು ಬ್ರಹ್ಮಾದಿದೇವತೆಗಳಿಗೆ ಉಪದೇಶ ಮಾಡಿರುವುದರಿಂದ ಇಂದ್ರಿಯಪಾಟವ, ಕರಣಪಾಟವಗಳನ್ನು ಹೊಂದಿರುತ್ತಾರೆ.

ಉಪದೇಶಕರಾಗಿರುವುದರಿಂದ ವಿವಕ್ಷೆ ಉಳ್ಳವರಾಗಿದ್ದಾರೆ. ಈ ಎಲ್ಲಾ ವಿಷಯಗಳಲ್ಲಿ ಮತ್ತು ಜಗದ್ಗುರುಗಳಾದ ಚತುರ್ಮುಖಬ್ರಹ್ಮದೇವರೇ ಮೊದಲಾದವರು ತತ್ವಜ್ಞಾನವನ್ನು ಪಡೆಯಲು ಅರ್ಹರಾಗಿದ್ದಾರೆ. ಪರಮಾತ್ಮನ ಪುತ್ರರಾಗಿರುವುದರಿಂದ ಪರಮಾತ್ಮಸ್ವರೂಪ-ಭೂತರಾದ ಶ್ರೀವೇದವ್ಯಾಸದೇವರಿಗೆ ಪ್ರೇಮಾಸ್ಪದರಾಗಿದ್ದಾರೆ ಇವೇ ಮೊದಲಾದ ವಿಷಯ-ಗಳಲ್ಲಿ ಎಂಬರ್ಥವನ್ನೂ ಕೂಡ ತಿಳಿಯಬೇಕು.

'ಆದಿ'ಪದದಿಂದ ವ್ಯಾಘಾತದೋಷ, ಪ್ರಮಾಣಬಾಧದೋಷ ಮೊದಲಾದವುಗಳನ್ನು ಸಂಗ್ರಹಿಸಬೇಕು. ಹೀಗೆ ಹೇಳಿದ್ದರಿಂದ 'ಅಜಾದಿತ್ವಾತ್' ಪರಮಾತ್ಮಪುತ್ರರಾಗಿರುವುದರಿಂದ 'ಪ್ರೇಮಾಸ್ಪದತ್ವಂ' ಪರಮಾತ್ಮನಿಗೆ ಪ್ರೀತಿಪಾತ್ರರಾಗಿದ್ದಾರೆ ಎಂದು ಹೇಳಿದಂತಾಗುತ್ತದೆ. ಈ ವಿಷಯದಲ್ಲಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ವಿಪಕ್ಷೇಬಾಧಕತರ್ಕವನ್ನು ಹೇಳಿದಂತಾ-ಯಿತು ಎಂದು ತಿಳಿಯತಕ್ಕದ್ದು.

## ತತ್ವಜ್ಞಾನಯೋಗ್ಯತ್ವದ ಹಾಗೂ ವಕ್ತೃಪ್ರೇಮಾಸ್ಪದತ್ವದ ಸಮರ್ಥನೆ

ವಾಕ್ಯಾರ್ಥಚಂದ್ರಿಕಾ – 'ಬ್ರಹ್ಮಾದಯಃ ಶ್ರೋತಾರಃ ತತ್ವಜ್ಞಾನಯೋಗ್ಯಾ ಗುರುತ್ವಾತ್' ಇತಿ ವಿವಕ್ಷಿತಾನುಮಾನೇ ವ್ಯತಿರೇಕವ್ಯಭಿಚಾರಾದರ್ಶನಪ್ರದರ್ಶನಮುಖೇನ ವ್ಯತಿರೇಕವ್ಯಾಪ್ತಿಂ ಸೂಚ-

ಯತಿ – ನ ಹೀತಿ ॥ 'ವಿಮತಾಃ ಶ್ರೋತಾರೋ ವಕ್ತೃಪ್ರೇಮಾಸ್ಪದಾನಿ ಅಜಾದಿತ್ವಾತ್' ಇತಿ ವಿವಕ್ಷಿತಾನುಮಾನೇ ಹೇತೋಃ ಸಾಧ್ಯೇನ ವ್ಯಾಪ್ತಿಮಾಗಮಪ್ರಸಿದ್ಧ್ಯಾ ದರ್ಶಯತಿ – ಬ್ರಹ್ಮಾದಯ ಇತಿ ॥

'ಬ್ರಹ್ಮಾದಯಃ ಶ್ರೋತಾರಃ ತತ್ವಜ್ಞಾನಯೋಗ್ಯಾ ಗುರುತ್ವಾತ್' 'ಚತುರ್ಮುಖಬ್ರಹ್ಮದೇವರೇ ಮೊದಲಾದ ಶ್ರೋತೃಗಳು ಗುರುಗಳಾಗಿರುವುದರಿಂದ ತತ್ವಜ್ಞಾನಕ್ಕೆ ಅರ್ಹರಾಗಿದ್ದಾರೆ' ಎಂಬುದು ವಿವಕ್ಷಿತವಾದ ಅನುಮಾನ. ಈ ಅನುಮಾನದಲ್ಲಿ ವ್ಯತಿರೇಕವ್ಯಭಿಚಾರವನ್ನು ಪರಿಹರಿಸುವ ಮೂಲಕ ವ್ಯತಿರೇಕವ್ಯಾಪ್ತಿಯನ್ನು 'ನ ಹಿ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ವಿಮತಾಃ ಶ್ರೋತಾರೋ ವಕ್ತೃಪ್ರೇಮಾಸ್ಪದಾಃ ಅಜಾದಿತ್ವಾತ್' 'ವಿಮತವಿಷಯೀಭೂತರಾದ ಚತುರ್ಮುಖಬ್ರಹ್ಮದೇವರೇ ಮೊದಲಾದವರು ಪರಮಾತ್ಮಪುತ್ರರೇ ಆಗಿರುವುದರಿಂದ ವಕ್ತೃವಾದ ಪರಮಾತ್ಮನ ಪ್ರೇಮಕ್ಕೆ ಅರ್ಹರಾಗಿರುತ್ತಾರೆ' ಎಂಬುದು ವಿವಕ್ಷಿತವಾದ ಅನುಮಾನ. ಇಲ್ಲಿ ಹೇತುವಿಗೆ ಸಾಧ್ಯದ ಜೊತೆ ವ್ಯಾಪ್ತಿಯು ಆಗಮಪ್ರಸಿದ್ಧವಾಗಿದೆ. ಇದನ್ನು 'ಬ್ರಹ್ಮಾದಯಃ' ಎಂಬ ವಾಕ್ಯದಿಂದ ತೋರಿಸಿದ್ದಾರೆ.

## ಪ್ರಸಂಗಾನುಕೂಲ್ಯದ ಸಾಧಕಾನುಮಾನ

ವಾಕ್ಯಾರ್ಥಚಂದ್ರಿಕಾ – 'ಪ್ರಸಂಗಃ ಪ್ರಯೋಜನೋದ್ದೇಶಕೋ ಮೋಕ್ಷೋದ್ದೇಶಕತ್ವಾತ್' ಇತಿ ವಿಶೇಷೇಣ ಸಾಮಾನ್ಯಾನುಮಾನೇ ವಿವಕ್ಷಿತೇ, ಮೋಕ್ಷಸ್ಯ ಪ್ರಯೋಜನವಿಷಯತಯಾ ಸರ್ವಸಿದ್ಧತ್ವಾದ್ ವ್ಯಾಪ್ತಿಸಿದ್ಧಿಮ್, ಶಾಸ್ತ್ರಸ್ಯ ಸೂತ್ರೇ ಮೋಕ್ಷಸಾಧನತ್ವೋಕ್ತ್ಯಾ ಪಕ್ಷಧರ್ಮತಾಸಿದ್ಧಿಂ ಚಾಭಿಪ್ರೇತ್ಯ, ತೇ ಅನುಪಪಾದ್ಯ, ಪ್ರಸಂಗಾನುಕೂಲ್ಯೋಪಪಾದಕಾಂಶಮೇವ ದರ್ಶಯತಿ – ತದಿತಿ ॥

ಪ್ರಸಂಗಾನುಕೂಲ್ಯವನ್ನು ಸಾಧನೆ ಮಾಡುವ ಅನುಮಾನಸ್ವರೂಪ ಹೀಗಿದೆ – 'ಪ್ರಸಂಗಃ ಪ್ರಯೋಜನೋದ್ದೇಶಕೋ ಮೋಕ್ಷೋದ್ದೇಶಕತ್ವಾತ್' ವಿಶೇಷಣದ ಮೂಲಕ ಹೀಗೆ ಸಾಮಾನ್ಯಾನುಮಾನವು ವಿವಕ್ಷಿತವಾಗಿದೆ. ಮೋಕ್ಷವು ಸಕಲರ ಪ್ರಯೋಜನಕ್ಕೆ ವಿಷಯವಾಗಿದೆ ಎಂಬುದು ಸರ್ವಸಿದ್ಧವಾದ್ದರಿಂದ ವ್ಯಾಪ್ತಿಯು ಈ ಅನುಮಾನದಲ್ಲಿ ಸಿದ್ಧವಾಗಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ಮೋಕ್ಷಪ್ರಯೋಜನಕವಾಗಿದೆ ಎಂಬ ವಿಚಾರವು 'ಅಥಾತಃ' ಎಂಬ ಸೂತ್ರದಲ್ಲಿ ಸಿದ್ಧವಾಗಿದೆ. ಆದ್ದರಿಂದ ಈ ಅನುಮಾನದಲ್ಲಿ ಪಕ್ಷಧರ್ಮತ್ವವು ಕೂಡ ಸಿದ್ಧವಾಯಿತು. ಈ ಕಾರಣದಿಂದ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳನ್ನು ಉಪಪಾದನೆ ಮಾಡದೇ ಪ್ರಸಂಗಾನುಕೂಲ್ಯಕ್ಕೆ ಉಪಪಾದಕವಾದ ಅಂಶವನ್ನಷ್ಟೇ 'ತತ್' ಇತ್ಯಾದಿಯಾಗಿ ತೋರಿಸಿದ್ದಾರೆ.

## ಅಪ್ರಯೋಜಕಾಶಂಕೆಗೆ ವಿಪಕ್ಷದಲ್ಲಿ ಬಾಧಕತರ್ಕವಿದೆ

ವಾಕ್ಯಾರ್ಥಚಂದ್ರಿಕಾ– ಅತ್ರ ತತ್ತ್ವೋಪದೇಶಸ್ಯೋಪದೇಶ್ಯಾಪೇಕ್ಷಯಾ ಅಧಿಕತತ್ತ್ವಜ್ಞಾನಸಾಧ್ಯತ್ವಾತ್ ಆಗಮಪ್ರಣಯನಸ್ಯ ವಕ್ತುಃ ತದರ್ಥಜ್ಞಾನಸಾಧ್ಯತ್ವಾತ್ ಬಹ್ವಾಗಮಪ್ರಣಯನಸ್ಯಾಸತಿ ನಿಮಿತ್ತಾಂತರೇ ಪಟುಕರಣತ್ವಸಾಧ್ಯತ್ವಾತ್ ವಚನಸ್ಯ ಚ ವಿವಕ್ಷಾಸಾಧ್ಯತ್ವಾತ್ ತತ್ತ್ವಜ್ಞಾನಾಯೋಗ್ಯಸ್ಯ ತದನುತ್ಪತ್ತ್ಯಾ ತತ್ತ್ವೋಪದೇಶಸ್ಯ ಜ್ಞಾನದ್ವಾರಾ ತತ್ತ್ವಜ್ಞಾನಯೋಗ್ಯತಾಸಾಧ್ಯತ್ವಾತ್ ಏಷು ಹೇತುಷು ಅಕಾರಣಕಾರ್ಯೋತ್ಪತ್ತಿಪ್ರಸಂಗಃ । ಅಂತ್ಯಯೋರ್ದ್ವಯೋಶ್ಚ ಆದಿಪದಸಂಗೃಹೀತಾಗಮಪ್ರಸಿದ್ಧಿವಿರೋಧಃ ಸಾಮಾನ್ಯವಿಶೇಷಭಾವವಿರೋಧಶ್ಚ ವಿಪಕ್ಷೇ ಬಾಧಕಾ ಉನ್ನೇಯಾ ಇತ್ಯಾಹ – ಅತ್ರೇತಿ ॥

ತತ್ತ್ವೋಪದೇಶಕ್ಕೆ ಉಪದೇಶ ಪಡೆಯುವವನ ಅಪೇಕ್ಷೆ ಇರುತ್ತದೆ. ತತ್ತ್ವೋಪದೇಶಕನಾದವನು ಉಪದೇಶಿಸಲ್ಪಡುವವನಿಗಿಂತ ಅಧಿಕವಾದ ತತ್ತ್ವಜ್ಞಾನವನ್ನು ಹೊಂದಿರುತ್ತಾನೆ. ಆಗಮಪ್ರಣಯನವು ವಕ್ತೃವಿನ ಅರ್ಥಜ್ಞಾನದಿಂದ ಸಾಧ್ಯವಾಗಿದೆ. ಬಹ್ವಾಗಮಪ್ರಣಯನವು ಬೇರೆ ನಿಮಿತ್ತವಿಲ್ಲದಿದ್ದಾಗ ಪಟುಕರಣತ್ವದಿಂದ ಸಾಧ್ಯವಾಗಿದೆ. ತದ್ವಚನವು ವಿವಕ್ಷಾಸಾಧ್ಯವಾಗಿದೆ. ತತ್ತ್ವಜ್ಞಾನಕ್ಕೆ ಅಯೋಗ್ಯರಾದವರಿಗೆ ತತ್ತ್ವಜ್ಞಾನವು ಉತ್ಪನ್ನವಾಗುವುದಿಲ್ಲ. ಆದ್ದರಿಂದ ತತ್ತ್ವೋಪದೇಶಕ್ಕೆ ಜ್ಞಾನದ್ವಾರಾ ತತ್ತ್ವಜ್ಞಾನಯೋಗ್ಯತ್ವವು ಸಾಧ್ಯವಾಗಿದೆ. ಈ ಎಲ್ಲಾ ಹೇತುಗಳಲ್ಲಿ ಅಕಾರಣಕಾರ್ಯೋತ್ಪತ್ತಿ ಎಂಬ ಪ್ರಸಂಗವಿದೆ. ಕೊನೆಯ ಎರಡು ಹೇತುಗಳಿಗೆ ಆದಿಪದದಿಂದ ಸಂಗೃಹೀತವಾದ ಆಗಮಪ್ರಸಿದ್ಧಿಯ ವಿರೋಧವಿದೆ. ಸಾಮಾನ್ಯವಿಶೇಷಭಾವದ ವಿರೋಧವು ಕೂಡ ಇದೆ. ವಿಪಕ್ಷದಲ್ಲಿ ಬಾಧಕತರ್ಕವನ್ನು ಹೀಗೆ ಉನ್ನಯನ ಮಾಡಬೇಕು. ಇದನ್ನು ಟೀಕೆಯಲ್ಲಿ 'ಅತ್ರ' ಇತ್ಯಾದಿವಾಕ್ಯವು ವಿವರಣೆ ಮಾಡುತ್ತಿದೆ.

## ವ್ಯಾಘಾತವೇ ವಿಪಕ್ಷೇ ಬಾಧಕತರ್ಕ

ಯಾದುಪತ್ಯ – 'ಅನುಕ್ತಂ ಪಂಚಭಿರ್ವೇದ್ಯೈಃ' ಇತ್ಯೇತದ್ ವೇದಾನಾಮಶೇಷಾರ್ಥಪ್ರತಿಪಾದಕತ್ವಾಂಶೇ ಮಾನಮಿತಿ ಬೋಧ್ಯಮ್ । ಅಜಾದಿತ್ವಾತ್ ವಕ್ತೃಪ್ರೇಮಾಸ್ಪದಾ(ನಿ) ಇತ್ಯತ್ರಾಕಾರಣಕಾರ್ಯೋತ್ಪತ್ತಿರೂಪಪ್ರಸಂಗೋ ನ ಸಂಭವತೀತ್ಯತ ಉಕ್ತಮ್ – ಅಜಾದಿಭ್ಯ ಇತೀತಿ ॥ ತೇನ ತತ್ರ ಆಗಮಿಕಪ್ರಸಿದ್ಧಿಬಾಧಪ್ರಸಂಗ ಏವ ವಿಪಕ್ಷೇ ಬಾಧಕ ಉನ್ನೇಯ ಇತ್ಯುಕ್ತಂ ಭವತಿ । ಅತ ಏವ 'ಸುಪ್ರಸಿದ್ಧಾ' ಇತಿ ಪೂರ್ವಮುಕ್ತಂ ಜ್ಞಾತವ್ಯಮ್ ।

'ಅನುಕ್ತಂ ಪಂಚಭಿರ್ವೇದ್ಯಃ' ಎಂಬುದು ವೇದಗಳು ಅಶೇಷಾರ್ಥಪ್ರತಿಪಾದಕಗಳಾಗಿವೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆ ಎಂದು ತಿಳಿಯಬೇಕು. 'ಪರಮಾತ್ಮನಿಂದ ಹುಟ್ಟಿರುವ ಕಾರಣ ವಕ್ತೃ-ಪ್ರೇಮಾಸ್ಪದರಾಗಿದ್ದಾರೆ ಎಂಬ ವ್ಯಾಪ್ತಿಗೆ ಅಕಾರಣಕಾರ್ಯೋತ್ಪತ್ತಿರೂಪವಾದ ಅನುಕೂಲತರ್ಕವು ಕೂಡುವುದಿಲ್ಲ ಎಂಬ ಪ್ರಶ್ನೆಗೆ 'ಅಜಾದಿಭ್ಯಃ' ಎಂಬುದರಿಂದ ಉತ್ತರಿಸಿದ್ದಾರೆ. ಆಗಮಪ್ರಸಿದ್ಧಿಬಾಧ-ಪ್ರಸಂಗವೇ ವಿಪಕ್ಷೇ ಬಾಧಕತರ್ಕವೆಂದು ತಿಳಿಯಬೇಕು. ಆದ್ದರಿಂದಲೇ 'ಸುಪ್ರಸಿದ್ಧಾಃ' ಎಂಬುದಾಗಿ ಈ ಹಿಂದೆ ಹೇಳಿರುತ್ತಾರೆ.

ವಿವರಣೆ – ವ್ಯಾಸರು ಸರ್ವಜ್ಞಕಲ್ಪೋಪದೇಶಕರು, ಅಶೇಷಾರ್ಥಪ್ರತಿಪಾದಕ ಆಗಮಪ್ರಭವರು ಆದರೂ ಸರ್ವಜ್ಞರೆಂದೇಕೆ ಒಪ್ಪಬೇಕು? ಎಂಬುದು ಅಪ್ರಯೋಜಕತ್ವಶಂಕೆ. ಅವರು ಸರ್ವಜ್ಞರಲ್ಲದಿದ್ದರೆ ಸರ್ವಜ್ಞಕಲ್ಪೋಪದೇಶಕರು, ಅಶೇಷಾರ್ಥಪ್ರತಿಪಾದಕ ಆಗಮಪ್ರಭವರು ಆಗಲು ಸಾಧ್ಯವಿಲ್ಲ. ಸರ್ವಜ್ಞ-ರಲ್ಲದ ಬೇರೊಬ್ಬರಿಗೆ ಇದು ಸಾಧ್ಯವೇ? ಎಂಬ ತರ್ಕವೇ ಅನುಕೂಲ ತರ್ಕ. ಸರ್ವಜ್ಞಕಲ್ಪೋ-ಪದೇಶಕತ್ವ ಅಶೇಷಾರ್ಥಪ್ರತಿಪಾದಕಾಗಮಪ್ರಭವತ್ವಗಳಿಗೆ ಸರ್ವಜ್ಞತ್ವವು ಕಾರಣ. ಆದುದರಿಂದ ಅನುಕೂಲತರ್ಕ ಹೇಳಲು ಸಾಧ್ಯವಾಯಿತು. ಯಾವುದೇ ಅನುಮಾನಯೋಗ್ಯವಾದ ನಿರ್ದುಷ್ಟ ಅನುಮಾನದಲ್ಲಿ ಅಪ್ರಯೋಜಕತ್ವಾಶಂಕೆಯನ್ನು ನಿವಾರಿಸುವ ಅನುಕೂಲತರ್ಕ ಇರಬೇಕು. ಇಲ್ಲ-ದಿದ್ದಲ್ಲಿ ಅನುಮಾನವೇ ಅಪ್ರಯೋಜಕವಾಗುವುದು. ಉದಾಹರಣೆಗೆ ಪರ್ವತದಲ್ಲಿ ಬೆಂಕಿ ಇರುವು-ದರಿಂದ ಹೊಗೆಯಿದೆ ಎಂದು ಸಾಧಿಸಲು ಹೊರಟರೆ ಕಾದ ಕಬ್ಬಿಣದಲ್ಲಿ ಬೆಂಕಿಯಿದ್ದರೂ ಹೊಗೆಯಿಲ್ಲ-ದಿರುವಾಗ ಪರ್ವತದಲ್ಲಿ ಬೆಂಕಿಯಿದ್ದರೆ ಹೊಗೆ ಇದೆ ಎಂದು ತೀರ್ಮಾನಿಸುವುದು ಹೇಗೆ? ಎಂದು ಅಪ್ರಯೋಜಕತ್ವಾಶಂಕಾ ಬರುತ್ತದೆ. ಅದಕ್ಕೆ ಉತ್ತರವಿಲ್ಲ. ಏಕೆಂದರೆ ಬೆಂಕಿಗೆ ಹೊಗೆಯು ಕಾರಣವಲ್ಲ. ಆದುದರಿಂದಲೇ ಹೊಗೆ ಇರದಿದ್ದಲ್ಲಿ ಬೆಂಕಿಯೂ ಇರಲು ಸಾಧ್ಯವಿಲ್ಲ ಎಂದು ವಿಶೇಷ ಬಾಧಕ ಹೇಳಲು ಬರುವುದಿಲ್ಲ. ಹೊಗೆ ಇರದೆಯೇ ಕಾದ ಕಬ್ಬಿಣದಲ್ಲಿ ಬೆಂಕಿಯಿದೆಯಷ್ಟೆ. ಆದುದರಿಂದ ಹೊಗೆಯನ್ನು ನೋಡಿ ಅದರಿಂದ ಬೆಂಕಿ ಇದೆಯೆಂದು ಸಾಧಿಸಬಹುದೇ ಹೊರತು ಬೆಂಕಿಯಿಂದ ಹೊಗೆ ಇರಬೇಕೆಂದು ಸಾಧಿಸಲು ಬರುವುದಿಲ್ಲ.

ವ್ಯಾಸರು ಅಪಾರವಾದ ವೇದಕ್ಕೆ ಪ್ರಭವರಾದುದರಿಂದ ಇಂದ್ರಿಯಪಟುತ್ವವುಳ್ಳವರು ಉಪದೇಶಕ-ರಾಗಿರುವುದರಿಂದ (ವಕ್ತೃಗಳಾಗಿರುವುದರಿಂದ) ಹೇಳುವ ಬಯಕೆ ಉಳ್ಳವರೆಂದು ಸಾಧಿಸುವ ಅನು-ಮಾನಗಳಲ್ಲಿಯೂ ಅಪಾರವೇದಪ್ರಭವರಾದರೂ ಇಂದ್ರಿಯಪಟುತ್ವವುಳ್ಳವರೆಂದು ಏಕೆ ಒಪ್ಪಬೇಕು? ಎಂದು ಅಪ್ರಯೋಜಕತ್ವಾಶಂಕೆ ಮಾಡಿದರೆ, ಇಂದ್ರಿಯಪಟುತ್ವವಿಲ್ಲದಿದ್ದರೆ ಉಪದೇಶಕರಾಗಲು ಸಾಧ್ಯ-

ವಿಲ್ಲ. ಹೇಳುವ ಬಯಕೆ ಇರದಿದ್ದರೆ ಹೇಳಲು ಸಾಧ್ಯವಿಲ್ಲ ಎಂದು ಅನುಕೂಲತರ್ಕವನ್ನು ಹೇಳಬೇಕು. ಇಂದ್ರಿಯಪಟುತ್ವವಿಲ್ಲದಿರುವುದು ಉಪದೇಶಕನಾಗಿದ್ದಾನೆ ಎನ್ನುವುದು ಪರಸ್ಪರ ವಿರುದ್ಧ. ಹೇಳುವ ಬಯಕೆ ಇಲ್ಲ ಎನ್ನುವುದು ವಕ್ತ ಎನ್ನುವುದು ವಿರುದ್ಧ. ಇದಕ್ಕೆ ವ್ಯಾಘಾತ ಎಂದು ಹೆಸರು. ಈ ವ್ಯಾಘಾತವೇ ಇಲ್ಲಿ ವಿಪಕ್ಷೇ ಬಾಧಕ.

ಬ್ರಹ್ಮಾದಿದೇವತೆಗಳು ವಕ್ತೃವಿಗೆ ಪ್ರೇಮಾಸ್ಪದರು ಎಂದು ಹೇಳಿದಾಗ ಬ್ರಹ್ಮಾದಿದೇವತೆಗಳಾದ ಮಾತ್ರಕ್ಕೆ ಅವರು ವಕ್ತೃವಿಗೆ ಪ್ರೇಮಾಸ್ಪದರೆಂದು ಏಕೆ ಅಂಗೀಕರಿಸಬೇಕು? ಎಂದು ಅಪ್ರಯೋಜಕತ್ವಶಂಕೆ ಮಾಡಿದರೆ ಬ್ರಹ್ಮಾದಿದೇವತೆಗಳು ವಕ್ತೃಪ್ರೇಮಾಸ್ಪದರೆಂದು ಪ್ರಮಾಣವಾಕ್ಯಗಳು ತಿಳಿಸುತ್ತವೆ. ಆದರೂ ಒಪ್ಪದಿದ್ದರೆ ಪ್ರಮಾಣವಿರೋಧ ಬರುತ್ತದೆ. ಇದನ್ನೇ ಪ್ರಮಾಣಬಾಧವೆಂದು ಕರೆಯುವರು. ಇಲ್ಲಿ ಈ ಪ್ರಮಾಣಬಾಧವೇ ವಿಪಕ್ಷೇ ಬಾಧಕ.

ಪ್ರಸಂಗಾನುಕೂಲ್ಯವನ್ನು ಸಾಧನೆ ಮಾಡುವ ಅನುಮಾನದಲ್ಲಿ 'ಮೋಕ್ಷೋದ್ದೇಶಕತ್ವ' ಇದ್ದರೂ 'ಪ್ರಯೋಜನೋದ್ದೇಶಕತ್ವ' ಇಲ್ಲ ಎಂದು ಅಪ್ರಯೋಜಕತ್ವಾಶಂಕಾ ಮಾಡಿದರೆ ಆಗ ವ್ಯಾಘಾತವನ್ನು ವಿಪಕ್ಷೇ ಬಾಧಕವಾಗಿ ಹೇಳಬೇಕು. ಪ್ರಸಂಗಕ್ಕೆ 'ಮೋಕ್ಷೋದ್ದೇಶಕತ್ವ' ಇದೆ ಎಂದು ಒಪ್ಪಿಕೊಂಡು ಪ್ರಯೋಜನ ಇಲ್ಲ ಎಂದು ಹೇಳಿದರೆ ವ್ಯಾಘಾತ. ಮೋಕ್ಷರೂಪ ಪ್ರಯೋಜನವನ್ನು ಪ್ರಸಂಗಕ್ಕೆ ಒಪ್ಪಿ-ಕೊಂಡು ಪ್ರಸಂಗವು ಪ್ರಯೋಜನೋದ್ದೇಶಕ ಅಲ್ಲ ಎಂದು ಹೇಳಿದರೆ ಸ್ವವಚನವಿರೋಧರೂಪ-ವ್ಯಾಘಾತ ಸ್ಪಷ್ಟ. ಆದ್ದರಿಂದ ಇಲ್ಲಿ ಅಪ್ರಯೋಜಕತ್ವಾಶಂಕೆಗೆ ವ್ಯಾಘಾತವನ್ನು ವಿಪಕ್ಷೇ ಬಾಧಕತರ್ಕವಾಗಿ ಹೇಳಬೇಕು.

## ಗುರುಗುರುತ್ವ ಮೊದಲಾದ ಹೇತುಗಳಿಂದ ನೇರವಾಗಿ ಪ್ರಾಮಾಣ್ಯಸಾಧನೆ ಸಾಧ್ಯವಾಗದು

**ಶ್ರೀಮನ್ನ್ಯಾಯಸುಧಾ – ನನ್ವತ್ರ 'ಗುರುರ್ಗುರೂಣಾಮ್' ಇತ್ಯಾದೀನಾಂ ಶಾಸ್ತ್ರ-ಪ್ರಮಾಣ್ಯೇನ ಯಥಾಶ್ರುತ ಏವ ಸಾಧ್ಯಸಾಧನಭಾವೋ ವ್ಯಾಖ್ಯಾಯತಾಮ್ । ಕಿಂ ಮಧ್ಯೇ ಸಾಧ್ಯಾಂತರಾಧ್ಯಾಹಾರಕಲ್ಪನಯಾ । ಯದ್ಯಪಿ ಯಥಾಶ್ರುತಾನಾ-ಮೇಷಾಂ ವ್ಯಧಿಕರಣತಾ । ತಥಾಽಪಿ 'ತದುದಿತಮ್' ಇತಿ ವಚನಾದ್ ವಿಭಕ್ತಿ-**

**ವಿಪರಿಣಾಮೇನ ಏಕಾಧಿಕರಣತಾ ಭವಿಷ್ಯತಿ । ಯದ್ಯಪಿ ಚೇತೇ ಪ್ರತ್ಯೇಕಂ ಬೌದ್ಧಾಗಮಾದೌ ಮಾನತಾಂ ವ್ಯಭಿಚರಂತಿ । ತಥಾऽಪಿ ಮಿಲಿತಾನಾಂ ಹೇತುತಾऽಸ್ತು ।**

ಮೇಲೆ ಹೇಳಿದ ಸಾಧ್ಯಸಾಧನಾನುಮಾನದಲ್ಲಿ ಶ್ಲೋಕದಲ್ಲಿ ಕಾಣಿಸುವ 'ಗುರುಃ ಗುರೂಣಾಂ' ಮೊದಲಾದ ವಿಶೇಷಣಗಳಿಂದ ಯಾವ ಯುಕ್ತಿಗಳು ಹೇಳಲ್ಪಟ್ಟಿವೆಯೋ ಅವುಗಳು ಶಾಸ್ತ್ರಪ್ರಾಮಾಣ್ಯವನ್ನು ನೇರವಾಗಿ ಸಾಧಿಸುತ್ತವೆ. ಪ್ರಾಮಾಣ್ಯಕ್ಕೂ ಗುರುಗುರುತ್ವ ಮೊದಲಾದ ಯುಕ್ತಿಗಳಿಗೂ ನೇರವಾದ ಸಾಧ್ಯಸಾಧನಭಾವವಿದೆ ಎಂದೇ ವ್ಯಾಖ್ಯಾನ ಮಾಡಿರಿ. ಮಧ್ಯದಲ್ಲಿ ಮತ್ತೊಂದು ಸಾಧ್ಯವನ್ನು ಅಧ್ಯಾಹಾರ ಮಾಡಬೇಕೆಂದು ಏಕೆ ಕಲ್ಪನೆ ಮಾಡುತ್ತಿದ್ದೀರಿ?

ವಾಸ್ತವಿಕವಾಗಿ ಗುರುಗುರುತ್ವ ಮೊದಲಾದ ಯಥಾಶ್ರುತವಾದ ಹೇತುಗಳು ವ್ಯಧಿ-ಕರಣವಾಗಿವೆ. ಆದರೂ 'ತದುದಿತಮ್' ಎಂಬ ಮಾತಿನಿಂದ ವಿಭಕ್ತಿಪರಿಣಾಮ ಮಾಡಿ-ಕೊಂಡು ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವಿದೆ. ವಾಸ್ತವಿಕವಾಗಿ ಈ ಹೇತುಗಳು ಪ್ರತ್ಯೇಕವಾಗಿ ವಿವಕ್ಷಿತವಾದರೆ ಬೌದ್ಧಾಗಮ ಮೊದಲಾದೆಡೆ ವ್ಯಭಿಚರಿತಗಳಾಗಿವೆ. ಆದರೂ ಕೂಡ ಮಿಲಿತವಾಗಿ ಹೇತುಗಳಾಗಿವೆ ಎಂದು ಹೇಳಿದರೆ ಯಾವುದೇ ದೋಷಕ್ಕೆ ಅವ-ಕಾಶವಿಲ್ಲ.

## ವಿಭಕ್ತಿವಿಪರಿಣಾಮದಿಂದ ಸಾಮಾನಾಧಿಕರಣ್ಯ

ಪರಿಮಳ– 'ಸನ್ನ್ಯಾಯರತ್ನಾವಲ್ಯಾಮ್ ಆದಾವಯೋಜಿತಂ ಪಾರಂಪರ್ಯಂ ಕಿಮಿತಿ ಯೋಜ್ಯತೇ' ಇತ್ಯಾಕ್ಷಿಪತಿ – ನನ್ವಿತ್ಯಾದಿನಾ [1]ಸತ್ಯಮಿತ್ಯಂತೇನ ॥ ವಿಪರಿಣಾಮೇನೇತಿ ॥

---

[1] 'ನನು' ಎಂದು ಆರಂಭವಾದ ಆಕ್ಷೇಪವು (ಪು.31) 'ಸತ್ಯಂ' (ಪು.64) ಎಂಬಲ್ಲಿ ಮುಕ್ತಾಯವಾಗುತ್ತದೆ. ಆಕ್ಷೇಪವು ಬಹಳ ವಿಸ್ತಾರವಾಗಿರುವುದರಿಂದ ಮಧ್ಯದಲ್ಲಿ ವಿಭಾಗ ಮಾಡಲಾಗಿದೆ.

ಯಃ ಗುರೂಣಾಂ ಗುರುಃ ಶಾಸ್ತ್ರಾಣಾಂ ಪ್ರಭವಶ್ಚ ತೇನ ಏತಾದೃಗ್ಗುಣಕೇನೋದಿತತ್ವಾತ್ ಇತ್ಯೇವಂ ರೂಪವಿಪರಿಣಾಮೇನೇತ್ಯರ್ಥಃ। ಏತೇ ಇತಿ॥

'ಗುರೂಣಾಂ ಗುರುಣೋದಿತತ್ವಾತ್', 'ಅಶೇಷಶಾಸ್ತ್ರಪ್ರಭವೇನೋಕ್ತತ್ವಮ್', 'ಅಜಾದೀನ್ ಶ್ರೋತೄನ್ ಪ್ರತ್ಯುಪದಿಷ್ಟತ್ವಂ', 'ಪ್ರಯೋಜನೋದ್ದೇಶೇನೋಕ್ತತ್ವಮ್' ಇತ್ಯೇತೇ ಹೇತವ ಇತ್ಯರ್ಥಃ।

ಸನ್ನ್ಯಾಯರತ್ನಾವಳಿಯಲ್ಲಿ ಯಾವ ಪರಂಪರೆಯನ್ನು ವಿವಕ್ಷಿಸಿದ್ದಾರೋ ಆ ಪರಂಪರೆಯನ್ನು ಏಕೆ ಆಶ್ರಯಿಸಬೇಕು? ಎಂಬ ಆಕ್ಷೇಪವನ್ನು 'ನನು' ಇತ್ಯಾದಿ ಗ್ರಂಥದಿಂದ 'ಸತ್ಯಮ್' ಎಂಬ ಗ್ರಂಥದ ತನಕ ತೋರಿಸಿದ್ದಾರೆ.

'ವಿಪರಿಣಾಮೇನ' – 'ಯಾರು ಗುರುಗಳಿಗೂ ಗುರುವೋ, ಶಾಸ್ತ್ರಗಳ ಉಪದೇಶಕ ಅಥವಾ ನಿರ್ಮಾಪಕನೋ ಅಂಥಾ ಗುಣವನ್ನು ಹೊಂದಿರುವ ಶ್ರೀವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದೆ ಆದ್ದರಿಂದ'. ಈ ರೀತಿಯಾದ ವಿಭಕ್ತಿವಿಪರಿಣಾಮದಿಂದ ಎಂದರ್ಥ.

'ಏತೇ' – ಗುರುಗಳ ಗುರುವಿನಿಂದ ಉಪದೇಶಿಸಲ್ಪಟ್ಟಿದೆ, ಅಶೇಷಶಾಸ್ತ್ರಪ್ರಭವನಿಂದ ಉಪದೇಶಿಸಲ್ಪಟ್ಟಿದೆ, ಬ್ರಹ್ಮಾದಿಶ್ರೋತೃಗಳನ್ನು ಕುರಿತು ಉಪದೇಶಿಸಲ್ಪಟ್ಟಿದೆ, ಪ್ರಯೋಜನೋದ್ದೇಶದಿಂದ ಉಪದೇಶಿಸಲ್ಪಟ್ಟಿದೆ. ಈ ನಾಕೂ ಯುಕ್ತಿಗಳು ಎಂಬುದು ಏತೇ ಎಂಬುದರ ಅರ್ಥ.

## ಮಿಲಿತವಾದ ಹೇತುವಿಗೆ ವ್ಯಭಿಚಾರದೋಷವಿಲ್ಲ

ಪರಿಮಳ– ನಾರಾಯಣಾವತಾರೇಣ ಬುದ್ಧೇನ ಕೃತತ್ವಾದ್ ಬೌದ್ಧಾಗಮಸ್ಯ ಬುದ್ಧಸ್ಯ ಚ ಬ್ರಹ್ಮಾದಿಗುರುತ್ವಾತ್ ತತ್ರಾದ್ಯಸ್ಯ ಸರ್ವಶಾಸ್ತ್ರಪ್ರಭವಪ್ರಣೇತತ್ವಸ್ಯ ಚ ವೇದವಿರುದ್ಧಶೈವಾದಿಪುರಾಣಭಾಗೇ ತೃತೀಯಸ್ಯ ನರ್ಮಾದೌ ಚತುರ್ಥಸ್ಯ ಕಪಿಲಾದಾವಪಿ ಗತತ್ವಾತ್ ಏಕೈಕಸ್ಯ ವ್ಯಭಿಚಾರೇಽಪಿ ಅಜಾದಿಪ್ರಯೋಜನೋದ್ದೇಶೇನ ಉಕ್ತತ್ವಾಭಾವಾತ್ ತನ್ಮಿಲಿತಸ್ಯ ಹೇತುತ್ವಂ ಭವಿಷ್ಯತೀತಿ ಭಾವಃ।

1. ಬುದ್ಧನು ನಾರಾಯಣನ ಅವತಾರಸ್ವರೂಪನಾಗಿದ್ದಾನೆ. ಈ ಬುದ್ಧನೇ ಬೌದ್ಧಾಗಮವನ್ನು ರಚನೆ ಮಾಡಿದ್ದಾನೆ. ಮತ್ತು ಬ್ರಹ್ಮಾದಿ ದೇವತೆಗಳಿಗೆ ಉಪದೇಶವನ್ನು ಮಾಡಿರುವುದರಿಂದ ಗುರು ಎನಿಸಿದ್ದಾನೆ. 'ಗುರುಗಳ ಗುರುವಿಗೆ ಉಪದೇಶಮಾಡಿರುವಿಕೆ' ಎಂಬ ಯುಕ್ತಿಯು ಬೌದ್ಧಾಗಮಗಳಲ್ಲಿ ಇರುತ್ತದೆ. ಆದರೆ ಪ್ರಾಮಾಣ್ಯವು ಇರುವುದಿಲ್ಲ. ಹೀಗೆ ವ್ಯಭಿಚಾರ ಬರುತ್ತದೆ.

2. ಶೈವಾಗಮಗಳು ವೇದವಿರುದ್ಧವಾಗಿವೆ. ಇವುಗಳನ್ನು ಶ್ರೀವೇದವ್ಯಾಸದೇವರೇ ರಚನೆ ಮಾಡಿರುತ್ತಾರೆ. 'ಅಶೇಷಶಾಸ್ತ್ರಪ್ರಭವನಿಂದ ಉಪದೇಶಮಾಡಿರುವಿಕೆ' ಎಂಬ ಯುಕ್ತಿಯು ಈ ಶೈವಾಗಮಗಳಲ್ಲಿ ಇದೆ. ಆದರೆ ಪ್ರಾಮಾಣ್ಯವಿರುವುದಿಲ್ಲ. ಹೀಗೆ ಎರಡನೇ ಹೇತುವಿಗೆ ಶೈವಾಗಮಗಳಲ್ಲಿ ವ್ಯಭಿಚಾರ.

3. ಕೆಲವೊಮ್ಮೆ ಪರಮಾತ್ಮನೇ ನರ್ಮ(ಹಾಸ್ಯ)ವಾಕ್ಯಗಳನ್ನು ಉಪದೇಶಿಸಿರುತ್ತಾನೆ. ಬ್ರಹ್ಮಾದಿದೇವತೆಗಳನ್ನು ಕುರಿತೇ ಉಪದೇಶಿಸಿರುವುದರಿಂದ 'ಬ್ರಹ್ಮಾದಿಗಳನ್ನು ಕುರಿತು ಉಪದೇಶ -ಮಾಡಿರುವಿಕೆ' ಎಂಬ ಯುಕ್ತಿಯು ನರ್ಮಾದಿ ವಾಕ್ಯಗಳಲ್ಲಿ ಇದೆ. ಆದರೆ ಅಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಹೀಗೆ ಮೂರನೆಯ ಹೇತುವಿಗೆ ನರ್ಮಾದಿ ವಾಕ್ಯಗಳಲ್ಲಿ ವ್ಯಭಿಚಾರ.

4. ಸಾಂಖ್ಯಶಾಸ್ತ್ರವನ್ನು ಕಪಿಲರೂಪಿಯಾದ ಪರಮಾತ್ಮನು ಉಪದೇಶ ಮಾಡಿದ್ದಾನೆ. ಮೋಕ್ಷಪ್ರಯೋಜನಕ್ಕಾಗಿಯೇ ಇದು ಉಪದೇಶಿಸಲ್ಪಟ್ಟಿದೆ. 'ಮೋಕ್ಷಪ್ರಯೋಜನಕ್ಕೋಸ್ಕರ ಉಪದೇಶ ಮಾಡಿರುವಿಕೆ' ಎಂಬ ಯುಕ್ತಿಯು ಸಾಂಖ್ಯಶಾಸ್ತ್ರದಲ್ಲಿದೆ. ಆದರೆ ಅದರಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಹೀಗೆ ನಾಕನೆಯ ಯುಕ್ತಿಗೆ ಸಾಂಖ್ಯಶಾಸ್ತ್ರದಲ್ಲಿ ವ್ಯಭಿಚಾರ ಬರುತ್ತದೆ.

ಈ ನಾಕೂ ಯುಕ್ತಿಗಳು ಪ್ರತ್ಯೇಕಪ್ರತ್ಯೇಕವಾಗಿ ಪ್ರಾಮಾಣ್ಯದ ಜೊತೆ ಅವಿನಾಭಾವಸಂಬಂಧವನ್ನು ಹೊಂದಿರುವುದಿಲ್ಲ. ವ್ಯಭಿಚರಿತವಾದ್ದರಿಂದ ಪ್ರಾಮಾಣ್ಯಗಳನ್ನು ಸಾಧಿಸಲು ಸಮರ್ಥಗಳಾಗುವುದಿಲ್ಲ. ಆದರೂ ಕೂಡ 'ಬ್ರಹ್ಮಾದಿಗಳನ್ನು ಕುರಿತು ಮೋಕ್ಷಕ್ಕೋಸ್ಕರ ಉಪದೇಶಮಾಡಿರುವಿಕೆ' ಎಂಬ ಯುಕ್ತಿಯು ಮಾತ್ರ ಬೇರೆ ಯಾವುದೇ ಶಾಸ್ತ್ರಗಳಲ್ಲಿ ಇರುವು-

ದಿಲ್ಲ. ಇದರಿಂದ ಕೂಡಿದ ಉಳಿದೆಲ್ಲ ಯುಕ್ತಿಗಳನ್ನು ಸೇರಿಸಿ ಮಾಡಿದ ವಿಶಿಷ್ಟಹೇತುವು ನಿರ್ದುಷ್ಟವಾಗಿದೆ. ಪ್ರಾಮಾಣ್ಯದ ಜೊತೆ ನಿಯತಸಂಬಂಧವನ್ನು ಹೊಂದಿದೆ. ಈ ಪಕ್ಷದಲ್ಲಿ ಯಾವುದೇ ವ್ಯಭಿಚಾರದೋಷಕ್ಕೆ ಅವಕಾಶವಿರುವುದಿಲ್ಲ ಎಂಬುದು ಇಲ್ಲಿಯ ಅಭಿಪ್ರಾಯ.

## ಮಿಲಿತಹೇತುವಿಗೆ ಬೌದ್ಧಾಗಮಗಳಲ್ಲಿ ವ್ಯಭಿಚಾರವಿಲ್ಲ

ಪರಿಮಳ— ಅಜಾದಿಮೋಕ್ಷೋದ್ದೇಶೇನೋಕ್ತತ್ವಮಾತ್ರಸ್ಯೈವ ಹೇತುತ್ವಮವ್ಯಭಿಚಾರಾದ್ಯುಕ್ತಮ್ ಇತ್ಯೇತದಗ್ರೇ ವ್ಯಕ್ತಮ್ । ನನು ವಿಶಿಷ್ಟಸ್ಯಾಪಿ ಹೇತೋರ್ಬೌದ್ಧಾಗಮಾದೌ ವ್ಯಭಿಚಾರ ಏವ । ಭಾರತತಾತ್ಪರ್ಯನಿರ್ಣಯೇ ದ್ವಾತ್ರಿಂಶಾಧ್ಯಾಯೋಕ್ತದಿಶಾ ಬೌದ್ಧಾಗಮಾಭಿಪ್ರೇತಾರ್ಥಸ್ಯ ದೇವೇಭ್ಯ ಉಪದಿಷ್ಟತ್ವಾದಿತಿ ಚೇತ್ । ನ । ತನ್ಮೋಕ್ಷಾರ್ಥೋದ್ದೇಶೇನ ಉಕ್ತತ್ವಾಭಾವಾತ್ ಅಭಿಪ್ರೇತಾರ್ಥೇ ಪ್ರಾಮಾಣ್ಯಸದ್ಭಾವಾಚ್ಚ ಅಶೇಷಶಾಸ್ತ್ರಕರ್ತಾ ವ್ಯಾಸೇನಾಕೃತತ್ವಾಚ್ಚ ಇತಿ ಭಾವಃ।

'ಬ್ರಹ್ಮಾದಿಗಳನ್ನು ಕುರಿತು ಮೋಕ್ಷಕ್ಕೋಸ್ಕರ ಉಪದೇಶಮಾಡಿರುವಿಕೆ' ಎಂಬ ಹೇತುವಿಗೆ ಯಾವುದೇ ವ್ಯಭಿಚಾರವಿಲ್ಲ ಎಂಬುದನ್ನು ನ್ಯಾಯಸುಧೆಯಲ್ಲಿ ಮುಂದೆ ಸ್ಪಷ್ಟಪಡಿಸುತ್ತಾರೆ.

ವಿಶಿಷ್ಟವಾದ ಹೇತುವಿಗೂ ಕೂಡ ಬೌದ್ಧಾಗಮದಲ್ಲಿ ವ್ಯಭಿಚಾರ ಬರುತ್ತದೆ. ಮಹಾಭಾರತತಾತ್ಪರ್ಯನಿರ್ಣಯದ ಮೂವತ್ತೆರಡನೆಯ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಬೌದ್ಧಾಗಮಗಳಿಂದ ಅಭಿಪ್ರೇತವಾದ ಅರ್ಥವು ದೇವತೆಗಳಿಗೆ ಉಪದಿಷ್ಟವಾಗಿದೆ. ಆದರೆ ಅಲ್ಲಿ ಮೋಕ್ಷಪ್ರಯೋಜನವು ಇರುವುದಿಲ್ಲ. ಅಂಥಾ ಬೌದ್ಧಾಗಮಗಳಲ್ಲಿ ಪ್ರಾಮಾಣ್ಯ ಇಲ್ಲದೇ ಇರುವುದರಿಂದ ವಿಶಿಷ್ಟಹೇತುವಿಗೂ ಕೂಡ ವ್ಯಭಿಚಾರವು ಬರುತ್ತದಲ್ಲವೇ?

ಈ ಆಶಂಕೆಯು ತಪ್ಪು. ಏಕೆಂದರೆ ಭಗವಂತನು ಬೌದ್ಧಾಗಮವನ್ನು ಮೋಕ್ಷಪ್ರಯೋಜನಕ್ಕೋಸ್ಕರ ಉಪದೇಶ ಮಾಡಿರುವುದಿಲ್ಲ. ಮತ್ತು ಬೌದ್ಧಾಗಮಗಳಿಂದ ಪರಮಾತ್ಮನು ದೇವತೆಗಳಿಗೆ ಯಾವ ಅರ್ಥದಲ್ಲಿ ಉಪದೇಶ ಮಾಡಿದ್ದಾನೋ ಆ ಅರ್ಥದಲ್ಲಿ ಬೌದ್ಧಾಗಮಗಳಿಗೆ ಪ್ರಾಮಾಣ್ಯವು ಇದ್ದೇ ಇರುತ್ತದೆ. ಮತ್ತು ಅಶೇಷಶಾಸ್ತ್ರಕರ್ತೃಗಳಾದ ವೇದವ್ಯಾಸದೇವರು

ಬೌದ್ಧಾಗಮಗಳನ್ನು ರಚನೆ ಮಾಡಿರುವುದೂ ಇಲ್ಲ. ಈ ಕಾರಣಗಳಿಂದಲೂ ಕೂಡ ವ್ಯಭಿಚಾರದೋಷವು ಬರುವುದಿಲ್ಲ ಎಂದಭಿಪ್ರಾಯ.

## ಶ್ರುತವಾದ 'ಮಾನಂ' ಎಂಬಲ್ಲೇಕೆ ಅನ್ವಯ ಮಾಡಿರುವುದಿಲ್ಲ?

ವಾಕ್ಯಾರ್ಥಚಂದ್ರಿಕಾ– ಅತ್ರ 'ಗುರುರ್ಗುರೂಣಾಮ್ ಇತ್ಯಾದಿಹೇತೂನಾಮ್' - ಇತ್ಯುಕ್ತಮುಪಪಾದಯಿತುಂ ಶಂಕತೇ – ನನ್ವತ್ರೇತಿ ॥ ಗುರುಗುರುತ್ವಾಶೇಷಶಾಸ್ತ್ರಪ್ರಭವತ್ವವಚನಾನಾಂ ಶ್ರುತಂ 'ಮಾನಮ್' ಇತ್ಯೇವ ಸಾಧ್ಯಮಸ್ತು, ಕಿಂ ಸಾರ್ವಜ್ಞಮುಖೇನ ಸಿದ್ಧ್ಯದ್ವಿವಕ್ಷಿತಾರ್ಥತತ್ತ್ವಜ್ಞಾನಕರಣಪಾಟವವಿವಕ್ಷಾರೂಪವಕ್ತ್ರಾನುಕೂಲ್ಯಸ್ಯ ಅತ್ರಾಶ್ರುತಸ್ಯ ಸಾಧ್ಯತ್ವಕಲ್ಪನಯಾ । ಶ್ರುತಾಶ್ರುತಪರಿತ್ಯಾಗಕಲ್ಪನಾರೂಪದೋಷಾಪತ್ತೇಃ ಇತ್ಯರ್ಥಃ।

'ಗುರುರ್ಗುರೂಣಾಂ ಇತ್ಯಾದಿ ಹೇತೂನಾಮ್' ಎಂಬುದಾಗಿ 'ಜಗದ್ಗುರುಗಳಿಗೆ ಗುರುಗಳಾದ ಬಾದರಾಯಣರಿಂದ ಹೇಳಲ್ಪಟ್ಟದ್ದೆ ಇತ್ಯಾದಿ ಹೇತುಗಳಿಂದ' ಎಂಬ ಮೂಲದಿಂದ ಹಿಂದೆ ವಕ್ತ್ರಾದ್ಯಾನುಕೂಲ್ಯಗಳನ್ನು ಸಾಕ್ಷಾತ್ತಾಗಿ ಸಾಧನೆ ಮಾಡಬೇಕೆಂದು ಹೇಳಿದ್ದರು. ಅದನ್ನು ಉಪಪಾದನೆ ಮಾಡುವುದಕ್ಕಾಗಿ ಮೊದಲು 'ನನ್ವತ್ರ' ಎಂಬ ಗ್ರಂಥದಿಂದ ಆಶಂಕೆ ಮಾಡುತ್ತಿದ್ದಾರೆ.

ಗುರುಗುರುತ್ವ, ಅಶೇಷಶಾಸ್ತ್ರಪ್ರಭವತ್ವ, ಅಜಾದಿಭ್ಯಃ ಉದಿತತ್ವ ಹೇತುಗಳಿಗೆ ಶ್ರುತವಾದ 'ಮಾನಮ್' ಎಂಬ ಸಾಧ್ಯದ ಜೊತೆ ಅನ್ವಯವನ್ನು ಮಾಡಬೇಕು. ಇದನ್ನು ಬಿಟ್ಟು ಸಾರ್ವಜ್ಞವನ್ನು ಸಾಧಿಸಿ ತನ್ಮೂಲಕ ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವ, ವಿವಕ್ಷಾ ಇತ್ಯಾದಿ ರೂಪದಲ್ಲಿರುವ ವಕ್ತ್ರಾನುಕೂಲ್ಯವೆಂಬ ಅಶ್ರುತವಾದ ಸಾಧ್ಯವನ್ನು ಕಲ್ಪನೆ ಮಾಡುವುದು ಅನಾವಶ್ಯಕ. ಇದರಂತೆ ಗುರುತ್ವ, ಅಜಾದಿತ್ವ, ಮೋಕ್ಷಪ್ರಯೋಜನವಿರುವಿಕೆ' ಎಂಬ ಹೇತುಗಳಿಗೆ 'ಮಾನತ್ವ' ಎಂಬ ಶ್ರುತವಾದ ಸಾಧ್ಯದ ಜೊತೆಗೆ ಅನ್ವಯವನ್ನು ಮಾಡಬೇಕು. ಇದನ್ನು ಬಿಟ್ಟು ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳೆಂಬ ಅಶ್ರುತವಾದ ಸಾಧ್ಯದ ಜೊತೆಗೆ ಅನ್ವಯ ಮಾಡುವುದು ಯುಕ್ತವಾಗುವುದಿಲ್ಲ. ಶ್ರುತಹಾನ, ಅಶ್ರುತಕಲ್ಪನೆ ದೋಷಗಳು ಬರುತ್ತವೆ.

ವಿವರಣೆ – ''ಗುರುರ್ಗುರೂಣಾಂ....'' ಎಂಬ ಶ್ಲೋಕದಲ್ಲಿ ಜಗದ್ಗುರುಗಳಿಗೆ ಗುರುತ್ವ, ಅಶೇಷಾರ್ಥಪ್ರತಿಪಾದಕಶಾಸ್ತ್ರಪ್ರಭವತ್ವ, ಅಜಾದಿಭ್ಯಃ ಉದಿತತ್ವ ಈ ಹೇತುಗಳಿಂದ ವಕ್ತ್ರಾನುಕೂಲ್ಯವನ್ನು ಸಾಧಿಸಿ, ಅದರಿಂದ ಆಪ್ತವಾಕ್ಯತ್ವವನ್ನು ಸಾಧಿಸಿ, ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸಬೇಕು,

ಹಾಗೆಯೇ ಗುರುತ್ವ, ಅಜಾದಿತ್ವ, ಮೋಕ್ಷಪ್ರಯೋಜನೋದ್ದೇಶಕತ್ವಹೇತುಗಳಿಂದ ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳನ್ನು ಸಾಧಿಸಬೇಕು. ಆದರಿಂದ ಕ್ರಮವಾಗಿ ಪ್ರಾಮಾಣ್ಯವನ್ನು ಸಾಧಿಸಬೇಕು ಎಂಬೀ ಅಭಿಪ್ರಾಯದಿಂದ "ಮಾನಮಿತಿ ಪರಮಸಾಧ್ಯನಿರ್ದೇಶಃ." ಎಂಬ ವಾಕ್ಯದಿಂದ ಶ್ರೀಜಯತೀರ್ಥರು ತಿಳಿಸಿದ್ದಾರೆ.

ಇದರ ಮೇಲೆ ಹೀಗೆ ಆಕ್ಷೇಪ ಮಾಡಲಾಗುತ್ತದೆ— "ಗುರುರ್ಗುರೂಣಾಂ...." ಎಂಬಲ್ಲಿ "ಯತಸ್ತದುದಿತಂ ಮಾನಂ" ಎಂದು ನೇರವಾಗಿ ಪ್ರಾಮಾಣ್ಯವನ್ನೇ ಮೇಲೆ ತಿಳಿಸಿದ ಹೇತುಗಳಿಂದ ಸಾಧಿಸಲಾಗಿದೆ ಎಂದು ಅರ್ಥವಾಗುತ್ತದೆ. ಹಾಗೆಯೇ ವ್ಯಾಖ್ಯಾನಿಸುವುದನ್ನು ಬಿಟ್ಟು ವಕ್ತೃ- ಶ್ರೋತೃ-ಪ್ರಸಂಗಾನುಕೂಲ್ಯಗಳನ್ನು ಗುರುಗುರುತ್ವ ಮುಂತಾದ ಹೇತುಗಳಿಂದ ಸಾಧಿಸಬೇಕೆಂದೂ. ಆದಕ್ಕಾಗಿ ಮಧ್ಯದಲ್ಲಿ ವಕ್ತ್ರಾನುಕೂಲ್ಯಾದಿಗಳನ್ನು ಅಧ್ಯಾಹಾರ ಮಾಡಬೇಕಿದೆ ಎಂದೂ ಹೇಳಿರುವುದೇಕೆ? ಶ್ಲೋಕ-ದಲ್ಲಿರುವ 'ಮಾನಂ' ಎಂಬ ಪದದಿಂದ ತಿಳಿಯುವ ಪ್ರಾಮಾಣ್ಯವನ್ನು ಬಿಟ್ಟು ಶ್ಲೋಕದಲ್ಲಿ ಹೇಳದಿರುವ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳನ್ನು ಸಾಧಿಸಬೇಕು ಎಂದು ಹೇಳಿದರೆ ಶ್ರುತ-ವಾದದ್ದನ್ನು ಬಿಟ್ಟಂತೆಯೂ, ಅಶ್ರುತವಾದುದನ್ನು ಸ್ವೀಕರಿಸಿದಂತೆಯೂ ಆಗುವುದಿಲ್ಲವೇ?

## ಸಾಧ್ಯಸಾಮಾನಾಧಿಕರಣ್ಯ ಸಂಪಾದನೆಗಾಗಿ ಶ್ರುತಹಾನ, ಅಶ್ರುತಕಲ್ಪನೆ ಮಾಡಬಹುದಲ್ಲವೇ?

ವಾಕ್ಯಾರ್ಥಚಂದ್ರಿಕಾ– ನನ್ವತ್ರ ವಕ್ತೃಶ್ರೋತೃಪ್ರಸಂಗಾನುಕೂಲ್ಯಾನಾಂ ಸಾಧ್ಯತ್ವೇ ಬಾದ-ರಾಯಣಶ್ರೋತೃಪ್ರಸಂಗಾನಾಂ ಪಕ್ಷತ್ವಾತ್ ಗುರುಗುರುತ್ವಾಶೇಷಶಾಸ್ತ್ರಪ್ರಭವತ್ವವಚನಗುರುತ್ವಾ-ಜಾದಿತ್ವಮೋಕ್ಷೋದ್ದೇಶ್ಯಕತ್ವಾನಾಂ ಪಕ್ಷೇ ಸತ್ತ್ವೇನ ಸಾಧ್ಯವೈಯಧಿಕರಣ್ಯಾಭಾವಾತ್ ಪ್ರಾಮಾಣ್ಯ-ಸಾಧನೇ ಚ ಶಾಸ್ತ್ರಸ್ಯ ಪಕ್ಷತ್ವೇನ ಏತೇಷಾಂ ಚ ಹೇತೂನಾಂ ಚ ತತ್ರಾಸತ್ತ್ವೇನ ಸಾಧ್ಯವೈಯ-ಧಿಕರಣ್ಯಾಪತ್ತ್ಯಾ ಬಾಧಕವಶಾತ್ ಶ್ರುತಪರಿತ್ಯಾಗೇನ ಅಶ್ರುತಕಲ್ಪನಾಯಾಮಪಿ ನ ದೋಷಃ । ಯದ್ಯಪಿ ವ್ಯಾಪ್ತಿಸತ್ತ್ವೇ ವೈಯಧಿಕರಣ್ಯಂ ನ ದೋಷಃ, ತಥಾಽಪಿ ಸಮಾನಾಧಿಕರಣಯೋರೇವ ಯತ್ರ ವ್ಯಾಪ್ತಿಗ್ರಹಃ ತತ್ರ ವೈಯಧಿಕರಣ್ಯಸ್ಯ ವ್ಯಾಪ್ತ್ಯಭಾವಸಂಪಾದಕತ್ವಾದ್ ದೋಷತ್ವಮೇವ ಇತ್ಯತಃ,

ಆಕ್ಷೇಪ – ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಸಾಧ್ಯ-ವಾದಾಗ ವಕ್ತೃ, ಶ್ರೋತೃ, ಪ್ರಸಂಗಗಳು ಪಕ್ಷಗಳಾಗುತ್ತವೆ. ಆಗ ಗುರುಗುರುತ್ವ, ಅಶೇಷಶಾಸ್ತ್ರ-

ಪ್ರಭವತ್ವ, ವಚನ, ಗುರುತ್ವ, ಅಜಾದಿತ್ವ, ಮೋಕ್ಷೋದ್ದೇಶಕತ್ವಗಳು ಪಕ್ಷದಲ್ಲಿ ಬರುತ್ತವೆ. ಸಾಧ್ಯ-ವೈಯಧಿಕರಣ್ಯಕ್ಕೆ ಅವಕಾಶವಿಲ್ಲ. ಒಂದು ವೇಳೆ ಪ್ರಾಮಾಣ್ಯವನ್ನು ಸಾಧನ ಮಾಡುವುದಾದರೆ ಶಾಸ್ತ್ರವು ಪಕ್ಷವಾಗುತ್ತದೆ. ಈ ಹೇತುಗಳು ಆ ಪಕ್ಷದಲ್ಲಿ ಇಲ್ಲದ ಕಾರಣ ಸಾಧ್ಯವೈಯಧಿಕರಣ್ಯದೋಷವು ಬರುತ್ತದೆ. ಹೀಗೆ ಬಾಧಕವಿರುವುದರಿಂದ ಶ್ರುತಪರಿತ್ಯಾಗ ಹಾಗೂ ಅಶ್ರುತಕಲ್ಪನೆಗಳನ್ನು ಮಾಡಿದರೂ ಕೂಡ ದೋಷವಿಲ್ಲ.

ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ ವ್ಯಾಪ್ತಿಯಿದ್ದರೆ ಸಾಕು ವೈಯಧಿಕರಣ್ಯವು ದೋಷ-ವಾಗುವುದಿಲ್ಲ. ಆದರೆ ಸಮಾನಾಧಿಕರಣವಾಗಿದ್ದರೆ ಮಾತ್ರ ಹೇತುಸಾಧ್ಯಗಳಿಗೆ ಎಲ್ಲಿ ವ್ಯಾಪ್ತಿಗ್ರಹ-ವಾಗುತ್ತದೋ ಅಲ್ಲಿ ವೈಯಧಿಕರಣ್ಯವು ವ್ಯಾಪ್ತಿಸಂಪಾದಕವಾಗುವುದಿಲ್ಲ. ದೋಷವೇ ಆಗುತ್ತದೆ.

ವಿವರಣೆ – 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಮಾನತ್ವವು ಸಾಧ್ಯವೆಂದು ತಿಳಿಯುತ್ತದೆ. ಶ್ರುತವಾದ ಈ ಮಾನತ್ವವನ್ನೇ ಸಾಧ್ಯವಾಗಿ ವಿವಕ್ಷಿಸಲು ಬರುವಾಗ ಅಶ್ರುತವಾದ ವಕ್ತ್ರಾದ್ಯಾನು-ಕೂಲ್ಯಗಳನ್ನು ಸಾಧ್ಯವನ್ನಾಗಿ ಪರಿಗಣಿಸುವುದು ಅಯುಕ್ತವಾಗುತ್ತದೆಂದು ಆಕ್ಷೇಪ ಮಾಡಲಾಯಿತು. ಇದನ್ನು ಪೂರ್ವಪಕ್ಷದವರು ಈಗ ಸಮರ್ಥಿಸಿಕೊಳ್ಳುತ್ತಿದ್ದಾರೆ. ಬಾಧಕವಿರುವುದರಿಂದ ಶ್ರುತಪರಿತ್ಯಾಗ ಹಾಗೂ ಅಶ್ರುತಕಲ್ಪನೆಗಳು ದೋಷವಾಗುವುದಿಲ್ಲ. ಅದು ಹೀಗೆ – ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧ್ಯವನ್ನಾಗಿ ಪರಿಗಣಿಸಿದಾಗ ಹೇತುಸಾಧ್ಯಗಳೆರಡೂ ಪಕ್ಷದಲ್ಲೇ ಬರುತ್ತವೆ. ಇಲ್ಲಿ ಅನುಮಾನಸ್ವರೂಪ ಹೀಗಿವೆ –

'ಬಾದರಾಯಣಃ ಅನುಕೂಲವಕ್ತಾ, ಅವಿಪ್ರಲಿಪ್ಸಾವಾನ್, ಸರ್ವಜ್ಞಃ, ಪಟುಕರಣಃ, ವಿವಕ್ಷಾವಾನ್, ಗುರುಗುರುತ್ವಾತ್ ಅಶೇಷಶಾಸ್ತ್ರಪ್ರಭವತ್ವಾತ್ ಉದಿತತ್ವಾತ್' ಎಂದು ಅನುಮಾನವನ್ನು ಮಾಡಿ-ದಂತಾಗುತ್ತದೆ. ಗುರುಗುರುತ್ವಾದಿ ಮೂರು ಹೇತುಗಳು ಅನುಕೂಲವಕ್ತೃತ್ವಾದಿ ಐದು ಸಾಧ್ಯಗಳು ಪಕ್ಷದಲ್ಲೇ ಬರುವುದರಿಂದ ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯವು ಪ್ರಾಪ್ತವಾಗುತ್ತದೆ. 'ಬ್ರಹ್ಮಾದಯಃ ತತ್ವಜ್ಞಾನಯೋಗ್ಯಾಃ ಜಗದ್ಗುರುತ್ವಾತ್' 'ಬ್ರಹ್ಮಾದಯಃ ವಕ್ತೃಪ್ರೇಮಾಸ್ಪದಾಃ ಅಜಾದಿತ್ವಾತ್' ಎಂಬುದಾಗಿ ಶ್ರೋತೃಗಳಾದ ಬ್ರಹ್ಮಾದಿಗಳನ್ನು ಪಕ್ಷವನ್ನಾಗಿ ಮಾಡಿ ವಕ್ತೃಪ್ರೇಮಾಸ್ಪದತ್ವವನ್ನು ಸಾಧಿಸಿದಾಗ ಹೇತುಸಾಧ್ಯಗಳು ಪಕ್ಷದಲ್ಲೇ ಪ್ರಾಪ್ತವಾಗುತ್ತವೆ.

'ಪ್ರಸಂಗಃ ಅನುಕೂಲಃ ಮೋಕ್ಷೋದ್ದೇಶಕತ್ವಾತ್' ಎಂಬ ಅನುಮಾನದಲ್ಲಿ ಪ್ರಸಂಗವು ಪಕ್ಷವಾಗಿದೆ. ಆನುಕೂಲ್ಯವು ಸಾಧ್ಯವಾಗಿದೆ. ಇಲ್ಲೂ ಕೂಡ ಹೇತುಸಾಧ್ಯಗಳು ಪಕ್ಷದಲ್ಲೇ ಬರುವುದರಿಂದ ಸಾಮಾನಾಧಿಕರಣ್ಯವು ಇರುತ್ತದೆ. ಸಾಧ್ಯವೈಯಧಿಕರಣ್ಯದೋಷವು ಬರುವುದಿಲ್ಲ.

ಒಂದು ವೇಳೆ ಪ್ರಾಮಾಣ್ಯವನ್ನು ಸಾಧ್ಯವನ್ನಾಗಿ ವಿವಕ್ಷಿಸುವುದಾದರೆ ಆಗ ಶಾಸ್ತ್ರವು ಪಕ್ಷವಾಗುತ್ತದೆ. ಅಲ್ಲಿ ಈ ಯಾವ ಹೇತುಗಳೂ ಹಾಗೂ ಸಾಧ್ಯಗಳು ಇರುವುದಿಲ್ಲ. ವೈಯಧಿಕರಣ್ಯದೋಷವು ಬರುತ್ತದೆ. ಹೀಗೆ ಬಾಧಕವಿರುವ ಕಾರಣ ಶ್ರುತವಾದ 'ಮಾನಮ್' ಎಂಬುದನ್ನು ಸಾಧ್ಯವನ್ನಾಗಿ ಹೇಳದೇ ಅಶ್ರುತವಾದ ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧ್ಯವನ್ನಾಗಿ ಕಲ್ಪನೆ ಮಾಡುತ್ತೇವೆ.

ವಾಸ್ತವಿಕವಾಗಿ ಇಲ್ಲಿ ಪೂರ್ವಪಕ್ಷ ಮಾಡುವವರು ವೈಯಧಿಕರಣ್ಯವು 'ನಮ್ಮ ಸಿದ್ಧಾಂತದಲ್ಲಿ ದೋಷವೇ ಆಗುವುದಿಲ್ಲ' ಎಂದು ಉತ್ತರಿಸಬಹುದಿತ್ತು. ಆದರೆ ವೈಯಧಿಕರಣ್ಯವನ್ನು ಎಲ್ಲೆಡೆಯೂ ದೋಷವಲ್ಲವೆಂದು ಪರಿಗಣಿಸಲಾಗದು. ಕೆಲವು ಸಾಧ್ಯಸಾಧನಗಳು ಸಮಾನಾಧಿಕರಣವಾದಾಗ ಮಾತ್ರ ಸಾಧ್ಯಸಾಧನಭಾವವನ್ನು ಹೊಂದುತ್ತವೆ. ಉದಾಹರಣೆ – ಕೃತಕತ್ವ ಮತ್ತು ಅನಿತ್ಯತ್ವ. ಕೃತಕತ್ವ ಘಟದಲ್ಲಿದ್ದಾಗ ಪಟದಲ್ಲಿ ಅನಿತ್ಯತ್ವವನ್ನು ಸಾಧನೆ ಮಾಡುವುದು ತಪ್ಪಾಗುತ್ತದೆ. ಘಟದಲ್ಲೇ ಕೃತಕತ್ವ-ವಿರಬೇಕು. ಆಗ ಮಾತ್ರ ಆ ಘಟದಲ್ಲಿ ಅನಿತ್ಯತ್ವವನ್ನು ಸಾಧನೆ ಮಾಡಬಹುದು. ಆದ್ದರಿಂದ ಯಾವ ಸಾಧ್ಯಸಾಧನಗಳು ಸಮಾನಾಧಿಕರಣವಾದ ಮಾತ್ರ ಸಾಧ್ಯಸಾಧನಭಾವವನ್ನು ಹೊಂದುತ್ತವೋ ಅಂತಹ ಧರ್ಮಗಳು ವ್ಯಧಿಕರಣವಾದರೆ ದೋಷವೇ ಆಗುತ್ತದೆ. ಆದ್ದರಿಂದ ಪ್ರಕೃತ ಪೂರ್ವಪಕ್ಷದಲ್ಲಿ ವೈಯ-ಧಿಕರಣ್ಯವನ್ನು ದೋಷವೇ ಅಲ್ಲವೆಂದು ಪರಿಗಣಿಸಿಲ್ಲ.

## 'ತದುದಿತಂ' ಎಂಬ ಪದದಿಂದ ವೈಯಧಿಕರಣ್ಯದೋಷಪರಿಹಾರ

ವಾಕ್ಯಾರ್ಥಚಂದ್ರಿಕಾ— ಸ್ಯಾದೇತದೇವಂ ಯದ್ಯತ್ರ 'ಗುರುರ್ಗುರೂಣಾಮ್' ಇತ್ಯಾ-ದ್ಯೇವ ಶ್ರೂಯೇತ, 'ತದುದಿತಮ್' ಇತಿ ಚ ಶ್ರವಣಾತ್ । ತಸ್ಯ ಚ 'ತೇನ ಬಾದರಾಯ-ಣೇನೋದಿತಮ್' ಇತಿ ತೃತೀಯಾತತ್ಪುರುಷತ್ವಾತ್ ತೇನ ತೃತೀಯಾಂತಬಾದರಾಯಣಪದ-ವಿಶೇಷಣತಯಾ ಹೇತುಶರೀರಪ್ರವಿಷ್ಟಾನಾಂ 'ಗುರೂಣಾಂ ಗುರುಃ' ಇತ್ಯಾದೀನಾಮಪಿ ವಿಪರಿಣಾಮಸೂಚನಾತ್ 'ತದುದಿತಮ್' ಇತ್ಯತ್ರ 'ತತ್' ಇತ್ಯಸ್ಯ ಭಿನ್ನಪದತ್ವೇ ವಾ ಪೂರ್ವಾರ್ಧೋಕ್ತಪ್ರಥಮಾಂತಾನಾಂ ತೃತೀಯಾಂತತಯಾ ವಿಪರಿಣಾಮೇ 'ಉದಿತಮ್' ಇತ್ಯನೇನ ಸಂಬಂಧೇ 'ತಾದೃಶಬಾದರಾಯಣೋದಿತಂ ತಚ್ಛಾಸ್ತ್ರಂ ಮಾನಮ್' ಇತಿ ಸಂಬಂಧೇ ಸತಿ 'ಗುರೂಣಾಂ ಗುರುಣಾ ಬಾದರಾಯಣೇನೋದಿತತ್ವಸ್ಯ, 'ಶಾಸ್ತ್ರಪ್ರಭವೇನ ಬಾದರಾಯ-ಣೇನೋದಿತತ್ವಸ್ಯ, 'ಗುರುಭ್ಯೋಽಜಾದಿಭ್ಯಃ ಉದಿತತ್ವಸ್ಯ, 'ತದರ್ಥತಃ ಉದಿತತ್ವಸ್ಯ ಚ ಲಾಭಾತ್ ತಸ್ಯ ಚ ಶಾಸ್ತ್ರನಿಷ್ಠತ್ವಸಂಭವಾನ್ನ ವ್ಯಧಿಕರಣತಾ । ಯದ್ಯಪ್ಯತ್ರಾಪಿ ಶ್ರುತಾಶ್ರುತ-

ಪರಿತ್ಯಾಗಕಲ್ಪನೇ ಸಮಾನೇ, ತಥಾಪಿ ತತ್ರ ವಾಕ್ಯಾರ್ಥವಿಷಯೇ ತೇ, ಅತ್ರ ತು ವಿಭಕ್ತ್ಯರ್ಥ-ಮಾತ್ರವಿಷಯೇ ತೇ, ಇತಿ ವಿಶೇಷ ಇತಿ ವಾ, ಅತ್ರ ತದುದಿತಮಿತಿ ವಿಭಕ್ತಿಪರಿಣಾಮಜ್ಞಾಪಕಸ್ಯೇವ, ತತ್ರ ಜ್ಞಾಪಕಸ್ಯಾಭಾವ ಇತಿ ವಾ ವಿಶೇಷಃ, ಇತಿ ನಾನುಪಪತ್ತಿಃ ಇತ್ಯಭಿಪ್ರೇತ್ಯಾಹ – ಯದ್ಯಪೀತಿ ॥

ಒಂದು ವೇಳೆ 'ಗುರುರ್ಗುರೂಣಾಂ' ಎಂದಷ್ಟೇ ಶ್ಲೋಕದಲ್ಲಿ ಹೇಳಿದ್ದಲ್ಲಿ ನೀವು ಹೇಳಿದ್ದನ್ನು ಅಂಗೀಕರಿಸಬಹುದಿತ್ತು. ಆದರೆ 'ತದುದಿತಂ' ಎಂಬುದನ್ನೂ ಕೂಡ ಶ್ಲೋಕದಲ್ಲಿ ಹೇಳಿರುತ್ತಾರೆ. 'ತದುದಿತಂ' ಎಂಬುದಕ್ಕೆ 'ತೇನ ಉದಿತಂ ತದುದಿತಮ್' ಎಂಬುದಾಗಿ ತೃತೀಯಾತತ್ಪುರುಷಸಮಾಸವನ್ನು ಮಾಡಬೇಕು. ತೇನ = ಬಾದರಾಯಣರಿಂದ, ಉದಿತಂ = ಉಪದೇಶಿಸಲ್ಪಟ್ಟದ್ದು ಎಂದರ್ಥ. ತೃತೀಯಾಂತವಾದ ಬಾದರಾಯಣಪದದಲ್ಲಿ ಹೇತುಶರೀರಪ್ರವಿಷ್ಟವಾದ 'ಗುರೂಣಾಂ ಗುರುಃ' ಇತ್ಯಾದಿಗಳನ್ನು ವಿಪರಿಣಾಮ ಮಾಡಿಕೊಂಡು ಅನ್ವಯ ಮಾಡಿಕೊಳ್ಳಬೇಕೆಂದು ಇದರಿಂದ ಸೂಚನೆ ಮಾಡಿದ್ದಾರೆ. 'ಗುರೂಣಾಂ ಗುರುಣಾ ಶಾಸ್ತ್ರಾಣಾಂ ಪ್ರಭವೇನ ಬಾದರಾಯಣೇನ ಉದಿತತ್ವಾತ್' ಎಂಬುದಾಗಿ ಹೇಳಿದಂತಾಯಿತು.

ಅಥವಾ 'ತದುದಿತಂ' ಎಂಬಲ್ಲಿ ತತ್ ಎಂಬುದನ್ನು ಭಿನ್ನಪದವೆಂದು ತಿಳಿಯಬೇಕು. ಆಗ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಪ್ರಥಮಾಂತವಾದ ಪದಗಳನ್ನು ತೃತೀಯಾಂತವಾಗಿ ವಿಪರಿಣಾಮ ಮಾಡಿಕೊಂಡು ಉದಿತಂ ಎಂಬುದರ ಜೊತೆ ಅನ್ವಯ ಮಾಡಿಕೊಳ್ಳಬೇಕು. ಈ ಪಕ್ಷದಲ್ಲಿ 'ತತ್' ಎಂಬ ಪದಕ್ಕೆ 'ಶಾಸ್ತ್ರಂ' ಎಂದರ್ಥ. ಈಗ ಅನ್ವಯವನ್ನು ಹೀಗೆ ಹೇಳಿದಂತಾಗುತ್ತದೆ. 'ಗುರೂಣಾಂ ಗುರುಣಾ ಶಾಸ್ತ್ರಾಣಾಂ ಪ್ರಭವೇನ ಬಾದರಾಯಣೇನ ಉದಿತಂ ಶಾಸ್ತ್ರಂ ಮಾನಮ್' ಎಂದು. ಹೀಗೆ ಅನ್ವಯವನ್ನು ಮಾಡಿದಾಗ ಗುರೂಣಾಂ ಗುರುಣಾ ಬಾದರಾಯಣೇನ ಉದಿತತ್ವ' ಎಂಬ ಹೇತುವು, 'ಶಾಸ್ತ್ರಪ್ರಭವೇನ ಬಾದರಾಯಣೇನ ಉದಿತತ್ವ' ಎಂಬ ಹೇತುವು, 'ಗುರುಭ್ಯಃ ಅಜಾದಿಭ್ಯಃ ಉದಿತತ್ವ' ಎಂಬ ಹೇತುವು, 'ತದರ್ಥತಃ ಉದಿತತ್ವ' ಎಂಬ ಹೇತುವು ಪಕ್ಷೀಭೂತವಾದ ಶಾಸ್ತ್ರದಲ್ಲಿ ಇರುತ್ತದೆ. ಆದ್ದರಿಂದ ವೈಯಧಿಕರಣ್ಯದೋಷಕ್ಕೆ ಅವಕಾಶವೇ ಇಲ್ಲ.

ವಾಸ್ತವಿಕವಾಗಿ ಈ ಪಕ್ಷದಲ್ಲೂ ಕೂಡ ಶ್ರುತಪರಿತ್ಯಾಗ, ಅಶ್ರುತಕಲ್ಪನೆಗಳು ಇದ್ದೇ ಇವೆ. ಏಕೆಂದರೆ ಶ್ರುತವಾದ ಪ್ರಥಮಾವಿಭಕ್ತಿಯನ್ನು ಪರಿತ್ಯಾಗ ಮಾಡಿ ಅಶ್ರುತವಾದ ತೃತೀಯಾವಿಭಕ್ತಿಯನ್ನು ಕಲ್ಪನೆ ಮಾಡಿದ್ದೇವೆ. ಆದರೆ ಕೇವಲ ವಿಭಕ್ತ್ಯರ್ಥದಲ್ಲಷ್ಟೇ ಈ ಶ್ರುತಪರಿತ್ಯಾಗ, ಅಶ್ರುತಕಲ್ಪನೆಗಳು ಇರುತ್ತವೆ. ಆದರೆ ಹಿಂದೆ ಆಕ್ಷೇಪ ಮಾಡಿದವರ ಪಕ್ಷದಲ್ಲಿ ವಾಕ್ಯಾರ್ಥವಿಷಯದಲ್ಲೇ ಶ್ರುತಪರಿತ್ಯಾಗ ಅಶ್ರುತಕಲ್ಪನೆಗಳು ದೋಷವಾಗಿದ್ದವು. ವಾಕ್ಯಾರ್ಥವಿಷಯದಲ್ಲಿ ಈ ದೋಷಗಳನ್ನು ಕಲ್ಪನೆ ಮಾಡು-

ವುದಕ್ಕಿಂತ ವಿಭಕ್ತ್ಯರ್ಥವಿಷಯದಲ್ಲಿ ಕಲ್ಪನೆ ಮಾಡುವುದು ಲಘುಭೂತವಾಗಿದೆ ಎಂದಷ್ಟೇ ಅಭಿಪ್ರಾಯ. ಮತ್ತು 'ತದುದಿತಂ' ಎಂಬುದಕ್ಕೆ 'ತೇನ ಉದಿತಂ' ಎಂಬ ತೃತೀಯಾತತ್ಪುರುಷಸಮಾಸವೇ ವಿಭಕ್ತಿ-ಪರಿಣಾಮಕ್ಕೆ ಜ್ಞಾಪಕವಾಗಿದೆ. ಆದರೆ ಆಕ್ಷೇಪ ಮಾಡುವವನ ಪಕ್ಷದಲ್ಲಿ ಅಶ್ರುತಕಲ್ಪನೆಗೆ ಯಾವುದೇ ಜ್ಞಾಪಕಗಳು ಇರುವುದಿಲ್ಲ. ಈ ವಿಶೇಷವನ್ನು ಗಮನಿಸಬೇಕು. ಆದ್ದರಿಂದ ನಮ್ಮ ಪಕ್ಷದಲ್ಲಿ ಯಾವುದೇ ಅನುಪಪತ್ತಿಗಳು ಇರುವುದಿಲ್ಲ. ಈ ಅಭಿಪ್ರಾಯದಿಂದ ''ಯದ್ಯಪಿ'' ಇತ್ಯಾದಿಯಾಗಿ ಸುಧಾಗ್ರಂಥವು ಹೊರಟಿದೆ.

ವಿವರಣೆ– ವಸ್ತುತಃ ಗುರುಗುರುತ್ವ ಅಶೇಷಾರ್ಥಪ್ರತಿಪಾದಕಪ್ರಭವತ್ವ ಮೊದಲಾದ ಹೇತುಗಳಿಂದ ಪ್ರಾಮಾಣ್ಯವನ್ನು ಸಾಧಿಸಿದರೆ ಹೇತುಸಾಧ್ಯಗಳು ಒಂದೇ ಕಡೆ ಬರುವುದಿಲ್ಲ. ವ್ಯಾಸರು ಜಗದ್ಗುರು-ಗಳಿಗೆ ಗುರುಗಳಾಗಿರುವುದರಿಂದ, ಅಶೇಷಾರ್ಥಪ್ರತಿಪಾದಕ ಆಗಮಪ್ರಭವರಾದುದರಿಂದ, ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು ಹೇಳಿರುವುದರಿಂದ ಬ್ರಹ್ಮಸೂತ್ರವು ಪ್ರಮಾಣ, ಹಾಗೆಯೇ ಶ್ರೋತೃಗಳು ತತ್ವಜ್ಞಾನಯೋಗ್ಯರಾದುದರಿಂದ, ಬ್ರಹ್ಮಾದಿಗಳಾದುದರಿಂದ ಬ್ರಹ್ಮಸೂತ್ರ ಪ್ರಮಾಣ ಎಂದು ಹೇಳಿ-ದಂತಾಗುತ್ತದೆ. ಹೀಗೆ ಹೇಳಿದಾಗ ಗುರುಗುರುತ್ವ ಮುಂತಾದ ಹೇತುಗಳೆಲ್ಲ ವ್ಯಾಸರಲ್ಲಿ, ಶ್ರೋತೃಗಳಲ್ಲಿ, ಪ್ರಸಂಗದಲ್ಲಿ ಇದ್ದಂತಾಯಿತು. ಪ್ರಾಮಾಣ್ಯವು ಗ್ರಂಥದಲ್ಲಿ ಎಂದು ಹೇತುಸಾಧ್ಯಗಳು ಬೇರೆ ಬೇರೆ ಕಡೆ ಬಂದುದರಿಂದ ಸಾಧ್ಯಸಾಧನಭಾವವು ಕೂಡುವುದಿಲ್ಲ ಎಂದು ಆಕ್ಷೇಪಕ್ಕೆ ಅವಕಾಶವಿದೆ. ಆದರೆ ಈ ಆಕ್ಷೇಪವನ್ನು ಹೀಗೆ ಪರಿಹರಿಸಬಹುದಾಗಿದೆ —

ಶ್ಲೋಕದಲ್ಲಿ ''ತದುದಿತಂ'' ಎಂದಿದೆ. ಅದಕ್ಕೆ ಹೊಂದಿಕೊಳ್ಳುವಂತೆ 'ಗುರೂಣಾಂ ಗುರುಃ, ಪ್ರಭವಃ,' ಮೊದಲಾದ ಪದಗಳನ್ನು ಗುರೂಣಾಂ ಗುರುಣಾ, ಪ್ರಭವೇನ, ಯಾವ ಕಾರಣದಿಂದ ಎಂಬೀ ರೀತಿಯಲ್ಲಿ ತೃತೀಯಾಂತವಾಗಿ ಬದಲಿಸಿ ಜಗದ್ಗುರುಗಳ ಗುರುಗಳಾದ ಅಶೇಷಾರ್ಥಶಾಸ್ತ್ರಪ್ರಭವರಾದ ವ್ಯಾಸರಿಂದ ಗುರುಗಳಾದ ಬ್ರಹ್ಮಾದಿಗಳಿಗೆ ಮೋಕ್ಷಕ್ಕಾಗಿ ಹೇಳಲ್ಪಟ್ಟಿರುವ ಶಾಸ್ತ್ರವು ಪ್ರಮಾಣ ಎಂದು ಅರ್ಥೈಸಬೇಕು.

ಮತ್ತೊಂದು ಪಕ್ಷದಲ್ಲಿ ''ತದುದಿತಂ'' ಎಂಬುದು ಭಿನ್ನ ಪದ, ತದ್ = ಆ ಶಾಸ್ತ್ರವು, ಉದಿತಂ = ಹೇಳಲ್ಪಟ್ಟಿದೆಯೋ, ಅತಃ = ಆದುದರಿಂದ, ಮಾನಂ= ಪ್ರಮಾಣವು ಎಂದು ಅನ್ವಯಾರ್ಥ ಹೇಳಬೇಕು.

ಹೀಗೆ ವ್ಯಾಖ್ಯಾನಿಸಿದಾಗ ಪ್ರಾಮಾಣ್ಯವು ಸಾಧ್ಯ, ಇದು ಇರುವುದು ಶಾಸ್ತ್ರದಲ್ಲಿ. ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ಗುರುಗಳಾದ ಅಶೇಷಾರ್ಥಪ್ರತಿಪಾದಕಗಳಾದ ವೇದಭಾರತಾದಿಗಳಿಗೆ ಮುಖ್ಯಪ್ರವರ್ತಕ-

ರಾದ ವ್ಯಾಸರಿಂದ ಬ್ರಹ್ಮಾದಿಗಳಿಗೆ ಅವರ ಮೋಕ್ಷಕ್ಕಾಗಿ ಹೇಳಲ್ಪಟ್ಟಿರುವಿಕೆ ಎಂಬುದು ಹೇತು, ಇದೂ ಶಾಸ್ತ್ರದಲ್ಲಿಯೇ ಇದೆ. ಹೀಗೆ ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯ (ಒಂದೇ ಕಡೆ ಇರುವಿಕೆ) ಬರುತ್ತದೆ.

## ಹೇತುಶರೀರದಲ್ಲಿ ಬಾದರಾಯಣ ಮತ್ತು ಅಜಪದಗಳು ಸೇರಿರುವುದಿಲ್ಲ

ವಾಕ್ಯಾರ್ಥಚಂದ್ರಿಕಾ– ನನ್ವತ್ರ ಗುರೂಣಾಂ ಗುರುಣಾ ಬಾದರಾಯಣೇನೋದಿತತ್ವರೂಪೇ, ಶಾಸ್ತ್ರಪ್ರಭವೇನ ಬಾದರಾಯಣೇನೋದಿತತ್ವರೂಪೇ ಚ ಹೇತೌ ಬಾದರಾಯಣಗ್ರಹಣಸ್ಯ, ಗುರುಭ್ಯೋಽಜಾದಿಭ್ಯ ಉದಿತತ್ವರೂಪಹೇತೌ ಅಜಾದಿಗ್ರಹಣಸ್ಯ ಚ ವಿವಕ್ಷಿತತ್ವೇ, ಬಾದರಾಯಣಸ್ಯ ಗುರುಗುರುತ್ವಾವ್ಯಭಿಚಾರಾತ್, ಅಜಾದೀನಾಂ ಚ ಗುರುತ್ವಾವ್ಯಭಿಚಾರಾತ್ ವಿಶೇಷಣವೈಯರ್ಥ್ಯಾಪಾತೇನ, ಗುರೂಣಾಂ ಗುರುರಿತ್ಯಾದೀನಾಂ ಹೇತುತ್ವೋಪಪತ್ತಯೇ, ಬಾದರಾಯಣಾಜಾದಿಗ್ರಹಣಸ್ಯ ಪ್ರಕೃತಾಭಿಪ್ರಾಯೇಣ ಪ್ರಯೋಗೇಣ ಹೇತುಶರೀರಾಪ್ರವೇಶಸ್ಯ ವಕ್ತವ್ಯತ್ವಾತ್; ಗುರೂಣಾಂ ಗುರುಣೋದಿತತ್ವಸ್ಯ, ಶಾಸ್ತ್ರಪ್ರಭವತ್ವೇನೋದಿತತ್ವಸ್ಯ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವಸ್ಯೈವ ಚ ಹೇತುತ್ವೇ ವಕ್ತವ್ಯೇ; ಪ್ರಥಮಹೇತುದ್ವಯಸ್ಯ ಬೌದ್ಧಾಗಮೇ, ತೃತೀಯಸ್ಯ ಜೈನಾಗಮೇ, ತದರ್ಥತಃ ಉದಿತತ್ವಸ್ಯ ತದುಭಯತ್ರಾಪಿ, ಪೂರ್ವಹೇತುತ್ರಯಸ್ಯ ಚ ನರ್ಮಾದಿವಾಕ್ಯೇ ಮಾನತಾವ್ಯಭಿಚಾರಾತ್; ಗುರೂಣಾಂ ಗುರುತ್ವಾದೀನಾಂ ಚ ವಕ್ತ್ರಾನುಕೂಲ್ಯಾದಿರೂಪಾಧ್ಯಾಹೃತಸಾಧ್ಯಾವ್ಯಭಿಚಾರಾತ್, ಅಧ್ಯಾಹೃತಸಾಧ್ಯಾನ್ವಯ ಪಕ್ಷ ಏವ ಯುಕ್ತಃ ಇತ್ಯತಃ ಪ್ರತ್ಯೇಕಮೇಷಾಂ ಮಾನತಾವ್ಯಭಿಚಾರೇಽಪಿ 'ಗುರೂಣಾಂ ಗುರುಣೋದಿತತ್ವೇ ಸತಿ, ಶಾಸ್ತ್ರಪ್ರಭವೇನೋದಿತತ್ವೇ ಸತಿ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ, ತದರ್ಥತಃ ಉದಿತತ್ವಾತ್' ಇತಿ ವಿಶಿಷ್ಟಹೇತೋಃ ಕ್ವಚಿದ್ ವಿಶೇಷಣಾಭಾವೇನ, ಕ್ವಚಿತ್ ವಿಶೇಷ್ಯಾಭಾವೇನೋಕ್ತಸ್ಥಲೇಷು ಅಭಾವಾನ್ನಾತ್ರಾಪಿ ವ್ಯಭಿಚಾರಪ್ರಸಕ್ತಿರಿತ್ಯಾಹ – ಯದ್ಯಪಿ ಚೇತಿ ॥

ಪ್ರಶ್ನೆ – 'ಗುರೂಣಾಂ ಗುರುಣಾ ಬಾದರಾಯಣೇನ ಉದಿತತ್ವಮ್' ಎಂಬ ಹೇತುವಿನಲ್ಲಿ ಹಾಗೂ 'ಶಾಸ್ತ್ರಪ್ರಭವೇನ ಬಾದರಾಯಣೇನ ಉದಿತತ್ವಮ್' ಎಂಬ ಹೇತುವಿನಲ್ಲಿ ಬಾದರಾಯಣ ಎಂಬ ಪದವು ಹೇತುಶರೀರದಲ್ಲಿ ಪ್ರವಿಷ್ಟವಾಗಿದೆ ಎಂದು ಹೇಳುವುದಾದರೆ ಮತ್ತು 'ಗುರುಭ್ಯಃ ಅಜಾದಿಭ್ಯಃ ಉದಿತತ್ವಮ್' ಎಂಬ ಹೇತುವಿನಲ್ಲಿ ಅಜಾದಿಗ್ರಹಣವು ಹೇತುಶರೀರದಲ್ಲಿ ಪ್ರವಿಷ್ಟವಾಗಿದೆ ಎಂದು ವಿವಕ್ಷಿಸುವುದಾದರೆ 'ಗುರೂಣಾಂ ಗುರುಃ' ಎಂಬ ಪದವು ವ್ಯರ್ಥವಾಗುತ್ತದೆ 'ಶಾಸ್ತ್ರಪ್ರಭವ' ಎಂಬ ಪದವು ವ್ಯರ್ಥವಾಗುತ್ತದೆ. ಮತ್ತು 'ಗುರು' ಎಂಬ ಪದವು ವ್ಯರ್ಥವಾಗುತ್ತದೆ. ಏಕೆಂದರೆ ಬಾದ-

ರಾಯಣರು ಗುರುಗುರುತ್ವದಿಂದ ಅವ್ಯಭಿಚರಿತರಾಗಿದ್ದಾರೆ. ಬ್ರಹ್ಮಾದಿದೇವತೆಗಳೂ ಕೂಡ ಗುರುತ್ವ-ದಿಂದ ಅವ್ಯಭಿಚರಿತರಾಗಿದ್ದಾರೆ. ಹಾಗಾಗಿ ವಿಶೇಷಣಕ್ಕೆ ವೈಯರ್ಥ್ಯವು ಪ್ರಾಪ್ತವಾಗುತ್ತದೆ. 'ಗುರೂಣಾಂ ಗುರುಃ' ಇತ್ಯಾದಿಗಳಿಗೆ ಹೇತುತ್ವವು ಉಪಪನ್ನವಾಗಬೇಕೆಂದರೆ ಮತ್ತು 'ಗುರುಭ್ಯಃ ಉದಿತತ್ವಮ್' ಎಂಬುದಕ್ಕೆ ಹೇತುತ್ವವು ಉಪಪನ್ನವಾಗಬೇಕೆಂದರೆ ಬಾದರಾಯಣ ಎಂಬ ಪದವನ್ನು ಅಜಾದಿ ಎಂಬ ಪದವನ್ನು ಹೇತುಶರೀರದಲ್ಲಿ ಸೇರಿಸಬಾರದು. ಹಾಗಾಗಿ 'ಗುರೂಣಾಂ ಗುರುಣಾ ಉದಿತತ್ವಮ್' 'ಶಾಸ್ತ್ರಪ್ರಭವೇನ ಉದಿತತ್ವಮ್' 'ಗುರುಭ್ಯಃ ಶ್ರೋತೃಭ್ಯಃ ಉದಿತತ್ವಮ್' ಎಂಬುದನ್ನು ಹೇತು ಎಂದು ಹೇಳಿದಂತಾಯಿತು. ಮೊದಲಿನ ಎರಡು ಹೇತುಗಳಿಗೆ ಬೌದ್ಧಾಗಮದಲ್ಲಿ ವ್ಯಭಿಚಾರವಿದೆ. ಮೂರನೆಯ ಹೇತುವಿಗೆ ಜೈನಾಗಮದಲ್ಲಿ ವ್ಯಭಿಚಾರವಿದೆ. 'ತದರ್ಥತಃ ಉದಿತತ್ವಮ್' ಎಂಬ ಹೇತುವಿಗೆ ಎರಡೂ ಕಡೆ ವ್ಯಭಿಚಾರವಿದೆ. ಮೂರೂ ಹೇತುಗಳಿಗೆ ನರ್ಮಾದಿ ವಾಕ್ಯದಲ್ಲಿ ಪ್ರಾಮಾಣ್ಯದಿಂದ ವ್ಯಭಿಚಾರವಿದೆ. ಆದ್ದರಿಂದ ಗುರೂಣಾಂ ಗುರುತ್ವಾತ್ ಇತ್ಯಾದಿ ಹೇತುಗಳಿಗೆ ವಕ್ತ್ರಾನುಕೂಲ್ಯವೇ ಮೊದಲಾದ ಅಧ್ಯಾ-ಹೃತವಾದ ಸಾಧ್ಯದ ಜೊತೆ ವ್ಯಭಿಚಾರವು ಇರುವುದಿಲ್ಲ. ಹಾಗಾಗಿ ಅಧ್ಯಾಹೃತವಾದ ಸಾಧ್ಯಾನ್ವಯ-ಪಕ್ಷವೇ ಯುಕ್ತವಾಗಿದೆ ಎಂದು ಹೇಳಬೇಕಲ್ಲವೇ?

ಉತ್ತರ – ಇದು ತಪ್ಪು. ಈ ಹೇತುಗಳಿಗೆ ಪ್ರತ್ಯೇಕವಾಗಿ ಪ್ರಾಮಾಣ್ಯದಿಂದ ವ್ಯಭಿಚಾರ-ದೋಷವಿದ್ದರೂ ಕೂಡ 'ಗುರೂಣಾಂ ಗುರುಣಾ ಉದಿತತ್ವೇ ಸತಿ, ಶಾಸ್ತ್ರಪ್ರಭವೇನ ಉದಿತತ್ವೇ ಸತಿ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ, ತದರ್ಥತಃ ಉದಿತತ್ವಾತ್' ಎಂಬ ವಿಶಿಷ್ಟವಾದ ಹೇತುವನ್ನು ವಿವಕ್ಷಿಸಬೇಕು. ಆಗ ಕೆಲವೆಡೆ ವಿಶೇಷಣವಿಲ್ಲದ ಪ್ರಯುಕ್ತ, ಕೆಲವೆಡೆ ವಿಶೇಷ್ಯವಿಲ್ಲದ ಪ್ರಯುಕ್ತ ವ್ಯಭಿಚಾರ ದೋಷವು ಪರಿಹಾರವಾಗುತ್ತದೆ. ಈ ಅಭಿಪ್ರಾಯವನ್ನು ತಿಳಿಸಲು 'ಯದ್ಯಪಿ ಚ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಯಾವ ಬಾದರಾಯಣರು ಇದ್ದಾರೋ ಅವರು ಗುರುಗಳಿಗೆ ಗುರು ಆಗಿಯೇ ಇರುತ್ತಾರೆ. ಗುರುಗಳಿಗೆ ಗುರು ಆಗದ ಬಾದರಾಯಣರು ಇದ್ದಲ್ಲಿ ಅವರನ್ನು ವ್ಯಾವೃತ್ತಿ ಮಾಡು-ವುದಕ್ಕಾಗಿ 'ಗುರೂಣಾಂ ಗುರುಃ' ಎಂಬ ವಿಶೇಷಣವನ್ನು ಹೇಳಬೇಕಾಗಿತ್ತು. ಆದರೆ ಹಾಗಿಲ್ಲದ ಕಾರಣ ಬಾದರಾಯಣ ಎಂಬ ವಿಶೇಷ್ಯವಾಚಕಪದವನ್ನು ಹೇಳಿದರೆ ಸಾಕು. ಗುರೂಣಾಂ ಗುರುಃ ಎಂಬ ವಿಶೇಷಣವಾಚಕಪದವು ಅನಾವಶ್ಯಕ. ಇದರಂತೆ 'ಶಾಸ್ತ್ರಪ್ರಭವೇನ ಬಾದರಾಯಣೇನ ಉದಿತತ್ವಮ್' ಎಂಬಲ್ಲೂ ಕೂಡ ಯಾವ ಬಾದರಾಯಣರಿದ್ದಾರೋ ಅವರು ಶಾಸ್ತ್ರಪ್ರಭವರೇ ಆಗಿರುತ್ತಾರೆ. ಪುನಃ ಹಿಂದಿನಂತೆ ಇಲ್ಲೂ ಕೂಡ 'ಶಾಸ್ತ್ರಪ್ರಭವೇನ ಉದಿತತ್ವಮ್' ಎಂಬ ವಿಶೇಷಣವಾಚಕಪದವು

ಅನಾವಶ್ಯಕ. ಇದರಂತೆ 'ಗುರುಭ್ಯಃ ಅಜಾದಿಭ್ಯಃ ಉದಿತತ್ವಮ್' ಎಂಬ ಹೇತುವಿನಲ್ಲಿ ಯಾವ ಚತುರ್ಮುಖಾದಿಗಳಿದ್ದಾರೋ ಅವರು ಗುರುಗಳೇ ಆಗಿರುತ್ತಾರೆ. ಗುರುಗಳಾಗದ ಚತುರ್ಮುಖ-ಬ್ರಹ್ಮರು ಇದ್ದಲ್ಲಿ ಅಂಥವರನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಗುರುಭ್ಯಃ ಎಂಬ ವಿಶೇಷಣವನ್ನು ಹೇಳಬೇಕಿತ್ತು. ಆದರೆ ಹಾಗಿಲ್ಲದ ಕಾರಣ ಇಲ್ಲೂ ಕೂಡ ವಿಶೇಷಣವಾಚಕಪದವು ವ್ಯರ್ಥವಾಗುತ್ತದೆ. ಆಗ 'ಗುರೂಣಾಂ ಗುರುತ್ವಂ' 'ಶಾಸ್ತ್ರಪ್ರಭವೇನ ಉದಿತತ್ವಮ್' 'ಗುರುಭ್ಯಃ ಉದಿತತ್ವಮ್' ಎಂಬುದನ್ನು ಹೇತುವೆಂದು ಹೇಳಲು ಸಾಧ್ಯವೇ ಆಗುವುದಿಲ್ಲ. ಅದಕ್ಕಾಗಿ ಬಾದರಾಯಣವೆಂಬ ಪದವನ್ನೇ ಹೇತುಶರೀರದಲ್ಲಿ ನಿವೇಶ ಮಾಡಬಾರದು. ಮತ್ತು ಅಜಾದಿಪದವನ್ನು ಕೂಡ ನಿವೇಶ ಮಾಡಬಾರದು. ಆಗಷ್ಟೇ ಇವುಗಳಿಗೆ ಹೇತುತ್ವವು ಉಪಪನ್ನವಾಗುತ್ತದೆ.

'ಗುರೂಣಾಂ ಗುರುಣೋದಿತತ್ವಂ' 'ಶಾಸ್ತ್ರಪ್ರಭವೇನ ಉದಿತತ್ವಮ್' ಎಂಬೆರಡು ಹೇತುಗಳಿಗೆ ಬೌದ್ಧಾಗಮದಲ್ಲಿ ವ್ಯಭಿಚಾರವನ್ನು ಹೇಳಿದ್ದಾರೆ. ಏಕೆಂದರೆ ಬುದ್ಧನೂ ಕೂಡ ಗುರುಗಳಿಗೆ ಗುರು ಎನಿಸಿದ್ದಾನೆ. ಪರಮಾತ್ಮನಾಗಿರುವುದರಿಂದ ಶಾಸ್ತ್ರಪ್ರಭವನೂ ಕೂಡ ಆಗಿರುತ್ತಾನೆ. ಮೂರನೆಯ 'ಗುರುಭ್ಯಃ ಶ್ರೋತೃಭ್ಯಃ ಉದಿತತ್ವಮ್' ಎಂಬ ಹೇತುವಿಗೆ ಜೈನಾಗಮದಲ್ಲಿ ವ್ಯಭಿಚಾರವನ್ನು ಹೇಳಿದ್ದಾರೆ. ಜಿನನು ಲೋಕದಲ್ಲಿ ಗುರುಗಳೆನಿಸಿದವರಿಗೆ ಉಪದೇಶವನ್ನು ಮಾಡಿದ್ದಾನೆ. ಆದರೆ ಈ ಜಿನನು ಪರಮಾತ್ಮನಲ್ಲದ ಕಾರಣ ಗುರುಗಳಾದ ಚತುರ್ಮುಖಾದಿಗಳಿಗೆ ಗುರು ಎನಿಸಲಾರ ಮತ್ತು ಶಾಸ್ತ್ರ-ಪ್ರಭವನೆಂದು ಕೂಡ ಎನಿಸಲಾರ. ಆದ್ದರಿಂದ ಮೊದಲಿನ ಎರಡು ಹೇತುಗಳಿಗೆ ಜೈನಾಗಮದಲ್ಲಿ ವ್ಯಭಿಚಾರವನ್ನು ಹೇಳಲು ಸಾಧ್ಯವಾಗುವುದಿಲ್ಲ. 'ತದರ್ಥತಃ ಉದಿತತ್ವಮ್' ಎಂಬ ನಾಕನೆಯ ಹೇತುವಿಗೆ ಬೌದ್ಧಾಗಮದಲ್ಲಿ ಹಾಗೂ ಜೈನಾಗಮದಲ್ಲಿ ಎರಡೂ ಕಡೆ ವ್ಯಭಿಚಾರ ಬರುತ್ತದೆ. ಏಕೆಂದರೆ ಪ್ರತಿಯೊಬ್ಬರೂ ಕೂಡ ಮೋಕ್ಷಕ್ಕೋಸ್ಕರವೇ ಶಾಸ್ತ್ರವನ್ನು ಉಪದೇಶ ಮಾಡುತ್ತಾರೆ. ಪ್ರಾರಂಭದ ಮೂರು ಹೇತುಗಳಿಗೆ ವೇದವ್ಯಾಸದೇವರು ಹೇಳಿದ ಕೆಲವು ನರ್ಮಾದಿ ವಾಕ್ಯಗಳಲ್ಲಿ ವ್ಯಭಿಚಾರ-ದೋಷವನ್ನು ಹೇಳಿದ್ದಾರೆ. ಹೀಗೆಲ್ಲ ವ್ಯಭಿಚಾರದೋಷಕ್ಕೆ ಅವಕಾಶವಿರುವುದರಿಂದ ವಕ್ತ್ರಾದ್ಯಾನುಕೂಲ್ಯ-ವೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಬೇಕೆಂದು ಆಕ್ಷೇಪ. ಇದಕ್ಕೆ ಮಿಲಿತವಾದದ್ದನ್ನು ಹೇತುವನ್ನಾಗಿ ಮಾಡುವುದರಿಂದ ಯಾವುದೇ ವ್ಯಭಿಚಾರಬರುವುದಿಲ್ಲವೆಂದು ಉತ್ತರಿಸಿದ್ದಾರೆ. ಮಿಲಿತವಾದ ಹೇತುವಿನ ಬಗ್ಗೆ ಮುಂದೆ ಪರಿಷ್ಕರಿಸಿ ನಿರೂಪಣೆ ಮಾಡುವವರಿದ್ದಾರೆ. ಪ್ರಕೃತ ಸಾಮಾನ್ಯವಾಗಿ ಗುರೂಣಾಂ ಗುರುಣಾ ಉದಿತತ್ವೇ ಸತಿ ಇತ್ಯಾದಿಯಾಗಿ ಹೇಳಿದ್ದಾರೆ. ಈ ವಿಶಿಷ್ಟವಾದ ಹೇತುವನ್ನು ಮಾಡಿದಾಗ ಬೌದ್ಧಾಗಮದಲ್ಲಿ 'ತದರ್ಥತಃ ಉದಿತತ್ವ' ಎಂಬ ವಿಶೇಷ್ಯವು ಬರುವುದಿಲ್ಲ. ಜೈನಾಗಮದಲ್ಲಿ

'ಗುರೂಣಾಂ ಗುರುಣೋದಿತತ್ವ' ಎಂಬ ವಿಶೇಷಣವು ಬರುವುದಿಲ್ಲ. ನರ್ಮಾದಿ ವಾಕ್ಯದಲ್ಲಿ 'ತದರ್ಥತಃ ಉದಿತತ್ವ' ಎಂಬ ವಿಶೇಷ್ಯವು ಬರುವುದಿಲ್ಲ ಆದ್ದರಿಂದ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ ಎಂದು ತಿಳಿಯಬೇಕು.

## ಸಾಮಾನಾಧಿಕರಣ್ಯಕ್ಕಾಗಿ ವಿಭಕ್ತಿಪರಿಣಾಮ ಮಾಡಬೇಕು

**ಯಾದುಪತ್ಯ– ಸಾಧ್ಯಾಂತರಾಧ್ಯಾಹಾರೇತಿ ॥ ವಕ್ತ್ರಾದ್ಯಾನುಕೂಲ್ಯರೂಪಸಾಧ್ಯಾಂತರಾ ಇತ್ಯರ್ಥಃ । ಯಥಾಶ್ರುತಾನಾಮೇಷಾಮಿತಿ ॥ 'ಯತೋ ಯತ್ಕಾರಣಂ ಬಾದರಾಯಣೋ ಗುರೂಣಾಂ ಗುರುಃ, ಯತಃ ಶಾಸ್ತ್ರಾಣಾಂ ಪ್ರಭವೋ, ಯತಶ್ಚ ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ ಅತೋ ಮಾನಮ್' ಇತಿ ಪೂರ್ವೋಕ್ತಯೋಜನಾಯಾಂ ಪೂರ್ವಾರ್ಧೋಕ್ತಾನಾಂ 'ಗುರೂಣಾಂ ಗುರುತ್ವಾದೀ'ನಾಂ ಪಕ್ಷೀಭೂತಶಾಸ್ತ್ರನಿಷ್ಠತಯಾ ಪ್ರಾಮಾಣ್ಯರೂಪಸಾಧ್ಯವ್ಯಧಿಕರಣತಾ ಇತ್ಯರ್ಥಃ । ತದುದಿತಮಿತಿ ॥ ವಚನಾದಿತಿ ॥ ಅತ್ರ 'ತತ್' ಇತಿ ಭಿನ್ನಪದಂ ಶಾಸ್ತ್ರಪರಮ್ । ನನ್ವೇವಮ್ 'ಉದಿತ'ಪದಸ್ಯ ತೃತೀಯಾಂತಕರ್ತೃಪದಸಾಪೇಕ್ಷಸ್ಯ 'ಗುರುರ್ಗುರೂಣಾಮ್' ಇತ್ಯಾದಿ ಪ್ರಥಮಾಂತೈಃ ಕಥಮನ್ವಯ ಇತ್ಯತ ಉಕ್ತಮ್ – ವಿಭಕ್ತಿವಿಪರಿಣಾಮೇನೇತಿ ॥ ತಥಾ ಚ 'ಗುರೂಣಾಂ ಗುರುಣಾ ಶಾಸ್ತ್ರಾಣಾಂ ಪ್ರಭವೇನ ಬಾದರಾಯಣೇನ ಯತಃ ತಚ್ಛಾಸ್ತ್ರಮುದಿತಮ್ ಅತೋ ಮಾನಮ್' ಇತ್ಯೇಕಾಧಿಕರಣತಯಾ ಉಪಪದ್ಯತ ಇತ್ಯರ್ಥಃ।**

'ಸಾಧ್ಯಾಂತರಾಧ್ಯಾಹಾರಕಲ್ಪನಯಾ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ವಕ್ತ್ರಾದ್ಯಾನುಕೂಲ್ಯವೆಂಬ ಮತ್ತೊಂದು ಸಾಧ್ಯದ ಅಧ್ಯಾಹಾರದ ಮೂಲಕ ಎಂದು ಇದರ ಅರ್ಥ. 'ಯಥಾಶ್ರುತಾನಾಮೇಷಾಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ. ಯಾವ ಕಾರಣದಿಂದ ಬಾದರಾಯಣರು ಗುರುಗಳಿಗೂ ಗುರುಗಳಾಗಿದ್ದಾರೋ, ಯಾವ ಕಾರಣದಿಂದ ಶಾಸ್ತ್ರಗಳಿಗೆ ಪ್ರಭವರಾಗಿದ್ದಾರೋ, ಯಾವ ಕಾರಣದಿಂದ ಗುರುಭೂತವಾದ ಶಾಸ್ತ್ರಗಳಿಗೆ ಉಪದೇಶಕರಾಗಿದ್ದಾರೋ ಆ ಕಾರಣದಿಂದ ಈ ಗ್ರಂಥವು ಪ್ರಮಾಣವಾಗಿದೆ. ಹೀಗೆ ಹಿಂದೆ ಹೇಳಿದಂತೆ ಯೋಜನೆಯನ್ನು ಮಾಡಬಹುದು. ಆದರೆ 'ಗುರೂಣಾಂ ಗುರುತ್ವ' ಮೊದಲಾದ ಹೇತುಗಳು ಪಕ್ಷೀಭೂತವಾದ ಶಾಸ್ತ್ರದಲ್ಲಿ ಇರುವುದಿಲ್ಲ. ಪ್ರಾಮಾಣ್ಯವೆಂಬ ಸಾಧ್ಯವು ಪಕ್ಷದಲ್ಲಿದೆ. ಆದ್ದರಿಂದ ಹೇತುಗಳು ಸಾಧ್ಯವ್ಯಧಿಕರಣಗಳಾಗಿವೆ ಎಂಬುದು ಇದರ ಅರ್ಥ.

'ತದುದಿತಂ ಇತಿ ವಚನಾತ್' – ಇಲ್ಲಿ ತತ್ ಎಂಬುದು ಭಿನ್ನಪದ. ಶಾಸ್ತ್ರ ಎಂಬರ್ಥವನ್ನು ಹೇಳುತ್ತಿದೆ.

ಪ್ರಶ್ನೆ - 'ಉದಿತ' ಎಂಬ ಪದಕ್ಕೆ ತೃತೀಯಾಂತವಾದ ಕರ್ತೃಪದದ ಅಪೇಕ್ಷೆ ಇದೆ. ಹೀಗಿರುವಾಗ 'ಗುರುರ್ಗುರೂಣಾಂ' ಎಂಬ ಪ್ರಥಮಾಂತ ಪದಗಳ ಜೊತೆ ಹೇಗೆ ಅನ್ವಯವನ್ನು ಮಾಡುತ್ತೀರಿ.

ಇದಕ್ಕೆ ಉತ್ತರವನ್ನು 'ವಿಭಕ್ತಿಪರಿಣಾಮೇನ' ಎಂದಿದ್ದಾರೆ. ಹೀಗರ್ಥ – 'ಗುರೂಣಾಂ ಗುರುಣಾ ಶಾಸ್ತ್ರಾಣಾಂ ಪ್ರಭವೇನ ಬಾದರಾಯಣೇನ ಯತಃ ತಚ್ಛಾಸ್ತ್ರಮುದಿತಮ್ ಅತೋ ಮಾನಮ್' ಹೀಗೆ ಹೇಳಿದಾಗ ಸಾಮಾನಾಧಿಕರಣ್ಯವು ಉಪಪನ್ನವಾಗುತ್ತದೆ.

## ಪ್ರತ್ಯೇಕ ನಾಕು ಹೇತುಗಳೆಂದರೆ ವ್ಯಭಿಚಾರದೋಷ

ಯಾದುಪತ್ಯ– ನ ಚ ತದುದಿತಮ್ ಇತ್ಯಸ್ಯ ಸಮಾಸತ್ವೇ 'ಯೋ ಬಾದರಾಯಣಃ ಪೂರ್ವೋಕ್ತವಿಶೇಷಣವಿಶಿಷ್ಟಃ ತೇನ ಇದಮುದಿತಮ್' ಇತ್ಯರ್ಥಲಾಭಾದುಕ್ತವಿಭಕ್ತಿವಿಪರಿಣಾಮೋ ನಾಪೇಕ್ಷಿತ ಇತಿ ವಾಚ್ಯಮ್ । ತಥಾತ್ವೇ ವಿಶೇಷಣವಾಚಕಸ್ಯ 'ಇದಂ ಶಾಸ್ತ್ರಮ್' ಇತ್ಯಸ್ಯಾಧ್ಯಾಹಾರಪ್ರಸಂಗಾತ್ ಇತ್ಯಭಿಪ್ರಾಯಾತ್ । ಕೇಚಿತ್ತು 'ತತ್'ಶಬ್ದೇನ ಪೂರ್ವೋಕ್ತವಿಶೇಷಣವಿಶಿಷ್ಟೋ ಬಾದರಾಯಣಃ ಪರಾಮೃಷ್ಯತೇ । ಉದಿತಶಬ್ದಸ್ಯ ಭಾವಪ್ರಧಾನಸ್ಯ ಪಂಚಮ್ಯಂತತಯಾ ವಿಪರಿಣಾಮಃ । ತೇನ ಸಾಮಾನಾಧಿಕರಣ್ಯಮ್' ಇತ್ಯಾಹುಃ । ಏತೇ ಪ್ರತ್ಯೇಕಮಿತಿ ॥ ಗುರುಗುರೂದಿತತ್ವಶಾಸ್ತ್ರಪ್ರಭವೋದಿತತ್ವಯೋಃ ಬೌದ್ಧಾಗಮೇ, ಶೈವಪುರಾಣಾದೌ ಚ, ಬಾದರಾಯಣೋದಿತತ್ವಸ್ಯಾಪಿ ಶೈವಪುರಾಣಾದೌ, ಅಜಾದೀನ್ ಪ್ರತಿ ಉಪದಿಷ್ಟತ್ವಸ್ಯ ನರ್ಮಾದೌ, ಮೋಕ್ಷಾರ್ಥಮುಪದಿಷ್ಟತ್ವಸ್ಯ ಗೌತಮಪ್ರಣೀತನ್ಯಾಯಶಾಸ್ತ್ರೇ ಚ ವ್ಯಭಿಚಾರ ಇತಿ ಭಾವಃ । ಗೂಢಾಭಿಸಂಧಿರಾಹ – ಮಿಲಿತಾನಾಮಿತಿ ॥

ತದುದಿತಮ್ ಎಂಬುದು ಸಮಸ್ತಪದವಾದರೆ 'ಯೋ ಬಾದರಾಯಣಃ ಪೂರ್ವೋಕ್ತವಿಶೇಷಣವಿಶಿಷ್ಟಃ ತೇನ ಇದಮುದಿತಮ್' ಎಂಬರ್ಥವನ್ನು ಹೇಳಿದಂತಾಗುತ್ತದೆ. ಆಗ ಹಿಂದೆ ಹೇಳಿದಂತೆ ವಿಭಕ್ತಿಪರಿಣಾಮವನ್ನು ಮಾಡಬೇಕಾಗಿಲ್ಲ. ಅಲ್ಲವೇ?

ಈ ಪ್ರಶ್ನೆ ತಪ್ಪು. ಹಾಗಾದರೆ ವಿಶೇಷ್ಯವಾಚಕವಾದ ಇದಂ ಶಾಸ್ತ್ರಂ ಎಂಬುದನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಕೆಲವರು ಹೀಗೆ ಹೇಳುತ್ತಾರೆ – ತತ್ ಶಬ್ದದಿಂದ ಪೂರ್ವೋಕ್ತವಿಶೇಷಣದಿಂದ ವಿಶಿಷ್ಟರಾದ ಬಾದರಾಯಣರನ್ನು ಪರಾಮರ್ಶೆ ಮಾಡಬೇಕು. ಉದಿತಶಬ್ದವು ಭಾವಪ್ರಧಾನನಿರ್ದಿಷ್ಟವಾದ್ದರಿಂದ ಪಂಚಮ್ಯಂತವಾಗಿ ವಿಪರಿಣಾಮವನ್ನು ಮಾಡಬೇಕು. ಇದರಿಂದ ಸಾಮಾನಾಧಿಕರಣ್ಯವು ಪ್ರಾಪ್ತವಾಗುತ್ತದೆ ಎಂದು.

'ಏತೇ ಪ್ರತ್ಯೇಕಂ' - 'ಗುರುಗುರೂದಿತತ್ವ' 'ಶಾಸ್ತ್ರಪ್ರಭವೋದಿತತ್ವಗಳಿಗೆ' ಬೌದ್ಧಾಗಮ ಹಾಗೂ ಶೈವಪುರಾಣಗಳಲ್ಲಿ ವ್ಯಭಿಚಾರ ಬರುತ್ತದೆ. 'ಬಾದರಾಯಣೋದಿತತ್ವ'ಕ್ಕೆ ಶೈವಪುರಾಣದಲ್ಲಿ ವ್ಯಭಿಚಾರ ಬರುತ್ತದೆ. 'ಅಜಾದೀನ್ ಪ್ರತ್ಯುಪದಿಷ್ಟತ್ವ'ಕ್ಕೆ ನರ್ಮಾದಿಗಳಲ್ಲಿ ವ್ಯಭಿಚಾರ ಬರುತ್ತದೆ. 'ಮೋಕ್ಷಾರ್ಥ-ಮುಪದಿಷ್ಟತ್ವ'ಕ್ಕೆ ಗೌತಮಪ್ರಣೀತವಾದ ನ್ಯಾಯಶಾಸ್ತ್ರದಲ್ಲಿ ವ್ಯಭಿಚಾರ ಬರುತ್ತದೆ ಎಂದಭಿಪ್ರಾಯ.

## ಪರಿಮಳಸುಧಾಸಾರ

ಗುರುಗುರೂದಿತತ್ವ ಮೊದಲಾದ ಹೇತುಗಳಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುತ್ತಿದ್ದಾರೆಂದು ತಿಳಿಯುತ್ತದೆ. ಆದರೆ ಹೀಗೆ ಭಾವಿಸುವುದು ತಪ್ಪು. ವಕ್ತ್ರಾದ್ಯಾನುಕೂಲ್ಯಗಳನ್ನು ಮಧ್ಯದಲ್ಲಿ ಅಧ್ಯಾಹಾರ ಮಾಡಿ-ಕೊಳ್ಳಬೇಕೆಂದು ವ್ಯಾಖ್ಯಾನ ಮಾಡಿದ್ದಾರೆ. ಇದರ ಅವಶ್ಯಕತೆ ಎಷ್ಟರ ಮಟ್ಟಿಗೆ ಇದೆ ಎಂಬುದೇ ಇಲ್ಲಿ ಮಾಡಬೇಕಾದ ವಿಮರ್ಶೆ. ಹೀಗೆ ಮಾಡುವುದರಿಂದ ಶ್ಲೋಕದಲ್ಲಿ ಶ್ರುತವಾದ 'ಮಾನಮ್' ಎಂಬುದನ್ನು ಪರಿತ್ಯಾಗ ಮಾಡಿ ಅಶ್ರುತವಾದ ವಕ್ತ್ರಾದ್ಯಾನುಕೂಲ್ಯಗಳನ್ನು ಸ್ವೀಕರಿಸಿದಂತೆ ಆಗುತ್ತದಲ್ಲವೇ? ಈ ಪ್ರಶ್ನೆಗೆ ಮುಂದೆ ಉತ್ತರಿಸುತ್ತಾರೆ. ಉತ್ತರವನ್ನು ತಿಳಿಯುವ ಮೊದಲು ಯಥಾಶ್ರುತವಾದ ಈ ಹೇತುಗಳಿಗೆ ಪ್ರತ್ಯೇಕವಾಗಿ ಬೌದ್ಧಾಗಮಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ಮಿಲಿತವಾಗಿ ಹೇತುಗಳಾಗಿವೆ ಎಂದು ತಿಳಿಯಬೇಕು ಎಂಬುದನ್ನು ಸಮರ್ಥಿ-ಸುತ್ತಿದ್ದಾರೆ.

## ನೆನೆಪಿಡಿ –

* ಗುರುಗುರೂದಿತ್ವಾದಿಗಳಿಗೆ ಸನ್ನ್ಯಾಯರತ್ನಾವಳಿ ಹಾಗೂ ನ್ಯಾಯಸುಧಾಗ್ರಂಥಗಳಲ್ಲಿ ನೇರವಾಗಿ ಹೇತುತ್ವವನ್ನು ಹೇಳದೇ ಇರಲು ಕಾರಣವೇನೆಂಬುದನ್ನು ವಿಮರ್ಶಿಸಿದ್ದಾರೆ.

* ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ ಒಟ್ಟು ನಾಕು ಹೇತುಗಳನ್ನು ಹೇಳಿದ್ದಾರೆ. 1.ಗುರೂಣಾಂ ಗುರುಣೋದಿತತ್ವಮ್, 2. ಅಶೇಷಶಾಸ್ತ್ರಪ್ರಭವೇನ ಉಕ್ತತ್ವಮ್, 3. ಅಜಾದೀನ್ ಶ್ರೋತೄನ್ ಪ್ರತಿ ಉಪದೇಷ್ಟೃತ್ವಮ್, 4. ಪ್ರಯೋಜನೋದ್ದೇಶೇನ ಉಕ್ತತ್ವಮ್ ಎಂಬುದನ್ನು ನಿಖರವಾಗಿ ತೋರಿಸಿದ್ದಾರೆ.

* ಮೇಲಿನ ಹೇತುಗಳಲ್ಲಿ ಮೊದಲನೆಯ ಹೇತುವಿಗೆ ಬೌದ್ಧಾಗಮದಲ್ಲಿ, ಎರಡನೆಯ ಹೇತುವಿಗೆ ಶೈವಪುರಾಣದಲ್ಲಿ, ಮೂರನೆಯ ಹೇತುವಿಗೆ ವ್ಯಾಸರ ನರ್ಮವಾಕ್ಯದಲ್ಲಿ, ನಾಕನೆಯ ಹೇತುವಿಗೆ ಸಾಂಖ್ಯಶಾಸ್ತ್ರದಲ್ಲಿ ವ್ಯಭಿಚಾರವನ್ನು ತೋರಿಸಿದ್ದಾರೆ.

* ವಿಶಿಷ್ಟಹೇತು ಮಾಡಿದಾಗ ತಾತ್ಪರ್ಯನಿರ್ಣಯದ ಆಧಾರದಲ್ಲಿ ವ್ಯಭಿಚಾರವು ಬರುವುದಿಲ್ಲ.

## ಅಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವ ಎಂಬ ಹೇತುವಿಗೆ ಅಸಾಧಾರಣ್ಯದೋಷವಿಲ್ಲ

**ಶ್ರೀಮನ್ನ್ಯಾಯಸುಧಾ– ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವಾಂಶಸ್ಯ ಸಪಕ್ಷಾಪ್ರವೇಶಿತತ್ವೇನ ಅಸಾಧಾರಣ್ಯಂ ಸ್ಯಾದಿತಿ ಚೇನ್ನ । ತೇಷ್ವೇವ ಹೇತುವೃತ್ತಿ-ಸಂಭವಾತ್ । ತತ್ಪ್ರಾಮಾಣ್ಯಸ್ಯ ಮಹಾಜನಪರಿಗ್ರಹಾದಿನಾ ನಿಶ್ಚಿತತ್ವಾತ್ ।**

'ಮಹಾಭಾರತವೇ ಮೊದಲಾದ ಸಕಲಸಚ್ಛಾಸ್ತ್ರಗಳನ್ನು ರಚನೆ ಮಾಡಿದ ಶ್ರೀವೇದ-ವ್ಯಾಸದೇವರಿಂದ ಉಪದೇಶಿಸಲ್ಪಟ್ಟಿದೆ' ಎಂಬ ಹೇತುವಿನ ಅಂಶವು ದೃಷ್ಟಾಂತವಾದ ಮಹಾಭಾರತದಲ್ಲಿ ಬರುವುದಿಲ್ಲ. ಆದ್ದರಿಂದ ಅಸಾಧಾರಣ್ಯ ಎಂಬ ದೋಷವು ಹೇತುವಿಗೆ ಬರುತ್ತದೆ. ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಮಹಾಭಾರತಾದಿಗಳಲ್ಲಿಯೇ ಹೇತುವು ಬರುವುದರಿಂದ ಅಸಾಧಾರಣ್ಯದೋಷಕ್ಕೆ ಅವಕಾಶವಿಲ್ಲ. ಮಹಾಭಾರತಾದಿ-ಗಳನ್ನು ಮಹಾಜನರು ಪ್ರಮಾಣವೆಂದು ಅಂಗೀಕರಿಸಿರುವುದರಿಂದ ಅದರಲ್ಲಿ ಪ್ರಾಮಾ-ಣ್ಯವು ನಿಶ್ಚಯವಾಗಿದೆ.

## ಮಹಾಭಾರತವು ಮಹಾಜನಪರಿಗೃಹೀತವಾದ್ದರಿಂದ ಪ್ರಮಾಣವಾಗಿದೆ.

ಪರಿಮಳ– ಶಾಸ್ತ್ರಪ್ರಭವತ್ವಂ ವಿಶೇಷಣಂ ಮತ್ವಾ ಭಾರತಾದಿಸಪಕ್ಷೇ ಹೇತುರ್ನೇತಿ ಭಾವೇನ ಶಂಕತೇ – ಭಾರತಾದೀತಿ ॥ ಉಪಲಕ್ಷಣತ್ವಾಶಯೇನಾಹ – ತೇಷ್ವೇವೇತಿ ॥ 'ಭಾರತಾದಿಷ್ವೇವ' ಇತ್ಯರ್ಥಃ । ನನು ತತ್ರಾಪ್ಯನೇನೈವ ಹೇತುನಾ ಮಾನತ್ವಂ ಸಾಧ್ಯಮಿತಿ ಪಕ್ಷತೌಲ್ಯಾನ್ನ ಸಪಕ್ಷತ್ವಮಿತ್ಯತ ಆಹ – ತದಿತಿ ॥ 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಇತಿ ಶ್ರುತಿಪರಿಗೃಹೀತತ್ವಾದಿಃ ಆದಿಶಬ್ದಾರ್ಥಃ ।

'ಶಾಸ್ತ್ರಪ್ರಭವತ್ವಂ' 'ಶಾಸ್ತ್ರಗಳನ್ನು ರಚಿಸಿರುವುದು' ಎಂಬುದು ವಿಶೇಷಣವಾಗಿದೆ ಎಂದು ತಿಳಿದು ಮಹಾಭಾರತ ಮೊದಲಾದ ದೃಷ್ಟಾಂತಗಳಲ್ಲಿ ಹೇತುವು ಇಲ್ಲವೆಂಬುದಾಗಿ ಅಸಾ-

ಧಾರಣ್ಯದೋಷವನ್ನು 'ಭಾರತಾದಿ' ಇತ್ಯಾದಿ ವಾಕ್ಯದಿಂದ ಆಕ್ಷೇಪ ಮಾಡುತ್ತಿದ್ದಾರೆ. 'ಶಾಸ್ತ್ರಗಳನ್ನು ರಚಿಸಿರುವಿಕೆ' ಎಂಬುದು ವಿಶೇಷಣವಲ್ಲ. ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ 'ತೇಷ್ವೇವ' ಎಂಬ ವಾಕ್ಯವು ಹೊರಟಿದೆ. ಮಹಾಭಾರತವು ಏಕೆ ಪ್ರಮಾಣವಾಗಬೇಕು? ಅದರಲ್ಲಿ ಪ್ರಾಮಾಣ್ಯವನ್ನು ಯಾವ ಹೇತುವು ಸಾಧಿಸುತ್ತದೆ? ಎಂಬ ಪ್ರಶ್ನೆಗೆ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ತೋರಿಸಲ್ಪಟ್ಟ ಹೇತುವಿನಿಂದಲೇ ಪ್ರಾಮಾಣ್ಯವನ್ನು ಸಾಧಿಸಲಾಗಿದೆ. ಹಾಗಾದರೆ ಮಹಾಭಾರತಾದಿಗಳಲ್ಲಿಯೂ ಸೂತ್ರಗಳಂತೆ ಪ್ರಾಮಾಣ್ಯವು ಸಂದಿಗ್ಧವಾಯಿತು. ಆದ್ದರಿಂದ ಇದೇ ಹೇತುವಿನಿಂದ ಅದನ್ನು ಸಾಧಿಸಬೇಕು. ಆದ್ದರಿಂದ ಮಹಾಭಾರತವೂ ಕೂಡ ಬ್ರಹ್ಮಸೂತ್ರಗಳಿಗೆ ಸಮಾನವಾಯಿತು. ಹೀಗಿರುವಾಗ ಮಹಾಭಾರತವು ಹೇಗೆ ದೃಷ್ಟಾಂತವಾಗುತ್ತದೆ? ಈ ಆಕ್ಷೇಪಕ್ಕೆ ತತ್ಪ್ರಾಮಾಣ್ಯಸ್ಯ ಎಂಬ ವಾಕ್ಯದಿಂದ ಸಮಾಧಾನ ನೀಡಿದ್ದಾರೆ. 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಎಂಬ ಶ್ರುತಿಪರಿಗೃಹೀತವಾಗಿರುವುದು ಮುಂತಾದವುಗಳು ಆದಿಶಬ್ದದ ಅರ್ಥ.

ವಿವರಣೆ – 'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೇತೃತ್ವ' ಎಂಬ ಹೇತುವು ಸಪಕ್ಷವಾದ ಮಹಾಭಾರತದಲ್ಲಿ ಬರುವುದಿಲ್ಲ. ಏಕೆಂದರೆ ಮಹಾಭಾರತಗ್ರಂಥವನ್ನು ಶಾಸ್ತ್ರಪ್ರಭವನಾಗುವ ಮೊದಲೇ ರಚಿಸಿದ್ದಾರೆ. ಆದ್ದರಿಂದ ಮಹಾಭಾರತವನ್ನು ರಚಿಸಿರುವಿಕೆ ಎಂಬ ವಿಶೇಷಣವು ಮಹಾಭಾರತವನ್ನು ರಚಿಸುವ ಮೊದಲು ವೇದವ್ಯಾಸದೇವರಲ್ಲಿ ಇರುವುದಿಲ್ಲ. ತದ್ವಿಶಿಷ್ಟವಾದ ಹೇತುವು ದೃಷ್ಟಾಂತವೆನಿಸಿದ ಮಹಾಭಾರತದಲ್ಲಿ ಬರುವುದಿಲ್ಲ. ಹಾಗಾಗಿ ಅಸಾಧಾರಣ್ಯ ಎಂಬ ದೋಷವು ಬರುತ್ತದೆ ಎಂಬುದು ಆಕ್ಷೇಪದ ಅಭಿಪ್ರಾಯ. ಇದು ತಪ್ಪು. 'ಮಹಾಭಾರತಾದಿಗಳನ್ನು ರಚಿಸಿರುವಿಕೆ' ಎಂಬುದು ವಿಶೇಷಣವೇ ಅಲ್ಲ. ಉಪಲಕ್ಷಣವಾಗಿದೆ. ಮಹಾಭಾರತಾದಿಶಾಸ್ತ್ರಗಳ ರಚನೆಯಿಂದ ಉಪಲಕ್ಷಿತರಾದ ವೇದವ್ಯಾಸದೇವರಿಂದ ಉಪದೇಶಿಸಲ್ಪಟ್ಟದ್ದು ಎಂಬುದು ಹೇತುವಿನ ತಾತ್ಪರ್ಯ. ಇದು ದೃಷ್ಟಾಂತದಲ್ಲಿ ಇರುವುದರಿಂದ ಅಸಾಧಾರಣ್ಯದೋಷವು ಬರುವುದಿಲ್ಲ. ಮತ್ತು ನಾರದಮಹರ್ಷಿಗಳೇ ಮೊದಲಾದ ಮಹಾಜನರು ಮಹಾಭಾರತವನ್ನು ಪ್ರಮಾಣವೆಂದು ಅಂಗೀಕರಿಸಿರುವುದರಿಂದ ಅದರ ಪ್ರಾಮಾಣ್ಯವು ನಿಶ್ಚಿತವಾಗಿದೆ. ಅಭಿಪ್ರಾಯ ಹೀಗಿದೆ – ಮಹಾಭಾರತದ ಪ್ರಾಮಾಣ್ಯವನ್ನು ಹಿಂದಿನ ಯುಕ್ತಿಯಿಂದ ಸಾಧನೆ ಮಾಡಬೇಕಿಲ್ಲ. ಮಹಾಜನರು ಪ್ರಮಾಣವೆಂದು ಪರಿಗ್ರಹಿಸಿದ್ದಾರೆ. ಈ ಕಾರಣದಿಂದ ಮಹಾಭಾರತದ ಪ್ರಾಮಾಣ್ಯವು ನಿಶ್ಚಿತವಾಗಿದೆ. ಆದ್ದರಿಂದ ಬ್ರಹ್ಮಸೂತ್ರಗಳ ವಿಷಯದಲ್ಲಿ ಪ್ರಾಮಾಣ್ಯ-

ಸಂದೇಹ ಬರುವಂತೆ ಮಹಾಭಾರತದ ಬಗ್ಗೆ ಪ್ರಾಮಾಣ್ಯಸಂದೇಹ ಬರುವುದಿಲ್ಲ. ನಿಶ್ಚಿತಪ್ರಾಮಾಣ್ಯಕವಾದ್ದರಿಂದ ದೃಷ್ಟಾಂತವಾಗುತ್ತದೆ.

## ಯಾವುದು ಸಪಕ್ಷ ಎಂಬುದರ ಬಗ್ಗೆ ವಿಮರ್ಶೆ

ವಾಕ್ಯಾರ್ಥಚಂದ್ರಿಕಾ— ನನು ವಿಶಿಷ್ಟಹೇತಾವಪಿ ಪೂರ್ವೋಕ್ತಸತ್ಯಂತದ್ವಯೇ 'ಗುರೂಣಾಮ್' ಇತಿ ಬ್ರಹ್ಮಾದೀನಾಂ, ಶಾಸ್ತ್ರಪದೇನ ಚ ವೇದಾದ್ಯಶೇಷಸಚ್ಛಾಸ್ತ್ರಸ್ಯ ವಿವಕ್ಷಾಯಾಂ ಅನ್ಯತರೇಣೈವ ಜಿನವಾಕ್ಯೇ ವ್ಯಭಿಚಾರಪರಿಹಾರೇಣ ಸತ್ಯಂತದ್ವಯಸ್ಯ ವೈಯರ್ಥ್ಯಾಪತ್ತ್ಯಾ, ವಿಶೇಷ-ವಿವಕ್ಷಾಯಾಂ ಚ ಸತ್ಯಂತದ್ವಯಗ್ರಹಣೇಽಪಿ ತತ್ರ ವ್ಯಭಿಚಾರಾಪಾತಾತ್, 'ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ' ಇತಿ ಯೋಜನಾನುಸಾರೇಣ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವಸ್ಯೈವ ಹೇತುವಿಶೇಷಣತ್ವಂ ವಕ್ತವ್ಯಮ್ । ಏವಂ ಚ ವೇದಪ್ರಾಮಾಣ್ಯಸಿದ್ಧೌ ತನ್ಮೂಲಕತಯಾ ಭಾರತಸ್ಯೇವ ಏತಚ್ಛಾಸ್ತ್ರಸ್ಯಾಪಿ ಪ್ರಾಮಾಣ್ಯಸಿದ್ಧ್ಯಾ, ತತ್ಸಾಧನಾಯೋಗೇನ ವೇದಪ್ರಾಮಾಣ್ಯಾನಿಶ್ಚಯೇನ ಭಾರತಪ್ರಾಮಾಣ್ಯಾನಿಶ್ಚಯಸ್ಯೈವ ವಕ್ತವ್ಯತ್ವೇನ ವೇದಭಾರತಾದೇಃ ಸಪಕ್ಷತ್ವಾಸಂಭವಾತ್ ಪ್ರತ್ಯಕ್ಷಾನುಮಾನಯೋರ್ಮಂದಾದಿವಾಕ್ಯಸ್ಯೈವ ಚ ಸಪಕ್ಷತ್ವೇನ ವಕ್ತವ್ಯತ್ವಾತ್; ಪ್ರತ್ಯಕ್ಷಾನು-ಮಾನಯೋರುಚ್ಚಾರಣರೂಪಪ್ರಣಯನಾಸಂಭವಾತ್ ಮನ್ವಾದಿವಾಕ್ಯೇ ಚ 'ಗುರುಭ್ಯಃ ಶ್ರೋತೃಭ್ಯಃ ತದರ್ಥತಃ ಉದಿತತ್ವ'ಸತ್ತ್ವೇಽಪಿ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವಾಂಶಸ್ಯ ಅಭಾವಾತ್ ಅಸಾಧಾರಣ್ಯಾಪತ್ತ್ಯಾ ನ ಯಥಾಶ್ರುತಸಾಧ್ಯಸಾಧನಭಾವೋ ಯುಕ್ತ ಇತ್ಯಾಶಂಕತೇ – ಭಾರತಾ-ದೀತಿ ॥ ಮಾಽಸ್ತು ಪ್ರತ್ಯಕ್ಷಾನುಮಾನಮನ್ವಾದಿವಾಕ್ಯಾನಾಂ ಸಪಕ್ಷತ್ವಂ ವೇದಭಾರತಾದಿಷ್ವೇವ ಹೇತುವೃತ್ತೇರ್ನ ಅಸಾಧಾರಣ್ಯಮಿತ್ಯಾಹ – ತೇಷ್ವೇವೇತಿ ॥ ನನು ತಸ್ಯ ಪ್ರಾಮಾಣ್ಯಂ ನ ನಿಶ್ಚಿತಮಿತ್ಯುಕ್ತಮ್ ಇತ್ಯತೋ ಭಾರತಸ್ಯ ಮಹಾಜನಪರಿಗ್ರಹೇಣ ವೇದಸ್ಯ ಚಾಪೌರುಷೇಯತಯಾ ಪ್ರಾಮಾಣ್ಯನಿಶ್ಚಯೇನ ವೇದಭಾರತಾದ್ಯಶೇಷಶಾಸ್ತ್ರಸ್ಯ ಸಪಕ್ಷತ್ವಸಂಭವೇಽಪಿ, ಪ್ರಕೃತಶಾಸ್ತ್ರೇ ವೇದಮೂಲಕತ್ವಸ್ಯ ಅದ್ಯಾಪ್ಯನಿಶ್ಚಯೇನ ತತ್ಪ್ರಾಮಾಣ್ಯಸಾಧನಾಸಂಭವಾತ್ ಇತ್ಯಭಿಪ್ರೇತ್ಯಾಹ – ತದಿತಿ ॥

ವಿಶಿಷ್ಟಹೇತುವಿನಲ್ಲಿರುವ ಮೊದಲಿನ ಎರಡು ಸತ್ಯಂತಗಳಲ್ಲಿ 'ಗುರೂಣಾಂ' ಎಂಬುದರಿಂದ ಚತುರ್ಮುಖಬ್ರಹ್ಮಾದಿಗಳನ್ನು ಶಾಸ್ತ್ರಪದದಿಂದ ವೇದಾದಿಸಚ್ಛಾಸ್ತ್ರಗಳನ್ನು ವಿವಕ್ಷಿಸುವುದಾದರೆ ಎರಡರಲ್ಲಿ ಒಂದು ವಿಶೇಷಣದಿಂದಲೇ ಜಿನವಾಕ್ಯದಲ್ಲಿ ವ್ಯಭಿಚಾರದೋಷವು ಪರಿಹಾರವಾಗುತ್ತದೆ. ಎರಡು

ಸತ್ಯಂತಗಳನ್ನು ನಿವೇಶ ಮಾಡುವುದು ವ್ಯರ್ಥವಾಗುತ್ತದೆ. ಒಂದು ವೇಳೆ ಗುರುಪದಕ್ಕೆ ಚತುರ್ಮುಖಬ್ರಹ್ಮ ಎಂಬರ್ಥವನ್ನು ಶಾಸ್ತ್ರಪದಕ್ಕೆ ವೇದಾದಿಸಚ್ಛಾಸ್ತ್ರಗಳು ಎಂಬರ್ಥವನ್ನು ವಿವಕ್ಷೆ ಮಾಡದಿದ್ದರೆ ಎರಡು ಸತ್ಯಂತವಿಶೇಷಣಗಳನ್ನು ವಿವಕ್ಷಿಸಿದರೂ ಕೂಡ ಜನವಾಕ್ಯದಲ್ಲಿ ವ್ಯಭಿಚಾರದೋಷವು ಬಂದೇ ಬರುತ್ತದೆ. ಆದ್ದರಿಂದ 'ಗುರೂಣಾಂ ಶಾಸ್ತ್ರಾಣಾಂ ಗುರುಃ' ಪ್ರಭವಃ ಎಂಬುದಾಗಿ ಎರಡನ್ನೂ ಸೇರಿಸಿ ಯೋಜನೆ ಮಾಡಬೇಕು. ಅದಕ್ಕನುಸಾರಿಯಾಗಿ 'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವ'ವು ಹೇತುವಿಶೇಷಣವಾಗಿದೆ ಎಂದು ಹೇಳಬೇಕು. ಆದ್ದರಿಂದ ಮೊದಲು ವೇದಪ್ರಾಮಾಣ್ಯವು ಸಿದ್ಧವಾದರೆ ತನ್ಮೂಲಕವಾಗಿ ಮಹಾಭಾರತದಂತೆ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ಕೂಡ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಆಗ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಸಾಧನೆ ಮಾಡಲೇಬೇಕಾಗಿಲ್ಲ. ಆದ್ದರಿಂದ ಯಾರಿಗೆ ವೇದಪ್ರಾಮಾಣ್ಯವು ನಿಶ್ಚಯವಾಗಿರುವುದಿಲ್ಲವೋ ಅಂತಹವನನ್ನು ಕುರಿತು ಬ್ರಹ್ಮಸೂತ್ರಗಳ ಪ್ರಾಮಾಣ್ಯವನ್ನು ಸಮರ್ಥನೆ ಮಾಡಬೇಕು. ಆದರೆ ವೇದಪ್ರಾಮಾಣ್ಯನಿಶ್ಚಯ ಆಗದೇ ಇದ್ದಾಗ ವೇದಮೂಲಕವಾಗಿ ಮಹಾಭಾರತಾದಿಗಳಿಗೂ ಕೂಡ ಪ್ರಾಮಾಣ್ಯವು ನಿಶ್ಚಯವಾಗುವುದಿಲ್ಲ. ಆದ್ದರಿಂದ ವೇದ, ಮಹಾಭಾರತಗಳು ಸಪಕ್ಷವೇ ಆಗುವುದಿಲ್ಲ. ಪ್ರತ್ಯಕ್ಷ ಅನುಮಾನ ಮನ್ವಾದಿವಾಕ್ಯಗಳನ್ನು ಸಪಕ್ಷವೆಂದು ಹೇಳಬೇಕು. ಈ ಮೂರರಲ್ಲಿ ಪ್ರತ್ಯಕ್ಷಾನುಮಾನಗಳಿಗೆ ಉಚ್ಚಾರಣೆ ಎಂಬ ಪ್ರಣಯನವು ಅಸಂಭಾವಿತವಾಗಿದೆ. ಮನ್ವಾದಿವಾಕ್ಯದಲ್ಲಿ 'ಗುರುಭ್ಯಃ ಶ್ರೋತೃಭ್ಯಃ ತದರ್ಥತಃ ಉದಿತತ್ವ' ಎಂಬ ವಿಶೇಷಣ ಬಂದರೂ ಕೂಡ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವ ಎಂಬ ಅಂಶವು ಬರುವುದಿಲ್ಲ. ಆದ್ದರಿಂದ ಸಪಕ್ಷವೇ ಇಲ್ಲದ ಕಾರಣ ಅಸಾಧಾರಣ್ಯದೋಷವು ಬರುತ್ತದೆ. ಆದ್ದರಿಂದ ಮೂಲದಲ್ಲಿ ಕಾಣುವಂತೆ ಯಥಾಶ್ರುತವಾದ ಸಾಧ್ಯಸಾಧನಭಾವವು ಯುಕ್ತವಾಗುವುದಿಲ್ಲ. ಈ ಆಶಂಕೆಯನ್ನು 'ಭಾರತಾದಿ ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

ಪ್ರತ್ಯಕ್ಷ, ಅನುಮಾನ, ಮನ್ವಾದಿವಾಕ್ಯಗಳು ಸಪಕ್ಷವಾಗುವುದು ಬೇಡ. ವೇದಭಾರತಾದಿಗಳಲ್ಲಿ ಹೇತುವು ಇರುವುದರಿಂದ ಅಸಾಧಾರಣ್ಯದೋಷವು ಬರುವುದಿಲ್ಲವೆಂದು 'ತೇಷ್ವೇವ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ವೇದ ಹಾಗೂ ಮಹಾಭಾರತದಲ್ಲಿ ಪ್ರಾಮಾಣ್ಯನಿಶ್ಚಯವು ಆಗಿರುವುದಿಲ್ಲ ಎಂದು ಹಿಂದೆ ಹೇಳಿದ್ದೇವಲ್ಲವೇ? ಎಂದು ಪ್ರಶ್ನಿಸಬಾರದು. ಮಹಾಭಾರತದಲ್ಲಿ ಮಹಾಜನಪರಿಗ್ರಹೀತತ್ವದಿಂದ ಪ್ರಾಮಾಣ್ಯವು ನಿಶ್ಚಿತವಾಗಿದೆ. ವೇದದಲ್ಲಿ ಅಪೌರುಷೇಯತ್ವದಿಂದ ಪ್ರಾಮಾಣ್ಯವು ನಿಶ್ಚಿತವಾಗಿದೆ. ಆದ್ದರಿಂದ ವೇದಭಾರತಾದ್ಯಶೇಷಶಾಸ್ತ್ರವು ಸಪಕ್ಷವಾಗುತ್ತದೆ. ಆದರೂ ಕೂಡ ಪ್ರಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ವೇದಮೂಲಕತ್ವವು ಇಲ್ಲಿಯ ತನಕ ನಿಶ್ಚಯವಾಗಿಲ್ಲ. ಆದ್ದರಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ಯುಕ್ತವಾಗುತ್ತದೆ.

ವಿವರಣೆ - 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ನಾಕು ಹೇತುಗಳನ್ನು ಪ್ರತ್ಯೇಕವಾಗಿ ವಿವಕ್ಷಿಸಬಾರದು. ಮಿಲಿತವಾಗಿ ವಿವಕ್ಷಿಸಬೇಕು. ಆ ಮಿಲಿತವಾದ ಹೇತುವಿನ ಸ್ವರೂಪ ಹೀಗಿದೆ – 'ಗುರೂಣಾಂ ಗುರುಣೋದಿತತ್ವೇ ಸತಿ, ಶಾಸ್ತ್ರಪ್ರಭವೇನೋದಿತತ್ವೇ ಸತಿ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ, ತದರ್ಥತಃ ಉದಿತತ್ವಾತ್' ಈ ಮಿಲಿತವಾದ ಹೇತುವಿನಲ್ಲಿ ಗುರುಶಬ್ದದಿಂದ ಬ್ರಹ್ಮಾದಿದೇವತೆಗಳನ್ನು ವಿವಕ್ಷಿಸುತ್ತೀರೋ ಇಲ್ಲವೋ? ಇದರಂತೆ 'ಶಾಸ್ತ್ರಪ್ರಭವೇನೋದಿತತ್ವಮ್' ಎಂಬಲ್ಲಿರುವ ಶಾಸ್ತ್ರಶಬ್ದದಿಂದ ವೇದಾದಿ ಸಚ್ಛಾಸ್ತ್ರಗಳನ್ನು ವಿವಕ್ಷಿಸುತ್ತೀರೋ ಇಲ್ಲವೋ? ಗುರುಶಬ್ದದಿಂದ ಬ್ರಹ್ಮಾದಿದೇವತೆಗಳನ್ನು ಶಾಸ್ತ್ರಶಬ್ದದಿಂದ ವೇದಾದಿಸಚ್ಛಾಸ್ತ್ರಗಳನ್ನು ವಿವಕ್ಷಿಸುವುದಾದರೆ ಎರಡೂ ವಿಶೇಷಣಗಳನ್ನು ಹೇಳುವುದು ಅನಾವಶ್ಯಕ. ಈ ಎರಡರಲ್ಲಿ ಒಂದೇ ವಿಶೇಷಣದಿಂದ ಜಿನವಾಕ್ಯದಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ. ಏಕೆಂದರೆ, ಜಿನವಾಕ್ಯವು ಬ್ರಹ್ಮಾದಿದೇವತೆಗಳೆಂಬ ಗುರುಗಳನ್ನು ಕುರಿತು ಉಪದೇಶಿಸಲ್ಪಟ್ಟಿರುವುದಿಲ್ಲ ಮತ್ತು ಸಚ್ಛಾಸ್ತ್ರವು ಕೂಡ ಆಗಿರುವುದಿಲ್ಲ. ಹಾಗಾಗಿ ಎರಡು ವಿಶೇಷಣಗಳನ್ನು ಹೇಳಿದ್ದು ವ್ಯರ್ಥ. ಇನ್ನು ಗುರುಶಬ್ದದಿಂದ ಬ್ರಹ್ಮಾದಿದೇವತೆಗಳನ್ನು ವಿವಕ್ಷಿಸುವುದಿಲ್ಲ; ಶಾಸ್ತ್ರಶಬ್ದದಿಂದ ವೇದಾದಿಸಚ್ಛಾಸ್ತ್ರಗಳನ್ನು ವಿವಕ್ಷಿಸುವುದಿಲ್ಲ ಎಂದು ಹೇಳಿದರೆ ಎರಡು ಸತ್ಯಂತವಿಶೇಷಣಗಳನ್ನು ಹೇಳಿದರೂ ಕೂಡ ವ್ಯಭಿಚಾರದೋಷವು ಪರಿಹಾರವಾಗುವುದಿಲ್ಲ. ಏಕೆಂದರೆ ಜಿನವಾಕ್ಯವು ಯಾರೋ ಒಬ್ಬ ಗುರುವನ್ನು ಕುರಿತು ಉಪದೇಶಿಸಲ್ಪಟ್ಟಿದೆ. ಮತ್ತು ಸಚ್ಛಾಸ್ತ್ರವೇ ಆಗ-ಬೇಕಿಲ್ಲವಾದ್ದರಿಂದ ದುಃಶಾಸ್ತ್ರವಾದರೂ ಶಾಸ್ತ್ರ ಎಂದು ಕರೆಸಿಕೊಳ್ಳಬಹುದು. ಹಾಗಾಗಿ ಜಿನವಾಕ್ಯದಲ್ಲಿ 'ಗುರೂಣಾಂ ಗುರುಣೋದಿತತ್ವ' ಮತ್ತು 'ಶಾಸ್ತ್ರಪ್ರಭವೇನ ಉದಿತತ್ವ' ಎಂಬ ಎರಡು ವಿಶೇಷಣಗಳು ಬರುವುದರಿಂದ ಹೇತು ಬಂದು ಪ್ರಾಮಾಣ್ಯವೆಂಬ ಸಾಧ್ಯ ಬಾರದ ಕಾರಣ ವ್ಯಭಿಚಾರದೋಷವು ಇದ್ದೇ ಇರುತ್ತದೆ.

ಈ ಸಮಸ್ಯೆಯ ಪರಿಹಾರಕ್ಕಾಗಿ 'ಗುರೂಣಾಂ ಗುರುಣೋದಿತತ್ವಂ' 'ಶಾಸ್ತ್ರಪ್ರಭವೇಣ ಉದಿತತ್ವಂ' ಎಂಬೆರಡು ವಿಶೇಷಣಗಳನ್ನು ಪ್ರತ್ಯೇಕವಾಗಿ ವಿವಕ್ಷಿಸಬಾರದು. ಎರಡನ್ನೂ ಸೇರಿಸಿ 'ಯಃ ಗುರೂಣಾಂ ಗುರುಃ ಸ ಏವ ಶಾಸ್ತ್ರಾಣಾಂ ಪ್ರಭವಃ' ಎಂದು ಯೋಜನೆ ಮಾಡಬೇಕು. ಮಿಲಿತಹೇತುವನ್ನು ಈಗ ಪರಿಷ್ಕಾರ ಮಾಡಿದಂತಾಯಿತು. ಹೀಗೆ ಹೇಳಿದಾಗ ಮಹಾಭಾರತವನ್ನು ಸಪಕ್ಷವೆಂದು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ ಮಹಾಭಾರತಕ್ಕೆ ವೇದಮೂಲಕವಾಗಷ್ಟೇ ಪ್ರಾಮಾಣ್ಯ ಇರುತ್ತದೆ. ವೇದ-ಪ್ರಾಮಾಣ್ಯವೇ ಸಿದ್ಧವಾಗದ ಕಾರಣ ತನ್ಮೂಲಕವಾಗಿ ಮಹಾಭಾರತಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. 'ನಿಶ್ಚಿತಸಾಧ್ಯಧರ್ಮವಾನ್ ಧರ್ಮೀ ಸಪಕ್ಷಃ' ಎಂಬಂತೆ ವೇದದಲ್ಲಿ ಪ್ರಾಮಾಣ್ಯವು ಸಿದ್ಧವಾಗಿದ್ದರೆ

ತನ್ಮೂಲಕವಾಗಿ ಭಾರತಕ್ಕೆ ಪ್ರಾಮಾಣ್ಯ ನಿಶ್ಚಯವಾಗುವಂತೆ ಬ್ರಹ್ಮಸೂತ್ರಕ್ಕೂ ಕೂಡ ಪ್ರಾಮಾಣ್ಯವು ನಿಶ್ಚಯವಾಗುತ್ತಿತ್ತು. ಆಗ ಪ್ರತ್ಯೇಕವಾಗಿ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧನೆ ಮಾಡುವ ಅವಶ್ಯಕತೆಯೇ ಇರಲಿಲ್ಲ. ಪ್ರಾಮಾಣ್ಯವು ಬ್ರಹ್ಮಸೂತ್ರಗಲ್ಲಿ ಸಿದ್ಧವಾಗುವುದರಿಂದ ಪುನಃ ಅದನ್ನೇ ಸಾಧನೆ ಮಾಡಿದರೆ ಸಿದ್ಧಸಾಧನವಾಗುತ್ತದೆ.

ಆದ್ದರಿಂದ ಯಾರಿಗೆ ವೇದಪ್ರಾಮಾಣ್ಯವು ನಿಶ್ಚಯವಾಗಿರುವುದಿಲ್ಲವೋ ಅಂತಹವನಿಗೆ ಈ ಅನು-ಮಾನವೆಂದು ಹೇಳಬೇಕು. ಆದರೆ ವೇದಪ್ರಾಮಾಣ್ಯವು ನಿಶ್ಚಯವಾಗದಿದ್ದರೆ ಮಹಾಭಾರತಕ್ಕೂ ತನ್ಮೂಲಕವಾಗಿ ಪ್ರಾಮಾಣ್ಯನಿಶ್ಚಯವು ಆಗುವುದಿಲ್ಲ. ಹಾಗಾಗಿ ವೇದ ಮತ್ತು ಮಹಾಭಾರತಕ್ಕೆ ಸಪಕ್ಷತ್ವವು ಯುಕ್ತವಾಗುವುದಿಲ್ಲ. ವೇದ ಮತ್ತು ಮಹಾಭಾರತಗಳನ್ನು ಬಿಟ್ಟು ಪ್ರತ್ಯಕ್ಷ, ಅನುಮಾನ, ಮನ್ವಾದಿ ವಾಕ್ಯಗಳನ್ನು ಸಪಕ್ಷವೆಂದು ಹೇಳಬೇಕು. ಪ್ರತ್ಯಕ್ಷ ಮತ್ತು ಅನುಮಾನಗಳಲ್ಲಿ ಉಚ್ಚಾರಣತ್ವ-ರೂಪವಾದ ಪ್ರಣೇತತ್ವವು ಕೂಡುವುದಿಲ್ಲ.

ಮನ್ವಾದಿವಾಕ್ಯದಲ್ಲಿ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೇತತ್ವ ಎಂಬ ಅಂಶವು ಬರುವುದಿಲ್ಲ. ಏಕೆಂದರೆ ಸ್ವಾಯಂಭುವ ಮನುವು ಮಹಾಭಾರತವನ್ನು ರಚನೆ ಮಾಡಿರುವುದಿಲ್ಲ. ಆದ್ದರಿಂದ ಹೇತುವು ಸಪಕ್ಷದಲ್ಲಿ ಬಾರದ ಕಾರಣ ಅಸಾಧಾರಣ್ಯದೋಷವು ಬರುತ್ತದೆ.

'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೇತತ್ವಾಂಶಸ್ಯ ಸಪಕ್ಷಾಪ್ರವೇಶಿತತ್ವೇನ' ಎಂಬ ಟೀಕೆಯಲ್ಲಿರುವ ಸಪಕ್ಷಶಬ್ದದಿಂದ ವಾಕ್ಯಾರ್ಥಚಂದ್ರಿಕಾಕಾರರು ಪ್ರತ್ಯಕ್ಷ, ಅನುಮಾನ ಹಾಗೂ ಮನ್ವಾದಿವಾಕ್ಯಗಳನ್ನು ವಿವಕ್ಷಿಸಿದ್ದಾರೆ. ಮುಂದಿರುವ 'ತೇಷು' ಎಂಬ ಪದದಿಂದ ಮಹಾಭಾರತವನ್ನು ಪರಾಮರ್ಶಿಸಬೇಕು. ಸಪಕ್ಷಶಬ್ದದಿಂದ ಪ್ರತ್ಯಕ್ಷ ಅನುಮಾನ ಮನ್ವಾದಿವಾಕ್ಯಗಳನ್ನು ನಾವು ವಿವಕ್ಷಿಸುವುದಿಲ್ಲ. ವೇದ ಮತ್ತು ಮಹಾಭಾರತವನ್ನೇ ವಿವಕ್ಷಿಸುತ್ತೇವೆ. ಅದರಲ್ಲಿ ಹೇತುವು ಇರುವುದರಿಂದ ಅಸಾಧಾರಣ್ಯವು ಬರುವುದಿಲ್ಲ.

ಮಹಾಭಾರತದಲ್ಲಿ ಮಹಾಜನಪರಿಗೃಹೀತತ್ವ ಎಂಬ ಮತ್ತೊಂದು ಯುಕ್ತಿಯಿಂದ ಪ್ರಾಮಾಣ್ಯವು ನಿಶ್ಚಿತವಾಗಿದೆ. ವೇದದಲ್ಲಿ ಅಪೌರುಷೇಯತ್ವದಿಂದ ಪ್ರಾಮಾಣ್ಯವು ನಿಶ್ಚಿತವಾಗಿದೆ. ಹಾಗಾಗಿ ಇವೆರಡೂ ಸಪಕ್ಷಗಳಾಗುತ್ತವೆ. ಪ್ರಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಇಲ್ಲಿಯ ತನಕ ವೇದಮೂಲಕವಾಗಿ ಪ್ರಾಮಾಣ್ಯವು ನಿಶ್ಚಯವಾಗಿರುವುದಿಲ್ಲ. ಹಾಗಾಗಿ ಬ್ರಹ್ಮಸೂತ್ರಗಳಲ್ಲಿ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ಸಮಂಜಸವಾಗುತ್ತದೆ.

## ಮಹಾಭಾರತವೇ ಸಪಕ್ಷವಾಗುತ್ತದೆ

ಯಾದುಪತ್ಯ– 'ಮಿಲಿತಾನಾಮ್' ಇತ್ಯಸ್ಯ ವಕ್ಷ್ಯಮಾಣಮಾಶಯಮವಿದ್ವಾನ್ ಭ್ರಾಂತಃ ಶಂಕತೇ – ಭಾರತಾದ್ಯಶೇಷೇತಿ ॥ ಇದಂ ಚ 'ಸಪಕ್ಷೈಕದೇಶೇ ಭಾರತಾದೌ ನ ಹೇತೋರ್ವೃತ್ತಿಃ ಇತ್ಯುಪಪಾದನಾಯ । ಭಾರತಾದಿಪ್ರಣಯನವಿಶಿಷ್ಟೇನ ತೇಷಾಮಪ್ರಣೇತತ್ವಾದಿತಿ ದ್ರಷ್ಟವ್ಯಮ್ । ತಥಾ ಚ ವೇದೇ ಪ್ರತ್ಯಕ್ಷಾದೌ ಚ ಪ್ರಣೇತತ್ವಾಭಾವೇನ, ಪ್ರಮಾಣಭೂತೇಽಸ್ಮದೀಯವಾಕ್ಯೇ ಬಾದರಾಯಣಪ್ರಣೇತತ್ವಾದ್ಯಭಾವೇನ, ಬಾದರಾಯಣೀಯೇ ಚ ಪ್ರಮಾಣಭೂತೇ 'ಗಾಮಾನಯ' ಇತ್ಯಾದಿ ಲೌಕಿಕವಾಕ್ಯೇ ಅಜಾದಿಮೋಕ್ಷಾರ್ಥಮುದಿತತ್ವಾಭಾವೇನ, ಭಾರತಾದೌ ಚ ಉಕ್ತರೀತ್ಯಾ ಹೇತ್ವಭಾವೇನ, ನ ಕುತ್ರಾಪಿ ಸಪಕ್ಷೇ ಹೇತುಸತ್ತ್ವಮಿತಿ ಭಾವಃ। ಗೂಢಾಭಿಸಂಧಿರೇವೋತ್ತರಮಾಹ – ತೇಷ್ವೇವೇತಿ ॥ 'ಭಾರತಾದಿಷ್ವೇವ' ಇತ್ಯರ್ಥಃ । ಅಸ್ಮದಭಿಮತವಕ್ಷ್ಯಮಾಣಮಿಲಿತಹೇತೋಃ ತತ್ರ ಸತ್ತ್ವಾದಿತಿ ಭಾವಃ। ನನು ಭಾರತಾದೇರಪಿ ಸೂತ್ರಕಾರಕೃತತ್ವೇನ ಸೂತ್ರಸಮಾನಯೋಗಕ್ಷೇಮತಯಾ ಕಥಂ ಸಪಕ್ಷತ್ವಮ್? ಇತಿ ತಟಸ್ಥಶಂಕಾಯಾಮಾಹ – ತತ್ಪ್ರಾಮಾಣ್ಯಸ್ಯೇತಿ ॥ ಬ್ರಹ್ಮಸೂತ್ರ-ಪ್ರಾಮಾಣ್ಯಾನಂಗೀಕರ್ತೃಭಿರಪಿ ಕಾಪಿಲಗೌತಮೀಯಾದಿಭಿರ್ಭಾರತಾದಿಪ್ರಾಮಾಣ್ಯಸ್ಯ ಅಂಗೀ-ಕೃತತ್ವಾದಿತಿ ಭಾವಃ॥

'ಬಾದರಾಯಣೇನ ಅಜಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬುದಷ್ಟೇ ಮಿಲಿತವಾದ ಹೇತು. ಗುರೂಣಾಂ ಗುರುಣಾ ಶಾಸ್ತ್ರಾಣಾಂ ಪ್ರಭವೇನ ಇತ್ಯಾದಿಗಳು ಹೇತುಶರೀರದಲ್ಲಿ ಸೇರಿರುವುದಿಲ್ಲ ಎಂಬುದಾಗಿ ಮುಂದೆ ಉಪಪಾದನೆ ಮಾಡುತ್ತಾರೆ. ಇದನ್ನು ತಿಳಿಯದ ತಟಸ್ಥನೊಬ್ಬನು ಭ್ರಾಂತನಾಗಿ ಆಶಂಕಿಸುತ್ತಿದ್ದಾನೆ. ಅದನ್ನೇ 'ಭಾರತಾದ್ಯಶೇಷ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೇತತ್ವ' ಎಂಬುದಾಗಿ ಹೇಳಿರುವುದು ಸಪಕ್ಷೈಕದೇಶವಾದ ಮಹಾ-ಭಾರತಾದಿಗಳಲ್ಲಿ ಹೇತುವು ಇರುವುದಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ. ಏಕೆಂದರೆ ಘಟವಿಶಿಷ್ಟವಾದ ಭೂತಲದಲ್ಲಿ ಘಟವು ಹೇಗೆ ಇರುವುದಿಲ್ಲವೋ ಅದರಂತೆ ಭಾರತಾದಿಪ್ರಣಯನವಿಶಿಷ್ಟದಲ್ಲಿ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೇತತ್ವವು ಇರಲು ಸಾಧ್ಯವಿಲ್ಲ. ಭಾರತಾದಿ ಪ್ರಣಯನವಿಶಿಷ್ಟರಾದ ಬಾದರಾಯಣರಿಂದ ಪ್ರಣೇತತ್ವವು ಭಾರತದಲ್ಲಿ ಇರಲು ಸಾಧ್ಯವಿಲ್ಲ ಎಂದಭಿಪ್ರಾಯ. ಆದ್ದರಿಂದ ವೇದ ಹಾಗೂ ಪ್ರತ್ಯಕ್ಷಾದಿಗಳಲ್ಲಿ ಪ್ರಣೇತತ್ವವು ಬರುವುದಿಲ್ಲ. ಪ್ರಮಾಣವೆನಿಸಿದ ನಾವು ಪ್ರಯೋಗಿಸುವ ವಾಕ್ಯಗಳಲ್ಲಿ ಬಾದರಾಯಣಪ್ರಣೇತತ್ವವು ಇರುವುದಿಲ್ಲ. ಬಾದರಾಯಣರೇ ಪ್ರಯೋಗಿಸಿದ ಪ್ರಮಾಣ-ಭೂತವಾದ 'ಗಾಮಾನಯ' ಇತ್ಯಾದಿ ಲೌಕಿಕವಾಕ್ಯದಲ್ಲಿ 'ಅಜಾದಿಮೋಕ್ಷಾರ್ಥಂ ಉದಿತತ್ವ' ಎಂಬ

ಅಂಶವು ಇರುವುದಿಲ್ಲ. ಮಹಾಭಾರತದಲ್ಲಿ ಹಿಂದೆ ಹೇಳಿದಂತೆ ಹೇತುವೇ ಇರುವುದಿಲ್ಲ. ಆದ್ದರಿಂದ ಈ ಅನುಮಾನದ ಯಾವುದೇ ಸಪಕ್ಷಗಳಲ್ಲಿ ಹೇತುವು ಬರುವುದಿಲ್ಲ. ಹಾಗಾಗಿ ಅಸಾಧಾರಣ್ಯದೋಷವು ಬರುತ್ತದೆಂದು ತಿಳಿಯಬೇಕು.

ಗೂಢಾಭಿಸಂಧಿಯ ಉತ್ತರವನ್ನು 'ತೇಷ್ವೇವ' ಎಂಬುದರಿಂದ ಹೇಳಿದ್ದಾರೆ. ವೇದ ಪ್ರತ್ಯಕ್ಷ ಲೌಕಿಕವಾಕ್ಯ ಇವುಗಳಲ್ಲಿ ಹೇತು ಬರುವುದು ಬೇಡ. ಮಹಾಭಾರತಾದಿಗಳಲ್ಲೇ ಹೇತುವೃತ್ತಿಯಾಗಿದೆ. ನಮಗೆ ಅಭಿಮತವಾದ ಮುಂದೆ ನಿರೂಪಣೆ ಮಾಡುವ ಮಿಲಿತವಾದ ಹೇತು ಮಹಾಭಾರತದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ಅಸಾಧಾರಣ್ಯಕ್ಕೆ ಅವಕಾಶವಿರುವುದಿಲ್ಲ. (ವಕ್ಷ್ಯಮಾಣಮಿಲಿತಹೇತು ಯಾವು-ದೆಂದು ಇಲ್ಲಿ ಹೇಳಿಲ್ಲ. ಮುಂದೆ ಹೇಳುತ್ತಾರೆ.) ಮಹಾಭಾರತವನ್ನು ಕೂಡ ಸೂತ್ರಕಾರರೇ ರಚನೆ ಮಾಡಿದ್ದಾರೆ. ಬ್ರಹ್ಮಸೂತ್ರಗಳಲ್ಲಿ ಪ್ರಾಮಾಣ್ಯಸಂದೇಹ ಇರುವಂತೆ ಮಹಾಭಾರತದಲ್ಲೂ ಕೂಡ ಈ ಸಂದೇಹವು ಸಮಾನಯೋಗಕ್ಷೇಮವಾಗಿದೆ. ಆದ್ದರಿಂದ ನಿಶ್ಚಿತಸಾಧ್ಯವತ್ ಆಗದ ಮಹಾಭಾರತವು ಹೇಗೆ ಸಪಕ್ಷವಾಗುತ್ತದೆ? ಹೀಗೆ ತಟಸ್ಥನು ಮಾಡುವ ಆಶಂಕೆಗೆ 'ತತ್ಪ್ರಾಮಾಣ್ಯಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸಾಂಖ್ಯರು ಹಾಗೂ ಗೌತಮೀಯರೆನಿಸಿದ ತಾರ್ಕಿಕರು ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯ -ವನ್ನು ಅಂಗೀಕರಿಸುವುದಿಲ್ಲ. ಅವರು ಮಹಾಭಾರತಕ್ಕೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡುತ್ತಾರೆ. ಆದ್ದರಿಂದ ಮಿಲಿತವಾದ ಹೇತುವಿನಿಂದ ಮಹಾಭಾರತದಲ್ಲಿ ಪ್ರಾಮಾಣ್ಯವನ್ನು ನಾವು ಹೇಳುತ್ತಿಲ್ಲ. ಮಹಾಜನಪರಿಗೃಹೀತತ್ವ ಎಂಬ ಹೇತುವಿನಿಂದ ಮಹಾಭಾರತಪ್ರಾಮಾಣ್ಯವನ್ನು ಅಂಗೀಕರಿಸಿದ್ದೇವೆ. ಆದ್ದರಿಂದ ಮಹಾಭಾರತವು ಸಪಕ್ಷವಾಗಲು ಯಾವುದೇ ಆತಂಕವಿಲ್ಲ.

## ಸುಧಾಪರಿಮಳಸಾರ

ಪ್ರಕೃತದಲ್ಲಿ ವ್ಯಾಸರಿಂದ ರಚಿತವಾದ ಭಾರತಾದಿಗಳಂತೆ, ಪ್ರತ್ಯಕ್ಷಾದಿಪ್ರಮಾಣಗಳಂತೆ, ಮನುಸ್ಮೃತಿಗಳಂತೆ ವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರವು ಪ್ರಮಾಣ ಎಂದು ಹೇಳುತ್ತಿರುವುದರಿಂದ ವೇದ, ಪ್ರತ್ಯಕ್ಷ, ಮನುಸ್ಮೃತಿ, ಭಾರತಾದಿಗಳು ಸಪಕ್ಷ. ವೇದ ಮತ್ತು ಪ್ರತ್ಯಕ್ಷಗಳು ಪ್ರಣೀತಗಳೇ(ರಚಿತಗಳೇ) ಅಲ್ಲ. ಮನುಸ್ಮೃತಿಯು ಮನುಪ್ರಣೀತವಾದರೂ ವ್ಯಾಸಪ್ರಣೀತವಲ್ಲ. ಭಾರತವು ಭಾರತವನ್ನು ರಚಿಸಿದ ವ್ಯಾಸರಿಂದ ವಿರಚಿತವಾದದ್ದೆಂದು ಹೇಳಲಾಗುವುದಿಲ್ಲ. ಈ ಭಾರತಕ್ಕಿಂತ ಬೇರೆ ಭಾರತವಿಲ್ಲ ತಾನೆ. ಬಾದರಾಯಣರೇ ನುಡಿದ ಲೌಕಿಕವಾಕ್ಯವು ಪ್ರಮಾಣವಾದರೂ ಬ್ರಹ್ಮಾದಿಗಳ ಮೋಕ್ಷಕ್ಕಾಗಿ ಹೇಳಿದ ವಾಕ್ಯವಲ್ಲ. ಹೀಗೆ 'ಭಾರತಾದ್ಯಶೇಷಶಾಸ್ತ್ರಪ್ರಭವಪ್ರಣೀತತ್ವ' ಎಂಬ ಹೇತು ಪ್ರಮಾಣಗಳಾದ ಸಪಕ್ಷಗಳಾದ ಪ್ರತ್ಯಕ್ಷಾದಿಗಳಲ್ಲಿ ವೇದಭಾರತಾದಿಗಳಲ್ಲಿ ಮನುಸ್ಮೃತಿ ಮೊದಲಾದವು-

ಗಳಲ್ಲಿ ಬರಲಿಲ್ಲ. ಆದುದರಿಂದ ವಿಪಕ್ಷದಲ್ಲಿ, ಸಪಕ್ಷದಲ್ಲಿ ಇಲ್ಲದ ಹಿಂದೆ ಹೇಳಿದ ಹೇತುವು ಅಸಾಧಾರಣವಾಗಿದೆ. ಇದು ಹೇತುವಿನ ದೋಷ. ಆದುದರಿಂದ ಪ್ರಾಮಾಣ್ಯವನ್ನು ಈ ಹೇತುವಿನಿಂದ ಸಾಧಿಸುವುದು ಹೇಗೆ?

ಇದಕ್ಕೆ ಸಮಾಧಾನ—ವೇದಾದಿಗಳಲ್ಲಿ ಹೇತುಗಳಿಲ್ಲದಿದ್ದರೆ ಪರವಾಗಿಲ್ಲ. ಭಾರತಾದಿಗಳನ್ನು ಸಪಕ್ಷ ಎನ್ನುತ್ತೇವೆ. ಭಾರತಾದಿಗಳಲ್ಲಿ ಪ್ರಾಮಾಣ್ಯರೂಪ ಸಾಧ್ಯನಿಶ್ಚಯವಾಗಿಲ್ಲದಿರುವಾಗ ಅದು ಹೇಗೆ ಸಪಕ್ಷ? ಎಂದರೆ ಭಾರತಾದಿಗಳನ್ನು ಮಹಾಜನರೆಲ್ಲರೂ ಪ್ರಮಾಣವೆಂದು ಪರಿಗಣಿಸಿರುವುದರಿಂದ ಅದರಲ್ಲಿ ಸಾಧ್ಯವಾದ ಪ್ರಾಮಾಣ್ಯ ನಿಶ್ಚಯವಾಗಿದೆ. ಹಿಂದೆ ಹೇಳಿದ ಹೇತುಗಳೆಲ್ಲ ಭಾರತಾದಿಗಳಲ್ಲಿ ಇದ್ದೇ ಇದೆ. ಆದುದರಿಂದ ಅಸಾಧಾರಣ್ಯ-ರೂಪದೋಷ ಬರುವುದಿಲ್ಲ.

## ನೆನೆಪಿಡಿ

1. 'ಗುರೂಣಾಂ ಗುರುಣೋದಿತತ್ವೇ ಸತಿ, ಶಾಸ್ತ್ರಪ್ರಭವೇಣೋದಿತತ್ವೇ ಸತಿ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ, ತದರ್ಥತಃ ಉದಿತತ್ವಾತ್' ಎಂಬುದು ಮಿಲಿತವಾದ ಹೇತು. ಇದನ್ನು ಪುನಃ ಪರಿಷ್ಕರಿಸಬೇಕು.

2. 'ಗುರೂಣಾಂ ಗುರುಣೋದಿತ್ವೇ ಸತಿ ಶಾಸ್ತ್ರಪ್ರಭವೇಣ ಉದಿತತ್ವಮ್' ಎಂಬುದನ್ನು ಒಟ್ಟಿಗೇ ಸೇರಿಸಿ 'ಗುರುಶಾಸ್ತ್ರಾಣಾಂ ಗುರುಃ ಪ್ರಭವಃ' ಎಂದು ಯೋಜನೆ ಮಾಡಬೇಕು. ಪ್ರತ್ಯೇಕವಾಗಿ ವಿವಕ್ಷಿಸುವುದರಿಂದ ಯಾವುದೇ ಪ್ರಯೋಜನವಿಲ್ಲ.

3. ವೇದ ಮತ್ತು ಮಹಾಭಾರತಗಳು ಸಪಕ್ಷವೆಂದು ಪರಿಮಳ ಹಾಗೂ ಯಾದುಪತ್ಯಗಳಲ್ಲಿ ಹೇಳಿರುತ್ತಾರೆ. ವಾಕ್ಯಾರ್ಥಚಂದ್ರಿಕಾದಲ್ಲಿ ಪ್ರತ್ಯಕ್ಷ, ಅನುಮಾನ, ಮನ್ವಾದಿವಾಕ್ಯಗಳನ್ನು ಸಪಕ್ಷವೆಂದು ಪರಿಗಣಿಸಿ ಅಸಾಧಾರಣ್ಯದೋಷವನ್ನು ಹೇಳಿರುತ್ತಾರೆ.

4. ಮಹಾಭಾರತ ಮತ್ತು ವೇದಗಳನ್ನೇ ಸಪಕ್ಷವೆಂದು ತಿಳಿಯಬೇಕು. ಅದರಲ್ಲಿ ಹೇತು ಇರುವುದರಿಂದ ಅಸಾಧಾರಣ್ಯದೋಷವಿಲ್ಲವೆಂದು ಸಮರ್ಥಿಸಲಾಗಿದೆ.

5. ವೇದದಲ್ಲಿ ಅಪೌರುಷೇಯತ್ವದ ಮೂಲಕ, ಮಹಾಭಾರತದಲ್ಲಿ ಮಹಾಜನಪರಿಗೃಹೀತತ್ವದ ಮೂಲಕ ಪ್ರಾಮಾಣ್ಯವನ್ನು ಸಮರ್ಥನೆ ಮಾಡಬೇಕು.

* * * * *

## ಹೇತುವಿನ ಪರಿಷ್ಕಾರ

**ಶ್ರೀಮನ್ನ್ಯಾಯಸುಧಾ– ಏವಂ ತರ್ಹಿ ಭಾರತಾದಿಪ್ರಣಯನವಿಶಿಷ್ಟೇನ ತೇಷಾಮಪ್ರಣೀತತ್ವಾತ್ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥ-ಮುಪದಿಷ್ಟತ್ವಮಾತ್ರಂ ಹೇತು ಸ್ಯಾದಿತಿ ಚೇದ್ ಬಾಢಮ್ । ತಾವನ್ಮಾತ್ರಸ್ಯೈವ ವ್ಯಭಿಚಾರಾಭಾವಾತ್ ।**

ಹಾಗಾದರೆ ಮಹಾಭಾರತಪ್ರಣಯನವಿಶಿಷ್ಟರಾದ ವೇದವ್ಯಾಸದೇವರಿಂದ ಮಹಾ-ಭಾರತವು ಅಪ್ರಣೀತವಾದ್ದರಿಂದ 'ಬಾದರಾಯಣರಿಂದ ಬ್ರಹ್ಮಾದಿಗಳಿಗೆ ಮೋಕ್ಷಕ್ಕೋಸ್ಕರ ಉಪದೇಶಿಸಲ್ಪಟ್ಟದ್ದು' ಎಂದಷ್ಟೇ ಹೇತುವನ್ನು ಹೇಳಿದಂತಾಯಿತು? ಎಂದರೆ ಆಗಲಿ. ಇದು ನಮಗೆ ಇಷ್ಟವೇ ಆಗಿದೆ. ಏಕೆಂದರೆ, 'ಶ್ರೀವೇದವ್ಯಾಸದೇವರಿಂದ ಬ್ರಹ್ಮಾದಿಗಳಿಗೆ ಮೋಕ್ಷ-ಕ್ಕೋಸ್ಕರ ಉಪದೇಶಿಸಲ್ಪಟ್ಟದ್ದು' ಎಂಬುದಷ್ಟೇ ಹೇತುವಾಗುವುದು.

## ಶಾಸ್ತ್ರಪ್ರಭವತ್ವವೆಂಬ ವಿಶೇಷಣವು ಹೇತುಶರೀರದಲ್ಲಿ ಅನಾವಶ್ಯಕ

**ಪರಿಮಳ– ಪ್ರಾಮಾಣ್ಯೇ ಪರಂಪರಯಾ ಹೇತುರಯಮಿತಿ ವಾದೀ ಶಾಸ್ತ್ರಪ್ರಭವತ್ವಸ್ಯ ವಿಶೇಷಣತ್ವಪಕ್ಷೇ ವಿಶಿಷ್ಟಹೇತೋರಪ್ಯಸಾಧಾರಣ್ಯಾತ್ ವಿಶೇಷ್ಯೇಣೈವಾಲಮ್ ಇತಿ ಭಾವೇನ ಆಶಂಕತೇ – ಏವಂ ತರ್ಹೀತಿ ॥ 'ಬಾಢಮ್' ಇತ್ಯಂಗೀಕಾರೇ ಹೇತುಮಾಹ – ತಾವನ್ಮಾತ್ರಸ್ಯೇತಿ ॥**

'ಗುರುರ್ಗುರೂಣಾಮ್' ಇತ್ಯಾದಿಯಾದ ಹೇತುಗಳು ಪರಂಪರೆಯಿಂದ ಪ್ರಾಮಾಣ್ಯಕ್ಕೆ ಸಾಧನಗಳಾಗುತ್ತವೆ. ನೇರವಾಗಿ ಸಾಧನಗಳಾಗುವುದಿಲ್ಲ ಎಂಬುದಾಗಿ ಯಾರು ಹೇಳುತ್ತಾನೋ ಅವನು ಹೀಗೆ ಆಕ್ಷೇಪ ಮಾಡುತ್ತಿದ್ದಾನೆ – 'ಶಾಸ್ತ್ರಪ್ರಭವತ್ವ' ಎಂಬುದು ವಿಶೇಷಣವಾಗಿದೆ ಎಂಬ ಪಕ್ಷದಲ್ಲಿ ಈ ವಿಶಿಷ್ಟವಾದ ಹೇತುವಿಗೂ ಕೂಡ ಅಸಾಧಾರಣ್ಯದೋಷವು ಬರುತ್ತದೆ. ಆದ್ದರಿಂದ ಕೇವಲ 'ಬ್ರಹ್ಮಾದಿಗಳಿಗೆ ಮೋಕ್ಷಪ್ರಯೋಜನಕ್ಕೋಸ್ಕರ ಉಪದೇಶ ಮಾಡಿರುವಿಕೆ'

ಎಂಬ ವಿಶೇಷ್ಯವಷ್ಟೇ ಸಾಕು. ಈ ಅಭಿಪ್ರಾಯದಿಂದ 'ಏವಂ ತರ್ಹಿ' ಎಂಬುದಾಗಿ ಆಕ್ಷೇಪ ಮಾಡಲಾಗಿದೆ.

'ಬಾಢಮ್' – 'ಆಗಲಿ' ಎಂಬ ಅಂಗೀಕಾರಕ್ಕೆ ಕಾರಣವನ್ನು 'ತಾವನ್ಮಾತ್ರಸ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

## ಗೂಢಾಭಿಸಂಧಿಯ ಉತ್ತರ

ವಾಕ್ಯಾರ್ಥಚಂದ್ರಿಕಾ– ನನ್ವೇವಂ ಭಾರತಾದ್ಯತಿರಿಕ್ತಸ್ಯ ಸಪಕ್ಷತ್ವೇ ಭಾರತಾದಿ-ಪ್ರಣಯನವಿಶಿಷ್ಟೇನ ತತ್ಪ್ರಣಯನಸಂಭವೇಽಪಿ, ಭಾರತಾದೇರೇವ ಸಪಕ್ಷತ್ವೇ ಭಾರತಾದೇ-ರ್ಭಾರತಾದ್ಯಂತರಾಭಾವೇನ ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವಾಂಶಸ್ಯ ತತ್ರಾಸಂಭವೇನ ಪುನರಸಾಧಾರಣ್ಯಾಪತ್ತ್ಯಾ; ಭಾರತಾದೇರೇವ ಸಪಕ್ಷತ್ವಂ ವದತಾ ತದ್ವಿಶೇಷಣಾವಿವಕ್ಷಾ, ವಿಶೇಷ್ಯ-ಮಾತ್ರವಿವಕ್ಷಾ ಚಾಭ್ಯುಪೇತಾ ಸ್ಯಾತ್ । ತಥಾ ಚ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪದಿಷ್ಟತ್ವಮಾತ್ರಂ ಹೇತುಃ ಸ್ಯಾದಿತಿ ಗೂಢಾಭಿಸಂಧಿಃ ಶಂಕತೇ – ಏವಮಿತಿ ॥ 'ತಾವನ್ಮಾತ್ರಸ್ಯ ವ್ಯಭಿಚಾರಿತ್ವೇ ಹೀದಮನಿಷ್ಪಾದನಂ ಸ್ಯಾತ್, ನ ಚೈವಮ್' ಇತ್ಯಭಿಪ್ರೇತ್ಯ ಅಭಿಪ್ರಾಯಮಜಾನಾನ ಇವ ಗೂಢಾಭಿಸಂಧಿರೇವೋತ್ತರಮಾಹ – ಬಾಢಮಿತಿ ॥

ಪ್ರಶ್ನೆ – ಮಹಾಭಾರತಾದ್ಯತಿರಿಕ್ತವಾದದ್ದು ಸಪಕ್ಷವಾದರೆ ಭಾರತಾದಿಪ್ರಣಯನವಿಶಿಷ್ಟರಾದ ವೇದವ್ಯಾಸದೇವರಿಂದ ಪ್ರಣೀತವಾಗಿದೆ ಎಂಬುದು ಯುಕ್ತವಾಗುತ್ತದೆ. ಒಂದು ವೇಳೆ ಮಹಾಭಾರತವೇ ಸಪಕ್ಷವಾದರೆ ಮತ್ತೊಂದು ಮಹಾಭಾರತ ಇಲ್ಲದ್ದರಿಂದ 'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವ' ಎಂಬ ಅಂಶವು ಮಹಾಭಾರತದಲ್ಲಿ ಬರುವುದಿಲ್ಲ. ಆದ್ದರಿಂದ ಪುನಃ ಅಸಾಧಾರಣ್ಯದೋಷವು ಪ್ರಾಪ್ತವಾಗುತ್ತದೆ. ಈ ಕಾರಣದಿಂದ ಯಾರು ಮಹಾಭಾರತವನ್ನು ಸಪಕ್ಷ ಎಂದು ಹೇಳುತ್ತಾರೋ ಅವರಿಗೆ ಶಾಸ್ತ್ರಪ್ರಭವತ್ವ ಎಂಬ ವಿಶೇಷಣದ ವಿವಕ್ಷೆಯು ಇರುವುದಿಲ್ಲ. ಕೇವಲ ವಿಶೇಷ್ಯದ ವಿವಕ್ಷೆಯಷ್ಟೇ ಇರುತ್ತದೆ. ಅಭಿಪ್ರಾಯ ಏನೆಂದರೆ – 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಂ' ಎಂದಷ್ಟೇ ಹೇತುವೆಂದು ಹೇಳಿದಂತಾಯಿತು. ಗೂಢವಾದ ಅಭಿಪ್ರಾಯವುಳ್ಳವನು ಹೀಗೆ ಆಶಂಕಿಸಿದ್ದಾನೆ. ಅದನ್ನು 'ಏವಂ ತರ್ಹಿ' ಎಂಬುದರಿಂದ ತೋರಿಸಿದ್ದಾರೆ. ಗೂಢಾಭಿಸಂಧಿಯಿಂದಲೇ ಉತ್ತರವನ್ನು 'ಬಾಢಮ್' ಎಂಬುದಾಗಿ ಹೇಳುತ್ತಿದ್ದಾರೆ. 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ

ತನ್ಮೋಕ್ಷಾರ್ಥಂ ಉಪದಿಷ್ಟತ್ವಂ' ಎಂಬುದನ್ನು ಹೇತುವನ್ನಾಗಿ ಹೇಳಿದಾಗ ಯಾವುದಾದರೂ ಸ್ಥಳದಲ್ಲಿ ವ್ಯಭಿಚಾರದೋಷವು ಬಂದಿದ್ದರೆ ಈ ಆಕ್ಷೇಪವು ಅನಿಷ್ಟಾಪಾದನೆ ಆಗುತ್ತಿತ್ತು. ಆದರೆ ವ್ಯಭಿಚಾರ ಬಾರದ ಕಾರಣ ಇದು ಇಷ್ಟವೇ ಆಗಿದೆ. ನಮ್ಮ ಈ ಗೂಢವಾದ ಅಭಿಪ್ರಾಯವು ಆಕ್ಷೇಪ ಮಾಡುವವನಿಗೆ ತಿಳಿದಿರುವುದಿಲ್ಲ.

ವಿವರಣೆ – 'ಸ್ವವಿಶಿಷ್ಟೇ ಸ್ವವೃತ್ತ್ಯಯೋಗಾತ್' 'ಸ್ವವಿಶಿಷ್ಟದಲ್ಲಿ ತಾನು ಇರಲು ಸಾಧ್ಯವಿಲ್ಲ' 'ಘಟವಿಶಿಷ್ಟವಾದ ಭೂತಲದಲ್ಲಿ ಘಟವಿದೆ' ಎಂಬ ಪ್ರಯೋಗವು ಹೇಗೆ ಅಸಾಧುವೋ ಅದರಂತೆ 'ಮಹಾಭಾರತಪ್ರಣಯನವಿಶಿಷ್ಟದಲ್ಲಿ ಮಹಾಭಾರತಪ್ರಭವಪ್ರಣೇತೃತ್ವವು ಯುಕ್ತವಾಗುವುದಿಲ್ಲ ಮಹಾಭಾರತ ಬಿಟ್ಟು ಇತರ ಗ್ರಂಥಗಳಲ್ಲಿ ಮಹಾಭಾರತ ಬರೆದಿರುವ ವೇದವ್ಯಾಸದೇವರಿಂದ ರಚಿತವಾಗಿದೆ ಎಂದು ಹೇಳಬಹುದು. ಆದರೆ ಮಹಾಭಾರತದಲ್ಲಿ ಮಹಾಭಾರತವನ್ನು ಬರೆದಿರುವ ವೇದವ್ಯಾಸದೇವರಿಂದ ಬರೆಯಲ್ಪಟ್ಟಿದೆ ಎಂದು ಹೇಳಲಾಗದು. ಮತ್ತೊಂದು ಮಹಾಭಾರತವಿದ್ದರೆ ಹಾಗೆ ಹೇಳಬಹುದಿತ್ತು. ಆದ್ದರಿಂದ ಮಹಾಭಾರತವನ್ನು ಸಪಕ್ಷವೆಂದು ವಿವಕ್ಷಿಸುವುದಾದರೆ 'ಮಹಾಭಾರತಶಾಸ್ತ್ರಪ್ರಭವತ್ವ' ಎಂಬ ವಿಶೇಷಣವು ಅನಾವಶ್ಯಕ. ಕೇವಲ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪದಿಷ್ಟತ್ವಮ್' 'ಬಾದರಾಯಣರಿಂದ ಬ್ರಹ್ಮಾದಿಗಳನ್ನು ಕುರಿತು ಮೋಕ್ಷಕ್ಕೋಸ್ಕರ ಶ್ರೀವೇದವ್ಯಾಸದೇವರು ಉಪದೇಶ ಮಾಡಿರುತ್ತಾರೆ' ಎಂದಷ್ಟೇ ಮಿಲಿತವಾದ ಹೇತುವಿನ ಪರಿಷ್ಕಾರ.

## ದ್ವಿತೀಯಾರ್ಧದಲ್ಲಿ ಹೇಳಿದ್ದಷ್ಟೇ ಹೇತುಶರೀರದಲ್ಲಿ ಸೇರುತ್ತದೆ.

**ಯಾದುಪತ್ಯ– ಆಶಯಮುದ್ಘಾಟಯತಿ – ಬಾಧಮಿತಿ ॥ ತಥಾ ಚ ಪೂರ್ವಂ 'ಮಿಲಿತಾನಾಮ್' ಇತ್ಯತ್ರ ದ್ವಿತೀಯಾರ್ಧೋಕ್ತಾನಾಮೇವ ಮೇಲನಮಭಿಪ್ರೇತಂ ನ ಪೂರ್ವಾರ್ಧೋಕ್ತಾನಾಮಪಿ । ತ್ವಯಾ ತ್ವಿಮಮಭಿಪ್ರಾಯಮಜಾನತಾ ಪೂರ್ವಾರ್ಧೋಕ್ತಾನಾಮಪಿ ಮೇಲನಂ ಮತ್ವಾ ಅಸಾಧಾರಣ್ಯಂ ಶಂಕಿತಮಿತಿ ಭಾವಃ ।**

ಹೇತುಪರಿಷ್ಕಾರವನ್ನು ಮಾಡುವವನ ಅಭಿಪ್ರಾಯವನ್ನು 'ಬಾಧಮ್' ಎಂಬುದರಿಂದ ಉದ್ಘಾಟನೆ ಮಾಡುತ್ತಿದ್ದಾರೆ. ಅಭಿಪ್ರಾಯ ಏನೆಂದರೆ – 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ದ್ವಿತೀಯಾರ್ಧದಿಂದ ಹೇಳಲ್ಪಟ್ಟ 'ಯತಸ್ತದುದಿತಂ ಮಾನಮ್ ಅಜಾದಿಭ್ಯಸ್ತದರ್ಥತಃ' ಎಂಬುದರಿಂದ ತಿಳಿಯುವುದನ್ನಷ್ಟೇ ಹೇತುಶರೀರದಲ್ಲಿ ಮೇಲನೆ ಮಾಡುತ್ತೇವೆ. 'ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ' ಎಂಬ ಪೂರ್ವಾರ್ಧದಿಂದ ಹೇಳಿದ್ದನ್ನು ಹೇತುಪರಿಷ್ಕಾರದಲ್ಲಿ ಸೇರಿಸು-

ವುದಿಲ್ಲ. ಆಕ್ಷೇಪ ಮಾಡುವವರಿಗೆ ಈ ಅಭಿಪ್ರಾಯವು ತಿಳಿದಿರುವುದಿಲ್ಲ. ಹಾಗಾಗಿ ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ವಿಶೇಷಣಗಳೂ ಕೂಡ ಹೇತುಶರೀರದಲ್ಲಿ ಮಿಲಿತವಾಗಿವೆ ಎಂದು ಭ್ರಾಂತನಾಗಿ ಅಸಾಧಾರಣ್ಯದೋಷವನ್ನು ಆಶಂಕಿಸಿದ್ದಾನೆ.

## ಸುಧಾಪರಿಮಳಸಾರ

ಭಾರತಾದಿಗಳನ್ನೇ ದೃಷ್ಟಾಂತಗಳನ್ನಾಗಿ ಹೇಳುವುದಾದರೆ ಆದರಲ್ಲಿ "ಭಾರತಾದ್ಯಶೇಷಸಚ್ಛಾಸ್ತ್ರಪ್ರಭವ-ಪ್ರಣೀತತ್ವ" ಎಂಬ ಹೇತು ಬರದಿರುವುದರಿಂದ "ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪ-ದಿಷ್ಟತ್ವಾತ್" ಎಂಬುದನ್ನು ಮಾತ್ರ ಹೇತು ಎಂದು ಹೇಳಿದಂತಾಯಿತು; ಹೌದು. ಅದನ್ನೇ ಹೇತು ಮಾಡುತ್ತೇವೆ. ಅಷ್ಟರಿಂದಲೇ ಹಿಂದಿನ ವ್ಯಭಿಚಾರ ಪರಿಹಾರ ಆಗುತ್ತದೆ. ಹೀಗೆ ಅಷ್ಟನ್ನೆ ಹೇತು ಮಾಡುವುದಿದ್ದರೆ ಶ್ಲೋಕದಲ್ಲಿ "ಗುರುರ್ಗುರೂಣಾಂ ಪ್ರಭವಃ" ಇತ್ಯಾದಿ ಹೇಳಿದ್ದು ವ್ಯರ್ಥ? ಎಂಬ ಶಂಕೆ ಮಾಡಬಾರದು. ಭಾರತಾದ್ಯಶೇಷ-ಪ್ರಭವ ಎಂಬೀ ಅಂಶವು ಹೇತುವಿನಲ್ಲಿ ಸೇರದಿದ್ದರೂ ದೃಷ್ಟಾಂತವನ್ನು ತೋರಿಸುವುದಕ್ಕಾಗಿ ಅದನ್ನು ಗ್ರಹಣ ಮಾಡಿರುವುದು ಸಾರ್ಥಕವಾಗುತ್ತದೆ.

## ನೆನೆಪಿಡಿ

* ಶಾಸ್ತ್ರಪ್ರಭವತ್ವವನ್ನು ವಿಶೇಷಣವನ್ನಾಗಿ ಹೇಳಿದರೆ ಅಸಾಧಾರಣದೋಷವು ಬರುತ್ತದೆ. ಆದ್ದರಿಂದ ಮೋಕ್ಷಾರ್ಥಂ ಉಪದಿಷ್ಟತ್ವಮ್ ಎಂಬ ವಿಶೇಷ್ಯವಷ್ಟೇ ಹೇತುಶರೀರದಲ್ಲಿ ಸಾಕು. (ಪರಿಮಳ)

* ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ ಪೂರ್ವಾರ್ಧದ ವಿಶೇಷಣಗಳು ಹೇತು-ಶರೀರದಲ್ಲಿ ಸೇರಿರುವುದಿಲ್ಲ. ಉತ್ತರಾರ್ಧದಲ್ಲಿರುವ ವಿಶೇಷಣಗಳಷ್ಟೇ ಹೇತುಶರೀರದಲ್ಲಿ ಸೇರುತ್ತವೆ. (ಯಾದುಪತ್ಯ)

* ಮೊದಲು 'ಗುರೂಣಾಂ ಗುರುಣೋದಿತತ್ವೇ ಸತಿ, ಶಾಸ್ತ್ರಪ್ರಭವೇಣೋದಿತತ್ವೇ ಸತಿ, ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ, ತದರ್ಥತಃ ಉದಿತತ್ವಾತ್' ಎಂಬುದು ಮಿಲಿತ-ವಾದ ಹೇತುವಾಗಿದೆ ಇದರಿಂದ ವ್ಯಭಿಚಾರಾದಿ ದೋಷಗಳು ಬರುವುದಿಲ್ಲವೆಂದು ಹೇಳಿದರು. 'ಭಾರತಾದ್ಯಶೇಷಸಚ್ಛಾಸ್ತ್ರಪ್ರಭವಪ್ರಣೀತತ್ವೇ ಸತಿ ಗುರುಭ್ಯಃ ಶ್ರೋತೃಭ್ಯಃ ಉದಿತತ್ವೇ ಸತಿ ತದರ್ಥತಃ ಉದಿತತ್ವಾತ್' ಎಂಬುದಾಗಿ ಪರಿಷ್ಕರಿಸಿದರು. ಈಗ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂದಷ್ಟೇ ಮಿಲಿತವಾದ ಹೇತುವಿನ ಸ್ವರೂಪ ಎಂದು ಹೇತುಶರೀರವನ್ನು ಲಘುವಾಗಿ ಮಾಡಲಾಗಿದೆ (ವಾಕ್ಯಾರ್ಥಚಂದ್ರಿಕಾ)

## ಪರಂಪರೆಯಿಂದ ಸಾಧಿಸುವ ಅವಶ್ಯಕತೆ ಏನು ಎಂಬ ಆಕ್ಷೇಪ ದೃಢವಾಯಿತು

**ಶ್ರೀಮನ್ನ್ಯಾಯಸುಧಾ– ತಥಾ ಸತಿ 'ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಮ್' ಇತಿ ವ್ಯರ್ಥಮಾಪದ್ಯತ ಇತಿ ಚೇನ್ನ । ತಸ್ಯ ಹೇತುಶರೀರಾಪ್ರವೇಶಿನೋऽಪಿ ದೃಷ್ಟಾಂತೋಪದರ್ಶನಾದಿನಾ ಸಾರ್ಥಕ್ಯೋಪಪತ್ತೇರಿತಿ ।**

ಹಾಗಾದರೆ ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಎಂದು ಶ್ಲೋಕದಲ್ಲಿ ಹೇಳಿರುವುದು ವ್ಯರ್ಥವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಈ ವಿಶೇಷಣಗಳು ಹೇತುಶರೀರದಲ್ಲಿ ಸೇರದೇ ಇರಬಹುದು. ಆದರೆ ದೃಷ್ಟಾಂತಪ್ರದರ್ಶನಕ್ಕಾಗಿ ಸಾರ್ಥಕವಾಗಿವೆ.

## 'ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ' ಎಂಬುದು ದೃಷ್ಟಾಂತಪ್ರದರ್ಶನಕ್ಕಾಗಿ

**ಪರಿಮಳ– ಪರಂಪರಯಾ ಹೇತುವಾದೀ ಶಂಕತೇ – ತಥಾ ಸತೀತಿ ॥ ಹೇತುಶರೀರೇತಿ ॥ ಯತಃ ಯತಶ್ಚ ಇತ್ಯೇವಂ ಹೇತುಶರೀರಪ್ರವೇಶಿತಯಾ ಪ್ರಯೋಜನಾಭಾವೇऽಪಿ ಗುರೂಣಾಂ ಗುರುರಿತ್ಯಂಶೇನ ಅಜಾದಿಮೋಕ್ಷೋದ್ದೇಶೇನ ಇತ್ಯಂಶಸ್ಯ ಶಾಸ್ತ್ರಾಣಾಂ ಪ್ರಭವಃ ಇತ್ಯಂಶೇನ ಬಾದರಾಯಣೇನೋಕ್ತತ್ವಾಂಶಸ್ಯ ಮಹಾಜನಪರಿಗ್ರಹಾದಿನಾ ಸಿದ್ಧಪ್ರಾಮಾಣ್ಯೇ ಭಾರತಾದೌ ಲಾಭೇನ ಭಾರತಾದಿದೃಷ್ಟಾಂತಃ । ತತ್ರ ಸಾಧನಂ ಚಾಸ್ತೀತಿ ಪ್ರದರ್ಶನೇನ ಸಾರ್ಥಕ್ಯೋಪಪತ್ತೇರಿತ್ಯರ್ಥಃ ।**

'ಪರಂಪರೆಯಿಂದ ಹೇತುವಾಗುತ್ತದೆಂದು ಹೇಳುವವನು ತಥಾ ಸತಿ' ಎಂದು ಆಕ್ಷೇಪ ಮಾಡುತ್ತಿದ್ದಾನೆ. ಹೇತುಶರೀರಾಪ್ರವೇಶಿನಃ' ಎಂಬುದರ ಅಭಿಪ್ರಾಯ ಹೀಗಿದೆ. 'ಶ್ರೀವೇದವ್ಯಾಸದೇವರು ಗುರುಗಳಿಗೂ ಗುರುಗಳಾಗಿರುವುದರಿಂದ' ಎಂಬ 'ಗುರೂಣಾಂ ಗುರುತ್ವಂ' ಎಂಬುದು ಹೇತು ಶರೀರದಲ್ಲಿ ಸೇರಿರುವುದಿಲ್ಲ. ಹೇತುಶರೀರದಲ್ಲಿ ಸೇರಬೇಕೆಂಬ ಉದ್ದೇಶ-

ದಿಂದ ಇದಕ್ಕೆ ಪ್ರಯೋಜನವಿಲ್ಲ. ಆದರೂ ಕೂಡ 'ಗುರೂಣಾಂ ಗುರುಃ' ಎಂಬ ಅಂಶದಿಂದ 'ಬ್ರಹ್ಮಾದಿಗಳನ್ನು ಕುರಿತು ಮೋಕ್ಷದ ಪ್ರಯೋಜನಕ್ಕಾಗಿ ಉಪದೇಶಿಸಲ್ಪಟ್ಟಿದೆ' ಎಂಬ ಅಂಶವನ್ನು ಮಹಾಭಾರತಕ್ಕೆ ತೋರಿಸುತ್ತದೆ. 'ಶಾಸ್ತ್ರಪ್ರಭವಃ' ಎಂಬ ಅಂಶವು 'ಬಾದರಾಯಣರಿಂದ ಹೇಳಲ್ಪಟ್ಟಿದೆ' ಎಂಬ ಅಂಶವನ್ನು ಅದಕ್ಕೆ ತಿಳಿಸುತ್ತದೆ. ಆದ್ದರಿಂದ ಮಹಾಜನಪರಿಗೃಹೀತತ್ವಾದಿ-ಗಳಿಂದ ನಿಶ್ಚಿತವಾದ ಪ್ರಾಮಾಣ್ಯವುಳ್ಳ ಮಹಾಭಾರತದಲ್ಲಿ 'ಚತುರ್ಮುಖಾದಿಗಳನ್ನು ಕುರಿತು ಮೋಕ್ಷಕ್ಕೋಸ್ಕರ ಉಪದೇಶವಾಗಿರುವಿಕೆ' ಎಂಬ ಹೇತುವು ಬರುತ್ತದೆ. ಆದರಲ್ಲಿ ಪ್ರಾಮಾಣ್ಯವು ಕೂಡ ಇದೆ. ಹಾಗಾಗಿ ಮಹಾಭಾರತವು ದೃಷ್ಟಾಂತವಾಗುತ್ತದೆ. ಹೀಗೆ ತಿಳಿಸುವುದೇ 'ಗುರೂಣಾಂ ಪ್ರಭವಃ, ಶಾಸ್ತ್ರಾಣಾಂ ಬಾದರಾಯಣಃ' ಇತ್ಯಾದಿ ವಿಶೇಷಣಗಳ ಪ್ರಯೋಜನ-ವಾಗಿದೆ ಎಂದಭಿಪ್ರಾಯ.

## ಬಳಸುಮಾರ್ಗ ಏಕೆ?

ವಾಕ್ಯಾರ್ಥಚಂದ್ರಿಕಾ— ತರ್ಹಿ ತಸ್ಯ ಹೇತುಶರೀರಪ್ರವೇಶಾಭಾವೇನ ಪ್ರಯೋಜ-ನಾಂತರಸ್ಯಾಪಿ ಅಭಾವಾದ್ ವೈಯರ್ಥ್ಯಮಾಪದ್ಯೇತೇತಿ ಶಂಕಿತಾ ಸ್ವಾಭಿಪ್ರಾಯಮುದ್ಘಾಟಯತಿ – ತಥಾ ಸತೀತಿ ॥ ಹೇತುಶರೀರಾಪ್ರವೇಶೇಽಪಿ ಪ್ರಕಾರಾಂತರೇಣ ಸಾರ್ಥಕ್ಯಮಿತಿ ಸಿದ್ಧಾಂತೀ ಸ್ವಾಶಯ -ಮುದ್ಘಾಟಯತಿ – ನ ತಸ್ಯೇತಿ ॥ ದೃಷ್ಟಾಂತೇತಿ ॥ ಭಾರತಾದೀನಾಂ ದೃಷ್ಟಾಂತತ್ವಂ ದರ್ಶಯಿತುಂ ತತ್ಪ್ರಭವತ್ವಮುಚ್ಯತ ಇತಿ ಭಾವಃ ॥

ಹಾಗಾದರೆ 'ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ' ಎಂಬುದು ಹೇತುಶರೀರ-ದಲ್ಲಿ ಸೇರುವುದಿಲ್ಲ. ಬೇರೆ ಪ್ರಯೋಜನವೂ ಇರುವುದಿಲ್ಲ. ಆದ್ದರಿಂದ ಇದನ್ನು ಶ್ಲೋಕದಲ್ಲಿ ಹೇಳಿದ್ದು ವ್ಯರ್ಥವಾಯಿತಲ್ಲವೇ? ಎಂಬ ಶಂಕೆಗೆ ಸ್ವಾಭಿಪ್ರಾಯವನ್ನು 'ತಥಾ ಸತಿ' ಎಂಬುದರಿಂದ ಉದ್ಘಾಟನೆ ಮಾಡುತ್ತಿದ್ದಾರೆ. ಇದು ಹೇತುಶರೀರದಲ್ಲಿ ಸೇರದೇ ಇದ್ದರೂ ಕೂಡ ಮತ್ತೊಂದು ಪ್ರಕಾರದಿಂದ ಸಾರ್ಥಕವಾಗುತ್ತದೆ ಎಂಬುದಾಗಿ ಸಿದ್ಧಾಂತಿಯ ನಿಜಾಭಿಪ್ರಾಯವನ್ನು 'ನ ತಸ್ಯ' ಎಂಬುದರಿಂದ ಹೇಳಿ-ದ್ದಾರೆ.

'ದೃಷ್ಟಾಂತೋಪದರ್ಶನಾದಿನಾ' ಎಂದರೆ ಮಹಾಭಾರತಾದಿಗಳು ದೃಷ್ಟಾಂತವಾಗಿವೆ ಎಂದು ತೋರಿಸುವುದಕ್ಕಾಗಿ ಶಾಸ್ತ್ರಪ್ರಭವತ್ವವನ್ನು ಹೇಳಿದ್ದಾರೆಂದು ತಿಳಿಯತಕ್ಕದ್ದು.

ವಿವರಣೆ - ಭಾರತದಲ್ಲಿ "ಭಾರತವನ್ನು ರಚನೆ ಮಾಡಿರುವ ವ್ಯಾಸರಿಂದ ರಚಿತವಾದದ್ದು" ಎಂಬ ಹೇತು ಬರುವುದಿಲ್ಲ. "ಬ್ರಹ್ಮಾದಿಗಳನ್ನು ಕುರಿತು ಅವರ ಮೋಕ್ಷಕ್ಕಾಗಿ ಬಾದರಾಯಣರಿಂದ ಉಪದೇಶಿಸಲ್ಪಟ್ಟದ್ದು" ಎಂಬ ಅಂಶ ಮಾತ್ರ ಭಾರತದಲ್ಲಿ ಇರುವಂತಹದು. ಆದ್ದರಿಂದ ಅದೇ ಹೇತು ಎಂದಾಯಿತು.

ಮೇಲಿನ ಆಕ್ಷೇಪಕ್ಕೆ ಸಮಾಧಾನ— ಹೌದು, ಬ್ರಹ್ಮಾದಿಗಳನ್ನು ಕುರಿತು ಮೋಕ್ಷಕ್ಕಾಗಿ ಬಾದರಾಯಣರಿಂದ ಉಪದೇಶಿಸಲ್ಪಟ್ಟಿರುವುದು ಎಂಬುದೇ ಹೇತು. ಇಷ್ಟನ್ನೇ ಹೇತುವಾಗಿ ಅಂಗೀಕರಿಸಿದರೂ ಹಿಂದೆ ಹೇಳಿದ ವ್ಯಭಿಚಾರದೋಷ ಬರುವುದಿಲ್ಲ. ಹಾಗಾದರೆ "ಶ್ರೇಷ್ಠವಾದ ಭಾರತಾದಿಗಳನ್ನು ರಚಿಸಿದ ವ್ಯಾಸರಿಂದ ರಚಿತವಾದದ್ದು (ಗುರೂಣಾಂ ಶಾಸ್ತ್ರಾಣಾಂ ಪ್ರಭವೇನ ಉದಿತತ್ವ)" ಎಂಬುದು ಹೇತು ಅಲ್ಲ ಎಂದಾಯಿತು. ಹೇತುವಲ್ಲದಿದ್ದರೆ ಅದನ್ನು ಹೇಳಿದ್ದೇ ವ್ಯರ್ಥವಾಯಿತಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಬ್ರಹ್ಮಾದಿಗಳಿಗೆ ಮೋಕ್ಷಕ್ಕಾಗಿ ವ್ಯಾಸರಿಂದ ರಚಿತವಾದ ಭಾರತಾದಿಗಳು ಹೇಗೆ ಪ್ರಮಾಣವೋ ಹಾಗೆಯೇ ಬ್ರಹ್ಮಾದಿಗಳಿಗೆ ಮೋಕ್ಷಕ್ಕಾಗಿ ವ್ಯಾಸರಿಂದ ರಚಿತವಾದ ಬ್ರಹ್ಮಮೀಮಾಂಸಾ-ಶಾಸ್ತ್ರವೂ ಪ್ರಮಾಣ ಎಂದು ಭಾರತವನ್ನು ದೃಷ್ಟಾಂತವನ್ನಾಗಿ ತಿಳಿಸುವ ಉದ್ದೇಶದಿಂದ "ಭಾರತಾದಿಗಳನ್ನು ರಚಿಸಿದ ವ್ಯಾಸರಿಂದ ರಚಿತತ್ವ" ಎಂಬ ಅಂಶವನ್ನು ತಿಳಿಸಿದ್ದು. ಆದುದರಿಂದ ವ್ಯರ್ಥವಲ್ಲ. ಹೀಗೆ 'ಗುರುರ್ಗುರೂಣಾಂ ಪ್ರಭವಃ...' ಎಂಬ ಪದ್ಯಭಾಗದಿಂದ ಸೂಚಿತವಾದ ಹೇತುಗಳಿಂದ ಅಲ್ಲಿಯೇ "ಮಾನಂ" ಎಂಬ ಪದದಿಂದ ತಿಳಿಸಿರುವ ಪ್ರಾಮಾಣ್ಯವನ್ನು ನೇರವಾಗಿ ಸಾಧಿಸುವ ಸರಳ ಮಾರ್ಗವನ್ನು ಬಿಟ್ಟು ಪದ್ಯದಲ್ಲಿ ತಿಳಿಸದೆ ಇರುವ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳನ್ನು ಸಾಧಿಸಿ ತನ್ಮೂಲಕ ಆಪ್ತವಾಕ್ಯತ್ವವನ್ನು ಪ್ರತಿಪಾದಿಸಿ ಅದರಿಂದ ಪ್ರಾಮಾಣ್ಯವನ್ನು ಸಾಧಿಸುವ ಬಳಸುಮಾರ್ಗವನ್ನು ಅನುಸರಿಸಿರುವುದು ಏಕೆ?

## ಸುಧಾಪರಿಮಳಸಾರ

'ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ' ಎಂಬ ವಿಶೇಷಣಗಳನ್ನು ದೃಷ್ಟಾಂತಪ್ರದರ್ಶನಕ್ಕಾಗಿ ಮಾತ್ರ ಹೇಳಲಾಗಿದೆ. ಇದು ಹೇತುಶರೀರದಲ್ಲಿ ಸೇರಿರುವುದಿಲ್ಲ. ಬ್ರಹ್ಮಾದಿಗಳನ್ನು ಕುರಿತು ಮೋಕ್ಷಪ್ರಯೋಜನಕ್ಕಾಗಿ ಉಪದೇಶಿಸಲ್ಪಟ್ಟದೆ ಎಂಬುದಷ್ಟೇ ಮಿಲಿತವಾದ ಹೇತುಶರೀರವಾಗಿದೆ. ಹೀಗೆ ಹೇಳಿದಾಗ 'ಮಾನಮ್' ಎಂಬ ಪದದಿಂದ ತಿಳಿಯುವ ಪ್ರಾಮಾಣ್ಯದ ಜೊತೆಗೆ ಅನ್ವಯವನ್ನು ಮಾಡಬಹುದು. ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧನೆ ಮಾಡುವ ಮೂಲಕ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿ ತನ್ಮೂಲಕ ಪ್ರಾಮಾಣ್ಯವನ್ನು ಸಾಧಿಸುವ ಅವಶ್ಯಕತೆ ಏನು? ಇಷ್ಟು ಆಕ್ಷೇಪ.

## ಪ್ರಾಮಾಣ್ಯವು ಸಾಕ್ಷಾತ್ ಸಾಧ್ಯವೆಂದು ಪರಿಗಣಿಸಿದರೆ ಅಸಂಗತಿ ಹಾಗೂ ವಿರೋಧಗಳು

**ಶ್ರೀಮನ್ನ್ಯಾಯಸುಧಾ– ಸತ್ಯಮ್ । ತಥಾಽಪಿ ನೈತದೇವಂ ವಿಜ್ಞಾತುಂ ಶಕ್ಯಮ್ । ತಥಾ ಸತ್ಯುತ್ತರವಾಕ್ಯೇ ವಕ್ತ್ರಾದ್ಯಾನುಕೂಲ್ಯಸ್ಯ ಸಾಧ್ಯಸಂಬಂಧವ್ಯುತ್ಪಾದನಮಸಂಗತಂ ಸ್ಯಾತ್ ।**

**ತದನುಮಾನಾಂತರಂ ಭವಿಷ್ಯತೀತಿ ಚೇನ್ನ । ತಥಾತ್ವೇ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಇತಿ ವಕ್ಷ್ಯಮಾಣವಿರೋಧಾತ್ ।**

ಮೇಲಿನ ಆಕ್ಷೇಪಕ್ಕೆ ಉತ್ತರ ಹೀಗಿದೆ – ಹೌದು! ಆದರೂ ಕೂಡ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಆಪಾತತಃ ಕಾಣುವಂತೆ ಪ್ರಾಮಾಣ್ಯವನ್ನು ಸಾಕ್ಷಾತ್ ಸಾಧ್ಯ ಎಂದು ತಿಳಿಯಲು ಸಾಧ್ಯವಿಲ್ಲ. ಹಾಗಾದಲ್ಲಿ ಇದರ ಮುಂದಿನ ವಾಕ್ಯದಲ್ಲಿ ವಕ್ತ್ರಾದ್ಯಾನುಕೂಲ್ಯಕ್ಕೆ ಪ್ರಾಮಾಣ್ಯದ ಜೊತೆ ಸಾಧ್ಯ-ಸಾಧನಭಾವಸಂಬಂಧವನ್ನು ತಿಳಿಸಿದ್ದು ಅಸಂಗತವಾಗುತ್ತದೆ.

ಪ್ರಾಮಾಣ್ಯಸಾಧನೆಗೆ ಮುಂದೆ ಹೇಳುವುದು ಬೇರೆ ಅನುಮಾನ ಆಗಬಹುದಲ್ಲವೇ? ಎಂಬ ಪ್ರಶ್ನೆ ತಪ್ಪು. ಹಾಗಾದರೆ ಅದೂ ಕೂಡ ಪ್ರಾಮಾಣ್ಯಸಾಧನ ಅನುಮಾನವೆಂದು ಪರಿಗಣಿಸಿದಾಗ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬುದಾಗಿ ಮುಂದಿನ ಆಚಾರ್ಯರ ಮಾತಿಗೆ ವಿರೋಧ ಬರುತ್ತದೆ.

## ಪ್ರಾಮಾಣ್ಯಂ ತ್ರಿವಿಧಂ ಮಹತ್ ಎಂಬ ಮಾತೇ ತಪ್ಪಾದೀತು

ಪರಿಮಳ– ಏವಮಿತಿ ॥ ಸಾಕ್ಷಾದ್ಧೇತುತ್ವೇನ ಇತ್ಯರ್ಥಃ । ಸಾಧ್ಯೇತಿ ॥ ಆಪ್ತಿಪದೋಕ್ತಾಪ್ತಿವಾಕ್ಯತ್ವರೂಪಸಾಧ್ಯಾ ಇತ್ಯರ್ಥಃ ।

ತದನುಮಾನಾಂತರಮಿತಿ ॥ 'ವಿಮತಂ ಶಾಸ್ತ್ರಂ ಮಾನಂ ಭವಿತುಮರ್ಹತಿ ಅಜಾದಿಮೋಕ್ಷೋದ್ದೇಶೇನ ವ್ಯಾಸಪ್ರೋಕ್ತತ್ವಾದ್ ಭಾರತವತ್' ಇತಿ ಪೂರ್ವಶ್ಲೋಕೋಕ್ತಾನುಮಾನಾದ್ 'ವಿಮತಂ ಮಾನಮ್ ಆಪ್ತವಾಕ್ಯತ್ವಾತ್' ಇತಿ ಪ್ರಾಮಾಣ್ಯೇ ಅನುಮಾನಾಂತರಂ ಭವಿಷ್ಯತೀತಿ ಆಪ್ತವಾಕ್ಯತ್ವಾಸಿದ್ಧಿಪರಿಹಾರಾರ್ಥಂ ವಕ್ತೃಶ್ರೋತ್ರಿತ್ಯಾದಿಸಾರ್ಥಕಂ ಭವಿಷ್ಯತೀತ್ಯರ್ಥಃ ॥ ತ್ರಿವಿಧಮಿತೀತಿ ॥ ಆಪ್ತಿಮೂಲತ್ವಶ್ರುತಿಮೂಲತ್ವಯುಕ್ತಿಮೂಲತ್ವರೂಪತ್ರೈವಿಧ್ಯವದಜಾದಿಮೋಕ್ಷೋದ್ದೇಶೇನ ಪ್ರೋಕ್ತತ್ವರೂಪೈಕವಿಧಸ್ಯಾಧಿಕಸ್ಯ ಪ್ರಾಪ್ತತಯಾ ಪ್ರಾಮಾಣ್ಯಂ ಚತುರ್ವಿಧಂ ಮಹತ್ ಇತಿ ವಕ್ತವ್ಯಂ ಸ್ಯಾದಿತಿ ಭಾವಃ ॥

'ಏವಮ್' – 'ಪ್ರಮಾಣ್ಯದ ಸಾಕ್ಷಾತ್ ಹೇತುಗಳಾಗಿವೆ' ಎಂದರ್ಥ.

'ಸಾಧ್ಯಸಂಬಂಧವ್ಯುತ್ಪಾದನಮ್' – 'ಟೀಕಾವಾಕ್ಯದಲ್ಲಿ ವಕ್ತ್ರಾದ್ಯಾನುಕೂಲ್ಯಸ್ಯ ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಆಪ್ತವಾಕ್ಯತ್ವವೆಂಬ ಸಾಧ್ಯವನ್ನು ವಿವಕ್ಷಿಸಿದ್ದಾರೆ. ಈ ಆಪ್ತವಾಕ್ಯತ್ವಕ್ಕೂ ವಕ್ತ್ರಾದ್ಯಾನುಕೂಲ್ಯಕ್ಕೂ, ಪ್ರಾಮಾಣ್ಯಕ್ಕೂ ಆಪ್ತವಾಕ್ಯತ್ವಕ್ಕೂ ಇರುವ ಸಾಧ್ಯಸಾಧನಭಾವಸಂಬಂಧವನ್ನು ಹೇಳುವುದು ಎಂಬುದು ಇದರ ಅರ್ಥ.

'ತದನುಮಾನಾಂತರಮ್' – 'ವಿಮತಂ ಶಾಸ್ತ್ರಂ ಮಾನಂ ಭವಿತುಮರ್ಹತಿ ಅಜಾದಿಮೋಕ್ಷೋದ್ದೇಶೇನ ವ್ಯಾಸಪ್ರೋಕ್ತತ್ವಾದ್ ಭಾರತವತ್' ಎಂಬುದು ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ ವಿವಕ್ಷಿತವಾದ ಅನುಮಾನ. ಇದಕ್ಕಿಂತ ಬೇರೆಯಾದ 'ವಿಮತಂ ಮಾನಮ್ ಆಪ್ತವಾಕ್ಯತ್ವಾತ್' ಎಂಬ ಅನುಮಾನವನ್ನು ಮುಂದಿನ ಶ್ಲೋಕದಲ್ಲಿ ವಿವಕ್ಷಿಸುತ್ತಾರೆ. ಆದ್ದರಿಂದ ಪ್ರಾಮಾಣ್ಯವಿಷಯದಲ್ಲಿ ಈ ಶ್ಲೋಕದಲ್ಲಿ ಹೇಳಿದ ಅನುಮಾನವೇ ಬೇರೆ, 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಶ್ಲೋಕದಲ್ಲಿ ಹೇಳುವ ಅನುಮಾನವೇ ಬೇರೆ. ಹೀಗೆ ಹೇಳಿದಾಗ ಎಲ್ಲವೂ ಸಾರ್ಥಕವಾಗುತ್ತದೆ ಎಂಬುದು ಆಕ್ಷೇಪದ ಅಭಿಪ್ರಾಯ.

'ತ್ರಿವಿಧಮಿತಿ' – ಆಪ್ತಿಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವ ಎಂಬುದಾಗಿ ಮೂರು ಬಗೆಯ ಪ್ರಾಮಾಣ್ಯವನ್ನು ತಿಳಿಯಬೇಕೆಂದು ಮುಂದೆ ಆಚಾರ್ಯರೇ ಹೇಳುತ್ತಾರೆ. ಪ್ರಕೃತ 'ಅಜಾದಿಮೋಕ್ಷೋದ್ದೇಶೇನ ಪ್ರೋಕ್ತತ್ವಾತ್' ಎಂಬ ಮತ್ತೊಂದು ಬಗೆಯ ಪ್ರಾಮಾಣ್ಯ-

ವನ್ನು ವಿವಕ್ಷಿಸಿದರೆ 'ಚತುರ್ವಿಧಂ ಮಹತ್' ಎಂದು ಹೇಳಬೇಕಾಗುತ್ತದೆ. ಹಾಗಿಲ್ಲದ ಕಾರಣ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಹೇಳಿದ ಯುಕ್ತಿಯು ಪ್ರಾಮಾಣ್ಯಸಾಧಕವಲ್ಲವೆಂದೇ ಅಂಗೀಕರಿಸಬೇಕು.

ವಿವರಣೆ– ಜಗದ್ಗುರುಗುರುಪ್ರಣೀತತ್ವ, ಶಾಸ್ತ್ರಪ್ರಭವೋದಿತತ್ವಾದಿಹೇತುಗಳಿಂದ ಪ್ರಾಮಾಣ್ಯವನ್ನೇ ಸಾಧನೆ ಮಾಡುವುದನ್ನು ಬಿಟ್ಟು ವಕ್ತ್ರಾದ್ಯಾನುಕೂಲ್ಯವನ್ನು ಸಾಧನೆ ಮಾಡುವುದು ಏಕೆ? ಎಂಬ ಪ್ರಶ್ನೆ ಮೇಲುನೋಟಕ್ಕೆ ಬರುತ್ತದೆ. ಆದರೆ ಇವನ್ನು ಸಾಧನೆಗೆ ಸಾಕ್ಷಾತ್ ಹೇತುಗಳೆಂದು ಅರ್ಥೈಸಲು ಸಾಧ್ಯವಿಲ್ಲ. ಮುಂದಿನ ಗ್ರಂಥಭಾಗವನ್ನು ನೋಡಿದಾಗ ಇದು ಸ್ಪಷ್ಟವಾಗುತ್ತದೆ.

ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।
ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ ॥
ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।
ದೃಶ್ಯತೇ ಬ್ರಹ್ಮಸೂತ್ರಾಣಾಂ ..................... ॥

ಎಂಬ ಮುಂದಿನ ಗ್ರಂಥಭಾಗದಲ್ಲಿ ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧಿಸಿ ಆಪ್ತ-ವಾಕ್ಯತ್ವದಿಂದ ಪ್ರಾಮಾಣ್ಯವನ್ನು ಬ್ರಹ್ಮಸೂತ್ರಗಳಿಗೆ ಸಾಧಿಸಿರುವುದು ಕಂಡು ಬರುತ್ತದೆ. 'ಗುರು-ರ್ಗುರೂಣಾಂ ......' ಎಂಬ ಶ್ಲೋಕದಲ್ಲಿ ಜಗದ್ಗುರುಗುರುಪ್ರಣೀತತ್ವ ಮೊದಲಾದ ಹೇತುಗಳಿಂದ ಪ್ರಾಮಾಣ್ಯವನ್ನೇ ಸಾಧಿಸಲಾಗಿದೆ ಎಂದು ತಿಳಿದರೆ ಮುಂದಿನ ಶ್ಲೋಕದಲ್ಲಿ ಆಪ್ತವಾಕ್ಯತ್ವದ ಮೂಲಕ ವಕ್ತ್ರಾದ್ಯಾನುಕೂಲ್ಯಕ್ಕೆ ಪ್ರಾಮಾಣ್ಯವನ್ನು ಸಾಧ್ಯದ ಸಂಬಂಧವನ್ನು ತೋರಿಸಿರುವುದು ಅಸಂಗತ-ವಾಗುತ್ತದೆ.

''ಗುರುರ್ಗುರೂಣಾಂ......'' ಎಂಬ ಶ್ಲೋಕದಲ್ಲಿ 'ವಿಮತಂ ಶಾಸ್ತ್ರಂ ಮಾನಂ ಭವಿತುಮರ್ಹತಿ ಅಜಾದಿಮೋಕ್ಷೋದ್ದೇಶೇನ ವ್ಯಾಸಪ್ರೋಕ್ತತ್ವಾತ್ । ಭಾರತಾದಿವತ್', (ಅಜಾದಿಗಳ ಮೋಕ್ಷಕ್ಕಾಗಿ ವೇದವ್ಯಾಸರು ಹೇಳಿದುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಭಾರತದಂತೆ ಪ್ರಮಾಣವು) ಎಂಬ ಅನುಮಾನವು ಸೂಚಿತವಾಗಿದೆ. ವಕ್ತೃಶ್ರೋತೃಪ್ರಸಕ್ತೀನಾಂ ಎಂಬಿತ್ಯಾದಿ ಮುಂದಿನ ಪದ್ಯದಲ್ಲಿ ವಿಮತಂ ಶಾಸ್ತ್ರಂ ಪ್ರಮಾಣಂ ಆಪ್ತವಾಕ್ಯತ್ವಾತ್ (ವಕ್ತ್ರಾನುಕೂಲ್ಯಾದಿ ಆಪ್ತಿ ಉಳ್ಳ ವೇದವ್ಯಾಸರ ವಾಕ್ಯವಾಗಿ-ರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮಾಣ) ಎಂಬೀ ರೀತಿಯ ಬೇರೊಂದು ಅನುಮಾನವನ್ನು ಸೂಚಿಸುತ್ತಿದ್ದಾರೆ. ಹೀಗೆ ಹೇಳಿದಾಗ ಎರಡು ಗ್ರಂಥಭಾಗಕ್ಕೆ ಯಾವ ಅಸಂಗತಿಯೂ ಇಲ್ಲ. ಆದ್ದರಿಂದ

ವಕ್ತೃಶ್ರೋತೃಪ್ರಸಂಗಾನುಕೂಲ್ಯವನ್ನು "ಗುರುರ್ಗುರೂಣಾಂ...." ಎಂಬ ಪದ್ಯದಲ್ಲಿ ಹೇಳಿರುವ ಹೇತುಗಳಿಂದ ಸಾಧಿಸಿ, 'ವಕ್ತೃಶ್ರೋತೃ.....' ಎಂಬ ಪದ್ಯಭಾಗದಲ್ಲಿ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸಲಾಗಿದೆ ಎಂದು ಏಕೆ ಅರ್ಥೈಸಬೇಕು?

ಈ ಆಕ್ಷೇಪಕ್ಕೆ ಉತ್ತರ ಹೀಗಿದೆ – ಸಾಕ್ಷಾತ್ತಾಗಿ ಪ್ರಾಮಾಣ್ಯವನ್ನೇ ಸಾಧಿಸುವ ಎರಡು ಅನುಮಾನಗಳೆಂದು ಅರ್ಥೈಸಿದರೆ ಆಪ್ತಿಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವಗಳಿಂದ ಮತ್ತು ಅಜಾದಿಗಳ ಮೋಕ್ಷಕ್ಕೋಸ್ಕರ ವ್ಯಾಸರಿಂದ ಹೇಳಲ್ಪಟ್ಟದ್ದು ಎಂಬ ನಾಲ್ಕು ಹೇತುಗಳಿಂದ ಪ್ರಾಮಾಣ್ಯವನ್ನು ಸಾಧಿಸಿದಂತಾಯಿತು. ಆಗ ಪ್ರಾಮಾಣ್ಯವು ಚತುರ್ವಿಧವಾಯಿತು. ಆದರೆ ಮುಂದೆ ಆಚಾರ್ಯರು "ಪ್ರಾಮಾಣ್ಯಂ ತ್ರಿವಿಧಂ" (ಪ್ರಾಮಾಣ್ಯವು ಮೂರು ಬಗೆಯದು) ಎಂದು ಹೇಳುತ್ತಿದ್ದಾರೆ. ಆ ಆಚಾರ್ಯರ ಮಾತಿನ ವಿರೋಧ ಬರುತ್ತದೆ.

## ಗ್ರಂಥಕಾರರ ಅಭಿಪ್ರಾಯ ಏನಿರಬಹುದು?

ವಾಕ್ಯಾರ್ಥಚಂದ್ರಿಕಾ– ಕಿಂ ಗ್ರಂಥಕೃತೋಽಯಮೇವಾಭಿಪ್ರಾಯಃ ಇತಿ ಮನುಷೇ ಆಹೋ -ಸ್ವಿತ್ ಏತಾದೃಶಿ ಲಘೂಪಾಯೇ ಸತಿ ಗ್ರಂಥಕೃತೈವ ಪ್ರಯತ್ನಗೌರವಂ ನಾಶ್ರಯಣೀಯಮ್ । ನಾದ್ಯ ಇತ್ಯಾಹ – ತಥಾಽಪೀತಿ ॥ ತಥಾ ಸತೀತಿ ॥ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪದಿಷ್ಟತ್ವಸ್ಯ ಹೇತುತಯಾ ಗ್ರಂಥಕೃತಾಽಭಿಪ್ರೇತತ್ವೇ ತಸ್ಯೈವ ಮಾನತ್ವರೂಪ-ಸಾಧ್ಯಸಂಬಂಧ ಉತ್ತರವಾಕ್ಯೇ ಪ್ರತಿಪಾದ್ಯಃ ಸ್ಯಾತ್ । ವಕ್ತ್ರಾದ್ಯಾನುಕೂಲ್ಯಸ್ಯ ಮಾನತ್ವೋಪಪಾದ-ಕಾಪ್ತವಾಕ್ಯತಯಾ ವ್ಯಾಪ್ತಿಪಕ್ಷಧರ್ಮತೋಪಪಾದನದ್ವಾರಾ ಮಾನತ್ವರೂಪಸಾಧ್ಯಸಂಬಂಧಕಥನಸ್ಯ ನಾ ಕಾಽಪಿ ಸಂಗತಿರಿತ್ಯರ್ಥಃ।

ವಕ್ತ್ರಾದ್ಯಾನುಕೂಲ್ಯಸ್ಯಾಪಿ ಮಾನತ್ವಹೇತುತ್ವಮಿತ್ಯಭಿಪ್ರಾಯೇಣ ಉತ್ತರವಾಕ್ಯಸಂಗತೇರ್ನ, ತಸ್ಯ 'ಬಾದರಾಯಣೇನ' ಇತ್ಯಾದೇರ್ಮಾನತ್ವಹೇತುತ್ವಾಭಾವಜ್ಞಾಪಕತ್ವಮಿತ್ಯಾಶಯೇನ ಶಂಕತೇ – ತದಿತಿ ॥

'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಹೇಳಿದ ಯುಕ್ತಿಯು ಪ್ರಾಮಾಣ್ಯಕ್ಕೆ ನೇರವಾಗಿ ಸಾಧಕವಾಗಿದೆ ಎಂಬುದು ಗ್ರಂಥಕಾರರಿಗೂ ಕೂಡ ಅಭಿಪ್ರೇತವಾಗಿದೆ ಎಂದು ತಿಳಿದಿರುವಿಯೋ? ಅಥವಾ ಲಘೂಪಾಯವು ಹೀಗಿರುವಾಗ ಗುರೂಪಾಯವನ್ನು ಗ್ರಂಥಕಾರರು ಆಶ್ರಯಿಸುವುದು ತಪ್ಪು

ಎಂಬುದಾಗಿ ಗ್ರಂಥಕಾರರನ್ನೇ ಆಕ್ಷೇಪ ಮಾಡುತ್ತಿರುವಿಯೋ? ಮೊದಲನೆಯ ಪಕ್ಷ ತಪ್ಪು ಎಂಬುದರ ಸಮರ್ಥನೆಗಾಗಿ 'ತಥಾಪಿ' ಇತ್ಯಾದಿ ಗ್ರಂಥವು ಹೊರಟಿದೆ.

'ತಥಾ ಸತಿ' – 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪದಿಷ್ಟತ್ವಾತ್' ಎಂಬ ಹೇತುವು ಪ್ರಾಮಾಣ್ಯಕ್ಕೆ ನೇರವಾಗಿ ಸಾಧಕವಾಗಿದೆ ಎಂಬುದು ಗ್ರಂಥಕಾರರಿಗೆ ಅಭಿಪ್ರೇತವಾಗಿದ್ದರೆ ಉತ್ತರವಾಕ್ಯದಲ್ಲಿ ಇದಕ್ಕೆ ಮಾನತ್ವರೂಪಸಾಧ್ಯಸಂಬಂಧವನ್ನು ಹೇಳಬೇಕಿತ್ತು. ಇದನ್ನು ಬಿಟ್ಟು ವಕ್ತ್ರಾದ್ಯಾನುಕೂಲ್ಯಕ್ಕೆ ಮಾನತ್ವೋಪಪಾದಕವಾದ ಯಾವ ಆಪ್ತವಾಕ್ಯತ್ವವಿದೆಯೋ ಅದರ ಜೊತೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳನ್ನು ಉಪಪಾದನೆ ಮಾಡಿದ್ದು ತನ್ಮೂಲಕವಾಗಿ ಮಾನತ್ವ ಎಂಬ ಸಾಧ್ಯಸಂಬಂಧವನ್ನು ಉಪಪಾದನೆ ಮಾಡಿದ್ದು ಯಾವುದೇ ರೀತಿಯಲ್ಲೂ ಸಂಗತ ಆಗುವುದಿಲ್ಲ.

ವಕ್ತ್ರಾದ್ಯಾನುಕೂಲ್ಯಗಳೂ ಕೂಡ ಪ್ರಾಮಾಣ್ಯಕ್ಕೆ ಹೇತುಗಳಾಗಿವೆ ಎಂಬ ಅಭಿಪ್ರಾಯದಿಂದ ಮುಂದಿನ ಗ್ರಂಥವು ಸಂಗತವಾಗುತ್ತದೆ. ಆದ್ದರಿಂದ ಮುಂದಿನ ಗ್ರಂಥವು 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹಿಂದಿನ ಹೇತುವಿಗೆ ಮಾನತ್ವಹೇತುತ್ವವಿಲ್ಲ ಎಂಬುದಕ್ಕೆ ಜ್ಞಾಪಕವಾಗಲು ಸಾಧ್ಯವೇ ಇಲ್ಲ. ಈ ಅಭಿಪ್ರಾಯದಿಂದ ತತ್' ಇತ್ಯಾದಿಯಾಗಿ ಆಕ್ಷೇಪ ಮಾಡಲಾಗಿದೆ.

ವಿವರಣೆ – 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಮುಂದಿನ ಅನುವ್ಯಾಖ್ಯಾನಶ್ಲೋಕದಲ್ಲಿ ವಕ್ತ್ರಾದ್ಯಾನುಕೂಲ್ಯಗಳಿಗೆ ಆಪ್ತವಾಕ್ಯತ್ವದ ಜೊತೆ ಸಾಧ್ಯಸಾಧನಭಾವಸಂಬಂಧವನ್ನು ತಿಳಿಸಿದ್ದಾರೆ. ಅನಂತರ ಆಪ್ತಿವಾಕ್ಯತ್ವಕ್ಕೆ ಪ್ರಾಮಾಣ್ಯದ ಜೊತೆ ಸಾಧ್ಯಸಾಧನಭಾವಸಂಬಂಧವನ್ನು ತಿಳಿಸಿದ್ದಾರೆ. ಪ್ರಕೃತ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬುದನ್ನು ಪ್ರಾಮಾಣ್ಯದ ಜೊತೆ ಸಂಬಂಧ ಹೇಳಿದರೆ ಯಾವುದೇ ರೀತಿಯಲ್ಲೂ ಸಂಗತಿಯು ಪ್ರಾಪ್ತವಾಗುವುದಿಲ್ಲ.

ಇದರ ಮೇಲೆ ಹೀಗೆ ಆಕ್ಷೇಪ ಬರುತ್ತದೆ. ಮುಂದಿನ ಶ್ಲೋಕದಲ್ಲಿ ವಕ್ತ್ರಾದ್ಯಾನುಕೂಲ್ಯಗಳಿಗೂ ಕೂಡ ಪ್ರಾಮಾಣ್ಯಹೇತುತ್ವವನ್ನು ಹೇಳಲಾಗಿದೆ. ಅಂದಮಾತ್ರಕ್ಕೆ ಈ ಶ್ಲೋಕದಲ್ಲಿ ಹೇಳಿದ ಬಾದರಾಯಣೇನ ಇತ್ಯಾದಿ ಹೇತುವಿಗೆ ಪ್ರಾಮಾಣ್ಯದ ಜೊತೆಗೆ ಹೇತುತ್ವವಿಲ್ಲ ಎಂದೇನರ್ಥವಲ್ಲ. ಇದೂ ಕೂಡ ಹೇತುವಾಗುತ್ತದೆ. ವಕ್ತ್ರಾದ್ಯಾನುಕೂಲ್ಯಗಳು ಕೂಡ ಹೇತುವಾಗುತ್ತವೆ ಎಂದು. ಇದಕ್ಕೆ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬ ಮಾತಿನಿಂದ ವಿರೋಧಬರುತ್ತದೆ ಎಂದು ಉತ್ತರಿಸಿದ್ದಾರೆ.

## 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬಲ್ಲಿ ವಿವಕ್ಷಿತವಾದ ಅನುಮಾನವೇ ಬೇರೆ

**ಯಾದುಪತ್ಕ– ಸಾಧ್ಯಸಂಬಂಧೇತಿ ॥ ಆಪ್ತಿದ್ವಾರಾ ಪ್ರಾಮಾಣ್ಯರೂಪಸಾಧ್ಯಸಾಧಕತಾ-ವ್ಯುತ್ಪಾದನಮಿತ್ಯರ್ಥಃ।**

**ತದನುಮಾನಾಂತರಮಿತಿ ॥ ಗುರುರ್ಗುರೂಣಾಮಿತಿ ಶ್ಲೋಕೋಕ್ತಪ್ರಾಮಾಣ್ಯಸಾಧಕಾನು-ಮಾನಾಪೇಕ್ಷಯಾ 'ವಕ್ತೃಶ್ರೋತೃಪ್ರಸಕ್ತೀನಾಮ್' ಇತ್ಯನೇನ ಉಚ್ಯಮಾನವಕ್ತ್ರಾದ್ಯಾನುಕೂಲ್ಯಸಿದ್ಧ-ಮಾಪ್ತೋಕ್ತತ್ವಂ ಪ್ರಾಮಾಣ್ಯಸಾಧಕಾನುಮಾನಮಪರಮ್ ಇತ್ಯರ್ಥಃ।**

'ಸಾಧ್ಯಸಂಬಂಧವ್ಯುತ್ಪಾದನಮ್' – ಆಪ್ತಿಮೂಲಕತ್ವದ ಮುಖಾಂತರ ಪ್ರಾಮಾಣ್ಯವೆಂಬ ಸಾಧ್ಯಸಾಧಕತ್ವದ ವ್ಯುತ್ಪಾದನೆಯು ಎಂಬುದು ಇದರ ಅರ್ಥ.

'ತದನುಮಾನಾಂತರಮ್'– 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಯಾವ ಪ್ರಾಮಾಣ್ಯ -ಸಾಧಕವಾದ ಅನುಮಾನವಿದೆಯೋ ಅದಕ್ಕಿಂತಲೂ ಭಿನ್ನವಾದ ಅನುಮಾನವು 'ವಕ್ತೃಶ್ರೋತೃ-ಪ್ರಸಕ್ತೀನಾಂ' ಎಂಬ ಶ್ಲೋಕದಲ್ಲಿ ವಿವಕ್ಷಿತವಾಗಿದೆ. ಆದ್ದರಿಂದ – ಎಂಬುದು ಇದರ ಅರ್ಥ.

### ಸುಧಾಪರಿಮಳಸಾರ

ಇಲ್ಲಿಯ ತನಕ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಹೇತುವು ಪ್ರಾಮಾಣ್ಯಕ್ಕೆ ನೇರವಾಗಿ ಏಕೆ ಸಾಧಕವಾಗಬಾರದು ಎಂದು ಆಕ್ಷೇಪ ಮಾಡಲಾಯಿತು. ಇದಕ್ಕೆ ಉತ್ತರವನ್ನು ಇಲ್ಲಿ ಹೇಳುತ್ತಿದ್ದಾರೆ. ಮುಂದಿನ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಅನುವ್ಯಾಖ್ಯಾನ ಶ್ಲೋಕವನ್ನು ಗಮನಿಸಿದಾಗ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವಿಗೆ ಪ್ರಾಮಾಣ್ಯದ ಜೊತೆ ಸಾಧ್ಯಸಾಧನಭಾವಸಂಬಂಧವೇ ಇರುವುದಿಲ್ಲವೆಂದು ಮನದಟ್ಟಾಗುತ್ತದೆ. ಏಕೆಂದರೆ ಮುಂದಿನ ಶ್ಲೋಕದಲ್ಲಿ ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವ-ವನ್ನು, ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸಿದ್ದಾರೆ. ಹಾಗಾಗಿ ಮುಂದಿನ ಶ್ಲೋಕದಲ್ಲಿ ಹೇಳಿರುವ ವಕ್ತ್ರಾದ್ಯಾ-ನುಕೂಲ್ಯಗಳೆಂಬ ಹೇತುವಿಗೆ ಸಾಧಕವಾಗಿ ಹಿಂದಿನ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವನ್ನು ಹೇಳಿದ್ದಾರೆ. ಒಂದು ವೇಳೆ ಪ್ರಾಮಾಣ್ಯಕ್ಕೆ ಸಾಧಕವಾಗಿ ಇದನ್ನು ಹೇತುವೆಂದು ತಿಳಿದು ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಆಪ್ತವಾಕ್ಯತ್ವಾದಿಗಳು ಮತ್ತೊಂದು ಸಾಧಕವೆಂದು ಹೇಳಿದರೆ ಆಗ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬ ಆಚಾರ್ಯರ ಮಾತಿಗೆ ವಿರೋಧ ಬರುತ್ತದೆ. ಹೀಗೆ ಹಿಂದಿನ ಮುಂದಿನ ಆಚಾರ್ಯರ ವಾಕ್ಯಗಳನ್ನು ಗಮನಿಸಿದಾಗ 'ಬಾದರಾಯಣೇನ ಬ್ರಹ್ಮಾದೀನ್

ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬುದು ನೇರವಾಗಿ ಪ್ರಾಮಾಣ್ಯಸಾಧಕವಲ್ಲ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

## ನೆನೆಪಿಡಿ

* ವಿಮತಂ ಶಾಸ್ತ್ರಂ ಮಾನಂ ಭವಿತುಮರ್ಹತಿ ಅಜಾದಿ ಮೋಕ್ಷೋದ್ದೇಶೇನ ವ್ಯಾಸಪ್ರೋಕ್ತತ್ವಾತ್' ಎಂಬ ಅನುಮಾನವನ್ನು ವಿವಕ್ಷಿಸಿದರೆ 'ಪ್ರಾಮಾಣ್ಯಂ ತ್ರಿವಿಧಂ ಮಹತ್ ಎಂಬ ವಿರೋಧ ಬರುತ್ತದೆ. (ಪರಿಮಳ)

* 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವು ಪ್ರಾಮಾಣ್ಯದ ಜೊತೆ ಸಾಧ್ಯಸಾಧನಭಾವಸಂಬಂಧವನ್ನು ಹೊಂದಿದೆ ಎಂದು ಹೇಳಿದರೆ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯದಲ್ಲಿ ಹೇಳಿದ್ದು ಅಸಂಗತವಾಗುತ್ತದೆ. (ವಾಕ್ಯಾರ್ಥಚಂದ್ರಿಕಾ)

* 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವಿಗೆ ಪ್ರಾಮಾಣ್ಯದ ಜೊತೆ ಸಾಧ್ಯಸಾಧನಭಾವಸಂಬಂಧವಿಲ್ಲ ಎಂಬುದನ್ನು ಮುಂದಿನ ಅನುವ್ಯಾಖ್ಯಾನ ಶ್ಲೋಕದಿಂದ ತಿಳಿಯಲು ಸಾಧ್ಯವಿಲ್ಲ ಎಂಬ ಪ್ರಶ್ನೆಗೆ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬುದೇ ಇದಕ್ಕೆ ಗಮಕವಾಗಿದೆ. ಹೀಗೆ ತಿಳಿಯದಿದ್ದರೆ ಈ ವಾಕ್ಯದಿಂದ ವಿರೋಧ ಬರುತ್ತದೆ. (ವಾಕ್ಯಾರ್ಥಚಂದ್ರಿಕಾ)

## ಅರ್ಧಚ(ಜ)ರತೀಯ ನ್ಯಾಯವು ಇಲ್ಲಿ ಅನುಪಪನ್ನವಾಗುತ್ತದೆ

**ಶ್ರೀಮನ್ನ್ಯಾಯಸುಧಾ– ವಿಜಾತೀಯಸಂವಾದಿತ್ವೇನ ಅನಯೋರೈಕ್ಯವಿವಕ್ಷಯಾ ತ್ರಿತ್ವೋಕ್ತಿಃ ಅಸ್ತ್ವಿತಿ ಚೇತ್ । ಏವಂ ತರ್ಹಿ ವಕ್ಷ್ಯಮಾಣಶ್ರುತಿಯುಕ್ತಿಸಂವಾದೋಽಪಿ ಸಜಾತೀಯಸಂವಾದತ್ವೇನೈಕ ಏವ ಸ್ಯಾತ್ । ಅರ್ಧಜ(ಚ)ರತೀಯಾನುಪಪತ್ತೇಃ । ತಥಾ ಚ ಪುನಸ್ತ್ರಿತ್ವಾನುಪಪತ್ತಿರೇವ ।**

ವಕ್ತ್ರಾದ್ಯಾನುಕೂಲ್ಯಗಳಿಂದ ಸಿದ್ಧವಾಗುವ ಆಪ್ತವಾಕ್ಯತ್ವ ಮತ್ತು ಬಾದರಾಯಣೋಪದಿಷ್ಟತ್ವ ಈ ಎರಡು ಅನುಮಾನಗಳು ವಿಜಾತೀಯಸಂವಾದಿಗಳಾಗಿರುವುದರಿಂದ ಒಂದೇ

ವಿಧವಾದ ಪ್ರಮಾಣಗಳಾಗಿವೆ. ಶ್ರುತಿಸಂವಾದ ಹಾಗೂ ಯುಕ್ತಿಸಂವಾದಗಳೆರಡೂ ಸಜಾತೀಯಸಂವಾದಗಳಾಗಿವೆ. ಆದ್ದರಿಂದ ಮೂರು ಬಗೆಯ ಪ್ರಾಮಾಣ್ಯವನ್ನು ಹೇಳಿ-ದಂತಾಯಿತು. 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬುದರ ವಿರೋಧವು ಈಗ ಬರುವುದಿಲ್ಲ. ಏಕೆಂದರೆ, ಅದೇ ಯುಕ್ತಿಯಿಂದ ಶ್ರುತಿಯುಕ್ತಿಸಂವಾದಗಳೂ ಕೂಡ ಸಜಾತೀಯಸಂವಾದದಲ್ಲೇ ಸೇರುತ್ತವೆ. ಒಂದು ಸಜಾತೀಯಸಂವಾದ ಮತ್ತೊಂದು ವಿಜಾತೀಯಸಂವಾದ. ಹೀಗೆ ಎರಡೇ ಪ್ರಮಾಣಗಳಾಗುತ್ತವೆ. ಅರ್ಧಚರತೀಯನ್ಯಾಯವು ಇಲ್ಲಿ ಉಪಪನ್ನವಾಗುವುದಿಲ್ಲ. ಆದ್ದರಿಂದ ಪುನಃ ತ್ರಿವಿಧಪ್ರಾಮಾಣ್ಯವನ್ನು ಹೇಳಿದ್ದು ಅನುಪಪನ್ನವೇ ಆಗುತ್ತದೆ.

## ಸಜಾತೀಯಸಂವಾದ ವಿಜಾತೀಯಸಂವಾದಗಳ ಪರಿಚಯ

ಪರಿಮಳ– ವಿಜಾತೀಯೇತಿ ॥ ಶಾಸ್ತ್ರಪ್ರತಿಪಾದ್ಯಾರ್ಥವಿಷಯಕಂ ಸಜಾತೀಯಂ ವಿಜಾತೀಯಂ ತು ಸಾಕ್ಷಾತ್ ತದರ್ಥಾವಿಷಯಕಂ ತತ್ಪ್ರಾಮಾಣ್ಯನಿಶ್ಚಾಯಕಮ್ । ಯಥಾ ಸತ್ಯರಜತೇ 'ಇದಂ ರಜತಮ್' ಇತಿ ಜ್ಞಾನಸ್ಯ ತಾದೃಶಜ್ಞಾನಾಂತರಂ ಸಜಾತೀಯಮ್ । ವಿಜಾತೀಯಂ ತು ಕಟಕಾದ್ಯರ್ಥಕ್ರಿಯಾಕಾರಿತ್ವಮ್ । ಪ್ರಕೃತೇ ಚ ವಕ್ಷ್ಯಮಾಣದಿಶಾ ಶ್ರುತಿಯುಕ್ತ್ಯೋರ್ಬ್ರಹ್ಮತಂತ್ರಾರ್ಥಸಮಾನವಿಷಯಕತ್ವಮೇವ ಸಾಕ್ಷಾದಿತಿ ಸಜಾತೀಯಮ್ । ಅಜಾದಿಮೋಕ್ಷೋದ್ದೇಶೇನೋಕ್ತತ್ವಸ್ಯಾಪ್ತವಾಕ್ಯತ್ವಸ್ಯ ಚ ನ ಸಾಕ್ಷಾತ್ ತದರ್ಥವಿಷಯಕತ್ವಂ ಕಿಂತು ತತ್ಪ್ರಾಮಾಣ್ಯವಿಷಯಕತಯಾ ಇತಿ ವಿಜಾತೀಯತ್ವಮ್ । ಅತೋ ವಿಜಾತೀಯ-ಸಂವಾದಿತ್ವೇನ ಸಜಾತೀಯಸಂವಾದತಯೇತ್ಯುಕ್ತಮ್ । ತಥಾ ಚ ದ್ವೈವಿಧ್ಯಮೇವ ಪ್ರಾಮಾಣ್ಯಸ್ಯ ಪ್ರಾಪ್ತಂ ನ ತ್ರೈವಿಧ್ಯಮಿತಿ ಭಾವಃ । ಅರ್ಧಚರತೀಯೇತಿ ॥ ಸಗರ್ಭಮತ್ಸ್ಯಸ್ಯ ಅರ್ಧಂ ಭಕ್ಷಣಾಯ, ಅರ್ಧಂ ಪ್ರಸವಾಯೇತಿ ಯಥಾ ನ ಯುಕ್ತಂ ತಥಾ ಇತ್ಯರ್ಧ-ಚರತೀಯನ್ಯಾಯ ಇತ್ಯೇಕೇ । ಅಲಾಬ್ವಾದಿಫಲಾದೇರರ್ಧಂ ಭಕ್ಷಣಾಯ, ಅರ್ಧಂ ಬೀಜಾಭಿವೃದ್ಧಿದ್ವಾರಾ ಅಂಕುರಾದಿಪ್ರಸವಾಯ ಯಥಾ ನ ಯುಕ್ತಂ ತಥಾ ಇತ್ಯರ್ಥಃ ಇತ್ಯನ್ಯೇ ।

ಶಾಸ್ತ್ರದಲ್ಲಿ ಹೇಳಲ್ಪಡುವ ವಿಷಯವನ್ನು ವಿಷಯೀಕರಿಸುವ ಸಂವಾದವು 'ಸಜಾತೀಯ-ಸಂವಾದ' ಎನಿಸುತ್ತದೆ.

ಶಾಸ್ತ್ರದಲ್ಲಿ ಹೇಳುವ ಅರ್ಥಗಳನ್ನು ಸಾಕ್ಷಾತ್ತಾಗಿ ವಿಷಯೀಕರಿಸದೇ ಪ್ರಾಮಾಣ್ಯದ ಮೂಲಕವಾಗಿ ವಿಷಯೀಕರಿಸುವ ಸಂವಾದವು 'ವಿಜಾತೀಯಸಂವಾದ' ಎನಿಸುತ್ತದೆ. ಉದಾ-ಹರಣೆ – ಸತ್ಯವಾದ ರಜತವನ್ನು ನೋಡಿದಾಗ 'ಇದು ರಜತ' ಎಂಬ ಜ್ಞಾನವು ಬರುತ್ತದೆ. ಇದೇ ರೀತಿಯಾಗಿ ಮತ್ತೊಮ್ಮೆ ಇದು ರಜತ ಎಂಬ ಜ್ಞಾನವು ಬಂದರೆ ಮೊದಲಿನ ರಜತ-ಜ್ಞಾನಕ್ಕೆ ಎರಡನೆಯದ್ದು ಸಜಾತೀಯಸಂವಾದ ಎನಿಸುತ್ತದೆ. 'ಇದಂ ರಜತಮಿತಿ ಜ್ಞಾನಂ ಪ್ರಮಾಣಂ ಕಟಕಾದ್ಯರ್ಥಕ್ರಿಯಾಕಾರಿತ್ವಾತ್' 'ಈ ರಜತಜ್ಞಾನವು ಪ್ರಮಾಣವಾಗಿದೆ. ಏಕೆಂದರೆ ಬಳೆ ಮೊದಲಾದ ವಸ್ತುಗಳನ್ನು ಇದರಿಂದ ಮಾಡಬಹುದು' ಎಂಬ ಯುಕ್ತಿಯು ವಿಜಾತೀಯ-ಸಂವಾದ ಎನಿಸುತ್ತದೆ. ಏಕೆಂದರೆ ಈ ಅನುಮಾನವು ರಜತವಿಷಯಕವಲ್ಲ. ರಜತವಿಷಯಕ-ವಾದ ಜ್ಞಾನದಲ್ಲಿ ಪ್ರಾಮಾಣ್ಯವನ್ನಷ್ಟೇ ಸಾಧನೆ ಮಾಡುತ್ತಿದೆ.

ಪ್ರಕೃತದಲ್ಲಿ ಹೀಗೆ ತಿಳಿಯಬೇಕು. ಮುಂದೆ ಹೇಳುವಂತೆ ಶ್ರುತಿ ಹಾಗೂ ಯುಕ್ತಿಗಳು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಹೇಳುವ ವಿಷಯಗಳನ್ನು ಸಾಕ್ಷಾತ್ತಾಗಿ ಹೇಳುತ್ತವೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಶ್ರುತಿಸಂವಾದ ಹಾಗೂ ಯುಕ್ತಿಸಂವಾದಗಳಿಗೆ ಸಾಜಾತ್ಯವಿದೆ. ಆದರೆ 'ಬ್ರಹ್ಮಾದಿಗಳನ್ನು ಕುರಿತು ಮೋಕ್ಷಪ್ರಯೋಜನಕ್ಕೋಸ್ಕರ ಉಪದೇಶವಾಗಿರುವಿಕೆ' ಹಾಗೂ ಆಪ್ತವಾಕ್ಯತ್ವ ಎಂಬ ಯುಕ್ತಿಗಳು ಈ ಶಾಸ್ತ್ರದಲ್ಲಿ ಪ್ರತಿಪಾದಿಸುವ ವಿಷಯಗಳನ್ನು ನೇರವಾಗಿ ಸಮರ್ಥನೆ ಮಾಡುತ್ತಿಲ್ಲ. ಶಾಸ್ತ್ರದ ಪ್ರಾಮಾಣ್ಯವನ್ನಷ್ಟೇ ನಿರ್ಣಯಿಸುತ್ತಿವೆ. ಆದ್ದರಿಂದ ಇವೆರಡೂ ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತವೆ.

ಹೀಗೆ ಶ್ರುತಿಸಂವಾದ, ಯುಕ್ತಿಸಂವಾದಗಳೆರಡೂ ಸಜಾತೀಯಸಂವಾದ ಎನಿಸುತ್ತವೆ. ಆಪ್ತವಾಕ್ಯತ್ವ ಹಾಗೂ ಬ್ರಹ್ಮಾದೀನ್ ಪ್ರತಿ ಮೋಕ್ಷಾರ್ಥಂ ಉಪದಿಷ್ಟತ್ವ ಎಂಬೆರಡು ಪ್ರಮಾಣಗಳು ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತವೆ. ಆದ್ದರಿಂದ ಪ್ರಾಮಾಣ್ಯದಲ್ಲಿ ದ್ವೈವಿಧ್ಯವು ಪ್ರಾಪ್ತವಾಗುತ್ತದೆ. ತ್ರೈವಿಧ್ಯವು ಪ್ರಾಪ್ತವಾಗುವುದಿಲ್ಲ. ಹಾಗಾಗಿ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂದು ಹೇಳಿದ್ದು ಅಯುಕ್ತವಾಗುತ್ತದೆ.

ಅರ್ಧಜರತೀಯ ನ್ಯಾಯ – ಗರ್ಭವನ್ನು ಧಾರಣೆ ಮಾಡಿದ ಹೆಣ್ಣುಮೀನಿನ ಮೇಲಿನ ಅರ್ಧ ಭಾಗವು ತಿನ್ನುವುದಕ್ಕಾಗಿ, ಕೆಳಗಿನ ಅರ್ಧಭಾಗವು ಪ್ರಸವಕ್ಕಾಗಿ ಎಂದು ಹೇಳುವುದು ಹೇಗೆ ಅಯುಕ್ತವೋ ಅದರಂತೆ ಆಪ್ತವಾಕ್ಯತ್ವ, ವ್ಯಾಸೋಪದಿಷ್ಟತ್ವ ಎಂಬೆರಡು ಯುಕ್ತಿಗಳನ್ನು ಒಟ್ಟಿಗೆ ಪರಿಗಣಿಸಿ ಶ್ರುತಿಸಂವಾದ ಮತ್ತು ಯುಕ್ತಿಸಂವಾದಗಳನ್ನು ಪ್ರತ್ಯೇಕವಾಗಿ ಪರಿಗಣಿಸುವುದು ಅಯುಕ್ತವಾಗುತ್ತದೆ. ಇದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಅಲಾಬು = ಈಸುಕುಂಬಳ ಮೊದಲಾದ ಫಲಗಳ ಅರ್ಧಭಾಗವು ತಿನ್ನುವುದಕ್ಕಾಗಿ, ಉಳಿದ ಅರ್ಧಭಾಗವು ಬೀಜದ ಅಭಿವೃದ್ಧಿಗಾಗಿ ಎಂದು ಹೇಳುವುದು ಹೇಗೆ ಅಯುಕ್ತವೋ ಇದೂ ಕೂಡ ಅಯುಕ್ತ ಎಂದು ಅಭಿಪ್ರಾಯ ಪಡುತ್ತಾರೆ.

ವಿವರಣೆ – 'ಸಾಕ್ಷಾತ್ ಸ್ವವಿಷಯವಿಷಯಕಮಾನಾಂತರಂ ಸಜಾತೀಯಸಂವಾದಃ' 'ಸ್ವನಿಷ್ಠ-ಪ್ರಾಮಾಣ್ಯದ್ವಾರಾ ಸ್ವವಿಷಯಕಮಾನಾಂತರಂ ವಿಜಾತೀಯಸಂವಾದಃ' ಉದಾಹರಣೆ – 'ಇದಂ ಜಲಮ್' ಎಂಬುದಾಗಿ ಜ್ಞಾನವು ಬರುತ್ತದೆ. ಇದೇ ಪ್ರಕಾರದ ಜ್ಞಾನವು ಮತ್ತೊಬ್ಬನಿಗೂ ಬಂದರೆ ಅದು ಸಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ತನ್ನ ಜ್ಞಾನದಲ್ಲಿ ಯಾವುದು ವಿಷಯವೋ ಅದೇ ಮತ್ತೊಬ್ಬನ ಜ್ಞಾನಕ್ಕೂ ವಿಷಯವಾದರೆ ಅದನ್ನು ಸಜಾತೀಯಸಂವಾದ ಎಂದು ಕರೆಯುತ್ತಾರೆ. ಬ್ರಹ್ಮಸೂತ್ರಗಳಿಗೆ ಶ್ರುತಿಸಂವಾದ ಹಾಗೂ ಯುಕ್ತಿಸಂವಾದಗಳೆರಡೂ ಸಜಾತೀಯಸಂವಾದ ಎನಿಸುತ್ತವೆ. ಬ್ರಹ್ಮಸೂತ್ರವು ಯಾವ ಪ್ರಮೇಯವನ್ನು ಹೇಳುತ್ತದೋ ಅದಕ್ಕೆ ಶ್ರುತಿಸಂವಾದವೂ ಇದೆ. ಯುಕ್ತಿಸಂವಾದವೂ ಕೂಡ ಇದೆ. ಬ್ರಹ್ಮಸೂತ್ರಗಳಲ್ಲಿ ಹೇಳುವ ಪ್ರಮೇಯವನ್ನೇ ಪ್ರತಿಪಾದನೆ ಮಾಡುವ ಶ್ರುತಿ ಹಾಗೂ ಯುಕ್ತಿಗಳಿದ್ದರೆ ಅವೆರಡನ್ನೂ ಸಜಾತೀಯಸಂವಾದ ಎಂಬುದಾಗಿ ಪರಿಗಣಿಸಬೇಕು.

ವಿಜಾತೀಯಸಂವಾದ ಎಂದರೆ ಹೀಗರ್ಥ – ಇದಂ ಜಲಮ್ ಎಂಬ ಜ್ಞಾನಕ್ಕೆ ಜಲವು ವಿಷಯ-ವಾಗಿದೆ. ಈ ಜಲಜ್ಞಾನಕ್ಕೆ ಪ್ರಾಮಾಣ್ಯವನ್ನು ಸಾಧನೆ ಮಾಡುವ ಅನುಮಾನವನ್ನು ಪ್ರಯೋಗ ಮಾಡಿದರೆ ಇದು ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. 'ಇದಂ ಜಲಮಿತಿ ಜ್ಞಾನಂ ಪ್ರಮಾಣಂ ಸಮರ್ಥಪ್ರವೃತ್ತಿಜನಕತ್ವಾತ್' ಈ ಅನುಮಾನವು ನೇರವಾಗಿ ಜಲವನ್ನು ವಿಷಯೀಕರಿಸುತ್ತಿಲ್ಲ. ಜಲ-ವಿಷಯಕಜ್ಞಾನಕ್ಕೆ ಪ್ರಾಮಾಣ್ಯವನ್ನು ಸಂಪಾದನೆ ಮಾಡುವ ಮೂಲಕವಾಗಿ ಜಲವಿಷಯಕವಾಗಿದೆ. ಆದ್ದರಿಂದ ಸ್ವನಿಷ್ಠಪ್ರಾಮಾಣ್ಯದ್ವಾರಾ ಸ್ವವಿಷಯವಿಷಯಕಪ್ರಮಾಣಾಂತರವಾಗಿರುವುದರಿಂದ ಇದು ವಿಜಾತೀಯಸಂವಾದವಾಗಿದೆ. ಪ್ರಕೃತ ಆಪ್ತಿಮೂಲತ್ವ ಎಂಬ ಹೇತುವು ಬ್ರಹ್ಮಸೂತ್ರಗಳಲ್ಲಿ ಹೇಳಿದ ವಿಷಯಗಳನ್ನೇ ನೇರವಾಗಿ ವಿಷಯೀಕರಿಸುತ್ತಿಲ್ಲ. ಮತ್ತೇನೆಂದರೆ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು

ವ್ಯವಸ್ಥಾಪನೆ ಮಾಡುವ ಮೂಲಕವಾಗಿ ಬ್ರಹ್ಮಸೂತ್ರವಿಷಯಕವಾಗಿದೆ. ಆದ್ದರಿಂದ ಆಪ್ತಿಮೂಲತ್ವವು ಸಜಾತೀಯಸಂವಾದ ಎಂದು ಕರೆಸಿಕೊಳ್ಳುವುದಿಲ್ಲ. ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ಪ್ರಕೃತವಾಗಿರುವ 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವೂ ಕೂಡ ವಿಜಾತೀಯಸಂವಾದವೇ ಆಗಿದೆ. ಶ್ಲೋಕಗಳು ಬೇರೆ ಬೇರೆಯಾಗಿದ್ದರೂ ಕೂಡ ವ್ಯಾಸಪ್ರೋಕ್ತತ್ವ ಎಂದು ಹಿಂದೆ ಹೇಳಿದ ಹೇತು, ಹಾಗೂ ಆಪ್ತಿಮೂಲಕತ್ವವೆಂಬ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುವ ಹೇತುಗಳೆರಡೂ ವಿಜಾತೀಯಸಂವಾದಗಳಾಗಿರುವುದರಿಂದ ಒಂದೇ ಎನಿಸುತ್ತವೆ.

ಆಕ್ಷೇಪ ಮಾಡುವವರ ಅಭಿಪ್ರಾಯ ಹೀಗಿದೆ – ಆಪ್ತವಾಕ್ಯತ್ವ ಎಂಬ ಯುಕ್ತಿ ಹಾಗೂ ವ್ಯಾಸಪ್ರೋಕ್ತತ್ವ ಎಂಬ ಯುಕ್ತಿಗಳೆರಡೂ ವಿಜಾತೀಯಸಂವಾದಗಳಾಗಿರುವುದರಿಂದ ಎರಡೂ ಸೇರಿ ಒಂದೇ ಎಂದು ಪರಿಗಣಿಸುತ್ತೇವೆ. ಇದರ ಜೊತೆ ಶ್ರುತಿಮೂಲತ್ವ, ಹಾಗೂ ಯುಕ್ತಿಮೂಲತ್ವಗಳೆರಡನ್ನೂ ಸೇರಿಸಿದಾಗ ಒಟ್ಟು ಮೂರು ಪ್ರಮಾಣಗಳಾಗುತ್ತವೆ. ಆಗ ಪ್ರಾಮಾಣ್ಯಂ ತ್ರಿವಿಧಂ ಮಹತ್ ಎಂದು ಹೇಳಿದ್ದು ಯುಕ್ತವಾಗುತ್ತದೆ ಎಂದು.

ಈ ಆಕ್ಷೇಪವು ಅತ್ಯಂತ ಅಯುಕ್ತವಾಗಿದೆ. ಒಂದು ವೇಳೆ ವ್ಯಾಸಪ್ರೋಕ್ತತ್ವ ಎಂಬ ಯುಕ್ತಿಯನ್ನು, ಆಪ್ತವಾಕ್ಯತ್ವ ಎಂಬ ಯುಕ್ತಿಯನ್ನು ವಿಜಾತೀಯಸಂವಾದವೆಂಬ ಅಭಿಪ್ರಾಯದಿಂದ ಏಕೀಕರಣ ಮಾಡುವುದಾದರೆ ಶ್ರುತಿಮೂಲತ್ವ, ಹಾಗೂ ಯುಕ್ತಿಮೂಲತ್ವಗಳೆರಡೂ ಸಜಾತೀಯಸಂವಾದಗಳಾಗಿರುವುದರಿಂದ ಅವೆರಡನ್ನೂ ಕೂಡ ನೀವು ಏಕೀಕರಣ ಮಾಡಬೇಕು. ಇವೆರಡಕ್ಕೆ ಮಾತ್ರ ಐಕ್ಯವನ್ನು ಹೇಳಿ ಶ್ರುತಿಮೂಲತ್ವ ಯುಕ್ತಿಮೂಲತ್ವಗಳಿಗೆ ಐಕ್ಯವನ್ನು ಹೇಳದೇ ಇರುವುದು ಅರ್ಧಜರತೀಯವಾಗುತ್ತದೆ. ಇದು ಅತ್ಯಂತ ಮೂರ್ಖತನ.

ಪರಿಮಳ ಟಿಪ್ಪಣಿಯಲ್ಲಿ 'ಅರ್ಧಚರತೀಯ' ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ಕೆಲವು ಪಾಠಗಳಲ್ಲಿ 'ಅರ್ಧಜರತೀಯ' ಎಂಬುದನ್ನು ಸ್ವೀಕರಿಸಿದ್ದಾರೆ.

## ಅರ್ಧಜರತೀಯನ್ಯಾಯಕ್ಕೆ ಮತ್ತೊಂದು ಅರ್ಥ

ವಾಕ್ಯಾರ್ಥಚಂದ್ರಿಕಾ– ವಿಜಾತೀಯೇತಿ ॥ ವಕ್ತ್ರಾದ್ಯಾನುಕೂಲ್ಯರೂಪಸಂವಾದಸ್ಯ, ಬಾದರಾಯಣೇನ ತನ್ಮೋಕ್ಷಾರ್ಥಮುಪದಿಷ್ಟಸ್ಯ ಚ ಬ್ರಹ್ಮಸೂತ್ರಸಮಾನಾರ್ಥಕತ್ವಾಭಾವೇ ಸತಿ ತತ್ಪ್ರಾಮಾಣ್ಯಗ್ರಾಹಕತ್ವೇನ ವಿಜಾತೀಯಸಂವಾದತ್ವಮಿತಿ ದ್ರಷ್ಟವ್ಯಮ್ ।

ಅರ್ಧೇತಿ ॥ 'ಕೇನಚಿತ್ ಪಾಶುಪತೇನ ಸರ್ವಜರತ್ಯಾ ಯೋಷಿತೋऽನುಪಭೋಗ್ಯತ್ವಾತ್ ಸರ್ವತರುಣ್ಯಾಶ್ಚ ವೃದ್ಧೇ ಮಯ್ಯರುಚಿಪ್ರಸಂಗಾದ್ ಅರ್ಧಜರತ್ಯಾನಯನೇ ದೂತಃ ಪ್ರೇಷಿತಃ' ಇತಿ ಲೋಕಪ್ರವಾದೋऽರ್ಧಜರತೀಶಬ್ದೇನೋಚ್ಯತೇ । ಥಪ್ರತ್ಯಯೇನ ಚೋಪಮಾನೋಪಮೇಯ-ಭಾವರೂಪಃ ಸಂಬಂಧ ಉಚ್ಯತೇ । ತಥಾ ಚ ತತ್ತುಲ್ಯಪ್ರವಾದಾನುಪಪತ್ತೇರಿತ್ಯರ್ಥಃ । ಅಸ್ತು ಶ್ರುತಿಯುಕ್ತಿಸಂವಾದಸ್ಯ ಸಜಾತೀಯಸಂವಾದಿತಯಾ ಏಕತ್ವಮಿತ್ಯತ ಆಹ – ತಥಾ ಚೇತಿ ॥

ವಿಜಾತೀಯಸಂವಾದಿತ್ವೇನ ಎಂಬುದರ ಅಭಿಪ್ರಾಯ ಹೀಗಿದೆ – ವಕ್ತ್ರಾದ್ಯಾನುಕೂಲ್ಯ ಎಂಬ ಸಂವಾದಕ್ಕೆ ಹಾಗೂ 'ಬಾದರಾಯಣೇನ ತನ್ಮೋಕ್ಷಾರ್ಥಂ ಉಪದಿಷ್ಟತ್ವಮ್' ಎಂಬುದಕ್ಕೆ ವಿಜಾತೀಯ-ಸಂವಾದಿತ್ವೇನ ಐಕ್ಯವಿದೆ. ಬ್ರಹ್ಮಸೂತ್ರಕ್ಕೆ ಯಾವುದು ವಿಷಯವೋ ತದ್ವಿಷಯಕತ್ವವು ಇವೆರಡರಲ್ಲೂ ಇರುವುದಿಲ್ಲ. ಬ್ರಹ್ಮಸೂತ್ರಗಳ ಪ್ರಾಮಾಣ್ಯವನ್ನಷ್ಟೇ ಸಮರ್ಥನೆ ಮಾಡುತ್ತಿವೆ.

ಯಾರೋ ಒಬ್ಬ ಪಾಶುಪತನು ಸಂಪೂರ್ಣಮುದುಕಿಯನ್ನು ಉಪಭೋಗಿಸಲು ಇಚ್ಛಿಸಲಾರ. ಪೂರ್ಣಯುವತಿಯನ್ನು ತಾನು ಅನುಭವಿಸಲು ಇಚ್ಛಿಸಿದರೂ ಕೂಡ ವೃದ್ಧನಾದ ನನ್ನಲ್ಲಿ ಅರುಚಿಯನ್ನು ತೋರಿಸುವ ಸಂದರ್ಭವಿದೆಯೆಂದು ತಿಳಿಯುತ್ತಾನೆ. ಆದ್ದರಿಂದ ಯುವತಿಯೂ ಅಲ್ಲದ ಮುದುಕಿಯೂ ಅಲ್ಲದ ಅರ್ಧಜರತಿಯನ್ನು ಕರೆದುಕೊಂಡು ಬಾ' ಎಂಬುದಾಗಿ ದೂತನನ್ನು ಕಳಿಸುತ್ತಾನೆ. ಈ ಲೋಕ-ಪ್ರವಾದವೇ ಪ್ರಕೃತ ಅರ್ಧಜರತೀಶಬ್ದದಿಂದ ಹೇಳಲ್ಪಟ್ಟಿದೆ. ಥಪ್ರತ್ಯಯದಿಂದ ಉಪಮಾನಉಪಮೇಯ-ಭಾವರೂಪವಾದ ಸಂಬಂಧವನ್ನು ವಿವಕ್ಷಿಸಬೇಕು. ಈ ಅರ್ಧಜರತೀಯಪ್ರವಾದಕ್ಕೆ ಸಮಾನವಾದ ಪ್ರವಾದವನ್ನು ಇಲ್ಲಿ ಹೇಳುತ್ತಿದ್ದೀರಿ; ಇದು ಅನುಪಪನ್ನವಾಗಿದೆ ಎಂದರ್ಥ.

ಶ್ರುತಿಸಂವಾದ ಯುಕ್ತಿಸಂವಾದಗಳು ಎರಡೂ ಕೂಡ ಸಜಾತೀಯಸಂವಾದಗಳಾಗಿರುವುದರಿಂದ ಇವುಗಳಲ್ಲೂ ಕೂಡ ನಾವು ಐಕ್ಯವನ್ನು ವಿವಕ್ಷಿಸುತ್ತೇವೆ. ಏನು ತಪ್ಪು? ಎಂಬ ಪ್ರಶ್ನೆಗೆ 'ತಥಾ ಚ' ಎಂಬುದರಿಂದ ಉತ್ತರಿಸಿದ್ದಾರೆ.

## ಸಜಾತೀಯಸಂವಾದ ವಿಜಾತೀಯಸಂವಾದಗಳ ಪರಿಷ್ಕಾರ

ಯಾದುಪತ್ಯ– ವಿಜಾತೀಯಸಂವಾದಿತ್ವೇನೇತಿ ॥ ಶಾಸ್ತ್ರಪ್ರಾಮಾಣ್ಯವ್ಯವಸ್ಥಾಪನದ್ವಾರಾ ಶಾಸ್ತ್ರವಿಷಯವ್ಯವಸ್ಥಾಪಕಮಾನಾಂತರಸಂವಾದಿ(ದ)ತ್ವೇನ ಇತ್ಯರ್ಥಃ । ಸ್ವಪ್ರಾಮಾಣ್ಯವ್ಯವಸ್ಥಾಪನ-ದ್ವಾರಾ ಸ್ವವಿಷಯವ್ಯವಸ್ಥಾಪಕಮಾನಾಂತರಸಂವಾದಸ್ಯೈವ ವಿಜಾತೀಯಸಂವಾದಿತಯಾ ವಿವಕ್ಷಿತ-

ತ್ವಾತ್– ಸಜಾತೀಯಸಂವಾದತಯೇತಿ ॥ ಸಾಕ್ಷಾತ್ ಶಾಸ್ತ್ರವಿಷಯವಿಷಯಕಮಾನಾಂತರಸಂವಾದತಯಾ ಇತ್ಯರ್ಥಃ। ಸಾಕ್ಷಾತ್ ವಿಷಯವಿಷಯಕಮಾನಾಂತರಸಂವಾದಸ್ಯೈವ ಸಜಾತೀಯಸಂವಾದತ್ವೇನ ವಿವಕ್ಷಿತತ್ವಾದಿತ್ಯಾಶಯಃ।

ಶಾಸ್ತ್ರಪ್ರಾಮಾಣ್ಯವನ್ನು ಸಮರ್ಥನೆ ಮಾಡುವ ಮೂಲಕ ಶಾಸ್ತ್ರವಿಷಯತ್ವವನ್ನು ಯಾವುದು ಪಡೆಯುತ್ತದೋ ಅಂಥ ಪ್ರಮಾಣವು ವಿಜಾತೀಯಸಂವಾದವೆಂದು ಕರೆಸಿಕೊಳ್ಳುತ್ತದೆ. ತನ್ನ ಪ್ರಾಮಾಣ್ಯವನ್ನು ವ್ಯವಸ್ಥೆ ಮಾಡುವ ಮೂಲಕ ಸ್ವವಿಷಯವನ್ನು ವಿಷಯೀಕರಿಸುವ ಮತ್ತೊಂದು ಸಂವಾದಪ್ರಮಾಣವೇ ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ಸಾಕ್ಷಾತ್ತಾಗಿ ಶಾಸ್ತ್ರವಿಷಯವನ್ನೇ ವಿಷಯೀಕರಿಸುವ ಮತ್ತೊಂದು ಪ್ರಮಾಣವು ಸಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ಸಾಕ್ಷಾತ್ ಸ್ವವಿಷಯವಿಷಯಕಮಾನಾಂತರಸಂವಾದವು ಸಜಾತೀಯಸಂವಾದದ ಲಕ್ಷಣ ಎಂದಭಿಪ್ರಾಯ.

ವಿವರಣೆ - 'ಸ್ವಪ್ರಾಮಾಣ್ಯವ್ಯವಸ್ಥಾಪನದ್ವಾರಾ ಸ್ವವಿಷಯವ್ಯವಸ್ಥಾಪಕಮಾನಾಂತರಸಂವಾದಃ ವಿಜಾತೀಯಸಂವಾದಃ' 'ಸಾಕ್ಷಾತ್‌ಸ್ವವಿಷಯವಿಷಯಕಮಾನಾಂತರಸಂವಾದಃ ಸಜಾತೀಯಸಂವಾದಃ' ಹೀಗೆ ವಿಜಾತೀಯಸಂವಾದ ಹಾಗೂ ಸಜಾತೀಯಸಂವಾದಗಳ ಲಕ್ಷಣವನ್ನು ತಿಳಿಯಬೇಕು.

## ಕೆಲವರ ಪ್ರಕಾರ ಸಜಾತೀಯವಿಜಾತೀಯಸಂವಾದಗಳ ಪರಿಷ್ಕಾರ

ಯಾದುಪತ್ಯ– ಕೇಚಿತ್ತು 'ಗುರೂಪದೇಷ್ಟ್ರಾದ್ಯುಪದಿಷ್ಟತ್ವಸ್ಯ ಆನುಕೂಲವಕ್ತ್ರಾದಿಮತ್ತ್ವ-ಸಿದ್ಧಾಪ್ತವಾಕ್ಯತ್ವಸ್ಯ ಚ ಲೌಕಿಕವಾಕ್ಯಸಾಧಾರಣ್ಯೇನ ಪ್ರಾಮಾಣ್ಯಮಾತ್ರಸಾಧಕತ್ವಾತ್ ತತ್ಸಂವಾದಸ್ಯ ವಿಜಾತೀಯತ್ವಮ್। ಶ್ರುತಿಯುಕ್ತ್ಯೋಸ್ತ್ವಲೌಕಿಕಾರ್ಥತ್ವಾತ್ ಸರ್ವೋತ್ತಮಪ್ರಾಮಾಣ್ಯಸಾಧಕತ್ವಾತ್ ತತ್ಸಂವಾದಸ್ಯ ಸಜಾತೀಯತ್ವಮ್' ಇತ್ಯಾಹುಃ।

ಕೆಲವರು ವಿಜಾತೀಯಸಂವಾದವನ್ನು ಹೀಗೆ ಹೇಳುತ್ತಾರೆ. ಯಾವುದು ಲೌಕಿಕವಾಕ್ಯಸಾಧಾರಣವಾಗಿರುತ್ತದೋ ಅಂಥ ಪ್ರಮಾಣದಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ವಿಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ಪ್ರಕೃತ 'ಗುರೂಪದೇಷ್ಟ್ರಾದ್ಯುಪದಿಷ್ಟತ್ವ' 'ಅನುಕೂಲವಕ್ತ್ರಾದಿಮತ್ತ್ವ' ಇವುಗಳಿಂದ ಆಪ್ತವಾಕ್ಯತ್ವವು ಸಿದ್ಧವಾಗಿದೆ. ಲೌಕಿಕವಾಕ್ಯದಲ್ಲೂ ಕೂಡ ಈ ಎರಡು ಯುಕ್ತಿಗಳಿಂದ ಆಪ್ತವಾಕ್ಯತ್ವವು ಸಿದ್ಧವಾಗುತ್ತದೆ. ಆದ್ದರಿಂದ 'ಗುರೂಪದೇಷ್ಟ್ರಾದ್ಯುಪದಿಷ್ಟತ್ವ' 'ಅನುಕೂಲವಕ್ತ್ರಾದಿಮತ್ತ್ವ' ಎಂಬೆರಡು ಹೇತುಗಳು ವಿಜಾತೀಯಸಂವಾದ ಎಂದೆನಿಸಿಕೊಳ್ಳುತ್ತವೆ. ಯಾವುದು ಅಲೌಕಿಕಾರ್ಥವಿಷಯಕವಾಗಿರುತ್ತದೋ ಅದು ಸಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತದೆ. ಶ್ರುತಿ ಹಾಗೂ

ಯುಕ್ತಿಗಳು ಅಲೌಕಿಕವಾದ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ತನ್ಮೂಲಕವಾಗಿ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡುವುದರಿಂದ ಇವೆರಡೂ ವಿಜಾತೀಯಸಂವಾದ ಎಂಬುದಾಗಿ ಕರೆಸಿಕೊಳ್ಳುತ್ತವೆ - ಎಂದು.

## ಅರ್ಧಜ(ಚ)ರತೀಯನ್ಯಾಯದ ಬಗ್ಗೆ ಒಂದು ವಿಮರ್ಶೆ

ಯಾದುಪತ್ಯ– ಅರ್ಧಜರತೀಯಾನುಪಪತ್ತೇರಿತಿ ॥ ಅತ್ರಾರ್ಧಜರತೀಶಬ್ದೇನ ಸರ್ವಾತ್ಮನಾ ಜರತೀಂ ತ್ಯಕ್ತುಮಶಕ್ನುವತಃ ಪ್ರಕ್ರಿಯಾ ಲಕ್ಷ್ಯತೇ । ಛಪ್ರತ್ಯಯೇನ ಚೋಪಮಾನೋಪಮೇಯ-ರೂಪಃ ಸಂಬಂಧ ಉಚ್ಯತೇ । ತಥಾ ಚ ತತ್ಪ್ರಕ್ರಿಯಾತುಲ್ಯಪ್ರಕ್ರಿಯಾನುಪಪತ್ತೇರಿತ್ಯರ್ಥಃ ಪರ್ಯ-ವಸ್ಯತಿ । ಇತ್ಥಂ ಹಿ ತತ್ಪ್ರಕ್ರಿಯಾ – ಅರ್ಧಂ ಜರತ್ಯಾಃ ಕಾಮಯತೇಽರ್ಧಂ ನ ಕಾಮಯತೇ, ಮುಖಂ ಜರತ್ಯಾಃ ಕಾಮಯತೇ ನಾಂಗಾಂತರಮಿತಿ । ಏವಂ ಜರತ್ಯಾ ಏಕದೇಶೇ ಕಾಮನಾ ಏಕದೇಶೇ ನ ಇತ್ಯೇತದ್ ಯಥಾ ಜುಗುಪ್ಸಿತಮ್ ಏವಂ ಪ್ರಕೃತೇ ಸಾಧ್ಯೇ ಸಂಭವೇ ಚ ಸತಿ ಏಕತ್ರೈಕ್ಯವಿವಕ್ಷಾನ್ಯತ್ರ ತು ನ ಇತ್ಯೇತತ್ ಜುಗುಪ್ಸಿತಮಿತಿ ಭಾವಃ । 'ಅರ್ಧಚರತೀಯಾನುಪಪತ್ತೇಃ' ಇತಿ ಪಾಠೇ ತು ಚರತಿಶ್ಚರಣಂ ಭಕ್ಷಣಮಿತಿ ಯಾವತ್ । ತೇನ ತತ್ಕರ್ತುಃ ಪ್ರಕ್ರಿಯಾ ಲಕ್ಷ್ಯತೇ । ಛಪ್ರತ್ಯಯೇನ ಪೂರ್ವವದುಪಮಾನೋಪಮೇಯರೂಪಃ ಸಂಬಂಧ ಉಚ್ಯತೇ । ತೇನಾರ್ಧಭಕ್ಷಣಕರ್ತುಃ ಪ್ರಕ್ರಿಯಾತುಲ್ಯಪ್ರಕ್ರಿಯಾಽನುಪಪತ್ತೇರಿತ್ಯರ್ಥಃ ಪರ್ಯವಸ್ಯತಿ । ಇತ್ಥಂ ಹಿ ತತ್ಪ್ರಕ್ರಿಯಾ – ಸಗರ್ಭಾಂ ಮತ್ಸ್ಯವಧೂಂ ಗೃಹೀತ್ವಾ ಕಶ್ಚಿತ್ 'ಅಸ್ಯಾಃ ಪ್ರಸವೇ ಮತ್ಸ್ಯಾಂತರಂ ಭವಿಷ್ಯತಿ । ಏವಂ ಚ ತದಪಿ ಭಕ್ಷಣಾರ್ಥಂ ಭವಿಷ್ಯತಿ । ಇದಾನೀಂ ಚ ಇಮಾಮಪಕ್ವಾ್ವನಶ್ನನ್ನಹಂ ನ ಸ್ಥಾತುಮುತ್ಸಹೇ' ಇತಿ ವಿಚಾರ್ಯ ವದತಿ 'ಅಸ್ಯಾ ಅರ್ಧಂ ಪಾಕಾಯ ಅರ್ಧಂ ಪ್ರಸವಾಯ' ಇತಿ । ತದ್ಯಥಾ ಜುಗುಪ್ಸಿತಮ್ ಏವಮೇತದಪಿ ಇತಿ ಭಾವಃ ಇತ್ಯಾಹುಃ । ಅನ್ಯೇ ತು

'ಲಂಬಮಾನೌ ಸುತೌ ದೃಷ್ಟ್ವಾ ವ್ಯಾಧಃ ಪರಮಬುದ್ಧಿಮಾನ್ ।
ಸರ್ವನಾಶೇ ಸಮುತ್ಪನ್ನೇಽರ್ಧಂ ಚರತಿ ಪಂಡಿತಃ ॥'

ಇತಿ ನ್ಯಾಯಸ್ಯ ಪ್ರಕೃತೇಽನುಪಪತ್ತೇರಿತ್ಯರ್ಥ ಇತ್ಯಾಹುಃ ॥

'ಅರ್ಧಜರತೀ' ಎಂಬ ಶಬ್ದದಿಂದ ಸಂಪೂರ್ಣವಾಗಿ ಮುದುಕಿಯನ್ನು ತ್ಯಾಗಮಾಡಲು ಅಶಕ್ತ-ನಾಗಿರುವವನ ಪ್ರಕ್ರಿಯೆಯನ್ನು ಲಕ್ಷಣಯಾ ವಿವಕ್ಷಿಸಲಾಗಿದೆ. ಛಪ್ರತ್ಯಯದಿಂದ ಉಪಮಾನ-ಉಪಮೇಯರೂಪವಾದ ಸಂಬಂಧವನ್ನು ಹೇಳಲಾಗಿದೆ. ಆದ್ದರಿಂದ ಈ ಅರ್ಧಜರತೀಯಪ್ರಕ್ರಿಯೆಗೆ

ಸಮಾನವಾದ ಪ್ರಕ್ರಿಯೆಯು ಅನುಪಪನ್ನವಾಗುತ್ತದೆ ಎಂಬುದು 'ಅರ್ಧಜರತೀಯಾನುಪಪತ್ತೇಃ' ಎಂಬುದರ ಅರ್ಥವಾಗಿದೆ.

ಅರ್ಧಜರತೀಯಪ್ರಕ್ರಿಯೆ ಹೀಗಿದೆ – ಮುದುಕಿಯ ಅರ್ಧಭಾಗವನ್ನು ಕಾಮಿಸುತ್ತಾನೆ. ಅರ್ಧಭಾಗವನ್ನು ಕಾಮಿಸುವುದಿಲ್ಲ. ಮುಖವನ್ನಷ್ಟೇ ಕಾಮಿಸುತ್ತಾನೆ. ಉಳಿದ ಅಂಗವನ್ನು ಕಾಮಿಸುವುದಿಲ್ಲ. ಹೀಗೆ ಮುದುಕಿಯ ಏಕದೇಶದಲ್ಲಿ ಕಾಮನೆ ಇದೆ. ಉಳಿದ ಏಕದೇಶದಲ್ಲಿ ಕಾಮನೆ ಇರುವುದಿಲ್ಲ. ಇದು ಹೇಗೆ ಜುಗುಪ್ಸಿತವಾಗಿದೆಯೋ ಅದರಂತೆ ಪ್ರಕೃತ ವಿಜಾತೀಯವಾದ ಎರಡು ಸಂವಾದಗಳಲ್ಲಿ ಐಕ್ಯವನ್ನು ವಿವಕ್ಷಿಸಿ, ಸಜಾತೀಯವಾದ ಎರಡು ಸಂವಾದಗಳಲ್ಲಿ ಐಕ್ಯವನ್ನು ವಿವಕ್ಷಿಸದೇ ಇರುವುದು ಯುಕ್ತವಾಗುವುದಿಲ್ಲ ಎಂದು ಹೇಳುವುದು ಅತ್ಯಂತ ಜುಗುಪ್ಸಿತವಾಗಿದೆ. ಅರ್ಧಜರತೀಯವಾಗಿ ಕಾಮನೆ ಮಾಡುವವನು ಹೇಗೆ ಜುಗುಪ್ಸಿತನೋ ಅದರಂತೆ ಇದೂ ಕೂಡ ಜುಗುಪ್ಸಿತವಾಗಿದೆ ಎಂದು ತಿಳಿಯಬೇಕು.

ಕೆಲವೆಡೆ 'ಅರ್ಧಚರತೀಯಾನುಪಪತ್ತೇಃ' ಎಂಬ ಪಾಠವಿದೆ. ಇದೂ ಕೂಡ ಯುಕ್ತವೇ ಆಗಿದೆ. ಚರತಿಃ ಎಂದರೆ ಚರಣ ಎಂದರ್ಥ. ಭಕ್ಷಣ ಎಂದರ್ಥವಾಗುತ್ತದೆ. ಅರ್ಧಭಾಗವನ್ನು ಭಕ್ಷಣೆ ಮಾಡುವವನ ಪ್ರಕ್ರಿಯೆಯು ಅರ್ಧಚರತೀಶಬ್ದದಿಂದ ಲಕ್ಷಣಯಾ ಪ್ರತಿಪಾದ್ಯವಾಗಿದೆ. ಛಪ್ರತ್ಯಯದಿಂದ ಹಿಂದಿನಂತೆ ಉಪಮಾನ-ಉಪಮೇಯರೂಪವಾದ ಸಂಬಂಧವು ಉಕ್ತವಾಗಿದೆ. ಆದ್ದರಿಂದ ಅರ್ಧಭಕ್ಷಣವನ್ನು ಮಾಡುವವನ ಪ್ರಕ್ರಿಯೆಗೆ ಸಮಾನವಾದ ಪ್ರಕ್ರಿಯೆಯನ್ನು ಇಲ್ಲಿ ಅಂಗೀಕರಿಸಲಾಗಿದೆ. ಇದು ಅನುಪಪನ್ನ ಎಂಬರ್ಥದಲ್ಲಿ ಪರ್ಯವಸಾನವಾಗುತ್ತದೆ.

ಅರ್ಧಚರತೀಪ್ರಕ್ರಿಯೆಯು ಹೀಗಿದೆ – ಗರ್ಭಿಣಿಯಾದ ಹೆಣ್ಣುಮೀನನ್ನು ಮೀನುಗಾರನು ಹಿಡಿಯುತ್ತಾನೆ. ಇದನ್ನು ತಿನ್ನದೇ ಬಿಟ್ಟರೆ ಇದರಿಂದ ಸಂತಾನವು ಅಭಿವೃದ್ಧಿಯಾಗುತ್ತದೆ; ನನಗೆ ಅನೇಕ ಮೀನುಗಳು ದೊರೆಯುತ್ತವೆ ಎಂದೆನಿಸುತ್ತದೆ. ಮತ್ತೊಂದು ಕಡೆ ಇದನ್ನು ತಿನ್ನಬೇಕೆಂದು ಆಸೆ ಹೊಂದುತ್ತಾನೆ. ಆಗ ಹೀಗೆ ವಿಚಾರ ಮಾಡುತ್ತಾನೆ. ಯಾವ ದೇಹದ ಭಾಗದಲ್ಲಿ ಗರ್ಭವಿದೆಯೋ ಅದನ್ನು ತಿನ್ನುವುದು ಬೇಡ. ಆದರೆ ತಿನ್ನದೇ ಇರಲು ನನ್ನಿಂದ ಸಾಧ್ಯವಿಲ್ಲ. ಹಾಗಾಗಿ ಮೇಲಿನ ಅರ್ಧಭಾಗವನ್ನು ಬೇಯಿಸಿ ತಿನ್ನುತ್ತೇನೆ. 'ಅಸ್ಯಾಃ ಅರ್ಧಂ ಪಾಕಾಯ, ಅರ್ಧಂ ಪ್ರಸವಾಯ' ಎಂದು ಭಾವಿಸುತ್ತಾನೆ. ಇವನ ಈ ಮನೋಭಾವನೆಯು ಹೇಗೆ ಅತ್ಯಂತ ಜುಗುಪ್ಸಿತವೋ ಅದರಂತೆ ವಿಜಾತೀಯಸಂವಾದಗಳನ್ನು ಮಾತ್ರ ಒಟ್ಟಾಗಿ ಪರಿಗಣಿಸಿ ಸಜಾತೀಯಸಂವಾದಗಳನ್ನು ಒಟ್ಟಿಗೆ ಪರಿಗಣಿಸದೇ ಇರುವುದೂ ಕೂಡ ಜುಗುಪ್ಸಿತವಾಗಿದೆ ಎಂದು ಹೇಳುತ್ತಾರೆ.

ಕೆಲವರು ಹೀಗೆ ಹೇಳುತ್ತಾರೆ –

'ಲಂಬಮಾನೌ ಸುತೌ ದೃಷ್ಟ್ವಾ ವ್ಯಾಧಃ ಪರಮಬುದ್ಧಿಮಾನ್ ।
ಸರ್ವನಾಶೇ ಸಮುತ್ಪನ್ನೇಽರ್ಧಂ ಚರತಿ ಪಂಡಿತಃ ॥

ಎಂಬ ನ್ಯಾಯದಂತೆ ಪ್ರಕೃತದಲ್ಲಿ ಅನುಪಪನ್ನವಾಗಿದೆ ಎಂದು ಹೇಳುತ್ತಾರೆ.

## ಸುಧಾಪರಿಮಳಸಾರ

ಜ್ಞಾನದಲ್ಲಿ ಅಥವಾ ವಾಕ್ಯದಲ್ಲಿ ಯಾವುದು ವಿಷಯವಾಗುತ್ತದೋ ಅದನ್ನೇ ವಿಷಯೀಕರಿಸುವ ಇನ್ನೊಂದು ಜ್ಞಾನ ಅಥವಾ ವಾಕ್ಯವು ಸಜಾತೀಯಸಂವಾದಿ ಎನಿಸಿಕೊಳ್ಳುತ್ತದೆ. ಉದಾಹರಣೆ :"ಇದಂ ರಜತಮ್" ಎಂಬ ಜ್ಞಾನದಲ್ಲಿ "ರಜತ"ವು ವಿಷಯವಾಗಿದೆ. ಅದನ್ನೇ ವಿಷಯೀಕರಿಸುವ "ಇದಂ ರಜತಮ್" ಎಂಬ ಇನ್ನೊಂದು

ಜ್ಞಾನವು ಹಿಂದಿನ ಜ್ಞಾನಕ್ಕೆ ಸಜಾತೀಯಸಂವಾದಿ ಎನಿಸಿಕೊಳ್ಳುತ್ತದೆ.

ಹಾಗೆಯೇ ಜ್ಞಾನದಲ್ಲಿ ಯಾವುದು ವಿಷಯವಾಗುತ್ತದೋ ಅದನ್ನು ಸಾಕ್ಷಾತ್ತಾಗಿ ವಿಷಯೀಕರಿಸದೇ ಅದರ ಪ್ರಾಮಾಣ್ಯವನ್ನು ತಿಳಿಸುವ ಇನ್ನೊಂದು ಜ್ಞಾನ ಅಥವಾ ವಾಕ್ಯ ವಿಜಾತೀಯಸಂವಾದಿ ಎನಿಸಿಕೊಳ್ಳುತ್ತದೆ. ಉದಾಹರಣೆ: "ಇದಂ ರಜತಮ್" ಎಂಬ ಜ್ಞಾನದಲ್ಲಿ ವಿಷಯವಾದ ರಜತಕ್ಕೆ "ಕಟಕಾದ್ಯರ್ಥಕ್ರಿಯಾಕಾರಿತ್ವ" ಉಂಟು ಎಂದು ಅರ್ಥಕ್ರಿಯಾಕಾರಿತ್ವವನ್ನು ವಿಷಯೀಕರಿಸುವ ಜ್ಞಾನವು ಅಥವಾ ವಾಕ್ಯವು ವಿಜಾತೀಯಸಂವಾದಿ ಎನಿಸಿಕೊಳ್ಳುತ್ತದೆ.

ಪ್ರಕೃತ ಇಲ್ಲಿ ಶ್ರುತಿ, ಯುಕ್ತಿ ಎರಡೂ, ಬ್ರಹ್ಮಸೂತ್ರದ ಅರ್ಥವನ್ನೇ ಪ್ರತಿಪಾದಿಸುತ್ತ ಪ್ರಮಾಣವಾಗುವುದರಿಂದ ಬ್ರಹ್ಮಸೂತ್ರಕ್ಕೆ ಶ್ರುತಿಯುಕ್ತಿಗಳು ಸಜಾತೀಯಸಂವಾದಿ ಎಂದೆನಿಸಿಕೊಳ್ಳುತ್ತವೆ.

ಆದರೆ ಬ್ರಹ್ಮಸೂತ್ರದ ಅರ್ಥವನ್ನು ವಿಷಯೀಕರಿಸದೆ ಅದರ ಪ್ರಾಮಾಣ್ಯವನ್ನು ಮಾತ್ರ ತಿಳಿಸುವ "ಆಪ್ತವಾಕ್ಯತ್ವ" ಮತ್ತು "ಅಜಾದೀನ್ ಪ್ರತಿ ತನ್ನೋಕ್ಷಾರ್ಥಂ ಉಪದಿಷ್ಟತ್ವಾತ್" ಎಂಬ ಹೇತುಗಳು ಬ್ರಹ್ಮಸೂತ್ರಕ್ಕೆ ವಿಜಾತೀಯಸಂವಾದಿ ಎನಿಸಿಕೊಳ್ಳುತ್ತವೆ.

ಎರಡು ವಿಜಾತೀಯಸಂವಾದಗಳನ್ನು ಏಕೀಕರಣ ಮಾಡಿ ಎರಡು ಸಜಾತೀಯಸಂವಾದಗಳನ್ನು ಪ್ರತ್ಯೇಕವಾಗಿ ಪರಿಗಣಿಸಿ ಮೂರು ಬಗೆಯ ಪ್ರಾಮಾಣ್ಯವು ಸಿದ್ಧವಾಗುತ್ತದೆ. 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬ ಆಚಾರ್ಯರ ಮಾತನ್ನು ಕೂಡಿಸಿದಂತಾಗುತ್ತದೆ ಎಂಬುದು ಆಕ್ಷೇಪದ ಅಭಿಪ್ರಾಯ.

ಈ ಆಕ್ಷೇಪವು ಅರ್ಥವಿಲ್ಲದ್ದು. ವಿಜಾತೀಯಸಂವಾದವನ್ನು ಒಂದಾಗಿ ಪರಿಗಣಿಸಿದ ಮೇಲೆ ಎರಡು ಸಜಾತೀಯಸಂವಾದಗಳನ್ನು ಒಂದಾಗಿಯೇ ಪರಿಗಣಿಸಬೇಕು. ಪ್ರತ್ಯೇಕವಾಗಿ ಪರಿಗಣಿಸುವುದು ಅರ್ಧಚರತೀಯ-ನ್ಯಾಯಕ್ಕೆ ಸಮಾನವಾಗುತ್ತದೆ. ಗರ್ಭಿಣಿಯಾದ ಹೆಣ್ಣುಮೀನಿನ ಅರ್ಧಭಾಗವು ತಿನ್ನುವುದಕ್ಕೆ ಉಳಿದ ಅರ್ಧಭಾಗವು ಪ್ರಸವಕ್ಕೆ ಎಂದು ಹೇಳುವುದು ಹೇಗೆ ಅಯುಕ್ತವೋ ಅದರಂತೆ ಈ ಆಕ್ಷೇಪವೂ ಕೂಡ ಅಯುಕ್ತವಾಗಿದೆ.

### ನೆನೆಪಿಡಿ

* 'ಶಾಸ್ತ್ರವಿಷಯವ್ಯವಸ್ಥಾಪಕಮಾನಾಂತರಸಂವಾದಃ ವಿಜಾತೀಯಸಂವಾದಃ' 'ಸಾಕ್ಷಾತ್ ಶಾಸ್ತ್ರವಿಷಯವಿಷಯಕಮಾನಾಂತರಸಂವಾದಃ ಸಜಾತೀಯಸಂವಾದಃ' ಎಂಬುದಾಗಿ ವಿಜಾತೀ-ಯಸಂವಾದ ಹಾಗೂ ಸಜಾತೀಯಸಂವಾದಗಳ ಲಕ್ಷಣವನ್ನು ತಿಳಿಯಬೇಕು. (ಯಾದುಪತ್ಯ)

* 'ಲೌಕಿಕವಾಕ್ಯಸಾಧಾರಣ್ಯೇನ ಪ್ರಾಮಾಣ್ಯಮಾತ್ರಸಾಧಕತ್ವಂ ವಿಜಾತೀಯತ್ವಮ್; ಅಲೌಕಿಕಾರ್ಥಮಾತ್ರಪ್ರಾಮಾಣ್ಯಸಾಧಕತ್ವಂ ಸಜಾತೀಯತ್ವಂ' ಎಂಬುದಾಗಿ ವಿಜಾತೀಯ ಸಂವಾದ ಮತ್ತು ಸಜಾತೀಯಸಂವಾದಗಳ ಪರಿಷ್ಕಾರ ಮತ್ತೊಂದು ಬಗೆ.

* ಅರ್ಧಚರತೀಯಾನುಪಪತ್ತೇಃ ಎಂಬುದು ಪರಿಮಳದ ಪಾಠ. ಅರ್ಧಜರತೀಯಾ-ನುಪಪತ್ತೇಃ ಎಂಬುದು ವಾಕ್ಯಾರ್ಥಚಂದ್ರಿಕಾ ಪಾಠ. ಎರಡೂ ಪಾಠಗಳು ಯಾದುಪತ್ಯದ್ದು.

## ಶ್ರೀಮದಾಚಾರ್ಯರಾದರೂ ಕೂಡ ಏಕೆ ಪ್ರಯತ್ನಗೌರವವನ್ನು ಆಶ್ರಯಿಸಿದ್ದಾರೆ

**ಶ್ರೀಮನ್ನ್ಯಾಯಸುಧಾ– ಭವೇದಯಂ ಗ್ರಂಥಕೃತೋಽಭಿಪ್ರಾಯಃ । ತೇನಾ-ಪೀದಂ ಪ್ರಯತ್ನಗೌರವಂ ಕಸ್ಮಾದಾಶ್ರಿತಮಿತಿ ಚೇನ್ನ । ಉಕ್ತಸಾಧನೋಪಪ-ನ್ನತ್ವೇಽಪಿ 'ಅಸ್ತು ಭಾರತಾದೀನಾಂ ಪ್ರಾಮಾಣ್ಯಂ, ಮಾ ಭೂಚ್ಛಾಸ್ತ್ರಸ್ಯ' ಇತಿ ಶಂಕಾಯಾಂ ವಕ್ತ್ರಾದ್ಯಾನುಕೂಲ್ಯಸಾಧನಸ್ಯ ಅವಶ್ಯಾಶ್ರಯಣೀಯತ್ವಾತ್ । ಅನ್ಯಥಾ ಅಪ್ರಯೋಜಕತ್ವಾಪತ್ತೇರಿತಿ ॥**

ಸಾಕ್ಷಾತ್ತಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಬಾರದು ಎಂಬುದು ಗ್ರಂಥಕಾರರಾದ

ಆಚಾರ್ಯರ ಅಭಿಪ್ರಾಯ ಇರಬಹುದು. ಆದರೆ ಆಚಾರ್ಯರಾದರೂ ಕೂಡ ಈ ಪ್ರಯತ್ನಗೌರವವನ್ನು ಏಕೆ ಆಶ್ರಯಿಸಿದ್ದಾರೆ?

ಹೀಗೆ ಆಶಂಕೆ ಮಾಡಬಾರದು. ಏಕೆಂದರೆ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಯುಕ್ತಿಗಳು ಮಹಾಭಾರತದಲ್ಲಿ ಇದ್ದಂತೆ ಇರಲಿ; ಆದರೆ ಪ್ರಾಮಾಣ್ಯವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕತ್ವಾಶಂಕೆಯು ಪ್ರಾಪ್ತವಾಗುತ್ತದೆ. ಆಗ ವಕ್ತ್ರಾದ್ಯಾನುಕೂಲ್ಯ ಮೊದಲಾದ ಪ್ರಾಮಾಣ್ಯಸಾಧಕವಾದ ಅವಾಂತರಯುಕ್ತಿಗಳನ್ನು ಅವಶ್ಯವಾಗಿ ಆಶ್ರಯಿಸಬೇಕು. ಇಲ್ಲದಿದ್ದರೆ ಹೇತುವಿಗೆ ಅಪ್ರಯೋಜಕತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು ಪ್ರಯತ್ನಗೌರವವನ್ನು ಅವಲಂಬಿಸಿದ್ದಾರೆ.

## ಅಪ್ರಯೋಜಕತ್ವಾಶಂಕೆಯ ಪರಿಹಾರಕ್ಕಾಗಿ ಪ್ರಯತ್ನಗೌರವ ಸಾರ್ಥಕ

ಪರಿಮಳ– ಇದಮಿತಿ ॥ ಶಾಸ್ತ್ರಪ್ರಭವತ್ವಾದಿನಾ ವಕ್ತ್ರಾದ್ಯಾನುಕೂಲ್ಯಂ, ತೇನ ಚ ಪ್ರಾಮಾಣ್ಯಮ್ ಇತಿ ಪ್ರಯತ್ನಗೌರವಮಿತ್ಯರ್ಥಃ। 'ವಿಮತಂ ಶಾಸ್ತ್ರಂ ಪ್ರಮಾಣಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಪ್ರೋಕ್ತತ್ವಾತ್ ಭಾರತವತ್' ಇತ್ಯೇವೋಕ್ತೌ ಅಪ್ರಯೋಜಕತ್ವಶಂಕಾ ಸ್ಯಾತ್, ತನ್ನಿವೃತ್ತ್ಯರ್ಥಮೇವಮಾಶ್ರಿತಮ್ ಇತಿ ಭಾವೇನಾಹ – ಉಕ್ತಸಾಧನೇತಿ ॥ ಯಥಾ ಹಿ 'ಕ್ಷಿತ್ಯಾದಿಕಂ ಸಕರ್ತೃಕಂ ಸಾವಯವತ್ವಾತ್' ಇತ್ಯುಕ್ತೇ ಹೇತೋರಪ್ರಯೋಜಕತ್ವಶಂಕಾನಿರಾಸಾಯ ಮಧ್ಯೇ ಕಾರ್ಯತ್ವಂ ನಿವೇಶ್ಯತೇ ತದ್ವತ್ ಇತಿ ಭಾವಃ। ವಕ್ತ್ರಾದೀತಿ ॥ ತತ್ರ ಚ ನಾಪ್ರಯೋಜಕತ್ವಮಿತಿ ಭಾವಃ॥

'ಇದಂ ಪ್ರಯತ್ನಗೌರವಮ್' – 'ಶಾಸ್ತ್ರಪ್ರಭವತ್ವ ಮೊದಲಾದ ಯುಕ್ತಿಗಳಿಂದ ವಕ್ತ್ರಾದ್ಯಾನುಕೂಲ್ಯವನ್ನು ಸಾಧನೆ ಮಾಡಿ, ತನ್ಮೂಲಕವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡುವ ಪ್ರಯತ್ನಗೌರವವನ್ನು' ಎಂದರ್ಥ.

'ವಿಮತಂ ಶಾಸ್ತ್ರಂ ಪ್ರಮಾಣಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಪ್ರೋಕ್ತತ್ವಾತ್ ಭಾರತವತ್' 'ಶಾಸ್ತ್ರಪ್ರಭವರೆನಿಸಿದ ಶ್ರೀವೇದವ್ಯಾಸದೇವರಿಂದ ವಿರಚಿತವಾದ್ದರಿಂದ ವಿವಾದವಿಷಯವಾದ ಈ

ಈ ಆಕ್ಷೇಪವು ಅರ್ಥವಿಲ್ಲದ್ದು. ವಿಜಾತೀಯಸಂವಾದವನ್ನು ಒಂದಾಗಿ ಪರಿಗಣಿಸಿದ ಮೇಲೆ ಎರಡು ಸಜಾತೀಯಸಂವಾದಗಳನ್ನು ಒಂದಾಗಿಯೇ ಪರಿಗಣಿಸಬೇಕು. ಪ್ರತ್ಯೇಕವಾಗಿ ಪರಿಗಣಿಸುವುದು ಅರ್ಧಚರತೀಯ-ನ್ಯಾಯಕ್ಕೆ ಸಮಾನವಾಗುತ್ತದೆ. ಗರ್ಭಿಣಿಯಾದ ಹೆಣ್ಣುಮೀನಿನ ಅರ್ಧಭಾಗವು ತಿನ್ನುವುದಕ್ಕೆ ಉಳಿದ ಅರ್ಧಭಾಗವು ಪ್ರಸವಕ್ಕೆ ಎಂದು ಹೇಳುವುದು ಹೇಗೆ ಅಯುಕ್ತವೋ ಅದರಂತೆ ಈ ಆಕ್ಷೇಪವೂ ಕೂಡ ಅಯುಕ್ತವಾಗಿದೆ.

### ನೆನೆಪಿಡಿ

* 'ಶಾಸ್ತ್ರವಿಷಯವ್ಯವಸ್ಥಾಪಕಮಾನಾಂತರಸಂವಾದಃ ವಿಜಾತೀಯಸಂವಾದಃ' 'ಸಾಕ್ಷಾತ್ ಶಾಸ್ತ್ರವಿಷಯವಿಷಯಕಮಾನಾಂತರಸಂವಾದಃ ಸಜಾತೀಯಸಂವಾದಃ' ಎಂಬುದಾಗಿ ವಿಜಾತೀ-ಯಸಂವಾದ ಹಾಗೂ ಸಜಾತೀಯಸಂವಾದಗಳ ಲಕ್ಷಣವನ್ನು ತಿಳಿಯಬೇಕು. (ಯಾದುಪತ್ಯ)

* 'ಲೌಕಿಕವಾಕ್ಯಸಾಧಾರಣ್ಯೇನ ಪ್ರಾಮಾಣ್ಯಮಾತ್ರಸಾಧಕತ್ವಂ ವಿಜಾತೀಯತ್ವಮ್; ಅಲೌಕಿಕಾರ್ಥಮಾತ್ರಪ್ರಾಮಾಣ್ಯಸಾಧಕತ್ವಂ ಸಜಾತೀಯತ್ವಂ' ಎಂಬುದಾಗಿ ವಿಜಾತೀಯ ಸಂವಾದ ಮತ್ತು ಸಜಾತೀಯಸಂವಾದಗಳ ಪರಿಷ್ಕಾರ ಮತ್ತೊಂದು ಬಗೆ.

* ಅರ್ಧಚರತೀಯಾನುಪಪತ್ತೇಃ ಎಂಬುದು ಪರಿಮಳದ ಪಾಠ. ಅರ್ಧಜರತೀಯಾ-ನುಪಪತ್ತೇಃ ಎಂಬುದು ವಾಕ್ಯಾರ್ಥಚಂದ್ರಿಕಾ ಪಾಠ. ಎರಡೂ ಪಾಠಗಳು ಯಾದುಪತ್ಯದ್ದು.

## ಶ್ರೀಮದಾಚಾರ್ಯರಾದರೂ ಕೂಡ ಏಕೆ ಪ್ರಯತ್ನಗೌರವವನ್ನು ಆಶ್ರಯಿಸಿದ್ದಾರೆ

**ಶ್ರೀಮನ್ನ್ಯಾಯಸುಧಾ– ಭವೇದಯಂ ಗ್ರಂಥಕೃತೋಽಭಿಪ್ರಾಯಃ । ತೇನಾ-ಪೀದಂ ಪ್ರಯತ್ನಗೌರವಂ ಕಸ್ಮಾದಾಶ್ರಿತಮಿತಿ ಚೇನ್ನ । ಉಕ್ತಸಾಧನೋಪಪ-ನ್ನತ್ವೇಽಪಿ 'ಅಸ್ತು ಭಾರತಾದೀನಾಂ ಪ್ರಾಮಾಣ್ಯಂ, ಮಾ ಭೂಚ್ಚಾಸ್ಯ' ಇತಿ ಶಂಕಾಯಾಂ ವಕ್ತ್ರಾದ್ಯಾನುಕೂಲ್ಯಸಾಧನಸ್ಯ ಅವಶ್ಯಾಶ್ರಯಣೀಯತ್ವಾತ್ । ಅನ್ಯಥಾ ಅಪ್ರಯೋಜಕತ್ವಾಪತ್ತೇರಿತಿ ॥**

ಸಾಕ್ಷಾತ್ತಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಬಾರದು ಎಂಬುದು ಗ್ರಂಥಕಾರರಾದ

ಆಚಾರ್ಯರ ಅಭಿಪ್ರಾಯ ಇರಬಹುದು. ಆದರೆ ಆಚಾರ್ಯರಾದರೂ ಕೂಡ ಈ ಪ್ರಯತ್ನಗೌರವವನ್ನು ಏಕೆ ಆಶ್ರಯಿಸಿದ್ದಾರೆ?

ಹೀಗೆ ಆಶಂಕೆ ಮಾಡಬಾರದು. ಏಕೆಂದರೆ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಯುಕ್ತಿಗಳು ಮಹಾಭಾರತದಲ್ಲಿ ಇದ್ದಂತೆ ಇರಲಿ; ಆದರೆ ಪ್ರಾಮಾಣ್ಯವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕತ್ವಾಶಂಕೆಯು ಪ್ರಾಪ್ತವಾಗುತ್ತದೆ. ಆಗ ವಕ್ತ್ರಾದ್ಯಾನುಕೂಲ್ಯ ಮೊದಲಾದ ಪ್ರಾಮಾಣ್ಯಸಾಧಕವಾದ ಅವಾಂತರಯುಕ್ತಿಗಳನ್ನು ಅವಶ್ಯವಾಗಿ ಆಶ್ರಯಿಸಬೇಕು. ಇಲ್ಲದಿದ್ದರೆ ಹೇತುವಿಗೆ ಅಪ್ರಯೋಜಕತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು ಪ್ರಯತ್ನಗೌರವವನ್ನು ಅವಲಂಬಿಸಿದ್ದಾರೆ.

## ಅಪ್ರಯೋಜಕತ್ವಾಶಂಕೆಯ ಪರಿಹಾರಕ್ಕಾಗಿ ಪ್ರಯತ್ನಗೌರವ ಸಾರ್ಥಕ

ಪರಿಮಳ– ಇದಮಿತಿ ॥ ಶಾಸ್ತ್ರಪ್ರಭವತ್ವಾದಿನಾ ವಕ್ತ್ರಾದ್ಯಾನುಕೂಲ್ಯಂ, ತೇನ ಚ ಪ್ರಾಮಾಣ್ಯಮ್ ಇತಿ ಪ್ರಯತ್ನಗೌರವಮಿತ್ಯರ್ಥಃ। 'ವಿಮತಂ ಶಾಸ್ತ್ರಂ ಪ್ರಮಾಣಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಪ್ರೋಕ್ತತ್ವಾತ್ ಭಾರತವತ್' ಇತ್ಯೇವೋಕ್ತೌ ಅಪ್ರಯೋಜಕತ್ವಶಂಕಾ ಸ್ಯಾತ್, ತನ್ನಿವೃತ್ತ್ಯರ್ಥಮೇವಮಾಶ್ರಿತಮ್ ಇತಿ ಭಾವೇನಾಹ – ಉಕ್ತಸಾಧನೇತಿ ॥ ಯಥಾ ಹಿ 'ಕ್ಷಿತ್ಯಾದಿಕಂ ಸಕರ್ತೃಕಂ ಸಾವಯವತ್ವಾತ್' ಇತ್ಯುಕ್ತೇ ಹೇತೋರಪ್ರಯೋಜಕತ್ವಶಂಕಾನಿರಾಸಾಯ ಮಧ್ಯೇ ಕಾರ್ಯತ್ವಂ ನಿವೇಶ್ಯತೇ ತದ್ವತ್ ಇತಿ ಭಾವಃ। ವಕ್ತ್ರಾದೀತಿ ॥ ತತ್ರ ಚ ನಾಪ್ರಯೋಜಕತ್ವಮಿತಿ ಭಾವಃ॥

'ಇದಂ ಪ್ರಯತ್ನಗೌರವಮ್' – 'ಶಾಸ್ತ್ರಪ್ರಭವತ್ವ ಮೊದಲಾದ ಯುಕ್ತಿಗಳಿಂಧ ವಕ್ತ್ರಾದ್ಯಾನುಕೂಲ್ಯವನ್ನು ಸಾಧನೆ ಮಾಡಿ, ತನ್ಮೂಲಕವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡುವ ಪ್ರಯತ್ನಗೌರವವನ್ನು' ಎಂದರ್ಥ.

'ವಿಮತಂ ಶಾಸ್ತ್ರಂ ಪ್ರಮಾಣಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಪ್ರೋಕ್ತತ್ವಾತ್ ಭಾರತವತ್' 'ಶಾಸ್ತ್ರಪ್ರಭವರೆನಿಸಿದ ಶ್ರೀವೇದವ್ಯಾಸದೇವರಿಂದ ವಿರಚಿತವಾದ್ದರಿಂದ ವಿವಾದವಿಷಯವಾದ ಈ

ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮಾಣವಾಗಿದೆ' ಎಂದಷ್ಟೇ ಅನುಮಾನವನ್ನು ಪ್ರಯೋಗ-ಮಾಡಿದರೆ ಅಪ್ರಯೋಜಕಶಂಕಾ ಪ್ರಾಪ್ತವಾಗುತ್ತದೆ. ಇದರ ನಿರಾಕರಣೆಗಾಗಿ ಪ್ರಯತ್ನಗೌರವ-ವನ್ನು ಆಶ್ರಯಿಸಿದ್ದಾರೆ. ಈ ಅಭಿಪ್ರಾಯದಿಂದ 'ಉಕ್ತಸಾಧನೋಪಪನ್ನತ್ವೇऽಪಿ' ಎಂದು ಹೇಳಿ-ದ್ದಾರೆ.

'ಕ್ಷಿತ್ಯಾದಿಕಂ ಸಕರ್ತೃಕಂ ಸಾವಯವತ್ವಾತ್' ಎಂದು ಹೇಳಿದರೆ ಹೇತುವಿಗೆ ಅಪ್ರಯೋಜ-ಕತ್ವಾಶಂಕೆಯು ಬರುತ್ತದೆ. ಅದರ ಪರಿಹಾರಕ್ಕಾಗಿ ಕಾರ್ಯತ್ವವನ್ನು ಮಧ್ಯದಲ್ಲಿ ಸಾಧನೆ ಮಾಡಬೇಕು. ಇದರಂತೆ ಇಲ್ಲೂ ಕೂಡ ತಿಳಿಯಬೇಕು. ವಕ್ತ್ರಾದ್ಯಾನುಕೂಲ್ಯವನ್ನು ಮಧ್ಯದಲ್ಲಿ ಸಾಧನೆ ಮಾಡಿದಾಗ ಅಪ್ರಯೋಜಕತ್ವವು ಬರುವುದಿಲ್ಲ ಎಂದಭಿಪ್ರಾಯ.

ವಿವರಣೆ – 'ಕ್ಷಿತ್ಯಾದಿಕಂ ಸಕರ್ತೃಕಂ ಸಾವಯತ್ವಾತ್' ಎಂದು ಅನುಮಾನವನ್ನು ಪ್ರಯೋಗ-ಮಾಡಿದರೆ ಅವಯವಗಳು ಇದ್ದಮಾತ್ರಕ್ಕೆ ಕರ್ತೃ ಏಕಿರಬೇಕು? ಎಂಬುದಾಗಿ ಅಪ್ರಯೋಜಕತ್ವಾ-ಶಂಕೆಯು ಬರುತ್ತದೆ. ಇದನ್ನು ಪರಿಹಾರಮಾಡಲು ಅವಯವಗಳಿರುವುದರಿಂದ ಕೃತಿಜನ್ಯವಾಗಿದೆ' ಎಂದು ಸಾಧನೆ ಮಾಡಬೇಕು. ಕೃತಿಜನ್ಯವಾದ್ದರಿಂದ ಕರ್ತೃಪೂರಕವಾಗಿದೆ ಎಂದು ಸುಲಭವಾಗಿ ಸಾಧನೆ ಮಾಡಬೇಕು. ಹೀಗೆ ಕೆಲವೊಮ್ಮೆ ಅನುಮಾನಗಳಲ್ಲಿ ಪರಂಪರೆಯನ್ನು ಆಶ್ರಯಿಸುವುದಕ್ಕೆ ಅಪ್ರಯೋಜ-ಕತ್ವಾಶಂಕೆಯ ಪರಿಹಾರದ ಉದ್ದೇಶ ಇರುತ್ತದೆ. ಇದೇ ಥರ ಪ್ರಕೃತ 'ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವಿದ್ದ ಮಾತ್ರಕ್ಕೆ ಪ್ರಾಮಾಣ್ಯವು ಏಕೆ ಇರಬೇಕು? ಎಂಬುದಾಗಿ ಅಪ್ರಯೋಜಕತ್ವಾಶಂಕೆಯು ಬರುತ್ತದೆ. ಆಗ ಮಧ್ಯದಲ್ಲಿ ವಕ್ತ್ರಾದ್ಯಾನುಕೂಲ್ಯ ಹಾಗೂ ಆಪ್ತ-ವಾಕ್ಯತ್ವಗಳನ್ನು ಸಾಧನೆ ಮಾಡಬೇಕು. ತನ್ಮೂಲಕವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು. ಆಗ ಅಪ್ರಯೋಜಕತ್ವಾಶಂಕೆಯು ಬರುವುದಿಲ್ಲ. ಆದ್ದರಿಂದ ಅನುವ್ಯಾಖ್ಯಾನಕಾರರಾದ ಶ್ರೀಮದಾ-ಚಾರ್ಯರು ಪ್ರಯತ್ನಗೌರವವನ್ನು ಆಶ್ರಯಿಸಿದ್ದು ಅರ್ಥಪೂರ್ಣವಾಗಿದೆ.

## ಅನಂತರ ಹೇಳಬೇಕಾದ್ದನ್ನು ಮೊದಲು ಹೇಳಿದ್ದು ಅರ್ಥಪೂರ್ಣವಾಗಿದೆ

ವಾಕ್ಯಾರ್ಥಚಂದ್ರಿಕಾ– ದ್ವಿತೀಯಂ ನಿರಾಕರೋತಿ – ಭವೇದೇವಮಿತಿ ॥ ಅತ್ರ ಹ್ಯಪ್ರಯೋಜಕತ್ವಶಂಕಾಯಾಂ ವಿಪಕ್ಷೇ ಬಾಧಕಾಂತರಸ್ಯಾಭಾವಾತ್ ಪ್ರಾಮಾಣ್ಯಾನಂಗೀಕಾರೇ ಅಸ್ಯ

ಶಾಸ್ತ್ರಸ್ಯ ವಕ್ತ್ರಾದ್ಯಾನುಕೂಲ್ಯೋಪೇತತ್ವಂ ನ ಸ್ಯಾತ್ ಇತ್ಯೇವ ವಿಪಕ್ಷೇ ಬಾಧಕಂ ವಕ್ತವ್ಯಮ್ । ತತ್ರ ಇಷ್ಟಾಪಾದನತ್ವಶಂಕಾಯಾಂ 'ಗುರೂಣಾಂ ಗುರುತ್ವಾತ್' ಇತ್ಯಾದಿ ಹೇತುಭಿರ್ವಕ್ತ್ರಾದ್ಯಾನುಕೂಲ್ಯಸ್ಯ ಅವಶ್ಯಂ ಸಾಧನೀಯತ್ವೇ, 'ಪ್ರಥಮತ ಏವ ತದಸ್ತು' ಇತಿ ಗ್ರಂಥಕೃತೋಽಭಿಪ್ರಾಯತ್ವಾನ್ನ ಪ್ರಯತ್ನ-ಗೌರವಾಶ್ರಯಣಂ ತಸ್ಯೇತ್ಯಾಹ – ಉಕ್ತೇತಿ ॥

ಗ್ರಂಥಕಾರರಾದ ಶ್ರೀಮದಾಚಾರ್ಯರಾದರೂ ಕೂಡ ಏಕೆ ಪ್ರಯತ್ನಗೌರವವನ್ನು ಆಶ್ರ-ಯಿಸಿದ್ದಾರೆ? ಎಂಬ ಎರಡನೆಯ ಪಕ್ಷವನ್ನು 'ಭವೇದೇವಂ' ಇತ್ಯಾದಿ ಟೀಕಾಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಈ ಅನುಮಾನದಲ್ಲಿ ಅಪ್ರಯೋಜಕತ್ವಾಶಂಕೆಯನ್ನು ಮಾಡಿದರೆ ವಿಪಕ್ಷದಲ್ಲಿ ಬೇರೆ ಬಾಧಕ-ತರ್ಕಗಳು ಇರುವುದಿಲ್ಲ. ಆದ್ದರಿಂದ 'ಪ್ರಾಮಾಣ್ಯಾನಂಗೀಕಾರೇ ಅಸ್ಯ ಶಾಸ್ತ್ರಸ್ಯ ವಕ್ತ್ರಾದ್ಯಾನುಕೂಲ್ಯೋ-ಪೇತತ್ವಂ ನ ಸ್ಯಾತ್' 'ಪ್ರಾಮಾಣ್ಯವನ್ನು ಅಂಗೀಕಾರ ಮಾಡದಿದ್ದರೆ ಈ ಶಾಸ್ತ್ರವು ವಕ್ತ್ರಾದ್ಯಾನುಕೂಲ್ಯ-ಗಳಿಂದ ಯುಕ್ತವಾಗದೇ ಇರಬೇಕಾದೀತು' ಎಂಬ ವಿಪಕ್ಷೇ ಬಾಧಕತರ್ಕವನ್ನು ಹೇಳಬೇಕು. ಆಗ ಇದು ಇಷ್ಟಾಪತ್ತಿ ಎಂಬುದಾಗಿ ಆಶಂಕೆ ಮಾಡಿದರೆ 'ಗುರೂಣಾಂ ಗುರುತ್ವಾತ್' ಇತ್ಯಾದಿ ಹೇತುಗಳಿಂದ ವಕ್ತ್ರಾದ್ಯಾನುಕೂಲ್ಯಗಳನ್ನು ಅವಶ್ಯವಾಗಿ ಸಾಧನೆ ಮಾಡಬೇಕು. ಇಷ್ಟೆಲ್ಲಾ ಪ್ರಕ್ರಿಯೆಯು ಅನಂತರ ನಡೆಯುವುದಕ್ಕಿಂತ ಮೊದಲೇ ಇದನ್ನು ಹೇಳುವುದು ಯುಕ್ತವಾಗಿದೆ. ಹೀಗೆ ಗ್ರಂಥಕಾರರ ಅಭಿಪ್ರಾಯ ಇರುವುದರಿಂದ ಗ್ರಂಥಕಾರರು ಪ್ರಯತ್ನಗೌರವವನ್ನು ಆಶ್ರಯಿಸಿದಂತೆ ಆಗುವುದಿಲ್ಲ. ಈ ವಿಚಾರವನ್ನು 'ಉಕ್ತ' ಇತ್ಯಾದಿಯಾಗಿ ಮೂಲದಲ್ಲಿ ಹೇಳಿದ್ದಾರೆ.

ವಿವರಣೆ – 'ಅತ್ರ ಹಿ ಅಪ್ರಯೋಜಕತ್ವಶಂಕಾಯಾಂ' ಎಂಬ ಒಂದೇ ವಾಕ್ಯದಿಂದ ಸಮಸ್ತ-ಪ್ರಕರಣದ ಸಾರಾಂಶವು ತಿಳಿಯುತ್ತದೆ. 'ಬ್ರಹ್ಮಸೂತ್ರಂ ಪ್ರಮಾಣಂ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬುದಾಗಿ ಅನುಮಾನವನ್ನು ಪ್ರಯೋಗಮಾಡಿದರೆ ಅಪ್ರಯೋ-ಜಕತ್ವಾಶಂಕೆಯು ಬರುತ್ತದೆ. ಮಹಾಭಾರತಾದಿಗಳೂ ಉಕ್ತಸಾಧನೋಪಪನ್ನ ಆಗುವುದರಿಂದ ಪ್ರಮಾಣವಾಗಲಿ; ಆಗಲಿ ಬ್ರಹ್ಮಸೂತ್ರಗಳು ಏಕೆ ಪ್ರಮಾಣವಾಗಬೇಕು? ಎಂಬುದಾಗಿ ಅಪ್ರಯೋ-ಜಕತ್ವಾಶಂಕೆಯು ಬರುತ್ತದೆ. ಆಗ 'ಯದಿ ಬ್ರಹ್ಮಸೂತ್ರಂ ಪ್ರಮಾಣಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನು-ಕೂಲ್ಯೋಪೇತತ್ವಂ ನ ಸ್ಯಾತ್' ಎಂಬುದಾಗಿ ಹೇತೂಚ್ಛಿತ್ತಿರೂಪವಾದ ಬಾಧಕವನ್ನು ಹೇಳಬೇಕು. ಹೀಗೆ ಹೇಳಿದಾಗ ಪೂರ್ವಪಕ್ಷಿಯು 'ನಾನು ಬ್ರಹ್ಮಸೂತ್ರಗಳಿಗೆ ವಕ್ತ್ರಾದ್ಯಾನುಕೂಲ್ಯೋಪೇತತ್ವವನ್ನು ಕೂಡ ಅಂಗೀಕರಿಸುವುದಿಲ್ಲ' ಎಂದು ಹೇಳಿದರೆ ಆಗ ವಕ್ತ್ರಾದ್ಯಾನುಕೂಲ್ಯೋಪೇತತ್ವವನ್ನು ಕೂಡ ನಾವು ಸಾಧನೆ

ಮಾಡಲೇಬೇಕು. ಆ ವಕ್ತ್ರಾದ್ಯಾನುಕೂಲ್ಯಗಳನ್ನು ಗುರುಗುರೋದಿತತ್ವ ಮೊದಲಾದ ಹೇತುಗಳಿಂದ ಸಾಧನೆ ಮಾಡಬೇಕು. ಹೀಗೆ ಮೊದಲು ನೇರವಾಗಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಹೊರಟು ಅನಂತರ ವಕ್ತ್ರಾದ್ಯಾನುಕೂಲ್ಯಗಳನ್ನು ಅದಕ್ಕಾಗಿ ಗುರುಗುರೂದಿತತ್ವಾದಿಗಳನ್ನು ಸಾಧನೆ ಮಾಡುವುದಕ್ಕಿಂತ ಪ್ರಾರಂಭದಲ್ಲೇ ಪರಂಪರೆಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ಅತ್ಯಂತ ಅರ್ಥಪೂರ್ಣವಾಗಿದೆ.

ಯಾದುಪತ್ಯ– ಉಕ್ತಸಾಧನೋಪಪನ್ನತ್ವೇऽಪೀತಿ ॥ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪದಿಷ್ಟತ್ವರೂಪಸಾಧನೋಪಪನ್ನತ್ವೇऽಪೀತ್ಯರ್ಥಃ ಇತ್ಯಾಹುಃ । ವಕ್ತ್ರಾದ್ಯಾನುಕೂಲ್ಯಸಾಧನಸ್ಯೇತಿ ॥ ತಥಾ ಚ ಉಕ್ತರೀತ್ಯಾ ನಾಪ್ರಯೋಜಕತಾ ಇತಿ ಭಾವಃ ।

'ಉಕ್ತಸಾಧನೋಪಪನ್ನತ್ವೇऽಪಿ' – 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್' ಎಂಬ ಹೇತುವಿದ್ದರೂ ಕೂಡ ಪ್ರಾಮಾಣ್ಯವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕತ್ವಾಶಂಕೆಯನ್ನು ಮಾಡುತ್ತಾರೆ. ಅದಕ್ಕಾಗಿ ಅವಾಂತರಸಾಧ್ಯವನ್ನು ಹೇಳಲೇಬೇಕು.

'ವಕ್ತ್ರಾದ್ಯಾನುಕೂಲ್ಯಸಾಧನಸ್ಯ' – ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧನೆ ಮಾಡಿದಾಗ ಅಪ್ರಯೋಜಕತ್ವಾಶಂಕೆಯು ಬರುವುದಿಲ್ಲ.

## ಸುಧಾಪರಿಮಳಸಾರ

ಆಚಾರ್ಯರು ನೀಡಿದ ಹೇಳಿಕೆಯನ್ನು ಆಧರಿಸಿಕೊಂಡು ಇದುವರೆಗೆ ಮಾಡಿದ ಸಮರ್ಥನೆಯೇನೋ ಸರಿ ಆಚಾರ್ಯರೇ ಆದರೂ ನೇರವಾಗಿ ಪ್ರಾಮಾಣ್ಯಸಾಧನೆ ಮಾಡುವ ನೇರಮಾರ್ಗವನ್ನು ಬಿಟ್ಟು ಬಳಸುಮಾರ್ಗವನ್ನು ಆಶ್ರಯಿಸಿದ್ದಾರೆ ಎಂಬ ಪ್ರಶ್ನೆಗೆ ಉತ್ತರ ಹೀಗಿದೆ—

ಜಗದ್ಗುರುಗಳ ಗುರುಗಳು ಹಾಗೂ ಶಾಸ್ತ್ರಪ್ರಭವರೂ ಆದ ವ್ಯಾಸರಿಂದ ಬ್ರಹ್ಮಾದಿಗಳ ಮೋಕ್ಷಕ್ಕಾಗಿ ರಚಿತವಾದುದರಿಂದ ಭಾರತಾದಿಗಳಂತೆ ಬ್ರಹ್ಮಸೂತ್ರವು ಪ್ರಮಾಣ ಎಂದು ಹೇಳಿದಾಗ ಅಂಥ ವ್ಯಾಸರು ರಚನೆ ಮಾಡಿದ ಮಾತ್ರಕ್ಕೆ ಬ್ರಹ್ಮಸೂತ್ರಗಳಿಗೆ ಏಕೆ ಪ್ರಾಮಾಣ್ಯವನ್ನು ಒಪ್ಪಬೇಕು? ಎಂಬ (ಅಪ್ರಯೋಜಕತ್ವ)ಶಂಕೆ ಬಂದರೆ ಅದಕ್ಕೆ ಹೀಗೆ ಉತ್ತರಿಸಬೇಕಾಗುತ್ತದೆ—ವ್ಯಾಸರಚಿತವಾದ ಬ್ರಹ್ಮಸೂತ್ರವು ಪ್ರಮಾಣವೆಂದು ಒಪ್ಪದಿದ್ದರೆ ಅದರಲ್ಲಿ ಪ್ರಮಿತವಾದ ವಕ್ತ್ರಾದ್ಯಾನುಕೂಲ್ಯವೇ ಅಸಂಗತವೆನಿಸೀತು. ವಾಸ್ತವವಾಗಿ ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಪ್ರಮಾಣವಾಗದಿರಲು ಸಾಧ್ಯವಿಲ್ಲ. ಹೀಗೆ ಮೊದಲು ಪ್ರಾಮಾಣ್ಯವನ್ನು ಸಾಧಿಸಿದರೆ ಆಮೇಲೆ ಬರುವ ಶಂಕೆಗೆ ಸಮಾಧಾನವಾಗಿ ವಕ್ತ್ರಾನುಕೂಲ್ಯದ ಅಭಾವವನ್ನು ಆಪಾದಿಸಬೇಕೆಂದಾದರೆ ವಕ್ತ್ರಾದ್ಯಾನುಕೂಲ್ಯವನ್ನು ಇದೆ ಎಂದು

ಸಾಧಿಸಲೇಬೇಕು. ಆದರ ಬದಲು ಮೊದಲು ವಕ್ತ್ರಾದ್ಯನುಕೂಲ್ಯವನ್ನು ಸಾಧಿಸಿ ಅದರಿಂದ ಆಪ್ತವಾಕ್ಯತ್ವವನ್ನು ಸಮರ್ಥಿಸಿ ಅದರಿಂದ ಪ್ರಾಮಾಣ್ಯವನ್ನು ಸಾಧಿಸುವುದು ಋಜುಮಾರ್ಗವೆಂದು ಆಚಾರ್ಯರು ಈ ಮಾರ್ಗವನ್ನು ಅನುಸರಿಸಿರುವರು.

## ನೆನೆಪಿಡಿ

* 'ವಿಮತಂ ಶಾಸ್ತ್ರಂ ಪ್ರಮಾಣಂ ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಪ್ರೋಕ್ತತ್ವಾತ್ ಭಾರತವತ್' ಎಂಬ ಅನುಮಾನಕ್ಕೆ ಅಪ್ರಯೋಜಕತ್ವಾಶಂಕೆಯನ್ನು ಪರಿಹಾರಮಾಡಲು ಆಪ್ತವಾಕ್ಯತ್ವ ಮತ್ತು ವಕ್ತ್ರಾದ್ಯನುಕೂಲ್ಯಗಳನ್ನು ಶಾಸ್ತ್ರಪ್ರಭವತ್ವಾದಿಗಳಿಂದ ಸಮರ್ಥಿಸಿದ್ದಾರೆ. (ಪರಿಮಳ).

* ಪರಂಪರೆಯಿಂದ ಪ್ರಾಮಾಣ್ಯಸಮರ್ಥನೆ ಮಾಡಿರುವುದು ಅಪ್ರಯೋಜಕತ್ವಾಶಂಕೆಯ ಪರಿಹಾರಕ್ಕಾಗಿ ಸಾರ್ಥಕವಾಗಿದೆ. (ಪರಿಮಳ)

* ನೇರವಾಗಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿದರೆ ಅಪ್ರಯೋಜಕತ್ವಾಶಂಕೆಯು ಬರುತ್ತದೆ. ಆದರ ಪರಿಹಾರಕ್ಕಾಗಿ ವಿಪಕ್ಷೇ ಬಾಧಕತರ್ಕ ಹೇಳಬೇಕು. ಅದನ್ನು ಪೂರ್ವಪಕ್ಷಿಯು ಇಷ್ಟಾಪತ್ತಿಯೆಂದಾಗ ವಿಪಕ್ಷೇ ಬಾಧಕತರ್ಕದಲ್ಲಿರುವ ವಕ್ತ್ರಾದ್ಯನುಕೂಲ್ಯಗಳ ಸಮರ್ಥನೆಯನ್ನು ಶಾಸ್ತ್ರಪ್ರಭವತ್ವಾದಿ ಹೇತುಗಳಿಂದ ಸಾಧನೆ ಮಾಡಬೇಕು. ಹೀಗೆ ಅನಂತರ ಮಾಡಬೇಕಾದದ್ದನ್ನು ಮೊದಲೇ ಮಾಡಿದ್ದಾರೆ. ಆಚಾರ್ಯರು ಅನುಸರಿಸಿದ ಪರಂಪರಾಮಾರ್ಗ ಅತ್ಯಂತ ಅರ್ಥಪೂರ್ಣವಾಗಿದೆ. (ವಾಕ್ಯಾರ್ಥಚಂದ್ರಿಕಾ).

* * * * * *

## ೫ನೇ ಶ್ಲೋಕಕ್ಕೆ ವ್ಯಾಖ್ಯಾನ

## ಅನುವ್ಯಾಖ್ಯಾನಮ್

**ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।**
**ಆಪ್ತವಾಕ್ಯತಯಾ ತೇನ ... ...................**

ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯವೇ ಆಪ್ತಿಯೆನಿಸುತ್ತದೆ. ಬ್ರಹ್ಮಸೂತ್ರದಲ್ಲಿ ಇಂಥ ಆಪ್ತಿಯು ಇರುವುದರಿಂದ ಆಪ್ತವಾಕ್ಯ ಎನಿಸುತ್ತದೆ.

## ಪ್ರಾಮಾಣ್ಯಸಾಧಕಾನುಮಾನಕ್ಕೆ ಉಪಾಧಿದೋಷಪರಿಹಾರ

**ಶ್ರೀಮನ್ನ್ಯಾಯಸುಧಾ– ನನು ತರ್ಹ್ಯನೇನೇದಮುದಿತಂ ಭವತಿ– 'ಏತತ್ ಶಾಸ್ತ್ರಂ ಪ್ರಮಾಣಮ್ ಅನುಕೂಲವಕ್ತ್ರಾದಿಮತ್ವಾದ್ ಭಾರತಾದಿವತ್ । ವಕ್ತ್ರಾದ್ಯಾನು-ಕೂಲ್ಯಂ ಚೋಕ್ತಹೇತುಸಿದ್ಧಮ್' ಇತಿ । ಏತದನುಪಪನ್ನಮ್ । ಆಪ್ತವಾಕ್ಯತಾ-ಯಾಸ್ತತ್ರೋಪಾಧಿತ್ವಾತ್ । ನ ಚ ಪ್ರತ್ಯಕ್ಷಾದೌ ಸತ್ಯಪಿ ಪ್ರಾಮಾಣ್ಯೇ ನಾಸ್ತ್ಯಾಪ್ತ-ವಾಕ್ಯತ್ವಮಿತಿ ಸಾಧ್ಯವ್ಯಾಪಕತ್ವಾನ್ನಾಯಮುಪಾಧಿರಿತಿ ವಾಚ್ಯಮ್ । ವಾಕ್ಯತ್ವಾವ-ಚ್ಛಿನ್ನಸಾಧ್ಯವ್ಯಾಪಕತ್ವೇನೋಪಾಧಿತ್ವೋಪಪತ್ತೇಃ । ತಥಾಽಪ್ಯಪೌರುಷೇಯೇ ವೇದೇ ತದಭಾವಾದನುಪಾಧಿತ್ವಮಿತಿ ಚೇನ್ನ । ವೇದಾಪೌರುಷೇಯತ್ವಸ್ಯಾ-ಸಮ್ಮತತ್ವಾತ್ । ಸಮ್ಮತತ್ವೇ ವಾ ಸಾಧನಾವಚ್ಛಿನ್ನೇ ಪೌರುಷೇಯವಾಕ್ಯತ್ವಾವಚ್ಛಿನ್ನೇ ವಾ ಸಾಧ್ಯೇಽಸ್ಯೋಪಾಧಿತ್ವೋಪಪತ್ತೇರಿತಿ ।**

**ಮೈವಮ್ । ಅಭಿಪ್ರಾಯಾನವಗಮಾತ್ । ನ ಹಿ ವಯಂ ವಕ್ತ್ರಾದ್ಯಾನುಕೂಲ್ಯೇನ ಶಾಸ್ತ್ರಪ್ರಾಮಾಣ್ಯಂ ಸಾಕ್ಷಾತ್ ಸಾಧಯಿತುಮುದ್ಯತಾಃ । ಯೇನ ಅತ್ರೋಪಾ-**

**ಧ್ಯುದ್ಭಾವನಂ ಸಂಗಚ್ಛೇತ । ಅಪಿ ತರ್ಹ್ಯನುಕೂಲವಕ್ತ್ರಾದಿಮತ್ತ್ವಸ್ಯ ಆಪ್ತವಾಕ್ಯ-ತಯಾ ವ್ಯಾಪ್ತತ್ವಾತ್ ತೇನ ತಾಂ ಪ್ರಸಾಧ್ಯ ತಯಾ ಪ್ರಾಮಾಣ್ಯಂ ಶಾಸ್ತ್ರಸ್ಯ ಸಾಧ್ಯತ ಇತ್ಯಾಶಯವಾನಾಹ – ವಕ್ತೃಶ್ರೋತೃಪ್ರಸಕ್ತೀನಾಮಿತಿ ॥**

ಹಾಗಾದರೆ ಒಟ್ಟು ಇಷ್ಟನ್ನು ಹೇಳಿದಂತಾಯಿತು. – "ಏತತ್ ಶಾಸ್ತ್ರಂ ಪ್ರಮಾಣಮ್ ಅನುಕೂಲವಕ್ತ್ರಾದಿಮತ್ವಾದ್ ಭಾರತಾದಿವತ್ ।' 'ಈ ಬ್ರಹ್ಮಸೂತ್ರವು ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳನ್ನು ಹೊಂದಿರುವುದರಿಂದ ಪ್ರಮಾಣವಾಗಿದೆ. ಮಹಾಭಾರತ ಇದಕ್ಕೆ ಉದಾಹರಣೆಯಾಗಿದೆ. 'ಶ್ರೀವೇದವ್ಯಾಸದೇವರಿಂದ ಬ್ರಹ್ಮಾದಿಗಳನ್ನು ಕುರಿತು ಮೋಕ್ಷಪ್ರಯೋಜನಕ್ಕೋಸ್ಕರ ಉಪದೇಶಿಸಿರುವಿಕೆ' ಎಂಬ ಹೇತುವು ಅನುಕೂಲ-ವಕ್ತ್ರಾದಿಗಳು ಈ ಶಾಸ್ತ್ರದಲ್ಲಿ ಇರುತ್ತವೆಂಬುದನ್ನು ತಿಳಿಸುತ್ತದೆ. ಆದರೆ ವಕ್ತ್ರಾದ್ಯಾನುಕೂಲ್ಯ-ಗಳಿರುವುದರಿಂದ ಈ ಶಾಸ್ತ್ರದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ಯುಕ್ತಿಯುಕ್ತ-ವಾಗುವುದಿಲ್ಲ. ಏಕೆಂದರೆ ಈ ಅನುಮಾನಕ್ಕೆ ಆಪ್ತವಾಕ್ಯತ್ವವು ಉಪಾಧಿಯಾಗಿದೆ.

ಪ್ರತ್ಯಕ್ಷಾದಿ ಪ್ರಮಾಣಗಳಲ್ಲಿ ಪ್ರಾಮಾಣ್ಯವೆಂಬ ಸಾಧ್ಯವಿದೆ. ಆದರೆ ಆಪ್ತವಾಕ್ಯತ್ವವೆಂಬ ಉಪಾಧಿಯು ಇರುವುದಿಲ್ಲ. ಹಾಗಾಗಿ ಸಾಧ್ಯವ್ಯಾಪಕತ್ವವು ಬರುವುದಿಲ್ಲವಾದ್ದರಿಂದ ಹೇಗೆ ಉಪಾಧಿಯಾಗುತ್ತದೆ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಕೇವಲಪ್ರಾಮಾಣ್ಯಕ್ಕೆ ಆಪ್ತವಾಕ್ಯತ್ವವು ವ್ಯಾಪಕವಾ-ಗಿದೆಯೆಂದು ಹೇಳುವುದಿಲ್ಲ. ವಾಕ್ಯತ್ವಸಹಿತವಾದ ಪ್ರಾಮಾಣ್ಯಕ್ಕೆ ಆಪ್ತವಾಕ್ಯತ್ವವು ವ್ಯಾಪಕ-ವಾಗಿದೆ. ಆದ್ದರಿಂದ ಆಪ್ತವಾಕ್ಯತ್ವವು ಉಪಾಧಿಯೆಂದು ಹೇಳಲು ಏನೂ ತೊಂದರೆ ಇಲ್ಲ.

ಪ್ರಶ್ನೆ – ಅಪೌರುಷೇಯವಾದ ವೇದಗಳಲ್ಲಿ ವಾಕ್ಯತ್ವಸಹಿತವಾದ ಪ್ರಾಮಾಣ್ಯವಿದೆ. ಆದರೆ ಅಲ್ಲಿ ಆಪ್ತವಾಕ್ಯತ್ವವು ಇರುವುದಿಲ್ಲವಾದ್ದರಿಂದ ಸಾಧ್ಯವ್ಯಾಪಕವಾಗಲಿಲ್ಲ. ಹಾಗಾಗಿ ಆಪ್ತವಾಕ್ಯತ್ವವು ಹೇಗೆ ಉಪಾಧಿಯಾಗುತ್ತದೆ?

ಉತ್ತರ – ಈ ಪ್ರಶ್ನೆಯು ತಪ್ಪು. ಏಕೆಂದರೆ ವೇದಗಳಲ್ಲಿ ಅಪೌರುಷೇಯತ್ವವು ನಮಗೆ ಸಮ್ಮತವೇ ಆಗಿಲ್ಲ. ವೇದಾಪೌರುಷೇಯತ್ವವನ್ನು ಒಪ್ಪಿದರೂ ಕೂಡ ಅನುಕೂಲವಕ್ತ್ರಾದಿಗಳುಳ್ಳ ಪ್ರಾಮಾಣ್ಯವನ್ನು ಪೌರುಷೇಯವಾಕ್ಯ ಪ್ರಾಮಾಣ್ಯವನ್ನು ಕುರಿತು ಆಪ್ತವಾಕ್ಯತ್ವವು ವ್ಯಾಪಕವಾಗಿದೆ. ಆದ್ದರಿಂದ ಆಪ್ತವಾಕ್ಯತ್ವವು ಉಪಾಧಿಯಾಗುತ್ತದೆ. ಆದ್ದರಿಂದ ಪೂರ್ವಪಕ್ಷವು ಯುಕ್ತವಾಗುತ್ತದೆ.

ಈ ಪೂರ್ವಪಕ್ಷವು ತಪ್ಪು. ಏಕೆಂದರೆ, ಗುರುರ್ಗುರೂಣಾಂ' ಎಂಬ ಶ್ಲೋಕದ ಅಭಿಪ್ರಾಯವನ್ನು ಪೂರ್ವಪಕ್ಷದವರು ಸ್ಪಷ್ಟವಾಗಿ ತಿಳಿದಿರುವುದೇ ಇಲ್ಲ. ಏಕೆಂದರೆ ವಕ್ತ್ರಾದ್ಯಾನುಕೂಲ್ಯಗಳಿಂದ ಶಾಸ್ತ್ರಪ್ರಾಮಾಣ್ಯವನ್ನು ನೇರವಾಗಿ ಸಾಧನೆ ಮಾಡುವುದು ಗ್ರಂಥಕಾರರ ಅಭಿಪ್ರಾಯವಲ್ಲ. ಹಾಗೇನಾದರೂ ಗ್ರಂಥಕಾರರಿಗೆ ಅಭಿಪ್ರಾಯವಿದ್ದರೆ ಉಪಾಧಿಯನ್ನು ಹೇಳುವುದು ಸಮಂಜಸವಾಗುತ್ತಿತ್ತು. ಗ್ರಂಥಕಾರರ ಅಭಿಪ್ರಾಯ ಹೇಗಿದೆಯೆಂದರೆ, ವಕ್ತ್ರಾದ್ಯಾನುಕೂಲ್ಯಗಳಿರುವುದರಿಂದ ಶಾಸ್ತ್ರವು ಆಪ್ತವಾಕ್ಯವಾಗಿದೆ ಎಂದು ಹೇಳಿ, ಆಪ್ತವಾಕ್ಯವಾಗಿರುವುದರಿಂದ ಪ್ರಮಾಣವಾಗಿದೆ ಎಂದು. ಆದ್ದರಿಂದ ಪ್ರಾಮಾಣ್ಯವನ್ನು ನೇರವಾಗಿ ಸಾಧನೆ ಮಾಡದೇ ಪರಂಪರೆಯಿಂದ ಸಾಧನೆ ಮಾಡುವ ಅಭಿಪ್ರಾಯವಿದೆ. ಇದನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಅನುವ್ಯಾಖ್ಯಾನವು ಹೊರಟಿದೆ.

## ಉಪಾಧಿಯು ಎರಡು ವಿಧ

ಪರಿಮಳ– ವಕ್ತ್ರಾದ್ಯಾನುಕೂಲ್ಯಮಪಿ ಪ್ರಾಮಾಣ್ಯೇ ಸಾಕ್ಷಾನ್ನ ಹೇತುಃ ಕಿಂತು ಆಪ್ತವಾಕ್ಯತ್ವಾದನುಮಾನದ್ವಾರೈವ । ಕುತ ಏವಮ್? ಅನ್ಯಥಾ ಸೋಪಾಧಿಕತ್ವೇನ ಪ್ರಾಮಾಣ್ಯಸಾಧಕತ್ವಾನಾಪತ್ತೇರಿತಿ ಭಾವೇನಾಶಂಕೋತ್ತರಾಭ್ಯಾಂ ಮೂಲಮವತಾರಯತಿ – ನನ್ವಿತ್ಯಾದಿನಾ ॥ ಉಕ್ತಹೇತ್ವಿತಿ ॥ 'ಗುರುರ್ಗುರೂಣಾಮ್' ಇತ್ಯಾದಿನೋಕ್ತಹೇತುತ್ರಯೇಣ ವಕ್ತ್ರಾದ್ಯಾನುಕೂಲ್ಯತ್ರಯಂ ಸಿದ್ಧಮಿತ್ಯರ್ಥಃ । ವಾಕ್ಯತ್ವಾವಚ್ಛಿನ್ನೇತಿ ॥ ಸಾಧ್ಯವ್ಯಾಪಕತ್ವಂ ಹಿ

ದ್ವೇಧಾ । ಶುದ್ಧಸಾಧ್ಯವ್ಯಾಪಕತ್ವಮ್ ಅವಚ್ಛಿನ್ನಸಾಧ್ಯವ್ಯಾಪಕತ್ವಂ ಚೇತಿ । ತತ್ರ ಆದ್ಯಂ 'ಯಾಗೀಯಹಿಂಸಾ ಪಾಪಸಾಧನಂ ಹಿಂಸತ್ವಾತ್' ಇತ್ಯತ್ರ ನಿಷಿದ್ಧತ್ವಸ್ಯ । ದ್ವಿತೀಯಂ ಚ ದ್ವೇಧಾ – ಪಕ್ಷಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವಂ ಸಾಧನಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವಂ ಚೇತಿ । ತತ್ರಾದ್ಯಂ 'ವಾಯುಃ ಪ್ರತ್ಯಕ್ಷಃ ಪ್ರತ್ಯಕ್ಷಸ್ಪರ್ಶಾಶ್ರಯತ್ವಾತ್' ಇತ್ಯತ್ರ ಉದ್ಭೂತ-ರೂಪವತ್ತ್ವೋಪಾಧೇಃ ಬಹಿರ್ದ್ರವ್ಯತ್ವಾವಚ್ಛಿನ್ನಸಾಧ್ಯವ್ಯಾಪಕತ್ವಮ್ ।

ವಕ್ತ್ರಾದ್ಯಾನುಕೂಲ್ಯಗಳೂ ಕೂಡ ಪ್ರಾಮಾಣ್ಯಸಾಧನೆಯಲ್ಲಿ ಸಾಕ್ಷಾತ್ತಾಗಿ ಹೇತುಗಳಾ-ಗಿರುವುದಿಲ್ಲ. ಮತ್ತೇನೆಂದರೆ ಆಪ್ತವಾಕ್ಯತ್ವವನ್ನು ಸಾಧಿಸಿ ಅದರ ಮೂಲಕವೇ ಪ್ರಾಮಾಣ್ಯವನ್ನು ಸಾಧಿಸುವುದರಲ್ಲಿ ಹೇತುಗಳಾಗುತ್ತವೆ. ವಕ್ತ್ರಾದ್ಯಾನುಕೂಲ್ಯದಿಂದ ನೇರವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಿದರೆ ಆ ಅನುಮಾನದಲ್ಲಿ ಆಪ್ತವಾಕ್ಯತ್ವವು ಉಪಾಧಿಯಾಗುತ್ತದೆ. ಆದ್ದರಿಂದ ಅದು ಪ್ರಾಮಾಣ್ಯಸಾಧಕವಾಗುವುದಿಲ್ಲ.

ಈ ಅಭಿಪ್ರಾಯದಿಂದ ಆಶಂಕೆ ಮತ್ತು ಸಮಾಧಾನಗಳಿಂದ 'ನನು' ಇತ್ಯಾದಿ ಗ್ರಂಥದಿಂದ ಮೂಲಕ್ಕೆ ಅವತಾರಿಕೆ ನೀಡುತ್ತಿದ್ದಾರೆ.

'ಉಕ್ತಹೇತುಃ' – 'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕದಿಂದ ಹೇಳಲ್ಪಟ್ಟ ಮೂರು-ಬಗೆಯ ಹೇತುಗಳಿಂದ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಸಿದ್ಧವಾಗಿರುತ್ತವೆ ಎಂದರ್ಥ.

'ವಾಕ್ಯತ್ವಾವಚ್ಛಿನ್ನ' – ಉಪಾಧಿಗೆ ಸಾಧ್ಯವ್ಯಾಪಕತ್ವವು ಎರಡು ರೀತಿಯಲ್ಲಿ ಪ್ರಾಪ್ತವಾ-ಗುತ್ತದೆ. 1. ಶುದ್ಧಸಾಧ್ಯವನ್ನು ವ್ಯಾಪಿಸಿರುವುದು. 2. ಯಾವುದಾದರೂ ಧರ್ಮದಿಂದ ಸಹಿತವಾದ ಸಾಧ್ಯವನ್ನು ವ್ಯಾಪಿಸಿರುವುದು ಎಂದು.

ಇವೆರಡರಲ್ಲಿ ಮೊದಲನೆಯ ಶುದ್ಧಸಾಧ್ಯವನ್ನು ವ್ಯಾಪಿಸಿರುವುದು ಎಂಬ ಉಪಾಧಿಗೆ ನಿಷಿದ್ಧತ್ವವು ಉದಾಹರಣೆಯಾಗಿದೆ. 'ಯಾಗೀಯಹಿಂಸಾ ಪಾಪಸಾಧನಂ ಹಿಂಸಾತ್ವಾತ್' 'ಯಾಗೀಯಹಿಂಸೆಯೂ ಕೂಡ ಹಿಂಸೆಯಾಗಿರುವುದರಿಂದ ಪಾಪಸಾಧನವಾಗಿದೆ' ಎಂಬುದಾಗಿ ಅನುಮಾನವನ್ನು ಮಾಡಿದರೆ ನಿಷಿದ್ಧತ್ವವು ಉಪಾಧಿಯಾಗುತ್ತದೆ.

ಅವಚ್ಛಿನ್ನಸಾಧ್ಯವ್ಯಾಪಕತ್ವವು ಪುನಃ ಎರಡುವಿಧ 1. ಪಕ್ಷಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ, 2. ಸಾಧನಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ ಎಂದು. ಅನುಮಾನದ ಪಕ್ಷದಲ್ಲಿರುವ ಧರ್ಮದಿಂದ ಕೂಡಿರುವ ಸಾಧ್ಯಕ್ಕೆ ವ್ಯಾಪಕವಾಗಿರುವುದನ್ನು ಪಕ್ಷಧರ್ಮಾವಚ್ಛಿನ್ನಸಾಧನವ್ಯಾಪಕತ್ವ ಎನ್ನುತ್ತಾರೆ. ಸಾಧನದಲ್ಲಿರುವ ಧರ್ಮದಿಂದ ಕೂಡಿರುವ ಸಾಧ್ಯಕ್ಕೆ ವ್ಯಾಪಕವಾಗಿರುವುದನ್ನು ಸಾಧನಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ ಎಂದು ಕರೆಯುತ್ತಾರೆ. ಇವೆರಡರಲ್ಲಿ ಮೊದಲನೆಯದ್ದು 'ವಾಯುಃ ಪ್ರತ್ಯಕ್ಷಃ ಪ್ರತ್ಯಕ್ಷಸ್ಪರ್ಶಾಶ್ರಯತ್ವಾತ್' ಎಂಬಲ್ಲಿ ಉದ್ಭೂತರೂಪವತ್ವ ಎಂಬ ಉಪಾಧಿಯು ಉದಾಹರಣೆಯಾಗಿದೆ. ಈ ಅನುಮಾನದಲ್ಲಿ ವಾಯುವು ಪಕ್ಷವಾಗಿದೆ. ಅದರಲ್ಲಿ ಬಹಿರ್ದ್ರವ್ಯತ್ವ ಎಂಬ ಧರ್ಮವಿದೆ. ಬಹಿರ್ದ್ರವ್ಯತ್ವ ಎಂಬ ಧರ್ಮದಿಂದ ಸಹಿತವಾಗಿರುವ ಸಾಧ್ಯಕ್ಕೆ (ಪ್ರತ್ಯಕ್ಷವಿಷಯತ್ವಕ್ಕೆ) ಉದ್ಭೂತರೂಪವತ್ವವು ವ್ಯಾಪಕವಾಗಿದೆ. ಯಾವುದು ಬಾಹ್ಯದ್ರವ್ಯವಾಗಿದ್ದು ಪ್ರತ್ಯಕ್ಷಗೋಚರವಾಗಿದೆಯೋ ಅದೆಲ್ಲವೂ ಉದ್ಭೂತರೂಪವುಳ್ಳದ್ದೇ ಆಗಿರುತ್ತದೆ. ಹೀಗೆ ಉಪಾಧಿಯು ಪಕ್ಷಧರ್ಮದಿಂದ ಕೂಡಿರುವ ಸಾಧ್ಯವ್ಯಾಪಕತ್ವಕ್ಕೆ ಉದಾಹರಣೆಯಾಗುತ್ತದೆ.

## ಸಾಧನಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವದ ಬಗ್ಗೆ ವಿವರಣೆ

ಪರಿಮಳ– ದ್ವಿತೀಯಂ ತು 'ಧ್ವಂಸೋ ವಿನಾಶೀ ಜನ್ಯತ್ವಾತ್' ಇತ್ಯತ್ರ ಭಾವತ್ವೋಪಾಧೇರ್ಜನ್ಯತ್ವಾವಚ್ಛಿನ್ನಸಾಧ್ಯವ್ಯಾಪಕತ್ವಮ್ । ಪ್ರಕೃತೇಽಸ್ಯೋಪಾಧೇಃ ಶುದ್ಧಸಾಧ್ಯಾವ್ಯಾಪಕತ್ವೇಽಪಿ ವಾಕ್ಯತ್ವರೂಪೇಣ ವಾ ಪೌರುಷೇಯವಾಕ್ಯತ್ವರೂಪೇಣ ವಾ ಪಕ್ಷಧರ್ಮೇಣಾನುಕೂಲವಕ್ತ್ರಾದಿಮತ್ತ್ವರೂಪಸಾಧನೇನ ವಾ ಅವಚ್ಛಿನ್ನಸಾಧ್ಯವ್ಯಾಪಕತ್ವೋಪಪತ್ತೇಃ।

ಸಾಧನದಲ್ಲಿರುವ ಧರ್ಮದಿಂದ ಕೂಡಿರುವ ಸಾಧ್ಯವ್ಯಾಪಕವಾದ ಉಪಾಧಿಗೆ ಉದಾಹರಣೆ ಹೀಗಿದೆ – 'ಧ್ವಂಸಃ ವಿನಾಶೀ ಜನ್ಯತ್ವಾತ್' 'ಧ್ವಂಸವು ಜನ್ಯವಾದ್ದರಿಂದ ನಾಶವುಳ್ಳದ್ದಾಗಿದೆ' ಈ ಅನುಮಾನದಲ್ಲಿ ಭಾವತ್ವವು ಉಪಾಧಿಯಾಗುತ್ತದೆ. ಯಾವುದು ವಿನಾಶವುಳ್ಳದ್ದೋ ಅದರಲ್ಲಿ ಭಾವತ್ವವಿದೆ ಎಂಬ ವ್ಯಾಪ್ತಿಯು ಇರುವುದಿಲ್ಲ. ಏಕೆಂದರೆ ಪ್ರಾಗಭಾವಕ್ಕೆ

ನಾಶವಿದೆ. ಅದರಲ್ಲಿ ಭಾವತ್ವವು ಇರುವುದಿಲ್ಲ. ಆದ್ದರಿಂದ ಶುದ್ಧಸಾಧ್ಯದ ವ್ಯಾಪಕತ್ವವನ್ನು ಉಪಾಧಿಗೆ ಹೇಳಲು ಸಾಧ್ಯವಿಲ್ಲ. ಆದರೆ ಸಾಧನಧರ್ಮವೆನಿಸಿದ ಜನ್ಯತ್ವದಿಂದ ಕೂಡಿರುವ ವಿನಾಶವು ಎಲ್ಲಿದೆಯೋ ಅಲ್ಲಿ ಭಾವತ್ವವು ಇದ್ದೇ ಇರುತ್ತದೆ. ಅರ್ಥಾತ್ ಜನ್ಯವಾದ ಮತ್ತು ವಿನಾಶವನ್ನು ಹೊಂದಿರುವ ವಸ್ತುಗಳು ಭಾವವೇ ಆಗಿರುತ್ತವೆ. ಹಾಗಾಗಿ ಜನ್ಯತ್ವವೆಂಬ ಸಾಧನ-ಧರ್ಮದಿಂದ ಕೂಡಿರುವ ಸಾಧ್ಯವ್ಯಾಪಕತ್ವವು ಭಾವತ್ವಕ್ಕೆ ಇದ್ದೇ ಇರುತ್ತದೆ. ಹೀಗೆ ಸಾಧನ-ಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವಕ್ಕೆ ಭಾವತ್ವವು ಉದಾಹರಣೆಯಾಗಿದೆ.

ಪ್ರಕೃತದಲ್ಲಿ 'ಶಾಸ್ತ್ರವು ಪ್ರಮಾಣವಾಗಿದೆ; ಏಕೆಂದರೆ ವಕ್ತ್ರಾದ್ಯಾನುಕೂಲ್ಯಗಳಿರುವುದರಿಂದ ಮಹಾಭಾರತದಂತೆ' ಎಂಬ ಅನುಮಾನದಲ್ಲಿ ಕೇವಲ ಪ್ರಾಮಾಣ್ಯವೆಂಬ ಶುದ್ಧಸಾಧ್ಯವು ಇರುವ ಕಡೆಯೆಲ್ಲಾ ಆಪ್ತವಾಕ್ಯತ್ವವು ಇರುವುದಿಲ್ಲ. ಏಕೆಂದರೆ, ಚಕ್ಷುರಿಂದ್ರಿಯದಲ್ಲಿ ಪ್ರಾಮಾಣ್ಯವಿದೆ. ಮತ್ತು ವೇದಗಳಲ್ಲೂ ಕೂಡ ಪ್ರಾಮಾಣ್ಯವಿದೆ. ಆದರೆ ಈ ಚಕ್ಷುರಿಂದ್ರಿಯದಲ್ಲಿ ಮತ್ತು ವೇದದಲ್ಲಿ ಆಪ್ತವಾಕ್ಯತ್ವವು ಇರುವುದಿಲ್ಲ. ಆದರೂ ಕೂಡ ವಾಕ್ಯತ್ವ, ಪೌರುಷೇಯವಾಕ್ಯತ್ವ ಮೊದಲಾದ ಪಕ್ಷದ ಧರ್ಮಗಳಿಂದ ಸಹಿತವಾದ ಪ್ರಾಮಾಣ್ಯವೆಂಬ ಸಾಧ್ಯವಿರುವ ಕಡೆ ಆಪ್ತವಾಕ್ಯತ್ವವು ಇದ್ದೇ ಇರುತ್ತದೆ. ಅದರಂತೆ ವಕ್ತ್ರಾದ್ಯಾನುಕೂಲ್ಯಗಳುಳ್ಳ ವಾಕ್ಯಪ್ರಾಮಾಣ್ಯ-ವಿದ್ದಲ್ಲಿ ಆಪ್ತವಾಕ್ಯತ್ವವು ಇದ್ದೇ ಇರುತ್ತದೆ. ಹೀಗೆ ಪಕ್ಷಧರ್ಮ ಅಥವಾ ಸಾಧನಧರ್ಮದಿಂದ ಸಹಿತವಾದ ಪ್ರಾಮಾಣ್ಯವೆಂಬ ಸಾಧ್ಯದ ವ್ಯಾಪಕವಾಗಿರುವುದರಿಂದ ಆಪ್ತವಾಕ್ಯತ್ವವು ಉಪಾಧಿ-ಯಾಯಿತು.

ವಿವರಣೆ– 'ಧ್ವಂಸಃ ವಿನಾಶೀ ಜನ್ಯತ್ವಾತ್' ಎಂಬ ಅನುಮಾನದಲ್ಲಿ ಭಾವತ್ವವು ಉಪಾಧಿಯಾಗಿದೆ. 'ಯತ್ರ ಭಾವತ್ವಂ ತತ್ರ ವಿನಾಶಿತ್ವಂ' ಎಂಬುದಾಗಿ ವ್ಯಾಪ್ತಿಯನ್ನು ಹೇಳಿದರೆ ಪ್ರಾಗಭಾವದಲ್ಲಿ ವ್ಯಭಿಚಾರ ಬರುತ್ತದೆ. ಪ್ರಾಗಭಾವದಲ್ಲಿ ವಿನಾಶಿತ್ವ ಇದೆ; ಆದರೆ ಭಾವತ್ವವು ಇರುವುದಿಲ್ಲ. ಆದಕ್ಕಾಗಿ ಸಾಧನಧರ್ಮ ಎನಿಸಿದ ಜನ್ಯತ್ವವನ್ನು ಅವಚ್ಛೇದಕವಾಗಿ ಹೇಳಬೇಕು. 'ಯತ್ರ ಜನ್ಯತ್ವೇ ಸತಿ ವಿನಾಶಿತ್ವಂ ತತ್ರ ಭಾವತ್ವಂ' ಎಂದು ಹೇಳಿದಾಗ ಪ್ರಾಗಭಾವದಲ್ಲಿ ಜನ್ಯತ್ವಾವಚ್ಛಿನ್ನವಾದ ವಿನಾಶಿತ್ವವು ಇಲ್ಲದ ಕಾರಣ ವ್ಯಭಿಚಾರವು ಬರುವುದಿಲ್ಲ. ಪ್ರಕೃತ ಪ್ರತ್ಯಕ್ಷದಲ್ಲಿ ಆಪ್ತವಾಕ್ಯತ್ವವು ಇಲ್ಲದ ಕಾರಣ ಶುದ್ಧಸಾಧ್ಯವ್ಯಾಪಕ-ತ್ವವು ಬರುವುದಿಲ್ಲ. ಆದರೆ ವಾಕ್ಯತ್ವರೂಪದಿಂದ ಪೌರುಷೇಯವಾಕ್ಯತ್ವ ರೂಪದಿಂದ ಅಥವಾ ಅನು-ಕೂಲವಕ್ತ್ರಾದಿಮತ್ತ್ವಾವಚ್ಛಿನ್ನವಾದ ಪ್ರಾಮಾಣ್ಯವು ಎಲ್ಲಿದೆಯೋ ಅಲ್ಲಿ ಆಪ್ತವಾಕ್ಯತ್ವವು ಇದೆ ಎಂದು ಹೇಳಿದಾಗ ಎಲ್ಲಿಯೂ ಕೂಡ ವ್ಯಭಿಚಾರದೋಷವು ಬರುವುದಿಲ್ಲ ಎಂದಭಿಪ್ರಾಯ.

## ಹೇಗೆ ಸತ್ಪ್ರತಿಪಕ್ಷವಾಗುತ್ತದೆ?

ಪರಿಮಳ– ನ ಚ ಸ ಏವ ಸತ್ಪ್ರತಿಸಾಧನ ಇತಿ ಪ್ರಮಾಣಲಕ್ಷಣೋಕ್ತ್ಯೋಪಾಧ್ಯ-ಭಾವೇನಾನುಮೀಯಮಾನೋऽಪಿ ವಿಶಿಷ್ಟಸ್ಯಾಭಾವ ಏವ ಸಿದ್ಧ್ಯೇತ್ ನ ತು ಅಭಿಮತ-ಶುದ್ಧಸಾಧ್ಯಸ್ಯಾಭಾವ ಇತಿ ನ ಪ್ರಾಚೀನಹೇತೋಃ ಸತ್ಪ್ರತಿಪಕ್ಷತ್ವಮಿತಿ ವಾಚ್ಯಮ್ । ವಿಶೇಷಣವತಿ ವಿಶಿಷ್ಟಾಭಾವಸಿದ್ಧೇರ್ವಿಶೇಷ್ಯಾಭಾವೇನೈವ ಪರ್ಯವಸಾನಾದಿತಿ ಭಾವಃ ॥ ಉದ್ಯತಾ ಇತಿ ॥ ಉದ್ಯುಕ್ತವಂತ ಇತ್ಯರ್ಥಃ ।

'ಸ ಏವ ಸತ್ಪ್ರತಿಸಾಧನಃ' ಎಂಬ ಪ್ರಮಾಣಲಕ್ಷಣದ ಮಾತಿನಂತೆ ಉಪಾಧ್ಯಭಾವವು ಸಾಧ್ಯಾಭಾವವನ್ನು ತಿಳಿಸುತ್ತದೆ. ಆದ್ದರಿಂದ ಆಪ್ತವಾಕ್ಯತ್ವವಿಲ್ಲದಿರುವುದೆಂಬ ಉಪಾಧ್ಯಭಾವವು ಪೌರುಷೇಯವಾಕ್ಯತ್ವದಿಂದ ಸಹಿತವಾದ ಅಥವಾ ವಕ್ತ್ರಾದ್ಯಾನುಕೂಲ್ಯಗಳುಳ್ಳ ವಾಕ್ಯತ್ವದಿಂದ ಸಹಕೃತವಾದ ಪ್ರಾಮಾಣ್ಯದ ಅಭಾವವನ್ನಷ್ಟೇ ತಿಳಿಸಿಕೊಡುತ್ತದೆ. ಆದ್ದರಿಂದ ಕೇವಲ ಪ್ರಾಮಾ-ಣ್ಯದ ಅಭಾವವು ಇದರಿಂದ ಸಿದ್ಧವಾಗುವುದಿಲ್ಲ. ಈ ಕಾರಣದಿಂದ ಆಪ್ತವಾಕ್ಯತ್ವಾಭಾವವೆಂಬ ಹೇತುವಿನಿಂದ ಪ್ರಾಮಾಣ್ಯದ ಅಭಾವವನ್ನು ಸಾಧಿಸಲು ಸತ್ಪ್ರತಿಪಕ್ಷವನ್ನು ತೋರಿಸಲಾಗದು.

ಈ ಆಕ್ಷೇಪವು ತಪ್ಪು. ಏಕೆಂದರೆ, ವಿಶೇಷಣವುಳ್ಳ ವಸ್ತುವಿನಲ್ಲಿ ವಿಶಿಷ್ಟಾಭಾವವಿರುತ್ತದೆ ಎಂಬುದು ವಿಶೇಷಣಾಭಾವವನ್ನು ಹೇಳುವುದರಲ್ಲಿ ಪರ್ಯವಸಾನವನ್ನು ಹೊಂದುವುದಿಲ್ಲ. ವಿಶೇಷಣವು ಅಲ್ಲಿ ಪ್ರಮಿತವಾಗಿರುವುದರಿಂದ ಅದನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಹಾಗಾಗಿ ವಿಶೇಷ್ಯದ ಅಭಾವವನ್ನೇ ಹೇಳುವ ಮೂಲಕ ಪರ್ಯವಸಾನ ಹೊಂದುತ್ತದೆ. ಪೌರುಷೇಯವಾಕ್ಯತ್ವ, ವಕ್ತ್ರಾದ್ಯಾನುಕೂಲ್ಯ ಮೊದಲಾದ ವಿಶೇಷಣಗಳು ಪ್ರಮಿತವಾಗುವು-ದರಿಂದ ಅವುಗಳ ನಿಷೇಧವು ಇಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ವಿಶೇಷ್ಯವೆನಿಸಿದ ಪ್ರಾಮಾಣ್ಯದ ಅಭಾವವನ್ನೇ ಆಪ್ತವಾಕ್ಯತ್ವಾಭಾವವು ತಿಳಿಸುತ್ತದೆಂದು ಅಭಿಪ್ರಾಯ.

'ಉದ್ಯತಾಃ' ಎಂಬ ಪದಕ್ಕೆ ಉದ್ಯುಕ್ತರಾದವರು ಎಂದರ್ಥ.

ವಿವರಣೆ– ಉಪಾಧಿಯು ಶುದ್ಧಸಾಧ್ಯಕ್ಕೆ ವ್ಯಾಪಕವಾಗಿರುವುದಿಲ್ಲ. ವಿಶಿಷ್ಟಸಾಧ್ಯಕ್ಕೆ ವ್ಯಾಪಕವಾಗಿದೆ. ಇಂಥ ಉಪಾಧ್ಯಭಾವದಿಂದ ಪ್ರತಿಪಕ್ಷಾನುಮಾನವನ್ನು ಮಾಡುವಾಗ ವಿಶಿಷ್ಟಸಾಧ್ಯಾಭಾವವೇ ಸಿದ್ಧ-

ವಾಗುತ್ತದೆ. ಶುದ್ಧವಾದ ಸಾಧ್ಯಾಭಾವವು ಸಿದ್ಧವಾಗುವುದಿಲ್ಲ. ಆಗ ಸಾಧನಾನುಮಾನವು ಶುದ್ಧಸಾಧ್ಯಾಭಾವವನ್ನು ಸಾಧನೆ ಮಾಡುತ್ತಿದೆ. ಪ್ರತಿಪಕ್ಷಾನುಮಾನವು ವಿಶಿಷ್ಟಸಾಧ್ಯಾಭಾವವನ್ನು ಸಾಧನೆ ಮಾಡುತ್ತಿದೆ. ಆದ್ದರಿಂದ ಇದಕ್ಕೆ ಪ್ರತಿಪಕ್ಷತ್ವವನ್ನು ಹೇಳಲು ಸಾಧ್ಯವೇ ಆಗುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಏಕೆಂದರೆ, ವಿಶೇಷಣರೂಪವಾದ ಪಕ್ಷದಲ್ಲಿ ವಿಶಿಷ್ಟಾಭಾವವನ್ನು ಸಾಧನೆ ಮಾಡಿದರೆ ಶುದ್ಧಸಾಧ್ಯಾಭಾವದಲ್ಲಿಯೇ ಪರ್ಯವಸಾನವಾಗುತ್ತದೆ. ಉದಾಹರಣೆ – ವಾಯು ಬಹಿರ್ದ್ರವ್ಯತ್ವವಿಶಿಷ್ಟವಾದ ಪ್ರತ್ಯಕ್ಷಕ್ಕೆ ವಿಷಯವಾಗಿಲ್ಲ ಎಂದು ಹೇಳಿದಾಗ ಬಹಿರ್ದ್ರವ್ಯತ್ವವು ವಾಯುವಿನಲ್ಲಿ ಸಿದ್ಧವೇ ಆಗಿದೆ. ಆದ್ದರಿಂದ ಶುದ್ಧವಿಶೇಷ್ಯಾಭಾವದಲ್ಲೇ ಪರ್ಯವಸಾನವಾಗುತ್ತದೆ. (ಪ್ರತ್ಯಕ್ಷತ್ವರೂಪವಾದ ವಿಶೇಷ್ಯಾಭಾವದಿಂದಲೇ ಪರ್ಯವಸಾನ ಮಾಡಬೇಕು). ನೇರವಾಗಿ ಪ್ರತಿಪಕ್ಷಾನುಮಾನ ಎಂದು ಕರೆಸಿಕೊಳ್ಳದಿದ್ದರೂ ಪರ್ಯವಸಾನದಲ್ಲಿ ಪ್ರತಿಪಕ್ಷವಾಗುತ್ತದೆ.

## ವಕ್ತೃಶ್ರೋತೃಪ್ರಸಕ್ತೀನಾಂ ಇತ್ಯಾದಿ ಶ್ಲೋಕಕ್ಕೆ ಅಸಂಗತಿ ಹಾಗೂ ವೈಯರ್ಥ್ಯಪರಿಹಾರ

ವಾಕ್ಯಾರ್ಥಚಂದ್ರಿಕಾ– ನನ್ವೇವಂ ಮಾನತ್ವಸ್ಯ 'ಗುರೂಣಾಂ ಗುರುತ್ವಾತ್' ಇತ್ಯಾದಿ ಹೇತೂನ್ ಪ್ರತಿ ಪರಮಸಾಧ್ಯತ್ವೇಽಪಿ, ವಕ್ತ್ರಾದ್ಯಾನುಕೂಲ್ಯಂ ಪ್ರತಿ ತಸ್ಯ ಸಾಕ್ಷಾತ್ ಸಾಧ್ಯತ್ವಾತ್ ವಕ್ತ್ರಾದ್ಯಾನುಕೂಲ್ಯಸ್ಯ ಆಪ್ತವಾಕ್ಯತ್ವೇನ ವ್ಯಾಪ್ತ್ಯಾದ್ಯುಪಪಾದನಪುರಃಸರಮ್ ಆಪ್ತವಾಕ್ಯತ್ವಸ್ಯ ಮಾನತ್ವಸಂಬಂಧವ್ಯುತ್ಪಾದಕಮುತ್ತರವಾಕ್ಯಮಸಂಗತಮೇವ । ನ ಚ ಅತ್ರಾಪಿ ಸಾ ಪರಂಪರಾಽಭಿಪ್ರೇತಾ ಇತಿ ವಾಚ್ಯಮ್ । ತಥಾತ್ವೇ ಉತ್ತರಶ್ಲೋಕವೈಯರ್ಥ್ಯಾಪತ್ತೇಃ ಇತ್ಯತೋಽತ್ರ ಶ್ಲೋಕೇ ಆಪ್ತವಾಕ್ಯತ್ವಬೋಧಕಶಬ್ದಾಭಾವೇನ ಪರಂಪರಾಯಾಃ ಸ್ಪಷ್ಟಮಪ್ರತೀತೇರ್ಯಥಾಶ್ರುತಸ್ಯ ವಕ್ತ್ರಾದ್ಯಾನುಕೂಲ್ಯಮಾನತ್ವಯೋಃ ಸಾಕ್ಷಾತ್ ಸಾಧ್ಯಸಾಧನಭಾವಾಭಿಪ್ರಾಯಕತ್ವಂ ಪ್ರಕಲ್ಪ್ಯ, ಪರೋಕ್ತದೂಷಣಸ್ಯ ಪರಿಹಾರಾಯ ಸ್ವಾಭಿಪ್ರಾಯಾವಿಷ್ಕರಣಾರ್ಥತ್ವಾತ್ ಉತ್ತರಶ್ಲೋಕಸ್ಯ ನಾಸಂಗತಿವೈಯರ್ಥ್ಯೇ ಇತ್ಯಭಿಪ್ರೇತ್ಯ ಉತ್ತರವಾಕ್ಯಂ ಸಂಗಮಯತಿ – ನನ್ವಿತಿ ॥

ಆಕ್ಷೇಪ– 'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕದಲ್ಲಿ ಹೇಳಲ್ಪಟ್ಟ 'ಗುರೂಣಾಂ ಗುರುತ್ವಾತ್' ಮೊದಲಾದ ಹೇತುಗಳಿಗೆ ಪ್ರಾಮಾಣ್ಯವು ಪರಮಸಾಧ್ಯವಾಗಿದೆ. ಸಾಕ್ಷಾತ್ ಸಾಧ್ಯ ಆಗಿರುವುದಿಲ್ಲ. ಆದರೆ ವಕ್ತ್ರಾದ್ಯಾನುಕೂಲ್ಯಗಳಿಗೆ ಪ್ರಾಮಾಣ್ಯವು ಸಾಕ್ಷಾತ್ ಸಾಧ್ಯವಾಗಿದೆ. ಹೀಗಿರುವಾಗ ಶ್ರೀಮದಾಚಾರ್ಯರು ವಕ್ತ್ರಾದ್ಯಾನುಕೂಲ್ಯಕ್ಕೆ ಆಪ್ತವಾಕ್ಯತ್ವದಿಂದ ವ್ಯಾಪ್ತ್ಯಾದಿಗಳನ್ನು ಉಪಪಾದನೆ ಮಾಡಿದ್ದಾರೆ. ತನ್ಮೂಲಕವಾಗಿ

ಆಪ್ತವಾಕ್ಯತ್ವಕ್ಕೆ ಪ್ರಾಮಾಣ್ಯದ ಜೊತೆ ವ್ಯಾಪ್ತಿಯನ್ನು ಉಪಪಾದನೆ ಮಾಡಿದ್ದಾರೆ. ಹಾಗೆ ಉಪಪಾದನೆ ಮಾಡುವುದಕ್ಕಾಗಿಯೇ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಶ್ಲೋಕವು ಹೊರಟಿದೆ. ಇದು ಅಸಂಗತ-ವಲ್ಲವೇ? ವಕ್ತ್ರಾದ್ಯಾನುಕೂಲ್ಯಗಳಿಂದ ನೇರವಾಗಿಯೇ ಪ್ರಾಮಾಣ್ಯವು ತಿಳಿಯುತ್ತಿರುವಾಗ ಮಧ್ಯದಲ್ಲಿ ಆಪ್ತವಾಕ್ಯತ್ವದ ಜೊತೆ ವ್ಯಾಪ್ತ್ಯಾದಿಗಳನ್ನು ಉಪಪಾದನೆ ಮಾಡಿದ್ದು ಏಕೆ?

'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಗುರುಗುರುತ್ವಾದಿಗಳಿಂದ ವಕ್ತ್ರಾದ್ಯಾನುಕೂಲ್ಯಗಳು ಅವುಗಳಿಂದ ಆಪ್ತವಾಕ್ಯತ್ವವು ಅದರಿಂದ ಪ್ರಾಮಾಣ್ಯವು ಅಭಿಪ್ರೇತವಾಗಿದೆ ಎಂದು ಹೇಳಬಾರದು. ಹಾಗಾದಲ್ಲಿ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಉತ್ತರಶ್ಲೋಕವು ವ್ಯರ್ಥವಾಗುತ್ತದೆ. ಆದ್ದರಿಂದ ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ ಆಪ್ತವಾಕ್ಯತ್ವವನ್ನು ತಿಳಿಸುವ ಶಬ್ದವು ಇರುವುದಿಲ್ಲ. ಹಾಗಾಗಿ ಪ್ರಾಮಾಣ್ಯಕ್ಕೆ ಪರಂಪರೆಯಿಂದ ಗುರುಗುರೂದಿತತ್ವಾದಿಗಳು ಹೇತುಗಳಾಗಿವೆ ಎಂದು ಸ್ಪಷ್ಟವಾಗಿ ಭಾಸವಾಗುವುದಿಲ್ಲ. ಯಥಾಶ್ರುತವಾಗಿ ವಕ್ತ್ರಾದ್ಯಾನುಕೂಲ್ಯಗಳಿಗೂ ಪ್ರಾಮಾಣ್ಯಕ್ಕೂ ಸಾಕ್ಷಾತ್ತಾದ ಸಾಧ್ಯಸಾಧನಭಾವಸಂಬಂಧವು ತಿಳಿಯುತ್ತದೆ. ಹೀಗೆ ತಿಳಿದಾಗ ಪೂರ್ವಪಕ್ಷಕಾರರು ಉಪಾಧಿ ದೋಷವನ್ನು ಆಶಂಕಿಸುತ್ತಾರೆ. ಅದರ ಪರಿಹಾರಕ್ಕಾಗಿ ತಮ್ಮ ಅಭಿಪ್ರಾಯದ ಆವಿಷ್ಕರಣೆಗಾಗಿ 'ವಕ್ತೃ-ಶ್ರೋತೃಪ್ರಸಕ್ತೀನಾಂ' ಎಂಬ ಮುಂದಿನ ಶ್ಲೋಕವು ಹೊರಟಿದೆ. ಆದ್ದರಿಂದ ಅಸಂಗತಿಯಾಗಲೀ ವೈಯರ್ಥ್ಯವಾಗಲೀ ಇರುವುದಿಲ್ಲ.

ಹೀಗೆ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಉತ್ತರಶ್ಲೋಕಕ್ಕೆ 'ಗುರುರ್ಗುರೂಣಾಂ' ಇತ್ಯಾದಿ ಹಿಂದಿನ ಶ್ಲೋಕದಿಂದ ಸಂಗತಿಯನ್ನು ತಿಳಿಸಲು "ನನು" ಇತ್ಯಾದಿ ವಾಕ್ಯವು ಹೊರಟಿದೆ.

## ಗುರುರ್ಗುರೂಣಾಂ ಎಂಬ ಶ್ಲೋಕದ ಹಾರ್ದವನ್ನು ತಿಳಿಸುವುದಕ್ಕಾಗಿ ಮುಂದಿನ ಗ್ರಂಥ

ವಾಕ್ಯಾರ್ಥಚಂದ್ರಿಕಾ— ಯದ್ವಾ ಪೂರ್ವವಾಕ್ಯಾಭಿಪ್ರಾಯದರ್ಶಕಂ 'ವಕ್ತೃಶ್ರೋತೃ-ಪ್ರಸಕ್ತೀನಾಮ್' ಇತ್ಯುತ್ತರವಾಕ್ಯಂ ವ್ಯರ್ಥಮ್ । ಅಭಿಪ್ರಾಯಾಂತರಾಪ್ರತೀತ್ಯಾಽಸ್ಯೈವ ಸುಜ್ಞಾನ-ತ್ವಾತ್ ಪ್ರತೀತೌ ವಾ ತಸ್ಯಾಪ್ಯುಪಪತ್ತೌ ತತ್ಪರಿತ್ಯಾಗೇನಾಭಿಪ್ರಾಯಾಂತರಪ್ರದರ್ಶಕೋತ್ತರ-ವೈಯರ್ಥ್ಯಮೇವ ಇತ್ಯತೋಽಭಿಪ್ರಾಯಾಂತರಪ್ರತೀತಿತದನುಪಪತ್ತಿಪ್ರದರ್ಶನಪೂರ್ವಂ ಸ್ವಾಭಿ-ಪ್ರಾಯಸ್ವರೂಪಂ ದರ್ಶಯನ್ನೇವ, ತದಾಶಯಪ್ರದರ್ಶಕತಯೋತ್ತರವಾಕ್ಯಮವತಾರಯತಿ – ನನು

ತರ್ಹಿ ಇತಿ ॥ ವಾಕ್ಯತ್ವಾವಚ್ಛಿನ್ನೇತ್ಯಾದಿ ॥ ಯಥಾ ಚ ಪಕ್ಷಧರ್ಮಸಾಧನಧರ್ಮಾವಚ್ಛಿನ್ನಯೋ-ರುಪಾಧಿತ್ವಂ ತಥೋಪಾಧಿಪರೀಕ್ಷಾಯಾಂ ವಕ್ಷ್ಯತಿ ॥

ಅಥವಾ ನನು ತರ್ಹಿ ಎಂಬ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿ ಪೀಠಿಕೆಯನ್ನು ತಿಳಿಯಬೇಕು. 'ಗುರುರ್ಗುರೂಣಾಂ' ಎಂಬ ಪೂರ್ವವಾಕ್ಯದ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃ-ಪ್ರಸಕ್ತೀನಾಂ' ಎಂಬ ಉತ್ತರವಾಕ್ಯವು ಹೊರಟಿದೆ. ಆದರೆ ಇದು ವ್ಯರ್ಥ. ಏಕೆಂದರೆ, ಗುರು-ರ್ಗುರೂಣಾಂ ಎಂಬ ಶ್ಲೋಕವನ್ನು ನೋಡಿದಾಗ ಬೇರೆ ಅಭಿಪ್ರಾಯವು ಪ್ರತೀತವೇ ಆಗುವುದಿಲ್ಲ. ಇದೇ ಅರ್ಥವೇ ಪ್ರತೀತವಾಗುತ್ತದೆ. ಹಾಗೇನಾದರೂ ಬೇರೆ ಅಭಿಪ್ರಾಯವು ಪ್ರತೀತವಾದರೆ ಅದನ್ನೇ ವಿವಕ್ಷಿಸಬಹುದು. ಅದನ್ನು ಬಿಟ್ಟು ಬೇರೆ ಅಭಿಪ್ರಾಯವನ್ನು ತಿಳಿಸಲು ಮುಂದಿನ ಶ್ಲೋಕವು ವ್ಯರ್ಥ-ವಾಗುತ್ತದಲ್ಲವೇ? ಎಂದು ಪ್ರಶ್ನಿಸಿದರೆ, ಅಭಿಪ್ರಾಯಾಂತರಪ್ರತೀತಿ ಹಾಗೂ ಅದರಲ್ಲಿರುವ ಅನುಪಪತ್ತಿ ಇವುಗಳನ್ನು ತೋರಿಸುವ ಮೂಲಕ ಸ್ವಾಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ 'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕದ ನಿಜವಾದ ಅಭಿಪ್ರಾಯವನ್ನು ಸಾಧಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಮುಂದಿನ ಶ್ಲೋಕವು ಹೊರಟಿದೆ. ಹೀಗೆ ಅವತಾರಿಕೆ ನೀಡಲು 'ನನು ತರ್ಹಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

'ವಾಕ್ಯತ್ವಾವಚ್ಛಿನ್ನ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. ಪಕ್ಷಧರ್ಮಾವಚ್ಛಿನ್ನವಾದ ಸಾಧ್ಯವ್ಯಾಪಕತ್ವ, ಸಾಧನಧರ್ಮಾವಚ್ಛಿನ್ನಸಾಧನವ್ಯಾಪಕತ್ವ ಮೊದಲಾದವುಗಳು ಉಪಾಧಿಯಲ್ಲಿ ಹೇಗೆ ಬರುತ್ತದೆ? ಇತ್ಯಾದಿ ವಿಚಾರವನ್ನು ಉಪಾಧಿಯ ಬಗ್ಗೆ ವಿಶ್ಲೇಷಿಸುವ ನವಿಲಕ್ಷಣತ್ವಾದ್ಯಧಿಕರಣಗಳಲ್ಲಿ ಮುಂದೆ ಹೇಳುವವರಿದ್ದಾರೆ.

## ಸುಧಾಪರಿಮಳಸಾರ

"ಗುರುರ್ಗುರೂಣಾಂ....." ಎಂಬ ಶ್ಲೋಕದಲ್ಲಿ ಅನೇಕಹೇತುಗಳಿಂದ ಬ್ರಹ್ಮಸೂತ್ರಗಳಲ್ಲಿ ವಕ್ತೃಶ್ರೋತೃ ಪ್ರಸಂಗಾನುಕೂಲ್ಯವನ್ನು ಸಾಧಿಸಿದ್ದಾಯಿತು. ವಕ್ತ್ರಾದ್ಯಾನುಕೂಲ್ಯವುಳ್ಳದ್ದರಿಂದ ಭಾರತದಂತೆ ಬ್ರಹ್ಮಮೀಮಾಂಸಾ-ಶಾಸ್ತ್ರವು ಪ್ರಮಾಣವಾಗಿದೆ ಎಂದು ಮೇಲಿನ ಅನುವ್ಯಾಖ್ಯಾನದ ಶ್ಲೋಕದಲ್ಲಿ ಪ್ರತಿಪಾದಿಸಲಾಗಿದೆ. ಆದರೆ ಈ ಪ್ರತಿಪಾದನೆ ಸರಿ ಎನಿಸುವುದಿಲ್ಲ. ಏಕೆಂದರೆ ಈ ಅನುಮಾನಕ್ಕೆ ಆಪ್ತವಾಕ್ಯತ್ವವೆಂಬ ಉಪಾಧಿ ಇದೆ. ಪ್ರಕೃತ ಸಾಧ್ಯವನ್ನು ಸಾಧಿಸಲು ಹೇಳಿರುವ ಹೇತುವಿನ ಬದಲು ಪ್ರಕೃತ ಸಾಧ್ಯದ ಸಹಜವಾದ ವ್ಯಾಪ್ತಿ ಉಳ್ಳ ಮತ್ತೊಂದು ಹೇತುವಿದ್ದರೆ ಅದು ಉಪಾಧಿ ಎನಿಸುತ್ತದೆ. ಈ ಉಪಾಧಿಗೆ ಪ್ರಕೃತಹೇತುವಿನ ವ್ಯಾಪ್ತಿ ಇರುವುದಿಲ್ಲ. ಈ ಉಪಾಧಿ

ಮೂರು ವಿಧವಾಗಿದೆ. 1. ಕೇವಲ ಸಾಧ್ಯದಿಂದ ಯಾವುದಕ್ಕೆ ವ್ಯಾಪ್ತಿ ಇದೆಯೋ ಅದು. 2. ಹೇತುವಿಶಿಷ್ಟಸಾಧ್ಯದಿಂದ ಯಾವುದಕ್ಕೆ ವ್ಯಾಪ್ತಿ ಇದೆಯೋ ಅದು. 3. ಪಕ್ಷದಲ್ಲಿರುವ ಧರ್ಮದಿಂದ ಕೂಡಿದ ಸಾಧ್ಯಕ್ಕೆ ಯಾವುದರಿಂದ ವ್ಯಾಪ್ತಿ ಇದೆಯೋ ಅದು ಉಪಾಧಿ ಎನಿಸಿಕೊಳ್ಳುತ್ತದೆ. ಸಾಂಪ್ರತ ವಕ್ತ್ರಾದ್ಯಾನುಕೂಲ್ಯ ಎಂಬ ಹೇತುವಿನಿಂದ ಭಾರತದಂತೆ ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವನ್ನು ಸಾಧಿಸಲಾಗಿದೆ. ಆದರೆ ಅದರ ಬದಲು ಆಪ್ತವಾಕ್ಯತ್ವದಿಂದ ಪ್ರಮಾಣ ಎಂದು ಹೇಳುವುದೇ ಸರಿ. ಹೀಗೆ ಇಲ್ಲಿ ಆಪ್ತವಾಕ್ಯತ್ವವು ಉಪಾಧಿ ಎನಿಸುತ್ತದೆ. ಭಾರತಾದಿಗಳಲ್ಲಿ ಪ್ರಾಮಾಣ್ಯವಿದೆ. ಅದು ಆಪ್ತವಾಕ್ಯವು ಆಗಿದೆ. ಆದುದರಿಂದ ಪ್ರಾಮಾಣ್ಯ ಎಂಬ ಸಾಧ್ಯದ ವ್ಯಾಪ್ತಿ ಆಪ್ತವಾಕ್ಯತ್ವಕ್ಕೆ ಇದೆ. ವಕ್ತ್ರಾದ್ಯಾನು-ಕೂಲ್ಯವೆಂಬ ಹೇತುವಿರುವ ಬ್ರಹ್ಮಸೂತ್ರದಲ್ಲಿ ಆಪ್ತವಾಕ್ಯತ್ವ(ಪೂರ್ವಪಕ್ಷಿಗಳ ಪ್ರಕಾರ)ವಿಲ್ಲ ಎಂದು ಉಪಾಧಿಯು ಸಾಧನ ವ್ಯಾಪಕವಾಗಿಲ್ಲ.

ಇಲ್ಲಿ ಒಂದು ಆಕ್ಷೇಪ—ಪ್ರತ್ಯಕ್ಷವು ಪ್ರಮಾಣವಾಗಿದೆ. ಆದರೆ ಅದು ಆಪ್ತವಾಕ್ಯವಲ್ಲ. ಆದ್ದರಿಂದ ಆಪ್ತವಾಕ್ಯತ್ವ ಉಪಾಧಿಯಲ್ಲ. ಆದುದರಿಂದ ಪ್ರಾಮಾಣ್ಯ ಎಂಬ ಸಾಧ್ಯದ ವ್ಯಾಪ್ತಿಗೆ ಭಂಗ ಬರುವುದಿಲ್ಲ? ಇದಕ್ಕೆ ಉತ್ತರ –

'ಪ್ರಮಾಣವಾದುದೆಲ್ಲ ಆಪ್ತವಾಕ್ಯವೆಂದು' ಇಲ್ಲಿ ವ್ಯಾಪ್ತಿ ವಿವಕ್ಷಿತವಲ್ಲ. ಯಾವುದು ವಾಕ್ಯವಾಗಿದ್ದು ಪ್ರಮಾಣವೋ ಅದು ಆಪ್ತವಾಕ್ಯ ಎಂದು ವ್ಯಾಪ್ತಿ. ಹೀಗೆ ಪಕ್ಷತಾವಚ್ಛೇದಕಧರ್ಮಸಹಿತಸಾಧ್ಯದಿಂದ ವ್ಯಾಪ್ತಿ ಇರುವ ಆಪ್ತವಾಕ್ಯತ್ವ ಇಲ್ಲಿ ಉಪಾಧಿಪ್ರತ್ಯಕ್ಷ ಪ್ರಮಾಣವಾಗಿದ್ದರೂ ವಾಕ್ಯವಾಗಿದ್ದು ಪ್ರಮಾಣವೆನಿಸಿಲ್ಲ. ಆದುದರಿಂದ ಅಲ್ಲಿ ಆಪ್ತವಾಕ್ಯತ್ವ ಇಲ್ಲದಿದ್ದರೆ ಉಪಾಧಿಗೆ ಸಾಧ್ಯವ್ಯಾಪ್ತಿಯ ಭಂಗವೇ ಇಲ್ಲ.

ಸರಿ, ವೇದವು ವಾಕ್ಯವಾಗಿದ್ದು ಪ್ರಮಾಣವಾಗಿದೆ, ಆದರೆ ಅದು ಅಪೌರುಷೇಯವಾಗಿರುವುದರಿಂದ ಅಲ್ಲಿ ಆಪ್ತವಾಕ್ಯತ್ವ ಎಂಬೀ ಉಪಾಧಿ ಇಲ್ಲ. ಆದುದರಿಂದ ಪಕ್ಷತಾವಚ್ಛೇದಕಧರ್ಮ(ವಾಕ್ಯತ್ವ)ಸಹಿತ ಸಾಧ್ಯದ ವ್ಯಾಪ್ತಿಯೂ ಉಪಾಧಿಗೆ ಇಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನ. ವೇದ ಅಪೌರುಷೇಯ ಎಂದು ಒಪ್ಪಿದರೆ ತಾನೇ ವ್ಯಾಪ್ತಿಭಂಗ ಅದನ್ನೇ ಒಪ್ಪುವುದಿಲ್ಲ. ಆದ್ದರಿಂದ ವೇದವು ವಾಕ್ಯರೂಪವಾದ ಪ್ರಮಾಣವಾಗಿದೆ ಮತ್ತು ಪೌರುಷೇಯವಾದ್ದರಿಂದ ಆಪ್ತವಾಕ್ಯವೇ ಆಗಿದೆ ಎಂಬುದಾಗಿ ವ್ಯಾಪ್ತಿ ಇದ್ದೇ ಇದೆ. ವೇದ ಅಪೌರುಷೇಯ ಎಂದೊಪ್ಪಿದರೂ ಪೌರುಷೇಯವಾಕ್ಯತ್ವವನ್ನು ಪಕ್ಷಧರ್ಮವನ್ನಾಗಿ ಸ್ವೀಕಾರಮಾಡುತ್ತೇವೆ. ಆಗ ವ್ಯಾಪ್ತಿ "ಯಾವುದು ಪೌರುಷೇಯವಾಕ್ಯವಾಗಿದ್ದು ಪ್ರಮಾಣವಾಗಿದೆಯೋ, ಅದು ಆಪ್ತವಾಕ್ಯ" ಎಂದು ಆಗುತ್ತದೆ. ವೇದವು ಅಪೌರುಷೇಯವಾದ್ದರಿಂದ ಹಿಂದೆ ಹೇಳಿದ ವ್ಯಾಪ್ತಿಗೆ ವೇದದಲ್ಲಿ ಭಂಗವಾಗುವುದಿಲ್ಲ. ಅಥವಾ "ಯಾವುದು ವಕ್ತ್ರಾನುಕೂಲ್ಯಾದಿಗಳು ಇದ್ದು ಪ್ರಮಾಣವಾಗಿದೆಯೋ ಅದು ಆಪ್ತವಾಕ್ಯವಾಗಿದೆ" ಎಂದು ಹೇತುವಿಶಿಷ್ಟಸಾಧ್ಯದಿಂದ ವ್ಯಾಪ್ತಿ ಇರುವ ಆಪ್ತವಾಕ್ಯತ್ವವನ್ನು ಉಪಾಧಿ ಎಂದು ಹೇಳುತ್ತೇವೆ. ಅಂತೂ ಆಪ್ತವಾಕ್ಯತ್ವ ಎಂಬ ಉಪಾಧಿ ಇರುವುದರಿಂದ ವಕ್ತ್ರಾನುಕೂಲ್ಯ ಎಂಬ ಹೇತುವಿನಿಂದ ಪ್ರಾಮಾಣ್ಯವನ್ನು ಸಾಧಿಸಲು ಬರುವುದಿಲ್ಲ.

ಉಪಾಧಿಯ ಶಂಕೆ ಮಾಡಿದವರಿಗೆ ನಮ್ಮ ಅಭಿಪ್ರಾಯವೇ ತಿಳಿದಿಲ್ಲ. ವಕ್ತ್ರಾದ್ಯನುಕೂಲ್ಯರೂಪ-ಹೇತುವಿನಿಂದ ನೇರವಾಗಿ ಪ್ರಾಮಾಣ್ಯ ಸಾಧಿಸುತ್ತಿದ್ದೇವೆ ಎಂಬ ಭ್ರಮೆಗೆ ಒಳಗಾಗಿ ಈ ಉಪಾಧಿಶಂಕೆ ಮಾಡಿದ್ದೀರಿ. ಆದರೆ ವಕ್ತ್ರಾದ್ಯನುಕೂಲ್ಯ ಇರುವುದರಿಂದ ಬ್ರಹ್ಮಸೂತ್ರವು ಆಪ್ತವಾಕ್ಯವಾಗಿದೆ. ಆಪ್ತವಾಕ್ಯವಾದುದರಿಂದ ಪ್ರಮಾಣವಾಗಿದೆ ಎಂದೇ ನಾವು ಸಾಧನೆ ಮಾಡುತ್ತಿದ್ದೇವೆ. ಯಾವ ವಾಕ್ಯವು ವಕ್ತ್ರಾದ್ಯನುಕೂಲ್ಯದಿಂದ ಕೂಡಿರುತ್ತದೆಯೋ ಅದು ಆಪ್ತವಾಕ್ಯವಾಗಿದೆ ಎಂದು ವ್ಯಾಪ್ತಿ ಇದೆಯಷ್ಟೆ. ಯಾವುದು ಆಪ್ತವಾಕ್ಯವೋ ಅದು ಪ್ರಮಾಣ ಎಂದೂ ವ್ಯಾಪ್ತಿ ಇದೆಯಲ್ಲ. ಆಚಾರ್ಯರು ಈ ಅಭಿಪ್ರಾಯದಿಂದಲೇ "ವಕ್ತೃಶ್ರೋತೃಪ್ರಸಕ್ತೀನಾಂ....." ಎಂದು ಹೇಳಿದ್ದಾರೆ.

### ನೆನೆಪಿಡಿ

* 'ಏತಚ್ಛಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ತ್ವಾತ್' ಎಂಬ ಅನುಮಾನಕ್ಕೆ ಆಪ್ತ-ವಾಕ್ಯತ್ವವು ಉಪಾಧಿಯಾಗಿದೆ.

* ಉಪಾಧಿಗೆ ಸಾಧ್ಯವ್ಯಾಪಕತ್ವವು ಎರಡು ವಿಧ. 1. ಶುದ್ಧಸಾಧ್ಯವ್ಯಾಪಕತ್ವ, 2. ಅವ-ಚ್ಛಿನ್ನಸಾಧ್ಯವ್ಯಾಪಕತ್ವ ಎಂದು. ಅವಚ್ಛಿನ್ನಸಾಧ್ಯವ್ಯಾಪಕತ್ವವು ಪುನಃ ಎರಡು ವಿಧ. ಪಕ್ಷ-ಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ, ಸಾಧನಧರ್ಮಾವಚ್ಛಿನ್ನ ಸಾಧ್ಯವ್ಯಾಪಕತ್ವ ಎಂದು. ಪ್ರಕೃತ ಪಕ್ಷಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ ಹಾಗೂ ಸಾಧನಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವ ಎಂಬ ಎರಡುಬಗೆಯ ಉಪಾಧಿದೋಷವು ಬರುತ್ತದೆ.

* ವಕ್ತ್ರಾದ್ಯನುಕೂಲ್ಯಗಳಿಂದ ನೇರವಾಗಿ ಶಾಸ್ತ್ರಪ್ರಾಮಾಣ್ಯವನ್ನು ಸಾಧನೆ ಮಾಡದ ಕಾರಣ ಉಪಾಧಿದೋಷವು ಬರುವುದಿಲ್ಲ.

* ವಕ್ತ್ರಾದ್ಯನುಕೂಲ್ಯಗಳಿಗೂ ಪ್ರಾಮಾಣ್ಯಕ್ಕೂ ನೇರವಾಗಿ ಸಾಧ್ಯಸಾಧನಭಾವ-ಸಂಬಂಧವನ್ನು ತಿಳಿಯಬಾರದೆಂದು ಸ್ಪಷ್ಟಪಡಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಮುಂದಿನ ಗ್ರಂಥವು ಹೊರಟಿದೆ.

## ವಕ್ತೃಶ್ರೋತೃಪ್ರಸಕ್ತೀನಾಂ ಎಂಬ ಶ್ಲೋಕಕ್ಕೆ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ – ಯತ್ ಯತ್ರ ವಾಕ್ಯೇ, ವಕ್ತೃಶ್ರೋತೃಪ್ರಸಕ್ತೀನಾಮ-ನುಕೂಲತಾ ತತ್ರಾಪ್ತಿಃ । ಯತ್ ವಕ್ತ್ರಾದ್ಯಾನುಕೂಲ್ಯೋಪೇತಂ ತದಾಪ್ತವಾಕ್ಯಮ್**

**ಇತಿ ಯಾವತ್ । ಯತ ಏವಂ ವ್ಯಾಪ್ತಿರ್ಯತಶ್ಚಾಸ್ಯ ಶಾಸ್ತ್ರಸ್ಯಾಸ್ಯನುಕೂಲವಕ್ತ್ರಾದಿಮತ್ತ್ವಮ್ ತೇನ ಸಿದ್ಧಯಾ ಆಪ್ತವಾಕ್ಯತಯಾ ಮಾನಮಿದಂ ಶಾಸ್ತ್ರಮಿತಿ ಪೂರ್ವೇಣ ಸಂಬಂಧಃ ।**

ಯತ್ = ಯಾವ ವಾಕ್ಯದಲ್ಲಿ 'ವಕ್ತೃಶ್ರೋತೃಪ್ರಸಕ್ತೀನಾಂ ಅನುಕೂಲತಾ' = ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳು ಇರುತ್ತವೋ, ತತ್ರ =ಆ ವಾಕ್ಯದಲ್ಲಿ, ಆಪ್ತಿಃ = ಆಪ್ತವಾಕ್ಯತ್ವವು ಇರುತ್ತದೆ. ವಕ್ತ್ರಾದ್ಯಾನುಕೂಲ್ಯಗಳಿಂದ ಯುಕ್ತವಾದ ವಾಕ್ಯವು ಆಪ್ತವಾಕ್ಯ ಎನಿಸುತ್ತದೆ ಎಂಬುದು ಇದರ ಅರ್ಥ. ಯಾವ ಕಾರಣದಿಂದ ಹೀಗೆ ವ್ಯಾಪ್ತಿ ಇರುತ್ತದೋ ಯಾವ ಕಾರಣದಿಂದ ಈ ಶಾಸ್ತ್ರಕ್ಕೆ ವಕ್ತ್ರಾದ್ಯಾನುಕೂಲ್ಯಗಳು ಇರುತ್ತವೋ ಆ ಕಾರಣದಿಂದ ಸಿದ್ಧವಾದ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವು ಈ ಶಾಸ್ತ್ರದಲ್ಲಿ ಸಿದ್ಧವಾಗುತ್ತದೆ. 'ಮಾನಂ' ಎಂಬ ಹಿಂದಿನ ಶ್ಲೋಕದ ಪದಕ್ಕೆ 'ತೇನ ಸಿದ್ಧಯಾ ಆಪ್ತವಾಕ್ಯತಯಾ' ಎಂಬುದರ ಜೊತೆ ಅನ್ವಯವನ್ನು ತಿಳಿಯಬೇಕು.

## ಹೇತುಸಾಧ್ಯಗಳಿಗೆ ವೈಯಧಿಕರಣ್ಯವು ಇರುವುದಿಲ್ಲ

**ಪರಿಮಳ– ತತ್ರ 'ಆಪ್ತಿಃ' ಇತ್ಯಯುಕ್ತಮ್ । ಆಪ್ತೇಃ ಪುಂಗತತ್ವಾದಿತ್ಯತಃ ಸಾಮಾನಾಧಿಕರಣ್ಯಾಯ ಫಲಿತಾರ್ಥಮಾಹ – ಯತ್ ವಕ್ತ್ರಾದೀತಿ ॥ 'ಯತ್' ಇತ್ಯಸ್ಯ ಪಂಚಮ್ಯಂತಾವ್ಯಯತ್ವಮ್ ಆವೃತ್ತಿಮ್, 'ಆಪ್ತಿಃ' ಇತ್ಯಸ್ಯ ವ್ಯಾಪ್ತಿರಿತಿ ಚಾರ್ಥಮುಪೇತ್ಯ 'ಆಪ್ತವಾಕ್ಯತಯಾ ತೇನ' ಇತ್ಯಂತಸ್ಯ ಯೋಜನಾಂತರಮಾಹ – ಯತ ಏವಮಿತಿ ॥ ವಕ್ತೃಶ್ರೋತೃಪ್ರಸಕ್ತೀನಾಮನುಕೂಲತಾ ಇತ್ಯತ್ರ 'ಅಸ್ಯ' ಇತಿ ಶೇಷಮುಪೇತ್ಯ ಫಲಿತಾರ್ಥಮಾಹ – ಅಸ್ಯೇತ್ಯಾದಿ ॥**

'ತತ್ರ ಆಪ್ತಿಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದು ತಪ್ಪು. ಏಕೆಂದರೆ, ಆಪ್ತಿಯು ಪುರುಷನಲ್ಲಿರುತ್ತದೆ. ಈ ಪ್ರಶ್ನೆಗೆ ಸಾಮಾನಾಧಿಕರಣ್ಯದ ಸಮರ್ಥನೆಗಾಗಿ ಫಲಿತಾರ್ಥವನ್ನು

'ಯದ್ವಕ್ತ್ರಾದಿ' ಎಂಬ ವಾಕ್ಯದಿಂದ ತಿಳಿಸಿದ್ದಾರೆ. 'ಯತ್' ಎಂಬ ಶಬ್ದಕ್ಕೆ ಯಸ್ಮಾತ್ ಎಂಬುದಾಗಿ ಪಂಚಮ್ಯಂತವಾದ ಅವ್ಯಯಾರ್ಥವು ಇದೆ. ಈ ಯತ್ ಎಂಬ ಪದವನ್ನು ಆವೃತ್ತಿ ಮಾಡಿ-ಕೊಳ್ಳಬೇಕು. ಆಪ್ತಿ ಎಂಬುದಕ್ಕೆ ವ್ಯಾಪ್ತಿ ಎಂದರ್ಥ. ಹೀಗೆ ಅರ್ಥವನ್ನು ಅಂಗೀಕರಿಸಿ 'ಆಪ್ತ-ವಾಕ್ಯತಯಾ ತೇನ' ಎಂಬ ವಾಕ್ಯಕ್ಕೆ ಮತ್ತೊಂದು ಅರ್ಥದ ಜೊತೆ ಯೋಜನೆಯನ್ನು 'ಯತ ಏವಮ್' ಎಂಬುದರಿಂದ ತಿಳಿಸುತ್ತಿದ್ದಾರೆ. 'ವಕ್ತೃಶ್ರೋತೃಪ್ರಸಕ್ತೀನಾಂ ಅನುಕೂಲತಾ' ಎಂಬಲ್ಲಿ ಅಸ್ಯ ಎಂಬುದನ್ನು ಶೇಷಪೂರಣೆ ಮಾಡಿಕೊಳ್ಳಬೇಕು. ಹೀಗೆ ಶೇಷವನ್ನು ಒಪ್ಪಿ ಫಲಿತಾರ್ಥವನ್ನು 'ಅಸ್ಯ ಶಾಸ್ತ್ರಸ್ಯ' ಇತ್ಯಾದಿ ಪದಗಳಿಂದ ತಿಳಿಸುತ್ತಿದ್ದಾರೆ.

ವಿವರಣೆ – ಆಪ್ತಿಯು ಪುರುಷನಲ್ಲಿದೆ. ವಕ್ತ್ರಾದ್ಯನುಕೂಲಗಳೆಂಬ ಹೇತುವು ಗ್ರಂಥದಲ್ಲಿದೆ. ಹೇತುವು ವ್ಯಧಿಕರಣವಾದ್ದರಿಂದ ವ್ಯಾಪ್ತಿಯನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಯು ಬಂದರೆ, 'ಯತ್ ವಕ್ತ್ರಾದಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಯತ್ ಎಂಬುದನ್ನು ಯಸ್ಮಾತ್ ಎಂಬರ್ಥದಲ್ಲಿ ವಿವಕ್ಷಿಸಬೇಕು ಹಾಗೂ ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. ಆಗ ಈ ದೋಷವು ಬರುವುದಿಲ್ಲ.

ವಾಕ್ಯಾರ್ಥಚಂದ್ರಿಕಾ– ನನು 'ವಕ್ತೃಶ್ರೋತೃಪ್ರಸಕ್ತೀನಾಮ್' ಇತಿ ಶ್ಲೋಕೇ ವಕ್ತ್ರಾದ್ಯಾ-ನುಕೂಲ್ಯಸ್ಯ ಆಪ್ತ್ಯಾ ಅಭೇದೋಕ್ತಾವಪಿ ವ್ಯಾಪ್ತೇರನಭಿಹಿತತ್ವಾತ್ ಪಕ್ಷಧರ್ಮತಾಂ ವಿನಾ ತಾವ-ನ್ಮಾತ್ರಸ್ಯ ಸಾಧನತ್ವಾನುಪಯೋಗಾಚ್ಚ, 'ಮಾನಮ್' ಇತ್ಯಸ್ಯಾಶ್ರುತತ್ವಾಚ್ಚ 'ಅಪಿ ತರ್ಹಿ' ಇತ್ಯಾದಿ-ನೋಕ್ತಮಯುಕ್ತಮಿತ್ಯತೋ 'ಯತ್' ಇತ್ಯಸ್ಯ 'ಯತ್ರ' ಇತ್ಯರ್ಥತಾಂ, ತತ್ಸನ್ನಿಧಿಯೋಗೇನ 'ತತ್ರ' ಇತ್ಯಸ್ಯ ಲಾಭಂ, 'ಯತ್' ಇತ್ಯಸ್ಯಾವೃತ್ತ್ಯಾ 'ಯತಃ' ಇತ್ಯರ್ಥಕತ್ವಮ್, ಅಸ್ಯೇತಿ ಯೋಗ್ಯತಯಾ ಸಂಬಂಧಂ, 'ವಕ್ತೃಶ್ರೋತೃಪ್ರಸಕ್ತೀನಾಮ್' ಇತ್ಯಸ್ಯಾವೃತ್ತಿಂ ತೇನೇತ್ಯೇತದ್ಬಲೇನ ಸಿದ್ಧ್ಯಾ ಇತ್ಯಸ್ಯ ಲಾಭಂ, ಪೂರ್ವೇಣ ಸಂಬಂಧಂ ಚ ಅಭಿಪ್ರೇತ್ಯೋಕ್ತಮುಪಪಾದಯತಿ – ಯದ್ಯತ್ರೇತ್ಯಾದಿ ॥

'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಶ್ಲೋಕದಲ್ಲಿ ವಕ್ತ್ರಾದ್ಯಾನುಕೂಲ್ಯಗಳಿಗೆ ಆಪ್ತಿಯಿಂದ ಅಭೇದವನ್ನು ಹೇಳಿದ್ದೀರಿ. ಆದರೂ ಕೂಡ ವ್ಯಾಪ್ತಿಯನ್ನು ಹೇಳಿರುವುದಿಲ್ಲ. ಪಕ್ಷಧರ್ಮತ್ವವಿಲ್ಲದೇ ಕೇವಲಅಪ್ತರಿಂದಲೇ ಸಾಧನೆಯನ್ನು ಮಾಡುವುದು ಕೂಡ ಅನುಪಯುಕ್ತ. ಮತ್ತು ಶ್ಲೋಕದಲ್ಲಿ 'ಮಾನಮ್' ಎಂದು ಕೇಳಿಸುತ್ತಿಲ್ಲ. ಹಾಗಾಗಿ 'ಅಪಿ ತರ್ಹಿ' ಇತ್ಯಾದಿ ಗ್ರಂಥದಿಂದ ಹೇಳಿದ್ದೆಲ್ಲವೂ ಅಯುಕ್ತವಾಗಿದೆ?

ಈ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳುತ್ತಿದ್ದಾರೆ. ಯತ್ ಎಂಬುದಕ್ಕೆ ಯತ್ರ ಎಂದರ್ಥ. ಆದರ

ಸನ್ನಿಧಾನದಿಂದ ತತ್ರ ಎಂಬುದು ದೊರೆಯುತ್ತದೆ. ಯತ್ ಎಂಬುದನ್ನು ಆವೃತ್ತಿ ಮಾಡಿಕೊಂಡಾಗ ಯತಃ ಎಂಬರ್ಥವು ಪ್ರಾಪ್ತವಾಗುತ್ತದೆ. ಅಸ್ಯ ಎಂಬುದು ಅನ್ವಯಯೋಗ್ಯವಾದ್ದರಿಂದ ಸಂಬಂಧವಾಗುತ್ತದೆ. 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬುದನ್ನು ಆವೃತ್ತಿಮಾಡಿಕೊಂಡು 'ತೇನ' ಎಂಬುದರಿಂದ 'ಸಿದ್ಧಯಾ' ಎಂಬುದು ಲಾಭವಾಗುತ್ತದೆ. ಹಿಂದಿನ ಶ್ಲೋಕದ ಜೊತೆಗೆ ಅನ್ವಯವನ್ನು ಮಾಡಿಕೊಳ್ಳಬೇಕು ಎಂಬುದಾಗಿ ಉಪಪಾದನೆ ಮಾಡಲು 'ಯತ್ ಯತ್ರ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಯಾವ ವಾಕ್ಯದಲ್ಲಿ ವಕ್ತೃಶ್ರೋತೃಪ್ರಸಕ್ತಿಗಳ ಅನುಕೂಲ್ಯವಿರುತ್ತದೋ, ತತ್ರ = ಅದು ಆಪ್ತಿವಾಕ್ಯ ಎನಿಸುತ್ತದೆ. ಯತ್ = ಯಾವ ಕಾರಣದಿಂದ ಈ ಶಾಸ್ತ್ರಕ್ಕೆ ವಕ್ತ್ರಾದ್ಯಾನುಕೂಲ್ಯಗಳಿವೆಯೋ ಆ ಕಾರಣದಿಂದ ಆಪ್ತವಾಕ್ಯತ್ವವು ಸಿದ್ಧವಾಗುತ್ತದೆ. ಅಂಥಾ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆ.

## ಆಪ್ತಿಯು ವಾಕ್ಯದಲ್ಲಿ ಹೇಗೆ?

ಯಾದುಪತ್ಯ– 'ಆಪ್ತೇಃ ಪುರುಷಗತಾಯಾ ವಾಕ್ಯನಿಷ್ಠತ್ವಾಭಾವಾದ್ ವಕ್ಷ್ಯಮಾಣಾನುಮಾನಾಯೋಗಃ' ಇತ್ಯತೋ ಅಭಿಪ್ರಾಯಮಾಹ – ಯದ್ವಕ್ತ್ರಾನುಕೂಲ್ಯೋಪೇತಮಿತಿ ॥

ಆಪ್ತಿಯು ಪುರುಷನಲ್ಲಿದೆ. ವಾಕ್ಯದಲ್ಲಿರುವುದಿಲ್ಲ. ಆದ್ದರಿಂದ ಮುಂದೆ ಹೇಳುವ ಅನುಮಾನವು ಅಯುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ನಿಜಾಭಿಪ್ರಾಯವನ್ನು 'ಯದ್ ವಕ್ತ್ರಾದ್ಯನುಕೂಲ್ಯೋಪೇತಂ' ಎಂಬ ಟೀಕೆಯಿಂದ ಹೇಳುತ್ತಿದ್ದಾರೆ.

"ಯತ್" ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಮೊದಲ 'ಯತ್' ಎಂಬುದು ಯಾವುದರಲ್ಲಿ ಎಂದು ಸಪ್ತಮ್ಯಂತದ ಅರ್ಥವುಳ್ಳದ್ದು. ಎರಡನೆಯ 'ಯತ್' ಎಂಬುದಕ್ಕೆ "ಯಾವ ಕಾರಣದ ದೆಸೆಯಿಂದ" ಎಂದು ಪಂಚಮ್ಯಂತದ ಅರ್ಥದಲ್ಲಿ ಆವೃತ್ತಿ ಮಾಡಬೇಕು. ಎರಡು ಅರ್ಥದಲ್ಲಿಯೂ 'ಯತ.' ಎಂಬುದು ಅವ್ಯಯ. 'ಆಪ್ತಿ' ಎಂಬ ಪದಕ್ಕೆ ಆವೃತ್ತಿ ಮಾಡಿ ವ್ಯಾಪ್ತಿ ಎಂದರ್ಥ. 'ಅಸ್ಯ' ಎಂದು 'ಸಿದ್ಧಯಾ' ಎಂದೂ ಎರಡು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ತತ್ರ ಎಂದು ಯತ್ ಪದ ಹೇಳಿದುದರಿಂದ ಸಿದ್ಧವಾಗುತ್ತದೆ. 'ಮಾನಂ' ಎಂಬ ಹಿಂದಿನ ಶ್ಲೋಕದ ಪದಕ್ಕೆ ಅನ್ವಯ ಮಾಡಬೇಕು.

ಪ್ರತಿಪದಾರ್ಥ ಹೀಗಿದೆ—ಯತ್ =ಯಾವ ವಾಕ್ಯದಲ್ಲಿ, ವಕ್ತೃಶ್ರೋತೃಪ್ರಸಕ್ತೀನಾಂ= ವಕ್ತೃಶ್ರೋತೃಪ್ರಸಂಗಗಳ, ಅನುಕೂಲತಾ= ಅನುಕೂಲ್ಯವು ಇದೆಯೋ, ತತ್ರ= ಆ ವಾಕ್ಯದಲ್ಲಿ, ಆಪ್ತಿ= ಆಪ್ತಿಯು. ಯಾವುದು ವಕ್ತೃಶ್ರೋತೃಪ್ರಸಂಗಾನುಕೂಲ್ಯವುಳ್ಳದ್ದೋ ಅದು ಆಪ್ತವಾಕ್ಯ ಎಂದು ಭಾವ. ಯತ್= ಯಾವ ಕಾರಣದ ದೆಸೆಯಿಂದ,

ಯತ್ = ಯಾವ ಕಾರಣದಿಂದ ಹೀಗೆ ವ್ಯಾಪ್ತಿ ಇದೆಯೋ, ಅಸ್ಯ= ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಕ್ತ್ರಾದ್ಯಾನುಕೂಲ್ಯವು ಇದೆಯೋ, ತೇನ=ಆಪ್ತವಾಕ್ಯತ್ವದ ವ್ಯಾಪ್ತಿಯುಳ್ಳ ಆ ವಕ್ತ್ರಾದ್ಯಾನುಕೂಲ್ಯದಿಂದ, ಸಿದ್ಧಯಾ=ಸಿದ್ಧವಾದ, ಆಪ್ತವಾಕ್ಯತಯಾ=ಆಪ್ತವಾಕ್ಯತ್ವದಿಂದ, ಮಾನಂ=ಪ್ರಮಾಣವು, ಇದಂ ಶಾಸ್ತ್ರಂ=ಈ ಬ್ರಹ್ಮಮೀಮಾಂಸಾಶಾಸ್ತ್ರವು.

## ಆಪ್ತವಾಕ್ಯಸಾಧಕವಾದ ಪ್ರಾಮಾಣ್ಯಸಾಧಕವಾದ ಅನುಮಾನದ ಸ್ವರೂಪ

**ಶ್ರೀಮನ್ನ್ಯಾಯಸುಧಾ– ಏತದುಕ್ತಂ ಭವತಿ । 'ವಿಮತಮ್ ಆಪ್ತವಾಕ್ಯಮ್ ಅನುಕೂಲೇನ ವಕ್ತ್ರಾನುಕೂಲಾನ್ ಶ್ರೋತ್ರ್ನ್ ಪ್ರತಿ ತದೀಯಹಿತಸಾಧನ-ಬೋಧಾಯ ಉಪದಿಷ್ಟತ್ವಾತ್ ಸಂಪ್ರತಿಪನ್ನವತ್' । 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್ ಸಂಪ್ರತಿಪನ್ನವತ್' ಇತಿ । ವಕ್ತುರಾನುಕೂಲ್ಯಾಭಾವಾದ್ ಜೈನಾದ್ಯನಾಪ್ತವಾಕ್ಯಮ್ । ಶ್ರೋತ್ರಾನುಕೂಲ್ಯವಿರಹಾದ್ ಬೌದ್ಧಾದಿ । ಪ್ರಸಂಗಾನುಕೂಲ್ಯವೈಧುರ್ಯಾತ್ ನರ್ಮಾದಿ ।**

'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಶ್ಲೋಕದ ಒಟ್ಟು ಅಭಿಪ್ರಾಯ ಹೀಗಿದೆ – 'ವಿಮತಮ್ ಆಪ್ತವಾಕ್ಯಮ್ ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತ್ರ್ನ್ ಪ್ರತಿ ತದೀಯಹಿತಸಾಧನಬೋಧಾಯ ಉಪದಿಷ್ಟತ್ವಾತ್ ಸಂಪ್ರತಿಪನ್ನವತ್' 'ಈ ಶಾಸ್ತ್ರವು ಆಪ್ತವಾಕ್ಯವಾಗಿದೆ. ಏಕೆಂದರೆ ಅನುಕೂಲರಾದ ಶ್ರೋತೃಗಳನ್ನು ಕುರಿತು ಅವರ ಹಿತ-ಸಾಧನೆಯ ತಿಳಿವಿಕೆಗಾಗಿ ಉಪದೇಶಿಸಲ್ಪಟ್ಟಿದೆ. ಸಂಪ್ರತಿಪನ್ನವಾದ ಮಹಾಭಾರತವು ಇದಕ್ಕೆ ಉದಾಹರಣೆ ಮತ್ತು 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್ ಸಂಪ್ರತಿಪನ್ನವತ್' 'ಈ ಶಾಸ್ತ್ರವು ಪ್ರಮಾಣವಾಗಿದೆ. ಆಪ್ತವಾಕ್ಯವಾಗಿರುವುದರಿಂದ ಸಂಪ್ರತಿಪನ್ನವಾದ ಮಹಾ-ಭಾರತದಂತೆ' ವಕ್ತ್ರಾನುಕೂಲ್ಯ ಇಲ್ಲದ ಕಾರಣ ಜೈನಾದ್ಯಾಗಮಗಳು ಆಪ್ತವಾಕ್ಯ ಎನಿಸು-ವುದಿಲ್ಲ. ಶ್ರೋತ್ರಾನುಕೂಲ್ಯ ಇಲ್ಲದ ಕಾರಣ ಬೌದ್ಧಾಗಮವು ಪ್ರಮಾಣ ಎನಿಸುವುದಿಲ್ಲ. ಪ್ರಸಂಗಾನುಕೂಲ್ಯ ಇಲ್ಲದ ಕಾರಣ ಹಾಸ್ಯಪ್ರಸಂಗದ ವಾಕ್ಯಗಳು ಆಪ್ತವಾಕ್ಯ ಎನಿಸುವುದಿಲ್ಲ.

## ಐದು ಸಂದರ್ಭಗಳಲ್ಲಿ ಸುಳ್ಳು ಹೇಳಬಹುದು

ಪರಿಮಳ– ವಿಮತಮಿತಿ ॥ ಬ್ರಹ್ಮತಂತ್ರಮ್ । ಆದ್ಯಪ್ರಯೋಗೇ ಹೇತುವಿಶೇಷಣ-ಕೃತ್ಯಾನ್ಯಾಹ – ವಕ್ತುರಿತಿ ॥ ಬೌದ್ಧಾದೀತ್ಯತ್ರ , ನರ್ಮಾದೀತ್ಯತ್ರ ಚ 'ಅನಾಪ್ತವಾಕ್ಯಮ್' ಇತ್ಯನುಷಂಗಃ। ನರ್ಮಾದೌ ಅನೃತೋಕ್ತಾವಪ್ಯದೋಷಾತ್ ।

'ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

ಇತ್ಯಾದಿ ಭಾರತೋಕ್ತೇರಿತಿ ಭಾವಃ ॥

'ವಿಮತಂ' – ಪ್ರಮಾಣವೋ ಅಲ್ಲವೋ ಎಂಬ ಸಂದೇಹಕ್ಕೆ ವಿಷಯವಾದ ಬ್ರಹ್ಮ-ಮೀಮಾಂಸಾಶಾಸ್ತ್ರವು ವಿಮತಂ ಎಂದು ಕರೆಸಿಕೊಳ್ಳುತ್ತದೆ.

ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತೄನ್ ಪ್ರತಿ ತದೀಯಹಿತಸಾಧನಬೋಧಾಯ ಉಪದಿಷ್ಟತ್ವಾತ್' ಎಂಬ ಹೇತುವಿನಲ್ಲಿರುವ ವಿಶೇಷಣಗಳ ಸಾರ್ಥಕ್ಯವನ್ನು 'ವಕ್ತುಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಬೌದ್ಧಾದಿ' ಎಂಬಲ್ಲಿ ಮತ್ತು 'ನರ್ಮಾದಿ' ಎಂಬಲ್ಲಿ 'ಅನಾಪ್ತ-ವಾಕ್ಯಂ' ಎಂಬುದನ್ನು ಅನುಷಂಗ ಮಾಡಬೇಕು. ಹಾಸ್ಯಪ್ರಸಂಗದಲ್ಲಿ ಸುಳ್ಳು ಹೇಳಿದರೂ ಕೂಡ ದೋಷವಿಲ್ಲ. ಈ ವಿಷಯದಲ್ಲಿ ಮಹಾಭಾರತವು ಆಧಾರವಾಗಿದೆ.

'ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

'ಓ ರಾಜನೇ! ಹಾಸ್ಯಪ್ರಸಂಗದಲ್ಲಿ, ಸ್ತ್ರೀಯರಲ್ಲಿ, ವಿವಾಹವಾಗುವ ಕಾಲದಲ್ಲಿ, ಪ್ರಾಣ-ಹೋಗುವ ಸಂಕಟಪರಿಸ್ಥಿತಿಯಲ್ಲಿ, ಸರ್ವಸಂಪತ್ತು ನಾಶವಾಗುವ ಸಂದರ್ಭದಲ್ಲಿ ಈ ಐದು ಪ್ರಸಂಗಗಳಲ್ಲಿ ಸುಳ್ಳು ಹೇಳಿದರೆ ಪಾತಕವಿಲ್ಲ'.

## ಒಟ್ಟು ಅಭಿಪ್ರಾಯ

ವಾಕ್ಯಾರ್ಥಚಂದ್ರಿಕಾ– ಏವಂ ಚ ಸಿದ್ಧಮನುಮಾನಪ್ರಯೋಗಂ ದರ್ಶಯಿತುಮಾಹ – ಏತದುಕ್ತಂ ಭವತೀತಿ ॥ ಪ್ರಥಮಹೇತೌ ವಿಶೇಷಣತ್ರಯವ್ಯವಚ್ಛೇದ್ಯಾನಿ ದರ್ಶಯತಿ – ವಕ್ತುರಿತ್ಯಾದಿನಾ ॥

'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ಶ್ಲೋಕದಿಂದ ಸಿದ್ಧವಾದ ಅನುಮಾನಸ್ವರೂಪವನ್ನು ತೋರಿಸುವುದಕ್ಕಾಗಿ 'ಏತದುಕ್ತಂ ಭವತಿ' ಎಂಬ ಗ್ರಂಥವು ಹೊರಟಿದೆ. ಮೊದಲನೆಯ ಹೇತುವಿನಲ್ಲಿ ಇರುವ ಮೂರು ವಿಶೇಷಣಗಳಿಂದ ಪರಿಹಾರವಾಗುವ ದೋಷವನ್ನು 'ವಕ್ತುಃ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

## ಹೇತುವಿಶೇಷಣಗಳಿಗೆ ದಳಕೃತ್ಯಚಿಂತನೆ

ಯಾದುಪತ್ಯ– ಆಪ್ತವಾಕ್ಯತ್ವಸಾಧಕಹೇತುವಿಶೇಷಣನಾಂ ಕ್ರಮೇಣ ವ್ಯವಚ್ಛೇದ್ಯಾನ್ಸಿದರ್ಶಯತಿ – ವಕ್ತುರಿತ್ಯಾದಿನಾ ॥

ಆಪ್ತವಾಕ್ಯತ್ವಸಾಧಕವಾದ ಹೇತುವಿಶೇಷಣಗಳಿಗೆ ಕ್ರಮವಾಗಿ ದಳಕೃತ್ಯಚಿಂತನೆಯನ್ನು 'ವಕ್ತುಃ' ಇತ್ಯಾದಿವಾಕ್ಯದಿಂದ ತೋರಿಸಿದ್ದಾರೆ.

## ಸುಧಾಪರಿಮಳಸಾರ

ಹೀಗೆ ಹೇಳಿದಂತಾಗುತ್ತದೆ—ಆಪ್ತವಾಕ್ಯವೆಂದು ಸಮ್ಮತವಾದ ಭಾರತಾದಿಗ್ರಂಥಗಳು ಅನುಕೂಲನಾದ ವಕ್ತೃವಿನಿಂದ ಅನುಕೂಲರಾದ ಶ್ರೋತೃಗಳಿಗಾಗಿ ಅವರ ಹಿತಸಾಧನದ ತಿಳುವಳಿಕೆಗಾಗಿ ಉಪದೇಶಿಸಲ್ಪಟ್ಟಿರುವುದರಿಂದ ಹೇಗೆ ಆಪ್ತವಾಕ್ಯವೆನಿಸಿದೆಯೋ ಹಾಗೆಯೇ ಆಪ್ತವಾಕ್ಯವೋ ಅನಾಪ್ತವಾಕ್ಯವೋ ಎಂಬೀ ವಿವಾದಕ್ಕೆ ವಿಷಯವಾದ ಬ್ರಹ್ಮಮೀಮಾಂಸಾಶಾಸ್ತ್ರವು ಅನುಕೂಲನಾದ ವಕ್ತೃವಿನಿಂದ ಅನುಕೂಲರಾದ ಶ್ರೋತೃಗಳನ್ನು ಕುರಿತು ಅವರ ಅಜ್ಞಾನಪರಿಹಾರ ಮುಂತಾದ ಹಿತದ ಸಾಧನವನ್ನು ತಿಳಿಸುವುದಕ್ಕಾಗಿ ಉಪದೇಶಿಸಲ್ಪಟ್ಟಿರುವುದರಿಂದ ಆಪ್ತವಾಕ್ಯವೇ ಆಗಿದೆ.

ಪ್ರಮಾಣವೆಂದು ಸಮ್ಮತವಾಗಿರುವ ಭಾರತಾದಿಗಳು ಹೇಗೆ ಆಪ್ತವಾಕ್ಯವಾದುದರಿಂದ ಪ್ರಮಾಣವೆಂದು ಸಿದ್ಧವಾಗಿದೆಯೋ ಹಾಗೆ ಪ್ರಾಮಾಣ್ಯ-ಅಪ್ರಾಮಾಣ್ಯಗಳ ವಿವಾದಕ್ಕೆ ವಿಷಯವಾದ ಬ್ರಹ್ಮಮೀಮಾಂಸಾಶಾಸ್ತ್ರವು ಆಪ್ತವಾಕ್ಯವಾದುದರಿಂದ ಪ್ರಮಾಣ.

ವಕ್ತೃಶ್ರೋತೃಪ್ರಸಂಗಗಳ ಅನುಕೂಲ್ಯಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಆ ವಾಕ್ಯದಲ್ಲಿ ಆಪ್ತಿ ಇರುವುದಿಲ್ಲ. ಆ ವಾಕ್ಯವು ಆಪ್ತವಾಕ್ಯ ಎನಿಸುವುದಿಲ್ಲ. ಜಿನನಿಂದ ಉಪದೇಶಿಸಲ್ಪಟ್ಟ ಜೈನವಾಕ್ಯವು ವಕ್ತ್ರಾನುಕೂಲ್ಯವಿಲ್ಲದ್ದರಿಂದ ಆಪ್ತವಾಕ್ಯವೆನಿಸಿಲ್ಲ. ಬೌದ್ಧವಾಕ್ಯವು ಭಗವದವತಾರಿಯಾದ ಬುದ್ಧನಿಂದ ಉಪದೇಶಿಸಲ್ಪಟ್ಟಿದ್ದರೂ ಅಸುರರು ಶ್ರೋತೃಗಳಾದುದರಿಂದ ಶ್ರೋತ್ರಾನುಕೂಲ್ಯವಿಲ್ಲದೆ ಆಪ್ತವಾಕ್ಯವಾಗಿಲ್ಲ. ನರ್ಮಾದಿವಾಕ್ಯಗಳು (ಹಾಸ್ಯಪ್ರಸಂಗದ ಮಾತುಗಳು) ಪ್ರಸಂಗಾನುಕೂಲ್ಯವಿಲ್ಲದುದರಿಂದ ಆಪ್ತವಾಕ್ಯವಲ್ಲ.

## ನೆನೆಪಿಡಿ

* 'ವಿಮತಮ್ ಆಪ್ತವಾಕ್ಯಮ್ ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತೄನ್ ಪ್ರತಿ ತದೀಯಹಿತಸಾಧನಬೋಧಾಯ ಉಪದಿಷ್ಟತ್ವಾತ್ ಸಂಪ್ರತಿಪನ್ನವತ್' ಎಂಬ ಅನುಮಾನದಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಆಪ್ತವಾಕ್ಯತ್ವವು ಸಿದ್ಧವಾಗುತ್ತದೆ.

* 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್ ಸಂಪ್ರತಿಪನ್ನವತ್' ಎಂಬ ಅನುಮಾನದಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ.

* ಐದು ಪ್ರಸಂಗಗಳಲ್ಲಿ ಸುಳ್ಳುಹೇಳಿದರೆ ತಪ್ಪಲ್ಲ. ಹಾಸ್ಯಕ್ಕಾಗಿ, ಸ್ತ್ರೀಯರ ಮಧ್ಯದಲ್ಲಿ, ವಿವಾಹ ಪ್ರಸಂಗದಲ್ಲಿ, ಪ್ರಾಣಹೋಗುವಂತಹ ಸಂಕಟಸ್ಥಿತಿಯಲ್ಲಿ, ಸರ್ವಸಂಪತ್ತು ನಾಶವಾಗುವಾಗ.

## ಏಳು ಬಗೆಯ ಆಪ್ತನ ಲಕ್ಷಣಕ್ಕೆ ದೋಷಪ್ರದರ್ಶನ

**ಶ್ರೀಮನ್ನ್ಯಾಯಸುಧಾ– ನನು ಕೋಽಯಮ್ ಆಪ್ತೋ ನಾಮ ಯದ್ವಾಕ್ಯತ್ವಂ ಸಾಧ್ಯತೇ । ಯಥಾದೃಷ್ಟಾರ್ಥವಾದೀತಿ ಚೇನ್ನ । ಭ್ರಾಂತಿದೃಷ್ಟಾರ್ಥವಾದಿನ್ಯಪಿ ಪ್ರಸಂಗಾತ್ । ಪ್ರಮಾಣದೃಷ್ಟೇತಿ ವಿಶೇಷಣೇಽಪಿ ಪ್ರಮಾಣದೃಷ್ಟಸ್ಯ ಪ್ರಮಾದಾದಿನಾ ಅನ್ಯಥಾಕಥಕೇಪಿ ಪ್ರಸಂಗಾತ್ । ಪ್ರಮಾಣೇನ ಯಥಾ ದೃಷ್ಟಂ ತಥಾ ವಾದೀತಿ ಚೇನ್ನ । ಏಕದೇಶೇ ತಥಾಭೂತವಾದಿತ್ವೇಽಪ್ಯಂಶಾಂತರೇಽತಥಾಭೂತವಾದಿನ್ಯಪಿ ಪ್ರಸಂಗಾತ್ । ಯಾವತ್ ಪ್ರಮಾಣದೃಷ್ಟಂ ತಾವತೋ ವಕ್ತಾ ಇತಿ ಚೇನ್ನ । ಪ್ರಾಯೇಣಾತಥಾಭೂತತ್ವಾದೇವ ಲಕ್ಷ್ಯಾಣಾಂ ತದವ್ಯಾಪ್ತೇಃ । ನ ಹಿ**

**ಕೇನಾಪಿ ಯಾವತ್ ಪ್ರಮಾಣಪ್ರಮಿತಂ ತಾವದಭಿಧೀಯತೇ । ಯಾವತ್ ಪ್ರಮಾಣದೃಷ್ಟಂ ತಾವತ ಏವ ಏವ ವಕ್ತೇತಿ ಚೇನ್ನ । ಅಜ್ಞಾತಸಂದಿಗ್ಧಾನುವಾದ-ವಾಕ್ಯಪ್ರಯೋಕ್ತುರನಾಪ್ತತ್ವಪ್ರಸಂಗಾತ್ । ಭೀಮಾಗ್ರಜಸ್ಯಾಪಿ ಕದಾಚಿತ್ ಚಾಟುವಾದಿತ್ವಸಂಭವೇನ ಅನಾಪ್ತತ್ವಾಪತ್ತೇಶ್ಚ ।**

**ನಿರ್ದೋಷ ಆಪ್ತ ಇತಿ ಚೇನ್ನ । ಆಪ್ತಾನಾಮಪಿ ಕ್ವಚಿದ್ ರಾಗಾದಿದೋಷ-ಸಂಭವಾತ್ । ಯತ್ರ ವಿಷಯೇ ನಿರ್ದೋಷಃ ತತ್ರಾಪ್ತಃ ಇತಿ ಚೇನ್ನ । ಯತ್ತಚ್ಛಬ್ದಯೋರ್ವಿಶೇಷವಿಷಯತ್ವೇನಾಸಾಧಾರಣ್ಯಾದವ್ಯಾಪ್ತೇರಿತಿ ।**

ಯಾರ ವಾಕ್ಯವು ಈ ಶಾಸ್ತ್ರದಲ್ಲಿದೆ ಎಂದು ಹೇಳುತ್ತಿದ್ದೀರೋ ಆ ಆಪ್ತನೆಂದರೆ ಯಾರು? 'ಯಥಾದೃಷ್ಟಾರ್ಥವಾದೀ' 'ಕಂಡದ್ದನ್ನು ಕಂಡಂತೆ ಹೇಳುವವನು ಆಪ್ತ' ಎಂದು ಹೇಳಬಾರದು. ಏಕೆಂದರೆ ಭ್ರಾಂತಿಯಿಂದ ಹೇಗೆ ನೋಡಿರುತ್ತಾನೋ ಹಾಗೆ ನುಡಿಯು-ವವನೂ ಕೂಡ ಆಪ್ತನಾಗಬೇಕಾಗುತ್ತದೆ.

'ಪ್ರಮಾಣದೃಷ್ಟಾರ್ಥವಾದೀ' 'ಪ್ರಮಾಣದಿಂದ ಕಂಡದ್ದನ್ನು ಕಂಡಂತೆ ಹೇಳುವವನು ಆಪ್ತನಾಗಿದ್ದಾನೆ' ಹೀಗೆ ಪ್ರಮಾಣದೃಷ್ಟತ್ವ ಎಂಬ ವಿಶೇಷಣ ನೀಡುತ್ತೇವೆ.

ಇದೂ ಕೂಡ ತಪ್ಪು. ಪ್ರಮಾಣದಿಂದ ನೋಡಿದ್ದನ್ನು ಪ್ರಮಾದ ಮೊದಲಾದ ದೋಷಗಳಿಂದ ವಿಪರೀತವಾಗಿಯೂ ಕೂಡ ಹೇಳುತ್ತಾನೆ. ಅಂತಹ ವ್ಯಕ್ತಿಯಲ್ಲಿ ಈ ಆಪ್ತನ ಲಕ್ಷಣವು ಬರುತ್ತದೆ. ಅವನೂ ಕೂಡ ಆಪ್ತನಾಗಬೇಕಾಗುತ್ತದೆ.

ಪ್ರಮಾಣಗಳಿಂದ ಹೇಗೆ ತಿಳಿದಿದ್ದಾನೋ ಹಾಗೆಯೇ ಹೇಳುವವನು ಆಪ್ತನೆಂದು ಕರೆಸಿಕೊಳ್ಳುತ್ತಾನೆ.

ಇದೂ ಕೂಡ ತಪ್ಪು. ಏಕೆಂದರೆ ಏಕದೇಶದಲ್ಲಿ ಪ್ರಮಾಣಗಳಿಂದ ನೋಡಿದ್ದನ್ನು ಹಾಗೆಯೇ ಹೇಳುತ್ತಾನೆ. ಮತ್ತೊಂದು ಏಕದೇಶದಲ್ಲಿ ಅದಕ್ಕೆ ವಿಪರೀತವಾಗಿಯೂ ಕೂಡ

ಹೇಳುತ್ತಾನೆ. ಇಂತಹ ಸಂದರ್ಭದಲ್ಲೂ 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದೀ' ಎಂಬ ಲಕ್ಷಣವು ಬರುವುದರಿಂದ ಇವನೂ ಕೂಡ ಆಪ್ತನೆನಿಸಬೇಕಾಗುತ್ತದೆ.

'ಯಾವತ್ ಪ್ರಮಾಣದೃಷ್ಟಂ ತಾವತಃ ವಕ್ತಾ' 'ಪ್ರಮಾಣಪ್ರಮಿತವಾದದ್ದೆಲ್ಲವನ್ನೂ ಅದಕ್ಕನುಗುಣವಾಗಿಯೇ ಹೇಳುತ್ತಾನೆ' ಇದು ಆಪ್ತನ ಲಕ್ಷಣ.

ಇದೂ ಕೂಡ ತಪ್ಪು. ಏಕೆಂದರೆ ಪ್ರಾಯಶಃ ಯಾವುದೇ ಆಪ್ತನಲ್ಲೂ ಕೂಡ ಈ ಲಕ್ಷಣವು ಬರುವುದಿಲ್ಲ. ಏಕೆಂದರೆ ಯಾರೊಬ್ಬರೂ ಕೂಡ ಎಷ್ಟು ಪ್ರಮಾಣಪ್ರಮಿತ-ವಾಗಿದೆಯೋ ಅದೆಲ್ಲವನ್ನೂ ಕೂಡ ಹೇಳಲಾರ.

'ಯಾವತ್ ಪ್ರಮಾಣದೃಷ್ಟಂ ತಾವತ ಏವ ವಕ್ತಾ' 'ಪ್ರಮಾಣಗಳಿಂದ ಎಷ್ಟು ತಿಳಿದಿ-ದ್ದಾನೋ ಅಷ್ಟನ್ನು ಮಾತ್ರ ಹೇಳುವವನು ಆಪ್ತನಾಗಿದ್ದಾನೆ.'

ಇದೂ ಕೂಡ ತಪ್ಪು. ಅಜ್ಞಾತಸಂದಿಗ್ಧ ಮತ್ತು ಅನುವಾದ ವಾಕ್ಯಗಳನ್ನು ಯಾರು ಪ್ರಯೋಗಿಸುತ್ತಾನೋ ಅವನೂ ಕೂಡ ಆಪ್ತ ಆಗಬೇಕಾಗುತ್ತದೆ. ಮತ್ತು ಭೀಮಸೇನ-ದೇವರ ಅಣ್ಣನಾದ ಧರ್ಮರಾಜನೂ ಕೂಡ ಒಮ್ಮೊಮ್ಮೆ ಚಾಟುವಚನಗಳನ್ನು ಹೇಳಿರುವ ಸಂದರ್ಭವಿದೆ. ನಿಮ್ಮ ಪ್ರಕಾರ ಇವನೂ ಕೂಡ ಆಪ್ತನಾಗದೇ ಇರಬೇಕಾದೀತು.

'ನಿರ್ದೋಷಃ ಆಪ್ತಃ' – 'ದೋಷವಿಲ್ಲದವನು ಆಪ್ತನಾಗಿದ್ದಾನೆ.'

ಇದೂ ಕೂಡ ತಪ್ಪು. ಏಕೆಂದರೆ ಆಪ್ತರಲ್ಲೂ ಕೂಡ ಕೆಲವೊಮ್ಮೆ ರಾಗಾದಿದೋಷ-ಗಳು ಸಂಭಾವಿತವಾಗಿವೆ.

'ಯತ್ರ ವಿಷಯೇ ನಿರ್ದೋಷಃ ತತ್ರ ಆಪ್ತಃ' 'ಯಾವ ವಿಷಯದಲ್ಲಿ ದೋಷ-ವಿಲ್ಲದವನಾಗಿದ್ದಾನೋ ಆ ವಿಷಯದಲ್ಲಿ ಆಪ್ತನಾಗಿದ್ದಾನೆ'.

ಈ ಆಪ್ತಲಕ್ಷಣವೂ ಕೂಡ ತಪ್ಪು. ಯತ್ ಶಬ್ದ ಮತ್ತು ತತ್ ಶಬ್ದಗಳು ವಿಶೇಷ-ವಿಷಯವಾಗಿರುವುದರಿಂದ ಅಸಾಧಾರಣ್ಯದೋಷವು ಬರುತ್ತದೆ. ಆದ್ದರಿಂದ ಈ ಆಪ್ತ-

ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ, ಯತ್ ಮತ್ತು ತತ್ ಶಬ್ದಗಳು ವ್ಯಕ್ತಿ-ವಿಶೇಷಗಳನ್ನು ಹೇಳುವುದರಿಂದ ಸರ್ವತ್ರ ಅನುಗತವಾಗುವುದಿಲ್ಲ.

## ಹೇತುಸಾಧ್ಯಗಳ ವ್ಯಾಪ್ತಿಪ್ರದರ್ಶನಕ್ಕಾಗಿ ಆಪ್ತತ್ವದ ಪರಿಷ್ಕಾರ

ಪರಿಮಳ– 'ವಿಮತಮ್ ಆಪ್ತವಾಕ್ಯಮ್' ಇತ್ಯಾದಿ ಪ್ರಾಗುಕ್ತಪ್ರಯೋಗೇ ಹೇತು-ಸಾಧ್ಯಯೋರ್ವ್ಯಾಪ್ತಿಂ ಏವಂ ಚ ವಕ್ತುರಿತ್ಯಾದಿನಾ ವ್ಯುತ್ಪಾದಯಿತುಂ 'ಮೈವಮ್' ಇತ್ಯಾದಿನಾ 'ಏವಂ ಚ' ಇತ್ಯಂತೇನಾತ್ರ ವಿವಕ್ಷಿತಾಪ್ತತ್ವಂ ಸಮರ್ಥಯಮಾನ ಆಪ್ತತ್ವ-ಮಾಕ್ಷಿಪತಿ – ನನು ಕೋಽಯಮ್ ಇತ್ಯಾದಿನಾ ಮೈವಮ್ ಇತ್ಯಂತೇನ ॥ ಅಜ್ಞಾತೇತಿ ॥ ಅಜ್ಞಾತಸಂದಿಗ್ಧಾರ್ಥಕವಾಕ್ಯಾನುವಾದರೂಪವಾಕ್ಯಯೋಃ ಪ್ರಯೋಕ್ತುರಿತ್ಯರ್ಥಃ । ತತ್ರಾ-ಜ್ಞಾನಾದಿವಿಷಯಸ್ಯಾಪಿ ವಕ್ತೃತ್ವೇನ ಪ್ರಮಾಣದೃಷ್ಟಸ್ಯೈವ ವಕ್ತೃತ್ವಾಭಾವಾದಿತಿ ಭಾವಃ ॥

'ವಿಮತಂ ಆಪ್ತವಾಕ್ಯಮ್' ವಿಮತವಾದ ಈ ಶಾಸ್ತ್ರವು ಆಪ್ತವಾಕ್ಯವಾಗಿದೆ; ಅನು-ಕೂಲವಕ್ತ್ರಾದಿಗಳು ಇರುವುದರಿಂದ' ಎಂಬ ಅನುಮಾನದಲ್ಲಿ ಆಪ್ತವಾಕ್ಯತ್ವವೆಂಬ ಸಾಧ್ಯದ ಜೊತೆ ಅನುಕೂಲವಕ್ತ್ರಾದಿಮತ್ತ್ವವೆಂಬ ಹೇತುವಿಗೆ ವ್ಯಾಪ್ತಿಯು ಇರುತ್ತದೆ. ಇದನ್ನು 'ಏವಂ ಚ ವಕ್ತುಃ ಆನುಕೂಲ್ಯಂ ನಾಮ' ಇತ್ಯಾದಿ ವಾಕ್ಯದಿಂದ ಮುಂದೆ ತಿಳಿಸುತ್ತಾರೆ. ಅದಕ್ಕಾಗಿ 'ಮೈವಂ' ಎಂಬ ವಾಕ್ಯದಿಂದ 'ಏವಂ ಚ' ಎಂಬ ಗ್ರಂಥದ ತನಕ ಆಪ್ತತ್ವವನ್ನು ಸಮರ್ಥಿಸುವ ಉದ್ದೇಶ-ದಿಂದ ಮೊದಲು ಆಪ್ತತ್ವವೆಂದರೇನು ಎಂಬ ಪೂರ್ವಪಕ್ಷವನ್ನು 'ಕೋಽಯಂ' ಎಂಬಲ್ಲಿಂದ 'ಮೈವಮ್' ಎಂಬಲ್ಲಿಯ ತನಕ ತೋರಿಸುತ್ತಿದ್ದಾರೆ.

'ಅಜ್ಞಾತಸಂದಿಗ್ಧಾನುವಾದಪ್ರಯೋಕ್ತುಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದಕ್ಕೆ ಹೀಗರ್ಥ – 'ತಿಳಿಯಲ್ಪಡದ ವಸ್ತು ಹಾಗೂ ಸಂಶಯಾಸ್ಪದವಾದ ವಸ್ತು ಇವುಗಳನ್ನು ತಿಳಿಸುವ ವಾಕ್ಯ ಹಾಗೂ ಅನುವಾದ ರೂಪವಾದ ವಾಕ್ಯ. ಈ ಎರಡೂ ಬಗೆಯ ವಾಕ್ಯಗಳನ್ನು ಪ್ರಯೋಗ ಮಾಡುವವನಿಗೆ' ಎಂದು. ಈ ವಾಕ್ಯಗಳು ಅಜ್ಞಾನ ಸಂದೇಹಗಳಲ್ಲಿ ಹಾಗೂ ಅನು-ವಾದಗಳಲ್ಲಿ ವಿಷಯವಾದದ್ದನ್ನು ತಿಳಿಸುತ್ತವೆ. ಪ್ರಮಾಣದೃಷ್ಟವಾದ ವಿಷಯವನ್ನು ತಿಳಿಸು-

ವುದಿಲ್ಲ. ಆದ್ದರಿಂದ ಪ್ರಮಾಣದೃಷ್ಟವಾದದ್ದನ್ನೇ ಹೇಳಬೇಕೆಂಬ ಆಪ್ತತ್ವಲಕ್ಷಣವು ಇಂಥ ಅನುವಾದ ವಾಕ್ಯಗಳಲ್ಲಿ ಬರುವುದಿಲ್ಲ ಎಂಬುದು ಇದರ ಅಭಿಪ್ರಾಯ.

## 'ನನು ಕೋಽಯಮ್' ಇತ್ಯಾದಿ ಗ್ರಂಥಕ್ಕೆ ಬಹು ಬಗೆಯ ಪ್ರಯೋಜನಗಳಿವೆ

ವಾಕ್ಯಾರ್ಥಚಂದ್ರಿಕಾ – ನನ್ವಸ್ತು ವಕ್ತ್ರಾದ್ಯಾನುಕೂಲ್ಯಂ, ಮಾಸ್ತು ಚಾಪ್ತವಾಕ್ಯತ್ವಂ, ವಿಪಕ್ಷೇ ಬಾಧಕಾಭಾವಾದಪ್ರಯೋಜಕೋ ಹೇತುರಿತ್ಯತೋ ವ್ಯಾಘಾತರೂಪಂ ವಿಪಕ್ಷೇ ಬಾಧಕಮ್ 'ಏವಂ ಚ' ಇತ್ಯಾದಿನಾ ವಕ್ತುಂ ವಿವಕ್ಷಿತಾರ್ಥತತ್ತ್ವಜ್ಞಾನಾವಿಪ್ರಲಿಪ್ಸಾಕರಣಪಾಟವವಿವಕ್ಷಾಣಾಮ್ ಆಪ್ತಿ-ಶಬ್ದಾರ್ಥತ್ವಂ ವ್ಯವಸ್ಥಾಪಯನ್ ದ್ವಿತೀಯಾನುಮಾನೇ 'ನನ್ವಾಪ್ತೇ'ತ್ಯಾದಿನಾ ಶಂಕಿಷ್ಯಮಾಣ-ವ್ಯಭಿಚಾರಪರಿಹಾರಾಯ 'ಯೋ ಯತ್ರ' ಇತ್ಯಂಶಸ್ಯ ಆಪ್ತಿಶಬ್ದಾಂತರ್ಗತತಾಂ ಚ ವ್ಯವಸ್ಥಾಪಯನ್ ಖಂಡನೋಕ್ತಾಪ್ತಿಲಕ್ಷಣದೂಷಣಮನುವದತಿ – ನನು ಕೋಽಯಮಿತಿ ॥

ಆಪ್ತವಾಕ್ಯತ್ವಸಾಧಕವಾದ ಅನುಮಾನದಲ್ಲಿ 'ವಕ್ತ್ರಾದ್ಯಾನುಕೂಲ್ಯಮಸ್ತು, ಆಪ್ತವಾಕ್ಯತ್ವಂ ಮಾಸ್ತು' ಎಂಬುದಾಗಿ ಅಪ್ರಯೋಜಕಾಶಂಕೆಯು ಬರುತ್ತದೆ. ಇದಕ್ಕೆ ವಿಪಕ್ಷದಲ್ಲಿ ಯಾವುದೇ ಬಾಧಕ-ತರ್ಕವು ಇರುವುದಿಲ್ಲ ಎಂಬುದಾಗಿ ಆಕ್ಷೇಪ ಮಾಡುತ್ತಾರೆ. ಈ ಆಕ್ಷೇಪವನ್ನು ಪರಿಹಾರ ಮಾಡುವುದ-ಕ್ಕಾಗಿ ವ್ಯಾಘಾತರೂಪವಾದ ವಿಪಕ್ಷೇ ಬಾಧಕತರ್ಕವನ್ನು 'ಏವಂ ಚ' ಇತ್ಯಾದಿ ಗ್ರಂಥದಿಂದ ಮುಂದೆ ಹೇಳುವವರಿದ್ದಾರೆ. ಮತ್ತು ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ, ಕರಣಪಾಟವ ಮತ್ತು ವಿವಕ್ಷೆ ಇವುಗಳು ಆಪ್ತಿಶಬ್ದದ ಅರ್ಥ ಎಂಬುದಾಗಿಯೂ ಮುಂದೆ ವ್ಯವಸ್ಥೆ ಮಾಡುವವರಿದ್ದಾರೆ.

ಹಾಗೂ ಎರಡನೆಯ ಅನುಮಾನದಲ್ಲಿ 'ನನು ಆಪ್ತವಾಕ್ಯತಾ' ಇತ್ಯಾದಿ ಗ್ರಂಥದಿಂದ ವ್ಯಭಿಚಾರವನ್ನು ಆಶಂಕಿಸುವವರಿದ್ದಾರೆ. ಅದರ ಪರಿಹಾರಕ್ಕಾಗಿ ಆಪ್ತಿಶಬ್ದಾರ್ಥದಲ್ಲಿ 'ಯಃ, ಯತ್ರ' ಇತ್ಯಾದಿ ಅಂಶಗಳನ್ನು ಸೇರಿಸಬೇಕೆಂದು ವ್ಯವಸ್ಥೆ ಮಾಡಬೇಕಾಗಿದೆ. ಅದಕ್ಕಾಗಿ ಖಂಡನಖಂಡನಖಾದ್ಯನು ಹೇಳಿದ ಆಪ್ತಿಲಕ್ಷಣದ ದೋಷಗಳನ್ನು 'ನನು ಕೋಽಯಮ್' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ.

ವಿವರಣೆ – 'ನನು ಕೋಽಯಮ್' ಇತ್ಯಾದಿ ಗ್ರಂಥಕ್ಕೆ ಅನೇಕ ಪ್ರಯೋಜನಗಳಿವೆ.

(೧.) ಅಪ್ರಯೋಜಕಾಶಂಕೆಗೆ ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳುವಿಕೆ. (೨) ಆಪ್ತಿಶಬ್ದಾರ್ಥ-ವನ್ನು ವ್ಯವಸ್ಥೆ ಮಾಡುವಿಕೆ. (೩) ಆಪ್ತಿಲಕ್ಷಣದಲ್ಲಿ ಯೋ, ಯತ್ರ ಇತ್ಯಾದಿ ಶಬ್ದಗಳನ್ನು ಸೇರಿಸುವ ಮೂಲಕ ವ್ಯವಸ್ಥೆ ಮಾಡುವಿಕೆ. (೪) ಖಂಡನಖಂಡಖಾದ್ಯಕಾರ ಹೇಳಿದ ಆಪ್ತಿಲಕ್ಷಣದೂಷಣದ ಅನುವಾದ ಮಾಡುವಿಕೆ. ಹೀಗೆ ಅನೇಕಪ್ರಯೋಜನಗಳನ್ನು ಉದ್ದೇಶವಾಗಿಟ್ಟುಕೊಂಡು 'ನನು ಕೋಽಯಮ್' ಇತ್ಯಾದಿ ಗ್ರಂಥವು ಹೊರಟಿದೆ.

## ಮೂರು ಆಪ್ತಲಕ್ಷಣದಲ್ಲಿರುವ ವ್ಯತ್ಯಾಸ

ವಾಕ್ಯಾರ್ಥಚಂದ್ರಿಕಾ – ಲೋಕೇ ಪ್ರಾಯಶೋ ಯಥಾದೃಷ್ಟಾರ್ಥವಾದ್ಯಾದಿಷು ಆಪ್ತತ್ವವ್ಯವಹಾರಾದೇಷಾಂ ಪಕ್ಷಾಣಾಂ ಪ್ರಸಕ್ತಿರಿತಿ ದ್ರಷ್ಟವ್ಯಮ್ । ಯಥಾದೃಷ್ಟಾರ್ಥವಾದಿತ್ವಮಾಪ್ತತ್ವಂ ವಿವಕ್ಷಿತಂ ಪ್ರಮಾಣದೃಷ್ಟಾರ್ಥವಾದಿತ್ವಂ ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ ವಾ । ಅತ್ರ ಪ್ರಥಮೇ ದೃಷ್ಟಾನತಿಕ್ರಮಮಾತ್ರಂ ವಾದೇ ವಿವಕ್ಷಿತಂ, ದರ್ಶನಪ್ರಾಮಾಣ್ಯೇ ತು ಔದಾಸೀನ್ಯಮ್, ದ್ವಿತೀಯೇ ವಿಪರೀತಂ, ತೃತೀಯೇ ತೂಭಯಂ ವಿವಕ್ಷಿತಮಿತಿ ದ್ರಷ್ಟವ್ಯಮ್ । ತತ್ರಾದ್ಯಮುತ್ಥಾಪ್ಯ, ತಥಾತ್ವೇ ದೇಹಾತ್ಮನೋರ್ಭ್ರಾಂತ್ಯೈಕತ್ವಂ ಪ್ರತಿಪದ್ಯ ದೇಹ ಏವಾತ್ಮಾ ಇತಿ ವ್ಯವಹರತೋಽಪ್ಯಾಪ್ತತ್ವಂ ಸ್ಯಾದಿತ್ಯಾಹ – ಭ್ರಾಂತೀತಿ ॥

ಲೋಕದಲ್ಲಿ ಕಂಡದ್ದನ್ನು ಕಂಡಂತೆ ಹೇಳುವವರನ್ನು ಆಪ್ತರೆನ್ನುತ್ತಾರೆ. ಹಾಗೂ ಇನ್ನು ಬೇರೆ ಯಾವ ಸ್ವರೂಪದಲ್ಲಿರುವವರನ್ನು ಆಪ್ತರೆಂದು ಹೇಳುತ್ತಾರೋ ಆ ಪಕ್ಷಗಳನ್ನಷ್ಟೇ ಇಲ್ಲಿ ವಿವಕ್ಷಿಸಲಾಗಿದೆ.

'ಯಥಾ ದೃಷ್ಟಾರ್ಥವಾದಿತ್ವಂ ಆಪ್ತತ್ವಂ' 'ಕಂಡದ್ದನ್ನು ಕಂಡಂತೆ ಹೇಳುವವನನ್ನು ಆಪ್ತ'ನೆಂದು ವಿವಕ್ಷಿಸುತ್ತೀರೋ, ಅಥವಾ 'ಪ್ರಮಾಣದೃಷ್ಟಾರ್ಥವಾದಿತ್ವಂ' 'ಪ್ರಮಾಣದಿಂದ ತಿಳಿದದ್ದನ್ನು ಹೇಳು-ವವನನ್ನು ಆಪ್ತನೆಂದು ವಿವಕ್ಷಿಸುತ್ತೀರೋ' ಅಥವಾ 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ' 'ಪ್ರಮಾಣದಿಂದ ಹೇಗೆ ಕಂಡಿದೆಯೋ ಅದಕ್ಕನುಗುಣವಾಗಿ ಹೇಳುವವನನ್ನು ಆಪ್ತನೆಂದು ವಿವಕ್ಷಿಸು-ತ್ತೀರೋ'

ಈ ಮೂರು ಪಕ್ಷಗಳಲ್ಲಿ ವ್ಯತ್ಯಾಸವನ್ನು ಹೀಗೆ ತಿಳಿಯಬೇಕು – ಮೊದಲನೆಯ ಪಕ್ಷದಲ್ಲಿ ಅನುವಾದ ಮಾಡುವ ವಾಕ್ಯವು ದರ್ಶನಕ್ಕೆ ಅನುಗುಣವಾಗಿರುತ್ತದೆ. ನೋಡಿದ್ದನ್ನು ಯಥಾವತ್ತಾಗಿ ಅನುವಾದ ಮಾಡುತ್ತಾನೆ. ಅನುವಾದಕ್ಕೂ ದರ್ಶನಕ್ಕೂ ಸಮಾನವಿಷಯಕತ್ವವು ಇರುತ್ತದೆ. ಆದರೆ

ನೋಡಿದ್ದು ಯಥಾರ್ಥವೇ ಆಗಿರಬೇಕೆಂದಿಲ್ಲ. ದರ್ಶನಪ್ರಾಮಾಣ್ಯದಲ್ಲಿ ಔದಾಸೀನ್ಯವಿದೆ. ಎರಡನೆಯ ಪಕ್ಷದಲ್ಲಿ ವಿಪರೀತವಾಗಿರುತ್ತದೆ. ಮೂರನೆಯ ಪಕ್ಷದಲ್ಲಿ ಎರಡೂ ಕೂಡ ವಿವಕ್ಷಿತವಾಗಿರುತ್ತದೆಂದು ತಿಳಿಯಬೇಕು. ಈ ಮೂರೂ ಪಕ್ಷಗಳಲ್ಲಿ ಮೊದಲನೆಯದ್ದನ್ನು ವಿವಕ್ಷಿಸಿ ಹೀಗೆ ಹೇಳುತ್ತಿದ್ದಾರೆ. ಹಾಗಾದರೆ ದೇಹ ಮತ್ತು ಆತ್ಮನಿಗೆ ಐಕ್ಯಭ್ರಾಂತಿಯನ್ನು ಸ್ವತಃ ಚಾರ್ವಾಕನು ತಿಳಿದು 'ದೇಹವೇ ಆತ್ಮ' ಎಂದು ವ್ಯವಹರಿಸುತ್ತಾನೆ. ಇವನೂ ಕೂಡ ಆಪ್ತನಾಗಬೇಕಾದೀತು. ಇದನ್ನು 'ಭ್ರಾಂತಿದೃಷ್ಟಾಂತವಾದಿನ್ಯಪಿ' ಎಂದು ಹೇಳಿದ್ದಾರೆ.

ವಿವರಣೆ – ಆಪ್ತನ ಲಕ್ಷಣವನ್ನು ಅನೇಕ ಬಗೆಯಲ್ಲಿ ಹೇಳುತ್ತಿದ್ದಾರೆ. ಆದರೆ ಕೇವಲ ಊಹೆ ಮಾಡಿಕೊಂಡು ಇಲ್ಲಿ ಲಕ್ಷಣಗಳನ್ನು ಹೇಳುತ್ತಿಲ್ಲ. ಲೋಕದಲ್ಲಿ ಪ್ರಸಿದ್ಧವಾದ ಪಕ್ಷಗಳನ್ನಷ್ಟೇ ವಿವಕ್ಷಿಸಿದ್ದಾರೆ. ಆದ್ದರಿಂದ ಇಷ್ಟೇ ಪಕ್ಷಗಳಲ್ಲದೇ ಇನ್ನೂ ಹಲವು ರೀತಿಯಲ್ಲಿ ವಿಕಲ್ಪಗಳನ್ನು ಮಾಡಬಹುದಿತ್ತೆಂಬ ಶಂಕೆಗೆ ಅವಕಾಶವಿಲ್ಲ.

'ಯಥಾ ದೃಷ್ಟಾರ್ಥವಾದಿತ್ವಂ ಆಪ್ತತ್ವಮ್' ಎಂಬುದು ಮೊದಲನೆಯ ಲಕ್ಷಣ. ಜ್ಞಾನದಲ್ಲಿ ಮತ್ತು ಅನುವಾದ ಮಾಡುವ ವಾಕ್ಯದಲ್ಲಿ ಸಮಾನವಿಷಯವೇ ಇರುತ್ತದೆ. ಅಪ್ರಮಾಣವಾಗಿ ಕಂಡದ್ದನ್ನು ಹಾಗೆ ಅನುವಾದ ಮಾಡುತ್ತಾನೆ. ಪ್ರಮಾಣವಾಗಿ ಕಂಡದ್ದನ್ನೂ ಹಾಗೇ ಅನುವಾದ ಮಾಡುತ್ತಾನೆ. ಪ್ರಮಾಣವಾಗಿ ಕಂಡದ್ದನ್ನು ಅನ್ಯಥಾಭೂತವಾಗಿ ಅನುವಾದ ಮಾಡಲಾರ. ಆದರೆ 'ಪ್ರಮಾಣದೃಷ್ಟಾರ್ಥವಾದಿತ್ವಂ' ಎಂಬ ಎರಡನೆಯ ಪಕ್ಷದಲ್ಲಿ ಹಾಗಲ್ಲ. ಯಥಾರ್ಥವಾಗಿ ವಸ್ತುವನ್ನು ತಿಳಿದಿರುತ್ತಾನೆ. ಅನುವಾದ ಮಾಡುವಾಗ ವಿಪರೀತವಾಗಿ ಜ್ಞಾನಬರುವಂತೆ ಹೇಳುತ್ತಾನೆ. ಯಥಾರ್ಥವಾಗಿ ಕಂಡದ್ದನ್ನು ಅಯಥಾರ್ಥವಾಗಿ ಹೇಳುತ್ತಾನೆ. ಅಯಥಾರ್ಥವಾಗಿ ಕಂಡದ್ದನ್ನು ಯಥಾರ್ಥವಾಗಿ ಹೇಳುತ್ತಾನೆ. ಮೂರನೆಯ 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ' ಎಂಬ ಪಕ್ಷದಲ್ಲಿ ಹೇಗೆ ಕಂಡಿರುತ್ತಾನೋ ಹಾಗೆಯೇ ಹೇಳುತ್ತಾನೆ. ಅಥವಾ ವಿಪರೀತವಾಗಿಯೂ ಕೂಡ ಹೇಳುತ್ತಾನೆ. ದರ್ಶನದಲ್ಲಿ ಪ್ರಾಮಾಣ್ಯವೂ ವಿವಕ್ಷಿತ. ಅನುವಾದದಲ್ಲಿ ಅನತಿಕ್ರಮವೂ ಕೂಡ ವಿವಕ್ಷಿತ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ದರ್ಶನದಲ್ಲಿ ಪ್ರಾಮಾಣ್ಯವು ವಿವಕ್ಷಿತವಲ್ಲ. ಅನುವಾದದಲ್ಲಿ ಅನತಿಕ್ರಮವಷ್ಟೇ ವಿವಕ್ಷಿತ. ಎರಡನೆಯ ಪಕ್ಷದಲ್ಲಿ ದರ್ಶನದಲ್ಲಿ ಪ್ರಾಮಾಣ್ಯವು ವಿವಕ್ಷಿತ. ಆದರೆ ಅನುವಾದದಲ್ಲಿ ಅನತಿಕ್ರಮವು ವಿವಕ್ಷಿತ. ಮೂರನೆಯ ಪಕ್ಷದಲ್ಲಿ ದರ್ಶನದಲ್ಲಿ ಪ್ರಾಮಾಣ್ಯವು ವಿವಕ್ಷಿತ. ಅನುವಾದದಲ್ಲಿ ಅನತಿಕ್ರಮವೂ ವಿವಕ್ಷಿತ. ಹೀಗೆ ಮೂರುಪಕ್ಷಗಳಲ್ಲಿ ವ್ಯತ್ಯಾಸವನ್ನು ಗಮನಿಸಬೇಕು.

# 'ಪ್ರಮಾಣದೃಷ್ಟಾರ್ಥವಾದಿತ್ವಂ' ಎಂಬ ಆಪ್ತನ ಲಕ್ಷಣಕ್ಕೆ ದೋಷಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ದ್ವಿತೀಯಮುತ್ಥಾಪ್ಯ, ತಥಾ ಸತಿ ಪ್ರಮಾಣೇನ ಇಂದ್ರಿಯಾಣಾಂ ಪ್ರಾಕೃತತ್ವಂ ಪ್ರತಿಪದ್ಯ ಪ್ರಮಾದಾದಿನಾ ಭೌತಿಕಾನಿ ಇಂದ್ರಿಯಾಣಿ ಇತಿ ವಾದಿನಃ ಸಾಂಖ್ಯಸ್ಯಾಪ್ತತ್ವಂ ಸ್ಯಾದಿತ್ಯಾಹ – ಪ್ರಮಾಣೇತಿ ॥ ತೃತೀಯೇಽಪಿ ಯಥಾ ಪ್ರಮಾಣೇತಿವಿಶೇಷಣದ್ವಯಸ್ಯೈವ ವಿವಕ್ಷಾ, ಯಾವದಿತ್ಯಪಿ ವಾ ವಿವಕ್ಷಿತಮ್ । ನಾದ್ಯಃ । 'ಗ್ರಾವಾಣಃ ಪ್ಲವಂತೇ' ಇತಿ ವಾದಿನೋಽಪಿ 'ಗ್ರಾವಾಣಃ' ಇತ್ಯಂಶೇ ತಥಾಭೂತವಾದಿತ್ವಾತ್ 'ಪ್ಲವಂತೇ' ಇತ್ಯಂಶೇ ಚಾತಥಾಭೂತವಾದಿತ್ವಾತ್ ಆಪ್ತತ್ವಾಪತ್ತಿರಿತ್ಯಾಹ – ಏಕದೇಶ ಇತಿ ॥

ಎರಡನೆಯ 'ಪ್ರಮಾಣದೃಷ್ಟಾರ್ಥವಾದಿತ್ವಂ' ಎಂಬುದು ಆಪ್ತನ ಲಕ್ಷಣ ಎಂಬುದನ್ನು ವಿವಕ್ಷಿಸಿದಾಗ ಸಾಂಖ್ಯನೂ ಕೂಡ ಆಪ್ತನಾಗಬೇಕಾಗುತ್ತದೆ. ಸಾಂಖ್ಯನು ಇಂದ್ರಿಯಗಳು ಪ್ರಾಕೃತವಾಗಿವೆ ಎಂಬುದಾಗಿ ಪ್ರಮಾಣದಿಂದ ತಿಳಿದಿರುತ್ತಾನೆ. ಆದರೆ ಪ್ರಮಾದದಿಂದ ಇಂದ್ರಿಯಗಳನ್ನು ಭೌತಿಕವೆಂದು ಹೇಳುತ್ತಾನೆ. ಹೇಗೆ ತಿಳಿದಿದ್ದಾನೋ ಹಾಗೆಯೇ ಹೇಳದೇ ವಿಪರೀತವಾಗಿ ಹೇಳುತ್ತಾನೆ. ಇವನಲ್ಲಿ ಆಪ್ತನ ಲಕ್ಷಣವು ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ. ಇದನ್ನು 'ಪ್ರಮಾಣದೃಷ್ಟ' ಎಂಬ ವಾಕ್ಯದಿಂದ ಹೇಳಿರುತ್ತಾರೆ.

'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಮ್' ಎಂಬ ಮೂರನೆಯ ಪಕ್ಷವನ್ನು ಒಪ್ಪಿದರೆ ಇಲ್ಲಿ ಪುನಃ ಎರಡು ರೀತಿಯಲ್ಲಿ ವಿಕಲ್ಪ ಮಾಡುತ್ತೇವೆ. 'ಯಥಾ, ಪ್ರಮಾಣಂ' ಎಂಬ ಎರಡು ವಿಶೇಷಣಗಳಷ್ಟೇ ವಿವಕ್ಷಿತವೋ ಅಥವಾ 'ಯಾವತ್' ಎಂಬುದು ಕೂಡ ವಿವಕ್ಷಿತವೋ. ಮೊದಲನೆಯ ಪಕ್ಷವು ತಪ್ಪು. ಏಕೆಂದರೆ 'ಗ್ರಾವಾಣಃ ಪ್ಲವಂತೇ' 'ಕಲ್ಲುಗಳು ಹಾರುತ್ತವೆ' ಎಂಬುದಾಗಿ ಒಬ್ಬನು ಹೇಳುತ್ತಾನೆ. ವಾಸ್ತವಿಕವಾಗಿ ಕಲ್ಲುಗಳು ಹಾರಲು ಸಾಧ್ಯವೇ ಇಲ್ಲ. ಹಾಗಾಗಿ ಕಲ್ಲುಗಳು ಹಾರುತ್ತವೆಂದು ಹೇಳುವವನು ಆಪ್ತನಾಗಲು ಸಾಧ್ಯವಿಲ್ಲ. ಆದರೆ ಗ್ರಾವಾಣಃ ಎಂಬಂಶದಲ್ಲಿ ಹೇಗೆ ಜ್ಞಾನವನ್ನು ಪಡೆದಿದ್ದಾನೋ ಹಾಗೆಯೇ ಹೇಳುತ್ತಿದ್ದಾನೆ. ಆದರೆ ಪ್ಲವಂತೇ ಎಂಬಂಶದಲ್ಲಿ ತಥಾಭೂತವಾದಿಯು ಆಗಿರುವುದಿಲ್ಲ.

ಆದ್ದರಿಂದ 'ಗ್ರಾವಾಣಃ ಪ್ಲವಂತೇ' ಎಂದು ಹೇಳುವವನು ಕೂಡ ಆಪ್ತನಾಗಬೇಕಾಗುತ್ತದೆ. ಇದನ್ನು 'ಏಕದೇಶೇ ತಥಾಭೂತವಾದಿತ್ವೇಽಪಿ' ಎಂಬ ವಾಕ್ಯದಿಂದ ಹೇಳಿರುತ್ತಾರೆ.

## ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ ಎಂಬ ಮೂರನೆಯ ಲಕ್ಷಣಕ್ಕೆ ದೋಷಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ದ್ವಿತೀಯೇಽಪಿ ಯಾವದಿತ್ಯವಧಾರಣಂ ಕಾರ್ತ್ಸ್ನ್ಯಾರ್ಥಮ್ ಉತ ಅನ್ಯಯೋಗವ್ಯವಚ್ಛೇದಾರ್ಥಮ್ । ನಾದ್ಯಃ । ಆಪ್ತತ್ವೇನಾಭಿಮತಾನಾಂ, ಪ್ರಮಾಣದೃಷ್ಟಸ್ಯ ಕಾರ್ತ್ಸ್ನ್ಯೇನಾವಕ್ತೃತ್ವಾತ್ ಅವ್ಯಾಪ್ತಿರಿತ್ಯಾಹ – ಪ್ರಾಯೇಣೇತಿ ॥ ಅಸಂಭವೇ ಪ್ರಸಂಜನೀಯೇಽ-ವ್ಯಾಪ್ತಿಃ ಕುತಃ ಪ್ರಸಜ್ಯತ ಇತ್ಯತಃ ಪ್ರಾಯೇಣೇತ್ಯುಕ್ತಮ್ । ತದೇವೋಪಪಾದಯತಿ – ನ ಹೀತಿ ॥ ಕೇನಾಪೀತಿ ॥ ಅಸ್ಮತ್ ಪರಿಚಿತೇನೇತ್ಯರ್ಥಃ । ದ್ವಿತೀಯಮುತ್ಥಾಪಯತಿ – ಯಾವದಿತಿ ॥ ಭ್ರಾಂತಿದೃಷ್ಟವಾದಿನಿ ಲೋಕೇ ಅನಾಪ್ತವ್ಯವಹಾರೇಽಪಿ ಅಜ್ಞಾತವಾಕ್ಯಪ್ರಯೋಕ್ತರಿ, ಸಂದಿಗ್ಧವಾಕ್ಯ-ಪ್ರಯೋಕ್ತರಿ ಅನುವಾದವಾಕ್ಯಪ್ರಯೋಕ್ತರಿ ಚ ಲೋಕೇಽನಾಪ್ತತ್ವವ್ಯವಹಾರಾಭಾವೇನ, ತೇಷಾಮಪಿ ಲಕ್ಷ್ಯತ್ವಾತ್ ತತ್ರ ಚ ಲಕ್ಷಣಾಭಾವೇನ ಅವ್ಯಾಪ್ತಿಃ ಸ್ಯಾದಿತ್ಯಾಹ – ಅಜ್ಞಾತೇತಿ ॥ ಭೀಮಾ-ಗ್ರಜಸ್ಯಾಪೀತಿ ॥ ಪ್ರತಿಪಕ್ಷಸೇನಾನಿವಿಷ್ಟಾನಾಮಪಿ ಆಪ್ತತ್ವೇನ ಸಮ್ಮತಸ್ಯ ಯುಧಿಷ್ಠಿರಸ್ಯ ಕದಾಚಿತ್ ಅನೃತವಾದಿತ್ವದರ್ಶನೇನ ತತ್ರಾಪಿ ಅವ್ಯಾಪ್ತಿರಿತ್ಯರ್ಥಃ।

ಎರಡನೆಯ ಪಕ್ಷದಲ್ಲೂ ಕೂಡ 'ಯಾವತ್' ಎಂಬ ಅವಧಾರಣವು ಕಾರ್ತ್ಸ್ನ್ಯಾರ್ಥದಲ್ಲಿ ಪ್ರಯುಕ್ತವಾಗಿದೆಯೋ ಅಥವಾ ಅನ್ಯಯೋಗವ್ಯವಚ್ಛೇದಾರ್ಥದಲ್ಲಿ ಪ್ರಯುಕ್ತವಾಗಿದೆಯೋ? ಮೊದಲನೆಯ ಪಕ್ಷ ತಪ್ಪು. ಆಪ್ತತ್ವೇನ ಅಭಿಮತರಾದ ಹಯಗ್ರೀವದೇವರು ಅಥವಾ ವೇದವ್ಯಾಸ-ದೇವರು ಪ್ರಮಾಣದಿಂದ ದೃಷ್ಟವಾದದ್ದನ್ನೆಲ್ಲಾ ಸರ್ವಥಾ ಹೇಳಿರುವುದಿಲ್ಲ. ಆದ್ದರಿಂದ ಅವರಲ್ಲಿ ಅವ್ಯಾಪ್ತಿಯು ಬರುತ್ತಿದೆ. ಇದನ್ನು 'ಪ್ರಾಯೇಣ' ಇತ್ಯಾದಿಯಾಗಿ ಹೇಳಿರುತ್ತಾರೆ. ಯಾರೂ ಸಹ ತಮಗೆ ಪ್ರಮಾಣದಿಂದ ತಿಳಿದಿದ್ದೆಲ್ಲವನ್ನೂ ಹೇಳುವುದಿಲ್ಲ. ಆದ್ದರಿಂದ ಅಸಂಭವದೋಷವನ್ನೇ ಹೇಳಬಹು-ದಿತ್ತು. ಅವ್ಯಾಪ್ತಿಯನ್ನು ಏಕೆ ಹೇಳಿದರು? ಎಂಬ ಪ್ರಶ್ನೆಗೆ 'ಪ್ರಾಯೇಣ' ಎಂಬುದರಿಂದ ಉತ್ತರಿಸಿದ್ದಾರೆ. ಕೆಲವೊಬ್ಬರು ಪ್ರಮಾಣಪ್ರಮಿತವಾದದ್ದೆಲ್ಲವನ್ನೂ ಹೇಳುತ್ತಾರೆ. ಕೆಲವರು ಮಾತ್ರ ಹೇಳುವುದಿಲ್ಲ. ಆದಕ್ಕಾಗಿ ಪ್ರಾಯೇಣ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದನ್ನೇ ಉಪಪಾದನೆ ಮಾಡುವುದಕ್ಕಾಗಿ 'ನ ಹಿ' ಇತ್ಯಾದಿ ಗ್ರಂಥವು ಹೊರಟಿದೆ. 'ಕೇನಾಪಿ' ಎಂಬ ಪದಕ್ಕೆ ನಮ್ಮ ಪರಿಚಿತರಾದವರು ಎಂದರ್ಥ.

'ಅನ್ಯಯೋಗವ್ಯವಚ್ಛೇದಾರ್ಥಂ' ಎಂಬ ಎರಡನೆಯ ಅರ್ಥವನ್ನು 'ಯಾವತ್' ಇತ್ಯಾದಿ-ಯಾಗಿ ಹೇಳುತ್ತಿದ್ದಾರೆ. ಲೋಕದಲ್ಲಿ ಭ್ರಾಂತಿಯಿಂದ ಕಂಡದ್ದನ್ನು ಯಾರು ಹೇಳುತ್ತಾನೋ ಅವನನ್ನು

ಅನಾಪ್ತನೆಂದು ವ್ಯವಹರಿಸುತ್ತಾರೆ. ಆದರೆ ತನಗೆ ತಿಳಿಯದೇ ಇರುವ ವಿಷಯದಲ್ಲಿ ವಾಕ್ಯಪ್ರಯೋಗ ಮಾಡುವವನನ್ನು ಯಾರೂ ಕೂಡ ಅನಾಪ್ತನೆಂದು ಹೇಳುವುದಿಲ್ಲ. ಇದರಂತೆ ಸಂದೇಹವುಳ್ಳ ವಿಷಯದಲ್ಲಿ ಅನುವಾದಕವಾದ ವಾಕ್ಯಪ್ರಯೋಗ ಮಾಡುವವನನ್ನು ಅನಾಪ್ತನೆಂದು ಯಾರೂ ಕೂಡ ವ್ಯವಹರಿಸುವುದಿಲ್ಲ. ಆದ್ದರಿಂದ ಇವರೂ ಕೂಡ ಲಕ್ಷ್ಯರೇ ಆಗಿರುವುದರಿಂದ ಆಪ್ತಲಕ್ಷಣವು ಇವರಲ್ಲಿ ಬರಬೇಕು. ಆದರೆ ಲಕ್ಷಣವು ಬರುತ್ತಿಲ್ಲವಾದ್ದರಿಂದ ಅವ್ಯಾಪ್ತಿ ಬರುತ್ತದೆಂದು 'ಅಜ್ಞಾತ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ.

'ಭೀಮಾಗ್ರಜಸ್ಯಾಪಿ' – ಪ್ರತಿಪಕ್ಷಸೇನೆಯಲ್ಲಿದ್ದರೂ ಕೂಡ ಯುಧಿಷ್ಠಿರನು ಆಪ್ತನಾಗಿದ್ದಾನೆಂದು ದ್ರೋಣಾದ್ಯಾಚಾರ್ಯರು ಹೇಳಿದ್ದಾರೆ. ಆದರೆ ಈ ಯುಧಿಷ್ಠಿರನೂ ಕೂಡ ಕೆಲವೊಮ್ಮೆ ಸುಳ್ಳು ಹೇಳಿದ್ದಾನೆ. ಆದ್ದರಿಂದ ಅವ್ಯಾಪ್ತಿ ಬರುತ್ತದೆಂದು ತಿಳಿಯಬೇಕು.

ವಿವರಣೆ – ಅಜ್ಞಾತಸಂದಿಗ್ಧಾನುವಾದವಾಕ್ಯಪ್ರಯೋಕ್ತುಃ ಎಂಬುದಕ್ಕೆ ಯಾದುಪತ್ಯದಲ್ಲಿ ಕೇಚಿತ್ತು ಎಂಬ ವಾಕ್ಯದಿಂದ ಯಾರ ಮತವನ್ನು ಅನುವಾದ ಮಾಡಿದ್ದಾರೋ ಅದು ವಾಕ್ಯಾರ್ಥಚಂದ್ರಿಕಾರರ ಪಕ್ಷವಾಗಿದೆ. ಅಜ್ಞಾತೇ, ಸಂದಿಗ್ಧೇ, ಅನುವಾದೇ ಚ ಯದ್ವಾಕ್ಯಂ, ತತ್ಪ್ರಯೋಕ್ತುಃ ಆಪ್ತತ್ವಂ ಸ್ಯಾತ್ ಎಂಬುದಾಗಿ ವಾಕ್ಯಾರ್ಥಚಂದ್ರಿಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಪರಿಮಳ ಮತ್ತು ಯಾದುಪತ್ಯಗಳಲ್ಲಿ ಅಜ್ಞಾತವಾದ ಮತ್ತು ಸಂದಿಗ್ಧವಾದ ಅನುವಾದವಾಕ್ಯವನ್ನು ಪ್ರಯೋಗಮಾಡುವವನು ಎಂಬರ್ಥವನ್ನು ತಿಳಿಸಿದ್ದಾರೆ. ಈ ಎರಡೂ ವ್ಯಾಖ್ಯಾನಗಳು ಸಮಂಜಸವೇ ಆಗಿವೆ.

## 'ನಿರ್ದೋಷಃ ಆಪ್ತಃ' ಎಂಬ ಲಕ್ಷಣಕ್ಕೆ ಅವ್ಯಾಪ್ತಿದೋಷ

ವಾಕ್ಯಾರ್ಥಚಂದ್ರಿಕಾ– ಏವಂ ದೃಷ್ಟಿಗರ್ಭಲಕ್ಷಣಾನಿ ನಿರಾಕೃತ್ಯ ಲಕ್ಷಣಾಂತರಂ ನಿರಾಕರೋತಿ – ನಿರ್ದೋಷ ಇತಿ ॥ ಅತ್ರ ನಿರ್ದೋಷತ್ವಂ ಸರ್ವಥಾ ವಿವಕ್ಷಿತಮ್, 'ಯತ್ರ ವಿಷಯೇ' ಇತಿ ವಿಶೇಷಿತಂ ವಾ । ಆದ್ಯೇ ಭೀಮಾಗ್ರಜಾದಾವವ್ಯಾಪ್ತಿರಿತ್ಯಾಹ – ಆಪ್ತಾನಾಮಪಿ ॥ ದ್ವಿತೀಯೇ ಶಂಕತೇ – ಯತ್ರೇತಿ ॥ ಏತಚ್ಚ ಉಪಲಕ್ಷಣಮ್ । ಪ್ರಥಮಪಕ್ಷೇಽಪಿ ಏವಂ ವಿವಕ್ಷಾಯಾಮ್ ಏತದೇವ ದೂಷಣಂ ಸ್ಯಾದಿತ್ಯಪಿ ದ್ರಷ್ಟವ್ಯಮ್ । ಅತ ಏವಾಂತೇ ತಸ್ಯ ನಿವೇಶನಮ್ ।

ಹೀಗೆ ದೃಷ್ಟಿಗರ್ಭಲಕ್ಷಣಗಳನ್ನು ನಿರಾಕರಣೆ ಮಾಡಿ ಮತ್ತೊಂದು ಲಕ್ಷಣವನ್ನು ಪ್ರಕೃತ 'ನಿರ್ದೋಷಃ' ಇತ್ಯಾದಿಯಾಗಿ ನಿರಾಕರಣೆ ಮಾಡುತ್ತಿದ್ದಾರೆ. ಇಲ್ಲಿ ಸರ್ವಥಾ ನಿರ್ದೋಷತ್ವವಿರ-

ಬೇಕೆಂದು ವಿವಕ್ಷಿಸುತ್ತೀರೋ ಅಥವಾ ಯತ್ರ ವಿಷಯೇ ಎಂಬ ವಿಶೇಷಣವನ್ನು ನೀಡಿ ವಿವಕ್ಷಿಸುತ್ತೀರೋ? ಪ್ರಥಮಪಕ್ಷದಲ್ಲಿ ಧರ್ಮರಾಜನಲ್ಲೂ ಕೂಡ ಸರ್ವಥಾ ನಿರ್ದೋಷತ್ವವಿರಲು ಸಾಧ್ಯವಿಲ್ಲದ ಕಾರಣ ಅವ್ಯಾಪ್ತಿ ಬರುತ್ತದೆಂದು 'ಆಪ್ತಾನಾಂ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಎರಡನೆಯ ಪಕ್ಷದಲ್ಲಿ 'ಯತ್ರ' ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಇದು ಉಪಲಕ್ಷಣವಾಗಿದೆ. ಪ್ರಥಮಪಕ್ಷದಲ್ಲೂ ಕೂಡ ಇದನ್ನು ವಿವಕ್ಷಿಸಿದರೆ ಇದೇ ಅಸಾಧಾರಣ್ಯದೋಷವು ಬರುತ್ತದೆಂದು ಕೂಡ ತಿಳಿಯಬೇಕು. ಪ್ರಥಮಪಕ್ಷದಲ್ಲೂ ಈ ದೋಷ ಸಮಾನವಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಕೊನೆಯಲ್ಲಿ ಇದನ್ನು ನಿವೇಶ ಮಾಡಿದ್ದಾರೆ.

ವಿವರಣೆ – ಇಲ್ಲಿಯ ತನಕ ಹೇಳಿದ 'ಯಥಾದೃಷ್ಟಾರ್ಥವಾದಿತ್ವಂ' 'ಪ್ರಮಾಣದೃಷ್ಟಾರ್ಥವಾದಿತ್ವಂ' 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ' ಎಂಬ ಎಲ್ಲ ಲಕ್ಷಣಗಳಲ್ಲೂ ದೃಷ್ಟಿ ಎಂಬ ಪದವು ಗರ್ಭಿತವಾಗಿದೆ. ಆ ಎಲ್ಲಾ ಲಕ್ಷಣಗಳನ್ನು ಕ್ರೋಢೀಕರಣಮಾಡಿ 'ದೃಷ್ಟಿಗರ್ಭಲಕ್ಷಣಾನಿ' ಎಂದು ಹೇಳಿದ್ದಾರೆ. ಈ ಎಲ್ಲಾ ಬಗೆಯ ದೃಷ್ಟಿಗರ್ಭ ಲಕ್ಷಣಗಳನ್ನು ನಿರಾಕರಣೆ ಮಾಡಿ ಈಗ ದೃಷ್ಟಿಗರ್ಭವಲ್ಲದ ಮತ್ತೊಂದು ಲಕ್ಷಣವನ್ನು ನಿರಾಕರಣೆ ಮಾಡಲು ಪ್ರವೃತ್ತರಾಗಿದ್ದಾರೆ.

'ನಿರ್ದೋಷಃ ಆಪ್ತಃ' ಎಂಬ ಈ ಲಕ್ಷಣದಲ್ಲಿ ಯಾವುದೇ ಕಾರಣದಿಂದಲೂ ಅಥವಾ ಯಾವುದೇ ರೀತಿಯಲ್ಲಿ ದೋಷವಿರಬಾರದು ಎಂಬರ್ಥವನ್ನು ವಿವಕ್ಷಿಸಿದರೆ ಇದು ಯಾರಲ್ಲೂ ಕೂಡ ಬರಲು ಸಾಧ್ಯವೇ ಇಲ್ಲ. ಧರ್ಮರಾಜನಲ್ಲೂ ಕೂಡ ಯಾವುದೇ ಥರ ನಿರ್ದೋಷತ್ವವಿರಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷಣಕ್ಕೆ ಅವ್ಯಾಪ್ತಿ ಬರುತ್ತದೆ. ಸರ್ವಥಾ ನಿರ್ದೋಷತ್ವವು ವಿವಕ್ಷಿತವಲ್ಲ. ಯಾವ ವಿಷಯದಲ್ಲಿ ನಿರ್ದೋಷತ್ವವಿದೆಯೋ ಆ ವಿಷಯದಲ್ಲಷ್ಟೇ ಆಪ್ತನಾಗಿರುತ್ತಾನೆಂದು ಹೇಳಬೇಕು. ಹೀಗೆ ಹೇಳಿದರೆ ಯತ್ ಮತ್ತು ತತ್ ಶಬ್ದಗಳು ಸರ್ವಸಾಧಾರಣವಲ್ಲ. ಆಯಾ ವಿಷಯಗಳಲ್ಲಷ್ಟೇ ಬರುತ್ತದೆ. ಆದ್ದರಿಂದ ಸರ್ವಸಾಧಾರಣವಾದ ಲಕ್ಷಣವನ್ನು ಹೇಳಿದಂತೆ ಆಗದ ಕಾರಣ ಅಸಾಧಾರಣವಾಗಿದೆ. ಪುನಃ ಲಕ್ಷಣಕ್ಕೆ ಅವ್ಯಾಪ್ತಿದೋಷವು ತಪ್ಪಿದ್ದಲ್ಲ.

'ಪ್ರಥಮಪಕ್ಷೇಽಪಿ ಏವಂ ವಿವಕ್ಷಾಯಾಂ ಏತದೇವ ದೂಷಣಮ್' ಎಂದು ವಾಕ್ಯಾರ್ಥ-ಚಂದ್ರಿಕೆಯಲ್ಲಿ ಹೇಳಿದ್ದಾರೆ. ಪ್ರಥಮಪಕ್ಷ ಎಂದರೆ, 'ಪ್ರಮಾಣದೃಷ್ಟಾರ್ಥವಾದಿತ್ವಂ' ಎಂಬ ಲಕ್ಷಣವನ್ನು ವಿವಕ್ಷಿಸಲು ಆಗುವುದಿಲ್ಲ. ಅಲ್ಲಿ ಯತ್ ತತ್ ಶಬ್ದಗಳು ವಿವಕ್ಷಿತವೇ ಆಗಿರುವುದಿಲ್ಲ. ಆದ್ದರಿಂದ ದೃಷ್ಟಿಗರ್ಭಲಕ್ಷಣವನ್ನು ಪ್ರಥಮಪಕ್ಷವೆಂದು ವಿವಕ್ಷಿಸಬೇಕು. ಹಿಂದೆ ಹೇಳಿದ ಎಲ್ಲಾ ದೃಷ್ಟಿಗರ್ಭ-

ಲಕ್ಷಣಗಳಲ್ಲಿ ಎಂದರ್ಥ. ಆಗ 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದಿತ್ವಂ' ಎಂಬಲ್ಲಿ ಯತ್ ತತ್ ಶಬ್ದಗಳನ್ನು ವಿವಕ್ಷಿಸುವುದಾದರೆ ಅವ್ಯಾಪ್ತಿದೋಷ ಬರುತ್ತದೆಂದು ಹೇಳಿದಂತಾಗುತ್ತದೆ. ಹಿಂದಿನ ದೃಷ್ಟಿಗರ್ಭಲಕ್ಷಣಗಳಲ್ಲೂ ಈ ದೋಷವು ಸಾಧಾರಣವಾದ್ದರಿಂದ ಕೊನೆಯಲ್ಲಿ ಈ ದೋಷವನ್ನು ನಿವೇಶ ಮಾಡಿದ್ದಾರೆ.

## ಯತ್ತಚ್ಛಬ್ದಗಳಿಗೆ ಎಲ್ಲಿ ಶಕ್ತಿಗ್ರಹ

ವಾಕ್ಯಾರ್ಥಚಂದ್ರಿಕಾ– ಯತ್ತಚ್ಛಬ್ದಯೋಃ ಸರ್ವನಾಮತ್ವಾತ್ ಸರ್ವನಾಮ್ನಾಂ ಚ ಘಟ-ದೇವದತ್ತಾದಿವಿಷಯಣೀಂ ಶಕ್ತಿಗ್ರಹಾವಿಷಯತಯಾ ಶಬ್ದಜ್ಞಾನೇ ವಿಷಯತಯಾಽಪ್ರವಿಷ್ಟಾಂ ಜ್ಞಾತಾಂ ಬುದ್ಧಿಮುಪಧಾನೀಕೃತ್ಯ ಘಟತ್ವದೇವದತ್ತತ್ವಾದ್ಯನೇಕಪ್ರಕಾರಾವಚ್ಛಿನ್ನೇಷು ಘಟದೇವದತ್ತಾ-ದಿಷು ಶಕ್ತಿಗ್ರಹಣೇನ, ಯತ್ತದಾದೀನಾಂ ಘಟತ್ವಾದಿಪ್ರಕಾರಕಘಟಾದ್ಯುಪಸ್ಥಿತಿಜನಕತ್ವಾತ್ ಲಕ್ಷಣ-ವಾಕ್ಯಸ್ಯ 'ಘಟವಿಷಯೇ ನಿರ್ದೋಷೋ, ಘಟೇ ಆಪ್ತಃ' ಇತ್ಯಾದ್ಯರ್ಥಪ್ರಾಪ್ತ್ಯಾ, ತಸ್ಯ ಚಾಪ್ತತ್ವಾ-ವಚ್ಛಿನ್ನೇಽಭಾವೇನ ಅವ್ಯಾಪ್ತ್ಯಾಪತ್ತ್ಯಾಽಽಪ್ತಮಾತ್ರೇ 'ಆಪ್ತಃ' ಇತ್ಯಾದಿವ್ಯವಹಾರಸಂಪಾದನಲಕ್ಷಣ-ಸ್ವಪ್ರಯೋಜನಾಸಾಧಕತ್ವಾಚ್ಚ ನೇದಂ ಲಕ್ಷಣಂ ಯುಕ್ತಮಿತ್ಯಭಿಪ್ರೇತ್ಯ ದೂಷಯತಿ – ಯತ್ತದಿತಿ ॥ ಅವ್ಯಾಪ್ತೇರಿತಿ ಸಾರ್ವತ್ರಿಕವ್ಯವಹಾರಾನೌಪಯಿಕತ್ವಸ್ಯಾಪ್ಯುಪಲಕ್ಷಣಮ್ । ಅತ ಏವೋತ್ತರತ್ರ ಸಾಮಾನ್ಯೇನಾನೂದ್ಯ ವಿಕಲ್ಪಯಿಷ್ಯತೀತಿ ದ್ರಷ್ಟವ್ಯಮ್ ॥

ಯತ್ ಶಬ್ದ ಹಾಗೂ ತತ್ ಶಬ್ದಗಳು ಸರ್ವನಾಮಶಬ್ದಗಳಾಗಿವೆ. ಸರ್ವನಾಮಶಬ್ದಗಳು ಘಟ, ದೇವದತ್ತ ಮೊದಲಾದವುಗಳನ್ನು ವಿಷಯೀಕರಿಸುತ್ತವೆ. ಶಕ್ತಿಗ್ರಹವಿಷಯಕವಾಗಿರುವುದಿಲ್ಲ. ಶಾಬ್ದ-ಬೋಧದಲ್ಲಿ ಯಾವುದು ವಿಷಯತಯಾ ಪ್ರವಿಷ್ಟವಾಗಿಲ್ಲವೋ ಅಂಥ ಬುದ್ಧಿಯನ್ನು ನಿಮಿತ್ತವನ್ನಾಗಿ ಮಾಡಿಕೊಂಡು ಘಟತ್ವ, ದೇವದತ್ತತ್ವ ಮೊದಲಾದ ಅನೇಕಪ್ರಕಾರಗಳಿಂದ ಅವಚ್ಛಿನ್ನವಾದ ಘಟ ದೇವದತ್ತ ಮೊದಲಾದವುಗಳಲ್ಲಿ ಶಕ್ತಿಗ್ರಹವಾಗುತ್ತದೆ. ಆದ್ದರಿಂದ ಯತ್ ಮತ್ತು ತತ್ ಮೊದಲಾದ ಶಬ್ದಗಳು ಘಟತ್ವಾದಿಪ್ರಕಾರಕಘಟಾದ್ಯುಪಸ್ಥಿತಿಜನಕಗಳಾಗಿವೆ. ಲಕ್ಷಣವಾಕ್ಯಕ್ಕೆ ಘಟವಿಷಯದಲ್ಲಿ ನಿರ್ದೋಷವಾಗಿದೆ, ಘಟವಿಷಯದಲ್ಲಿ ಆಪ್ತನಾಗಿದ್ದಾನೆ ಎಂದು ಅರ್ಥಾತ್ ಹೇಳಿದಂತಾಗುತ್ತದೆ. ಹೀಗೆ 'ಘಟವಿಷಯೇ ನಿರ್ದೋಷಃ, ಘಟೇ ಆಪ್ತಃ' ಎಂಬ ಲಕ್ಷಣವು ಆಪ್ತತ್ವಾವಚ್ಛಿನ್ನರಾದ ಸಕಲ ಆಪ್ತರಲ್ಲಿ ಬರುವುದಿಲ್ಲ. ಆದ್ದರಿಂದ ಅವ್ಯಾಪ್ತಿಯು ಬರುತ್ತದೆ. ಎಲ್ಲಾ ಆಪ್ತರಲ್ಲಿ 'ಆಪ್ತಃ' ಎಂಬ ವ್ಯವಹಾರ-ಸಂಪಾದಕವಾಗಿ ಈ ಲಕ್ಷಣಕ್ಕೆ ಪ್ರಯೋಜನವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಇದು ಆಪ್ತನ

ಲಕ್ಷಣವೆಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ದೋಷವನ್ನು 'ಯತ್ ತತ್' ಎಂಬ ವಾಕ್ಯವು ಹೇಳುತ್ತಿದೆ.

'ಅವ್ಯಾಪ್ತೇಃ' ಎಂಬುದರಿಂದ ಸಾರ್ವತ್ರಿಕವ್ಯವಹಾರವು ಇದರಿಂದ ಕೂಡುವುದಿಲ್ಲೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದಲೇ ಮುಂದೆ ಟೀಕೆಯಲ್ಲಿ ಸಾಮಾನ್ಯವಾಗಿ ಅನುವಾದ ಮಾಡಿ ವಿಕಲ್ಪ ಮಾಡಿದ್ದಾರೆ. ಮುಂದಿನ ಟೀಕಾವಾಕ್ಯದ ವಿಕಲ್ಪದಿಂದ ಈ ಟೀಕಾವಾಕ್ಯಕ್ಕೆ ಅವ್ಯಾಪ್ತಿ-ದೋಷದ ಜೊತೆ ಸಾರ್ವತ್ರಿಕವ್ಯವಹಾರಾನೌಪಯಿಕತ್ವ ಎಂಬ ದೋಷವು ಕೂಡ ವಿವಕ್ಷಿತವೆಂದು ತಿಳಿಯುತ್ತದೆ.

ವಿಶೇಷವಿಚಾರ – ತರ್ಕತಾಂಡವದ ಶಕ್ತಿವಾದದಲ್ಲಿ ಬಂದಿರುವ ವಿಷಯವನ್ನು ಪ್ರಕೃತ ವಾಕ್ಯಾರ್ಥಚಂದ್ರಿಕಾದಲ್ಲಿ 'ಯತ್ತಚ್ಛಬ್ದಯೋಃ' ಎಂಬ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ. ಯತ್ ಶಬ್ದ ತತ್ ಶಬ್ದಗಳಿಗೆ ಎಲ್ಲಿ ಶಕ್ತಿಯನ್ನು ತಿಳಿಯಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – 'ದೇವದತ್ತಃ ಯಜ್ಞದತ್ತಸ್ಯ ಪುತ್ರಃ' ಎಂದು ಹೇಳಿ 'ಸಃ ಬುದ್ಧಿಮಾನ್' ಎಂದು ಹೇಳಿದಾಗ ತತ್ ಶಬ್ದದಿಂದ ದೇವದತ್ತನನ್ನು ಪರಾಮರ್ಶ ಮಾಡುತ್ತೇವೆ. ಇಲ್ಲಿ ತತ್ ಶಬ್ದದಿಂದ ದೇವದತ್ತನೆಂಬ ಅರ್ಥವನ್ನು ವಿವಕ್ಷಿಸಿದ ಮಾತ್ರಕ್ಕೆ ಎಲ್ಲೆಡೆಯೂ ಕೂಡ ತತ್ ಶಬ್ದದಿಂದ ದೇವದತ್ತನನ್ನೇ ವಿವಕ್ಷಿಸಲು ಸಾಧ್ಯವಿಲ್ಲ. ಮತ್ತೇನೆಂದರೆ ಬುದ್ಧಿಸ್ಥವಾದ ವಿಷಯವನ್ನು ತತ್ ಶಬ್ದದಿಂದ ತಿಳಿಯಬೇಕು. ಯತ್ ಶಬ್ದ ಹಾಗೂ ತತ್ ಶಬ್ದಗಳನ್ನು ಯಾರು ಪ್ರಯೋಗ ಮಾಡುತ್ತಾನೋ ಅವನ ಬುದ್ಧಿಯಲ್ಲಿ ಯತ್, ತತ್ ಶಬ್ದಗಳಿಂದ ಯಾರು ವಿವಕ್ಷಿತರೋ ಅವರಲ್ಲಿ ಯತ್ ಮತ್ತು ತತ್ ಶಬ್ದಗಳಿಗೆ ಶಕ್ತಿಯಿದೆ ಎಂದು ತಿಳಿಯಬೇಕು. ಆದ್ದರಿಂದ ವಕ್ತೃಬುದ್ಧಿಯಲ್ಲಿ ಯತ್ ತತ್ ಶಬ್ದಕ್ಕೆ ಶಕ್ತಿಗ್ರಹ ಆಗಿದೆಯೆಂದು ತಿಳಿಯಬೇಕು. ಇಲ್ಲಿ ದೇವದತ್ತ, ಘಟ ಯಾವುದು ಬೇಕಾದರೂ ಶಕ್ಯ ಎಂದು ಕರೆಸಿಕೊಳ್ಳಬಹುದು. ಆದರೆ ಘಟತ್ವ, ದೇವದತ್ತತ್ವ ಮೊದಲಾದವುಗಳೆಲ್ಲವೂ ಶಕ್ಯತಾವಚ್ಛೇದಕ ಎಂದು ಕರೆಸಿಕೊಳ್ಳುವುದಿಲ್ಲ. ವಕ್ತೃಬುದ್ಧಿಸ್ಥತ್ವವು ಶಕ್ಯತಾವಚ್ಛೇದಕ ಆಗುತ್ತದೆ.

'ಶಕ್ತಿಗ್ರಹದಲ್ಲಿ ಯಾವುದು ವಿಷಯವಾಗುತ್ತದೋ ಅದು ಶಾಬ್ದಬೋಧದಲ್ಲಿ ವಿಷಯತಯಾ ಪ್ರವಿಷ್ಟವಾಗುತ್ತದೆ' ಎಂಬ ನಿಯಮವಿದೆ. ಉದಾಹರಣೆ – 'ಘಟಮಾನಯ' ಎಂಬಲ್ಲಿ ಘಟಶಬ್ದಕ್ಕೆ ಘಟತ್ವಾವಚ್ಛಿನ್ನವಾದ ಘಟ ಎಂಬ ವ್ಯಕ್ತಿಯಲ್ಲಿ ಶಕ್ತಿಗ್ರಹವಾಗಿದೆ. ಶಾಬ್ದಬೋಧದಲ್ಲಿ ಘಟತ್ವವೂ ಕೂಡ ಭಾನವಾಗುತ್ತದೆ. ಆದ್ದರಿಂದ ಶಕ್ತಿಗ್ರಹದಲ್ಲಿ ಯಾವುದು ವಿಷಯವಾಗಿರುತ್ತದೋ ಅದೆಲ್ಲವೂ ಶಾಬ್ದ-

ಬೋಧದಲ್ಲಿ ಅವಶ್ಯವಾಗಿ ವಿಷಯವಾಗಿರುತ್ತದೆ. ಘಟಶಬ್ದಕ್ಕೆ ಘಟ ಮತ್ತು ಘಟತ್ವಗಳು ಶಕ್ತಿಗ್ರಹದಲ್ಲಿ ವಿಷಯವಾಗಿದೆ. ಶಾಬ್ದಬೋಧದಲ್ಲಿಯೂ ಕೂಡ ಇವೆರಡೂ ಭಾನವಾಗುತ್ತವೆ. ಇದರಂತೆ ಸಃ ಎಂಬ ತತ್ ಶಬ್ದದಿಂದ ಬುದ್ಧಿಸ್ಥವಾದದ್ದು ಎಂಬರ್ಥವನ್ನು ಹೇಳಿದರೆ ವಕ್ತೃಬುದ್ಧಿಯೂ ಕೂಡ ಶಾಬ್ದಬೋಧ-ದಲ್ಲಿ ವಿಷಯತಯಾ ಪ್ರವಿಷ್ಟವಾಗಬೇಕು. ಏಕೆಂದರೆ 'ಯಃ ಯಃ ಶಕ್ತಿಗ್ರಹೇ ವಿಷಯತಯಾ ಭಾಸತೇ ಸಃ ಸರ್ವೋಽಪಿ ಶಾಬ್ದಬೋಧೇ ನಿವಿಶತೇ' ಎಂಬ ವ್ಯಾಪ್ತಿಗ್ರಹ ಇರುವುದರಿಂದ ವಕ್ತೃಬುದ್ಧಿಯೂ ಕೂಡ ಶಾಬ್ದಬೋಧದಲ್ಲಿ ಸೇರಬೇಕಾಗುತ್ತದಲ್ಲವೇ?

ವಕ್ತೃಬುದ್ಧಿಯು ಕೇವಲ ಪ್ರತ್ಯಾಸತ್ತಿ ಎನಿಸುತ್ತದೆ. ಉಪಲಕ್ಷಣಯಾ ಶಕ್ತಿಗ್ರಹಕ್ಕೆ ಸಹಕಾರಿ ಆಗುತ್ತದೆ. ಶಕ್ತಿಗ್ರಹದಲ್ಲಿ ವಿಷಯವಾಗಿ ಶಾಬ್ದಬೋಧದಲ್ಲಿ ಪ್ರವೇಶವನ್ನು ಹೊಂದುವುದಿಲ್ಲ. ಆದ್ದರಿಂದ ಲಕ್ಷಣವು ಅನುಗತವಾಗುವುದಿಲ್ಲ ಎಂದು ತಿಳಿಯಬೇಕು.

## 'ಯಾವತ್‌ಪ್ರಮಾಣದೃಷ್ಟಂ ತಾವತ ಏವ ವಕ್ತಾ'<br>ಎಂಬ ಲಕ್ಷಣಕ್ಕೆ ಅವ್ಯಾಪ್ತಿದೋಷ

ಯಾದುಪತ್ಯ– ಆಪ್ತವಾಕ್ಯತಾಸಾಧಕಾಽನುಮಾನೇ ಅಪ್ರಯೋಜಕತಾಶಂಕಾಪರಿಹಾರಾಯ ಅನುಕೂಲತರ್ಕಂ ವಕ್ತುಮ್ ಆಪ್ತಸ್ವರೂಪಂ ನಿರ್ಧಾರಯಿತುಮಾಹ – ನನು ಕೋಽಯಮಾಪ್ತ ಇತಿ ॥ ತಾವತ ಏವ ವಕ್ತಾ ಇತಿ ॥ ಪ್ರಮಾಣದೃಷ್ಟಸ್ಯೈವ ವಕ್ತಾ ಇತ್ಯರ್ಥಃ । ಅಜ್ಞಾತಸಂದಿಗ್ಧೇತಿ ॥ ಅನುವಾದಕರ್ತ್ರಾ ಯತ್ಪ್ರಮೇಯಂ ಸ್ವೇನ ನ ಜ್ಞಾತಂ ಸಂದಿಗ್ಧಂ ವಾ, ತತ್ಪ್ರತಿಪಾದಕಂ ಯದ್ವಾಕ್ಯಂ, ತದನುವಾದಸ್ತಾವತ್ ಕ್ರಿಯತೇ । ತಸ್ಯ ಚ ಆಪ್ತತ್ವಂ ವಾದವಿಷಯೇ ಸುಪ್ರಸಿದ್ಧಮ್ । ನ ಹಿ ಸ ಪ್ರಮಿತಂ ವಾದಮೇವ ವದತಿ । ತದವಚ್ಛೇದಕತಯಾಽಜ್ಞಾತಸ್ಯ ಸಂದಿಗ್ಧಸ್ಯ ವಾ ವಿಷಯಸ್ಯಾಪಿ ವಚನಾತ್ । ಅತೋ ಲಕ್ಷಣಸ್ಯ ತತ್ರಾವ್ಯಾಪ್ತಿರಿತ್ಯರ್ಥಃ ।

ಆಪ್ತವಾಕ್ಯತ್ವವನ್ನು ಸಾಧನೆ ಮಾಡುವ ಅನುಮಾನದಲ್ಲಿ ಅಪ್ರಯೋಜಕತಾಶಂಕೆಯು ಬರುತ್ತದೆ. ಅದರ ಪರಿಹಾರಕ್ಕಾಗಿ ಅನುಕೂಲತರ್ಕವನ್ನು ಮುಂದೆ ಹೇಳುವವರಿದ್ದಾರೆ.ಅದಕ್ಕಾಗಿ ಪ್ರಕೃತ ಆಪ್ತಸ್ವರೂಪವನ್ನು ನಿರ್ಧಾರಣೆ ಮಾಡುವುದಕ್ಕಾಗಿ 'ನನು ಕೋಽಯಂ ಆಪ್ತಃ' ಇತ್ಯಾದಿ ಗ್ರಂಥವು ಹೊರಟಿದೆ.

'ತಾವತಃ ಏವ ವಕ್ತಾ' – ಪ್ರಮಾಣದೃಷ್ಟವಾದದ್ದನ್ನಷ್ಟೇ ಹೇಳುವವನು ಎಂದರ್ಥ.

ಲಕ್ಷಣವೆಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ದೋಷವನ್ನು 'ಯತ್ ತತ್' ಎಂಬ ವಾಕ್ಯವು ಹೇಳುತ್ತಿದೆ.

'ಅವ್ಯಾಪ್ತೇಃ' ಎಂಬುದರಿಂದ ಸಾರ್ವತ್ರಿಕವ್ಯವಹಾರವು ಇದರಿಂದ ಕೂಡುವುದಿಲ್ಲೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದಲೇ ಮುಂದೆ ಟೀಕೆಯಲ್ಲಿ ಸಾಮಾನ್ಯವಾಗಿ ಅನುವಾದ ಮಾಡಿ ವಿಕಲ್ಪ ಮಾಡಿದ್ದಾರೆ. ಮುಂದಿನ ಟೀಕಾವಾಕ್ಯದ ವಿಕಲ್ಪದಿಂದ ಈ ಟೀಕಾವಾಕ್ಯಕ್ಕೆ ಅವ್ಯಾಪ್ತಿ-ದೋಷದ ಜೊತೆ ಸಾರ್ವತ್ರಿಕವ್ಯವಹಾರಾನೌಪಯಿಕತ್ವ ಎಂಬ ದೋಷವು ಕೂಡ ವಿವಕ್ಷಿತವೆಂದು ತಿಳಿಯುತ್ತದೆ.

ವಿಶೇಷವಿಚಾರ – ತರ್ಕತಾಂಡವದ ಶಕ್ತಿವಾದದಲ್ಲಿ ಬಂದಿರುವ ವಿಷಯವನ್ನು ಪ್ರಕೃತ ವಾಕ್ಯಾರ್ಥಚಂದ್ರಿಕಾದಲ್ಲಿ 'ಯತ್ತಚ್ಛಬ್ದಯೋಃ' ಎಂಬ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ. ಯತ್ ಶಬ್ದ ತತ್ ಶಬ್ದಗಳಿಗೆ ಎಲ್ಲಿ ಶಕ್ತಿಯನ್ನು ತಿಳಿಯಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – 'ದೇವದತ್ತಃ ಯಜ್ಞದತ್ತಸ್ಯ ಪುತ್ರಃ' ಎಂದು ಹೇಳಿ 'ಸಃ ಬುದ್ಧಿಮಾನ್' ಎಂದು ಹೇಳಿದಾಗ ತತ್ ಶಬ್ದದಿಂದ ದೇವದತ್ತನನ್ನು ಪರಾಮರ್ಶ ಮಾಡುತ್ತೇವೆ. ಇಲ್ಲಿ ತತ್ ಶಬ್ದದಿಂದ ದೇವದತ್ತನೆಂಬ ಅರ್ಥವನ್ನು ವಿವಕ್ಷಿಸಿದ ಮಾತ್ರಕ್ಕೆ ಎಲ್ಲೆಡೆಯೂ ಕೂಡ ತತ್ ಶಬ್ದದಿಂದ ದೇವದತ್ತನನ್ನೇ ವಿವಕ್ಷಿಸಲು ಸಾಧ್ಯವಿಲ್ಲ. ಮತ್ತೇನೆಂದರೆ ಬುದ್ಧಿಸ್ಥವಾದ ವಿಷಯವನ್ನು ತತ್ ಶಬ್ದದಿಂದ ತಿಳಿಯಬೇಕು. ಯತ್ ಶಬ್ದ ಹಾಗೂ ತತ್ ಶಬ್ದಗಳನ್ನು ಯಾರು ಪ್ರಯೋಗ ಮಾಡುತ್ತಾನೋ ಅವನ ಬುದ್ಧಿಯಲ್ಲಿ ಯತ್, ತತ್ ಶಬ್ದಗಳಿಂದ ಯಾರು ವಿವಕ್ಷಿತರೋ ಅವರಲ್ಲಿ ಯತ್ ಮತ್ತು ತತ್ ಶಬ್ದಗಳಿಗೆ ಶಕ್ತಿಯಿದೆ ಎಂದು ತಿಳಿಯಬೇಕು. ಆದ್ದರಿಂದ ವಕ್ತೃಬುದ್ಧಿಯಲ್ಲಿ ಯತ್ ತತ್ ಶಬ್ದಕ್ಕೆ ಶಕ್ತಿಗ್ರಹ ಆಗಿದೆಯೆಂದು ತಿಳಿಯಬೇಕು. ಇಲ್ಲಿ ದೇವದತ್ತ, ಘಟ ಯಾವುದು ಬೇಕಾದರೂ ಶಕ್ಯ ಎಂದು ಕರೆಸಿಕೊಳ್ಳಬಹುದು. ಆದರೆ ಘಟತ್ವ, ದೇವದತ್ತತ್ವ ಮೊದಲಾದವುಗಳೆಲ್ಲವೂ ಶಕ್ಯತಾವಚ್ಛೇದಕ ಎಂದು ಕರೆಸಿಕೊಳ್ಳುವುದಿಲ್ಲ. ವಕ್ತೃಬುದ್ಧಿಸ್ಥತ್ವವು ಶಕ್ಯತಾವಚ್ಛೇದಕ ಆಗುತ್ತದೆ.

'ಶಕ್ತಿಗ್ರಹದಲ್ಲಿ ಯಾವುದು ವಿಷಯವಾಗುತ್ತದೋ ಅದು ಶಾಬ್ದಬೋಧದಲ್ಲಿ ವಿಷಯತಯಾ ಪ್ರವಿಷ್ಟವಾಗುತ್ತದೆ' ಎಂಬ ನಿಯಮವಿದೆ. ಉದಾಹರಣೆ – 'ಘಟಮಾನಯ' ಎಂಬಲ್ಲಿ ಘಟಶಬ್ದಕ್ಕೆ ಘಟತ್ವಾವಚ್ಛಿನ್ನವಾದ ಘಟ ಎಂಬ ವ್ಯಕ್ತಿಯಲ್ಲಿ ಶಕ್ತಿಗ್ರಹವಾಗಿದೆ. ಶಾಬ್ದಬೋಧದಲ್ಲಿ ಘಟತ್ವವೂ ಕೂಡ ಭಾನವಾಗುತ್ತದೆ. ಆದ್ದರಿಂದ ಶಕ್ತಿಗ್ರಹದಲ್ಲಿ ಯಾವುದು ವಿಷಯವಾಗಿರುತ್ತದೋ ಅದೆಲ್ಲವೂ ಶಾಬ್ದ-

ಬೋಧದಲ್ಲಿ ಅವಶ್ಯವಾಗಿ ವಿಷಯವಾಗಿರುತ್ತದೆ. ಘಟಶಬ್ದಕ್ಕೆ ಘಟ ಮತ್ತು ಘಟತ್ವಗಳು ಶಕ್ತಿಗ್ರಹದಲ್ಲಿ ವಿಷಯವಾಗಿದೆ. ಶಾಬ್ದಬೋಧದಲ್ಲಿಯೂ ಕೂಡ ಇವೆರಡೂ ಭಾನವಾಗುತ್ತವೆ. ಇದರಂತೆ ಸಃ ಎಂಬ ತತ್ ಶಬ್ದದಿಂದ ಬುದ್ಧಿಸ್ಥವಾದದ್ದು ಎಂಬರ್ಥವನ್ನು ಹೇಳಿದರೆ ವಕ್ತ್ಯಬುದ್ಧಿಯೂ ಕೂಡ ಶಾಬ್ದಬೋಧದಲ್ಲಿ ವಿಷಯತಯಾ ಪ್ರವಿಷ್ಟವಾಗಬೇಕು. ಏಕೆಂದರೆ 'ಯಃ ಯಃ ಶಕ್ತಿಗ್ರಹೇ ವಿಷಯತಯಾ ಭಾಸತೇ ಸಃ ಸರ್ವೋಽಪಿ ಶಾಬ್ದಬೋಧೇ ನಿವಿಶತೇ' ಎಂಬ ವ್ಯಾಪ್ತಿಗ್ರಹ ಇರುವುದರಿಂದ ವಕ್ತ್ಯಬುದ್ಧಿಯೂ ಕೂಡ ಶಾಬ್ದಬೋಧದಲ್ಲಿ ಸೇರಬೇಕಾಗುತ್ತದಲ್ಲವೇ?

ವಕ್ತ್ಯಬುದ್ಧಿಯು ಕೇವಲ ಪ್ರತ್ಯಾಸತ್ತಿ ಎನಿಸುತ್ತದೆ. ಉಪಲಕ್ಷಣಯಾ ಶಕ್ತಿಗ್ರಹಕ್ಕೆ ಸಹಕಾರಿ ಆಗುತ್ತದೆ. ಶಕ್ತಿಗ್ರಹದಲ್ಲಿ ವಿಷಯವಾಗಿ ಶಾಬ್ದಬೋಧದಲ್ಲಿ ಪ್ರವೇಶವನ್ನು ಹೊಂದುವುದಿಲ್ಲ. ಆದ್ದರಿಂದ ಲಕ್ಷಣವು ಅನುಗತವಾಗುವುದಿಲ್ಲ ಎಂದು ತಿಳಿಯಬೇಕು.

## 'ಯಾವತ್‌ಪ್ರಮಾಣದೃಷ್ಟಂ ತಾವತ ಏವ ವಕ್ತಾ' ಎಂಬ ಲಕ್ಷಣಕ್ಕೆ ಅವ್ಯಾಪ್ತಿದೋಷ

ಯಾದುಪತ್ಯ– ಆಪ್ತವಾಕ್ಯತಾಸಾಧಕಾಽನುಮಾನೇ ಅಪ್ರಯೋಜಕತಾಶಂಕಾಪರಿಹಾರಾಯ ಅನುಕೂಲತರ್ಕಂ ವಕ್ತುಮ್ ಆಪ್ತಸ್ವರೂಪಂ ನಿರ್ಧಾರಯಿತುಮಾಹ – ನನು ಕೋಽಯಮಾಪ್ತ ಇತಿ ॥ ತಾವತ ಏವ ವಕ್ತಾ ಇತಿ ॥ ಪ್ರಮಾಣದೃಷ್ಟಸ್ಯೈವ ವಕ್ತಾ ಇತ್ಯರ್ಥಃ । ಅಜ್ಞಾತಸಂದಿಗ್ಧೇತಿ ॥ ಅನುವಾದಕರ್ತ್ರಾ ಯತ್ಪ್ರಮೇಯಂ ಸ್ವೇನ ನ ಜ್ಞಾತಂ ಸಂದಿಗ್ಧಂ ವಾ, ತತ್ಪ್ರತಿಪಾದಕಂ ಯದ್ವಾಕ್ಯಂ, ತದನುವಾದಸ್ತಾವತ್ ಕ್ರಿಯತೇ । ತಸ್ಯ ಚ ಆಪ್ತತ್ವಂ ವಾದವಿಷಯೇ ಸುಪ್ರಸಿದ್ಧಮ್ । ನ ಹಿ ಸ ಪ್ರಮಿತಂ ವಾದಮೇವ ವದತಿ । ತದವಚ್ಛೇದಕತಯಾಽಜ್ಞಾತಸ್ಯ ಸಂದಿಗ್ಧಸ್ಯ ವಾ ವಿಷಯಸ್ಯಾಪಿ ವಚನಾತ್ । ಅತೋ ಲಕ್ಷಣಸ್ಯ ತತ್ರಾವ್ಯಾಪ್ತಿರಿತ್ಯರ್ಥಃ।

ಆಪ್ತವಾಕ್ಯತ್ವವನ್ನು ಸಾಧನೆ ಮಾಡುವ ಅನುಮಾನದಲ್ಲಿ ಅಪ್ರಯೋಜಕತಾಶಂಕೆಯು ಬರುತ್ತದೆ. ಅದರ ಪರಿಹಾರಕ್ಕಾಗಿ ಅನುಕೂಲತರ್ಕವನ್ನು ಮುಂದೆ ಹೇಳುವವರಿದ್ದಾರೆ.ಅದಕ್ಕಾಗಿ ಪ್ರಕೃತ ಆಪ್ತಸ್ವರೂಪವನ್ನು ನಿರ್ಧಾರಣೆ ಮಾಡುವುದಕ್ಕಾಗಿ 'ನನು ಕೋಽಯಂ ಆಪ್ತಃ' ಇತ್ಯಾದಿ ಗ್ರಂಥವು ಹೊರಟಿದೆ.

'ತಾವತಃ ಏವ ವಕ್ತಾ' – ಪ್ರಮಾಣದೃಷ್ಟವಾದದ್ದನ್ನಷ್ಟೇ ಹೇಳುವವನು ಎಂದರ್ಥ.

**'ಅಜ್ಞಾತಸಂದಿಗ್ಧಾನುವಾದವಾಕ್ಯಪ್ರಯೋಕ್ತುಃ'** – 'ಅನುವಾದ ಮಾಡುವವನಿಗೆ ಆ ವಸ್ತುವಿನ ಪ್ರಮೇಯಜ್ಞಾನವಿಲ್ಲ; ಸಂದೇಹವೂ ಇರುತ್ತದೆ. ಸಂದಿಗ್ಧವಾದ ಪ್ರಮೇಯವಲ್ಲದ ವಸ್ತುವನ್ನು ಪ್ರತಿಪಾದನೆ ಮಾಡುವ ಯಾವ ವಾಕ್ಯವಿದೆಯೋ ಅದರ ಅನುವಾದವನ್ನಷ್ಟೇ ಮಾಡುತ್ತಿದ್ದಾನೆ. ಇವನು ಪುರೋವಾದ ವಿಷಯದಲ್ಲಿ ಆಪ್ತನಾಗಿದ್ದಾನೆಂಬುದು ಪ್ರಸಿದ್ಧವೇ ಆಗಿದೆ. ಆದರೆ ಪ್ರಮಿತವಾದ ವಾದವನ್ನಷ್ಟೇ ಅವನು ಮಾಡುತ್ತಿಲ್ಲ. ತದವಚ್ಛೇದಕವಾಗಿ ಅಜ್ಞಾತವಾದ ಅಥವಾ ಸಂದಿಗ್ಧವಾದ ವಿಷಯವನ್ನು ಕೂಡ ಹೇಳುತ್ತಿದ್ದಾನೆ. ಆದ್ದರಿಂದ ಆಪ್ತಲಕ್ಷಣಕ್ಕೆ ಇಲ್ಲಿ ಅವ್ಯಾಪ್ತಿಯು ಬರುತ್ತದೆ.

ವಿವರಣೆ – 'ಯಾವತ್ ಪ್ರಮಾಣದೃಷ್ಟಂ ತಾವತ ಏವ ವಕ್ತಾ' ಎಂಬುದಾಗಿ ಆಪ್ತಲಕ್ಷಣವನ್ನು ಹೇಳಿದರೆ ಅಜ್ಞಾತಸಂದಿಗ್ಧಾನುವಾದವಾಕ್ಯಪ್ರಯೋಗವನ್ನು ಮಾಡುವವನಲ್ಲಿ ಈ ಲಕ್ಷಣವು ಬಾರದ ಕಾರಣ ಅನಾಪ್ತನಾಗುವ ಪ್ರಸಂಗ ಬರುತ್ತದೆ ಎಂಬುದಾಗಿ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇದನ್ನು ಅನುವಾದಕರ್ತ್ರಾ ಇತ್ಯಾದಿಯಾಗಿ ಯಾದುಪತ್ಯದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ಈ ವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – ಯಜ್ಞದತ್ತನು 'ಇದಂ ರಜತಂ' ಎಂದು ಹೇಳುತ್ತಾನೆ. ಇದನ್ನು ದೇವದತ್ತನು ಮತ್ತೊಬ್ಬನ ಬಳಿ ಅನುವಾದ ಮಾಡುತ್ತಾನೆ. 'ಇದಂ ರಜತಂ' ಎಂಬ ವಾಕ್ಯದಿಂದ ಪ್ರತಿಪಾದ್ಯವಾದ ಯಾವ ಪ್ರಮೇಯವಿದೆಯೋ ಅದು ದೇವದತ್ತನಿಗೆ ತಿಳಿದಿಲ್ಲ. ಅಥವಾ ಆ ವಿಷಯದಲ್ಲಿ ಸಂದೇಹವೂ ಕೂಡ ಅವನಿಗೆ ಇರಬಹುದು. ಆದರೂ ಕೂಡ ತತ್ಪ್ರತಿಪಾದಕವಾದ 'ಇದಂ ರಜತಂ' ಎಂಬ ವಾಕ್ಯವನ್ನು ಚೈತ್ರನ ಬಳಿ ಅನುವಾದ ಮಾಡುತ್ತಾನೆ.

(ಯಜ್ಞದತ್ತನ ವಾಕ್ಯಕ್ಕೆ ಪುರೋವಾದ ಎನ್ನುತ್ತಾರೆ. ದೇವದತ್ತನ ವಾಕ್ಯಕ್ಕೆ ಅನುವಾದ ಎನ್ನುತ್ತಾರೆ). ದೇವದತ್ತನ 'ಇದಂ ರಜತಂ' ಎಂಬ ಅನುವಾದವಾಕ್ಯಕ್ಕೆ ಯಜ್ಞದತ್ತನ ಪುರೋವಾದವಿಷಯದಲ್ಲಿ ಆಪ್ತತ್ವವಿದೆ. ಏಕೆಂದರೆ, ಅವನು ಯಜ್ಞದತ್ತ ಹೇಳಿದ್ದನ್ನು ಸ್ವಲ್ಪವೂ ವ್ಯತ್ಯಾಸ ಮಾಡದೇ ಯಥಾವತ್ತಾಗಿ ಅನುವಾದ ಮಾಡಿದ್ದಾನೆ. ಆದ್ದರಿಂದ ದೇವದತ್ತನು ಇಲ್ಲಿ ಆಪ್ತನಾಗಿದ್ದಾನೆಂಬುದು ಲೋಕಸಿದ್ಧವಾದ ವಿಚಾರ. ಪ್ರಕೃತ ಆಪ್ತನ ಲಕ್ಷಣದಲ್ಲಿ ಪ್ರಮಾಣದೃಷ್ಟವಾದದ್ದನ್ನಷ್ಟೇ ಹೇಳಬೇಕು ಎಂಬುದಾಗಿ ನೀವು ಹೇಳಿದರೆ; ಇಲ್ಲಿ ದೇವದತ್ತನು ಪ್ರಮಿತವಾದ ಪುರೋವಾದವನ್ನಷ್ಟೇ ಹೇಳುತ್ತಿಲ್ಲ. ತದವಚ್ಛೇದಕವಾಗಿ ಅಜ್ಞಾತವಾದ ಅಥವಾ ಸಂದಿಗ್ಧವಾದ ವಿಷಯವನ್ನೂ ಕೂಡ ಹೇಳುತ್ತಿದ್ದಾನೆ. ಏಕೆಂದರೆ ಅವನಿಗೆ 'ಇದಂ ರಜತಂ' ಎಂಬ ವಾಕ್ಯದ ಪ್ರಮೇಯ ಜ್ಞಾನವಿಲ್ಲ. ಅಥವಾ ಸಂದೇಹವೇ ಇದೆ. ಈ ವಾಕ್ಯಕ್ಕೆ ಪುರೋವಾದವಷ್ಟೇ ವಿಷಯವಲ್ಲ; ಅದರಲ್ಲಿ ಸೇರಿದ ಅಜ್ಞಾತವಾದ ವಿಷಯ, ಸಂದಿಗ್ಧವಾದ ವಿಷಯವೂ ಕೂಡ ಪ್ರತಿಪಾದ್ಯವಾಗಿದೆ. ಇದನ್ನೂ ಕೂಡ ಅವನು ಹೇಳುತ್ತಿದ್ದಾನೆ. ಹೀಗೆ ಪ್ರಮಾಣ-ದೃಷ್ಟವಾದದ್ದನ್ನಷ್ಟೇ ಹೇಳದ ಕಾರಣ ಇವನು ಆಪ್ತನಾಗದೇ ಇರಬೇಕಾದೀತು. ಹೀಗೆ ಲಕ್ಷಣಕ್ಕೆ ಅವ್ಯಾಪ್ತಿದೋಷವನ್ನು ತಿಳಿಯತಕ್ಕದ್ದು.

## 'ಅಜ್ಞಾತಸಂದಿಗ್ಧ' ಇತ್ಯಾದಿವಾಕ್ಯಕ್ಕೆ ಕೆಲವರ ವ್ಯಾಖ್ಯಾನ

ಯಾದುಪತ್ಯ– ಕೇಚಿತ್ತು ಅಜ್ಞಾತೇ ಸಂದಿಗ್ಧೇಽನುವಾದೇ ಚ ಯದ್ವಾಕ್ಯಂ ತತ್ಪ್ರಯೋಕ್ತುರಾಪ್ತತ್ವಂ ನ ಸ್ಯಾದಿತ್ಯರ್ಥ ಇತ್ಯಾಹುಃ । ಭೀಮಾಗ್ರಜಸ್ಯಾಪೀತಿ ॥ ಧರ್ಮರಾಜತ್ವಾತ್ ಪ್ರಮಿತವಕ್ತೃತಯಾ ಪ್ರಸಿದ್ಧಸ್ಯಾಪಿ - ಇತ್ಯರ್ಥಃ । ಕದಾಚಿತ್ ದ್ರೋಣವಧಸಮಯೇ ನರ್ಮಾದಿಸಮಯೇ ವಾ । ಚಾಟುವಾದಿತ್ವಸಂಭವೇನೇತಿ ॥ ಅಪ್ರಮಿತವಾದಿತ್ವಸಂಭವೇನೇತ್ಯರ್ಥಃ ।

ಕೆಲವರು ಅಜ್ಞಾತಾರ್ಥದಲ್ಲಿ ಸಂದಿಗ್ಧಾರ್ಥದಲ್ಲಿ ವಾಕ್ಯವನ್ನು ಪ್ರಯೋಗಿಸುವವನಲ್ಲಿ ಅಥವಾ ಅನುವಾದವಾಕ್ಯವನ್ನು ಪ್ರಯೋಗ ಮಾಡುವವಲ್ಲಿ ಆಪ್ತತ್ವವು ಇಲ್ಲದೇ ಇರಬೇಕಾದೀತು ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ.

'ಭೀಮಾಗ್ರಜಸ್ಯಾಪಿ' – ಧರ್ಮರಾಜನು ಪ್ರಮಿತವಾದದ್ದನ್ನಷ್ಟೇ ಹೇಳುತ್ತಾನೆ ಎಂಬುದಾಗಿ ಪ್ರಸಿದ್ಧಿ ಇದ್ದರೂ ಕೂಡ ಎಂದರ್ಥ. 'ಕದಾಚಿತ್' ಎಂಬುದಕ್ಕೆ ದ್ರೋಣಾಚಾರ್ಯರನ್ನು ಸಂಹಾರ ಮಾಡುವ ಸಮಯದಲ್ಲಿ ಅಥವಾ ಹಾಸ್ಯಪ್ರಸಂಗದಲ್ಲಿ ಎಂದರ್ಥ. 'ಚಾಟುವಾದಿತ್ವಸಂಭವೇನ' ಎಂಬುದಕ್ಕೆ ಅಪ್ರಮಿತವಾದದ್ದನ್ನು ಹೇಳಿರುವ ಸಂದರ್ಭವಿದೆ ಎಂದರ್ಥ.

ವಿವರಣೆ - ಪರಿಮಳದಲ್ಲಿ ಮತ್ತು ಯಾದುಪತ್ಯದಲ್ಲಿ 'ಅಜ್ಞಾತಸಂದಿಗ್ಧಾನುವಾದಪ್ರಯೋಕ್ತುಃ' ಎಂಬುದಕ್ಕೆ ಅಜ್ಞಾತವಾದ ಅಥವಾ ಸಂದಿಗ್ಧವಾದ ಯಾವ ಅನುವಾದ ವಾಕ್ಯವಿದೆಯೋ ಅದನ್ನು ಪ್ರಯೋಗಿಸುವವನು ಎಂಬರ್ಥವನ್ನು ಹೇಳಲಾಯಿತು. ಆದರೆ ಕೆಲವರು ದ್ವಂದ್ವಸಮಾಸವನ್ನು ಮಾಡಿ ಅಜ್ಞಾತದಲ್ಲಿ, ಸಂದಿಗ್ಧದಲ್ಲಿ ಮತ್ತು ಅನುವಾದದಲ್ಲಿ ಯಾವ ವಾಕ್ಯವಿದೆಯೋ ಅದನ್ನು ಪ್ರಯೋಗಿಸುವ ವ್ಯಕ್ತಿಯು ಆಪ್ತನಾಗದೇ ಇರಬೇಕಾದೀತು ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

### ಸುಧಾಪರಿಮಳಸಾರ

ಆಪ್ತ ಎಂದರೆ ಯಾರು? ಕಂಡದ್ದನ್ನು ಕಂಡ ಹಾಗೆ ಹೇಳುವವನು ಆಪ್ತ ಎಂದರೆ ಹಗ್ಗವನ್ನು ಹಾವೆಂದು ಭ್ರಮಿಸಿ ಹಾಗೆ ಹೇಳುವವನು ಆಪ್ತನಾಗಬೇಕಾದೀತು. ಪ್ರಮಾಣದೃಷ್ಟವಾದ ಅರ್ಥವನ್ನು ಹೇಳುವವನು ಆಪ್ತ ಎಂದರೆ ಪ್ರಮಾಣದೃಷ್ಟವಾದುದನ್ನೇ ಪ್ರಮಾದಾದಿವಶಾತ್ ಬೇರೆ ಬೇರೆ ರೀತಿಯಾಗಿ ಹೇಳುವವನು ಆಪ್ತನಾಗಬೇಕಾಗುತ್ತದೆ. ಪ್ರಮಾಣದಿಂದ ಕಂಡ ಹಾಗೆ ಹೇಳುವವನು ಆಪ್ತನೆಂದರೆ ಒಂದು ಏಕದೇಶವನ್ನು ಪ್ರಮಾಣದಿಂದ ಕಂಡ ಹಾಗೆ ಹೇಳಿದರೂ ಮತ್ತೊಂದು ಏಕದೇಶವನ್ನು ವಿಪರೀತವಾಗಿ ಹೇಳಿದರೂ ಅವನೂ ಆಪ್ತ ಎನಿಸಬೇಕಾಗುತ್ತದೆ. ಪ್ರಮಾಣದಿಂದ ಕಂಡದ್ದನ್ನೆಲ್ಲ ಹಾಗೆ ಹೇಳುವವನು ಆಪ್ತ ಎಂದರೆ ಪ್ರಾಯಃ ಯಾರೂ ತಾವು ಪ್ರಮಾಣದಿಂದ

ಕಂಡದ್ದನ್ನೆಲ್ಲವನ್ನೂ ಹೇಳುವುದಿಲ್ಲ. ಆದುದರಿಂದ ಈ ಆಪ್ತನ ಲಕ್ಷಣ ಎಲ್ಲಾ ಆಪ್ತರಲ್ಲಿ ಬರುವುದಿಲ್ಲ. ಲಕ್ಷಣಕ್ಕೆ ಅವ್ಯಾಪ್ತಿರೂಪದೋಷ ಬರುತ್ತದೆ. ಎಷ್ಟು ಪ್ರಮಾಣದೃಷ್ಟವಾಗಿರುತ್ತದೋ ಅಷ್ಟನ್ನೇ ಹೇಳುವವನು ಆಪ್ತ ಎಂದರೆ ಅಜ್ಞಾತಸಂದಿಗ್ಧವಾದ ವಿಷಯದ ಅನುವಾದವಾಕ್ಯಗಳನ್ನು ಪ್ರಯೋಗಿಸುವವನು ಆಪ್ತನಾಗಲಾರ. ಶತ್ರುಸೇನೆಯ- ವರಿಗೂ ಆಪ್ತನೆಂದು ಸಮ್ಮತನಾದ ಭೀಮಾಗ್ರಜನಾದ ಧರ್ಮರಾಜನೂ ಒಮ್ಮೊಮ್ಮೆ ತಮಾಷೆಗಾಗಿ ಸುಳ್ಳು ಹೇಳಿರು- ವುದು ಉಂಟು. ಅಂದ ಮಾತ್ರಕ್ಕೆ ಅವನು ಆಪ್ತನಲ್ಲ ಎನ್ನಲು ಸಾಧ್ಯವೇ? ನಿರ್ದೋಷನು ಆಪ್ತನೆಂದರೆ ಕೆಲವೊಮ್ಮೆ ಆಪ್ತನೂ ಕೂಡ ರಾಗಾದಿದೋಷಗಳಿಗೆ ಒಳಗಾಗಿರುವನು ಆದುದರಿಂದ ಅವನು ಆಪ್ತನಾಗದಿರಬೇಕಾದೀತು. ಯಾವ ವಿಷಯದಲ್ಲಿ ನಿರ್ದೋಷನೋ ಆ ವಿಷಯದಲ್ಲಿ ಆಪ್ತ ಎಂದು ಹೇಳಿದರೆ ಯತ್(ಯಾವ), ತತ್(ಆ) ಶಬ್ದಗಳು ವಿಶೇಷವಿಷಯಕವಾದುದರಿಂದ ಇದು ಎಲ್ಲಾ ಆಪ್ತರ ಲಕ್ಷಣವಾಗುವುದಿಲ್ಲ. ಆದ ಕಾರಣ ಲಕ್ಷಣಕ್ಕೆ ಅವ್ಯಾಪ್ತಿರೂಪದೋಷ ಬರುತ್ತದೆ.

ಹೀಗೆ ಆಪ್ತನ ಲಕ್ಷಣವನ್ನು ನಿರ್ದುಷ್ಟವಾಗಿ ನಿರೂಪಿಸಲೂ ಸಾಧ್ಯವಿಲ್ಲ

## ನೆನೆಪಿಡಿ

* ಆಪ್ತನೆಂದರೆ ಯಥಾದೃಷ್ಟಾರ್ಥವಾದಿಯಾದವನು ಎಂದು ಹೇಳಿದರೆ ಚಾರ್ವಾಕನೂ ಕೂಡ ಆಪ್ತನಾಗಬೇಕಾಗುತ್ತದೆ. 'ಪ್ರಮಾಣದೃಷ್ಟಾರ್ಥವಾದೀ' ಎಂದು ಹೇಳಿದರೆ ಸಾಂಖ್ಯನೂ ಆಪ್ತನಾಗಬೇಕಾಗುತ್ತದೆ. 'ಪ್ರಮಾಣೇನ ಯಥಾ ದೃಷ್ಟಂ ತಥಾ ವಾದೀ' ಎಂದು ಹೇಳಿದರೆ 'ಕಲ್ಲುಗಳು ಹಾರುತ್ತವೆ' ಎಂದು ಹೇಳುವವನೂ ಆಪ್ತನಾಗಬೇಕಾಗುತ್ತದೆ.

* ಪ್ರಮಾಣದಿಂದ ಎಷ್ಟು ಕಂಡಿದೆಯೋ ಅಷ್ಟನ್ನು ಮಾತ್ರ ಹೇಳುವವನನ್ನು ಆಪ್ತನೆಂದು ಹೇಳಿದರೆ ಧರ್ಮರಾಜನೂ ಕೂಡ ಅನಾಪ್ತನಾಗಬೇಕಾಗುತ್ತದೆ.

* 'ನಿರ್ದೋಷಃ ಆಪ್ತಃ' ಎಂದರೆ ಯಾರೊಬ್ಬರೂ ಕೂಡ ಆಪ್ತರಾಗದೇ ಇರಬೇಕಾ- ಗುತ್ತದೆ. ಪ್ರತಿಯೊಬ್ಬರಲ್ಲೂ ರಾಗಾದಿದೋಷಗಳು ಇದ್ದೇ ಇರುತ್ತವೆ.

* 'ಯತ್ರ ವಿಷಯೇ ನಿರ್ದೋಷಃ ತತ್ರ ಆಪ್ತಃ' ಎಂದು ಹೇಳಿದರೆ ಎಲ್ಲಾ ಆಪ್ತರಲ್ಲೂ ಆಪ್ತ ಎಂಬ ಸಾರ್ವತ್ರಿಕವ್ಯವಹಾರವು ಕೂಡುವುದಿಲ್ಲ. ಮತ್ತು ಅವ್ಯಾಪ್ತಿದೋಷವು ಪ್ರಾಪ್ತವಾ- ಗುತ್ತದೆ.

* * * * *

## ಸಿದ್ಧಾಂತದಲ್ಲಿ ಆಪ್ತಲಕ್ಷಣ

**ಶ್ರೀಮನ್ನ್ಯಾಯಸುಧಾ– ಮೈವಮ್ । ವಿವಕ್ಷಿತಾರ್ಥತತ್ತ್ವಜ್ಞಾನಮ್ ಅವಿಪ್ರಲಿಪ್ಸಾ ವಿವಕ್ಷಾ ಕರಣಪಾಟವಂ ಚೇತೀಯಮ್ ಆಪ್ತಿಃ । ತದ್ವಾನ್ ಆಪ್ತಃ ಇತ್ಯಂಗೀ-ಕಾರಾತ್ । ಆಪ್ತತ್ವಾಭಿಮತೇಽಪಿ ಕದಾಚಿದಿದಂ ನಾಸ್ತೀತಿ ಚೇನ್ಮಾ ಭೂತ್ । ತದಾಽಸಾವನಾಪ್ತ ಇತ್ಯಂಗೀಕಾರಾತ್ । ಕಾಲಾದಿಭೇದೇನಾವಿರೋಧಾತ್ । ಏವಂ ಸತಿ ಯೋ ಯತ್ರೈವಂಭೂತಃ ಸ ತತ್ರಾಪ್ತಃ ಇತ್ಯುಕ್ತಂ ಸ್ಯಾದಿತಿ ಚೇತ್, ಅಸ್ತು ಕೋ ದೋಷಃ? । ಯತ್ತಚ್ಛಬ್ದಾರ್ಥಯೋರನನುಗಮ ಇತಿ ಚೇತ್ । ಕೋಽಯಮ-ನನುಗಮೋ ನಾಮ, ಕಿಂ ಸಾರ್ವತ್ರಿಕವ್ಯವಹಾರಾನೌಪಾಯಿಕತ್ವಮ್ ಉತ ಏಕಸ್ಯಾನೇಕವೃತ್ತಿತ್ವಾಭಾವಃ । ನಾದ್ಯಃ, 'ಯೋ ಯಸ್ಯ ಸುತಃ ಸ ತದೀಯಂ ಧನಮ್ ಅರ್ಹತಿ' ಇತ್ಯಾದೌ ಸಾರ್ವತ್ರಿಕವ್ಯವಹಾರಹೇತುತೋಪಲಂಭಾತ್ । ನ ದ್ವಿತೀಯಃ, ಅದೋಷತ್ವಾತ್ । ಯಥಾ ಚಾನನುಗತಸ್ಯಾಪಿ ನಾವ್ಯಾಪ್ತಿಃ ಸಾರ್ವ-ತ್ರಿಕವ್ಯವಹಾರಹೇತುತಾ ಚ ತಥಾ ಸಾಮಾನ್ಯಪರೀಕ್ಷಾಯಾಂ ವಕ್ಷ್ಯಾಮಃ ।**

ಇಲ್ಲಿಯ ತನಕ ಹೇಳಿದ ಆಪ್ತಲಕ್ಷಣಗಳೆಲ್ಲವೂ ಅಯುಕ್ತವಾಗಿವೆ. ಸಿದ್ಧಾಂತದ ಪ್ರಕಾರ ಆಪ್ತಲಕ್ಷಣವನ್ನು ಹೀಗೆ ತಿಳಿಯಬೇಕು – ಹೇಳಬೇಕೆಂದು ಇಚ್ಛಿಸಿದ ವಿಷಯದಲ್ಲಿ ತತ್ತ್ವ-ಜ್ಞಾನವಿರಬೇಕು, ವಂಚನೆ ಮಾಡಬಾರದೆಂಬ ಬುದ್ಧಿ ಇರಬೇಕು, ಹೇಳಬೇಕೆಂಬ ಇಚ್ಛೆ ಇರಬೇಕು, ಇಂದ್ರಿಯಗಳಲ್ಲಿ ಸಾಮರ್ಥ್ಯವಿರಬೇಕು. ಇವುಗಳನ್ನು ಆಪ್ತಿ ಎಂದು ಕರೆಯು-ತ್ತಾರೆ. ಇವುಗಳುಳ್ಳವನನ್ನು ಆಪ್ತನೆಂದು ಅಂಗೀಕರಿಸುತ್ತೇವೆ. ಆಪ್ತನೆಂದು ಅಭಿಮತನಾದ-ವನಲ್ಲೂ ಸಹ ಕೆಲವೊಮ್ಮೆ ಈ ಲಕ್ಷಣವು ಬರುವುದಿಲ್ಲವಲ್ಲವೇ?

ಹೀಗೆ ಶಂಕಿಸಬಾರದು. ಏಕೆಂದರೆ ಯಾವಾಗ ಇಂಥ ಆಪ್ತಿಯು ಬರುವುದಿಲ್ಲವೋ ಆಗ ಆಪ್ತನಾಗಿರುವುದಿಲ್ಲ ಎಂದು ಅಂಗೀಕರಿಸುತ್ತೇವೆ. ಒಬ್ಬನೇ ಆಪ್ತನಾಗುವುದು ಆಗದೇ

ಇರುವುದು ಹೇಗೆ? ಎಂದು ಪ್ರಶ್ನಿಸಬಾರದು. ಕಾಲಾದಿಭೇದದಿಂದ ವಿರೋಧವನ್ನು ಪರಿಹರಿಸುತ್ತೇವೆ.

ಹಾಗಾದರೆ 'ಯಾರು ಯಾವವಿಷಯದಲ್ಲಿ ಯಾರಿಗೆ ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ಆಪ್ತಿಯುಳ್ಳವನೋ ಅವನು ಆ ವಿಷಯದಲ್ಲಿ ಆಪ್ತನಾಗಿದ್ದಾನೆ' ಎಂದು ಹೇಳಿದಂತಾಯಿತಲ್ಲವೇ?

ಹೌದು; ಏನು ದೋಷ.

'ಯತ್ ತತ್' ಈ ಶಬ್ದಗಳು ವ್ಯಕ್ತಿವಿಶೇಷವನ್ನೇ ತಿಳಿಸುತ್ತವೆ. ಆದ್ದರಿಂದ ಎಲ್ಲೆಡೆಯೂ ಅನುಗತವಾಗುವುದಿಲ್ಲ. ಹಾಗಾಗಿ ಅನನುಗಮದೋಷ ಬರುತ್ತದಲ್ಲವೇ? ಎಂದರೆ,

ಅನನುಗಮ ಎಂದರೆ ಏನು? ಎಲ್ಲಾ ವ್ಯವಹಾರಗಳಲ್ಲಿ ಈ ಲಕ್ಷಣವು ಕಾರಣವಾಗುವುದಿಲ್ಲ ಎಂದೋ, ಅಥವಾ ಅನೇಕ ಸ್ಥಳಗಳಲ್ಲಿ ಒಂದು ಲಕ್ಷಣವು ಇರುವುದಿಲ್ಲ ಎಂದೋ. ಮೊದಲನೆಯ ಪಕ್ಷವು ಅಯುಕ್ತ. ಏಕೆಂದರೆ 'ಯಾರು ಯಾರ ಮಗನೋ, ಅವನು ಅವನ ತಂದೆಯ ಧನವನ್ನು ಪಡೆಯಲು ಅರ್ಹನಾಗಿದ್ದಾನೆ' ಇತ್ಯಾದಿ ಸ್ಥಳದಲ್ಲಿ 'ಯತ್ ತತ್'ಶಬ್ದಗಳಿಂದ ಗರ್ಭಿತವಾದರೂ ಕೂಡ ಸಾರ್ವತ್ರಿಕವ್ಯವಹಾರವನ್ನು ಕುರಿತು ಕಾರಣವಾಗಿದೆ ಎಂದು ಕಂಡುಬರುತ್ತಿದೆ.

ಅನೇಕಸ್ಥಳಗಳಲ್ಲಿ ಈ ಒಂದು ಲಕ್ಷಣವು ಇರುವುದಿಲ್ಲ ಎಂಬ ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ, ಒಂದು ಧರ್ಮವು ಅನೇಕ ಕಡೆಗಳಲ್ಲಿ ಬಾರದೇ ಇರುವುದು ದೋಷವೇ ಅಲ್ಲ. ಅನೇಕ ಕಡೆ ಅನುಗತವಾಗದೇ ಇದ್ದರೂ ಕೂಡ ಸಾರ್ವತ್ರಿಕವ್ಯವಹಾರಕ್ಕೆ ಕಾರಣವಾಗುತ್ತದೆ. ಅವ್ಯಾಪ್ತಿಯು ಬರುವುದಿಲ್ಲ.

ಈ ವಿಚಾರವನ್ನು ಸಾಮಾನ್ಯಪರೀಕ್ಷೆಯಲ್ಲಿ ಮುಂದೆ ವಿವರಿಸುತ್ತೇವೆ.

## ಅನನುಗತವಾದರೂ ವ್ಯಾಪ್ತಿ ಇದ್ದೇ ಇದೆ

**ಪರಿಮಳ–** ಯತ್ತಚ್ಛಬ್ದಾರ್ಥಯೋರನನುಗಮ ಇತಿ ಚೇದಿತಿ ॥ ಯತ್ತ್ವತತ್ತ್ವರೂಪಜಾತೇರಭಾವೇನ ವ್ಯಕ್ತಿವಿಶೇಷಗ್ರಹಣೇ ಸತಿ ಸರ್ವತ್ರಾನನುಗಮ ಇತ್ಯರ್ಥಃ । ನನ್ವಾಪ್ತವಾಕ್ಯತ್ವರೂಪಹೇತುಶರೀರಪ್ರವಿಷ್ಟಾಪ್ತೇರನನುಗಮೇ ಸತಿ ಯದ್ಯದಾಪ್ತವಾಕ್ಯಂ ತತ್ಸರ್ವಂ ಪ್ರಮಾಣಮಿತಿ ಆಪ್ತವಾಕ್ಯತ್ವಮಾತ್ರೇ ವ್ಯಾಪ್ತಿರ್ನ ಸ್ಯಾತ್ ವ್ಯಕ್ತಿವಿಶೇಷ ಏವ ವ್ಯಾಪ್ತಿಃ ಸ್ಯಾದಿತ್ಯತ ಆಹ – ಯಥಾ ಚೇತಿ ॥ ಅವ್ಯಾಪ್ತಿಃ = ವ್ಯಾಪ್ತಿಹೀನತಾ ।

'ಯತ್ತಚ್ಛಬ್ದಾರ್ಥಯೋಃ ಅನನುಗಮಃ ಇತಿ ಚೇತ್' ಎಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಘಟತ್ವ ಮೊದಲಾದ ಜಾತಿಯುಳ್ಳ ವಸ್ತುಗಳನ್ನು ತಿಳಿಸಲಾರವು. ಏಕೆಂದರೆ ಯತ್ತ್ವ ಮತ್ತು ತತ್ತ್ವ ಇವುಗಳು ಜಾತಿಗಳಲ್ಲ. ಆದ್ದರಿಂದ ವ್ಯಕ್ತಿ-ವಿಶೇಷಗ್ರಹಣವನ್ನು ಮಾಡಿದರೆ ಎಲ್ಲೆಡೆಯೂ ಅನನುಗತವಾಗುತ್ತದೆ ಎಂದರ್ಥ.

ಆಪ್ತವಾಕ್ಯತ್ವವೆಂಬ ಹೇತುಶರೀರದಲ್ಲಿ ಸೇರಿರುವ ಆಪ್ತಿಯು ಅನನುಗತವಾದರೆ 'ಯಾವುದೆಲ್ಲವೂ ಆಪ್ತವಾಕ್ಯವಾಗಿದೆಯೋ ಅದೆಲ್ಲವೂ ಪ್ರಮಾಣವಾಗಿದೆ' ಎಂಬುದಾಗಿ ಎಲ್ಲಾ ಆಪ್ತವಾಕ್ಯಗಳಲ್ಲಿ ವ್ಯಾಪ್ತಿಯು ಇಲ್ಲದೇ ಇರಬೇಕಾದೀತು. ವ್ಯಕ್ತಿವಿಶೇಷದಲ್ಲಷ್ಟೇ ವ್ಯಾಪ್ತಿಯು ಬರಬೇಕಾದೀತು. ಈ ಪ್ರಶ್ನೆಗೆ 'ಯಥಾ ಚ' ಎಂಬ ವಾಕ್ಯವು ಉತ್ತರಿಸುತ್ತಿದೆ. 'ಅವ್ಯಾಪ್ತಿ' ಎಂದರೆ ವ್ಯಾಪ್ತಿ ಇಲ್ಲದಿರುವಿಕೆ ಎಂದರ್ಥ.

ವಿವರಣೆ – ಯತ್ ಮತ್ತು ತತ್ ಶಬ್ದಗಳು ವ್ಯಕ್ತಿವಿಶೇಷವನ್ನಷ್ಟೇ ತಿಳಿಸುತ್ತವೆ. ಆದ್ದರಿಂದ ಅನುಗತವಾದ ಬೋಧವು ಈ ಲಕ್ಷಣದಿಂದ ಬರುವುದಿಲ್ಲ. ಹಾಗಾಗಿ ಸಾರ್ವತ್ರಿಕವ್ಯವಹಾರವು ಯುಕ್ತವಾಗುವುದಿಲ್ಲ. ಆಪ್ತವಾಕ್ಯತ್ವವೆಂಬ ಹೇತುವಿನಲ್ಲಿ ಸೇರಿರುವ ಆಪ್ತಿಯು ಅನುಗತವಾಗದಿದ್ದರೆ 'ಯಾವುದೆಲ್ಲವು ಆಪ್ತವಾಕ್ಯವಾಗಿದೆಯೋ ಅವೆಲ್ಲವೂ ಪ್ರಮಾಣವಾಗಿವೆ' ಎಂಬ ವ್ಯಾಪ್ತಿಯು ಎಲ್ಲಾ ಆಪ್ತವಾಕ್ಯಗಳಲ್ಲಿ ಸಿದ್ಧವೇ ಆಗುವುದಿಲ್ಲ. ಕೇವಲ ಯತ್ ಮತ್ತು ತತ್ ಶಬ್ದಗಳಿಂದ ತಿಳಿಸುವ ವಾಕ್ಯವಿಶೇಷಗಳ ವಿಷಯಗಳಲ್ಲಷ್ಟೇ ವ್ಯಾಪ್ತಿಯು ಸಿದ್ಧವಾಗುತ್ತದೆ. ಈ ಆಕ್ಷೇಪಕ್ಕೆ 'ಯಥಾ ಚ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

ಅವ್ಯಾಪ್ತಿಶಬ್ದಕ್ಕೆ ಅವ್ಯಾಪ್ತಿದೋಷವೆಂದರ್ಥವಲ್ಲ; ವ್ಯಾಪ್ತಿ ಇಲ್ಲದಿರುವಿಕೆ ಎಂದರ್ಥ. 'ವಿಮತಂ ಪ್ರಮಾಣಂ ಆಪ್ತವಾಕ್ಯತ್ವಾತ್' ಎಂಬ ಅನುಮಾನದಲ್ಲಿ ಅನುಗತವಾದ ವ್ಯಾಪ್ತಿಯು ಇರುವುದಿಲ್ಲ ಎಂಬರ್ಥವನ್ನು ನಾವ್ಯಾಪ್ತಿಃ ಎಂಬುದಕ್ಕೆ ತಿಳಿಯಬೇಕು. ಅಥವಾ, ಅವ್ಯಾಪ್ತಿಶಬ್ದಕ್ಕೆ ಅವ್ಯಾಪ್ತಿದೋಷ-ವೆಂಬರ್ಥವನ್ನೇ ವಿವಕ್ಷಿಸಿ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮಾಡುತ್ತಾರೆ.

## ಅನನುಗತವಾದರೂ ಅವ್ಯಾಪ್ತಿದೋಷವಿಲ್ಲ.

ಪರಿಮಳ– ಯದ್ವಾ, ಆಪ್ತತ್ವಾವಚ್ಛಿನ್ನಾಪ್ತಮಾತ್ರೇ ಅನುಗತಸ್ಯೈಕಸ್ಯಾಭಾವೇ ತತ್ತ-ದ್ವ್ಯಕ್ತಿಮಾತ್ರನಿಷ್ಠಧರ್ಮಸ್ಯೈವ ಆಪ್ತಲಕ್ಷಣತ್ವೇನೋಕ್ತೌ ಏಕತ್ರ ವ್ಯಕ್ತೌ ವಿದ್ಯಮಾನಸ್ಯ ಅನ್ಯತ್ರ ವ್ಯಕ್ತೌ ಅಭಾವೇನ ಆಪ್ತಲಕ್ಷಣಸ್ಯಾವ್ಯಾಪ್ತಿಃ । ಆಪ್ತತ್ವಾವಚ್ಛಿನ್ನಸರ್ವವ್ಯಕ್ತಿಷು 'ಅಯಮಾಪ್ತಃ' ಇತಿ ವ್ಯವಹಾರಶ್ಚ ನ ಸ್ಯಾದಿತ್ಯತ ಆಹ – ಯಥಾ ಚೇತಿ ॥

ಅಥವಾ ಆಪ್ತತ್ವವೆಂಬ ಧರ್ಮದಿಂದ ಕೂಡಿರುವ ಎಲ್ಲಾ ಆಪ್ತರಲ್ಲಿ ಅನುಗತವಾದ ಒಂದು ಆಪ್ತತ್ವವೆಂಬ ಧರ್ಮವು ಇಲ್ಲವೆಂದು ಹೇಳುವುದಾದರೆ ಆಯಾ ವಕ್ತೃಗಳ ಬುದ್ಧಿಯಲ್ಲಿ ವಿಷಯವಾದ ವ್ಯಕ್ತಿಗಳಲ್ಲಿರುವ ಧರ್ಮವನ್ನಷ್ಟೇ ಆಪ್ತಲಕ್ಷಣವೆಂದು ಹೇಳುತ್ತಿದ್ದೀರಿ. ಆಗ ಒಂದು ವ್ಯಕ್ತಿಯಲ್ಲಿ ಇರುವ ಧರ್ಮವು ಇನ್ನೊಂದು ವ್ಯಕ್ತಿಯಲ್ಲಿ ಇರುವುದಿಲ್ಲ. ಅನುಗತವಾದ ಒಂದು ಲಕ್ಷಣವನ್ನು ಹೇಳಿದಂತೆ ಆಗುವುದಿಲ್ಲ. ಆದ್ದರಿಂದ ಆಪ್ತಲಕ್ಷಣವು ಅವ್ಯಾಪ್ತಿದೋಷವುಳ್ಳದ್ದಾಗು-ತ್ತದೆ. ಮತ್ತು ಆಪ್ತತ್ವಧರ್ಮವುಳ್ಳ ಎಲ್ಲಾ ವ್ಯಕ್ತಿಗಳಲ್ಲಿ 'ಇವನು ಆಪ್ತನು' ಎಂಬ ವ್ಯವಹಾರವೂ ಕೂಡ ಕೂಡುವುದಿಲ್ಲ. ಈ ಆಕ್ಷೇಪಕ್ಕೆ ಉತ್ತರವನ್ನು 'ಯಥಾ ಚ' ಎಂಬ ವಾಕ್ಯದಿಂದ ಹೇಳು-ತ್ತಿದ್ದಾರೆ.

## ಅನುಗತಜಾತಿಯಿಲ್ಲದಿದ್ದರೂ ಸಾದೃಶ್ಯದಿಂದಲೇ ನಿರ್ವಹಿಸಬಹುದು

ಪರಿಮಳ– ವೈಶೇಷಿಕಾಧಿಕರಣೇ –

ನರತ್ವಾದಿಕಮಪ್ಯೇವಂ ತತ್ತದ್ಧರ್ಮತಯೇಷ್ಯತೇ ।
ನ ಸರ್ವಧರ್ಮ ಏಕೋಽಸ್ತಿ ಸಮುದಾಯಸ್ತು ಭಿನ್ನಗಃ ॥

ಇತ್ಯಾದಿ ಸಾಮಾನ್ಯಾಸ್ತಿತ್ವನಾಸ್ತಿತ್ವವಿಚಾರಪ್ರಕರಣೇ।

'ಇತಿ ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ।
ಸರ್ವೇಷು ಯುಗಪಚ್ಛಬ್ದಃ ಸದೃಶೇಷು ಚ ವರ್ತತೇ ॥'

ಇತ್ಯಾದಿನಾ ಸಾದೃಶ್ಯೇನೈವ ಅನನುಗತಸ್ಯಾಪಿ ಧರ್ಮಸ್ಯ ನಾವ್ಯಾಪ್ತ್ಯಾದಿಕಮ್ ಇತ್ಯಾದಿ ವಕ್ಷ್ಯಾಮ ಇತ್ಯರ್ಥಃ । ತತ್ರ ಸಾದೃಶ್ಯೇನ ಸಾರ್ವತ್ರಿಕವ್ಯವಹಾರಸ್ಯೈವ ಸ್ಫುಟತ್ವೇಽಪಿ ತುಲ್ಯನ್ಯಾಯತಯಾ ಲಕ್ಷಣಾವ್ಯಾಪ್ತೇರಪಿ ಸುಪರಿಹರತ್ವಾದಿತಿ ಭಾವಃ।

ವೈಶೇಷಿಕಾಧಿಕರಣದಲ್ಲಿ –

'ನರತ್ವಾದಿಕಮಪ್ಯೇವಂ ತತ್ತದ್ಧರ್ಮತಯೇಷ್ಯತೇ।
ನ ಸರ್ವಧರ್ಮ ಏಕೋಽಸ್ತಿ ಸಮುದಾಯಸ್ತು ಭಿನ್ನಗಃ ॥'

'ಸಂಯೋಗಾದಿಗಳಂತೆ ಮನುಷ್ಯತ್ವಾದಿ ಜಾತಿಗಳೂ ಕೂಡ ಪ್ರತಿಯೊಬ್ಬ ಮನುಷ್ಯರಲ್ಲಿ ಭಿನ್ನ ಭಿನ್ನವಾಗಿವೆ. ಅನುಗತವಾಗಿರುವುದಿಲ್ಲ; ರೂಪಾದಿಗಳು ಹೇಗೋ ಹಾಗೆ ಜಾತಿಯೂ ಕೂಡ ಆಯಾ ವ್ಯಕ್ತಿಯ ಧರ್ಮವಾಗಿಯೇ ತೋರುತ್ತದೆ. ಒಂದು ಅನೇಕವಸ್ತುಗಳ ಧರ್ಮವಾಗುವುದಿಲ್ಲ. ಅನೇಕತ್ವವು ಮಾತ್ರ ಅನೇಕವಸ್ತುಗಳಲ್ಲಿ ಇರಲು ಸಾಧ್ಯ. ಬೇರೆ ಯಾವುದೂ ಅನೇಕಪದಾರ್ಥಗಳಲ್ಲಿ ಇರುವುದಿಲ್ಲ'.

ಇತ್ಯಾದಿಯಾಗಿ ಜಾತಿಯನ್ನು ಒಪ್ಪಬೇಕೋ ಬೇಡವೋ ಎಂಬ ವಿಚಾರ ಮಾಡುವ ಪ್ರಕರಣದಲ್ಲಿ ಹೇಳಿದ್ದಾರೆ. 'ಸಾಮಾನ್ಯಪರೀಕ್ಷಾಯಾಂ ವಕ್ಷ್ಯಾಮಃ' ಎಂಬ ಟೀಕಾವಾಕ್ಯಕ್ಕೆ ಹೀಗರ್ಥ–

'ಇತಿ ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ।
ಸರ್ವೇಷು ಯುಗಪಚ್ಛಬ್ದಃ ಸದೃಶೇಷು ಚ ವರ್ತತೇ ॥

'ಶಕ್ತಿಜ್ಞಾನವು ಸಾದೃಶ್ಯನಿಮಿತ್ತವಾಗಿಯೇ ಉಂಟಾಗುತ್ತದೆ. ಅದಕ್ಕಾಗಿ ಜಾತಿಯನ್ನು ಒಪ್ಪ-

ಬೇಕಾಗಿಲ್ಲ. ಗೋವಿನ ಸಾದೃಶ್ಯವು ಇತರ ಎಲ್ಲಾ ಗೋವುಗಳಲ್ಲಿ ಇರುವುದರಿಂದ ಗೌಃ ಎಂಬ ಶಬ್ದಕ್ಕೆ ಅವುಗಳಲ್ಲಿ ವ್ಯುತ್ಪತ್ತಿಯು ಉಂಟಾಗುತ್ತದೆ'

ಎಂಬುದಾಗಿ ವೈಶೇಷಿಕಾಧಿಕರಣದಲ್ಲಿ ಹೇಳಿದ್ದಾರೆ. ಇದರಿಂದ ಜಾತಿಯನ್ನು ಒಪ್ಪದಿದ್ದರೂ ಕೂಡ ಸಾದೃಶ್ಯದಿಂದಲೇ ಎಲ್ಲವನ್ನೂ ಕೂಡಿಸಬಹುದು. ಧರ್ಮವೂ ಕೂಡ ಅನುಗತವಾಗ-ಬೇಕಾಗಿಲ್ಲ. ಅವ್ಯಾಪ್ತಿದೋಷವು ಬರುವುದಿಲ್ಲ. ಹೀಗೆ ಹೇಳುತ್ತೇವೆ ಎಂದರ್ಥ.

ಧರ್ಮಗಳ ಸಾದೃಶ್ಯದಿಂದಲೇ ಎಲ್ಲಾ ಲಕ್ಷ್ಯಗಳಲ್ಲಿ ಶಬ್ದವ್ಯವಹಾರವು ಸ್ಪಷ್ಟವೇ ಆಗಿದೆ. ಆದರೂ ಕೂಡ ಸಮಾನವಾದ ಯುಕ್ತಿ ಇರುವುದರಿಂದ ವ್ಯವಹಾರದಲ್ಲಿ ಕಾರಣವಾದ ನ್ಯಾಯವು ಇಲ್ಲಿಯೂ ಸಮಾನವಾಗಿದೆ. ಹಾಗಾಗಿ ಲಕ್ಷಣಕ್ಕೆ ನೀವು ಹೇಳಿದ ಅವ್ಯಾಪ್ತಿ-ದೋಷವನ್ನು ಸುಲಭವಾಗಿ ಪರಿಹಾರ ಮಾಡಬಹುದು ಎಂಬುದು ಅಭಿಪ್ರಾಯ.

## ಸಾದೃಶ್ಯದಿಂದಲೇ ನಿರ್ವಹಿಸಬಹುದೆನ್ನಲು ತರ್ಕತಾಂಡವದ ಆಧಾರ

**ಪರಿಮಳ– ಅತ ಏವ ಚ ತರ್ಕತಾಂಡವೇ ಸಾದೃಶ್ಯೇನೈವ ಲಕ್ಷಣಾವ್ಯಾಪ್ತಿಂ ಚ ನಿರಸ್ಯ, ಚತುರ್ಣಾಮಪಿ ಪಕ್ಷಾಣಾಮನುವ್ಯಾಖ್ಯಾನೋಕ್ತಂ ಸಾದೃಶ್ಯಮೇವ ಜೀವಾತುರಿತಿ ಗ್ರಂಥೇನ ಸ್ವೋಕ್ತಪಕ್ಷಚತುಷ್ಟಯಂ ಮೂಲಾರೂಢತಯಾ ದರ್ಶಿತಮಿತಿ ಜ್ಞೇಯಮ್ ।**

ಈ ಕಾರಣದಿಂದಲೇ ತರ್ಕತಾಂಡವದಲ್ಲಿ ಹೀಗೆ ಹೇಳಿದ್ದಾರೆ – ಸಾದೃಶ್ಯದಿಂದಲೇ ಲಕ್ಷಣಕ್ಕೆ ಅವ್ಯಾಪ್ತಿದೋಷವನ್ನು ಪರಿಹಾರ ಮಾಡಿ ತಾವು ಹೇಳಿದ ನಾಕೂ ಪಕ್ಷಗಳಿಗೆ ಅನು-ವ್ಯಾಖ್ಯಾನದಲ್ಲಿ ಹೇಳಿದ 'ಸಾದೃಶ್ಯವೇ ಜೀವಾಳ' 'ಸಾದೃಶ್ಯಮೇವ ಜೀವಾತುಃ' ಎಂಬ ಗ್ರಂಥದಿಂದ ತಾವು ಹೇಳಿದ ನಾಕೂಪಕ್ಷಗಳನ್ನು ಮೂಲಾರೂಢವಾಗಿ ತೋರಿಸಿದ್ದಾರೆ ಎಂದು ತಿಳಿಯಬೇಕು.

ವಿವರಣೆ – ತರ್ಕತಾಂಡವದ ಶಕ್ತಿವಾದದಲ್ಲಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಸಾದೃಶ್ಯವನ್ನೇ ಮೂಲಾಧಾರವಾಗಿ ಮಾಡಿಕೊಂಡು ನಾಕು ಪಕ್ಷಗಳನ್ನು ನಿರ್ವಾಹ ಮಾಡಿದ್ದಾರೆ. ೧. ಶಕ್ತಿಗ್ರಹ, ೨. ವ್ಯಾಪ್ತಿಗ್ರಹ, ೩. ಕಾರ್ಯಕಾರಣಭಾವಗ್ರಹ, ೪. ಲಕ್ಷ್ಯಲಕ್ಷಣಭಾವಗ್ರಹ. ಈ ನಾಕೂ ಪಕ್ಷಗಳನ್ನೂ

ಕೂಡ ಕೇವಲ ಸಾದೃಶ್ಯದಿಂದಲೇ ನಿರ್ವಾಹ ಮಾಡಲು ಸಾಧ್ಯವಿದೆ. ಅನುಗತವಾದ ಜಾತಿಯನ್ನು ಒಪ್ಪುವ ಅವಶ್ಯಕತೆಯೇ ಇರುವುದಿಲ್ಲ.

ಪ್ರಕೃತ ಆಪ್ತಲಕ್ಷಣವು ಅನುಗತವಾಗದಿದ್ದರೂ ಕೂಡ ಎಲ್ಲಾ ಆಪ್ತರಲ್ಲಿ ಅಯಮಾಪ್ತಃ ಎಂಬ ವ್ಯವಹಾರವು ಯುಕ್ತವಾಗುತ್ತದೆ.

## ಸ್ವವಿವಕ್ಷಿತವಾದ ಆಪ್ತಿಶಬ್ದಾರ್ಥದ ಪ್ರದರ್ಶನ

ವಾಕ್ಯಾರ್ಥಚಂದ್ರಿಕಾ – ವಾಕ್ಯಾಪ್ರಾಮಾಣ್ಯಸ್ಯ ಅಬೋಧಕತ್ವವಿಪರೀತಬೋಧಕತ್ವನಿಬಂಧನತ್ವಾದ್ ವಿವಕ್ಷಾಭಾವೇ ವಾಕ್ಯಸ್ವರೂಪಸ್ಯೈವ ಅಭಾವಾದ್ ವಕ್ತುರಪಟುಕರಣತ್ವೇ ಚಾಬೋಧಕತ್ವಪ್ರಾಪ್ತೇಃ ತಸ್ಯೈವ ವಿವಕ್ಷಿತಾರ್ಥವಿಪರೀತಜ್ಞಾನವಿಪ್ರಲಿಪ್ಸಾಭ್ಯಾಂ ವಿಪರೀತಬೋಧಕತ್ವಪ್ರಾಪ್ತೇಃ ವಾಕ್ಯಾಪ್ರಾಮಾಣ್ಯಪ್ರಸಂಜಕಹೇತುತ್ವಾತ್ ವಿವಕ್ಷಿತಾರ್ಥತತ್ತ್ವಜ್ಞಾನಾದೇಃ ಆಪ್ತಿಶಬ್ದಾರ್ಥತಯಾ ಸ್ವಾವಿವಕ್ಷಾಂ ದರ್ಶಯತಿ – ಮೈವಮಿತ್ಯಾದಿನಾ ॥

ವಾಕ್ಯ ಅಪ್ರಾಮಾಣ್ಯಕ್ಕೆ ಅಬೋಧಕತ್ವ ಹಾಗೂ ವಿಪರೀತಬೋಧಕತ್ವಗಳು ಕಾರಣವಾಗಿವೆ. ವಕ್ತೃವಿಗೆ ವಿವಕ್ಷೆಯು ಇಲ್ಲದಿದ್ದರೆ ವಾಕ್ಯಸ್ವರೂಪವೇ ಕೂಡುವುದಿಲ್ಲ. ವಕ್ತೃವಿಗೆ ಕರಣಪಾಟವ ಇಲ್ಲದಿದ್ದರೆ ಅಬೋಧಕತ್ವವು ಪ್ರಾಪ್ತವಾಗುತ್ತದೆ. ಆ ವಕ್ತೃವಿಗೆ ವಿವಕ್ಷಿತಾರ್ಥತತ್ವಜ್ಞಾನ ಇಲ್ಲದಿದ್ದರೆ ವಿಪರೀತಜ್ಞಾನ ಹಾಗೂ ವಿಪ್ರಲಿಪ್ಸೆಗಳಿಂದ ವಿಪರೀತಬೋಧಕತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ವಾಕ್ಯಾಪ್ರಾಮಾಣ್ಯಕ್ಕೆ ಯಾವ ನಿಮಿತ್ತಗಳಿವೆಯೋ ಅದನ್ನು ನಿರಾಸ ಮಾಡುವುದಕ್ಕಾಗಿ ವಿವಕ್ಷಿತಾರ್ಥತತ್ವಜ್ಞಾನಾದಿಗಳು ಆವಶ್ಯಕವಾಗಿವೆ. ಇದು ಆಪ್ತಿಶಬ್ದದ ಅರ್ಥವಾಗಿದೆ ಎಂಬುದಾಗಿ ತಮ್ಮ ವಿವಕ್ಷೆಯನ್ನು ಹೇಳುವ ಮೂಲಕ ಸಿದ್ಧಾಂತದ ಪ್ರಕಾರ ಆಪ್ತಿಯ ಲಕ್ಷಣವನ್ನು 'ಮೈವಮ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ – ಅಬೋಧಕವಾದರೆ ಅಥವಾ ವಿಪರೀತಬೋಧಕವಾದರೆ ವಾಕ್ಯವು ಅಪ್ರಮಾಣವಾಗುತ್ತದೆ. ಕರಣಪಾಟವವು ಇಲ್ಲದಿದ್ದರೆ ವಾಕ್ಯವು ಅಬೋಧಕವಾಗುತ್ತದೆ. ವಿವಕ್ಷಿತಾರ್ಥತತ್ವಜ್ಞಾನವು ಇಲ್ಲದಿದ್ದರೆ ಅಥವಾ ವಂಚನೆ ಮಾಡುವ ಮನೋಭಾವನೆ ಇದ್ದರೆ ಆಗ ವಾಕ್ಯವು ವಿಪರೀತಬೋಧಕವಾಗುತ್ತದೆ. ವಿವಕ್ಷಿತಾರ್ಥತತ್ವಜ್ಞಾನವಿದೆ ವಿಪ್ರಲಿಪ್ಸಾ ಇರುವುದಿಲ್ಲ ಎಂದಾಗ ಮಾತ್ರ ವಿಪರೀತಬೋಧಕ ಆಗುವುದಿಲ್ಲ. ಒಂದು ವೇಳೆ ವಕ್ತೃವಿಗೆ ವಿವಕ್ಷೆ ಇಲ್ಲದಿದ್ದರೆ ವಾಕ್ಯವನ್ನೇ ಉಚ್ಚಾರಣೆ ಮಾಡು-

ವುದಿಲ್ಲ. ಆದ್ದರಿಂದ ವಾಕ್ಯಸ್ವರೂಪದ ಸಂಪಾದನೆಗೋಸ್ಕರ ವಕ್ತೃವಿಗೆ ವಿವಕ್ಷೆಯು ಕೂಡ ಇರಬೇಕು. ಅಬೋಧಕತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ಕರಣಪಾಟವವು ಇರಬೇಕು. ವಿಪರೀತಬೋಧಕತ್ವ ನಿರಾಸಕ್ಕೋಸ್ಕರ ವಿವಕ್ಷಿತಾರ್ಥತತ್ತ್ವಜ್ಞಾನವನ್ನು ವಿವಕ್ಷಿಸಬೇಕು. ಅಪ್ರಾಮಾಣ್ಯಕ್ಕೆ ಕಾರಣೀಭೂತವಾದ ಅಬೋಧಕತ್ವ ಹಾಗೂ ವಿಪರೀತಬೋಧಕತ್ವವನ್ನು ನಿರಾಸ ಮಾಡಿದ್ದರಿಂದ ವಾಕ್ಯಪ್ರಾಮಾಣ್ಯವು ಸಿದ್ಧ-ವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಈ ಎಲ್ಲಾ ವಿಶೇಷಣಗಳನ್ನೂ ಹೇಳಿರುತ್ತಾರೆ.

## ಆಪ್ತಿಲಕ್ಷಣದ ಪರಿಷ್ಕಾರ

ವಾಕ್ಯಾರ್ಥಚಂದ್ರಿಕಾ – ಅತ್ರ 'ವಿವಕ್ಷಿತಾರ್ಥತತ್ತ್ವಜ್ಞಾನಾದಿಮತ್ತ್ವಂ ಸರ್ವಥಾ ವಾ, ಕಿಂಚಿದ್ ವಿಶೇಷಿತಂ ವಾ ವಿವಕ್ಷಿತಮ್' ಇತಿ ವಿಕಲ್ಪಂ ಮನಸಿ ನಿಧಾಯ, ಆದ್ಯೇ 'ಅಜ್ಞಾತಸಂದಿಗ್ಧ' ಇತಿ 'ಭೀಮಾಗ್ರಜಸ್ಯಾಪಿ' ಇತಿ 'ಆಪ್ತಾನಾಮಪಿ' ಇತ್ಯುಕ್ತಂ ಪೂರ್ವಲಕ್ಷಣಯೋರ್ದೋಷಂ ಶಂಕತೇ – ಆಪ್ತತ್ವೇತಿ ॥ ಅಲಕ್ಷ್ಯತ್ವಾನ್ನ ಕ್ಷತಿರಿತ್ಯಾಹ – ಮೇತಿ ॥

'ತದಾ' ಇತ್ಯುಕ್ತಿಪ್ರಯೋಜನಮಾಹ – ಕಾಲೇತಿ ॥

ಆಪ್ತಿಲಕ್ಷಣದಲ್ಲಿ ವಿವಕ್ಷಿತವಾದ ವಿವಕ್ಷಿತಾರ್ಥತತ್ತ್ವಜ್ಞಾನಾದಿಗಳ ಇರುವಿಕೆಯು ಸರ್ವಥಾ ವಿವಕ್ಷಿತವೋ ಅಥವಾ ಎಲ್ಲಾ ಕಾಲದಲ್ಲೂ ಎಲ್ಲಾ ಸಂದರ್ಭದಲ್ಲೂ ವಿವಕ್ಷಿತಾರ್ಥತತ್ತ್ವಜ್ಞಾನ ಇರ-ಬೇಕೆಂದು ಹೇಳುತ್ತೀರೋ? ಅಥವಾ 'ಯದಾ, ಯಸ್ಮಿನ್ ವಿಷಯೇ' ಇತ್ಯಾದಿಯಾಗಿ ವಿಶೇಷಣವನ್ನು ನೀಡುವ ಮೂಲಕ ಆಪ್ತಿಲಕ್ಷಣವನ್ನು ಹೇಳುತ್ತೀರೋ? ಹೀಗೆ ವಿಕಲ್ಪವನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಪಕ್ಷದಲ್ಲಿ 'ಅಜ್ಞಾತಸಂದಿಗ್ಧ' ಎಂಬ ವಾಕ್ಯದಿಂದ ಹಿಂದೆ ಹೇಳಲ್ಪಟ್ಟ ಅವ್ಯಾಪ್ತಿದೋಷವು, 'ಭೀಮಾಗ್ರಜಸ್ಯ' ಎಂಬ ವಾಕ್ಯದಿಂದ ಹೇಳಲ್ಪಟ್ಟ ಅವ್ಯಾಪ್ತಿದೋಷವು 'ಆಪ್ತಾನಾಮಪಿ' ಎಂಬ ವಾಕ್ಯದಿಂದ ಆಪ್ತರಿಗೂ ಕೆಲವೊಮ್ಮೆ ರಾಗಾದಿದೋಷಗಳು ಬರುತ್ತವೆಂಬ ದೋಷ ಹೇಳಿದ್ದು ಪ್ರಾಪ್ತವಾಗುತ್ತದೆಂಬ ದೃಷ್ಟಿಯಿಂದ 'ಆಪ್ತತ್ವ' ಎಂಬ ವಾಕ್ಯದಲ್ಲಿ ಆಶಂಕಿಸುತ್ತಿದ್ದಾರೆ. ಯಾವುದಾದರೂ ಪ್ರಸಂಗದಲ್ಲಿ ಭೀಮಾಗ್ರಜಾದಿಗಳು ಸುಳ್ಳು ಹೇಳಿದರೆ ಆಗ ಅವರು ಲಕ್ಷ್ಯರೇ ಆಗುವುದಿಲ್ಲ.

ಆದ್ದರಿಂದ ಯಾವುದೇ ದೋಷವಿಲ್ಲ ಎಂಬುದನ್ನು 'ಮಾ ಭೂತ್' ಎಂಬುದರಿಂದ ಹೇಳಿದ್ದಾರೆ. 'ತದಾ' ಎಂದು ಹೇಳಿದ್ದರ ಪ್ರಯೋಜನವನ್ನು 'ಕಾಲಾದಿಭೇದೇನ' ಎಂಬ ವಾಕ್ಯವು ತಿಳಿಸುತ್ತಿದೆ.

## ಪೂರ್ವಪಕ್ಷಿಯ ಗೂಢಾಭಿಸಂಧಿಯು ಸಿದ್ಧಾಂತಿಗೆ ಇಷ್ಟವಾಗಿದೆ

ವಾಕ್ಯಾರ್ಥಚಂದ್ರಿಕಾ – ಆಪ್ತತ್ವಾನಾಪ್ತತ್ವಯೋಃ ಸಮಾವೇಶಸ್ಯ ಲಕ್ಷಣಸ್ಯ ಅವಿಶೇಷಿತತ್ವೇಽನುಪಪತ್ತ್ಯಾ ಸಮಾವೇಶಂ ಕಥಯತೋ ದ್ವಿತೀಯಪಕ್ಷಾಭಿಪ್ರಾಯಂ ಗೂಢಾಭಿಸಂಧಿಃ ಉದ್ಘಾಟಯತಿ – ಏವಮಿತಿ ॥ ಗೂಢಾಭಿಸಂಧಿರೇವ ಸಿದ್ಧಾಂತೀ ತಂ ಪಕ್ಷಮಂಗೀಕರೋತಿ – ಅಸ್ತ್ವಿತಿ ॥ ಪೂರ್ವಲಕ್ಷಣೋಕ್ತದೋಷೋ ಅತ್ರಾಪಿ ನ ನಿವೃತ್ತ ಇತಿ ಪೂರ್ವವಾದೀ ಸ್ವಾಶಯಮುದ್ಘಾಟಯತಿ – ಯತ್ತದಿತಿ ॥ ಸಿದ್ಧಾಂತೀ ಸ್ವಾಶಯಮುದ್ಘಾಟಯತಿ – ಕೋಽಯಮಿತಿ ॥ ಅನುಗಮಶಬ್ದಸ್ಯ ರೂಢಿಭಾವವ್ಯುತ್ಪತ್ತಿಭ್ಯಾಮ್ ಏಕಸ್ಯಾನೇಕವೃತ್ತಿತ್ವೇ , ರೂಢಿಕರಣವ್ಯುತ್ಪತ್ತಿಭ್ಯಾಂ ಚಾನುಗಮಕೇ ಪ್ರವೃತ್ತೇರ್ವಿಕಲ್ಪೋಪಪತ್ತಿಃ । ಅದೋಷತ್ವಾದಿತಿ ॥ ಏಕಸ್ಯಾನೇಕವೃತ್ತಿತ್ವಾಭಾವಸ್ಯ ಸ್ವಯಂ ಲಕ್ಷಣದೋಷರೂಪತ್ವಾಭಾವಾದಿತ್ಯರ್ಥಃ।

ಆಪ್ತತ್ವ ಹಾಗೂ ಅನಾಪ್ತತ್ವಗಳೆರಡೂ ಒಬ್ಬನೇ ವ್ಯಕ್ತಿಯಲ್ಲಿ ಸಮಾವೇಶವಾಗಿರುತ್ತವೆ ಎಂದು ಟೀಕೆಯಲ್ಲಿ ಹೇಳಲಾಗಿದೆ. ಒಂದು ವೇಳೆ ಲಕ್ಷಣದಲ್ಲಿ ಯಾವುದೇ ವಿಶೇಷಣವನ್ನು ಹೇಳದಿದ್ದರೆ ಈ ಸಮಾವೇಶವು ಅನುಪಪನ್ನವಾಗುತ್ತದೆ. ಸಮಾವೇಶವನ್ನು ಹೇಳಿದ್ದರಿಂದಲೇ 'ಕಿಂಚಿದ್ವಿಶೇಷಿತಂ' ಎಂಬ ಎರಡನೆಯ ಪಕ್ಷವು ಸುಧಾಕಾರರಿಗೆ ಸಮ್ಮತವೆಂದು ತಿಳಿಯುತ್ತದೆ. ಈ ಅಭಿಪ್ರಾಯದಿಂದ ಪೂರ್ವಪಕ್ಷಿಯು ತನ್ನ ಗೂಢಾಭಿಸಂಧಿಯನ್ನು 'ಏವಂ' ಎಂಬ ವಾಕ್ಯದಿಂದ ಉದ್ಘಾಟನೆ ಮಾಡುತ್ತಿದ್ದಾನೆ. ಸಿದ್ಧಾಂತಿಯು ತನ್ನ ಗೂಢಾಭಿಸಂಧಿಯನ್ನು ಉದ್ಘಾಟನೆ ಮಾಡುವ ಮೂಲಕ ಆ ಎರಡನೆಯ ಪಕ್ಷವನ್ನೇ ಸಿದ್ಧಾಂತದಲ್ಲಿ 'ಅಸ್ತು' ಇತ್ಯಾದಿಯಾಗಿ ಅಂಗೀಕರಿಸಲಾಗಿದೆ.

ಹಿಂದಿನ ಲಕ್ಷಣದಲ್ಲಿ ಹೇಳಲ್ಪಟ್ಟ ದೋಷವು ಇಲ್ಲೂ ಕೂಡ ಪರಿಹಾರ ಆಗಿರುವುದಿಲ್ಲ ಎಂಬುದಾಗಿ ಪೂರ್ವಪಕ್ಷಿಯು ತನ್ನ ಅಭಿಪ್ರಾಯವನ್ನು 'ಯತ್ತತ್' ಎಂದು ಸ್ಪಷ್ಟವಾಗಿ ತೋರಿಸಿದ್ದಾನೆ. ಸಿದ್ಧಾಂತಿಯು ತನ್ನ ಅಭಿಪ್ರಾಯವನ್ನು 'ಕೋಽಯಂ' ಎಂಬಿತ್ಯಾದಿಯಾಗಿ ಸ್ಪಷ್ಟವಾಗಿ ತೋರಿಸಿದ್ದಾನೆ.

ಅನುಗಮಶಬ್ದಕ್ಕೆ ರೂಢಿ ಹಾಗೂ ಭಾವವ್ಯುತ್ಪತ್ತಿಗಳಿಂದ ಏಕಸ್ಯ ಅನೇಕವೃತ್ತಿತ್ವವೆಂಬ ಅರ್ಥವನ್ನು ಅಂಗೀಕರಿಸಲಾಗಿದೆ. ಇದೇ ಅನುಗಮಶಬ್ದಕ್ಕೆ ರೂಢಿ ಹಾಗೂ ಕರಣವ್ಯುತ್ಪತ್ತಿಯಿಂದ ಸಾರ್ವತ್ರಿಕವ್ಯವಹಾರಕಾರಣತ್ವ ಎಂಬರ್ಥದಲ್ಲಿ ಅನುಗಮಕವಾಗಿದೆ ಎಂಬರ್ಥವನ್ನು ಅಂಗೀಕರಿಸಲಾಗಿದೆ. ಆದ್ದರಿಂದ ಅನನುಗಮಶಬ್ದಕ್ಕೆ ಟೀಕೆಯಲ್ಲಿ ಎರಡು ವಿಕಲ್ಪಗಳನ್ನು ಮಾಡಿರುತ್ತಾರೆ.

'ಅದೋಷತ್ವಾತ್' ಎಂಬುದರ ಅಭಿಪ್ರಾಯ ಹೀಗಿದೆ. 'ಏಕಸ್ಯ ಅನೇಕವೃತ್ತಿತ್ವಾಭಾವ' ಎಂಬುದು ಲಕ್ಷಣಕ್ಕೆ ಸ್ವತಃ ದೋಷ ಆಗುವುದಿಲ್ಲ ಎಂದರ್ಥ.

ವಿಶೇಷವಿಚಾರ– ಆಪ್ತತ್ವ ಹಾಗೂ ಅನಾಪ್ತತ್ವಗಳಿಗೆ ಕಾಲಾದಿಭೇದದಿಂದ ಸಮಾವೇಶವನ್ನು ಹೇಳುತ್ತಿದ್ದಾರೆ. ಒಂದು ವೇಳೆ ಲಕ್ಷಣವು ಅವಿಶೇಷಿತವಾಗಿದ್ದರೆ ಈ ಸಮಾವೇಶವು ಅನುಪಪನ್ನ-ವಾಗುತ್ತಿತ್ತು. ಸಮಾವೇಶವನ್ನು ಹೇಳುತ್ತಿರುವುದರಿಂದಲೇ 'ಯತ್ಕಿಂಚಿತ್ ವಿಶೇಷಿತಂ' ಎಂಬ ದ್ವಿತೀಯ-ಪಕ್ಷವೇ ಅಭಿಪ್ರೇತವಾಗಿದೆಯೆಂದು ತಿಳಿಯುತ್ತದೆ. ಪೂರ್ವಪಕ್ಷಿಯು ಗೂಢಾಭಿಸಂಧಿಯನ್ನು ಉದ್ಘಾಟನೆ ಮಾಡುತ್ತಿದ್ದಾನೆ. ಅದನ್ನು 'ಏವಂ ಸತಿ' ಎಂಬ ವಾಕ್ಯದಲ್ಲಿ ತೋರಿಸಿದ್ದಾರೆ. 'ಯತ್ತತ್‌ಶಬ್ದಾರ್ಥಗಳು ಅನುಗತವಾಗಿರುವುದಿಲ್ಲ' ಎಂಬುದೇ ಪೂರ್ವಪಕ್ಷಿಯ ಗೂಢಾಭಿಸಂಧಿಯಾಗಿದೆ. ಸಿದ್ಧಾಂತದಲ್ಲಿ ಈ ಗೂಢಾಭಿಸಂಧಿಯನ್ನು ಅಂಗೀಕರಿಸಲಾಗಿದೆ. ಯತ್‌ಶಬ್ದ ಹಾಗೂ ತತ್‌ಶಬ್ದಗಳನ್ನು ಸೇರಿಸಿದ ಲಕ್ಷಣವನ್ನೇ ನಾವು ಒಪ್ಪುತ್ತೇವೆ. ಅನನುಗಮದೋಷ ಬರುತ್ತದಲ್ಲವೇ ಎಂದು ಪೂರ್ವಪಕ್ಷಿಯು ಪ್ರಶ್ನಿಸಿದರೆ ಅದು ನಮಗೆ ಬಾಧಕವಲ್ಲ ಎಂಬ ಗೂಢಾಭಿಸಂಧಿಯನ್ನು ಸಿದ್ಧಾಂತಿಗಳು ಒಪ್ಪಿದ್ದಾರೆ ಎಂದು ತಿಳಿಯಬೇಕು. ಪೂರ್ವಪಕ್ಷಿಯು ತನ್ನ ಗೂಢಾಭಿಸಂಧಿಯನ್ನು ಸ್ಪಷ್ಟವಾಗಿ ಹೇಳಿರುವುದನ್ನು 'ಯತ್ತಚ್ಛಬ್ದಾರ್ಥಯೋಃ' ಎಂಬ ವಾಕ್ಯದಲ್ಲಿ ತೋರಿಸಿದ್ದಾರೆ. ಸಿದ್ಧಾಂತಿಗಳು ತಮ್ಮ ಗೂಢಾಭಿಸಂಧಿಯನ್ನು ಸ್ಪಷ್ಟವಾಗಿ ತೋರಿಸಿ-ಕೊಂಡಿದ್ದನ್ನು 'ಕೋಽಯಂ' ಎಂಬ ವಾಕ್ಯದಿಂದ ಹೇಳಿರುತ್ತಾರೆ.

ಟೀಕೆಯಲ್ಲಿ 'ಕಿಂ ಸಾರ್ವತ್ರಿಕವ್ಯವಹಾರಾನೌಪಯಿಕತ್ವಂ, ಉತ ಏಕಸ್ಯ ಅನೇಕವೃತ್ತಿತ್ವಾಭಾವಃ' ಎಂಬುದಾಗಿ ಎರಡು ಪಕ್ಷವನ್ನು ಉಲ್ಲೇಖ ಮಾಡಿದ್ದಾರೆ. ಸಾರ್ವತ್ರಿಕವ್ಯವಹಾರಾನೌಪಯಿಕತ್ವ ಹಾಗೂ ಏಕಸ್ಯ ಅನೇಕವೃತ್ತಿತ್ವಾಭಾವವನ್ನು ಅನನುಗಮ ಎಂದು ಹೇಳಿದರೆ ಸಾರ್ವತ್ರಿಕವ್ಯವಹಾರಕಾರಣತ್ವವನ್ನು ಮತ್ತು ಏಕಸ್ಯ ಅನೇಕವೃತ್ತಿತ್ವವನ್ನು ಅನುಗಮ ಎಂದು ಹೇಳಿದಂತಾಗುತ್ತದೆ. ಮೊದಲನೆಯ ಅರ್ಥವು ರೂಢಿ ಹಾಗೂ ಭಾವವ್ಯುತ್ಪತ್ತಿಯಿಂದ ತಿಳಿಯುತ್ತದೆ. ಎರಡನೆಯ ಅರ್ಥವು ರೂಢಿ ಹಾಗೂ ಕರಣ-ವ್ಯುತ್ಪತ್ತಿಯಿಂದ ತಿಳಿಯುತ್ತದೆ. ಒಂದೇ ಪೃಥಿವೀತ್ವ ಎಂಬ ಧರ್ಮವು ಸರ್ವಪೃಥಿವೀಗಳಲ್ಲಿ ಇರುತ್ತದೆ ಎಂಬುದಾಗಿ ಅನುಗಮನವನ್ನೇ ಅನುಗಮ ಎಂದು ಹೇಳಿದರೆ ಏಕಸ್ಯ ಅನೇಕವೃತ್ತಿತ್ವವನ್ನು ಹೇಳಿ-ದಂತಾಗುತ್ತದೆ. ಇದರಂತೆ 'ಸಾರ್ವತ್ರಿಕವ್ಯವಹಾರಾನೌಪಯಿಕತ್ವಂ' ಇದು ಕರಣವ್ಯವಹಾರದಿಂದ ತಿಳಿಯುತ್ತದೆ. 'ಅನುಗಚ್ಛತಿ ಅನೇನ ಇತಿ ಅನುಗಮಃ' ಎಂಬ ವ್ಯುತ್ಪತ್ತಿಯಿಂದ ಯಾವುದರಿಂದ ಸಾರ್ವತ್ರಿಕವ್ಯವಹಾರವು ಆಗುತ್ತದೋ ಅದು ಅನುಗಮ ಎಂದು ಕರೆಸಿಕೊಳ್ಳುತ್ತದೆ. ಈ ಎರಡೂ ಅರ್ಥದಲ್ಲಿ ರೂಢಿಯು ಸಮಾನವಾಗಿದೆ. ಸಾರ್ವತ್ರಿಕವ್ಯವಹಾರಸಂಪಾದಕತ್ವವನ್ನು ಅನುಗಮಕ

ಎನ್ನುತ್ತಾರೆ. ಇದನ್ನೂ ಕೂಡ ಅನುಗಮ ಎಂದೇ ವ್ಯವಹರಿಸುತ್ತಾರೆ. ಈ ದೃಷ್ಟಿಯಿಂದ ವಿಕಲ್ಪಗಳನ್ನು ಮಾಡಿದ್ದಾರೆಂದು ತಿಳಿಯಬೇಕು.

ಲಕ್ಷಣಕ್ಕೆ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವದೋಷಗಳಷ್ಟೇ ಪ್ರಸಿದ್ಧವಾಗಿವೆ. 'ಒಂದು ಅನೇಕ ಪದಾರ್ಥಗಳಲ್ಲಿ ಇಲ್ಲದೇ ಇರುವಿಕೆ' ಎಂಬುದು ಲಕ್ಷಣದೋಷವೆಂದು ಹೇಳಲು ಸಾಧ್ಯವಿಲ್ಲ.

## ಲಕ್ಷಣದ ಲಕ್ಷಣವೇನು?

ವಾಕ್ಯಾರ್ಥಚಂದ್ರಿಕಾ – ನನು ಲಕ್ಷಣಸ್ಯಾನೇಕಲಕ್ಷ್ಯವೃತ್ತಿತ್ವಾಭಾವ ಏವಾವ್ಯಾಪ್ತಿರಿತಿ ಕಥಂ ನಾಯಂ ದೋಷಃ । ಕಥಂ ಚ 'ಯೋ ಯಸ್ಯ ಸುತಃ' ಇತ್ಯಾದೌ ಉಪಲಬ್ಧಿಮಾತ್ರೇಣ ಘಟತ್ವ-ಪಟತ್ವಾದ್ಯನಂತಾನನುಗತಧರ್ಮೇಷ್ವದೃಷ್ಟಾ ಸಾರ್ವತ್ರಿಕವ್ಯವಹಾರಹೇತುನಾ ವಿನೋಪಪಾದಕಂ ನಿಶ್ಚೇತುಂ ಶಕ್ಯಾ । ಅನ್ಯಥಾ ಯಾವದ್ ದ್ರವ್ಯಭಾವಿರೂಪಾದಿಷು ಅಭೇದಸ್ಯ ಧರ್ಮಧರ್ಮಿಭಾವಸ್ಯ ಚೋಪಲಬ್ಧಿಮಾತ್ರೇಣ ಸ್ವೀಕರ್ತವ್ಯತಾಽಽಪತ್ತ್ಯಾ, ತದುಪಪಾದಕತ್ವೇನ ವಿಶೇಷೋಽಪಿ ನ ತ್ವತ್ಸಿದ್ಧಾಂತೇ ಕಲ್ಪನೀಯಃ ಸ್ಯಾತ್ ಇತ್ಯತೋ ನ ಲಕ್ಷಣಸ್ಯಾನೇಕವೃತ್ತಿತ್ವಾಭಾವಮಾತ್ರಮವ್ಯಾಪ್ತಿರಪಿ ತು ಲಕ್ಷ್ಯಜಾತೀಯೇ ಲಕ್ಷಣಜಾತೀಯಸ್ಯಾವೃತ್ತಿಃ । ಯದ್ಯಪಿ ಮನ್ಮತೇ ಜಾತೇರಪ್ಯನನುಗತತ್ವಾತ್ ನ ಸಾಜಾತ್ಯಮೇಕಜಾತೀಯತ್ವಂ ತಥಾಽಪಿ ಸದೃಶಜಾತ್ಯಾಶ್ರಯತ್ವರೂಪಂ ತದುಪಪದ್ಯತ ಏವ ।

ಲಕ್ಷಣಕ್ಕೆ ಅನೇಕ ಲಕ್ಷ್ಯಗಳಲ್ಲಿ ಇಲ್ಲದಿರುವಿಕೆಯು ಅವ್ಯಾಪ್ತಿ ಎಂದೇ ಅನಿಸುತ್ತದೆ. ಆದ್ದರಿಂದ ಅನೇಕವೃತ್ತಿತ್ವಾಭಾವವು ದೋಷವಲ್ಲವೆಂದು ಹೇಗೆ ಹೇಳುತ್ತೀರಿ? ಮತ್ತು 'ಯೋ ಯಸ್ಯ ಸುತಃ' ಎಂಬಲ್ಲಿ ಉಪಲಬ್ಧವಾಗಿದೆ ಎಂಬುದರಿಂದಷ್ಟೇ ಘಟತ್ವ, ಪಟತ್ವ ಮೊದಲಾದ ಅನಂತವಾದ ಅನನುಗತ ಧರ್ಮಗಳಲ್ಲಿ ಅದೃಷ್ಟವಾದ ಸಾರ್ವತ್ರಿಕವ್ಯವಹಾರಹೇತುತ್ವವನ್ನು ಉಪಪಾದಕವಿಲ್ಲದೇ ಹೇಗೆ ತಾನೇ ನಿಶ್ಚಯ ಮಾಡಲು ಸಾಧ್ಯವಾಗುತ್ತದೆ? ಉಪಪಾದಕ ಇಲ್ಲದೇ ಇದ್ದರೂ ಕೂಡ ಉಪಲಬ್ಧವಾಗಿದೆ ಎಂಬುದರಿಂದಷ್ಟೇ ನಿರ್ಧಾರಣೆ ಮಾಡುವುದಾದರೆ ವಿಶೇಷವನ್ನೂ ಕೂಡ ನಿಮ್ಮ ಸಿದ್ಧಾಂತದಲ್ಲಿ ಒಪ್ಪದೇ ಇರಬೇಕಾಗುತ್ತದೆ. ಯಾವದ್ ದ್ರವ್ಯಭಾವಿಯಾದ ರೂಪಾದಿಗಳಲ್ಲಿ ಅಭೇದವಿದೆ. ರೂಪಾದಿಗಳಿಗೂ ಘಟಾದಿಗಳಿಗೂ ಧರ್ಮ-ಧರ್ಮಿಭಾವವು ಉಪಲಬ್ಧವಾಗಿದೆ. ಈ ಅಭೇದ ಹಾಗೂ ಧರ್ಮಧರ್ಮಿ-ಭಾವವು ಉಪಲಬ್ಧವಾಗಿದೆ ಎಂಬುದರಿಂದಷ್ಟೇ ಅಂಗೀಕರಿಸಬಹುದು. ಅದಕ್ಕೆ ಉಪಪಾದಕವಾಗಿ ವಿಶೇಷವನ್ನು ನೀವು ಅಂಗೀಕಾರ ಮಾಡುವ ಅವಶ್ಯಕತೆ ಇರುವುದಿಲ್ಲ?

ಈ ಎರಡೂ ಪ್ರಶ್ನೆಗಳು ಅಯುಕ್ತವಾಗಿವೆ. ಲಕ್ಷಣಕ್ಕೆ ಅನೇಕವೃತ್ತಿತ್ವಾಭಾವವಷ್ಟೇ ಅವ್ಯಾಪ್ತಿ-ಯೆಂದು ನಾವು ಹೇಳುವುದಿಲ್ಲ. ಮತ್ತೇನೆಂದರೆ ಲಕ್ಷ್ಯಜಾತೀಯದಲ್ಲಿ ಲಕ್ಷಣಜಾತೀಯವು ಇರದಿದ್ದರೆ ಅವ್ಯಾಪ್ತಿಯಾಗುತ್ತದೆಂದು ಹೇಳುತ್ತೇವೆ. ವಾಸ್ತವಿಕವಾಗಿ ನಮ್ಮ ಮತದಲ್ಲಿ ಜಾತಿಯು ಕೂಡ ಅನನು-ಗತವಾಗಿದೆ. ಆದ್ದರಿಂದ ಸಾಜಾತ್ಯವಾಗಲೀ ಏಕಜಾತೀಯತ್ವವಾಗಲೀ ನಾವು ಅಂಗೀಕಾರ ಮಾಡಿರುವು-ದಿಲ್ಲ. ಆದರೆ ಸದೃಶಜಾತ್ಯಾಶ್ರಯತ್ವದಿಂದ ಎಲ್ಲವನ್ನೂ ಕೂಡ ಉಪಪಾದನೆ ಮಾಡುತ್ತೇವೆ.

ವಿವರಣೆ – ಅನೇಕವೃತ್ತಿತ್ವಾಭಾವವನ್ನು ಹೇಳಿದರೆ ಲಕ್ಷಣಕ್ಕೆ ದೋಷವನ್ನು ಹೇಳಿದಂತೆ ಆಗುವುದಿಲ್ಲ ಎಂದು ಹೇಗೆ ಹೇಳುವಿರಿ? ಏಕೆಂದರೆ ಲಕ್ಷಣವು ಎಲ್ಲಾ ಲಕ್ಷ್ಯಗಳಲ್ಲಿ ಇರಬೇಕು. ಅನೇಕ ಲಕ್ಷ್ಯಗಳಲ್ಲಿ ಲಕ್ಷಣವು ಇಲ್ಲದಿದ್ದರೆ ಅವ್ಯಾಪ್ತಿದೋಷವನ್ನು ಹೇಳಿದಂತಾಗುತ್ತದೆ. ಹೀಗಿರುವಾಗ ಅನೇಕವೃತ್ತಿತ್ವಾ-ಭಾವವನ್ನು ದೋಷವಲ್ಲವೆಂದು ಹೇಗೆ ಹೇಳುವಿರಿ?

ಮತ್ತೊಂದು ಆಕ್ಷೇಪ – ಕಂಡಿದೆ ಎಂಬ ಮಾತ್ರಕ್ಕೆ ನಿಶ್ಚಯ ಮಾಡಲು ಸಾಧ್ಯವಿಲ್ಲ. ಅದಕ್ಕೆ ಉಪಪಾದಕದ ಅವಶ್ಯಕತೆ ಇದ್ದೇ ಇದೆ. ಘಟತ್ವ, ಪಟತ್ವ ಮೊದಲಾದ ಧರ್ಮಗಳು ಅನನುಗತವಾಗಿವೆ. ಘಟತ್ವವು ಪಟತ್ವದಲ್ಲಿ ಅನುಗತವಾಗಿಲ್ಲ ಹೀಗೆ ಅನನುಗತವಾದ ಧರ್ಮಗಳಲ್ಲಿ ಸಾರ್ವತ್ರಿಕವ್ಯವಹಾರ-ಹೇತುತ್ವವನ್ನು ಈ ಘಟತ್ವಪಟತ್ವಾದಿಗಳಲ್ಲಿ ಕಂಡಿರುವುದಿಲ್ಲ. ಹೀಗೆ ಅನ್ಯತ್ರ ಅದೃಷ್ಟವಾದ ಸಾರ್ವತ್ರಿಕ-ವ್ಯವಹಾರಹೇತುತ್ವವನ್ನು 'ಯೋ ಯಸ್ಯ ಸುತಃ' ಇತ್ಯಾದಿ ವ್ಯವಹಾರದಲ್ಲಿ ಹೇಗೆ ಉಪಪಾದಕವಿಲ್ಲದೇ ಅಂಗೀಕರಿಸುತ್ತೀರಿ? ಕೇವಲ ಉಪಲಬ್ಧಿಮಾತ್ರದಿಂದ ನಿಶ್ಚಯಮಾಡಲು ಹೇಗೆ ಸಾಧ್ಯವಾಗುತ್ತದೆ. ಕಂಡಿರುವ ಮಾತ್ರಕ್ಕೆ ಅಂಗೀಕಾರ ಮಾಡುವುದಾದರೆ ವಿಶೇಷವನ್ನೂ ಕೂಡ ನೀವು ಅಂಗೀಕಾರ ಮಾಡು-ವುದೇ ಬೇಡ. ಏಕೆಂದರೆ ಯಾವದ್ ದ್ರವ್ಯಭಾವಿಯಾದ ಘಟರೂಪಾದಿಗಳಲ್ಲಿ ಅಭೇದವು ಕಂಡಿದೆ. ಧರ್ಮಧರ್ಮಿಭಾವವು ಕೂಡ ಕಂಡಿದೆ. ಹೀಗೆ ಅಭೇದ ಹಾಗೂ ಧರ್ಮಧರ್ಮಿಭಾವವು ಕಂಡಿರು-ವುದರಿಂದ ಸ್ವೀಕರಿಸಬಹುದು. ಇದಕ್ಕೆ ಉಪಪಾದಕವಾಗಿ ವಿಶೇಷವನ್ನೇಕೆ ಅಂಗೀಕರಿಸಬೇಕು? ಆದ್ದರಿಂದ ಅನುಭವವೆಂಬ ಉಪಲಬ್ಧಿ ಎಂಬ ಪ್ರಮಾಣದಿಂದಲೇ ಎಲ್ಲವನ್ನೂ ಕೂಡಿಸಲು ಬರುವಾಗ ಉಪಪಾ-ದಕವು ಅನಾವಶ್ಯಕವಲ್ಲವೇ?

ಈ ಎರಡೂ ಬಗೆಯ ಆಕ್ಷೇಪಗಳು ಅಯುಕ್ತವಾಗುತ್ತವೆ. ಮೊದಲು ಅವ್ಯಾಪ್ತಿಯ ಲಕ್ಷಣವನ್ನು ಸ್ಪಷ್ಟವಾಗಿ ನೀವು ತಿಳಿಯಬೇಕು. ಲಕ್ಷಣವು ಅನೇಕಪದಾರ್ಥಗಳಲ್ಲಿ ಇಲ್ಲದಿರುವುದನ್ನಷ್ಟೇ ಅವ್ಯಾಪ್ತಿ ಎಂದು ಹೇಳಬಾರದು. ಮತ್ತೇನೆಂದರೆ, ಲಕ್ಷ್ಯಜಾತೀಯದಲ್ಲಿ ಲಕ್ಷಣಜಾತೀಯವು ಇಲ್ಲದಿರುವುದನ್ನು ಅವ್ಯಾಪ್ತಿ ಎಂದು ಹೇಳಬೇಕು. ವಾಸ್ತವಿಕವಾಗಿ ನಮ್ಮ ಮತದಲ್ಲಿ ಜಾತಿಯೂ ಕೂಡ ಅನನುಗತವಾಗಿದೆ.

ಆದ್ದರಿಂದ ಸಾಜಾತ್ಯ ಅಥವಾ ಏಕಜಾತೀಯತ್ವವನ್ನು ನಾವು ಅಂಗೀಕಾರ ಮಾಡಿರುವುದೇ ಇಲ್ಲ. ಆದರೆ ಸದೃಶಜಾತ್ಯಾಶ್ರಯತ್ವವನ್ನು ಅಂಗೀಕಾರ ಮಾಡಿರುವುದರಿಂದ ವ್ಯವಹಾರವು ಉಪಪನ್ನವಾಗುತ್ತದೆ.

'ಸಾಸ್ನಾದಿಮತ್ವಂ ಗೌರ್ಲಕ್ಷಣಮ್' ಎಂಬುದಾಗಿ ಹೇಳುತ್ತೇವೆ. ಸಕಲಗೋವುಗಳಲ್ಲಿ ಒಂದೇ ಸಾಸ್ನಾದಿಮತ್ವವು ಇರಲು ಸಾಧ್ಯವಿಲ್ಲ ಎಂಬುದು ನಮ್ಮ ಸಿದ್ಧಾಂತ. ಏಕೆಂದರೆ ಸಾಸ್ನಾದಿಮತ್ವ ಎಂಬ ಜಾತಿಯು ಪ್ರತಿಯೊಂದು ಹಸುಗಳಲ್ಲಿಯೂ ಭಿನ್ನಭಿನ್ನವಾಗಿದೆ. ಹಾಗಾದರೆ 'ಸಾಸ್ನಾದಿಮತ್ವ' ಎಂಬ ಒಂದು ಲಕ್ಷಣವು ಸಕಲಗೋವುಗಳಲ್ಲಿ ಬರುತ್ತಿಲ್ಲವಾದ್ದರಿಂದ ಅವ್ಯಾಪ್ತ್ಯಾದಿ ದೋಷಗಳು ಬರುತ್ತದಲ್ಲವೇ ಎಂದು ಪ್ರಶ್ನಿಸಬಾರದು. ಒಂದೇ ಸಾಸ್ನಾದಿಮತ್ವ ಸಕಲಗೋವುಗಳಲ್ಲಿ ಇಲ್ಲದೇ ಇದ್ದರೂ ಕೂಡ ಒಂದು ಗೋವಿನಲ್ಲಿರುವ ಸಾಸ್ನಾದಿಮತ್ವಕ್ಕೆ ಸದೃಶವಾದ ಸಾಸ್ನಾದಿಮತ್ವವು ಉಳಿದ ಗೋವುಗಳಲ್ಲಿ ಇರುವ ಕಾರಣ ಸದೃಶಜಾತ್ಯಾಶ್ರಯತ್ವವೆಂಬ ಲಕ್ಷಣವು ಬರುತ್ತದೆ. ಆದ್ದರಿಂದ ಲಕ್ಷ್ಯಜಾತೀಯಗಳಲ್ಲಿ ಲಕ್ಷಣ-ಜಾತೀಯಗಳೂ ಇರಬೇಕು ಎಂಬುದೇ ಲಕ್ಷಣದ ಲಕ್ಷಣ. ತಾರ್ಕಿಕರು ಹೇಳುವಂತೆ ಒಂದೇ ಲಕ್ಷಣವು ಎಲ್ಲಾ ಲಕ್ಷ್ಯಗಳಲ್ಲಿ ಇರಬೇಕೆಂಬುದು ಲಕ್ಷಣದ ಲಕ್ಷಣವಲ್ಲ. ಏಕೆಂದರೆ ಜಾತಿಯು ಅನನುಗತವೆಂದು ನಾವು ಅಂಗೀಕರಿಸಿದ್ದೇವೆ. ಆದರೆ ಸದೃಶಜಾತ್ಯಾಶ್ರಯತ್ವವು ಎಲ್ಲಾ ಲಕ್ಷ್ಯಗಳಲ್ಲಿ ಬರುವುದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

## ಆಪ್ತಿಲಕ್ಷಣವು ಅನನುಗತವಾದರೂ ದೋಷವಿಲ್ಲ

ವಾಕ್ಯಾರ್ಥಚಂದ್ರಿಕಾ – ಯದ್ಯಪಿ ಮನ್ಮತೇ ಗವಾದಿಶಬ್ದಪ್ರವೃತ್ತಿನಿಮಿತ್ತಗೋತ್ವಾದಿ-ಜಾತೀನಾಂ ಸಾದೃಶ್ಯೇ ವಿದ್ಯಮಾನೇಽಪಿ ಯತ್ತದಾದಿಶಬ್ದಪ್ರವೃತ್ತಿನಿಮಿತ್ತಘಟತ್ವದೇವದತ್ತತ್ವಾದೀನಾಂ ಸಾದೃಶ್ಯಾಭಾವಃ ತಥಾಽಪಿ ತದಾದಿಶಬ್ದಾನಾಂ ಘಟತ್ವಾದ್ಯವಚ್ಛಿನ್ನಘಟಾದಿಶಕ್ತಿಗ್ರಹೇ ವಕ್ತೃಬುದ್ಧೇ-ರುಪಾಧಿತಯಾ ಸ್ವೀಕೃತತ್ವಾತ್ ತಸ್ಯಾಶ್ಚ ಸದೃಶತ್ವಾತ್ ಬುದ್ಧಿದ್ವಾರಕಂ ತದಾದಿಶಬ್ದಪ್ರವೃತ್ತಿನಿಮಿತ್ತ-ಘಟತ್ವಾದೌ ಸಾದೃಶ್ಯಂ ವಿವಕ್ಷಿತ್ವಾ ಸದೃಶಜಾತ್ಯಾಶ್ರಯತ್ವಂ ಮಯಾಽಪಿ ವಕ್ತುಂ ಶಕ್ಯತ ಏವ । ತದೇವ ಸದೃಶಜಾತ್ಯಾಶ್ರಯತ್ವಮುಪಪಾದಕಂ ವಿವಕ್ಷಿತ್ವಾ ಸಾರ್ವತ್ರಿಕವ್ಯವಹಾರಹೇತುತ್ವಮಪಿ ಸೂಪ-ಪಾದಮಿತ್ಯಾಶಯೇನಾಹ – ಯಥಾ ಚೇತಿ ॥

ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ ಗೋ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗೋತ್ವಾದಿ ಜಾತಿಗಳು ಸಾದೃಶ್ಯದಲ್ಲಿ ಇರಬಹುದು. ಆದರೆ ಯತ್ ತತ್ ಮೊದಲಾದ ಶಬ್ದಗಳ

ಪ್ರವೃತ್ತಿನಿಮಿತ್ತವೆನಿಸಿದ ಘಟತ್ವ, ದೇವದತ್ತತ್ವಾದಿಗಳಲ್ಲಿ ಸಾದೃಶ್ಯವು ಇರುವುದಿಲ್ಲ. ಆದರೂ ಕೂಡ ತದಾದಿಶಬ್ದಗಳಿಗೆ ಘಟತ್ವಾದ್ಯವಚ್ಛಿನ್ನವಾದ ಘಟಾದಿಗಳಲ್ಲಿ ಶಕ್ತಿಗ್ರಹವಾಗುತ್ತದೆ. ಏಕೆಂದರೆ ವಕ್ತೃಬುದ್ಧಿಯನ್ನು ಉಪಾಧಿಯೆಂದು ಅಂಗೀಕರಿಸಿದ್ದೇವೆ. ವಕ್ತೃಬುದ್ಧಿಯಲ್ಲಿ ವಿಷಯವಾದದ್ದಕ್ಕೆ ಸಾದೃಶ್ಯವಿದೆ. ಆದ್ದರಿಂದ ಬುದ್ಧಿದ್ವಾರಕವಾದ ತದಾದಿಶಬ್ದಪ್ರವೃತ್ತಿನಿಮಿತ್ತವೆನಿಸಿದ ಘಟತ್ವಾದಿಗಳಲ್ಲಿ ಸಾದೃಶ್ಯವನ್ನು ವಿವಕ್ಷಿಸುತ್ತೇವೆ. ತನ್ಮೂಲಕ ಸದೃಶಜಾತ್ಯಾಶ್ರಯತ್ವವನ್ನು ನಾವೂ ಕೂಡ ಹೇಳಲು ಸಾಧ್ಯವಿದೆ. ಹೀಗೆ ಸದೃಶಜಾತ್ಯಾಶ್ರಯತ್ವವು ಉಪಪಾದಕವಾಗಿದೆ ಎಂಬುದನ್ನು ವಿವಕ್ಷಿಸಿ ಸಾರ್ವತ್ರಿಕವ್ಯವಹಾರಹೇತುತ್ವವನ್ನೂ ಕೂಡ ಚೆನ್ನಾಗಿ ಉಪಪಾದನೆ ಮಾಡಬಹುದು. ಈ ಅಭಿಪ್ರಾಯದಿಂದ 'ಯಥಾ ಚ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಒಂದು ಗೋವಿನಲ್ಲಿರುವ ಗೋತ್ವಕ್ಕೆ ಮತ್ತೊಂದು ಗೋವಿನಲ್ಲಿರುವ ಗೋತ್ವವು ಸದೃಶವಾಗಿದೆ. ಆದ್ದರಿಂದ ಗೋಶಬ್ದಪ್ರವೃತ್ತಿನಿಮಿತ್ತವಾದ ಗೋತ್ವವೆಂಬ ಸದೃಶಜಾತ್ಯಾಶ್ರಯತ್ವವನ್ನು ಸಕಲಗೋವುಗಳಲ್ಲಿ ಸುಲಭವಾಗಿ ಹೇಳಬಹುದು. ಆದರೆ ಯತ್ ಮತ್ತು ತತ್ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಹೀಗೆ ಹೇಳಲಾಗದು. ಏಕೆಂದರೆ, ಎಲ್ಲಾ ಗೋಶಬ್ದಗಳ ಪ್ರವೃತ್ತಿನಿಮಿತ್ತವು ಒಂದೇ ಗೋತ್ವವಾಗಿರುತ್ತದೆ. ಆದರೆ ಯತ್ ತತ್ ಶಬ್ದಗಳಿಂದ ಒಮ್ಮೆ ದೇವದತ್ತ, ಮತ್ತೊಮ್ಮೆ ಘಟ, ಇನ್ನೊಮ್ಮೆ ಪಟ ಹೀಗೆ ಬೇರೆ ಬೇರೆ ಪದಾರ್ಥಗಳು ಪ್ರತಿಪಾದ್ಯವಾಗಿರುತ್ತವೆ. ಆದ್ದರಿಂದ ದೇವದತ್ತ, ಘಟ, ಪಟ, ಪುಸ್ತಕ ಮೊದಲಾದವುಗಳಲ್ಲಿ ಸದೃಶವಾದ ಒಂದು ಜಾತಿಯನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಹೇಗೆ ಆಪ್ತಲಕ್ಷಣವನ್ನು ಸರ್ವತ್ರ ಅನುಗತವಾಗಿ ನಿರ್ವಾಹ ಮಾಡುತ್ತೀರಿ?

ಈ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರಿಸಲಾಗಿದೆ. 'ಪಂಕಜ'ಪದಕ್ಕೆ 'ಪಂಕಜನಿಕರ್ತೃತ್ವ' ಎಂಬುದು ಪ್ರವೃತ್ತಿನಿಮಿತ್ತವಾಗಿದೆ. ಇದು ಕಮಲದಲ್ಲಿರುವಂತೆ ಕಪ್ಪೆಯಲ್ಲೂ ಕೂಡ ಇದೆ. ಆದರೆ ಲೋಕರೂಢಿಯೆಂಬ ಉಪಾಧಿಯನ್ನು ಅವಲಂಬಿಸಿ ಕಮಲದಲ್ಲಷ್ಟೇ ಪಂಕಜಶಬ್ದವನ್ನು ಪ್ರಯೋಗ ಮಾಡುತ್ತೇವೆ. ಪಂಕಜನಿಕರ್ತೃತ್ವಸದೃಶ ಜಾತ್ಯಾಶ್ರಯತ್ವವನ್ನು ಕೇವಲ ಕಮಲಗಳಲ್ಲಷ್ಟೇ ಹೇಳುತ್ತೇವೆ. ಇದರಂತೆ ಪ್ರಕೃತ 'ಯತ್ ಹಾಗೂ 'ತತ್' ಶಬ್ದಗಳಿಗೆ ಸಕಲಪದಾರ್ಥಗಳಲ್ಲಿರುವ ಧರ್ಮಗಳು ಪ್ರವೃತ್ತಿನಿಮಿತ್ತವೇ ಆಗಿವೆ. ಆದರೆ ವಕ್ತೃಬುದ್ಧಿಯನ್ನು ಉಪಾಧಿಯನ್ನಾಗಿ ವಿವಕ್ಷಿಸಿ ಸದೃಶಜಾತ್ಯಾಶ್ರಯತ್ವವನ್ನು ಆ ಪದಾರ್ಥಗಳಿಗೆ ನಾವು ಹೇಳುತ್ತೇವೆ. ಸಕಲಪದಾರ್ಥಗಳಲ್ಲಿರುವ ಧರ್ಮವನ್ನು ವಿವಕ್ಷಿಸಬೇಕಾಗಿಲ್ಲ. ಹೀಗೆ ಸದೃಶಜಾತ್ಯಾಶ್ರಯತ್ವವೇ ಸಾರ್ವತ್ರಿಕವ್ಯವಹಾರಕ್ಕೆ ಕಾರಣವಾಗಿದೆ. ಆದ್ದರಿಂದ ಅನನುಗತವಾದರೂ ಕೂಡ ಆಪ್ತಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುವುದಿಲ್ಲ.

## ಹೆಚ್ಚಿನ ವಿಚಾರ ವೈಶೇಷಿಕಾಧಿಕರಣದಲ್ಲಿ

ವಾಕ್ಯಾರ್ಥಚಂದ್ರಿಕಾ – ವಕ್ಷ್ಯಾಮ ಇತಿ ॥ 'ವೃತ್ತತ್ತ್ರಿರಪಿ ಹಿ ಸಾದೃಶ್ಯೇನೈವ' ಇತ್ಯಾದ್ಯನುವ್ಯಾಖ್ಯಾನವ್ಯಾಖ್ಯಾವಸರೇ । 'ಏತೇನ ಕಾರ್ಯಕಾರಣಭಾವವಾವಧಾರಣಾದಿಕಮಪಿ ಸಮಾಹಿತಂ ವೇದಿತವ್ಯಮ್' ಇತ್ಯತ್ರಾದಿಶಬ್ದಸಂಗೃಹೀತೇ ವ್ಯಾಪ್ತಿಸಾರ್ವತ್ರಿಕವ್ಯವಹಾರೌಪಯಿಕತ್ವಾದೌ ಶಕ್ತಿಗ್ರಹಪ್ರಕಾರಾತಿದೇಶೇನ ವಕ್ಷ್ಯಾಮ ಇತ್ಯರ್ಥಃ।

'ವೃತ್ತತ್ತ್ರಿರಪಿ ಹಿ ಸಾದೃಶ್ಯೇನೈವ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಅನನುಗತವಾದರೂ ಲಕ್ಷಣಕ್ಕೆ ಅವ್ಯಾಪ್ತಿಯು ಬರುವುದಿಲ್ಲ ಎಂಬುದನ್ನು ಉಪಪಾದನೆ ಮಾಡಲಾಗಿದೆ ಎಂಬುದು 'ವಕ್ಷ್ಯಾಮಃ' ಎಂಬುದರ ಅರ್ಥ.

'ಏತೇನ ಕಾರ್ಯಕಾರಣಭಾವವಾವಧಾರಣಾದಿಕಮಪಿ ಸಮಾಹಿತಂ ವೇದಿತವ್ಯಮ್' ಎಂಬುದಾಗಿ ವೈಶೇಷಿಕಾಧಿಕರಣದ ನ್ಯಾಯಸುಧಾ ಭಾಗದಲ್ಲಿ ಹೇಳಿದ್ದಾರೆ. ಇಲ್ಲಿ ಆದಿಪದದಿಂದ ವ್ಯಾಪ್ತಿಸಾರ್ವತ್ರಿಕವ್ಯವಹಾರೌಪಯಿಕತ್ವಾದಿಗಳಲ್ಲಿ ಶಕ್ತಿಗ್ರಹಪ್ರಕಾರವನ್ನು ಅತಿದೇಶಮಾಡುವ ಮೂಲಕ ನಾವು ಈ ವಿಚಾರವನ್ನು ಮತ್ತಷ್ಟು ಅಲ್ಲಿ ಸ್ಪಷ್ಟಪಡಿಸುತ್ತೇವೆ.

ವಿವರಣೆ – ಯತ್ ತತ್ ಮೊದಲಾದ ಶಬ್ದಗಳಿಂದ ಘಟ ದೇವದತ್ತ ಮೊದಲಾದವು ಪ್ರತಿಪಾದ್ಯವಾಗಿದೆ. ಇವುಗಳಲ್ಲಿರುವ ಘಟತ್ವ, ದೇವದತ್ತತ್ವ ಮೊದಲಾದವುಗಳು ಪ್ರವೃತ್ತಿನಿಮಿತ್ತವಾಗಿವೆ. ಇವುಗಳನ್ನು ಸಮಾನಜಾತೀಯ ಎಂದು ಹೇಳಲು ಸಾಧ್ಯವಿಲ್ಲ. 'ಸಮಾನಜಾತೀಯ' ಎಂಬುದಕ್ಕೆ ಸದೃಶಜಾತೀಯ ಎಂದರ್ಥ.

ಈ ಘಟತ್ವ, ದೇವದತ್ತತ್ವಗಳು ಸದೃಶವಾದ ಜಾತೀಯಗಳು ಕೂಡ ಆಗಿರುವುದಿಲ್ಲ. ಆದರೂ ಕೂಡ ಪ್ರಯೋಗೋಪಾಧಿಯಾದ ವಕ್ತೃಬುದ್ಧಿಯಲ್ಲಿ ವಿಷಯವಾಗಿ-ರುವುದರಿಂದ ಬುದ್ಧಿಸ್ಥತ್ವೇನ ರೂಪೇಣ ಘಟತ್ವ, ಹಾಗೂ ದೇವದತ್ತತ್ವಾದಿಗಳಿಗೆ ಸಾದೃಶ್ಯತ್ವವು ಇರುತ್ತದೆ. ಆದ್ದರಿಂದ ಇಂಥ ಸಾದೃಶ್ಯತ್ವವನ್ನು ಇಲ್ಲೂ ಕೂಡ ಹೇಳಬಹುದು.

ಈ ವಿಚಾರವನ್ನು ವೈಶೇಷಿಕಾಧಿಕರಣದ ಸುಧಾವಾಕ್ಯದಲ್ಲಿ 'ಆದಿ'ಪದದಿಂದ ಸಂಗೃಹೀತವಾಗಿದೆ. ವ್ಯಾಪ್ತಿಗ್ರಹಪ್ರಕಾರವನ್ನು ಹಾಗೂ ಸಾರ್ವತ್ರಿಕವ್ಯವಹಾರೌಪಯಿಕತ್ವವನ್ನು ಶಕ್ತಿಗ್ರಹಪ್ರಕಾರದ ಅತಿದೇಶದಿಂದಲೇ ಹೇಳಿರುತ್ತಾರೆ.

ಪ್ರವೃತ್ತಿನಿಮಿತ್ತವೆನಿಸಿದ ಘಟತ್ವ, ದೇವದತ್ತತ್ವಾದಿಗಳಲ್ಲಿ ಸಾದೃಶ್ಯವು ಇರುವುದಿಲ್ಲ. ಆದರೂ ಕೂಡ ತದಾದಿಶಬ್ದಗಳಿಗೆ ಘಟತ್ವಾದ್ಯವಚ್ಛಿನ್ನವಾದ ಘಟಾದಿಗಳಲ್ಲಿ ಶಕ್ತಿಗ್ರಹವಾಗುತ್ತದೆ. ಏಕೆಂದರೆ ವಕ್ತೃಬುದ್ಧಿಯನ್ನು ಉಪಾಧಿಯೆಂದು ಅಂಗೀಕರಿಸಿದ್ದೇವೆ. ವಕ್ತೃಬುದ್ಧಿಯಲ್ಲಿ ವಿಷಯವಾದದ್ದಕ್ಕೆ ಸಾದೃಶ್ಯವಿದೆ. ಆದ್ದರಿಂದ ಬುದ್ಧಿದ್ವಾರಕವಾದ ತದಾದಿಶಬ್ದಪ್ರವೃತ್ತಿನಿಮಿತ್ತವೆನಿಸಿದ ಘಟತ್ವಾದಿಗಳಲ್ಲಿ ಸಾದೃಶ್ಯವನ್ನು ವಿವಕ್ಷಿಸುತ್ತೇವೆ. ತನ್ಮೂಲಕ ಸದೃಶಜಾತ್ಯಾಶ್ರಯತ್ವವನ್ನು ನಾವೂ ಕೂಡ ಹೇಳಲು ಸಾಧ್ಯವಿದೆ. ಹೀಗೆ ಸದೃಶಜಾತ್ಯಾಶ್ರಯತ್ವವು ಉಪಪಾದಕವಾಗಿದೆ ಎಂಬುದನ್ನು ವಿವಕ್ಷಿಸಿ ಸಾರ್ವತ್ರಿಕವ್ಯವಹಾರಹೇತುತ್ವವನ್ನೂ ಕೂಡ ಚೆನ್ನಾಗಿ ಉಪಪಾದನೆ ಮಾಡಬಹುದು. ಈ ಅಭಿಪ್ರಾಯದಿಂದ 'ಯಥಾ ಚ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಒಂದು ಗೋವಿನಲ್ಲಿರುವ ಗೋತ್ವಕ್ಕೆ ಮತ್ತೊಂದು ಗೋವಿನಲ್ಲಿರುವ ಗೋತ್ವವು ಸದೃಶವಾಗಿದೆ. ಆದ್ದರಿಂದ ಗೋಶಬ್ದಪ್ರವೃತ್ತಿನಿಮಿತ್ತವಾದ ಗೋತ್ವವೆಂಬ ಸದೃಶಜಾತ್ಯಾಶ್ರಯತ್ವವನ್ನು ಸಕಲಗೋವುಗಳಲ್ಲಿ ಸುಲಭವಾಗಿ ಹೇಳಬಹುದು. ಆದರೆ ಯತ್ ಮತ್ತು ತತ್ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಹೀಗೆ ಹೇಳಲಾಗದು. ಏಕೆಂದರೆ, ಎಲ್ಲಾ ಗೋಶಬ್ದಗಳ ಪ್ರವೃತ್ತಿನಿಮಿತ್ತವು ಒಂದೇ ಗೋತ್ವವಾಗಿರುತ್ತದೆ. ಆದರೆ ಯತ್ ತತ್ ಶಬ್ದಗಳಿಂದ ಒಮ್ಮೆ ದೇವದತ್ತ, ಮತ್ತೊಮ್ಮೆ ಘಟ, ಇನ್ನೊಮ್ಮೆ ಪಟ ಹೀಗೆ ಬೇರೆ ಬೇರೆ ಪದಾರ್ಥಗಳು ಪ್ರತಿಪಾದ್ಯವಾಗಿರುತ್ತವೆ. ಆದ್ದರಿಂದ ದೇವದತ್ತ, ಘಟ, ಪಟ, ಪುಸ್ತಕ ಮೊದಲಾದವುಗಳಲ್ಲಿ ಸದೃಶವಾದ ಒಂದು ಜಾತಿಯನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಹೇಗೆ ಆಪ್ತಲಕ್ಷಣವನ್ನು ಸರ್ವತ್ರ ಅನುಗತವಾಗಿ ನಿರ್ವಾಹ ಮಾಡುತ್ತೀರಿ?

ಈ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರಿಸಲಾಗಿದೆ. 'ಪಂಕಜ'ಪದಕ್ಕೆ 'ಪಂಕಜನಿಕರ್ತೃತ್ವ' ಎಂಬುದು ಪ್ರವೃತ್ತಿನಿಮಿತ್ತವಾಗಿದೆ. ಇದು ಕಮಲದಲ್ಲಿರುವಂತೆ ಕಪ್ಪೆಯಲ್ಲೂ ಕೂಡ ಇದೆ. ಆದರೆ ಲೋಕರೂಢಿಯೆಂಬ ಉಪಾಧಿಯನ್ನು ಅವಲಂಬಿಸಿ ಕಮಲದಲ್ಲಷ್ಟೇ ಪಂಕಜಶಬ್ದವನ್ನು ಪ್ರಯೋಗ ಮಾಡುತ್ತೇವೆ. ಪಂಕಜನಿಕರ್ತೃತ್ವಸದೃಶ ಜಾತ್ಯಾಶ್ರಯತ್ವವನ್ನು ಕೇವಲ ಕಮಲಗಳಲ್ಲಷ್ಟೇ ಹೇಳುತ್ತೇವೆ. ಇದರಂತೆ ಪ್ರಕೃತ 'ಯತ್ ಹಾಗೂ 'ತತ್' ಶಬ್ದಗಳಿಗೆ ಸಕಲಪದಾರ್ಥಗಳಲ್ಲಿರುವ ಧರ್ಮಗಳು ಪ್ರವೃತ್ತಿನಿಮಿತ್ತವೇ ಆಗಿವೆ. ಆದರೆ ವಕ್ತೃಬುದ್ಧಿಯನ್ನು ಉಪಾಧಿಯನ್ನಾಗಿ ವಿವಕ್ಷಿಸಿ ಸದೃಶಜಾತ್ಯಾಶ್ರಯತ್ವವನ್ನು ಆ ಪದಾರ್ಥಗಳಿಗೆ ನಾವು ಹೇಳುತ್ತೇವೆ. ಸಕಲಪದಾರ್ಥಗಳಲ್ಲಿರುವ ಧರ್ಮವನ್ನು ವಿವಕ್ಷಿಸಬೇಕಾಗಿಲ್ಲ. ಹೀಗೆ ಸದೃಶಜಾತ್ಯಾಶ್ರಯತ್ವವೇ ಸಾರ್ವತ್ರಿಕವ್ಯವಹಾರಕ್ಕೆ ಕಾರಣವಾಗಿದೆ. ಆದ್ದರಿಂದ ಅನನುಗತವಾದರೂ ಕೂಡ ಆಪ್ತಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುವುದಿಲ್ಲ.

## ಹೆಚ್ಚಿನ ವಿಚಾರ ವೈಶೇಷಿಕಾಧಿಕರಣದಲ್ಲಿ

ವಾಕ್ಯಾರ್ಥಚಂದ್ರಿಕಾ – ವಕ್ಷ್ಯಾಮ ಇತಿ ॥ 'ವೃತ್ತಿತ್ರಿರಪಿ ಹಿ ಸಾದೃಶ್ಯೇನೈವ' ಇತ್ಯಾದ್ಯನು-ವ್ಯಾಖ್ಯಾನವ್ಯಾಖ್ಯಾವಸರೇ । 'ಏತೇನ ಕಾರ್ಯಕಾರಣಭಾವವಾವಧಾರಣಾದಿಕಮಪಿ ಸಮಾಹಿತಂ ವೇದಿತವ್ಯಮ್' ಇತ್ಯತ್ರಾದಿಶಬ್ದಸಂಗೃಹೀತೇ ವ್ಯಾಪ್ತಿಸಾರ್ವತ್ರಿಕವ್ಯವಹಾರೌಪಯಿಕತ್ವಾದೌ ಶಕ್ತಿಗ್ರಹ-ಪ್ರಕಾರಾತಿದೇಶೇನ ವಕ್ಷ್ಯಾಮ ಇತ್ಯರ್ಥಃ ।

'ವೃತ್ತಿತ್ರಿರಪಿ ಹಿ ಸಾದೃಶ್ಯೇನೈವ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭ-ದಲ್ಲಿ ಅನನುಗತವಾದರೂ ಲಕ್ಷಣಕ್ಕೆ ಅವ್ಯಾಪ್ತಿಯು ಬರುವುದಿಲ್ಲ ಎಂಬುದನ್ನು ಉಪಪಾದನೆ ಮಾಡ-ಲಾಗಿದೆ ಎಂಬುದು 'ವಕ್ಷ್ಯಾಮಃ' ಎಂಬುದರ ಅರ್ಥ.

'ಏತೇನ ಕಾರ್ಯಕಾರಣಭಾವವಾವಧಾರಣಾದಿಕಮಪಿ ಸಮಾಹಿತಂ ವೇದಿತವ್ಯಮ್' ಎಂಬು-ದಾಗಿ ವೈಶೇಷಿಕಾಧಿಕರಣದ ನ್ಯಾಯಸುಧಾ ಭಾಗದಲ್ಲಿ ಹೇಳಿದ್ದಾರೆ. ಇಲ್ಲಿ ಆದಿಪದದಿಂದ ವ್ಯಾಪ್ತಿಸಾರ್ವ-ತ್ರಿಕವ್ಯವಹಾರೌಪಯಿಕತ್ವಾದಿಗಳಲ್ಲಿ ಶಕ್ತಿಗ್ರಹಪ್ರಕಾರವನ್ನು ಅತಿದೇಶಮಾಡುವ ಮೂಲಕ ನಾವು ಈ ವಿಚಾರವನ್ನು ಮತ್ತಷ್ಟು ಅಲ್ಲಿ ಸ್ಪಷ್ಟಪಡಿಸುತ್ತೇವೆ.

ವಿವರಣೆ – ಯತ್ ತತ್ ಮೊದಲಾದ ಶಬ್ದಗಳಿಂದ ಘಟ ದೇವದತ್ತ ಮೊದಲಾದವು ಪ್ರತಿಪಾದ್ಯ-ವಾಗಿದೆ. ಇವುಗಳಲ್ಲಿರುವ ಘಟತ್ವ, ದೇವದತ್ತತ್ವ ಮೊದಲಾದವುಗಳು ಪ್ರವೃತ್ತಿನಿಮಿತ್ತವಾಗಿವೆ. ಇವುಗಳನ್ನು ಸಮಾನಜಾತೀಯ ಎಂದು ಹೇಳಲು ಸಾಧ್ಯವಿಲ್ಲ. 'ಸಮಾನಜಾತೀಯ' ಎಂಬುದಕ್ಕೆ ಸದೃಶ-ಜಾತೀಯ ಎಂದರ್ಥ.

ಈ ಘಟತ್ವ, ದೇವದತ್ತತ್ವಗಳು ಸದೃಶವಾದ ಜಾತೀಯಗಳು ಕೂಡ ಆಗಿರುವುದಿಲ್ಲ. ಆದರೂ ಕೂಡ ಪ್ರಯೋಗೋಪಾಧಿಯಾದ ವಕ್ತೃಬುದ್ಧಿಯಲ್ಲಿ ವಿಷಯವಾಗಿ-ರುವುದರಿಂದ ಬುದ್ಧಿಸ್ಥತ್ವೇನ ರೂಪೇಣ ಘಟತ್ವ, ಹಾಗೂ ದೇವದತ್ತತ್ವಾದಿಗಳಿಗೆ ಸಾದೃಶ್ಯತ್ವವು ಇರುತ್ತದೆ. ಆದ್ದರಿಂದ ಇಂಥ ಸಾದೃಶ್ಯತ್ವವನ್ನು ಇಲ್ಲೂ ಕೂಡ ಹೇಳಬಹುದು.

ಈ ವಿಚಾರವನ್ನು ವೈಶೇಷಿಕಾಧಿಕರಣದ ಸುಧಾವಾಕ್ಯದಲ್ಲಿ 'ಆದಿ'ಪದದಿಂದ ಸಂಗೃಹೀತವಾಗಿದೆ. ವ್ಯಾಪ್ತಿಗ್ರಹಪ್ರಕಾರವನ್ನು ಹಾಗೂ ಸಾರ್ವತ್ರಿಕವ್ಯವಹಾರೌಪಯಿಕತ್ವವನ್ನು ಶಕ್ತಿಗ್ರಹಪ್ರಕಾರದ ಅತಿದೇಶ-ದಿಂದಲೇ ಹೇಳಿರುತ್ತಾರೆ.

## ಸರ್ವನಾಮಶಬ್ದಗಳಿಂದ ವ್ಯವಹಾರನಿರ್ವಾಹ

ಯಾದುಪತ್ಯ– ಯೋ ಯತ್ರೈವಂಭೂತ ಇತಿ ॥ ಯತ್ರ ವಿಷಯೇ, ಏವಂಭೂತೋ ವಿವಕ್ಷಿತಾರ್ಥತತ್ವಜ್ಞಾನಾದಿಮಾನ್ ಇತ್ಯರ್ಥಃ । ಏಕಸ್ಯೇತಿ ॥ ಯತ್ತಚ್ಛಬ್ದಘಟಿತಸ್ಯೈವ ಲಕ್ಷಣಸ್ಯ ಇತ್ಯರ್ಥಃ । ಯೋ ಯಸ್ಯ ಸುತ ಇತಿ ॥ ಅತ್ರಾಪಿ ಕಥಮಿತಿ ಚೇತ್ । ಇತ್ಥಮ್ । ವಿಶೇಷ-ವಿಷಯಯೋರಪಿ ಯತ್ತಚ್ಛಬ್ದಯೋರಪಿ ಪ್ರಯೋಗೋಪಾಧಿರ್ಬುದ್ಧಿಸ್ಥತ್ವಮ್ । ತಚ್ಚ ಪ್ರಕೃತಸರ್ವ-ಸಂಗ್ರಾಹಕಮ್ । ಅತಸ್ತಯೋಃ ಸಾರ್ವತ್ರಿಕವ್ಯವಹಾರಹೇತುತೋಪಪದ್ಯತ ಇತಿ । ಸರ್ವನಾಮ್ನಾಂ ಸರ್ವಾರ್ಥತ್ವಾತ್ ಯತ್ತಚ್ಛಬ್ದಯೋಃ ವಿಶೇಷವಿಷಯತ್ವೇಽಪಿ ವಿಶೇಷತಃ ಸರ್ವಾನುಗತಿರಸ್ತೀತ್ಯ-ಪ್ಯಾಹುಃ ।

'ಯಃ ಯತ್ರ ಏವಂಭೂತಃ ಸಃ ತತ್ರ ಆಪ್ತಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಯತ್ರ ಎಂಬ ಪದಕ್ಕೆ ಯಾವ ವಿಷಯದಲ್ಲಿ ಎಂದರ್ಥ. 'ಏವಂಭೂತಃ' ಎಂದರೆ ವಿವಕ್ಷಿತಾರ್ಥತತ್ವಜ್ಞಾನವುಳ್ಳವನು ಎಂದರ್ಥ. 'ಏಕಸ್ಯ' ಎಂಬ ಪದಕ್ಕೆ ಯತ್ತಚ್ಛಬ್ದಘಟಿತವಾದ ಲಕ್ಷಣಕ್ಕೆ ಎಂದರ್ಥ. 'ಯಃ ಯಸ್ಯ ಸುತಃ' ಎಂಬಲ್ಲೂ ಕೂಡ ಅನುಗತಜಾತಿ ಒಪ್ಪದೇ ಹೇಗೆ ವ್ಯವಹಾರವನ್ನು ಕೂಡಿಸಬೇಕು ಎಂದರೆ ಹೀಗೆ ತಿಳಿಯಬೇಕು. ಯತ್ ಮತ್ತು ತತ್ ಶಬ್ದಗಳು ವಿಶೇಷವಿಷಯಕವಾದರೂ ಕೂಡ ಪ್ರಯೋಗ ಮಾಡುವವನ ಬುದ್ಧಿಸ್ಥತ್ವವು ಉಪಾಧಿಯಾಗಿದೆ. ಅದು ಪ್ರಕೃತವಾದ ಸರ್ವವನ್ನೂ ಸಂಗ್ರಹ ಮಾಡುತ್ತದೆ. ಆದ್ದರಿಂದ ಯತ್ ಮತ್ತು ತತ್ ಶಬ್ದಗಳು ಸಾರ್ವತ್ರಿಕವ್ಯವಹಾರಕ್ಕೆ ಹೇತುವಾಗುತ್ತವೆ. ಸರ್ವನಾಮ-ಶಬ್ದಗಳು ಎಲ್ಲಾ ಅರ್ಥಗಳನ್ನೂ ಹೇಳುತ್ತವೆ. ಆದ್ದರಿಂದ ಯತ್ ಮತ್ತು ತತ್ ಶಬ್ದಗಳು ಕೂಡ ವಿಶೇಷವಿಷಯಕವಾದರೂ ವಿಶೇಷವಾಗಿ ಸರ್ವತ್ರ ಅನುಗತಿಯನ್ನು ಹೇಳಬಹುದು ಎಂದು ಹೇಳುತ್ತಾರೆ.

ವಿವರಣೆ – 'ಗಂಧವತ್ವಂ ಪೃಥಿವ್ಯಾಃ ಲಕ್ಷಣಮ್' ಎಂದು ಹೇಳಿದಾಗ ಎಲ್ಲಾ ಪೃಥಿವಿಗಳಲ್ಲೂ ಗಂಧವು ಅನುಗತವಾಗಿದೆ. ಇದರಂತೆ ಯತ್ ಶಬ್ದ ಹಾಗೂ ತತ್ ಶಬ್ದಗಳು ಎಲ್ಲಾ ವ್ಯವಹಾರಗಳಲ್ಲಿ ಅನುಗತವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಯತ್ತಚ್ಛಬ್ದಘಟಿತವಾದ ಲಕ್ಷಣವನ್ನು ಹೇಗೆ ವಿವಕ್ಷಿಸು-ತ್ತೀರಿ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸಿದ್ದಾರೆ. ಅನುಗತವಾಗದಿದ್ದರೂ ಕೂಡ ಸಾರ್ವತ್ರಿಕವ್ಯವಹಾರವನ್ನು ಉಪಪಾದನೆ ಮಾಡಬಹುದು. ಅದು ಹೀಗೆ – ಯತ್ ಮತ್ತು ತತ್ ಶಬ್ದಗಳು ವಿಶೇಷವಿಷಯಕವೇ ಆಗಿವೆ. ಆದರೆ ಬುದ್ಧಿಸ್ಥತ್ವವೆಂಬ ಅವಚ್ಛೇದಕಧರ್ಮದಿಂದ ಪ್ರಯೋಗವು ಉಪಪನ್ನವಾಗುತ್ತದೆ. ಯತ್, ತತ್ ಮೊದಲಾದ ಸರ್ವನಾಮಶಬ್ದಗಳಿಂದ ಸಕಲಪದಾರ್ಥಗಳೂ ವಾಚ್ಯವಾಗಿವೆ. ಆದರೆ ಎಲ್ಲಾ ಕಡೆ

ಎಲ್ಲಾ ಪದಾರ್ಥಗಳೂ ವಾಚ್ಯವೆಂದು ಅರ್ಥವಲ್ಲ. ವಕ್ತೃಬುದ್ಧಿಯಲ್ಲಿ ಯಾವ ಪದಾರ್ಥವು ಉಪಸ್ಥಿತವಾಗಿರುತ್ತದೋ ಆ ಪದಾರ್ಥವು ಅಲ್ಲಿರುವ ಸರ್ವನಾಮಶಬ್ದದಿಂದ ಪ್ರತಿಪಾದ್ಯವಾಗುತ್ತದೆ. 'ದೇವದತ್ತಸ್ಯ ಪುತ್ರಃ ಯಜ್ಞದತ್ತಃ, ಸಃ ತದೀಯಂ ಧನಮರ್ಹತಿ' ಎಂಬ ವಾಕ್ಯಕ್ಕೂ 'ಯೋ ಯಸ್ಯ ಸುತಃ ಸಃ ತದೀಯಂ ಧನಮರ್ಹತಿ' ಎಂಬ ವಾಕ್ಯಕ್ಕೂ ವೈಲಕ್ಷಣ್ಯವು ಸ್ಪಷ್ಟವಾಗಿಯೇ ತಿಳಿಯುತ್ತದೆ. ದೇವದತ್ತ ಹಾಗೂ ಯಜ್ಞದತ್ತಶಬ್ದಗಳನ್ನು ಹೇಳಿ ಮುಂದೆ ಯತ್ ಮತ್ತು ತತ್ ಶಬ್ದಗಳನ್ನು ಪ್ರಯೋಗ ಮಾಡಿದರೆ ಈ ಸರ್ವನಾಮವು ಸರ್ವಸಂಗ್ರಾಹಕ ಆಗುವುದಿಲ್ಲ. ಆದರೆ ದೇವದತ್ತ ಹಾಗೂ ಯಜ್ಞದತ್ತ ಎಂಬ ಶಬ್ದಗಳನ್ನು ಪ್ರಯೋಗ ಮಾಡದೇ ಕೇವಲ ಸರ್ವನಾಮಶಬ್ದಗಳಿಂದಷ್ಟೇ 'ಯೋ ಯಸ್ಯ ಸುತಃ ಸಃ ತದೀಯಂ ಧನಮರ್ಹತಿ' ಎಂದು ಹೇಳಿದರೆ ಈ ಸರ್ವನಾಮಶಬ್ದವು ಸರ್ವವಿಷಯಕವಾಗುತ್ತದೆ. ಏಕೆಂದರೆ ಎಲ್ಲರೂ ಬುದ್ಧಿಸ್ಥರಾಗಿರುವುದರಿಂದ ಎಲ್ಲರನ್ನೂ ಕೂಡ ಈ ಶಬ್ದಗಳು ಹೇಳುತ್ತವೆ. ಆದ್ದರಿಂದ ದೇವದತ್ತ ಹಾಗೂ ಯಜ್ಞದತ್ತರಷ್ಟೇ ಬುದ್ಧಿಸ್ಥರಾದರೆ ಅವರನ್ನು ಮಾತ್ರ ಯತ್ ಹಾಗೂ ತತ್ ಶಬ್ದಗಳೂ ಹೇಳುತ್ತವೆ. ಸಕಲ ಪದಾರ್ಥವೂ ಬುದ್ಧಿಸ್ಥವಾದರೆ ಸಕಲವನ್ನೂ ಹೇಳುತ್ತದೆ.

ಕೆಲವರು ಮತ್ತೊಂದು ರೀತಿಯಲ್ಲಿ ಇದನ್ನು ಉಪಪಾದನೆ ಮಾಡಿದ್ದಾರೆ – ಸರ್ವನಾಮಶಬ್ದಗಳು ಸಕಲ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಸಾಮಾನ್ಯಧರ್ಮದಿಂದಲೇ ಸರ್ವತ್ರ ಅನುಗತಿಯನ್ನು ಹೇಳಬೇಕಾಗಿಲ್ಲ. ವಿಶೇಷವಿಷಯಕವಾಗಿದ್ದರೂ ಕೂಡ ಸರ್ವತ್ರ ಅನುಗತಿಯನ್ನು ಹೇಳಬಹುದು. ಉದಾಹರಣೆ – 'ಸರ್ವ' ಎಂಬ ಶಬ್ದದಿಂದ ಎಲ್ಲವೂ ವಾಚ್ಯವಾಗಿದೆ. ಇದೇ ರೀತಿಯಲ್ಲಿ ಯತ್ ಹಾಗೂ ತತ್ ಶಬ್ದಗಳು ಸರ್ವವಸ್ತುಗಳಿಗೂ ವಾಚಕವಾಗಿವೆ. ವಿಶೇಷವಿಷಯಕವಾದರೂ ಕೂಡ ಸರ್ವತ್ರ ಅನುಗತಿಯು ಇರುತ್ತದೆಂದು ಹೇಳುತ್ತಾರೆ.

## ಅವ್ಯಾಪ್ತಿಯ ಲಕ್ಷಣ

ಯಾದುಪತ್ಯ– ಸಾಮಾನ್ಯಪರೀಕ್ಷಾಯಾಮಿತಿ ॥ 'ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ' ಇತ್ಯನುವ್ಯಾಖ್ಯಾನವ್ಯಾಖ್ಯಾನಾವಸರೇ ಇತ್ಯರ್ಥಃ । ತತ್ರ ಯದ್ಯಪಿ ಸಾದೃಶ್ಯಸ್ಯ ಸಾರ್ವತ್ರಿಕ-ವ್ಯವಹಾರಹೇತುತಾ ಉಕ್ತಾ, ನ ತು ಅನನುಗತಸ್ಯ ಲಕ್ಷಣತ್ವೇSವ್ಯಾಪ್ತ್ಯಭಾವಃ, ತಥಾಪಿ ಸಾಮಾನ್ಯ-ಸ್ಥಾನಾಭಿಷಿಕ್ತೇನ ಸಾದೃಶ್ಯೇನ ಅವ್ಯಾಪ್ತಿಪರಿಹಾರೋSಪಿ ತತ್ರೋಪಲಕ್ಷಣಯಾ ವಿವಕ್ಷಿತ ಏವ । ಲಕ್ಷ್ಯಸದೃಶೇ ಲಕ್ಷಣಸದೃಶಸ್ಯಾವೃತ್ತಿರವ್ಯಾಪ್ತಿಃ ನ ತ್ವೇಕಸ್ಯ ಲಕ್ಷಣಸ್ಯ ಲಕ್ಷ್ಯೈಕದೇಶೇ, ಯೇನ ಅನುಗತಲಕ್ಷಣಾನಾಮ್ ಅವ್ಯಾಪ್ತಿರಿತಿ ॥

'ವ್ಯತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ' ಎಂಬ ಅನುವ್ಯಾಖ್ಯಾನದ ಸಂದರ್ಭದಲ್ಲಿ ಹೇಳಿದ್ದಾರೆಂಬುದು 'ಸಾಮಾನ್ಯಪರೀಕ್ಷಾಯಾಂ' ಎಂಬುದರ ಅರ್ಥ. ವಾಸ್ತವಿಕವಾಗಿ ಈ ಅನು-ವ್ಯಾಖ್ಯಾನದಲ್ಲಿ ಸಾದೃಶ್ಯಕ್ಕೆ ಸಾರ್ವತ್ರಿಕವ್ಯವಹಾರಹೇತುತ್ವವನ್ನು ಹೇಳಿದ್ದಾರೆ. ಅನನುಗತವಾದ ಲಕ್ಷಣಕ್ಕೆ ಅವ್ಯಾಪ್ತಿ ಇರುವುದಿಲ್ಲವೆಂದು ಹೇಳಿರುವುದಿಲ್ಲ. ಆದರೂ ಕೂಡ ಜಾತಿಯನ್ನು ಒಪ್ಪಬೇಕಾದ ಸ್ಥಾನದಲ್ಲಿ ಸಾದೃಶ್ಯವನ್ನೇ ಒಪ್ಪಿದರೆ ಸಾಕು ಅವ್ಯಾಪ್ತಿಯು ಪರಿಹಾರವಾಗುತ್ತದೆ. ಈ ಅವ್ಯಾಪ್ತಿಪರಿಹಾರವನ್ನೂ ಕೂಡ ಉಪಲಕ್ಷಣಯಾ ಅಲ್ಲಿ ವಿವಕ್ಷಿಸಬೇಕು. ಲಕ್ಷ್ಯಸದೃಶವಾದ ವಸ್ತುವಿನಲ್ಲಿ ಲಕ್ಷಣಸದೃಶವಾದದ್ದು ಇಲ್ಲದಿದ್ದರೆ ಅವ್ಯಾಪ್ತಿದೋಷ ಬರುತ್ತದೆಂದು ಹೇಳಬೇಕು. ಒಂದೇ ಲಕ್ಷಣವು ಲಕ್ಷ್ಯೈಕದೇಶದಲ್ಲಿ ಬರದಿದ್ದರೆ ಅವ್ಯಾಪ್ತಿ ಬರುತ್ತದೆಂದು ಹೇಳಬಾರದು. ಹಾಗೇನಾದರೂ ಅವ್ಯಾಪ್ತಿಲಕ್ಷಣವನ್ನು ಹೇಳಿದ್ದರೆ ಅನುಗತಲಕ್ಷಣಕ್ಕೆ ಅವ್ಯಾಪ್ತಿಯು ಹೇಳಿದಂತಾಗುತ್ತಿತ್ತು.

## ಸುಧಾಪರಿಮಳಸಾರ

ಆಪ್ತನ ಲಕ್ಷಣವನ್ನು ನಿರೂಪಿಸಲು ಅಶಕ್ಯ ಎಂಬ ಆಕ್ಷೇಪ ಸರಿಯಲ್ಲ. ಮುಂದೆ ಹೇಳುವ ರೀತಿಯಲ್ಲಿ ಆಪ್ತನ ಲಕ್ಷಣ ನಿರೂಪಿಸಲು ಬರುತ್ತದೆ. ಆಪ್ತಿಯುಳ್ಳವನು ಆಪ್ತ. ವಿವಕ್ಷಿತವಾದ ವಿಷಯದ ಸರಿಯಾದ ತಿಳುವಳಿಕೆ, ಮೋಸಮಾಡುವ ಬಯಕೆಯಿಲ್ಲದಿರುವಿಕೆ, ಹೇಳುವ ಅಪೇಕ್ಷೆ, ಇಂದ್ರಿಯಪಟುತ್ವ, ಇವಿಷ್ಟು ಒಟ್ಟು ಸೇರಿದರೆ ಆಪ್ತಿ. ಆಪ್ತರೆಂದು ಸಮ್ಮತರಾದವರಲ್ಲಿಯೂ ಕೆಲವೊಮ್ಮೆ ಈ ಲಕ್ಷಣ ಕಂಡು ಬರುವುದಿಲ್ಲವಲ್ಲ? ಎಂದರೆ ಈ ಲಕ್ಷಣವು ಕಾಣದಿದ್ದರೆ ಆಗ ಅವನು ಆಪ್ತನಲ್ಲ ಎಂದೇ ಒಪ್ಪಿರುವುದರಿಂದ ಬಾಧಕವಿಲ್ಲ. ಒಬ್ಬನೆ ವ್ಯಕ್ತಿಯನ್ನು ಆಪ್ತ ಅನಾಪ್ತ ಎಂದರೆ ವಿರೋಧ ಬರುವುದಿಲ್ಲವೇ? ಆಪ್ತಿಲಕ್ಷಣ ಇದ್ದಾಗ ಆಪ್ತ, ಆಪ್ತಿಲಕ್ಷಣ ಇಲ್ಲದಿರುವ ಕಾಲದಲ್ಲಿ ಅನಾಪ್ತ ಎಂದು ಕಾಲಭೇದ ಒಪ್ಪಿರುವುದರಿಂದ ವಿರೋಧವಿಲ್ಲ.

ಹಾಗಾದರೆ ಯಾರು ಯಾವ ವಿಷಯದಲ್ಲಿ ಆಪ್ತಿಯುಳ್ಳವನೋ ಅವನು ಆ ವಿಷಯದಲ್ಲಿ ಆಪ್ತ ಎಂದು ಹೇಳಿದಂತಾಯಿತು. ಹೌದು ತಪ್ಪೇನು? ಯಾರು ಎಲ್ಲಿ ಆಪ್ತಿಯುಳ್ಳವನೋ ಅವನು ಅಲ್ಲಿ ಆಪ್ತ ಎಂದರೆ, ಯತ್ -ತತ್ ಶಬ್ದಗಳು ವ್ಯಕ್ತಿವಿಶೇಷವಾಚಕಗಳಾದುದರಿಂದ ಎಲ್ಲರಲ್ಲಿ ಈ ಲಕ್ಷಣ ಅನುಗತವಾಗಲಿಲ್ಲ. ಇದೇ ದೋಷ. ಲಕ್ಷಣ ಅನುಗತವಾಗಲಿಲ್ಲ ಎಂದರೆ ಏನು ಅಭಿಪ್ರಾಯ? ಸಾರ್ವತ್ರಿಕವ್ಯವಹಾರಕ್ಕೆ ಈ ಲಕ್ಷಣ ಕಾರಣವಾಗುವುದಿಲ್ಲ ಎಂದೋ ಅಥವಾ ಒಂದೇ ಲಕ್ಷಣ ಎಲ್ಲೆಡೆ ಬರುವುದಿಲ್ಲ ಎಂದೋ? ಮೊದಲ ಪಕ್ಷ ಸರಿಯಲ್ಲ. ಯಾರು ಯಾರ ಮಗನೋ ಅವನು ಅವರ ಸಂಪತ್ತಿಗೆ ಅರ್ಹನು ಎಂಬ ನಿಯಮವು ಯತ್-ತತ್ ಶಬ್ದಗಳಿಂದ ಕೂಡಿದೆ. ಆದರೆ ಇದು ಸಾರ್ವತ್ರಿಕವ್ಯವಹಾರಕ್ಕೆ ಕಾರಣವಾಗಿರುವುದು ಕಂಡಿದೆ.

ಒಂದೇ ಲಕ್ಷಣ ಎಲ್ಲೆಡೆ ಬರುವುದಿಲ್ಲ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ ಅದು ದೋಷವೇ ಅಲ್ಲ. ಆಪ್ತಲಕ್ಷಣಗಳು ಅನೇಕವಾದರೆ ಒಂದು ಆಪ್ತಲಕ್ಷಣ ಇನ್ನೊಬ್ಬ ಆಪ್ತನಲ್ಲಿ ಬರುವುದಿಲ್ಲ ಎಂದು ಅವ್ಯಾಪ್ತಿ ಬರುವುದೇ ದೋಷ ಎಂದರೆ ಒಬ್ಬನಲ್ಲಿರುವ ಆಪ್ತಲಕ್ಷಣವೇ ಇನ್ನೊಬ್ಬನಲ್ಲಿ ಬಾರದಿದ್ದರೂ ಅದಕ್ಕೆ ಸದೃಶವಾದ ಆಪ್ತಲಕ್ಷಣವು ಬರುವುದರಿಂದ ಅವ್ಯಾಪ್ತಿ ಇಲ್ಲ ಎಂದು ಮುಂದೆ ವೈಶೇಷಿಕಾಧಿಕರಣದ ಅನುವ್ಯಾಖ್ಯಾನದ ವ್ಯಾಖ್ಯಾನದಲ್ಲಿ ಹೇಳುತ್ತೇವೆ.

### ನೆನೆಪಿಡಿ

* ಯಾರು ಆಪ್ತನೋ ಅವನಲ್ಲಿ ವಿವಕ್ಷಿತಾರ್ಥತತ್ವಜ್ಞಾನ ಇರಬೇಕು. ನಿರ್ವಂಚನೆ ಬುದ್ಧಿ ಇರಬೇಕು. ಹೇಳುವ ಇಚ್ಛೆ ಇರಬೇಕು. ಇಂದ್ರಿಯಗಳಲ್ಲಿ ಪಾಟವ ಇರಬೇಕು. ಇಷ್ಟಿದ್ದರೆ ಆಪ್ತನೆಂದು ಹೇಳಬಹುದು.

* ಈ ಎಲ್ಲಾ ಆಪ್ತನ ಲಕ್ಷಣಗಳು ಎಲ್ಲಾ ಕಾಲದಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಯಾವ ಕಾಲದಲ್ಲಿ ಯಾವ ವಿಷಯದಲ್ಲಿ ಈ ಲಕ್ಷಣಗಳು ಇರುತ್ತವೋ ಆಗ ಮಾತ್ರ ಅವನು ಆ ವಿಷಯದಲ್ಲಿ ಆಪ್ತನಾಗುತ್ತಾನೆ.

* ಲಕ್ಷಣವು ಅನನುಗತವಾದರೂ ಕೂಡ ಅವ್ಯಾಪ್ತ್ಯಾದಿ ದೋಷಗಳು ಬರುವುದಿಲ್ಲ. ಸಾದೃಶ್ಯದಿಂದಲೇ ಎಲ್ಲವನ್ನೂ ಉಪಪಾದನೆ ಮಾಡುತ್ತೇವೆ.

* ಶಕ್ತಿಗ್ರಹ, ವ್ಯಾಪ್ತಿಗ್ರಹ, ಕಾರ್ಯಕಾರಣಭಾವಗ್ರಹ, ಲಕ್ಷ್ಯಲಕ್ಷಣಭಾವಗ್ರಹ. ಇವುಗಳಿಗೆಲ್ಲ ಸಾದೃಶ್ಯವೇ ಜೀವಾಳ.

## 'ನಿರ್ದೋಷತ್ವಂ' 'ಪ್ರಮಿತಸ್ಯೈವ ವಕ್ತೃತ್ವಂ' ಎಂಬ ಮತ್ತೆರಡು ಆಪ್ತ ಲಕ್ಷಣಗಳು

**ಶ್ರೀಮನ್ನ್ಯಾಯಸುಧಾ – ಏತೇನ 'ನಿರ್ದೋಷಃ, ಪ್ರಮಿತಸ್ಯೈವ ವಕ್ತಾ' ಇತಿ ಲಕ್ಷಣದ್ವಯಮಪಿ ಸಮಾಹಿತಂ ವೇದಿತವ್ಯಮ್ । ಅನುವಾದಸ್ಯ ವಾದ-ವಿಷಯತ್ವೇನ ತತ್‌ಪ್ರಯೋಕ್ತುರಪ್ಯಾಪ್ತತ್ವಾವಿರೋಧಾತ್ ॥**

**ಏವಂ ಚ ವಕ್ತುರಾನುಕೂಲ್ಯಮ್ ಆಪ್ತ್ಯೈಕದೇಶೇ ಏವ । ವಿಪ್ರಲಿಪ್ಸಾ ಚ ಶ್ರೋತೃಪ್ರಸಂಗಾನನುಕೂಲತೈಕನಿಬಂಧನಾ ತದಭಾವೇ ನಿವರ್ತತೇ ಇತಿ ವಕ್ತ್ರಾದ್ಯಾನುಕೂಲ್ಯವತ್ತಾಯಾ ಆಪ್ತವಾಕ್ಯತಯಾ ಸುಸ್ಥಃ ಪ್ರತಿಬಂಧಃ ।**

ಹೀಗೆ ಹೇಳಿದ್ದರಿಂದ 'ದೋಷವಿಲ್ಲದವನು' 'ನಿರ್ದೋಷಃ' 'ಪ್ರಮಿತವಾದದ್ದನ್ನೇ ಹೇಳುವವನು' 'ಪ್ರಮಿತಸ್ಯೈವ ವಕ್ತಾ' ಎಂಬ ಮತ್ತೆರಡು ಆಪ್ತನ ಲಕ್ಷಣಗಳೂ ಕೂಡ ಸಮಂಜಸವಾಗಿವೆ ಎಂಬುದನ್ನು ತಿಳಿಯಬೇಕು. ಅನುವಾದವು ವಾದವಿಷಯವಾಗಿರುವುದರಿಂದ ಅದನ್ನು ಪ್ರಯೋಗ ಮಾಡುವವನು ಆಪ್ತನಾಗುತ್ತಾನೆ ಎಂಬುದಕ್ಕೆ ಯಾವುದೇ ವಿರೋಧವು ಬರುವುದಿಲ್ಲ.

ಹೀಗೆ ವಕ್ತೃವಿನ ಆನುಕೂಲ್ಯವು ಆಪ್ತಿಯ ಒಂದು ಭಾಗವೇ ಆಗಿದೆ. ವಂಚನೆ ಬುದ್ಧಿಯು (ವಿಪ್ರಲಿಪ್ಸೆಯು) ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಇಲ್ಲದೇ ಇದ್ದಾಗ ಮಾತ್ರ ಇರುತ್ತದೆ. ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಇದ್ದಾಗ ವಂಚನೆ ಬುದ್ಧಿಯು (ವಿಪ್ರಲಿಪ್ಸೆಯು) ಇರುವುದಿಲ್ಲ. ಆದ್ದರಿಂದ ಎಲ್ಲಿ ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಇರುತ್ತವೋ ಅಲ್ಲಿ ಆಪ್ತವಾಕ್ಯತ್ವವು ಇದ್ದೇ ಇರುತ್ತದೆ. ಹೀಗೆ ವಕ್ತ್ರಾದ್ಯಾನುಕೂಲ್ಯವೆಂಬ ಹೇತುವಿಗೆ ಆಪ್ತವಾಕ್ಯತ್ವವೆಂಬ ಸಾಧ್ಯದ ಜೊತೆ ಅವಿನಾಭೂತವಾದ ವ್ಯಾಪ್ತಿಯು ಸುಸ್ಥಿರವಾಯಿತು.

## ಸಾಧ್ಯಾವೈಶಿಷ್ಟ್ಯ ಹಾಗೂ ಅವ್ಯಾಪ್ತಿದೋಷಗಳ ಪರಿಹಾರಕ್ಕಾಗಿ ಈ ಎರಡು ಲಕ್ಷಣಗಳು

ಪರಿಮಳ– ಆಪ್ತೇರುಕ್ತರೂಪತ್ವೇ 'ವಿಮತಮಾಪ್ತವಾಕ್ಯಮ್' ಇತಿ ಪ್ರಾಗುಕ್ತ-ಪ್ರಯೋಗೇ ಹೇತೋರ್ವಕ್ಷ್ಯಮಾಣದಿಶಾ ಕಥಂಚಿತ್ ಸಾಧ್ಯವೈಶಿಷ್ಟ್ಯಂ ಮನ್ವಾನಂ ಪ್ರತಿ ಲಕ್ಷಣಾಂತರಂ ಸಮಾಧತ್ತೇ – ಏತೇನೇತಿ ॥ ಯತ್ರೈವಂಭೂತ ಇತ್ಯನನುಗಮಸ್ಯ

ಅದೋಷತ್ವಕಥನೇನ ಇತ್ಯರ್ಥಃ । ದ್ವಿತೀಯಲಕ್ಷಣೇ ಪ್ರಾಗುಕ್ತದೋಷಂ ನಿರಾಹ – ಅನುವಾದಸ್ಯೇತಿ ॥ ಪ್ರತಿಬಂಧಃ ಅವಿನಾಭಾವ ಇತ್ಯರ್ಥಃ।

ಹಿಂದೆ ಹೇಳಿದಂತೆ ಆಪ್ತಿಯ ಲಕ್ಷಣವನ್ನು ವಿವಕ್ಷಿಸಿದಾಗ 'ವಿಮತಂ ಆಪ್ತವಾಕ್ಯಮ್' ಎಂಬ ಹಿಂದಿನ ಅನುಮಾನದಲ್ಲಿ ಹೇತುವಿಗೆ ಮುಂದೆ ಹೇಳುವ ಪ್ರಕಾರ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಹೀಗೆ ಯಾರು ಆಕ್ಷೇಪ ಮಾಡುತ್ತಾನೋ ಅಂಥವನಿಗೆ ಮತ್ತೊಂದು ಆಪ್ತಿಲಕ್ಷಣ-ವನ್ನು ಹೇಳುವ ಮೂಲಕ 'ಏತೇನ' ಇತ್ಯಾದಿಯಾಗಿ ಸಮಾಧಾನವನ್ನು ನೀಡುತ್ತಿದ್ದಾರೆ.

'ಏತೇನ' ಎಂಬ ಪದಕ್ಕೆ 'ಯತ್ರ ಏವಂಭೂತಃ ಇತ್ಯಾದಿಗ್ರಂಥದಿಂದ ಹಿಂದೆ ಅನನುಗಮವು ದೋಷವೇ ಅಲ್ಲವೆಂದು ಹೇಳಿರುವುದರಿಂದ' ಎಂದರ್ಥ. 'ಪ್ರಮಿತಸ್ಯೈವ ವಕ್ತಾ' ಎಂಬ ಎರಡನೆಯ ಲಕ್ಷಣಕ್ಕೆ ಹಿಂದೆ ಹೇಳಿದ ದೋಷವನ್ನು 'ಅನುವಾದಸ್ಯ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ.

'ಪ್ರತಿಬಂಧಃ' ಎಂಬ ಪದಕ್ಕೆ ಅವಿನಾಭಾವ ಎಂದರ್ಥ.

ವಿವರಣೆ – ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ, ವಿವಕ್ಷಾ, ಕರಣಪಾಟವ ಇವುಗಳು ಯಾರಲ್ಲಿ ಇರುತ್ತವೋ ಅವನು ಆಪ್ತ ಎಂದು ಕರೆಸಿಕೊಳ್ಳುತ್ತಾನೆಂದು ಈ ಹಿಂದೆ ಹೇಳಲಾಯಿತು. 'ವಿಮತಂ ಆಪ್ತವಾಕ್ಯಮ್ ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತೄನ್ ಪ್ರತಿ ಅನುಕೂಲತದೀಯಹಿತ-ಸಾಧನಬೋಧಾಯ ಉಪದಿಷ್ಟತ್ವಾತ್' ಎಂಬುದಾಗಿ ಈ ಹಿಂದೆ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಆಪ್ತವಾಕ್ಯವಾಗಿದೆ ಎಂದು ಅನುಮಾನ ಮಾಡಲಾಯಿತು. ಈ ಹೇತುವಿನಲ್ಲಿ ಮೂರು ಬಗೆಯ ಆನುಕೂಲ್ಯಗಳು ಗರ್ಭಿತವಾಗಿವೆ. ಅವುಗಳಲ್ಲಿ ಸೇರಿರುವ ವಕ್ತ್ರಾನುಕೂಲ್ಯ ಎಂದರೆ ವಿವಕ್ಷಿತಾರ್ಥ-ತತ್ವಜ್ಞಾನ, ವಿವಕ್ಷಾ, ಕರಣಪಾಟವ ಎಂದರ್ಥ. ಅವಿಪ್ರಲಿಪ್ಸಾ ಎಂಬ ಅಂಶವನ್ನು ಬಿಟ್ಟರೆ ಉಳಿದೆಲ್ಲಾ ಅಂಶಗಳು ಸಾಧ್ಯದಲ್ಲಿ ಸೇರಿವೆ. ಆಪ್ತಿಯ ಲಕ್ಷಣ ಮತ್ತು ವಕ್ತ್ರಾನುಕೂಲ್ಯದ ಲಕ್ಷಣ ಒಂದೇ ಎಂದಂತಾಯಿತು. ಹೇತುವಿನಲ್ಲಿ ಪ್ರಸಂಗಾನುಕೂಲ್ಯ ಹಾಗೂ ಶ್ರೋತ್ರಾನುಕೂಲ್ಯಗಳೂ ಸೇರಿರ-ಬಹುದು. ಆದರೆ ವಕ್ತ್ರಾನುಕೂಲ್ಯಾಂಶದಿಂದ ಸಾಧ್ಯಕ್ಕೆ ಅವೈಶಿಷ್ಟ್ಯವು ಪ್ರಾಪ್ತವಾಗುತ್ತದೆ. ಆದ್ದರಿಂದ ಪರಿಮಳದಲ್ಲಿ 'ಕಥಂಚಿದ್ ಸಾಧ್ಯಾವೈಶಿಷ್ಟ್ಯಂ' ಎಂದು ಹೇಳಿದ್ದಾರೆ. ಈ ದೋಷವನ್ನು ಮುಂದೆ ಟೀಕೆ-ಯಲ್ಲಿಯೇ 'ನನು ಚ ಅನುಕೂಲವಕ್ತ್ರಾದಿಮತ್ತಯಾ' ಇತ್ಯಾದಿ ಮೂಲದಿಂದ ಪರಿಹಾರ ಮಾಡು-

ವವರಿದ್ದಾರೆ. ಆದರೂ ಕೂಡ ಯಾರಿಗೆ ಸಾಧ್ಯಾವೈಶಿಷ್ಟ್ಯದ ಭ್ರಾಂತಿ ಇದೆಯೋ ಅವನನ್ನು ಕುರಿತು ಮತ್ತೊಂದು ಲಕ್ಷಣವನ್ನು ಇಲ್ಲಿ ಹೇಳುತ್ತಿದ್ದಾರೆ. ಆಪ್ತಿಲಕ್ಷಣವನ್ನು ಹಿಂದಿನಂತೆ ವಿವಕ್ಷಿತಾರ್ಥತತ್ವಜ್ಞಾನ ಮೊದಲಾದವುಗಳಿರಬೇಕು ಇತ್ಯಾದಿಯಾಗಿ ಈಗ ತಿಳಿಯಬೇಕಾಗಿಲ್ಲ. ನಿರ್ದುಷ್ಟನಾದವನು ಆಪ್ತನಾಗುತ್ತಾನೆ ಎಂದಷ್ಟೇ ತಿಳಿದರೆ ಸಾಕು. ಹೀಗೆ ಹೇಳಿದಾಗ ವಕ್ತ್ರಾನುಕೂಲ್ಯದಲ್ಲಿ ಸೇರಿದ ಅಂಶವು ಸಾಧ್ಯಸ್ವರೂಪ ಆಗುವುದಿಲ್ಲ. ಸಾಧ್ಯಾವೈಶಿಷ್ಟ್ಯದೋಷವು ಪ್ರಾಪ್ತವಾಗುವುದಿಲ್ಲ.

'ನಿರ್ದೋಷತ್ವಂ ಆಪ್ತಸ್ಯ ಲಕ್ಷಣಮ್' ಎಂದಷ್ಟೇ ಲಕ್ಷಣವನ್ನು ವಿವಕ್ಷಿಸಿದರೆ ಯಾರೊಬ್ಬ ವ್ಯಕ್ತಿಯಲ್ಲೂ ಕೂಡ ಇದು ಬರುವುದಿಲ್ಲ. ಯಾರೂ ಸಹ ಸರ್ವಥಾ ನಿರ್ದುಷ್ಟರಾಗಿರುವುದಿಲ್ಲ. ಆದ್ದರಿಂದ 'ಯಸ್ಮಿನ್ ವಿಷಯೇ ನಿರ್ದೋಷಃ ತಸ್ಮಿನ್ ವಿಷಯೇ ಆಪ್ತಃ' ಎಂಬುದಾಗಿ ಹಿಂದಿನಂತೆಯೇ ತಿಳಿಯಬೇಕು. ಹೀಗೆ ತಿಳಿದಾಗ ಪುನಃ ಅನನುಗಮದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಆದರೆ 'ಯತ್ರ ಏವಂಭೂತಃ' ಇತ್ಯಾದಿಯಾಗಿ ಹಿಂದೆ ಆಪ್ತನ ಲಕ್ಷಣವನ್ನು ಹೇಳುವಾಗ ಅನನುಗಮವು ದೋಷವೇ ಅಲ್ಲವೆಂದು ಹೇಳಿದ್ದಾಗಿದೆ. ಆದ್ದರಿಂದ 'ನಿರ್ದೋಷತ್ವಂ' ಎಂಬುದನ್ನು ಆಪ್ತಲಕ್ಷಣವೆಂದು ಸಮರ್ಥನೆ ಮಾಡಿದಂತಾಯಿತು.

'ಪ್ರಮಿತಸ್ಯೈವ ವಕ್ತಾ' ಎಂಬ ಎರಡನೆಯ ಲಕ್ಷಣಕ್ಕೆ ಹಿಂದೆ ಹೇಳಿದ ದೋಷವನ್ನು ಪರಿಹರಿಸುತ್ತಿದ್ದಾರೆ. ಹಿಂದೆ 'ಯಾವತ್ ಪ್ರಮಾಣದೃಷ್ಟಂ ತಾವತ ಏವ ವಕ್ತಾ' ಎಂಬ ಆಪ್ತನ ಲಕ್ಷಣವನ್ನು ವಿವಕ್ಷಿಸಿದಾಗ ಅಜ್ಞಾತವಾದ, ಸಂದಿಗ್ಧವಾದ, ಅನುವಾದ ಮಾಡುವಂತಹ ವಾಕ್ಯಪ್ರಯೋಗ ಮಾಡುವವನಲ್ಲಿ ಆಪ್ತತ್ವವು ಬಾರದೇ ಇರಬೇಕಾದೀತು ಎಂಬ ದೋಷವನ್ನು ಹೇಳಲಾಗಿತ್ತು. ಪ್ರಕೃತ 'ಪ್ರಮಿತಸ್ಯೈವ ವಕ್ತಾ' ಎಂಬ ಲಕ್ಷಣವನ್ನು ಹೇಳಿದರೆ ಆ ದೋಷವೇ ಪುನಃ ಬರುತ್ತದೆ. ದೇವದತ್ತನು ಯಜ್ಞದತ್ತ ಹೇಳಿದ ವಾಕ್ಯವನ್ನು ಅನುವಾದ ಮಾಡುತ್ತಾನೆ. ಆ ವಾಕ್ಯದ ಅರ್ಥದ ಬಗ್ಗೆ ಅವನಿಗೆ ತಿಳಿದಿರುವುದಿಲ್ಲ. ಅಥವಾ ಸಂದೇಹವಿರುತ್ತದೆ. ಆದ್ದರಿಂದ ಪ್ರಮಿತತ್ವವು ಇಲ್ಲದ ಕಾರಣ ಅನುವಾದ ಮಾಡುವ ದೇವದತ್ತನು ಆಪ್ತ ಎಂದು ಕರೆಸಿಕೊಳ್ಳದೇ ಇರಬೇಕಾದೀತು. ಈ ಆಕ್ಷೇಪವನ್ನು 'ಅನುವಾದಸ್ಯ' ಎಂಬ ವಾಕ್ಯದಲ್ಲಿ ಪರಿಹರಿಸಿದ್ದಾರೆ.

ಯಜ್ಞದತ್ತನ ವಾಕ್ಯವನ್ನು ದೇವದತ್ತನು ಅನುವಾದ ಮಾಡುತ್ತಿದ್ದಾನೆ. ಈ ಅನುವಾದಕ್ಕೆ ಯಜ್ಞದತ್ತನ ವಾದ ಎನಿಸುವ ವಾಕ್ಯವು ವಿಷಯ ಆಗುತ್ತದೆ. ತತ್ಪ್ರತಿಪಾದ್ಯವಾದ ಅರ್ಥವು ವಿಷಯ ಆಗುವುದಿಲ್ಲ. ತಾನು ಅನುವಾದ ಮಾಡುತ್ತಿರುವ ವಾಕ್ಯಕ್ಕೆ ಯಾವ ಯಜ್ಞದತ್ತನ ವಾಕ್ಯವು ವಿಷಯವಾಗಿದೆಯೋ

ಅದರ ಬಗ್ಗೆ ದೇವದತ್ತನಿಗೆ ಯಥಾರ್ಥಜ್ಞಾನ ಇದ್ದೇ ಇದೆ. ಹಾಗಾಗಿ ಅದನ್ನು ಪ್ರಯೋಗ ಮಾಡುವ ದೇವದತ್ತನು ಅನಾಪ್ತ ಎಂದು ಕರೆಸಿಕೊಳ್ಳುವುದಿಲ್ಲ.

ಪ್ರತಿಬಂಧ ಎಂಬ ಶಬ್ದಕ್ಕೆ 'ಸಾಧ್ಯಂ ಪ್ರತಿ ಸಂಬಂಧಃ' ಎಂಬ ನಿಷ್ಪತ್ತಿಯಿಂದ ವ್ಯಾಪ್ತಿ ಎಂಬರ್ಥವು ದೊರೆಯುತ್ತದೆ. ಅದನ್ನೇ ಅವಿನಾಭಾವಃ ಎಂದು ಪರಿಮಳದಲ್ಲಿ ಬರೆದಿದ್ದಾರೆ.

## 'ಯತ್ರ ವಿಷಯೇ' ಎಂಬುದನ್ನು ಈ ಎರಡು ಲಕ್ಷಣಗಳಲ್ಲೂ ವಿವಕ್ಷಿಸಬೇಕು

ವಾಕ್ಯಾರ್ಥಚಂದ್ರಿಕಾ– 'ನಿರ್ದೋಷಃ, ಪ್ರಮಿತಸ್ಯೈವ ವಕ್ತಾ' ಇತಿ ಲಕ್ಷಣದ್ವಯೇಽಪಿ 'ಯತ್ರ ವಿಷಯ' ಇತಿ ವಿಶೇಷಣವಿವಕ್ಷಾಮಭ್ಯುಪೇತ್ಯ ಏತದ್ ದೂಷಣಪರಿಹಾರಪ್ರಕಾರಮತಿದಿಶತಿ – ಏತೇನೇತಿ ॥ 'ಮಾಭೂತ್ ತದಾಽಸಾವನಾಪ್ತ ಇತ್ಯಂಗೀಕಾರಾತ್' ಇತ್ಯಜ್ಞಾತಸಂದಿಗ್ಧವಾಕ್ಯ-ಪ್ರಯೋಕ್ತುಃ ಅಲಕ್ಷ್ಯತ್ವಾತ್ ಅಂಗೀಕಾರವದನುವಾದವಾಕ್ಯಪ್ರಯೋಕ್ತುರಪಿ ಅಲಕ್ಷ್ಯತ್ವಮನುಮತ-ಮಿತಿ ಭ್ರಾಂತಿಂ, ತಸ್ಯ ಲಕ್ಷ್ಯತ್ವೇಽಪಿ ಲಕ್ಷಣೋಪಪಾದನಂ ಪರಿಹರತಿ – ಅನುವಾದಸ್ಯೇತಿ ॥

'ನನು ಕೋಽಯಮಾಪ್ತೋ ನಾಮ' ಇತಿ ಪ್ರಶ್ನಪೂರ್ವಂ ವಿವಕ್ಷಿತಾರ್ಥತತ್ವಜ್ಞಾನಾದೀನಾಂ ಚತುರ್ಣಾಮಾಪ್ತಿರೂಪತ್ವಪ್ರತಿಪಾದನಂ ಯದರ್ಥಂ ಕೃತಂ ತದಾಹ – ಏವಂ ಚೇತಿ ॥ ಪ್ರತಿಬಂಧೋ ವ್ಯಾಪ್ತಿಃ ।

'ನಿರ್ದೋಷಃ' ಮತ್ತು 'ಪ್ರಮಿತಸ್ಯೈವ ವಕ್ತಾ' ಎಂಬ ಈ ಎರಡು ಲಕ್ಷಣಗಳಲ್ಲೂ ಕೂಡ 'ಯತ್ರ ವಿಷಯೇ' ಎಂಬ ವಿಶೇಷಣವನ್ನು ವಿವಕ್ಷಿಸಬೇಕು. ಆಗ ಮಾತ್ರ ದೋಷವು ಪರಿಹಾರ-ವಾಗುತ್ತದೆಂದು ಹಿಂದೆ ಹೇಳಿದ್ದನ್ನೇ 'ಏತೇನ' ಎಂಬುದಾಗಿ ಅತಿದೇಶ ಮಾಡಿದ್ದಾರೆ. 'ಮಾ ಭೂತ್ ತದಾಸೌ ಅನಾಪ್ತಃ ಇತ್ಯಂಗೀಕಾರಾತ್' ಎಂಬುದಾಗಿ ಈ ಹಿಂದೆ ಹೇಳಿದ್ದರಿಂದ ಅಜ್ಞಾತವಾದ ಮತ್ತು ಸಂದಿಗ್ಧವಾದ ವಾಕ್ಯವನ್ನು ಪ್ರಯೋಗ ಮಾಡುವವನು ಅಲಕ್ಷ್ಯನಾಗಿದ್ದಾನೆಂದು ಅಂಗೀಕರಿಸಿದಂತೆ ಅನುವಾದವಾಕ್ಯಪ್ರಯೋಗ ಮಾಡುವವನೂ ಕೂಡ ಅಲಕ್ಷ್ಯನಾಗಿದ್ದಾನೆ ಎಂಬುದು ಅನುಮತವಾಗಿದೆ ಎಂಬ ಭ್ರಾಂತಿಯನ್ನು ಪರಿಹರಿಸುತ್ತಿದ್ದಾರೆ. ಅನುವಾದ ಮಾಡುವವನು ಲಕ್ಷ್ಯನೇ ಆಗಿದ್ದಾನೆ. ಅವನಲ್ಲಿ ಲಕ್ಷಣವು ಉಪಪನ್ನವಾಗುತ್ತಿದೆ.

'ನನು ಕೋಽಯಂ ಆಪ್ತೋ ನಾಮ' ಎಂಬುದಾಗಿ ಪ್ರಶ್ನೆಯನ್ನು ಮಾಡಿಕೊಳ್ಳುತ್ತಾ, ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ನಾಕು ವಿಶೇಷಣಗಳಿಂದ ಆಪ್ತಸ್ವರೂಪವನ್ನು ಪ್ರತಿಪಾದನೆ ಮಾಡಿದರು. ಇದರ ಪ್ರಯೋಜನವನ್ನು 'ಏವಂ ಚ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಪ್ರತಿಬಂಧ-ಶಬ್ದಕ್ಕೆ ವ್ಯಾಪ್ತಿ ಎಂದರ್ಥ.

ವಿಶೇಷವಿಚಾರ – 'ಯತ್ರ ವಿಷಯೇ' ಎಂಬುದನ್ನು ಹಿಂದೆ ವಿವಕ್ಷಿಸಿದಂತೆ ಈ ಎರಡು ಲಕ್ಷಣ-ಗಳಲ್ಲೂ ವಿವಕ್ಷಿಸಬೇಕು. ಆಗ ಹೀಗೆ ಲಕ್ಷಣವನ್ನು ಹೇಳಿದಂತಾಗುತ್ತದೆ. 'ಯಃ ಯತ್ರ ವಿಷಯೇ ನಿರ್ದೋಷಃ ಸಃ ಆಪ್ತಃ' 'ಯಃ ಯತ್ರ ವಿಷಯೇ ಪ್ರಮಿತಸ್ಯೈವ ವಕ್ತಾ ಸಃ ತಸ್ಮಿನ್ ವಿಷಯೇ ಆಪ್ತಃ' ಎಂದು.

'ಅಜ್ಞಾತಸಂದಿಗ್ಧಾನುವಾದವಾಕ್ಯಪ್ರಯೋಕ್ತುಃ' ಎಂಬುದಕ್ಕೆ ಶ್ರೀವಿದ್ಯಾಧೀಶತೀರ್ಥರು ಅಜ್ಞಾತವಾದ ಸಂದಿಗ್ಧವಾದ ಮತ್ತು ಅನುವಾದಸ್ವರೂಪವಾದ ವಾಕ್ಯವನ್ನು ಪ್ರಯೋಗಮಾಡುವ' ಎಂಬ ಅರ್ಥವನ್ನು ಹೇಳಿದ್ದರು. ಇದಕ್ಕನುಗುಣವಾಗಿಯೇ ಇಲ್ಲಿ ವ್ಯಾಖ್ಯಾನವನ್ನು ತಿಳಿಯಬೇಕು. ಪರಿಮಳಾಚಾರ್ಯರು ಹಾಗೂ ಯಾದವಾರ್ಯರು ಇದಕ್ಕೆ ಅಜ್ಞಾತವಾದ, ಸಂದಿಗ್ಧವಾದ ಅನುವಾದವಾಕ್ಯವನ್ನು ಪ್ರಯೋಗ ಮಾಡುವವ ಎಂಬ ಬೇರೆ ಅರ್ಥವನ್ನು ಹೇಳಿದ್ದರು. ಇವರ ಪ್ರಕಾರ ಪ್ರತಿಯೊಂದೂ ಬೇರೆಯಾದ್ದರಿಂದ ಹೀಗೆ ಅರ್ಥ. ಅಜ್ಞಾತವಾದ ವಾಕ್ಯಪ್ರಯೋಗ ಮಾಡುವವನು ಲಕ್ಷ್ಯನಾಗಿರುವುದಿಲ್ಲ. ಸಂದಿಗ್ಧವಾದ ವಾಕ್ಯವನ್ನು ಪ್ರಯೋಗ ಮಾಡುವವನೂ ಕೂಡ ಲಕ್ಷ್ಯನಾಗಿರುವುದಿಲ್ಲ. ಆದ್ದರಿಂದ ಅಲ್ಲಿ ನಿರ್ದೋ-ಷತ್ವರೂಪವಾದ ಪ್ರಮಿತಸ್ಯೈವ ವಕ್ತೃತ್ವರೂಪವಾದ ಲಕ್ಷಣಗಳೆರಡೂ ಬಾರದಿದ್ದರೆ ದೋಷವಲ್ಲ. ಆದರೆ ಅನುವಾದ ಮಾಡುವ ವ್ಯಕ್ತಿಯು ಆಪ್ತನಾಗಿದ್ದಾನೆ. ಆದ್ದರಿಂದ ಅವರಿಬ್ಬರಂತೆ ಇವನೂ ಕೂಡ ಅಲಕ್ಷ್ಯನಾಗಿದ್ದಾನೆಂದು ತಿಳಿಯಬಾರದು. ಅನುವಾದ ಮಾಡುವ ವಕ್ತೃವಿನ ವಾಕ್ಯಕ್ಕೆ ವಾದವು ವಿಷಯ-ವಾಗಿದೆ. ಇದು ಪ್ರಮಿತವೇ ಆಗಿದೆ. ಆದ್ದರಿಂದ ಲಕ್ಷ್ಯದಲ್ಲಿ ಲಕ್ಷಣವನ್ನು ಹೇಗೆ ಕೂಡಿಸಬೇಕೆಂಬುದನ್ನು 'ಅನುವಾದಸ್ಯ' ಎಂಬ ವಾಕ್ಯದಿಂದ ತಿಳಿಸಿದ್ದಾರೆ.

ಹಿಂದೆ ಆಪ್ತನೆಂದರೆ ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ, ವಿವಕ್ಷಾ, ಕರಣಪಾಟವ ಈ ನಾಕೂ ಗುಣಗಳಿರಬೇಕೆಂದು ಹೇಳಿದ್ದರು. ಇದರ ಪ್ರಯೋಜನವನ್ನು 'ಏವಂ ಚ' ಎಂಬ ವಾಕ್ಯದಿಂದ ತೋರಿಸಿದ್ದಾರೆ.

## ಆಪ್ತಸ್ವರೂಪನಿರೂಪಣೆಯ ಪ್ರಯೋಜನ

ಯಾದುಪತ್ಯ– ಏತೇನೇತಿ ॥ 'ಯೋ ಯತ್ರೈವಂ ಭೂತಃ ಸ ತತ್ರಾಪ್ತಃ' ಇತಿ ವಿವಕ್ಷಿತತ್ವೇನ ಇತ್ಯರ್ಥಃ। 'ಅಜ್ಞಾತಸಂದಿಗ್ಧ' ಇತ್ಯಾದಿನೋಕ್ತಂ ದೋಷಮಪ್ಯನಯೈವ ವಿವಕ್ಷಯಾ ನಿರಾಕರೋತಿ – ಅನುವಾದಸ್ಯೇತಿ ॥ ಆಪತ್ತ್ವಾವಿರೋಧಾದಿತಿ ॥ 'ವಾದಾಂಶೇ' ಇತಿ ಶೇಷಃ।

ಯದರ್ಥಮಾಪ್ತಸ್ವರೂಪಂ ನಿರೂಪಿತಂ ತದಿದಾನೀಮಾಹ – ಏವಂ ಚೇತಿ ॥ ಏವಂ 'ನಿರ್ದೋಷಃ, ಪ್ರಮಿತಸ್ಯೈವ ವಕ್ತಾ' ಇತಿ ಪಕ್ಷದ್ವಯೇಽಪಿ 'ಅನ್ಯಥಾ ನಿರುಪಾಧಿಕಃ ಸಾಧ್ಯ-ಸಂಬಂಧೋ ಭಜ್ಯೇತ' ಇತಿ ವಿಪಕ್ಷಬಾಧಕತರ್ಕೋ ದ್ರಷ್ಟವ್ಯಃ।

'ಏತೇನ' - ಯಃ ಯತ್ರ ಏವಂಭೂತಃ ಸಃ ತತ್ರ ಆಪ್ತಃ ಎಂಬುದಾಗಿ ಈ ಹಿಂದೆ ಆಪ್ತಲಕ್ಷಣವನ್ನು ವಿವಕ್ಷಿಸಲಾಯಿತು; ಹೀಗೆ ಹೇಳಿದ್ದರಿಂದ ಎಂದರ್ಥ.

'ಅಜ್ಞಾತಸಂದಿಗ್ಧ ಇತ್ಯಾದಿಯಾಗಿ ಈ ಹಿಂದೆ ಅಜ್ಞಾತವಾದ ಮತ್ತು ಸಂದಿಗ್ಧವಾದ ವಿಷಯವನ್ನು ಅನುವಾದ ಮಾಡುವವನೂ ಕೂಡ ಅನಾಪ್ತನಾಗಬೇಕಾದೀತು ಎಂಬ ದೋಷವನ್ನು ಹೇಳಲಾಗಿತ್ತು. ಆ ದೋಷವನ್ನೂ ಕೂಡ ಈ ವಿವಕ್ಷೆಯಿಂದಲೇ ನಿರಾಕೃತವಾಗುತ್ತದೆಂದು 'ಅನುವಾದಸ್ಯ' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ.

'ಆಪ್ತತ್ವ ಅವಿರೋಧಾತ್' ಎಂಬಲ್ಲಿ ವಾದಾಂಶದಲ್ಲಿ ಎಂಬುದನ್ನು ಶೇಷಪೂರಣ ಮಾಡಿಕೊಳ್ಳ-ಬೇಕು.

ಯಾವ ಕಾರಣಕ್ಕೋಸ್ಕರ ಆಪ್ತಸ್ವರೂಪವನ್ನು ಇಲ್ಲಿಯ ತನಕ ನಿರೂಪಣೆ ಮಾಡಲಾಯಿತೋ ಆ ಪ್ರಯೋಜನವನ್ನು ಈಗ 'ಏವಂ ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ನಿರ್ದೋಷಃ ಎಂಬ ಪಕ್ಷದಲ್ಲಿ ಹಾಗೂ 'ಪ್ರಮಿತಸ್ಯೈವ ವಕ್ತಾ' ಎಂಬ ಪಕ್ಷದಲ್ಲಿ 'ಅನ್ಯಥಾ ನಿರುಪಾಧಿಕಃ ಸಾಧ್ಯಸಂಬಂಧಃ ಭಜ್ಯೇತ' ಎಂಬ ವಿಪಕ್ಷೇ ಬಾಧಕತರ್ಕವನ್ನು ತಿಳಿಯಬೇಕು.

ವಿಶೇಷವಿಚಾರ – ಯಜ್ಞದತ್ತನ ವಾಕ್ಯವನ್ನು ದೇವದತ್ತನು ಅನುವಾದ ಮಾಡುತ್ತಾನೆ. ಈ ದೇವದತ್ತನಿಗೆ ಆ ವಾಕ್ಯದ ಅರ್ಥವು ತಿಳಿದಿರುವುದಿಲ್ಲ. ಅಥವಾ ಸಂದೇಹವೇ ಇರುತ್ತದೆ. ಹೀಗಿರುವಾಗ ಪ್ರಮಿತವಾದದ್ದನ್ನೇ ಹೇಳುವವನು ಆಪ್ತನೆಂದು ವಿವಕ್ಷಿಸಿದರೆ ಇವನು ಆಪ್ತನು ಆಗದೇ ಇರಬೇಕಾದೀತು ಎಂಬ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರಿಸಿದ್ದಾರೆ. ಅನುವಾದ ವಾಕ್ಯಕ್ಕೆ ವಾದವಾಕ್ಯವು ವಿಷಯ-ವಾಗಿದೆ. ಅದು ದೇವದತ್ತನಿಗೆ ಪ್ರಮಿತವೇ ಆಗಿರುವುದರಿಂದ 'ಪ್ರಮಿತಸ್ಯೈವ ವಕ್ತೃತ್ವಂ' ಎಂಬ

ಆಪ್ತಲಕ್ಷಣವು ಬರುವುದರಿಂದ ಅವ್ಯಾಪ್ತಿಯು ಬರುವುದಿಲ್ಲ. ಆದರೆ ವಾದವಿಷಯದಲ್ಲಿ ದೇವದತ್ತನಿಗೆ ಪ್ರಮಿತಿಯು ಇಲ್ಲದ ಕಾರಣ 'ಪ್ರಮಿತಸ್ಯೈವ ವಕ್ತೃತ್ವಂ' ಎಂಬ ಆಪ್ತಲಕ್ಷಣವು ಬರುವುದಿಲ್ಲ. ಆ ವಿಷಯದಲ್ಲಿ ಅನಾಪ್ತನಾಗಿದ್ದಾನೆ. ಆದ್ದರಿಂದ ಈ ಎರಡನೆಯ ಲಕ್ಷಣದಲ್ಲೂ ಕೂಡ ಯಾವ ವಿಷಯದಲ್ಲಿ ಪ್ರಮಿತವಾದದ್ದನ್ನು ಹೇಳುತ್ತಾನೋ ಆ ವಿಷಯದಲ್ಲಷ್ಟೇ ಆಪ್ತನಾಗುತ್ತಾನೆ ಎಂಬುದಾಗಿ ವಿವಕ್ಷಿಸಬೇಕು.

ಆಪ್ತಲಕ್ಷಣವನ್ನು ಒಟ್ಟು ಮೂರು ರೀತಿಯಲ್ಲಿ ಹೇಳಲಾಯಿತು. ಅದರ ಪ್ರಯೋಜನವನ್ನು 'ಏವಂ ಚ' ಎಂಬ ಗ್ರಂಥವು ನಿರೂಪಣೆ ಮಾಡುತ್ತಿದೆ. ಮೊದಲನೆಯ ಲಕ್ಷಣ – ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವ, ಅವಿಪ್ರಲಿಪ್ಸಾ, ವಿವಕ್ಷೆ ಇರುವವನು ಆಪ್ತನೆನಿಸುತ್ತಾನೆ. ವಕ್ತ್ರಾದ್ಯಾನುಕೂಲ್ಯಗಳೆಂಬ ಹೇತುವಿರಲಿ ಈ ಲಕ್ಷಣವುಳ್ಳ ಆಪ್ತತ್ವವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ವಕ್ತ್ರಾನುಕೂಲ್ಯವು ಆಪ್ತ್ಯೈಕದೇಶವೇ ಆಗಿದೆ. ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ, ವಿವಕ್ಷೆ ಹಾಗೂ ಕರಣಪಾಟವಗಳಿದ್ದರೆ ಆಪ್ತನೆನಿಸುತ್ತಾನೆ. ವಕ್ತ್ರಾದ್ಯಾನುಕೂಲ್ಯವೆಂದರೆ ಅವಿಪ್ರಲಿಪ್ಸಾ ಬಿಟ್ಟು ಉಳಿದದ್ದೆಲ್ಲವೂ ಇರಬೇಕು. ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳಿರಬೇಕೆಂದರೆ ಅವಿಪ್ರಲಿಪ್ಸೆಯು ಇರಬೇಕು. ಪ್ರಕೃತ ಹೇತು ಇದ್ದು ಸಾಧ್ಯ ಇರುವುದು ಬೇಡ ಎಂದರೆ ಸಾಧ್ಯ ಇಲ್ಲದಿದ್ದಲ್ಲಿ ಹೇತುವು ಇರಲಾರದು ಎಂಬ ವಿಪಕ್ಷೇ ಬಾಧಕತರ್ಕವು ಸ್ಪಷ್ಟವಾಗಿ ಇರುತ್ತದೆ. ಆದ್ದರಿಂದ ವಕ್ತ್ರಾದ್ಯಾನು-ಕೂಲ್ಯಮತ್ತ್ವ ಎಂಬ ಹೇತುವಿಗೂ ಆಪ್ತತ್ವ ಎಂಬ ಸಾಧ್ಯಕ್ಕೂ ಇರುವ ವ್ಯಾಪ್ತಿಯು ಸುದೃಢವಾಗಿದೆ.

ಒಂದು ವೇಳೆ ಆಪ್ತಲಕ್ಷಣವನ್ನು 'ನಿರ್ದೋಷತ್ವಂ' ಎಂದು ಅಥವಾ 'ಪ್ರಮಿತಸ್ಯೈವ ವಕ್ತೃತ್ವಂ' ಎಂದು ವಿವಕ್ಷಿಸಿದರೆ ವಿಪಕ್ಷೇ ಬಾಧಕತರ್ಕವನ್ನು ಹೇಗೆ ಹೇಳುತ್ತೀರಿ?

ಈ ಪ್ರಶ್ನೆಗೆ ಉತ್ತರ ಹೀಗಿದೆ – 'ಯದಿ ಸಾಧ್ಯಂ ನ ಸ್ಯಾತ್ ತರ್ಹಿ ಹೇತುರಪಿ ನ ಸ್ಯಾತ್' ಎಂಬ ವಿಪಕ್ಷೇ ಬಾಧಕತರ್ಕವನ್ನು ಈ ಎರಡು ಪಕ್ಷಗಳಲ್ಲಿ ಹೇಳಲು ಸಾಧ್ಯವಾಗುವುದಿಲ್ಲ. 'ಆದರೆ ಅನ್ಯಥಾ ನಿರುಪಾಧಿಕಃ ಸಾಧ್ಯಸಂಬಂಧಃ ಭಜ್ಯೇತ' ಎಂಬ ವಿಪಕ್ಷೇ ಬಾಧಕತರ್ಕವನ್ನು ಹೇಳಲು ಸಾಧ್ಯವಿದೆ. ನಿರ್ದೋಷತ್ವರೂಪವೆಂಬ ಸಾಧ್ಯಕ್ಕೂ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಹೇತುವಿಗೂ ಇದರಂತೆ ಪ್ರಮಿತಸ್ಯೈವ ವಕ್ತೃತ್ವವೆಂಬ ಸಾಧ್ಯಕ್ಕೂ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಹೇತುವಿಗೂ ನಿರುಪಾಧಿಕ-ಸಂಬಂಧವಿದೆ. ಅಪ್ರಯೋಜಕಾಶಂಕೆ ಮಾಡಿದರೆ ಇದು ಭಂಗವಾದೀತು ಎಂಬುದೇ ವಿಪಕ್ಷೇ ಬಾಧಕ-ತರ್ಕ. ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು. –

'ಇದಂ ಫಲಂ ರೂಪವತ್ ರಸವತ್ವಾತ್' ಎಂದು ಅನುಮಾನವನ್ನು ಮಾಡಿದಾಗ ರಸವತ್ವವೆಂಬ ಹೇತುವಿರಲಿ ರೂಪವೆಂಬ ಸಾಧ್ಯವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ರೂಪರಸಗಳಿಗೆ ಕಾರ್ಯಕಾರಣಭಾವವು ಇಲ್ಲದ್ದರಿಂದ 'ಯದಿ ರೂಪಂ ನ ಸ್ಯಾತ್ ತರ್ಹಿ ರಸೋऽಪಿ ನ ಸ್ಯಾತ್' ಎಂಬ ವಿಪಕ್ಷೇ ಬಾಧಕತರ್ಕವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದರೆ 'ನಿರುಪಾಧಿಕಃ ಸಾಧ್ಯಸಂಬಂಧಃ ಭಜ್ಯೇತ' ಎಂಬ ವಿಪಕ್ಷೇ ಬಾಧಕತರ್ಕವನ್ನು ಹೇಳಬಹುದು. ರೂಪಕ್ಕೂ ರಸಕ್ಕೂ ನಿರುಪಾಧಿಕವಾದ ಸಂಬಂಧವಿದೆ. ಅಪ್ರಯೋಜಕಾಶಂಕೆ ಮಾಡಿದಾಗ ಇದು ಭಂಗವಾಗಬೇಕಾದೀತು ಎಂದು ಹೇಗೆ ಹೇಳುತ್ತೇವೋ ಅದರಂತೆ ಇಲ್ಲೂ ಕೂಡ ತಿಳಿಯಬೇಕು.

## ಸುಧಾಪರಿಮಳಸಾರ

"ಯಾರು ಯಾವ ವಿಷಯದಲ್ಲಿ ಹಿಂದೆ ತಿಳಿಸಿದ ಆಪ್ತಿ ಉಳ್ಳವರೋ ಅವರು ಆ ವಿಷಯದಲ್ಲಿ ಆಪ್ತ ಎಂದು ಹೇಳಿದುದರಿಂದ ಅನನುಗಮ ದೋಷವಲ್ಲ ಎಂದು ಹೇಳಿದ್ದರಿಂದಲೂ ಹಿಂದೆ ಆಶಂಕಿಸಿದ ಆಪ್ತಲಕ್ಷಣಗಳಲ್ಲಿ ನಿರ್ದೋಷನಾದವನು, ಪ್ರಮಾಣಸಿದ್ಧವಾದುದ್ದನ್ನೇ ಹೇಳುವವನು ಆಪ್ತ ಎಂಬ ಲಕ್ಷಣಗಳನ್ನು 'ಯಾರು ಯಾವ ವಿಷಯದಲ್ಲಿ ನಿರ್ದೋಷರೋ ಪ್ರಮಿತವಾದುದನ್ನೇ ಹೇಳುವರೋ ಅವರು ಆ ವಿಷಯದಲ್ಲಿ ಆಪ್ತ' ಎಂದು ಸ್ವಲ್ಪ ಮಾರ್ಪಾಡಿನೊಂದಿಗೆ ಅಂಗೀಕರಿಸಿದಂತಾಯಿತು. ಅಜ್ಞಾತಸಂದಿಗ್ಧಗಳಾದ ವಿಷಯದ ಅನುವಾದಕವಾಕ್ಯಗಳನ್ನು ಪ್ರಯೋಗಿಸಿದವನು, ಅನಾಪ್ತ ಎಂದಾಗಬೇಕಾದೀತು ಎಂಬ ಆಕ್ಷೇಪವೂ ಸರಿಯಲ್ಲ. ಅನುವಾದಕ್ಕೆ ವಾದವೇ (ಯಾರ ಮಾತನ್ನು ಅನುವಾದ ಮಾಡುತ್ತಿದ್ದಾನೋ ಅವನ ಮಾತೇ) ವಿಷಯವಾದುದರಿಂದ, ಅಂತಹ ವಾದವು ಪ್ರಮಿತವೇ ಆಗಿರುವುದರಿಂದ ಪ್ರಮಾಣದೃಷ್ಟವಾದದ್ದನ್ನೇ ಹೇಳಿದಂತಾಯಿತಷ್ಟೆ.

"ವಕ್ತೃವಿನ ಅನುಕೂಲ್ಯ ಎಂಬುದು ಆಪ್ತಿಯ ಏಕದೇಶವೇ. ಶ್ರೋತೃವು ಅನುಕೂಲನಾಗಿದ್ದರೆ ಅಥವಾ ಪ್ರಸಂಗವು ಅನನುಕೂಲವಾಗಿದ್ದರೆ ಮಾತ್ರ ವಕ್ತೃವಿಗೆ ವಿಪ್ರಲಿಪ್ಸಾ ಅಂದರೆ ಮೋಸಮಾಡುವ ಇಚ್ಛೆ ಉಂಟಾಗುತ್ತದೆ. ಶ್ರೋತೃ ಹಾಗೂ ಪ್ರಸಂಗಗಳು ಅನುಕೂಲವಾಗಿದ್ದರೆ, ಅಂತಹ ಇಚ್ಛೆ ಬರುವುದಿಲ್ಲ ಅಂದ ಮೇಲೆ ವಕ್ತೃಶ್ರೋತೃ-ಪ್ರಸಂಗಾನುಕೂಲ್ಯಗಳು ಎಲ್ಲಿ ಇರುತ್ತವೋ ಅದು ಆಪ್ತವಾಕ್ಯ ಎಂದು ನಿರ್ಣಯಿಸಬಹುದು. ಅಂದರೆ ವಕ್ತ್ರಾದ್ಯಾನು-ಕೂಲ್ಯಕ್ಕೆ ಆಪ್ತವಾಕ್ಯತ್ವ ಎಂಬ ಸಾಧ್ಯದಿಂದ ವ್ಯಾಪ್ತಿ ಸುಸಿದ್ಧವಾಗಿದೆ.

## ನೆನೆಪಿಡಿ

* ಆಪ್ತಿಲಕ್ಷಣದಲ್ಲಿ ಅವಿಪ್ರಲಿಪ್ಸಾ ಎಂಬ ಒಂದಂಶವನ್ನು ಬಿಟ್ಟರೆ ಉಳಿದದ್ದೆಲ್ಲವೂ ವಕ್ತ್ರಾದ್ಯಾನುಕೂಲ್ಯದಲ್ಲಿ ಸೇರಿದೆ. ಆದ್ದರಿಂದ ಸಾಧ್ಯಾವೈಶಿಷ್ಟ್ಯತೆಯನ್ನು ಅಂಶತಃ ತಿಳಿಯಬೇಕು.

* ಒಟ್ಟು ಮೂರು ಆಪ್ತಲಕ್ಷಣಗಳು; ವಿವಕ್ಷಿತಾರ್ಥತತ್ತ್ವಜ್ಞಾನ- ಅವಿಪ್ರಲಿಪ್ಸಾ- ವಿವಕ್ಷಾ-ಕರಣಪಾಟವಂ ಆಪ್ತಿಃ, ತದ್ವಾನ್ ಆಪ್ತಃ' (2) ಯಃ ಯತ್ರ ನಿರ್ದೋಷಃ ಸಃ ತತ್ರ ಆಪ್ತಃ (3) ಯಃ ಯತ್ರ ಪ್ರಮಿತಸ್ಯೈವ ವಕ್ತಾ ಸಃ ತತ್ರ ಆಪ್ತಃ

* ಮೂರೂ ಬಗೆಯ ಆಪ್ತನ ಲಕ್ಷಣಗಳಲ್ಲಿ 'ಯಃ ಯತ್ರ ಏವಂಭೂತಃ' ಎಂಬ ವಿಶೇಷಣವನ್ನು ವಿವಕ್ಷಿಸದೇ ಇದ್ದರೆ ಸರ್ವಥಾ ನಿರ್ದೋಷತ್ವಾದಿಗಳು ಯಾರಲ್ಲೂ ಇಲ್ಲದ ಕಾರಣ ಅವ್ಯಾಪ್ತಿ, ಅಸಂಭವ ದೋಷಗಳು ಬರುತ್ತವೆ.

* ಮತ್ತೊಬ್ಬರ ವಾಕ್ಯವನ್ನು ಅನುವಾದ ಮಾಡುವ ವ್ಯಕ್ತಿಯು ವಾದಾಂಶದಲ್ಲಿ ಆಪ್ತ-ನಾಗಿದ್ದಾನೆ. ವಾದವಿಷಯಾಂಶದಲ್ಲಿ ಅನಾಪ್ತನಾಗಿದ್ದಾನೆ.

* ಮೊದಲನೆಯ ಆಪ್ತಲಕ್ಷಣವನ್ನು ವಿವಕ್ಷಿಸಿದಾಗ 'ಯದಿ ಆಪ್ತತ್ವಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯಂ ನಸ್ಯಾತ್' ಎಂಬುದು ಅಪ್ರಯೋಜಕಾಶಂಕೆ. ಉಳಿದ ಆಪ್ತಲಕ್ಷಣಗಳನ್ನು ವಿವಕ್ಷಿಸಿದಾಗ 'ನಿರುಪಾಧಿಕಃ ಸಾಧ್ಯಸಂಬಂಧಃ ಭಜ್ಯೇತ' ಎಂಬುದು ವಿಪಕ್ಷೇ ಬಾಧಕತರ್ಕ.

## ಪ್ರಾಮಾಣ್ಯಸಾಧಕವಾದ ಅನುಮಾನಕ್ಕೆ ವ್ಯಭಿಚಾರಾದಿದೋಷಪರಿಹಾರ

**ಶ್ರೀಮನ್ನ್ಯಾಯಸುಧಾ – ನನ್ವಾಪ್ತವಾಕ್ಯತಾ ತಾವತ್ ಸ್ವಕಪೋಲಕಲ್ಪಿತೇಷು ಮಾಲತೀಮಾಧವಾದಿಷು ಪ್ರಾಮಾಣ್ಯಂ ವ್ಯಭಿಚರತಿ । ನ ಹಿ ನಾಟಕಾದಿ-ಪ್ರಬಂಧಂ ವಿರಚಯನ್ನಪಿ ಕದಾಚಿದುಕ್ತಲಕ್ಷಣೋಪಪನ್ನೋ ನ ಭವತಿ ಭವ-ಭೂತಿರಿತಿ ಚೇನ್ನ । 'ಯೋ ಯತ್ರೈವಂಭೂತಃ' ಇತ್ಯನೇನೈವ ಉಕ್ತೋತ್ತರತ್ವಾತ್, ಆಪ್ತಿಮೂಲವಾಕ್ಯಸ್ಯ ಆಪ್ತವಾಕ್ಯತಯಾ ವಿವಕ್ಷಿತತ್ವಾಚ್ಚ ।**

**ಅಬೋಧಕಂ ವಿಪರೀತಬೋಧಕಂ ವಾ ವಾಕ್ಯಮ್ ಅಪ್ರಾಮಾಣಮಿತ್ಯುಚ್ಯತೇ । ತತ್ರ ಅಬೋಧಕಂ ವಕ್ತುರಪಟುಕರಣತಯಾ ಭವತಿ, ವಿಪರೀತಬೋಧಕಂ ಚ ವಿಪರೀತಜ್ಞಾನಾದಿನಾ, ಇತ್ಯಾಪ್ತಿಪೂರ್ವಕವಾಕ್ಯತ್ವಸ್ಯ ಪ್ರಾಮಾಣ್ಯೇನ ಪ್ರತಿ-ಬಂಧಸಿದ್ಧಿಃ । ಅನ್ಯಥಾ ಕಾರಣೇನ ವಿನಾ ಕಾರ್ಯೋತ್ಪತ್ತಿಪ್ರಸಂಗಾದಿತಿ ।**

ಆಪ್ತವಾಕ್ಯತ್ವವೆಂಬ ಹೇತುವು ಸ್ವಕಪೋಲಕಲ್ಪಿತವಾದ ಮಾಲತೀಮಾಧವ ಮೊದಲಾದ ನಾಟಕಗಳಲ್ಲಿ ಪ್ರಾಮಾಣ್ಯವನ್ನು ಬಿಟ್ಟು ಇರುತ್ತದೆ. ನಾಟಕ ಮೊದಲಾದ ಪ್ರಬಂಧಗಳನ್ನು ರಚನೆ ಮಾಡಿದ ಭವಭೂತಿಯಲ್ಲಿ ಹಿಂದೆ ಹೇಳಿದ ಲಕ್ಷಣಗಳು ಇರುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ.

ಈ ಪ್ರಶ್ನೆಯು ತಪ್ಪು. ಏಕೆಂದರೆ 'ಯಃ ಯತ್ರ ಏವಂಭೂತಃ' 'ಯಾರು ಯಾವ ವಿಷಯದಲ್ಲಿ ಆಪ್ತನಾಗಿದ್ದಾನೋ ಎಂಬುದಾಗಿ ಆಪ್ತಲಕ್ಷಣವನ್ನು ಹೇಳಿದ್ದರಿಂದ ಈ ಪ್ರಶ್ನೆಗೂ ಕೂಡ ಉತ್ತರವನ್ನು ನೀಡಿದಂತಾಗಿದೆ. ಆಪ್ತಿಮೂಲಕವಾದ ವಾಕ್ಯಕ್ಕೆ ಆಪ್ತವಾಕ್ಯ ಎಂಬ ಅರ್ಥವು ಇಲ್ಲಿ ವಿವಕ್ಷಿತವಾಗಿದೆ.

ಅಬೋಧಕವಾದ ಅಥವಾ ವಿಪರೀತಬೋಧಕವಾದ ವಾಕ್ಯವು ಅಪ್ರಮಾಣ ಆಗುತ್ತದೆ. ಇವೆರಡರಲ್ಲಿ ವಕ್ತೃವಿಗೆ ಇಂದ್ರಿಯಸಾಮರ್ಥ್ಯ ಇಲ್ಲದಿರುವುದು ಅಬೋಧಕತ್ವಕ್ಕೆ ಕಾರಣ-ವಾಗುತ್ತದೆ. ವಕ್ತೃವಿನಲ್ಲಿರುವ ವಿಪರೀತಜ್ಞಾನದಿಂದ ವಾಕ್ಯವೂ ಕೂಡ ವಿಪರೀತಬೋಧಕ-ವಾಗುತ್ತದೆ. ಹೀಗೆ ಆಪ್ತಿಪೂರ್ವಕವಾದ ವಾಕ್ಯದಲ್ಲಿ ಪ್ರಾಮಾಣ್ಯವು ನಿಯಮೇನ ಇರುತ್ತದೆ. ಒಂದು ವೇಳೆ ಅಪಟುಕರಣತ್ವಾದಿಗಳಿಲ್ಲದಿದ್ದರೂ ಅಪ್ರಾಮಾಣ್ಯವನ್ನು ಆಶಂಕಿಸಿದರೆ ಕಾರಣವಿಲ್ಲದೇ ಕಾರ್ಯವುಂಟಾಗುವ ಪ್ರಸಂಗಬರುತ್ತದೆ.

## ಎರಡನೆಯ ಅನುಮಾನದಲ್ಲಿ ಅವ್ಯಾಪ್ತಿಪರಿಹಾರ

ಪರಿಮಳ– 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್' ಇತಿ ದ್ವಿತೀಯಾನುಮಾನೇ ಅವ್ಯಾಪ್ತಿಮಾಕ್ಷಿಪ್ಯ ಸಮಾಧತ್ತೇ – ನನ್ವಿತ್ಯಾದಿನಾ ಕಾರ್ಯೋತ್ಪತ್ತಿಪ್ರಸಂಗಾತ್ ಇತ್ಯಂತೇನ ॥

ಹೇತೋರಪ್ರಯೋಜಕತ್ವನಿರಾಸಾಯ ವಿಪಕ್ಷೇ ಬಾಧಕಂ ವ್ಯನಕ್ತಿ – ಅಬೋಧಕತ್ವಮಿ-ತ್ಯಾದಿನಾ ॥ ಅನ್ಯಥೇತಿ ॥ ಅಪಟುಕರಣತ್ವಾದೇರಭಾವೇಽಪಿ ಅಪ್ರಾಮಾಣ್ಯೇ ಇತ್ಯರ್ಥಃ।

'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್' ಎಂಬ ಎರಡನೆಯ ಅನುಮಾನದಲ್ಲಿ ಹೇತುವು ಸಾಧ್ಯದಿಂದ ಅವ್ಯಾಪ್ತವಾಗಿದೆ ಎಂಬುದನ್ನು ಆಕ್ಷೇಪ ಮಾಡಿ ಸಮಾಧಾನವನ್ನು ನೀಡುವುದಕ್ಕಾಗಿ 'ನನು' ಎಂಬಲ್ಲಿಂದ ಪ್ರಾರಂಭಿಸಿ 'ಕಾರ್ಯೋತ್ಪತ್ತಿಪ್ರಸಂಗಾತ್' ಎಂಬಲ್ಲಿಯ ತನಕ ಹೇಳುತ್ತಿದ್ದಾರೆ.

'ಮಾಲತೀಮಾಧವಾದಿಷು' – ಭವಭೂತಿಯೆಂಬ ಶ್ರೇಷ್ಠಕವಿಯು ಮಾಲತೀಮಾಧವ ಎಂಬ ನಾಟಕವನ್ನು ರಚನೆ ಮಾಡಿದ್ದಾನೆ. 'ಆದಿ'ಪದದಿಂದ ಕಾಳಿದಾಸ ರಚಿಸಿದ 'ಮೇಘಸಂದೇಶ' ಮೊದಲಾದ ಮಾನಾಂತರಸಿದ್ಧವಾದ ಕಥಾಪ್ರತಿಪಾದಕಪ್ರಬಂಧಗಳನ್ನು ಸಂಗ್ರಹಿಸಬೇಕು.

'ಉಕ್ತೋತ್ತರತ್ವಾತ್' – ಮಾಲತೀಮಾಧವ ಮೊದಲಾದ ಗ್ರಂಥದ ವಿಷಯದಲ್ಲಿ ಭವ-ಭೂತಿಯು ಅನಾಪ್ತನಾಗಿದ್ದಾನೆ. ಅಲ್ಲಿ ಹೇತುವೇ ಬಾರದ ಕಾರಣ ವ್ಯಭಿಚಾರವು ಬರುವುದಿಲ್ಲ ಎಂದಭಿಪ್ರಾಯ.

ಹೇತುವಿಗೆ ಅಪ್ರಯೋಜಕತ್ವವನ್ನು ಪರಿಹಾರ ಮಾಡಲು ವಿಪಕ್ಷೇ ಬಾಧಕತರ್ಕವನ್ನು 'ಅಬೋಧಕಂ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

'ಅನ್ಯಥಾ' – ಇಂದ್ರಿಯಾದಿಗಳ ಅಸಾಮರ್ಥ್ಯ ಮುಂತಾದ ದೋಷಗಳಿಲ್ಲದೇ ಇದ್ದರೂ ಅಪ್ರಾಮಾಣ್ಯವನ್ನು ತಿಳಿಯುವುದಾದರೆ ಎಂದರ್ಥ.

ವಿವರಣೆ– ಇಲ್ಲಿಯ ತನಕ 'ವಿಮತಮ್ ಆಪ್ತವಾಕ್ಯಂ ವಕ್ತ್ರಾದ್ಯಾನುಕೂಲ್ಯಸದ್ಭಾವಾತ್' ಎಂಬುದಾಗಿ ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸಾಧನೆ ಮಾಡಲಾಯಿತು. ಹೀಗೆ ಸಿದ್ಧವಾದ ಆಪ್ತವಾಕ್ಯತ್ವವನ್ನು ಹೇತುವನ್ನಾಗಿ ಮಾಡಿಕೊಂಡು ಈ ಬ್ರಹ್ಮಮೀಮಾಂಸಾ-ಶಾಸ್ತ್ರದಲ್ಲಿ ಪ್ರಮಾಣ್ಯವನ್ನು ತಿಳಿಯಬೇಕು. – 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್' ಎಂದು. ಈ ಎರಡನೆಯ ಅನುಮಾನದಲ್ಲಿ ಆಪ್ತವಾಕ್ಯತ್ವವು ಪ್ರಾಮಾಣ್ಯದಿಂದ ವ್ಯಭಿಚಾರಿಯಾಗಿದೆ ಎಂದು ಆಕ್ಷೇಪ ಮಾಡಿ ಸಮಾಧಾನವನ್ನು ನೀಡುತ್ತಿದ್ದಾರೆ. ಭವಭೂತಿಯು 'ಮಾಲತೀಮಾಧವ' ಎಂಬ ನಾಟಕವನ್ನು ರಚನೆ ಮಾಡಿದ್ದಾನೆ. ಈ ನಾಟಕವು ಮೊದಲನಿಂದ ಕೊನೆಯ ತನಕ ಸಂಪೂರ್ಣವಾಗಿ ಸ್ವಕಪೋಲ-ಕಲ್ಪಿತವಾಗಿದೆ. ಈ ಕಥೆಗೆ ಯಾವುದೇ ಆಧಾರವು ಇರುವುದಿಲ್ಲ. ಕೇವಲ ಕಾಲ್ಪನಿಕ ಕಥೆ. ಈ ನಾಟಕವನ್ನು

ರಚಿಸಿ ಭವಭೂತಿಯು ಆಪ್ತನಾಗಿದ್ದಾನೆ. ಆಪ್ತವಾಕ್ಯತ್ವವು ಈ ಮಾಲತೀಮಾಧವದಲ್ಲಿದೆ. ಆದರೆ ಪ್ರಾಮಾಣ್ಯವೆಂಬ ಸಾಧ್ಯವು ಅಲ್ಲಿರುವುದಿಲ್ಲ. ಏಕೆಂದರೆ, ಕಾಲ್ಪನಿಕಕಥೆಯಾದ್ದರಿಂದ ಅಪ್ರಾಮಾಣವಾಗಿದೆ. ಹೀಗೆ ವ್ಯಭಿಚಾರ ಬರುತ್ತದಲ್ಲವೇ?

ಇದನ್ನು 'ಯಃ ಯತ್ರ ಏವಂಭೂತಃ' ಎಂದು ಹಿಂದೆ ಹೇಳಿದ್ದರಿಂದಲೇ ಪರಿಹಾರ ಮಾಡಿದಂತಾಗಿದೆ. ಭವಭೂತಿಯು ಬೇರೆ ವಿಷಯಗಳಲ್ಲಿ ಆಪ್ತನೇ ಆಗಿರಬಹುದು. ಆದರೆ ಮಾಲತೀಮಾಧವ ಗ್ರಂಥದ ವಿಷಯದಲ್ಲಿ ಅವನು ಅನಾಪ್ತನಾಗಿದ್ದಾನೆ. ಆದ್ದರಿಂದ ಸಾಧ್ಯವು ಹೇಗೆ ಬರುವುದಿಲ್ಲವೋ ಅದರಂತೆ ಹೇತುವೂ ಕೂಡ ಬರುವುದಿಲ್ಲ. ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ.

ಕಾಳಿದಾಸ ರಚನೆ ಮಾಡಿದ 'ಮೇಘದೂತ' ಎಂಬ ಗ್ರಂಥದಲ್ಲಿರುವ ವಿಷಯವೂ ಕೂಡ ಆಮೂಲಾಗ್ರವಾಗಿ ಕಾಲ್ಪನಿಕವಾಗಿದೆ. ಇದನ್ನು ರಚಿಸಿದ ಕಾಳಿದಾಸನು ಬೇರೆ ವಿಷಯದಲ್ಲಿ ಆಪ್ತನಾಗಿದ್ದರೂ 'ಮೇಘದೂತ' ವಿಷಯದಲ್ಲಿ ಅನಾಪ್ತನಾಗಿದ್ದಾನೆ. ಅವನ ಗ್ರಂಥದಲ್ಲೂ ಕೂಡ ವ್ಯಭಿಚಾರವು ಬರುವುದಿಲ್ಲ.

'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್' ಎಂಬ ಅನುಮಾನದಲ್ಲಿ 'ಆಪ್ತವಾಕ್ಯತ್ವಮ್ ಅಸ್ತು; ಪ್ರಾಮಾಣ್ಯಂ ಮಾಸ್ತು' ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳುತ್ತಿದ್ದಾರೆ. ಪ್ರಾಮಾಣ್ಯ ಇಲ್ಲದೆಯೂ ಆಪ್ತವಾಕ್ಯತ್ವವು ಇರುವುದಾದರೆ ಕಾರಣವಿಲ್ಲದೇ ಕಾರ್ಯವಾಗಬೇಕಾದೀತು ಎಂಬುದಾಗಿ 'ಅಕಾರಣಕಾರ್ಯೋತ್ಪತ್ತಿಪ್ರಸಂಗ'ವೆಂಬ ದೋಷವಿದೆ.

## ಆಪ್ತಮೂಲವಾಕ್ಯತ್ವಾತ್ ಎಂಬ ಹೇತುವಿನಿಂದ ವ್ಯಭಿಚಾರಪರಿಹಾರ

ವಾಕ್ಯಾರ್ಥಚಂದ್ರಿಕಾ– ಏವಂ ವಿವಕ್ಷಿತಾರ್ಥತತ್ವಜ್ಞಾನಾದೀನಾಂ ಚತುರ್ಣಾಮ್ ಆಪ್ತಿಶಬ್ದಾರ್ಥತಾವಿವಕ್ಷಾಪ್ರಯೋಜನತ್ವೇನ ಪ್ರಥಮಾನುಮಾನೇ ವ್ಯಾಪ್ತಿಸಿದ್ಧಿಮುಪಪಾದ್ಯ, 'ಯೋ ಯತ್ರ' ಇತ್ಯಂಶಸ್ಯ ಆಪ್ತಲಕ್ಷಣೇ ವಿವಕ್ಷಾಯಾಃ ಪ್ರಯೋಜನಸ್ಯ ಪ್ರಥಮಾನುಮಾನೇ ಅಭಾವಾತ್, ದ್ವಿತೀಯಾನುಮಾನೇ ವ್ಯಭಿಚಾರಪರಿಹಾರಲಕ್ಷಣಂ ತತ್ಪ್ರಯೋಜನಮಭಿಪ್ರೇತ್ಯ, ತನ್ನಿವರ್ತ್ಯವ್ಯಭಿಚಾರಂ ಶಂಕತೇ – ನನ್ವಿತಿ ॥ 'ಸ್ವಕಪೋಲೇ'ತಿ ಸಾಧ್ಯಾಭಾವೋಪಪಾದನಮ್ । 'ನ ಹಿ' ಇತಿ ಸಾಧನಸದ್ಭಾವೋಪಪಾದನಮ್ । ಯೋ ಯತ್ರೇತಿ ॥ ಆಪ್ತಲಕ್ಷಣೇ 'ಯೋ ಯತ್ರ' ಇತಿ ವಿಶೇಷಣಪ್ರಕ್ಷೇಪೇಣ, ಯೋ ಯದ್ವಿಷಯೇ ವಿವಕ್ಷಿತಾರ್ಥತತ್ವಜ್ಞಾನಾದಿಮಾನ್ ತದ್ವಿಷಯೇ

ತದ್ವಾಕ್ಯತ್ವಸ್ಯ ಆಪ್ತವಾಕ್ಯತಾಹೇತ್ವರ್ಥೇನೋಕ್ತತ್ವಾತ್ ಇತ್ಯರ್ಥಃ । ಏವಮ್ ಆಪ್ತಲಕ್ಷಣೇ 'ಯೋ ಯತ್ರ' ಇತಿ ವಿವಕ್ಷಿತತ್ವಾತ್ ತತ್ಸಾಮರ್ಥ್ಯಲಬ್ಧಾರ್ಥಾನುಸಾರೇಣ ವ್ಯಭಿಚಾರಃ ಪರಿಹೃತಃ । ಅಧುನಾ ತು ಲಕ್ಷಣೇ ವಿವಕ್ಷಿತಸ್ಯ 'ಯೋ ಯತ್ರ' ಇತ್ಯಂಶಸ್ಯ ಹೇತುಶರೀರಾಪ್ರವೇಶೇಽಪಿ ಆಪ್ತಿಮದ್ವಾಕ್ಯತ್ವೇನ ಆಪ್ತಿಮೂಲಕತ್ವಸ್ಯ ವಿವಕ್ಷಯಾ ವ್ಯಭಿಚಾರಂ ಪರಿಹರತಿ – ಆಪ್ತೀತಿ ॥

ದ್ವಿತೀಯಾನುಮಾನೇ ಅಪ್ರಯೋಜಕತ್ವಶಂಕಾಯಾಮ್ ಅಕಾರಣಕಾರ್ಯೋತ್ಪತ್ತಿರೂಪಂ (ಅಪ್ರಾಮಾಣ್ಯರೂಪಕಾರ್ಯೋತ್ಯರ್ಥಃ) ಬಾಧಕಂ ವಕ್ತುಂ ಕರಣಾಪ್ರಾಮಾಣ್ಯಸ್ವರೂಪಂ ವಿವೃಣ್ವನ್ನೇವ ವಾಕ್ಯಪ್ರಾಮಾಣ್ಯಕಾರಣಾನ್ಯಾಹ – ಅಬೋಧಕಮಿತಿ ॥

ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ನಾಕು ವಿಶೇಷಣಗಳುಳ್ಳದ್ದು ಆಪ್ತಿಯ ಲಕ್ಷಣವಾಗಿದೆ. ಇದಕ್ಕೆ ಪ್ರಯೋಜನ ಏನೆಂದರೆ, 'ವಿಮತಮ್ ಆಪ್ತವಾಕ್ಯಂ ವಕ್ತ್ರಾದ್ಯನುಕೂಲ್ಯಸದ್ಭಾವಾತ್' ಎಂಬ ಪ್ರಥಮಾನುಮಾನದಲ್ಲಿ ವ್ಯಾಪ್ತಿಯ ಸಮರ್ಥನೆ. 'ಯೋ ಯತ್ರ' ಎಂಬ ಅಂಶವನ್ನು ಆಪ್ತಿಲಕ್ಷಣದಲ್ಲಿ ವಿವಕ್ಷಿಸಿದ್ದಕ್ಕೆ ಈ ಪ್ರಥಮಾನುಮಾನದಲ್ಲಿ ಪ್ರಯೋಜನ ಇರುವುದಿಲ್ಲ. ಆದರೆ 'ವಿಮತಂ ಪ್ರಮಾಣಮ್ ಆಪ್ತವಾಕ್ಯತ್ವಾತ್' ಎಂಬ ಎರಡನೆಯ ಅನುಮಾನದಲ್ಲಿ ವ್ಯಭಿಚಾರಪರಿಹಾರರೂಪವಾದ ಪ್ರಯೋಜನವಿದೆ. ಈ ಅಭಿಪ್ರಾಯದಿಂದ 'ಯೋ ಯತ್ರ' ಎಂಬ ವಿಶೇಷಣದಿಂದ ಪರಿಹಾರವಾಗುವ ವ್ಯಭಿಚಾರವನ್ನು 'ನನು' ಎಂಬುದಾಗಿ ಆಶಂಕಿಸುತ್ತಿದ್ದಾರೆ. ಮಾಲತೀಮಾಧವಾದಿಗಳಲ್ಲಿ ಆಪ್ತವಾಕ್ಯತ್ವವೆಂಬ ಹೇತುವಿದೆ. ಆದರೆ ಸ್ವಕಪೋಲಕಲ್ಪಿತವಾಗಿರುವುದರಿಂದ ಪ್ರಾಮಾಣ್ಯವು ಇರುವುದಿಲ್ಲ. ಸ್ವಕಪೋಲಕಲ್ಪಿತವೆಂದು ಹೇಳಿರುವುದು ಸಾಧ್ಯಾಭಾವವನ್ನು ಉಪಪಾದನೆ ಮಾಡುವುದಕ್ಕಾಗಿ. ಹೇತುವು ಇದೆಯೆಂದು ಸಮರ್ಥಿಸುವುದಕ್ಕಾಗಿ 'ನ ಹಿ' ಇತ್ಯಾದಿವಾಕ್ಯವು ಹೊರಟಿದೆ.

ಆಪ್ತವಾಕ್ಯದಲ್ಲಿ 'ಯೋ ಯತ್ರ' ಎಂಬ ವಿಶೇಷಣವನ್ನು ಹೇಳಿದ್ದರಿಂದ 'ಯೋ ಯದ್ವಿಷಯೇ ವಿವಕ್ಷಿತಾರ್ಥತತ್ವಜ್ಞಾನಾದಿಮಾನ್ ತದ್ವಿಷಯೇ ತದ್ವಾಕ್ಯತ್ವಮ್' ಎಂಬುದಾಗಿ ಆಪ್ತವಾಕ್ಯತ್ವವೆಂಬ ಹೇತುವಿನ ಅರ್ಥವನ್ನು ಹೇಳಿದಂತಾಯಿತು.

ಆಪ್ತಲಕ್ಷಣದಲ್ಲಿ 'ಯೋ ಯತ್ರ' ಇತ್ಯಾದಿಯಾಗಿ ವಿವಕ್ಷಿಸಲಾಗಿದೆ. ಇದರ ಸಾಮರ್ಥ್ಯದಿಂದ ಯಾವ ಅರ್ಥವು ದೊರೆಯುತ್ತದೋ ತದನುಸಾರಿಯಾಗಿ ವ್ಯಭಿಚಾರವು ಪರಿಹಾರವಾಗುತ್ತದೆ. ಪ್ರಕೃತ ಆಪ್ತಲಕ್ಷಣದಲ್ಲಿ ವಿವಕ್ಷಿತವಾದ 'ಯೋ ಯತ್ರ' ಇತ್ಯಾದಿ ಅಂಶವು ಹೇತುಶರೀರದಲ್ಲಿ ಪ್ರವೇಶವನ್ನು ಹೊಂದಿರುವುದಿಲ್ಲ. ಆಪ್ತಿಮದ್‌ವಾಕ್ಯತ್ವ ಎಂಬುದಕ್ಕೆ ಆಪ್ತಿಮೂಲಕವಾದ ವಾಕ್ಯವಾಗಿರಬೇಕು

ಎಂಬರ್ಥವನ್ನು ವಿವಕ್ಷಿಸಲಾಗಿದೆ. ಮಾಲತೀಮಾಧವಾದಿಗಳು ಆಪ್ತವಾಕ್ಯವಾಗಿರಬಹುದು; ಆದರೆ ಆಪ್ತಿ-ಮೂಲಕವಾದ ವಾಕ್ಯಗಳಾಗಿರುವುದಿಲ್ಲ. ಆದ್ದರಿಂದ ವ್ಯಭಿಚಾರಾದಿಗಳು ಬರುವುದಿಲ್ಲ. ಈ ವಿವಕ್ಷೆ-ಯಿಂದ 'ಆಪ್ತಿಮೂಲವಾಕ್ಯಸ್ಯ ಆಪ್ತವಾಕ್ಯತಯಾ ವಿವಕ್ಷಿತತ್ವಾತ್' ಎಂದು ನ್ಯಾಯಸುಧೆಯಲ್ಲಿ ಹೇಳಿ-ದ್ದಾರೆ.

ಎರಡನೆಯ ಅನುಮಾನದಲ್ಲಿ ಅಪ್ರಯೋಜಕಾಶಂಕೆಯು ಬಂದರೆ ಅಕಾರಣಕಾರ್ಯೋ-ತ್ಪತ್ತಿಪ್ರಸಂಗವೆಂಬ ಬಾಧಕವು ಬರುತ್ತದೆ. ಇದನ್ನು ತಿಳಿಸಲು ಕರಣ ಅಪ್ರಾಮಾಣ್ಯಸ್ವರೂಪವನ್ನು ವಿವರಿಸುವ ಮೂಲಕ ವಾಕ್ಯಪ್ರಾಮಾಣ್ಯಕಾರಣಗಳನ್ನು 'ಅಬೋಧಕಂ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಕರಣ ಎಂದರೆ ವಾಕ್ಯವೆಂದರ್ಥ. ವಾಕ್ಯವು ಹೇಗೆ ಅಪ್ರಮಾಣವಾಗುತ್ತದೆ ಎಂಬುದನ್ನು ವಿವರಿಸುವು-ದಕ್ಕಾಗಿ ವಾಕ್ಯದ ಅಪ್ರಾಮಾಣ್ಯಕ್ಕೆ ಯಾವುದು ಕಾರಣಗಳೋ ಅದನ್ನು 'ಅಬೋಧಕಂ' ಇತ್ಯಾದಿಯಾಗಿ ಹೇಳಿದ್ದಾರೆಂದು ತಿಳಿಯತಕ್ಕದ್ದು.

## ಎರಡನೇ ಅನುಮಾನದಲ್ಲಿ ವ್ಯಾಪ್ತಿಸಮರ್ಥನೆ

ಯಾದುಪತ್ಯ– ಏವಂ ಆದ್ಯಾನುಮಾನೇ ಅನುಕೂಲತರ್ಕೋಕ್ತ್ಯಾ ವ್ಯಾಪ್ತಿಮುಪಪಾದ್ಯ, ದ್ವಿತೀಯಾನುಮಾನೇಽಪಿ ತಾಮುಪಪಾದಯಿತುಮಾಹ – ನನ್ವಾಪ್ತವಾಕ್ಯತೇತಿ ॥ ಯೋ ಯತ್ರೈವಂಭೂತ ಇತ್ಯನೇನೈವೇತಿ ॥ ತಥಾ ಚ ಯೋ ಯತ್ರ ಏವಂಭೂತಃ, ತತ್ರ ತದ್ವಾಕ್ಯತ್ವಮ್ ಆಪ್ತವಾಕ್ಯತ್ವಮ್ । ಇದಂ ಚ ನ ಮಾಲತೀಮಾಧವಾದಿಷು । ತತ್ಪ್ರಣಾಯನಕಾಲೇ ತಸ್ಯೈವಂಭೂತತ್ವಾ-ಭಾವಸ್ಯ 'ಸ್ವಕಪೋಲಕಲ್ಪಿತೇಷು' ಇತಿ ವದತಾ ತ್ವಯೈವೋಕ್ತತ್ವಾದಿತಿ ಭಾವಃ ।

ಏವಂ ವ್ಯಭಿಚಾರಮಪಾಕೃತ್ಯ ಅಪ್ರಯೋಜಕತಾಪರಿಹಾರಾಯ ವಿಪಕ್ಷಬಾಧಕತರ್ಕಂ ವಕ್ತುಮಾಹ – ಅಬೋಧಕಮಿತಿ ॥ ಅನ್ಯಥೇತಿ ॥ ಆಪ್ತವಾಕ್ಯತ್ವಮಂಗೀಕೃತ್ಯ ಪ್ರಾಮಾಣ್ಯಾನಂಗೀಕಾರೇ ಇತ್ಯರ್ಥಃ । ಕಾರಣೇನ ವಿನೇತಿ ॥ ಆಪ್ತವಾಕ್ಯತ್ವಾಂಗೀಕಾರೇ ಉಕ್ತರೀತ್ಯಾ ಅಪ್ರಾಮಾಣ್ಯಕಾರಣಾ-ಭಾವಪ್ರಾಪ್ತೇರಿತ್ಯರ್ಥಃ ।

ಇಲ್ಲಿಯ ತನಕ ಪ್ರಥಮಾನುಮಾನದಲ್ಲಿ ಅನುಕೂಲತರ್ಕವನ್ನು ಹೇಳುವ ಮೂಲಕ ವ್ಯಾಪ್ತಿಯನ್ನು ಉಪಪಾದನೆ ಮಾಡಿದ್ದಾಯಿತು. ದ್ವಿತೀಯ ಅನುಮಾನದಲ್ಲೂ ಕೂಡ ಅನುಕೂಲತರ್ಕದ ಮೂಲಕ ವ್ಯಾಪ್ತಿಯನ್ನು ಉಪಪಾದನೆ ಮಾಡುವುದಕ್ಕಾಗಿ 'ನನು ಆಪ್ತವಾಕ್ಯತಾ' ಎಂಬ ಗ್ರಂಥವು ಹೊರಟಿದೆ.

'ಯಃ ಯತ್ರ ಏವಂಭೂತಃ ಇತ್ಯನೇನೈವ' – 'ಯೋ ಯತ್ರ ಏವಂಭೂತಃ ತತ್ರ ತದ್ವಾಕ್ಯತ್ವಮ್ ಆಪ್ತವಾಕ್ಯತ್ವಮ್' 'ಯಾರು ಯಾವ ವಿಷಯದಲ್ಲಿ ಆಪ್ತನ ಲಕ್ಷಣವನ್ನು ಹೊಂದಿದ್ದಾನೋ ಆ ವಿಷಯ-ದಲ್ಲಿ ಅವನ ವಾಕ್ಯವು ಆಪ್ತವಾಕ್ಯ ಎನಿಸುತ್ತದೆ' ಎಂಬುದಾಗಿ ಆಪ್ತವಾಕ್ಯತ್ವದ ಲಕ್ಷಣವನ್ನು ಹೇಳಲಾಗಿದೆ. ಈ ಲಕ್ಷಣವು ಮಾಲತೀಮಾಧವಾದಿಗಳಲ್ಲಿ ಸರ್ವಥಾ ಬರುವುದಿಲ್ಲ. ಮಾಲತೀಮಾಧವವನ್ನು ಹೇಳುವ ಕಾಲದಲ್ಲಿ ಭವಭೂತಿಗೆ ಏವಂಭೂತತ್ವವು (ನಿರ್ದೋಷತ್ವಾದಿಗಳು) ಇಲ್ಲದ ಕಾರಣ ಮಾಲತೀ-ಮಾಧವದಲ್ಲಿ ಆಪ್ತವಾಕ್ಯತ್ವವು ಇರುವುದಿಲ್ಲ. ಆಕ್ಷೇಪ ಮಾಡುವ ನೀನೇ 'ಸ್ವಕಪೋಲಕಲ್ಪಿತೇಷು' ಎಂದು ಹೇಳುತ್ತಿರುವುದರಿಂದ ಮಾಲತೀಮಾಧವಗ್ರಂಥವು ಕೇವಲ ಸ್ವಕಪೋಲಕಲ್ಪಿತವಾದ ಗ್ರಂಥವಾಗಿದೆ. ಅದರಲ್ಲಿ ಆಪ್ತಲಕ್ಷಣವು ಸರ್ವಥಾ ಬರುವುದಿಲ್ಲ.

ಹೀಗೆ ವ್ಯಭಿಚಾರವನ್ನು ಪರಿಹಾರ ಮಾಡಿ ಅಪ್ರಯೋಜಕತ್ವವನ್ನು ಪರಿಹಾರ ಮಾಡುವುದಕ್ಕಾಗಿ ವಿಪಕ್ಷದಲ್ಲಿ ಬಾಧಕತರ್ಕವನ್ನು ಹೇಳಲು 'ಅಬೋಧಕಂ' ಎಂಬ ಗ್ರಂಥವು ಹೊರಟದೆ. 'ಆಪ್ತ-ವಾಕ್ಯತ್ವವನ್ನು ಅಂಗೀಕಾರ ಮಾಡಿ ಪ್ರಾಮಾಣ್ಯವನ್ನು ಅಂಗೀಕಾರ ಮಾಡದೇ ಇದ್ದರೆ' ಎಂದರ್ಥ. 'ಕಾರಣೇನ ವಿನಾ' ಎಂಬುದಕ್ಕೆ 'ಆಪ್ತವಾಕ್ಯತ್ವವನ್ನು ಅಂಗೀಕಾರ ಮಾಡುವುದಕ್ಕೆ ಹಿಂದೆ ಹೇಳಿದಂತೆ ಅಪ್ರಾಮಾಣ್ಯಕಾರಣವೇ ಇರುವುದಿಲ್ಲ' ಎಂದರ್ಥ.

## ಸುಧಾಪರಿಮಳಸಾರ

ಭವಭೂತಿ ಮುಂತಾದ ಕವಿಗಳು ಬರೆದ ಸ್ವಕಪೋಲಕಲ್ಪಿತವಾದ ಮಾಲತೀಮಾಧವಾದಿಗಳಲ್ಲಿ ಪ್ರಾಮಾಣ್ಯ-ವಿಲ್ಲ. ಆ ಕವಿ ಹಿಂದೆ ಹೇಳಿದ ಆಪ್ತಲಕ್ಷಣಗಳನ್ನು ಯಾವಾಗಲಾದರೂ ಒಂದೊಮ್ಮೆ ಹೊಂದಿಲ್ಲದವನೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಮಾಲತೀಮಾಧವಾದಿಕಾವ್ಯಗಳು ಆಪ್ತವಾಕ್ಯವಾದರೂ ಪ್ರಮಾಣವಾಗಿಲ್ಲ. ಆದುದರಿಂದ ಆಪ್ತವಾಕ್ಯತ್ವ ಎಂಬ ಹೇತುವಿಗೆ ಪ್ರಾಮಾಣ್ಯ ಎಂಬ ಸಾಧ್ಯದೊಂದಿಗೆ ವ್ಯಾಪ್ತಿ ಇಲ್ಲ.

ಇದಕ್ಕೆ ಸಮಾಧಾನ. ಯಾರು ಯಾವ ವಿಷಯದಲ್ಲಿ ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ಆಪ್ತಲಕ್ಷಣದಿಂದ ಕೂಡಿರುವನೋ ಅವನು ಆ ವಿಷಯದಲ್ಲಿ ಆಪ್ತ ಎಂದು ಹೇಳಿರುವುದರಿಂದ ಭವಭೂತಿ ಮುಂತಾದವರು ತಾವು ರಚಿಸಿದ ಮಾಲತೀಮಾಧವಾದಿಕಾವ್ಯಗಳ ವಿಷಯದಲ್ಲಿ ಆಪ್ತರಲ್ಲ ಎಂದು ಸಿದ್ಧವಾಗುವುದರಿಂದ ಆಪ್ತವಾಕ್ಯತ್ವ ಎಂಬ ಹೇತುವೇ ಮಾಲತೀಮಾಧವಾದಿಗಳಲ್ಲಿ ಇಲ್ಲ. ಪ್ರಾಮಾಣ್ಯ ಎಂಬ ಸಾಧ್ಯವೂ ಅಲ್ಲಿಲ್ಲ. ಆದುದರಿಂದ ಆಪ್ತವಾಕ್ಯತ್ವ ಎಂಬ ಹೇತುವಿಗೆ ಪ್ರಾಮಾಣ್ಯ ಎಂಬ ಸಾಧ್ಯದೊಂದಿಗೆ ವ್ಯಾಪ್ತಿಭಂಗವು ಬರುವುದಿಲ್ಲ.

ಆಪ್ತಲಕ್ಷಣದಲ್ಲಿ "ಯಾರು ಯಾವ ವಿಷಯದಲ್ಲಿ...." ಎಂಬ ಅಂಶವನ್ನು ಸೇರಿಸದಿದ್ದರೂ ಆಪ್ತಿಮೂಲಕ-

ವಾಕ್ಯವು ಆಪ್ತವಾಕ್ಯ ಎಂದು ವಿವಕ್ಷಿತವಾದ್ದರಿಂದ ಮಾಲತೀಮಾಧವಾದಿಗಳು ಆಪ್ತಿಮೂಲಕವಾಕ್ಯವಲ್ಲದ್ದರಿಂದ ಆಪ್ತವಾಕ್ಯವಲ್ಲ. ಆದುದರಿಂದ ಪ್ರಾಮಾಣ್ಯ, ಆಪ್ತವಾಕ್ಯತ್ವಕ್ಕೆ ವ್ಯಾಪ್ತಿಭಂಗದ ಆಶಂಕೆಯನ್ನು ಪರಿಹರಿಸಬಹುದು.

ಯಾವ ವಾಕ್ಯವನ್ನು ಕೇಳಿದಾಗ ವಾಕ್ಯಾರ್ಥಜ್ಞಾನವು ಆಗುವುದಿಲ್ಲವೋ ಆ ವಾಕ್ಯ ಅಬೋಧಕ ಎನಿಸಿಕೊಳ್ಳುತ್ತದೆ. ಯಾವ ವಾಕ್ಯದಿಂದ ವಿಪರೀತಜ್ಞಾನ ಉಂಟಾಗುತ್ತದೋ ಆ ವಾಕ್ಯ ವಿಪರೀತಬೋಧಕ ಎಂದೆನಿಸಿಕೊಳ್ಳುತ್ತದೆ. ಈ ಎರಡು ವಾಕ್ಯಗಳು ಅಪ್ರಮಾಣ ಎನಿಸಿಕೊಳ್ಳುತ್ತವೆ.

ವಕ್ತೃವಿಗೆ ಇಂದ್ರಿಯಪಾಟವವಿಲ್ಲದಿದ್ದಾಗ ಅಬೋಧಕವಾದ ವಾಕ್ಯವನ್ನು ಪ್ರಯೋಗ ಮಾಡಿರುತ್ತಾನೆ. ಆ ವಾಕ್ಯವು ಆಪ್ತವಾಕ್ಯವೆನಿಸುವುದಿಲ್ಲ, ವಕ್ತೃವಿಗೆ ಕರಣಪಾಟವ ಎಂಬ ಆಪ್ತಿಯ ಏಕದೇಶವಿಲ್ಲವಾದುದರಿಂದ ಅವನು ಆಪ್ತನಾಗಿರುವುದಿಲ್ಲ. ಅವನ ವಾಕ್ಯವು ಆಪ್ತವಾಕ್ಯವಲ್ಲ. ಅದು ಪ್ರಮಾಣವೂ ಆಗಿಲ್ಲ. ಅಂತೆಯೇ ವಕ್ತೃವಿಗೆ ವಿಪರೀತಜ್ಞಾನವಿದ್ದರೆ ವಿಪರೀತಾರ್ಥಬೋಧಕ ವಾಕ್ಯವನ್ನು ಪ್ರಯೋಗ ಮಾಡುತ್ತಾನೆ. ಆಗ ವಿವಕ್ಷಿತಾರ್ಥತತ್ವಜ್ಞಾನವು ವಕ್ತೃವಿಗೆ ಇಲ್ಲದುದರಿಂದ ವಕ್ತ ಆಪ್ತನಾಗಲಿಲ್ಲ. ಆ ವಾಕ್ಯವು ಆಪ್ತವಾಕ್ಯವು ಅಲ್ಲ. ಪ್ರಮಾಣವೂ ಅಲ್ಲ. ಹೀಗೆ ಆಪ್ತವಾಕ್ಯತ್ವ ಇಲ್ಲದಿರುವ ಕಡೆ ಪ್ರಾಮಾಣ್ಯವೂ ಇಲ್ಲ. ಆಪ್ತವಾಕ್ಯತ್ವವಿದ್ದೆಡೆ ಪ್ರಾಮಾಣ್ಯವಿದೆ ಎಂದು ಆಪ್ತವಾಕ್ಯತ್ವ ಎಂಬ ಹೇತುವಿಗೆ ಪ್ರಾಮಾಣ್ಯ ಎಂಬ ಸಾಧ್ಯದ ವ್ಯಾಪ್ತಿ ಸುಸ್ಥಿರವಾಗಿದೆ.

ಆಪ್ತವಾಕ್ಯವಾಗಿದ್ದರೂ ಪ್ರಮಾಣವಾಗುವುದು ಬೇಡೆಂದರೆ ಅಪ್ರಾಮಾಣ್ಯವನ್ನು ಹೇಳಿದಂತಾಯಿತು. ಅಪ್ರಾಮಾಣ್ಯ ಬರಲಿಕ್ಕೆ ಕಾರಣಗಳಾದ ಅಬೋಧಕತ್ವ ವಿಪರೀತಬೋಧಕತ್ವ ಇಲ್ಲದೆ ಅಪ್ರಾಮಾಣ್ಯ ಹೇಳುವುದಾದರೆ ಕಾರಣವಿಲ್ಲದೆ ಕಾರ್ಯದ ಉತ್ಪತ್ತಿಯನ್ನು ಅಂಗೀಕರಿಸಿದಂತಾಗುತ್ತದೆ.

## ಆಪ್ತವಾಕ್ಯತ್ವದ ಮೂಲಕ ಪ್ರಾಮಾಣ್ಯದ ಸಮರ್ಥನೆ

**ಶ್ರೀಮನ್ನ್ಯಾಯಸುಧಾ– ನನು ಚಾನುಕೂಲವಕ್ತ್ರಾದಿಮತ್ತಯಾ ಪ್ರಾಮಾಣ್ಯ-ಸಾಧನಮೇವಾತ್ರ ವ್ಯಾಖ್ಯಾಯತಾಮ್ । ಕಿಮಾಪ್ತವಾಕ್ಯತಾಸಾಧನಂ ಮಧ್ಯೇ ವ್ಯಾಖ್ಯಾಯತೇ । ವ್ಯಾಪ್ತಿಪಕ್ಷಧರ್ಮತಯೋಸ್ತುಲ್ಯತ್ವಾತ್ । ನ ಹಿ ಯದ್ ಯದ್ವ್ಯಾಪಕಸ್ಯ ವ್ಯಾಪಕಂ ತತ್ತಸ್ಯ ಅವ್ಯಾಪಕಮಿತಿ ಸಂಭವತಿ । ಅನುಕೂಲ-ವಕ್ತ್ರಾದಿಮತ್ತಯಾ ಆಪ್ತವಾಕ್ಯತಾಸಾಧನೇ ವಕ್ತ್ರಾನುಕೂಲ್ಯಸ್ಯ ಆಪ್ತ್ಯೇಕದೇಶ-**

ತ್ವೇನ ಸಾಧ್ಯವಿಶಿಷ್ಟತಾ ಚ ಸ್ಯಾತ್ । 'ವಕ್ತೃಶ್ರೋತೃಪ್ರಸಕ್ತೀನಾಮ್' ಇತಿ ವಾಕ್ಯಂ ತು ಶಂಕಿತಸ್ಯ ಉಪಾಧೇಃ ಸಾಧನವ್ಯಾಪಕತಾಪ್ರದರ್ಶನಾರ್ಥಂ ಭವಿಷ್ಯತಿ ।

ಮೈವಮ್ । 'ಆಪ್ತವಾಕ್ಯತಯಾ ತೇನ' ಇತ್ಯುತ್ತರವಾಕ್ಯವೈಯರ್ಥ್ಯಪ್ರಸಂಗಾತ್ । ಉಪಾಧೇಃ ಸಾಧನವ್ಯಾಪಕತಾಯಾ 'ವಕ್ತೃಶ್ರೋತೃಪ್ರಸಕ್ತೀನಾಮ್' ಇತ್ಯನೇನೈ-ವೋಪಪಾದಿತತ್ವಾತ್ । ನ ಹಿ ಉಪಾಧಿಂ ದೂಷಯತಾ ಸಾಧನವ್ಯಾಪಕತಾಂ ವ್ಯುತ್ಪಾದ್ಯ ಸಾಧನೇನೋಪಾಧೇಃ ಪಕ್ಷೇ ಸಾಧನಂ ವಿಧಾಯ ತೇನ ಸಾಧ್ಯಂ ಸಾಧನೀಯಮಿತಿ ಕುಲಧರ್ಮಃ ।

ಅವಾಂತರಪೂರ್ವಪಕ್ಷ – ವಕ್ತ್ರಾದ್ಯಾನುಕೂಲ್ಯಗಳಿಂದ ಪ್ರಾಮಾಣ್ಯವನ್ನು ನೇರ-ವಾಗಿಯೇ ಸಾಧಿಸಿರಿ. ಮಧ್ಯದಲ್ಲಿ ಆಪ್ತವಾಕ್ಯತ್ವವನ್ನು ಏಕೆ ಸಾಧಿಸುತ್ತಿದ್ದೀರಿ? ಏಕೆಂದರೆ ಆಪ್ತವಾಕ್ಯತ್ವಕ್ಕೆ ಪ್ರಾಮಾಣ್ಯದ ಜೊತೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಇರುವಂತೆ ವಕ್ತ್ರಾದ್ಯಾನುಕೂಲ್ಯಗಳು ಕೂಡ ಇರುತ್ತವೆ. ಯಾವುದು ಯಾವುದರ ವ್ಯಾಪಕಕ್ಕೆ ವ್ಯಾಪಕ-ವಾಗಿರುತ್ತದೋ ಅದು ಅದಕ್ಕೆ ವ್ಯಾಪಕವಾಗಿಲ್ಲ ಎಂಬುದು ಅಯುಕ್ತ ಮತ್ತು ವಕ್ತ್ರಾದ್ಯಾ-ನುಕೂಲ್ಯಗಳಿರುವುದರಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡುವುದಾದರೆ ಹೇತುಸಾಧ್ಯ-ಗಳು ಒಂದೇ ಆಗುತ್ತವೆ. ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಏಕೆಂದರೆ, ವಕ್ತ್ರಾನು-ಕೂಲ್ಯವು ಆಪ್ತಿಯ ಶರೀರದಲ್ಲಿ ಸೇರಿರುತ್ತದೆ.

ಪ್ರಾಮಾಣ್ಯವನ್ನು ವಕ್ತ್ರಾದ್ಯಾನುಕೂಲ್ಯಗಳಿಂದ ನೇರವಾಗಿ ಸಾಧನೆ ಮಾಡಿದರೆ 'ವಕ್ತೃ-ಶ್ರೋತೃಪ್ರಸಕ್ತೀನಾಂ' ಎಂಬ ಶ್ಲೋಕದಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಿದ್ದು ಏಕೆ? ಎಂಬ ಶಂಕೆಯನ್ನು ಮಾಡಬಾರದು. ಹಿಂದೆ ಪ್ರಶ್ನಿಸಲ್ಪಟ್ಟ ಆಪ್ತವಾಕ್ಯತ್ವವೆಂಬ ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ ಸಾರ್ಥಕವಾಗುತ್ತದೆ.

ಅವಾಂತರಶಂಕೆಗೆ ಸಮಾಧಾನ – ಈ ಪ್ರಶ್ನೆಯು ತಪ್ಪು. ಏಕೆಂದರೆ ಪ್ರಾಮಾಣ್ಯವನ್ನು

ನೇರವಾಗಿ ಸಾಧನೆ ಮಾಡಿದರೆ 'ಆಪ್ತವಾಕ್ಯತಯಾ ತೇನ' ಎಂಬ ಉತ್ತರವಾಕ್ಯವು ವ್ಯರ್ಥ-ವಾಗುತ್ತದೆ. ಆಪ್ತವಾಕ್ಯತ್ವವೆಂಬ ಉಪಾಧಿಯು ವಕ್ತ್ರಾದ್ಯಾನುಕೂಲ್ಯಗಳಿಗೆ ವ್ಯಾಪಕವಾಗಿದೆ ಎಂಬ ವಿಚಾರವನ್ನು 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬುದರಿಂದ ಉಪಪಾದನೆ ಮಾಡಿ-ದ್ದಾಗಿದೆ. ಯಾರು ಉಪಾಧಿಯನ್ನು ದೂಷಿಸುತ್ತಾನೋ ಅವನು ಉಪಾಧಿಯು ಸಾಧನ-ವ್ಯಾಪಕವಾಗಿದೆ ಎಂದು ಮೊದಲೇ ತೋರಿಸಿ ಅನಂತರ ಸಾಧನವಿರುವ ಪ್ರಯುಕ್ತ ಅದಕ್ಕೆ ವ್ಯಾಪಕವಾದ ಉಪಾಧಿಯು ಪಕ್ಷದಲ್ಲಿ ಇರುತ್ತದೆಂದು ಉಪಾಧಿಯನ್ನು ಸಾಧನದಿಂದ ಪಕ್ಷದಲ್ಲಿ ಸಾಧಿಸಿ ಆ ಉಪಾಧಿಯಿಂದ ಸಾಧ್ಯವನ್ನು ಸಾಧಿಸಬೇಕೆಂದೇನೂ ಕುಲಧರ್ಮ ಇರುವುದಿಲ್ಲ.

## ವಕ್ತೃಶ್ರೋತೃಪ್ರಸಕ್ತೀನಾಂ ಇತ್ಯಾದಿ ಶ್ಲೋಕಕ್ಕೆ ಮಾಡಿದ ಸ್ವವ್ಯಾಖ್ಯಾನದ ಉಪಪಾದನೆ

ಪರಿಮಳ– 'ವಕ್ತೃಶ್ರೋತೃ' ಇತ್ಯಾದಿತ್ರಿಪಾದ್ಯಾಃ ಸ್ವಕೃತವ್ಯಾಖ್ಯಾನಸ್ಯ ದಾರ್ಢ್ಯಾಯ ಶಂಕೋತ್ತರಾಭ್ಯಾಂ ಪರೀಕ್ಷಾಮಾರಭತೇ – 'ನನು ಚ' ಇತ್ಯಾದಿನಾ 'ಕೋ ನಿವಾರಯಿತಾ' ಇತ್ಯಂತೇನ ॥ ಅತ್ರೇತಿ ॥ 'ವಕ್ತ್ರಾದಿ ತ್ರಿಪಾದ್ಯಾಮ್' ಇತ್ಯರ್ಥಃ । ವ್ಯಾಪ್ತಿಪಕ್ಷಧರ್ಮ-ತಯೋರಿತಿ ॥ ಪಕ್ಷೀಕೃತಶಾಸ್ತ್ರನಿಷ್ಠಾಪ್ರಾಮಾಣ್ಯರೂಪಸಾಧ್ಯೇನ ಆಪ್ತವಾಕ್ಯಸ್ಯೈವ ವಕ್ತ್ರಾ-ದ್ಯಾನುಕೂಲ್ಯವತ್ತ್ವರೂಪಹೇತೋರಪಿ ವ್ಯಾಪ್ತೇಃ ಸತ್ತ್ವಾತ್ ಪಕ್ಷಧರ್ಮತಾಯಾಶ್ಚ ಪೂರ್ವಶ್ಲೋಕೇನೈವ ಸಿದ್ಧತ್ವಾದಿತಿ ಭಾವಃ।

'ವಕ್ತೃಶ್ರೋತೃಪ್ರಸಕ್ತೀನಾಂ' – ಇತ್ಯಾದಿ ಪದ್ಯದ ಮೂರು ಚರಣಗಳಿಗೆ ತಾವು ಇಲ್ಲಿಯ ತನಕ ಮಾಡಿದ ವ್ಯಾಖ್ಯಾನವು ಅತ್ಯಂತ ಸಮಂಜಸವಾಗಿದೆ ಎಂಬುದನ್ನು ದೃಢಪಡಿಸಬೇಕಾಗಿದೆ. ಅದಕ್ಕಾಗಿ ಸುಧಾಕಾರರು ಆಕ್ಷೇಪ ಮತ್ತು ಸಮಾಧಾನಗಳಿಂದ ತಮ್ಮ ವ್ಯಾಖ್ಯಾನದ ವಿಮರ್ಶೆ-ಯನ್ನು 'ನನು ಚ' ಇತ್ಯಾದಿ ಗ್ರಂಥದಿಂದ ಸಾಧಿಸಿ, 'ಕೋ ನಿವಾರಯಿತಾ' ಎಂಬ ಗ್ರಂಥದ ತನಕ ಮಾಡುತ್ತಿದ್ದಾರೆ.

'ಅತ್ರ' – 'ವಕ್ತೃಶ್ರೋತೃಪ್ರಸಕ್ತೀನಾಂ
ಯದಾಪ್ತಿರನುಕೂಲತಾ ।
ಆಪ್ತಿವಾಕ್ಯತಯಾ ತೇನ ..'

ಈ ಮೂರುಪಾದಗಳಲ್ಲಿ ಎಂದರ್ಥ.

'ವ್ಯಾಪ್ತಿಪಕ್ಷಧರ್ಮತಯೋಃ ತುಲ್ಯತ್ವಾತ್' – ಶಾಸ್ತ್ರವು ಪಕ್ಷವೆನಿಸಿದೆ. ಪ್ರಾಮಾಣ್ಯವು ಸಾಧ್ಯ ಎನಿಸಿದೆ. ಈ ಸಾಧ್ಯದ ಜೊತೆ ಆಪ್ತವಾಕ್ಯತ್ವವೆಂಬ ಹೇತುವಿಗೆ ವ್ಯಾಪ್ತಿಯು ಹೇಗೆ ಇದೆಯೋ ಅದರಂತೆ ವಕ್ತ್ರಾದ್ಯಾನುಕೂಲ್ಯವತ್ವ ಎಂಬ ಹೇತುವಿಗೂ ಕೂಡ ಪ್ರಾಮಾಣ್ಯದ ಜೊತೆ ವ್ಯಾಪ್ತಿಯು ಇದ್ದೇ ಇರುತ್ತದೆ.

ಮತ್ತು ಶಾಸ್ತ್ರವೆಂಬ ಪಕ್ಷದಲ್ಲಿ ವಕ್ತ್ರಾದ್ಯಾನುಕೂಲ್ಯವತ್ವ ಎಂಬ ಹೇತುವು ಹೇಗೆ ಇರುತ್ತದೆ ಎಂಬ ವಿಚಾರವನ್ನು ಹಿಂದಿನ ಗುರುರ್ಗುರೂಣಾಂ ಪ್ರಭವಃ' ಎಂಬ ಶ್ಲೋಕದಿಂದಲೇ ತೋರಿಸಿದ್ದಾರೆ.

## 'ಯತ್ ಯದ್ವ್ಯಾಪಕಸ್ಯ ವ್ಯಾಪಕಂ ತತ್ ತಸ್ಯ ನ ಅವ್ಯಾಪಕಂ' ಎಂಬ ನಿಯಮದ ವ್ಯಾಖ್ಯಾನ

ಪರಿಮಳ– ವ್ಯಾಪ್ತ್ಯಂಶಂ ಸ್ಪಷ್ಟಯತಿ – ನ ಹೀತಿ ॥ ಯತ್ಪ್ರಾಮಾಣ್ಯಮ್ ಅನುಕೂಲ-ವಕ್ತ್ರಾದಿಮತ್ತ್ವವ್ಯಾಪಕಾಪ್ತವಾಕ್ಯತ್ವಸ್ಯ ವ್ಯಾಪಕಂ ತತ್ಪ್ರಾಮಾಣ್ಯಂ ತಸ್ಯಾನುಕೂಲವಕ್ತ್ರಾದಿ-ಮತ್ತ್ವಸ್ಯಾವ್ಯಾಪಕಂ ನ ಹೀತ್ಯರ್ಥಃ । ತಥಾ ವ್ಯಾಖ್ಯಾನೇ ದೋಷೋಽಪ್ಯಸ್ತೀತ್ಯಾಹ – ಅನುಕೂಲೇತಿ ॥ ಆಪ್ತ್ಯೇಕದೇಶತ್ವೇನೇತಿ ॥ ವಿವಕ್ಷಿತಾರ್ಥತತ್ವಜ್ಞಾನಮ್, ಅವಿಪ್ರಲಿಪ್ಸಾ, ವಿವಕ್ಷಾ, ಕರಣಪಾಟವಂ ಚೇತಿ ಚತುಷ್ಟಯಸ್ಯ ಆಪ್ತಿತ್ವಾತ್ । ಅವಿಪ್ರಲಿಪ್ಸಾಂ ವಿನಾ ಉರ್ವರಿತತ್ರಯಸ್ಯ ವಕ್ತ್ರಾನುಕೂಲ್ಯರೂಪತ್ವಾತ್ ಅಂಶತಃ ಸಾಧ್ಯಾವಿಶಿಷ್ಟತ್ವಯೇತಿ ಭಾವಃ ।

ಪ್ರಾಮಾಣ್ಯದ ಜೊತೆ ವಕ್ತ್ರಾದ್ಯಾನುಕೂಲ್ಯವೆಂಬ ಹೇತುವಿಗೆ ಅವಿನಾಭೂತವಾದ ವ್ಯಾಪ್ತಿ ಇದೆ ಎಂಬುದನ್ನು 'ನ ಹಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಯತ್ = ಯಾವ ಪ್ರಾಮಾಣ್ಯವು, ಯದ್ವ್ಯಾಪಕಸ್ಯ = ವಕ್ತ್ರಾದ್ಯಾನುಕೂಲ್ಯಗಳೆಂಬ ಹೇತುವಿನ ವ್ಯಾಪಕವಾದ ಆಪ್ತವಾಕ್ಯತ್ವಕ್ಕೆ, ವ್ಯಾಪಕಂ = ವ್ಯಾಪಕವಾಗಿದೆಯೋ, ತತ್ = ಆ ಪ್ರಾಮಾಣ್ಯವು, ತಸ್ಯ = ವಕ್ತ್ರಾದ್ಯಾನುಕೂಲ್ಯವೆಂಬ ಹೇತುವಿಗೆ, ಅವ್ಯಾಪಕಂ ನ = ವ್ಯಾಪಕವಾಗುವುದಿಲ್ಲ ಎಂದಿಲ್ಲ.

ಆಪ್ತವಾಕ್ಯತ್ವದ ಮೂಲಕ ಪ್ರಾಮಾಣ್ಯವನ್ನು ಸಾಧನೆ ಮಾಡುವ ಪಕ್ಷದಲ್ಲಿ ದೋಷವೂ ಕೂಡ ಇದೆ ಎಂಬುದನ್ನು 'ಅನುಕೂಲವತ್ತ್ವಾದಿಮತ್ತಯಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

'ಆಪ್ತ್ಯೈಕದೇಶತ್ವೇನ' – ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ, ಕರಣಪಾಟವ, ವಿವಕ್ಷಾ ಈ ನಾಕು ಧರ್ಮಗಳಿಗೆ ಆಪ್ತಿಯೆನ್ನುತ್ತಾರೆ. ಇವುಗಳಲ್ಲಿ ಅವಿಪ್ರಲಿಪ್ಸಾ ಎಂಬುದೊಂದನ್ನು ಬಿಟ್ಟು ಮೂರು ಧರ್ಮಗಳು ವಕ್ತ್ರಾನುಕೂಲ್ಯ ಎನಿಸುತ್ತವೆ. ಹೀಗೆ ಅಂಶತಃ ಸಾಧ್ಯಾವಿಶಿಷ್ಟ ಬರುತ್ತದೆಂಬುದು ಆಶಂಕೆಯ ಅಭಿಪ್ರಾಯ.

ವಿವರಣೆ – 'ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್' ಎಂದು ಸಾಧಿಸಿ 'ಕ್ಷಿತ್ಯಾದಿಕಂ ಕಾರ್ಯಂ ಸಾವಯವತ್ವಾತ್' ಎಂಬುದಾಗಿ ಅನುಮಾನ ಮಾಡಿದಾಗ ಸಾವಯವತ್ವಕ್ಕೆ ಕಾರ್ಯತ್ವವು ವ್ಯಾಪಕ-ವಾಗಿದೆ. ಕಾರ್ಯತ್ವಕ್ಕೆ ಸಕರ್ತೃಕತ್ವವು ವ್ಯಾಪಕವಾಗಿದೆ. ಈ ಸಕರ್ತೃಕತ್ವಕ್ಕೆ ಸಾವಯವತ್ವಕ್ಕೆ ವ್ಯಾಪಕ ಆಗುವುದಿಲ್ಲ ಎಂದೇನಿಲ್ಲ. ಆದರೂ ಕೂಡ ಕೇವಲ ಅಪ್ರಯೋಜಕಾಶಂಕೆಯ ನಿವಾರಣೆಗಾಗಿ ಪರಂಪರೆಯನ್ನು ಹೀಗೆ ಆಶ್ರಯಿಸುವುದು ಕಂಡಿದೆ. ಇದೇ ರೀತಿಯಲ್ಲಿ ಪ್ರಕೃತ ವಕ್ತ್ರಾದ್ಯಾನುಕೂಲ್ಯವೆಂಬ ಹೇತುವಿಗೆ ವ್ಯಾಪಕವಾದ ಆಪ್ತವಾಕ್ಯತ್ವಕ್ಕೆ ವ್ಯಾಪಕವಾದ ಯಾವ ಪ್ರಾಮಾಣ್ಯವಿದೆಯೋ ಇದು ವಕ್ತ್ರಾ-ದ್ಯಾನುಕೂಲ್ಯವೆಂಬ ಹೇತುವಿಗೆ ವ್ಯಾಪಕ ಆಗುವುದಿಲ್ಲ ಎಂದೇನಿಲ್ಲ. ಹೀಗೆ 'ಯತ್ ಯದ್ವ್ಯಾಪಕಸ್ಯ ವ್ಯಾಪಕಂ, ತತ್ ತಸ್ಯ ಅವ್ಯಾಪಕಂ ನ' ನಿಯಮವನ್ನು ಸಮನ್ವಯ ಮಾಡಬೇಕು.

ವಕ್ತ್ರಾದ್ಯಾನುಕೂಲ್ಯಗಳೆಂಬ ಹೇತುವಿನಿಂದ ಆಪ್ತವಾಕ್ಯತ್ವವನ್ನು ಸಾಧಿಸಿ ತನ್ಮೂಲಕ ಪ್ರಾಮಾಣ್ಯವನ್ನು ಸಾಧಿಸಿದರೆ ದೋಷವೂ ಕೂಡ ಇದೆ. ಅದು ಹೀಗೆ – ಆಪ್ತಿ ಎಂದರೆ ಹೇಳಬೇಕಾದ ವಿಷಯದಲ್ಲಿ ತತ್ವಜ್ಞಾನ ಇರಬೇಕು. ನಿರ್ವಂಚನೆ ಬುದ್ಧಿಯೂ ಇರಬೇಕು. ಹೇಳುವ ಇಚ್ಛೆ ಇರಬೇಕು. ಇಂದ್ರಿಯಾದಿಗಳು ಬಲಿಷ್ಠವಾಗಿರಬೇಕು. ಹೀಗಿದ್ದರೆ ಆಪ್ತಿ ಎನ್ನುತ್ತಾರೆ. ವಕ್ತ್ರಾನುಕೂಲ್ಯವೆಂದರೂ ಕೂಡ

ಇದೇ ಅರ್ಥ. ವಕ್ತೃವಿನಲ್ಲಿ ಹೇಳುವ ಅನುಕೂಲತೆ ಇರಬೇಕು ಎಂಬುದಕ್ಕೆ ಹೇಳಬೇಕಾದ ವಿಷಯದ ಬಗ್ಗೆ ತತ್ವಜ್ಞಾನ ಇರಬೇಕು, ಹೇಳುವ ಇಚ್ಛೆಯೂ ಇರಬೇಕು, ಇಂದ್ರಿಯಗಳು ಬಲಿಷ್ಠವಾಗಿರಬೇಕು. ಆದರೆ ನಿರ್ವಂಚನೆ ಬುದ್ಧಿ ಇರಬೇಕು ಎಂಬ ಒಂದಂಶವು ಮಾತ್ರ ಸೇರುವುದಿಲ್ಲ. ಉಳಿದ ಮೂರು ಅಂಶಗಳೂ ಆಪ್ತಿಯಲ್ಲಿ ಹಾಗೂ ವಕ್ತ್ರಾನುಕೂಲ್ಯದಲ್ಲಿ ಸಮಾನವಾಗಿವೆ. ಹೀಗೆ ಅಂಶತಃ ಸಾಧ್ಯಾವೈಶಿಷ್ಟ್ಯವನ್ನು ತಿಳಿಯಬೇಕು. ವಾಸ್ತವಿಕವಾಗಿ ವಕ್ತ್ರಾನುಕೂಲ್ಯ , ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯ ಮೂರೂ ಕೂಡ ಹೇತುಶರೀರದಲ್ಲಿ ಸೇರಿವೆ. ಈ ಮೂರರಲ್ಲಿ ಒಂದಾದ ವಕ್ತ್ರಾನುಕೂಲ್ಯವನ್ನು ವಿವಕ್ಷಿಸಿ, ಅದರಲ್ಲೂ ಒಂದಂಶವನ್ನು ಬಿಟ್ಟು ಸಾಧ್ಯಾವೈಶಿಷ್ಟ್ಯವನ್ನು ಹೇಳಿದ್ದಾರೆಂಬ ಅಂಶವನ್ನು ಗಮನಿಸಬೇಕು. 'ಪರ್ವತಃ ವಹ್ನಿಮಾನ್ ಅಗ್ನಿಮತ್ವಾತ್' ಎಂಬ ಅನುಮಾನದಲ್ಲಿ ಸಂಪೂರ್ಣವಾಗಿ ಸಾಧ್ಯಾವೈಶಿಷ್ಟ್ಯದೋಷವು ಇರುವಂತೆ ಇಲ್ಲಿ ಭಾವಿಸಬಾರದು.

## 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಪದ್ಯಕ್ಕೆ ಸಾರ್ಥಕ್ಯಚಿಂತನೆ

**ಪರಿಮಳ– ವಕ್ತ್ರಿತ್ಯರ್ಧಸ್ಯ ವ್ಯರ್ಥತಾಮಾಶಂಕ್ಯಾಹ – ವಕ್ತ್ರಿತಿ ॥ ಶಂಕಿತಸ್ಯೇತಿ ॥ 'ಏತಚ್ಛಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ವಾತ್' ಇತಿ ಪ್ರಯೋಗೇ ಶಂಕಿತಸ್ಯಾಪ್ತವಾಕ್ಯತ್ವರೂಪೋಪಾಧೇರಿತ್ಯರ್ಥಃ। ಸಾಧನವ್ಯಾಪಕತೇತಿ ॥ 'ಪೂರ್ವೋಕ್ತವ್ಯಾಖ್ಯಾನರೀತ್ಯೈವ' ಇತಿ ಭಾವಃ।**

'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಅರ್ಧಪದ್ಯವು ವ್ಯರ್ಥವೆಂಬ ಆಶಂಕೆಗೆ 'ವಕ್ತೃಶ್ರೋತೃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಶಂಕಿತಸ್ಯ' – 'ಏತತ್ ಶಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ವಾತ್' 'ವಕ್ತ್ರಾದ್ಯಾನುಕೂಲ್ಯಗಳಿರುವುದರಿಂದ ಈ ಶಾಸ್ತ್ರವು ಪ್ರಮಾಣವಾಗಿದೆ' ಎಂಬ ಅನುಮಾನದಲ್ಲಿ ಯಾವ ಆಪ್ತವಾಕ್ಯತ್ವವೆಂಬ ಉಪಾಧಿದೋಷವನ್ನು ಆಶಂಕಿಸಲಾಗಿದೆಯೋ ಅದಕ್ಕೆ ಎಂದರ್ಥ.

'ಸಾಧನವ್ಯಾಪಕತಾಪ್ರದರ್ಶನಾರ್ಥಂ' – ಹಿಂದೆ ಹೇಳಿದ ರೀತಿಯಿಂದ ಸಾಧನವ್ಯಾಪಕವಾಗಿದೆ ಎಂಬುವುದನ್ನು ತೋರಿಸಲಿಕ್ಕಾಗಿ ಎಂದರ್ಥ.

ವಿವರಣೆ – 'ವಿಮತಂ ಪ್ರಮಾಣಂ ವಕ್ತ್ರಾದ್ಯಾನುಕೂಲ್ಯಸದ್ಭಾವಾತ್' ಎಂಬುದಾಗಿ ಅನುಮಾನವನ್ನು ಮಾಡಿದರೆ ಆಪ್ತವಾಕ್ಯತ್ವವು ಉಪಾಧಿಯಾಗುತ್ತದೆ. ಆದಕ್ಕಾಗಿ ನೇರವಾಗಿ ಪ್ರಾಮಾಣ್ಯವನ್ನು ಸಾಧಿಸಲಾಗದು.

ಈ ಪ್ರಶ್ನೆಯು ತಪ್ಪು. ಇದಕ್ಕಾಗಿಯೇ 'ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ವಾಕ್ಯವು ಹೊರಟಿದೆ. ಸಾಧ್ಯವ್ಯಾಪಕವಾಗಿದ್ದು, ಸಾಧನ ಅವ್ಯಾಪಕವಾದರೆ ಉಪಾಧಿಯು ದೋಷವಾಗುತ್ತದೆ. ಆದರೆ ಆಪ್ತವಾಕ್ಯತ್ವ ಎಂಬ ಉಪಾಧಿಯು ಸಾಧನದಿಂದ ಅವ್ಯಾಪಕವಾಗಿರುವುದಿಲ್ಲ. ಸಾಧನವ್ಯಾಪಕವೇ ಆಗಿದೆ. ವಕ್ತ್ರಾದ್ಯಾನುಕೂಲ್ಯಗಳಿರುವಲ್ಲಿ ಆಪ್ತವಾಕ್ಯತ್ವವು ಇರುವುದರಿಂದ ಸಾಧನ ಅವ್ಯಾಪಕತ್ವವು ಬರುವುದಿಲ್ಲ. ಆದ್ದರಿಂದ ಆಪ್ತವಾಕ್ಯತ್ವವನ್ನು ಉಪಾಧಿಯನ್ನಾಗಿ ಹೇಳಲು ಸಾಧ್ಯವಿಲ್ಲ. ಈ ವಿಷಯವನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಮಾತು ಸಾರ್ಥಕವಾಗಿದೆ.

## 'ವಕ್ತ್ರಾದ್ಯಾನುಕೂಲ್ಯ' ಎಂಬ ಹೇತುವಿಗೆ ಆಪ್ತವಾಕ್ಯತ್ವದ ಜೊತೆ ಸಂಬಂಧವು ಸ್ಪಷ್ಟ

**ಪರಿಮಳ–** ಉತ್ತರವಾಕ್ಯೇತಿ ॥ ತತ್ರ ವಕ್ತ್ರಾದ್ಯಾನುಕೂಲ್ಯಸ್ಯ ಆಪ್ತವಾಕ್ಯತ್ವರೂಪಸಾಧ್ಯಸಂಬಂಧಸ್ಯೈವ ಪ್ರತೀತೇರಿತಿ ಭಾವಃ । ನನು ವಕ್ತ್ರಾದ್ಯಾನುಕೂಲ್ಯೇನ ಹೇತುನಾ ಆಪ್ತವಾಕ್ಯತ್ವಸ್ಯೋಪಾಧೇಃ ಪಕ್ಷೇ ಸಾಧನಾರ್ಥಮ್ 'ಆಪ್ತವಾಕ್ಯತಯಾ ತೇನ' ಇತ್ಯೇತದರ್ಥವದಿತ್ಯತ ಆಹ – ನ ಹೀತಿ ॥ ವ್ಯುತ್ಪಾದ್ಯೇತಿ ॥ ವಕ್ತ್ರ್ಯರ್ಥೇನೇತ್ಯರ್ಥಃ ।

'ಉತ್ತರವಾಕ್ಯೇ' – 'ಆಪ್ತವಾಕ್ಯತಯಾ ತೇನ' ಎಂಬ ಮುಂದಿನ ವಾಕ್ಯದಲ್ಲಿ ಎಂದರ್ಥ. 'ವಕ್ತ್ರಾದ್ಯಾನುಕೂಲ್ಯಗಳಿರುವಿಕೆ' ಎಂಬ ಯುಕ್ತಿಗೆ ಆಪ್ತವಾಕ್ಯತ್ವ ಎಂಬ ಸಾಧ್ಯದ ಜೊತೆ ಸಂಬಂಧವನ್ನು ಹೇಳಿರುತ್ತಾರೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ ಎಂದು ಈ ವಾಕ್ಯದ ಅಭಿಪ್ರಾಯ.

'ವಕ್ತ್ರಾದ್ಯಾನುಕೂಲ್ಯಗಳಿರುವಿಕೆ' ಎಂಬ ಹೇತುವಿನಿಂದ 'ಆಪ್ತವಾಕ್ಯತ್ವ' ಎಂಬ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡುವುದಕ್ಕಾಗಿ 'ಆಪ್ತವಾಕ್ಯತಯಾ ತೇನ' ಎಂಬ ವಾಕ್ಯವು

ಹೊರಟಿದೆ ಎಂದು ಏಕೆ ಹೇಳಬಾರದು. ಈ ಪ್ರಶ್ನೆಯನ್ನು 'ನ ಹಿ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

'ವ್ಯತ್ಯಾದ್ಯ' – 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಅರ್ಧಭಾಗದಿಂದ ತಿಳಿಸಿ ಎಂದರ್ಥ.

## ಅಪ್ರಯೋಜಕತ್ವಾಶಂಕೆಯ ಪರಿಹಾರಕ್ಕಾಗಿ ಆಪ್ತವಾಕ್ಯತ್ವವನ್ನು ವಿವಕ್ಷಿಸಲೇಬೇಕು

ವಾಕ್ಯಾರ್ಥಚಂದ್ರಿಕಾ– 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ಮೋಕ್ಷಾರ್ಥಮುಪದಿಷ್ಟತ್ವಮಾನತ್ವಯೋಃ ಸಾಕ್ಷಾತ್ ಸಾಧ್ಯಸಾಧನಭಾವಾಭ್ಯುಪಗಮೇ ಅಪ್ರಯೋಜಕತ್ವಾಪಾತೇನ ವಿಪಕ್ಷಬಾಧಕತ್ವೇನ ವಕ್ತ್ರಾದ್ಯಾನುಕೂಲ್ಯೋಪೇತತಾಭಾವಸ್ಯಾನಿಷ್ಟತ್ವೇನಾವಶ್ಯಾಶ್ರಯಣೀಯತ್ವೇ, ತದುಪಪತ್ತಯೇ ವಕ್ತ್ರಾದ್ಯಾನುಕೂಲ್ಯಸಾಧನಸ್ಯಾವಶ್ಯಕತ್ವೇನ ತತ್ರ ಪರಂಪರಾಶ್ರಯಣವದ್ ವಕ್ತ್ರಾದ್ಯಾನುಕೂಲ್ಯಮಾನತ್ವಯೋಃ ಸಾಕ್ಷಾತ್ ಸಾಧ್ಯಸಾಧನಭಾವಾಭ್ಯುಪಗಮೇ ಅಪ್ರಯೋಜಕತ್ವಪರಿಹಾರಾಯ ಆಪ್ತವಾಕ್ಯತ್ವಸಾಧನಸ್ಯ ಅವಶ್ಯಾಶ್ರಯಣೀತಯಾ, ಯುಕ್ತಮತ್ರಾಪಿ ಗ್ರಂಥಕೃತಃ ಪರಂಪರಾಶ್ರಯಣಮ್ ಇತಿ ವಕ್ತುಂ, 'ಕುತೋಽಸ್ಯ ಗ್ರಂಥಕೃದಭಿಪ್ರಾಯತ್ವಂ ಯೇನೇದಂ ಪ್ರಯೋಜನಮಭಿಧಾನಂ ಸಂಗಚ್ಛೇತ' ಇತಿ ಶಂಕಾಪರಿಹಾರಾಯ 'ಅಭಿಪ್ರಾಯಾನವಗಮಾತ್' ಇತ್ಯುಕ್ತಂ ಪರಂಪರಾಶ್ರಯಣಸ್ಯ ಗ್ರಂಥಕೃದಭಿಪ್ರೇತತ್ವಮುಪಪಾದಯಿತುಂ 'ನನು ತರ್ಹ್ಯನೇನೇದಮುಕ್ತಂ ಭವತಿ' ಇತಿ ಪೂರ್ವಪಕ್ಷ್ಯುತ್ಪ್ರೇಕ್ಷಿತಾಭಿಪ್ರಾಯಂ ಶಂಖಾಮುಖೇನ ಉಪಪಾದಯತಿ – ನನ್ವಿತಿ ॥ ಅತ್ರ = ಗುರುರ್ಗುರೂಣಾಮಿತಿ ಶ್ಲೋಕೇ । 'ಗುರೂಣಾಂ ಗುರುತ್ವಾತ್' ಇತ್ಯಾದಿ ಹೇತೂನ್ ಪ್ರತಿ ವಕ್ತ್ರಾದ್ಯಾನುಕೂಲ್ಯರೂಪಸಾಧ್ಯಾಧ್ಯಾಹಾರಸ್ಯೋಕ್ತರೀತ್ಯಾ ಸಿದ್ಧತ್ವಾತ್ ಸಾಕ್ಷಾದೇವ ತಸ್ಯ ಮಾನತ್ವೇನ ಸಾಧ್ಯಸಾಧನಭಾವೇ 'ಗುರುರ್ಗುರೂಣಾಮ್' ಇತಿ ಶ್ಲೋಕಾಭಿಪ್ರೇತತಯಾ ವ್ಯಾಖ್ಯಾತುಂ ಶಕ್ಯೇ, ಕಿಮಾಪ್ತವಾಕ್ಯತಾಸಾಧನಂ ತದಭಿಪ್ರೇತತಯಾ ಮಧ್ಯೇ ವ್ಯಾಖ್ಯಾಯತ ಇತ್ಯರ್ಥಃ।

'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ಮೋಕ್ಷಾರ್ಥಮುಪದಿಷ್ಟತ್ವ' ಎಂಬ ಧರ್ಮಕ್ಕೂ 'ಮಾನತ್ವ' ಎಂಬ ಧರ್ಮಕ್ಕೂ ನೇರವಾಗಿ ಸಾಧ್ಯಸಾಧನಭಾವವನ್ನು ಅಂಗೀಕರಿಸಿದರೆ ಅಪ್ರಯೋಜಕತ್ವಶಂಕಾ ಬರುತ್ತದೆ. ಆದ್ದರಿಂದ ವಿಪಕ್ಷೇ ಬಾಧಕತರ್ಕವನ್ನು ಹೇಳುವುದಕ್ಕಾಗಿ ವಕ್ತ್ರಾದ್ಯಾನುಕೂಲ್ಯೋ-

ಪೇತತ್ವಾಭಾವವನ್ನು ಅನಿಷ್ಟವಾಗಿ ಆಶ್ರಯಿಸಬೇಕು. ಇದಕ್ಕೋಸ್ಕರ ವಕ್ತ್ರಾದ್ಯಾನುಕೂಲ್ಯವನ್ನು ಅವಶ್ಯವಾಗಿ ಸಾಧನೆ ಮಾಡಬೇಕು. ಅಲ್ಲಿ ವಕ್ತ್ರಾದ್ಯಾನುಕೂಲ್ಯಕ್ಕೂ ಪ್ರಾಮಾಣ್ಯಕ್ಕೂ ಸಾಕ್ಷಾತ್ತಾದ ಸಾಧ್ಯಸಾಧನ-ಭಾವವನ್ನು ಅಂಗೀಕರಿಸಿದರೆ ಅಪ್ರಯೋಜಕತ್ವವು ಬರುತ್ತದೆ. ಅದರ ಪರಿಹಾರಕ್ಕಾಗಿ ಆಪ್ತವಾಕ್ಯತ್ವವನ್ನು ಅವಶ್ಯವಾಗಿ ಆಶ್ರಯಿಸಬೇಕು. ಹೀಗೆ ಗ್ರಂಥಕಾರರು ಇಲ್ಲೂ ಕೂಡ ಪರಸ್ಪರವಾಗಿ ಆಶ್ರಯಿಸಿದ್ದು ಯುಕ್ತ-ವಾಗಿದೆ. ಇದನ್ನು ತಿಳಿಸುವುದಕ್ಕಾಗಿ 'ಕುತೋಽಸ್ಯ ಗ್ರಂಥಕೃದಭಿಪ್ರಾಯತ್ವಂ ಯೇನೇದಂ ಪ್ರಯೋಜನ-ಮಭಿಧಾನಂ ಸಂಗಚ್ಛೇತ' 'ಗ್ರಂಥಕಾರರಿಗೆ ಪರಂಪರೆಯಿಂದ ಪ್ರಾಮಾಣ್ಯಸಾಧನೆ ಮಾಡುವ ಉದ್ದೇಶ-ವಿದೆಯೆಂದು ಹೇಗೆ ತಿಳಿಯುತ್ತದೆ; ಹಾಗಾಗಿದ್ದಲ್ಲಿ ಪ್ರಯೋಜನವನ್ನು ತಿಳಿಯಬಹುದಿತ್ತು' ಎಂಬ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿಯೂ ಮತ್ತು 'ಅಭಿಪ್ರಾಯಾನವಗಮಾತ್' ಎಂಬುದರಿಂದ ಹೇಳಲ್ಪಟ್ಟ ಪರಸ್ಪರವಾಗಿ ಆಶ್ರಯಿಸುವಿಕೆಯು ಗ್ರಂಥಕಾರರಿಗೆ ಅಭಿಪ್ರೇತವಾಗಿದೆ ಎಂಬುದನ್ನು ಉಪ-ಪಾದನೆ ಮಾಡುವುದಕ್ಕಾಗಿಯೂ 'ನನು ತರ್ಕ್ಯನೇನೇದಮುಕ್ತಂ ಭವತಿ' ಇತ್ಯಾದಿಯಾಗಿ ಪೂರ್ವಪಕ್ಷಿ-ಯಿಂದ ಉತ್ಪ್ರೇಕ್ಷಿತವಾದ ಅಭಿಪ್ರಾಯವನ್ನು ಶಂಕಾ ಮೂಲಕವಾಗಿ 'ನನು' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

'ಅತ್ರ' ಎಂಬ ಪದಕ್ಕೆ 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಎಂದರ್ಥ. ಗುರೂಣಾಂ ಗುರುತ್ವಾತ್ ಇವೇ ಮೊದಲಾದ ಹೇತುಗಳಿಗೆ ವಕ್ತ್ರಾದ್ಯಾನುಕೂಲ್ಯವೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ ಸಾರ್ಥಕ್ಯವು ಸಿದ್ಧವಾಗುತ್ತದೆ ಎಂದು ಹಿಂದೆ ಹೇಳಲಾಗಿದೆ. ನೇರವಾಗಿಯೇ ಪ್ರಾಮಾಣ್ಯದ ಜೊತೆ ಸಾಧ್ಯಸಾಧನಭಾವವನ್ನು ಹೇಳುವ ಮೂಲಕ ಗುರುರ್ಗುರೂಣಾಂ ಎಂಬ ಶ್ಲೋಕಕ್ಕೆ ವ್ಯಾಖ್ಯಾನಮಾಡಲು ಸಾಧ್ಯವಿರುವಾಗ ಮಧ್ಯದಲ್ಲಿ ಆಪ್ತವಾಕ್ಯತ್ವವನ್ನೇಕೆ ವಿವಕ್ಷಿಸಬೇಕು ಎಂದರ್ಥ.

ವಿವರಣೆ – ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಾತ್ ಎಂಬ ಹೇತುವಿಗೂ ಪ್ರಾಮಾಣ್ಯವೆಂಬ ಸಾಧ್ಯಕ್ಕೂ ನೇರವಾಗಿ ಸಾಧ್ಯಸಾಧನಭಾವಸಂಬಂಧವನ್ನು ವಿವಕ್ಷಿಸಿದರೆ ಅಪ್ರಯೋಜಕತ್ವಾಶಂಕೆಯು ಬರುತ್ತದೆ. 'ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಮುಪ-ದಿಷ್ಟತ್ವಮಸ್ತು, ಪ್ರಾಮಾಣ್ಯರೂಪಸಾಧ್ಯಂ ಮಾಸ್ತು' ಎಂದು. ಈ ಅಪ್ರಯೋಜಕತ್ವಾಶಂಕೆಯನ್ನು ಪರಿಹರಿಸಲು ವಿಪಕ್ಷೇ ಬಾಧಕತರ್ಕವನ್ನು ಹೇಳುವುದಕ್ಕಾಗಿ ವಕ್ತ್ರಾದ್ಯಾನುಕೂಲ್ಯೋಪೇತತ್ವಾಭಾವವೆಂಬ ಅನಿಷ್ಟಾಪಾದನೆಯನ್ನು ಮಾಡಬೇಕು. 'ಯದಿ ಪ್ರಾಮಾಣ್ಯಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯೋ-ಪೇತತ್ವಂ ನ ಸ್ಯಾತ್' ಎಂದು. ಹೀಗೆ ವಕ್ತ್ರಾದ್ಯಾನುಕೂಲ್ಯೋಪೇತತ್ವಾಭಾವವನ್ನು ಆಪಾದನೆ ಮಾಡ-

ಬೇಕು. ಈ ಆಪಾದನೆಯು ಪೂರ್ವವಾದಿಗೆ ಅನಿಷ್ಟವಾಗಿದೆ ಎಂಬುದನ್ನು ಉಪಪಾದನೆ ಮಾಡಬೇಕು. ವಕ್ತ್ರಾದ್ಯಾನುಕೂಲ್ಯೋಪೇತತ್ವಾಭಾವವನ್ನು ಆಶ್ರಯಿಸದೇ ಬೇರೆ ಉಪಾಯವೇ ಇರುವುದಿಲ್ಲ. ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವ ಎಂಬ ಹೇತುವಿಗೂ ಪ್ರಾಮಾಣ್ಯಕ್ಕೂ ಪ್ರಯೋಜ್ಯ-ಪ್ರಯೋಜಕಭಾವವೇ ಇರುವುದಿಲ್ಲ. ಆದ್ದರಿಂದ 'ಯದಿ ಪ್ರಾಮಾಣ್ಯಂ ನ ಸ್ಯಾತ್, ತರ್ಹಿ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಮಪಿ ನ ಸ್ಯಾತ್' ಎಂಬುದಾಗಿ ಅನಿಷ್ಟಾಪಾದನೆ ಮಾಡಲು ಸಾಧ್ಯವಾಗುವುದಿಲ್ಲ. 'ಯದಿ ಪ್ರಾಮಾಣ್ಯಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯೋಪೇತತ್ವಂ ನ ಸ್ಯಾತ್' ಎಂದೇ ಅನಿಷ್ಟಾಪಾದನೆಯನ್ನು ಹೇಳಬೇಕು. 'ಯದಿ ವಕ್ತ್ರಾದ್ಯಾನುಕೂಲ್ಯೋಪೇತತ್ವಂ ನ ಸ್ಯಾತ್ ತರ್ಹಿ ಬಾದರಾಯಣೇನ ಬ್ರಹ್ಮಾದೀನ್ ಪ್ರತಿ ತನ್ಮೋಕ್ಷಾರ್ಥಂ ಉಪದಿಷ್ಟತ್ವಮಪಿ ನ ಸ್ಯಾತ್' ಎಂದು ಹೇಳಬಹುದು. ಏಕೆಂದರೆ, ವಕ್ತ್ರಾದ್ಯಾನುಕೂಲ್ಯಕ್ಕೂ ಗುರುಗುರುತ್ವಾದಿಗಳಿಗೂ ಪ್ರಯೋಜ್ಯ-ಪ್ರಯೋಜ್ಯಕಭಾವವು ಇರುತ್ತದೆಂದು ಹಿಂದೆ ಸಮರ್ಥಿಸಿದ್ದೇವೆ.

'ಯದಿ ಪ್ರಾಮಾಣ್ಯಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯೋಪೇತತ್ವಮಪಿ ನ ಸ್ಯಾತ್' ಎಂಬುದಾಗಿ ಅನಿಷ್ಟಾಪಾದನೆಯನ್ನು ಮಾಡಿದಾಗ ಇದು ನಮಗೆ ಇಷ್ಟವೇ ಆಗಿದೆ ಎಂದು ಪೂರ್ವವಾದಿಯು ಹೇಳಿದರೆ, ವಕ್ತ್ರಾದ್ಯಾನುಕೂಲ್ಯೋಪೇತತ್ವವು ಶಾಸ್ತ್ರದಲ್ಲಿ ಇದ್ದೇ ಇರುತ್ತದೆ; ಇರುವುದಿಲ್ಲವೆಂದು ಹೇಳಬಾರದು ಎಂಬುದರ ಉಪಪಾದನೆಗಾಗಿ ವಕ್ತ್ರಾದ್ಯಾನುಕೂಲ್ಯೋಪೇತತ್ವವನ್ನು ಸಾಧನೆ ಮಾಡಬೇಕು. ಆದ್ದರಿಂದ ಪರಂಪರಾಶ್ರಯಣವನ್ನು ಮಾಡುವುದು ಅತ್ಯಂತ ಯುಕ್ತವಾಗಿದೆ. ಇಷ್ಟು ವಿಚಾರವನ್ನು ಈ ಹಿಂದೆ ಹೇಳಿದ್ದೇವೆ. ಇದೇ ದೃಷ್ಟಾಂತದಿಂದ ಇಲ್ಲೂ ಕೂಡ ತಿಳಿಯಬೇಕು. ವಕ್ತ್ರಾದ್ಯಾನುಕೂಲ್ಯಕ್ಕೂ ಪ್ರಾಮಾಣ್ಯಕ್ಕೂ ನೇರವಾಗಿ ಸಾಧ್ಯಸಾಧನಭಾವವನ್ನು ಅಂಗೀಕಾರ ಮಾಡಿದರೆ ಅಪ್ರಯೋಜಕತ್ವಾಶಂಕೆಯು ಬರುತ್ತದೆ. ಅದರ ಪರಿಹಾರಕ್ಕಾಗಿ ವಿಪಕ್ಷೇ ಬಾಧಕತರ್ಕವನ್ನು ಹೇಳಬೇಕು. ವಿಪಕ್ಷೇ ಬಾಧಕತರ್ಕದಲ್ಲಿ ಅನಿಷ್ಟಾಪಾದನೆಯನ್ನು ತೋರಿಸುವುದಕ್ಕಾಗಿ ಆಪ್ತವಾಕ್ಯತ್ವವನ್ನು ಅವಶ್ಯವಾಗಿ ಆಶ್ರಯಿಸಬೇಕು. 'ವಕ್ತ್ರಾದ್ಯಾನುಕೂಲ್ಯಮಸ್ತು, ಪ್ರಾಮಾಣ್ಯಂ ಮಾಸ್ತು' ಎಂದು ಅಪ್ರಯೋಜಕಾಶಂಕೆಯನ್ನು ಮಾಡಿದರೆ 'ಯದಿ ಪ್ರಾಮಾಣ್ಯಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯಮಪಿ ನ ಸ್ಯಾತ್' ಎಂಬುದಾಗಿ ವಿಪಕ್ಷೇ ಬಾಧಕತರ್ಕವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪ್ರಾಮಾಣ್ಯಕ್ಕೂ ವಕ್ತ್ರಾದ್ಯಾನುಕೂಲ್ಯಕ್ಕೂ ಪ್ರಯೋಜ್ಯಪ್ರಯೋಜಕಭಾವವು ನೇರವಾಗಿ ಇರುವುದಿಲ್ಲ. ಹಾಗಾಗಿ 'ಯದಿ ಪ್ರಾಮಾಣ್ಯಂ ನ ಸ್ಯಾತ್ ತರ್ಹಿ ಆಪ್ತವಾಕ್ಯತ್ವಂ ನ ಸ್ಯಾತ್; ಯದಿ ಆಪ್ತವಾಕ್ಯತ್ವಂ ನ ಸ್ಯಾತ್ ತರ್ಹಿ ವಕ್ತ್ರಾದ್ಯಾನುಕೂಲ್ಯಮಪಿ ನ ಸ್ಯಾತ್' ಈ ಕ್ರಮದಲ್ಲಿಯೇ ವಿಪಕ್ಷೇ ಬಾಧಕತರ್ಕವನ್ನು ತೋರಿಸಬೇಕು. ಈ

ಉದ್ದೇಶದಿಂದ ಗ್ರಂಥಕಾರರು ನೇರವಾಗಿ ಪ್ರಮಾಣ್ಯವನ್ನು ಸಾಧನೆ ಮಾಡದೇ ಆಪ್ತವಾಕ್ಯತ್ವದ ಮೂಲಕವಾಗಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾರೆ. ಮುಂದಿನ ಗ್ರಂಥಕ್ಕೆ ಇಲ್ಲಿಯ ತನಕ ಹೇಳಿದ್ದು ಒಂದು ಬಗೆಯ ಪೀಠಿಕೆ.

ಮತ್ತೊಂದು ಬಗೆಯ ಪೀಠಿಕೆ ಹೀಗಿದೆ – ಪರಂಪರೆಯನ್ನು ಆಶ್ರಯಿಸಬೇಕೆಂದು ಅಂಗೀ-ಕರಿಸೋಣ; ಇದು ಆಚಾರ್ಯರಿಗೆ ಅಭಿಪ್ರೇತವಾಗಿದೆ ಎಂಬುದು ಸಿದ್ಧವಾದರೆ ಅನಂತರ ಕಾರಣವನ್ನು ಹುಡುಕಬಹುದು. ಗ್ರಂಥಕಾರರಿಗೆ ಅಭಿಪ್ರೇತವಾಗಿದೆ ಎಂಬುದೇ ಹೇಗೆ ಸಿದ್ಧವಾಗುತ್ತದೆ? ಈ ಪ್ರಶ್ನೆಗೆ 'ನನು' ಇತ್ಯಾದಿ ಗ್ರಂಥವು ಉತ್ತರಿಸುತ್ತಿದೆ.

'ಗುರೂಣಾಂ ಗುರುತ್ವಾತ್' ಇತ್ಯಾದಿ ಹೇತುಗಳಿಗೆ ವಕ್ತ್ರಾದ್ಯಾನುಕೂಲ್ಯವೆಂಬ ಸಾಧ್ಯದ ಅಪೇಕ್ಷೆ ಇರುವುದರಿಂದ ಇದರ ಅಧ್ಯಾಹಾರವು ಅನಿವಾರ್ಯ. ಆದರೆ ಈ ವಕ್ತ್ರಾದ್ಯಾನುಕೂಲ್ಯಕ್ಕೆ ನೇರವಾಗಿ ಪ್ರಾಮಾಣ್ಯದ ಜೊತೆ ವ್ಯಾಪ್ತಿಯು ಇರುವಾಗ ಪುನಃ ಆಪ್ತವಾಕ್ಯತ್ವವನ್ನು ಮಧ್ಯದಲ್ಲೇಕೆ ವಿವಕ್ಷಿಸುತ್ತೀರಿ? ಎಂಬುದು 'ಅತ್ರ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

## ಪರಂಪರೆಯಿಂದ ಪ್ರಾಮಾಣ್ಯದ ಸಾಧನೆಯು ಅನಾವಶ್ಯಕ

ವಾಕ್ಯಾರ್ಥಚಂದ್ರಿಕಾ– ವ್ಯಾಪ್ತಿಪಕ್ಷಧರ್ಮತಯೋಃ ಸಾಧನಾಂಗತಯಾ, ಸಾಕ್ಷಾತ್ ಸಾಧ್ಯಸಾಧನಭಾವೇ ತದಸಂಭವಾತ್ ಪರಂಪರಾಶ್ರಯಣಮಿತಿ ಶಂಕಾ ನಿವರ್ತಯತಿ – ವ್ಯಾಪ್ತೀತಿ ॥ ಉಭಯಸಾಧನೇऽಪಿ ಶಾಸ್ತ್ರಸ್ಯೈವ ಪಕ್ಷತ್ವೇನ ಪಕ್ಷಧರ್ಮತಾಯಾಃ ಸ್ಪಷ್ಟತ್ವಾತ್ ತಾಮನುಪಪಾದ್ಯ ವ್ಯಾಪ್ತಿಮೇವೋಪಪಾದಯತಿ – ನ ಹೀತಿ ॥ ನ ಕೇವಲಂ ವ್ಯಾಪ್ತಿಪಕ್ಷಧರ್ಮತಯೋಸ್ತುಲ್ಯತ್ವೇನ ಪರಂಪರಾಶ್ರಯಣಮೇವ ದೋಷೋ ಅಪಿ ತು ಅನುಕೂಲವಕ್ತ್ರಾದಿಮತ್ತ್ವೇನ ಆಪ್ತವಾಕ್ಯತಾ-ಸಾಧನೇ ಆಪ್ತಿವಕ್ತ್ರಾನುಕೂಲ್ಯಯೋಃ ಸಾಧ್ಯಸಾಧನಾನುಪ್ರವೇಶಾತ್ ತ್ರಿತಯರೂಪವಕ್ತ್ರಾನುಕೂಲ್ಯಸ್ಯ ಚತುಷ್ಟಯರೂಪಾಪ್ತ್ಯೇಕದೇಶತ್ವಾತ್ ಅಂಶತಃ ಸಾಧ್ಯಾವಿಶಿಷ್ಟತಾ ಚ ಸ್ಯಾದಿತ್ಯಾಹ – ಅನುಕೂಲೇತಿ ॥

ವ್ಯಾಪ್ತಿ ಹಾಗೂ ಪಕ್ಷಧರ್ಮತಾ ಇವೆರಡೂ ಕೂಡ ಸಾಧನೆಗೆ ಅಂಗಗಳಾಗಿವೆ. ಸಾಕ್ಷಾತ್ತಾಗಿ ವಕ್ತ್ರಾದ್ಯಾನುಕೂಲ್ಯಕ್ಕೂ ಪ್ರಾಮಾಣ್ಯಕ್ಕೂ ಸಾಧ್ಯಸಾಧನಭಾವ ಅಸಂಭಾವಿತವಾದ್ದರಿಂದ ಪರಂಪರೆಯನ್ನು ಆಶ್ರಯಿಸುತ್ತೇವೆ; ಇಲ್ಲದಿದ್ದರೆ ವ್ಯಾಪ್ತಿಪಕ್ಷಧರ್ಮತಾಗಳು ಯುಕ್ತವಾಗುವುದಿಲ್ಲ. ಈ ಆಶಂಕೆಯನ್ನು 'ವ್ಯಾಪ್ತಿ' ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

ವ್ಯಾಪ್ತಿಯನ್ನು ಸಾಧನೆ ಮಾಡುವುದಾದರೂ, ಪಕ್ಷಧರ್ಮತಾವನ್ನು ಸಾಧನೆ ಮಾಡುವುದಾದರೂ ಶಾಸ್ತ್ರವೇ ಪಕ್ಷವಾಗುತ್ತದೆ. ಶಾಸ್ತ್ರವೆಂಬ ಪಕ್ಷದಲ್ಲಿ 'ವಕ್ತ್ರಾದ್ಯಾನುಕೂಲ್ಯ'ವೆಂಬ ಹೇತುವು ಇರುವುದು ಅತ್ಯಂತ ಸ್ಪಷ್ಟವಾಗಿರುವುದರಿಂದ ಟೀಕೆಯಲ್ಲಿ ಇದನ್ನು ಉಪಪಾದನೆ ಮಾಡಿರುವುದಿಲ್ಲ. ಅಸ್ಪಷ್ಟವಾದ ವ್ಯಾಪ್ತಿಯನ್ನಷ್ಟೇ ಉಪಪಾದನೆ ಮಾಡುವುದಕ್ಕಾಗಿ 'ನ ಹಿ' ಇತ್ಯಾದಿ ಗ್ರಂಥವು ಹೊರಟಿದೆ. ಕೇವಲ ವ್ಯಾಪ್ತಿ-ಪಕ್ಷಧರ್ಮತಾಗಳು ಸಮಾನವಾಗಿರುವುದರಿಂದ ಪರಂಪರೆಯನ್ನು ಆಶ್ರಯಿಸಬೇಕೆಂಬುದಷ್ಟೇ ದೋಷವಲ್ಲ. ವಕ್ತ್ರಾದ್ಯಾನುಕೂಲ್ಯವೆಂಬ ಹೇತುವಿನಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿದರೆ ಆಪ್ತಿ ಹಾಗೂ ವಕ್ತ್ರಾನುಕೂಲ್ಯಗಳಿಗೆ ಐಕ್ಯವಿರುವುದರಿಂದ ಸಾಧ್ಯಾವೈಶಿಷ್ಟ್ಯವು ಬರುತ್ತದೆ. ಆಪ್ತಿಯು ಸಾಧ್ಯದಲ್ಲಿ ಸೇರಿದೆ; ವಕ್ತ್ರಾನುಕೂಲ್ಯವು ಹೇತುವಿನಲ್ಲಿ ಸೇರಿದೆ. ವಕ್ತ್ರಾನುಕೂಲ್ಯವು ಮೂರು ಧರ್ಮಗಳಿಂದ ಕೂಡಿದೆ. ಆಪ್ತಿಯು ನಾಕು ಧರ್ಮಗಳಿಂದ ಕೂಡಿದೆ. ನಾಕು ಧರ್ಮಗಳಿಂದ ಕೂಡಿದ ಆಪ್ತಿಯ ಏಕದೇಶವೇ ವಕ್ತ್ರಾನುಕೂಲ್ಯವಾಗಿದೆ. ಆದ್ದರಿಂದ ಸಾಧ್ಯಾವೈಶಿಷ್ಟ್ಯ ದೋಷವು ಬರಬೇಕಾದೀತು ಎಂದು 'ಅನುಕೂಲ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

## ಉಪಾಧಿ ಹೇಳಿದ್ದು ಏಕೆ?

ವಾಕ್ಯಾರ್ಥಚಂದ್ರಿಕಾ– ನನು ಸಾಧನೇನೋಪಾಧೇಃ ಪಕ್ಷೇ ಸಾಧನಾರ್ಥಮುತ್ತರವಾಕ್ಯಮಿತಿ ನ ವೈಯರ್ಥ್ಯಮ್ । ನ ಚ ತಸ್ಯಾಪಿ ಸಾಧನವ್ಯಾಪಕತಾರ್ಥತ್ವಾತ್ ತಸ್ಯಾಶ್ಚ ಪೂರ್ವವಾಕ್ಯೇನೈವ ಸಿದ್ಧತ್ವಾತ್ ಪೂರ್ವವಾಕ್ಯೇನ ತಾಂ ವ್ಯುತ್ಪಾದ್ಯ, ಪುನಸ್ತದರ್ಥಮುಪಾಧೇಃ ಪಕ್ಷೇ ಸಾಧನೇ ಪೂರ್ವೇಣೋತ್ತರಸ್ಯೋತ್ತರೇಣ ವಾ ಪೂರ್ವಸ್ಯ ಗತಾರ್ಥತಾಯಾ ಅನಪಾಯ ಏವೇತಿ ವಾಚ್ಯಮ್ ಉಪಾಧೇಃ ಪಕ್ಷೇ ಸಾಧನಸ್ಯ ತೇನ ಪಕ್ಷೇ ಸಾಧ್ಯಸಿದ್ಧ್ಯರ್ಥತಯಾ ಸಾಧನವ್ಯಾಪಕತಾರ್ಥಕತ್ವಾಭಾವಾತ್ ಇತ್ಯತಃ ಸ್ಯಾದಿದಂ ಯದಿ ಪಕ್ಷೇ ಸಾಧ್ಯಸಿದ್ಧ್ಯರ್ಥಂ ಪ್ರಥಮತ ಏವ ಸಾಧನತಯಾ ಸ ಪ್ರಯೋಜಿತಃ ಸ್ಯಾತ್ ತರ್ಹಿ ತದಸಿದ್ಧೌ ತತ್ಸಾಧನಂ ಯುಕ್ತಂ ಸ್ಯಾತ್ । ನ ಚೈವಮ್ ।

ಪ್ರಶ್ನೆ – ಹೇತುವಿನಿಂದ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡುವುದಕ್ಕೋಸ್ಕರ ಮುಂದಿನ ವಾಕ್ಯವು ಹೊರಟಿದೆ. ಆದ್ದರಿಂದ ವೈಯರ್ಥ್ಯದೋಷವು ಬರುವುದಿಲ್ಲ. ಇನ್ನು ಆ ಉಪಾಧಿಗೂ ಕೂಡ ಸಾಧನವ್ಯಾಪಕತ್ವವು ಸಿದ್ಧವಾಗಬೇಕು. ಅದೂ ಕೂಡ ಹಿಂದಿನ ವಾಕ್ಯದಿಂದಲೇ ಸಿದ್ಧವಾಗಿರುವುದರಿಂದ ಹಿಂದಿನ ವಾಕ್ಯದಿಂದ ಅದನ್ನು ಸಮರ್ಥಿಸಿ ಪುನಃ ಅದಕ್ಕೋಸ್ಕರ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡಿದರೆ ಹಿಂದಿನ ವಾಕ್ಯದಿಂದ ಮುಂದಿನ ವಾಕ್ಯಕ್ಕೆ ಪುನರುಕ್ತಿ ಬರುತ್ತದೆ. ಅಥವಾ ಮುಂದಿನ

ವಾಕ್ಯದಿಂದ ಹಿಂದನ ವಾಕ್ಯಕ್ಕೆ ಪುನರುಕ್ತಿಯು ಬರುತ್ತದೆ ಎಂದು ಪ್ರಶ್ನಿಸಬಾರದು. ಏಕೆಂದರೆ ಉಪಾಧಿಯನ್ನು ಪಕ್ಷದಲ್ಲಿ ಸಾಧಿಸಿರುವುದು ಏಕೆಂದರೆ ಆ ಉಪಾಧಿಯಿಂದ ಪಕ್ಷದಲ್ಲಿ ಸಾಧ್ಯಸಿದ್ಧಿಯಾಗಬೇಕು ಎಂಬ ಉದ್ದೇಶಕ್ಕಾಗಿ ಹೊರತು ಸಾಧನವ್ಯಾಪಕತ್ವಕ್ಕೋಸ್ಕರ ಅಲ್ಲ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಒಂದು ವೇಳೆ ಪಕ್ಷದಲ್ಲಿ ಸಾಧ್ಯಸಿದ್ಧಿಗೋಸ್ಕರ ಮೊದಲೇ ಸಾಧನತ್ವೇನ ಅದನ್ನು ಪ್ರಯೋಗ ಮಾಡಿದ್ದರೆ ಅದನ್ನು ಹಾಗೆ ಹೇಳಬಹುದಿತ್ತು. ಆಗ ಆ ಉಪಾಧಿಯೇ ಅಸಿದ್ಧವಾದಾಗ ಅದನ್ನು ಸಾಧನೆ ಮಾಡುವುದು ಕೂಡ ಯುಕ್ತವಾಗುತ್ತಿತ್ತು. ಆದರೆ ಹಾಗಿರುವುದಿಲ್ಲ.

## ಆಪ್ತವಾಕ್ಯತ್ವವನ್ನು ಹೇಳಿದ್ದು ಸಾಧನವ್ಯಾಪಕತ್ವದ ಪ್ರದರ್ಶನೆಗಾಗಿ ಸರ್ವಥಾ ಅಲ್ಲ

ವಾಕ್ಯಾರ್ಥಚಂದ್ರಿಕಾ— ಸಾಧ್ಯಸಿದ್ಧ್ಯರ್ಥಂ ಸಾಧನಾಂತರೇ ಪ್ರಯೋಜಿತೇ ತತ್ರ ಉಪಾಧಿಶಂಕಾಯಾಂ, ತಂ ದೂಷಯತಾ, ತಸ್ಯ ಸಾಧನವ್ಯಾಪಕತ್ವನ್ಯತ್ಪಾದನೇನೈವ ದೂಷಿತತ್ವಾತ್ ತಾವನ್ಮಾತ್ರಮೇವ ವ್ಯುತ್ಪಾದ್ಯ, ನಿರುಪಾಧಿಕಪೂರ್ವಪ್ರಯುಕ್ತಸಾಧನೇನ ಏವ ಸಾಧ್ಯಸ್ಯ ಸಾಧನೀಯತಯಾ, ಸಾಧ್ಯಸಾಧನಸ್ಯೋಪಾಧಿನಾ ಅಕರ್ತವ್ಯತಯಾ, ತದರ್ಥಂ ಪಕ್ಷೇ ತತ್ಸಾಧನಂ ವ್ಯರ್ಥಮೇವೇತ್ಯಾಶಯೇನ ಆಹ – ನ ಹೀತಿ ॥ ಇದಂ 'ವಕ್ತೃಶ್ರೋತೃಪ್ರಸಕ್ತೇನಾಮ್' ಇತ್ಯಸ್ಯ ಸ್ವಕೃತವ್ಯಾಖ್ಯಾನಾನುಸಾರೇಣ ದೂಷಣಮ್ । ಶಂಕಿತ್ರಭಿಮತವ್ಯಾಖ್ಯಾನಂ ತು 'ಉಪಾಧೇಃ ಸಾಧನಾಭೇದಮ್' ಇತ್ಯಾದಿನಾ ಆಶಂಕ್ಯ ನಿರಾಕರಿಷ್ಯತೀತಿ ದ್ರಷ್ಟವ್ಯಮ್ ।

ಸಾಧನದಿಂದ ಉಪಾಧಿಯು ಪಕ್ಷದಲ್ಲಿದೆ (ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವು ಪಕ್ಷದಲ್ಲಿದೆ) ಎಂಬುದರ ಸಾಧನೆಗಾಗಿ 'ಆಪ್ತವಾಕ್ಯತಯಾ ತೇನ' ಇತ್ಯಾದಿ ಮುಂದಿನ ವಾಕ್ಯವು ಹೊರಟಿದೆ. ಆದ್ದರಿಂದ ವೈಯರ್ಥ್ಯವು ಬರುವುದಿಲ್ಲ.

ಮುಂದಿನ ವಾಕ್ಯವೂ ಕೂಡ ಸಾಧನವ್ಯಾಪಕತ್ವವನ್ನು ಉಪಾಧಿಗೆ ತೋರಿಸುವುದಕ್ಕಾಗಿ ಹೊರಟಿದೆ. ಈ ಸಾಧನವ್ಯಾಪಕತ್ವವು ಹಿಂದಿನ 'ವಕ್ತೃಶ್ರೋತೃಪ್ರಸಕ್ತೇನಾಂ' ಎಂಬ ವಾಕ್ಯದಿಂದಲೇ ಸಿದ್ಧವಾಗಿದೆ. ಹೀಗಿರುವಾಗ ಹಿಂದಿನ ವಾಕ್ಯದಿಂದ ಸಾಧನವ್ಯಾಪಕತ್ವವನ್ನು ತೋರಿಸಿ, ಪುನಃ ಅದಕ್ಕಾಗಿ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡಿದರೆ ಹಿಂದಿನ ವಾಕ್ಯದಿಂದ ಮುಂದಿನ ವಾಕ್ಯಕ್ಕೆ ಪುನರುಕ್ತಿಯು

ಬರುತ್ತದೆ. ಅಥವಾ ಮುಂದಿನ 'ಆಪ್ತವಾಕ್ಯತಯಾ ತೇನ ಎಂಬ ವಾಕ್ಯದಿಂದ' ಹಿಂದಿನ 'ವಕ್ತೃಶ್ರೋತೃಪ್ರಸಕ್ತೀನಾಂ ' ಎಂಬ ವಾಕ್ಯಕ್ಕೆ ಪುನರುಕ್ತಿಯು ಬರುತ್ತದಲ್ಲವೇ?

ಹೀಗೆ ಪ್ರಶ್ನಿಸಬಾರದು. ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡಿರುವುದು ಏಕೆಂದರೆ ಈ ಉಪಾಧಿಯಿಂದ ಸಾಧ್ಯಸಿದ್ಧಿಯು ಆಗಬೇಕಾಗಿದೆ. ಸಾಧನವ್ಯಾಪಕತ್ವವನ್ನು ತೋರಿಸುವ ಉದ್ದೇಶ ಸರ್ವಥಾ ಇರುವುದಿಲ್ಲ. ಇಷ್ಟು ಆಕ್ಷೇಪ.

ಇದು ತಪ್ಪು. ಯಾವಾಗ ನಿಮ್ಮ ಆಕ್ಷೇಪವು ಸಮಂಜಸವಾಗುತ್ತಿತ್ತು ಎಂದರೆ ಒಂದು ವೇಳೆ ಪಕ್ಷದಲ್ಲಿ ಸಾಧ್ಯಸಿದ್ಧಿಗೋಸ್ಕರ ಮೊದಲೇ ಸಾಧನತಯಾ ಆ ಉಪಾಧಿಯನ್ನು ಪ್ರಯೋಗ ಮಾಡಿದ್ದರೆ ಆಗ ಅದು ಅಸಿದ್ಧವಾದರೆ ಅದರ ಸಾಧನೆಯು ಯುಕ್ತವಾಗುತ್ತಿತ್ತು. ಆದರೆ ಹಾಗಿಲ್ಲ. ಸಾಧ್ಯಸಿದ್ಧಿಗೋಸ್ಕರ ಮತ್ತೊಂದು ಸಾಧನವನ್ನು ಪ್ರಯೋಗಿಸಿದಾಗ ಅಲ್ಲಿ ಉಪಾಧಿಯ ಆಶಂಕೆಯು ಪ್ರಾಪ್ತವಾಗಿದೆ. ಆ ಉಪಾಧಿದೋಷವನ್ನು ಪರಿಹರಿಸುವುದಕ್ಕಾಗಿ ಸಾಧನವ್ಯಾಪಕತ್ವವನ್ನು ತೋರಿಸಿ ಉಪಾಧಿದೋಷ-ವಿಲ್ಲವೆಂದು ಸಮರ್ಥಿಸಲಾಗಿದೆ. ಆಗ 'ವಕ್ತ್ರಾದ್ಯಾನುಕೂಲ್ಯಮತ್ವ' ಎಂಬ ಹೇತುವು ಉಪಾಧಿದೋಷ-ದಿಂದ ರಹಿತವಾದ ಕಾರಣ ನಿರುಪಾಧಿಕವಾಯಿತು. ಇಂಥ ನಿರುಪಾಧಿಕವಾದ ಪೂರ್ವಪ್ರಯುಕ್ತ-ಸಾಧನೆಯಿಂದ ಸಾಧ್ಯವನ್ನು ಸಾಧಿಸಬೇಕಾಗಿದೆ. ಸಾಧ್ಯಸಾಧನೆಯು ಉಪಾಧಿಯಿಂದ ಅಕರ್ತವ್ಯವಾಗಿದೆ. ಹಾಗಾಗಿ ಪಕ್ಷದಲ್ಲಿ ಆ ಉಪಾಧಿಯ ಸಾಧನೆಯು ವ್ಯರ್ಥವೇ ಆಗಿದೆ. ಈ ಅಭಿಪ್ರಾಯದಿಂದ 'ನ ಹಿ' ಇತ್ಯಾದಿ ಗ್ರಂಥವು ಹೊರಟಿದೆ.

ಈ ದೋಷವು 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬುದಕ್ಕೆ ಸ್ವಕೃತವ್ಯಾಖ್ಯಾನಕ್ಕೆ ಅನುಸಾರಿಯಾಗಿ ಹೇಳಲ್ಪಟ್ಟಿದೆ. ಶಂಕೆ ಮಾಡುವವನ ಅಭಿಪ್ರಾಯಕ್ಕೆ ಅನುಗುಣವಾದ ವ್ಯಾಖ್ಯಾನವನ್ನು 'ಉಪಾಧೇಃ ಸಾಧನಾಭೇದಮ್' ಇತ್ಯಾದಿಯಾಗಿ ಮುಂದಿನ ಗ್ರಂಥದಿಂದ ಆಶಂಕಿಸಿ ನಿರಾಕರಣೆ ಮಾಡುವವರಿದ್ದಾರೆ.

ವಿವರಣೆ – 'ಆಪ್ತವಾಕ್ಯತ್ವ'ವೆಂಬ ಉತ್ತರವಾಕ್ಯವು ವ್ಯರ್ಥವಾಗಬೇಕಾದೀತು? ಎಂದು ಪ್ರಶ್ನಿಸ-ಬಾರದು. ಸಾಧನದಿಂದ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡುವುದಕ್ಕಾಗಿ ಉತ್ತರವಾಕ್ಯವು ಸಾರ್ಥಕವಾಗುತ್ತದೆ. ವಕ್ತ್ರಾದ್ಯಾನುಕೂಲ್ಯವೆಂಬ ಲಿಂಗದಿಂದ ಆಪ್ತವಾಕ್ಯತ್ವವೆಂಬ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡುತ್ತೀರಿ. ಉಪಾಧಿಯು ಸಾಧನವ್ಯಾಪಕವಾಗಿದೆ ಎಂಬುದನ್ನು ತೋರಿಸುವುದು ಇದರ ಉದ್ದೇಶ. ಈ ಸಾಧನವ್ಯಾಪಕತ್ವವು ಪೂರ್ವವಾಕ್ಯದಿಂದಲೇ ಸಿದ್ಧವಾಗಿದೆ. 'ವಕ್ತೃಶ್ರೋತೃ-ಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ಪೂರ್ವವಾಕ್ಯದಿಂದ ಉಪಾಧಿಗೆ ಸಾಧನವ್ಯಾಪಕತ್ವವು

ಸಿದ್ಧವಾಯಿತು. 'ಆಪ್ತವಾಕ್ಯತಯಾ ತೇನ' ಎಂಬುದರಿಂದ ವಕ್ತ್ರಾದ್ಯಾನುಕೂಲ್ಯವನ್ನು ಸಾಧನ ಮಾಡು-ತ್ತಿದ್ದೀರಿ. ಇದು ಅನಾವಶ್ಯಕ. ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧನ ಮಾಡಿರುವುದೇ ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ. ಇದು ಪೂರ್ವವಾಕ್ಯದಿಂದಲೇ ತೋರಿಸಿದ ಮೇಲೆ ಮುಂದಿನವಾಕ್ಯವು ಅನಾವಶ್ಯಕ. ಹೀಗೆ ಪ್ರಶ್ನಿಸಬಾರದು.

ಉಪಾಧಿಯನ್ನು ಪಕ್ಷದಲ್ಲಿ ಸಾಧಿಸಿದ್ದು ಸಾಧನವ್ಯಾಪಕತ್ವದ ಪ್ರದರ್ಶನಕ್ಕಾಗಿ ಸರ್ವಥಾ ಅಲ್ಲ. ಆ ಉಪಾಧಿಯಿಂದ ಪಕ್ಷದಲ್ಲಿ ಸಾಧ್ಯಸಿದ್ಧಿ ಆಗಬೇಕಾಗಿದೆ. ಆದ್ದರಿಂದ 'ವಕ್ತೃಶ್ರೋತೃಪ್ರಸಕ್ತೀನಾಂ ಎಂಬ ವಾಕ್ಯವು ಉಪಾಧಿಗೆ ಸಾಧನವ್ಯಾಪಕತ್ವದ ಪ್ರದರ್ಶನಕ್ಕಾಗಿ ಹೊರಟಿದೆ. 'ಆಪ್ತವಾಕ್ಯತಯಾ ತೇನ' ಎಂಬ ವಾಕ್ಯವು ಇದೇ ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಎಂದು ತಿಳಿಯಬೇಕು. ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವದ ಸಾಧನೆಯು ಸಾಧನವ್ಯಾಪಕತ್ವದ ಪ್ರದರ್ಶನ-ಕ್ಕಾಗಿ ಸರ್ವಥಾ ಅಲ್ಲ. ಈ ಆಪ್ತವಾಕ್ಯತ್ವದಿಂದ ಮುಂದೆ ಪ್ರಾಮಾಣ್ಯಸಮರ್ಥನೆ ಮಾಡುವುದೇ ಉದ್ದೇಶವಾಗಿದೆ. ಈ ಆಶಂಕೆಯು ಕೂಡ ತಪ್ಪು. ಇದನ್ನು ಯಾವಾಗ ಒಪ್ಪಬಹುದಿತ್ತು ಎಂದರೆ ಒಂದು ವೇಳೆ ಪಕ್ಷದಲ್ಲಿ ಪ್ರಾಮಾಣ್ಯದ ಸಿದ್ಧಿಗೋಸ್ಕರ ಮೊದಲೇ ಆಪ್ತವಾಕ್ಯತ್ವವನ್ನು ಸಾಧನ ಮಾಡಿದ್ದರೆ ಈ ಪ್ರಯೋಜನವನ್ನು ಹೇಳಬಹುದಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಮತ್ತೇನೆಂದರೆ ಪ್ರಾಮಾಣ್ಯದ ಸಿದ್ಧಿಗೋಸ್ಕರ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಸಾಧನಾಂತರವನ್ನು ಪ್ರಯೋಗಿಸಿದ್ದೇವೆ. ಅಲ್ಲಿ ಆಪ್ತ-ವಾಕ್ಯತ್ವವು ಉಪಾಧಿಯಾಗಿದೆ ಎಂಬ ಆಶಂಕೆಯು ಪ್ರಸಕ್ತವಾದರೆ ಅದರ ಪರಿಹಾರಕ್ಕಾಗಿ ಸಾಧನ-ವ್ಯಾಪಕತ್ವವನ್ನು ಹೇಳಿದ್ದೇವೆ. ಈಗ ವಕ್ತ್ರಾದ್ಯಾನುಕೂಲ್ಯಮತ್ತ್ವವು ನಿರುಪಾಧಿಕವಾಗಿ ನಿರ್ದುಷ್ಟವಾಯಿತು. ಇಂಥ ಸಾಧನೆಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು ಹೊರತು ಉಪಾಧಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ನ್ಯಾಯವಲ್ಲ. ಇದು ವ್ಯರ್ಥವೇ ಆಗಿದೆ ಈ ಅಭಿಪ್ರಾಯದಿಂದ 'ನ ಹಿ' ಎಂಬ ವಾಕ್ಯವು ಹೊರಟಿದೆ.

## ವಾದ ಮಾಡುವವರ ಸಂಪ್ರದಾಯಕ್ಕೆ ವಿರುದ್ಧವಾದ ಆಕ್ಷೇಪವಿದು

ಯಾದುಪತ್ಯ – ಅತ್ರ ವ್ಯಾಖ್ಯಾಯತಾಮಿತಿ ॥ 'ಗುರುರ್ಗುರೂಣಾಮ್' ಇತಿ ಶ್ಲೋಕೇ ಇತ್ಯರ್ಥಃ । 'ಗುರುರ್ಗುರೂಣಾಮ್' ಇತಿ ಹೇತುಸಿದ್ಧಾನುಕೂಲವಕ್ತ್ರಾದಿಮತ್ತ್ವಂ ಸಾಕ್ಷಾತ್ ಪ್ರಾಮಾಣ್ಯಾನುಮಾಪಕಮೇವಾಸ್ತು । ನ ತ್ವಾಪ್ತವಾಕ್ಯತಾನುಮಿತಿದ್ವಾರಾ ಇತ್ಯರ್ಥಃ । ಶಂಕಿತ-ಸ್ಯೋಪಾಧೇರಿತಿ ॥ ಆಪ್ತವಾಕ್ಯತ್ವರೂಪಸ್ಯೋಪಾಧೇರಿತ್ಯರ್ಥಃ ।

ಉತ್ತರವಾಕ್ಯೇತಿ ॥ ಅತ್ರ ಹಿ ಆಪ್ತವಾಕ್ಯತ್ವೇನೈವ ಪ್ರಾಮಾಣ್ಯಾನುಮಾನಮವಗಮ್ಯತ ಇತಿ ಭಾವಃ । ನನು 'ವಕ್ತೃಶ್ರೋತೃಪ್ರಸಕ್ತೀನಾಮ್' ಇತ್ಯತ್ರ ಉಪಾಧೇಃ ಪಕ್ಷೇ ಸಾಧನವ್ಯಾಪಕತಾಂ ವ್ಯುತ್ಪಾದ್ಯ, ತೇನ ಸಿದ್ಧೇನ ಆಪ್ತವಾಕ್ಯತ್ವರೂಪೋಪಾಧಿನಾ ಪ್ರಾಮಾಣ್ಯಂ ಸಾಧಯಿತುಂ 'ಆಪ್ತ-ವಾಕ್ಯತಯಾ' ಇತಿ ವಾಕ್ಯಮ್, ಅತೋ ನ ವೈಯರ್ಥ್ಯಮಿತ್ಯತ ಆಹ – ನ ಹಿ ಉಪಾಧಿಂ ದೂಷಯತಾ ಇತಿ ॥ ತಥಾ ಚ ಕಥಕಸಂಪ್ರದಾಯವಿರೋಧ ಇತಿ ಭಾವಃ ।

'ಅತ್ರ ವ್ಯಾಖ್ಯಾಯತಾಮ್' – 'ಗುರುರ್ಗುರೂಣಾಂ' ಎಂಬ ಶ್ಲೋಕದಲ್ಲಿ ಎಂದರ್ಥ. ಗುರುರ್ಗುರೂಣಾಂ ಎಂಬ ಹೇತುಸಿದ್ಧವಾದ ಅನುಕೂಲವಕ್ತ್ರಾದಿಮತ್ವವನ್ನು ಪ್ರಾಮಾಣ್ಯಕ್ಕೆ ಹೇತುವೆಂದು ಹೇಳಬಹುದು. ಆಪ್ತವಾಕ್ಯತ್ವವನ್ನು ಅನುಮಾನ ಮಾಡುವ ಮೂಲಕ ಅನುಮಾಪಕ ಎಂದು ಏಕೆ ಹೇಳಬೇಕು ಎಂದರ್ಥ.

'ಶಂಕಿತಸ್ಯ ಉಪಾಧೇಃ' – 'ಆಪ್ತವಾಕ್ಯತ್ವರೂಪ ಉಪಾಧಿಗೆ' ಎಂದರ್ಥ.

'ಉತ್ತರವಾಕ್ಯವೈಯರ್ಥ್ಯಪ್ರಸಂಗಾತ್' – 'ಆಪ್ತವಾಕ್ಯತಯಾ ತೇನ' ಎಂಬ ಶ್ಲೋಕದಲ್ಲಿ ಆಪ್ತ-ವಾಕ್ಯತ್ವದಿಂದಲೇ ಪ್ರಾಮಾಣ್ಯವನ್ನು ಅನುಮಾನ ಮಾಡಬೇಕೆಂಬುದು ಸ್ಪಷ್ಟವಾಗಿ ತಿಳಿಯುತ್ತಿದೆ ಎಂದರ್ಥ.

'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬಲ್ಲಿ ಉಪಾಧಿಗೆ ಪಕ್ಷದಲ್ಲಿ ಸಾಧನವ್ಯಾಪಕತ್ವವನ್ನು ತೋರಿಸಿ ಅದರಿಂದ ಸಿದ್ಧವಾದ ಆಪ್ತವಾಕ್ಯತ್ವವೆಂಬ ಉಪಾಧಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದಕ್ಕಾಗಿ 'ಆಪ್ತವಾಕ್ಯತಯಾ' ಎಂಬ ವಾಕ್ಯವು ಹೊರಟಿದೆ. ಆದ್ದರಿಂದ ವ್ಯರ್ಥವಲ್ಲ ಎಂಬ ಪ್ರಶ್ನೆಗೆ 'ನ ಹಿ ಉಪಾಧಿಮ್' ಎಂಬ ವಾಕ್ಯವು ಹೊರಟಿದೆ.

ವಿವರಣೆ – ವಕ್ತ್ರಾದ್ಯಾನುಕೂಲ್ಯಗಳಿಂದ ನೇರವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಬಹುದು. ಮಧ್ಯದಲ್ಲಿ ಆಪ್ತವಾಕ್ಯತ್ವವು ಅನಾವಶ್ಯಕ ಎಂಬುದಾಗಿ ಇಲ್ಲಿ ಪ್ರಶ್ನಿಸಲಾಗಿದೆ. ಆಚಾರ್ಯರು ಹೀಗೇಕೆ ಅನುಮಾನ ಮಾಡಿದ್ದಾರೆ? ಎಂಬುದು ಆಕ್ಷೇಪದ ಅಭಿಪ್ರಾಯವಲ್ಲ. ಆಚಾರ್ಯರ ವಾಕ್ಯಕ್ಕೆ ಹೀಗೇಕೆ ವ್ಯಾಖ್ಯಾನ ಮಾಡಬೇಕು? ಎಂಬುದಷ್ಟೇ ಇಲ್ಲಿ ಪ್ರಶ್ನಿಸುವವನ ಅಭಿಪ್ರಾಯ.

ನೇರವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡುವದಾದರೆ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯವು ವ್ಯರ್ಥವಾಗುತ್ತದಲ್ಲವೇ ಎಂಬ ಆತಂಕ ಬೇಡ; ಆಪ್ತವಾಕ್ಯತ್ವ ಎಂಬ ಉಪಾಧಿಗೆ ಸಾಧನ

ಅವ್ಯಾಪಕತ್ವ ಇರುವುದಿಲ್ಲ ಎಂಬುದರ ಸಮರ್ಥನೆ ಮಾಡುವುದಕ್ಕಾಗಿ ಅದು ಸಾರ್ಥಕವಾಗಿದೆ ಎಂದು ಆಶಂಕಿಸುತ್ತಾನೆ.

ಆದರೆ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯಕ್ಕೆ ಕಥಂಚಿತ್ ಸಾರ್ಥಕ್ಯವನ್ನು ಹೇಳಬಹುದು. 'ಆಪ್ತವಾಕ್ಯತಯಾ ತೇನ' ಎಂಬ ಮುಂದಿನ ವಾಕ್ಯಕ್ಕೆ ಸಾರ್ಥಕ್ಯವನ್ನು ಹೇಳಲು ಸಾಧ್ಯವಾಗುವುದೇ ಇಲ್ಲ. 'ಆಪ್ತವಾಕ್ಯತಯಾ ತೇನ' ಎಂಬ ಆಚಾರ್ಯರ ಮಾತಿನಿಂದಲೇ ಪ್ರಾಮಾಣ್ಯವನ್ನು ವಕ್ತ್ರಾದ್ಯಾನುಕೂಲ್ಯಗಳಿಂದ ನೇರವಾಗಿ ಸಾಧನೆ ಮಾಡಬಾರದೆಂದು ತಿಳಿಯುತ್ತದೆ. 'ಆಪ್ತವಾಕ್ಯತಯಾ ಚೈವ ಯುಕ್ತಿಮೂಲತಯಾ ತಥಾ । ಶ್ರುತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।' ಎಂಬುದಾಗಿ ಸ್ಪಷ್ಟವಾಗಿ ಪ್ರಾಮಾಣ್ಯದ ಜೊತೆ ಆಪ್ತವಾಕ್ಯತ್ವಕ್ಕೆ ವ್ಯಾಪ್ತಿಯನ್ನು ಆಚಾರ್ಯರು ಹೇಳಿದ್ದಾರೆ.

ಇನ್ನು ಉಪಾಧಿಗೆ ಪಕ್ಷದಲ್ಲಿ ಸಾಧ್ಯವ್ಯಾಪಕತ್ವವನ್ನು ತೋರಿಸಿ, ಆದರಿಂದ ಸಿದ್ಧವಾದ ಉಪಾಧಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಲು ಆಪ್ತವಾಕ್ಯತಯಾ ಎಂಬ ಶ್ಲೋಕವು ಸಾರ್ಥಕವಾಗಿದೆ ಎಂದು ಉತ್ತರಿಸಬೇಕು. ಆದರೆ ಯಾರು ಉಪಾಧಿಯನ್ನು ದೂಷಿಸುತ್ತಾನೋ ಅವನು ಸಾಧ್ಯ-ವ್ಯಾಪಕತ್ವವಿಲ್ಲ; ಅಥವಾ ಸಾಧನ ಅವ್ಯಾಪಕತ್ವವಿಲ್ಲ ಎಂದು ತೋರಿಸಿದರೆ ಸಾಕು. ಪುನಃ ಆ ಉಪಾಧಿಗೆ ಸಾಧ್ಯವ್ಯಾಪಕತ್ವವನ್ನು ತೋರಿಸಿ, ಆ ಹೇತುವಿನಿಂದ ಉಪಾಧಿಯನ್ನು ಪಕ್ಷದಲ್ಲಿ ಸಾಧನೆ ಮಾಡಿ ಆ ಉಪಾಧಿಯಿಂದ ಪಕ್ಷದಲ್ಲಿ ಹೇತುವನ್ನು ಸಾಧನೆ ಮಾಡಬೇಕೆಂಬ ಕುಲಧರ್ಮವು ಇರುವುದಿಲ್ಲ. ಇದು ಕಥಕರ ಸಂಪ್ರದಾಯಕ್ಕೆ ವಿರುದ್ಧವಾಗಿದೆ. ವಾದ ಮಾಡುವವರ ಸಂಪ್ರದಾಯಕ್ಕೆ ವಿರುದ್ಧವಾಗಿದೆ ಎಂದರ್ಥ.

ವಿಶೇಷವಿಚಾರ– ಎಲ್ಲಿ ಹೇತು ಇದೆಯೋ ಅಲ್ಲಿ ಸಾಧ್ಯ ಇದೆ, ಎಲ್ಲಿ ಸಾಧ್ಯ ಇಲ್ಲವೋ ಅಲ್ಲಿ ಹೇತು ಇಲ್ಲ ಎಂಬುದು ವ್ಯಾಪ್ತಿ ಎಂದೆನಿಸಿಕೊಳ್ಳುತ್ತದೆ. ಇಂಥ ಹೇತು ಪಕ್ಷದಲ್ಲಿರುವುದನ್ನೇ ಪಕ್ಷಧರ್ಮತಾ ಎಂದು ಕರೆಯುತ್ತಾರೆ. ಉದಾಹರಣೆ : ವಕ್ತ್ರಾನುಕೂಲ್ಯಕ್ಕೆ ಪ್ರಾಮಾಣ್ಯದ ವ್ಯಾಪ್ತಿ ಇದೆ. ವಕ್ತ್ರಾನುಕೂಲ್ಯ ಎಂಬುದು ಬ್ರಹ್ಮಮೀಮಾಂಸಾಶಾಸ್ತ್ರರೂಪ ಪಕ್ಷದಲ್ಲಿರುವುದರಿಂದ ಪಕ್ಷಧರ್ಮತಾ ಇದೆ ಎಂದೂ ತಿಳಿಯುತ್ತದೆ.

"ನಹಿ ಯತ್ ಯದ್ ವ್ಯಾಪಕಸ್ಯ ವ್ಯಾಪಕಂ ತತ್ ತಸ್ಯ ಅವ್ಯಾಪಕಮಿತಿ ಸಂಭವತಿ" ಯಾವ ಧರ್ಮ ಇನ್ನೊಂದು ಧರ್ಮಕ್ಕಿಂತ ಹೆಚ್ಚಿನ ಪದಾರ್ಥಗಳಲ್ಲಿರುತ್ತದೋ ಆ ಧರ್ಮ ವ್ಯಾಪಕ ಎಂದು ಕರೆಸಿಕೊಳ್ಳುತ್ತದೆ. ಉದಾಹರಣೆ: ಘಟತ್ವ ಎಂಬ ಧರ್ಮ ಘಟದಲ್ಲಿ ಇದೆ ಆದರೆ ಪೃಥಿವೀತ್ವ ಎಂಬ

ಧರ್ಮ ಘಟ, ಪಟ ಮೊದಲಾದ ಸಮಸ್ತಪಾರ್ಥಿವ ಪದಾರ್ಥಗಳಲ್ಲಿದೆ ಆದ್ದರಿಂದ "ಘಟತ್ವ", ಎಂಬ ಧರ್ಮಕ್ಕಿಂತ "ಪೃಥಿವೀತ್ವ" ಎಂಬ ಧರ್ಮ ವ್ಯಾಪಕ, ಹಾಗೆಯೇ ಪೃಥಿವೀತ್ವ ಎಂಬ ಧರ್ಮಕ್ಕಿಂತ ದ್ರವ್ಯತ್ವ ಎಂಬ ಧರ್ಮ ವ್ಯಾಪಕ. ಏಕೆಂದರೆ ಪೃಥಿವೀತ್ವ ಎಂಬುದು ಸಮಸ್ತಪೃಥಿವಿಯಲ್ಲಿ ಇದ್ದರೂ 'ಜಲ''ದಲ್ಲಿ ಇಲ್ಲ. ಆದರೆ "ದ್ರವ್ಯತ್ವ" ಎಂಬ ಧರ್ಮ ಪೃಥಿವೀ, ಜಲ ಮೊದಲಾದ ಎಲ್ಲಾ ದ್ರವ್ಯಗಳಲ್ಲಿಯೂ ಇದೆ. ಆದ್ದರಿಂದ "ದ್ರವ್ಯತ್ವ" ಎಂಬ ಧರ್ಮ ಪೃಥಿವೀತ್ವ ಎಂಬ ಧರ್ಮಕ್ಕಿಂತ ವ್ಯಾಪಕವಾಗಿದೆ. ಹೀಗೆ 'ದ್ರವ್ಯತ್ವ' ಎಂಬುದು ಘಟತ್ವಧರ್ಮಕ್ಕೆ ವ್ಯಾಪಕವಾದ ಪೃಥಿವೀತ್ವಕ್ಕೆ ವ್ಯಾಪಕ. ಹಾಗೇ ಘಟತ್ವ ಎಂಬ ಧರ್ಮಕ್ಕೂ ವ್ಯಾಪಕ ಆಗಿಯೇ ಆಗುತ್ತದೆ. ವ್ಯಾಪಕ ಅಲ್ಲ ಎಂದು ಹೇಳಲು ಬರುವುದಿಲ್ಲ. ಪ್ರಕೃತ ಪ್ರಾಮಾಣ್ಯ ಎಂಬ ಧರ್ಮ ವಕ್ತ್ರಾನುಕೂಲ್ಯವ್ಯಾಪಕವಾದ ಆಪ್ತವಾಕ್ಯತ್ವ ಎಂಬ ಧರ್ಮಕ್ಕೆ ವ್ಯಾಪಕ ಆಗಿರುವುದರಿಂದ ವಕ್ತ್ರಾನುಕೂಲ್ಯಕ್ಕೂ ವ್ಯಾಪಕ ಆಗಿಯೇ ಆಗಿರುತ್ತದೆ. ವ್ಯಾಪಕ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ.

## ಸುಧಾಪರಿಮಳಸಾರ

'ಗುರುರ್ಗುರೂಣಾಂ' ಎಂಬೀ ಪದ್ಯವನ್ನು ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಆಪ್ತವಾಕ್ಯ. ಆಪ್ತವಾಕ್ಯವಾದುದರಿಂದ ಪ್ರಮಾಣ ಎಂದು ಪರಂಪರೆಯನ್ನು ಆಶ್ರಯಿಸಿ ಪ್ರಾಮಾಣ್ಯಸಾಧನಪರ ಎಂದು ಯಾಕೆ ವ್ಯಾಖ್ಯಾನಿಸಿದ್ದು? ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಪ್ರಮಾಣ ಎಂದು ನೇರವಾಗಿಯೇ ಪ್ರಾಮಾಣ್ಯ-ಸಾಧನ ಪರ ಎಂದು ಯಾಕೆ ವ್ಯಾಖ್ಯಾನಿಸಬಾರದು. ವಕ್ತ್ರಾದ್ಯಾನುಕೂಲ್ಯ ಇರುವಲ್ಲೆಲ್ಲ ಆಪ್ತವಾಕ್ಯತ್ವ ಇರುವಂತೆ ಪ್ರಾಮಾಣ್ಯವೂ ಇದೆ. ಹೀಗೆ ವಕ್ತ್ರಾದ್ಯಾನುಕೂಲ್ಯವತ್ವ ಎಂಬ ಹೇತುವಿಗೆ ಆಪ್ತವಾಕ್ಯತ್ವ ಎಂಬ ಸಾಧ್ಯದೊಂದಿಗೆ ವ್ಯಾಪ್ತಿ ಇರುವಂತೆ ಪ್ರಾಮಾಣ್ಯ ಎಂಬ ಸಾಧ್ಯದೊಂದಿಗೂ ವ್ಯಾಪ್ತಿ ಇದೆ. ಆಪ್ತವಾಕ್ಯತ್ವವನ್ನು ಸಾಧಿಸುವಾಗ ಮತ್ತು ಪ್ರಾಮಾಣ್ಯವನ್ನು ಸಾಧಿಸುವಾಗಲೂ ಶಾಸ್ತ್ರವೇ ಪಕ್ಷವಾದುದರಿಂದ ಶಾಸ್ತ್ರದಲ್ಲಿ ಆಪ್ತವಾಕ್ಯತ್ವ ಇರುವಂತೆ ವಕ್ತ್ರಾದ್ಯಾ-ನುಕೂಲ್ಯವೂ ಇರುವುದರಿಂದ ಎರಡು ಹೇತುಗಳಿಗೆ ಪಕ್ಷಧರ್ಮತಾ ಇದೆ. ವಕ್ತ್ರಾದ್ಯಾನುಕೂಲ್ಯಕ್ಕೆ ಪ್ರಾಮಾಣ್ಯವು ವ್ಯಾಪಕ ಆಗುವುದಿಲ್ಲ ಎಂದೇನೂ ಇಲ್ಲ. ಆಪ್ತವಾಕ್ಯತ್ವ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವಂತೆ ಅನುಕೂಲ-ವಕ್ತ್ರಾದಿಮತ್ವಪ್ರಾಮಾಣ್ಯಗಳಿಗೂ ವ್ಯಾಪ್ತಿ ಇದ್ದೇ ಇದೆ. ತನ್ನ ವ್ಯಾಪಕಕ್ಕೆ ವ್ಯಾಪಕವಾಗಿರುವುದು ತನಗೆ ವ್ಯಾಪಕ-ವಲ್ಲವೆಂದಾಗುವ ಸಂಭವವಿಲ್ಲ ತಾನೆ?

ವಕ್ತ್ರಾದ್ಯಾನುಕೂಲ್ಯ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವುದರಿಂದಷ್ಟೆ ವಕ್ತ್ರಾದ್ಯಾನುಕೂಲ್ಯದಿಂದ ನೇರವಾಗಿ ಪ್ರಾಮಾಣ್ಯಸಾಧನಪರ ಎಂದು ವ್ಯಾಖ್ಯಾನಿಸಬಹುದಿತ್ತಲ್ಲ ಎಂದಿಷ್ಟೇ ಆಕ್ಷೇಪವಲ್ಲ. ವಕ್ತ್ರಾದ್ಯಾನು-ಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧನ ಮಾಡಿದರೆ ದೋಷವೂ ಇದೆ. ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ,

ವಿವಕ್ಷಾ, ಕರಣಪಾಟವ ಈ ನಾಲ್ಕರ ಸಮುದಾಯವೇ ಆಪ್ತಿ ಎನಿಸುತ್ತದೆ. ಇದರಲ್ಲಿ ಅವಿಪ್ರಲಿಪ್ಸಾ ಒಂದುಳಿದು ಇತರ ಮೂರು ಸೇರಿದರೆ ಅದೇ ವಕ್ತ್ರಾದ್ಯಾನುಕೂಲ್ಯ. ಅಂದರೆ ವಕ್ತ್ರಾದ್ಯಾನುಕೂಲ್ಯವು ಆಪ್ತಿಯ ಏಕದೇಶವೇ. ಹೀಗೆ ಆಂಶಿಕವಾಗಿ ಆಪ್ತವಾಕ್ಯತ್ವ ಎಂಬ ಸಾಧ್ಯ ಮತ್ತು ವಕ್ತ್ರಾದ್ಯಾನುಕೂಲ್ಯ ಎಂಬ ಹೇತು ಎರಡೂ ಒಂದೇ ಆಯಿತು. ಸಾಧ್ಯವು ಸಂದಿಗ್ಧವಾಗಿರುವಂತೆ ಸಾಧ್ಯಾಭಿನ್ನವಾದ ಹೇತುವೂ ಸಂದಿಗ್ಧವಾದಂತಾಗಿ ಸಂದಿಗ್ಧಾಸಿದ್ಧಿ(ಪಕ್ಷದಲ್ಲಿ ಹೇತು ಇದೆಯೋ ಇಲ್ಲವೋ ಎಂಬ ಸಂದೇಹ) ಎಂಬ ದೋಷವು ಬರುವುದು. ಅಥವಾ ಹೇತುವು ಸಿದ್ಧವಾಗಿರುವಂತೆ ಸಾಧ್ಯವು ಸಿದ್ಧವಾದಂತಾಯಿತು. ಅದನ್ನು ಸಾಧನೆ ಮಾಡಿದರೆ ಸಿದ್ಧಸಾಧನತಾರೂಪದೋಷ ಬರುವುದು.

ಆಚಾರ್ಯರಿಗೆ ಅನುಕೂಲವಕ್ತ್ರಾದಿಮತ್ತ್ವದಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡುವುದರಲ್ಲಿ ತಾತ್ಪರ್ಯ ಇಲ್ಲವೆಂದಲ್ಲ. ''ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ'' ಎಂಬ ಮುಂದಿನ ಪದ್ಯ ವ್ಯರ್ಥವಾಗುತ್ತದೆ ಎಂಬ ಶಂಕೆ ಬೇಡ. ''ಬ್ರಹ್ಮಮೀಮಾಂಸಾಶಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ತ್ವಾತ್'' ಎಂಬ ಅನುಮಾನ-ಪ್ರಯೋಗ ಮಾಡಿದಾಗ ಶಂಕಿಸಿದ 'ಆಪ್ತವಾಕ್ಯತ್ವ' ಎಂಬ ಉಪಾಧಿಗೆ ಅನುಕೂಲವಕ್ತ್ರಾದಿಮತ್ತ್ವ ಎಂಬ ಸಾಧನವಿರುವ ಈ ಶಾಸ್ತ್ರದಲ್ಲಿ ಆಪ್ತವಾಕ್ಯತ್ವ ಎಂಬ ಉಪಾಧಿಯೂ ಇರುವುದರಿಂದ ಸಾಧನವ್ಯಾಪಕತ್ವವೇ ಇದೆ, ಸಾಧನಾ-ವ್ಯಾಪಕತ್ವವೂ ಇಲ್ಲ. ಆದುದರಿಂದ ಅದು ಉಪಾಧಿಯೇ ಅಲ್ಲ ಎಂದು ತಿಳಿಸಲು ಆ ವಾಕ್ಯ ಹೊರಟಿದೆ. ಆದ್ದರಿಂದ ಆ ವಾಕ್ಯವು ಸಾರ್ಥಕವಾಗಿದೆ ಎಂದಿಟ್ಟುಕೊಳ್ಳಬಹುದು.

ಹೀಗೆ ಅನುಕೂಲವಕ್ತ್ರಾದಿಮತ್ತ್ವರೂಪಹೇತುವಿನಿಂದ ಪ್ರಾಮಾಣ್ಯವನ್ನೇ ನೇರವಾಗಿ ಸಾಧನೆ ಮಾಡುವುದನ್ನು ಬಿಟ್ಟು ಮಧ್ಯೆ ಆಪ್ತವಾಕ್ಯತ್ವವನ್ನು ಸಾಧಿಸುವುದೇಕೆ?

ಇದಕ್ಕೆ ಸಮಾಧಾನ—ಅನುಕೂಲವಕ್ತ್ರಾದಿಮತ್ತ್ವರೂಪ ಹೇತುವಿನಿಂದ ಪ್ರಾಮಾಣ್ಯವನ್ನೇ ಸಾಧಿಸಿದರೆ ''ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ'' ಎಂಬ ವಾಕ್ಯದ ಮುಂದಿರುವ 'ಆಪ್ತವಾಕ್ಯತಯಾ ತೇನ....' ಎಂಬ ವಾಕ್ಯವು ವ್ಯರ್ಥವಾಗುತ್ತದೆ. ವಕ್ತ್ರಾದ್ಯಾನುಕೂಲ್ಯರೂಪವಾದ ಆಪ್ತಿ ಇರುವುದರಿಂದ ಸಿದ್ಧವಾದ ಆಪ್ತವಾಕ್ಯತ್ವ ಇರುವುದರಿಂದ ಶಾಸ್ತ್ರವು ಪ್ರಮಾಣ ಎಂದು ಅಲ್ಲಿ ಹೇಳಲಾಗಿದೆಯಷ್ಟೆ. ಇದರಿಂದ ವಕ್ತ್ರಾದ್ಯಾನುಕೂಲ್ಯಮತ್ತ್ವದಿಂದ ಆಪ್ತವಾಕ್ಯತ್ವವನ್ನು, ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸಿರುವುದು ತಿಳಿದು ಬರುತ್ತದೆ.

ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವು ಪಕ್ಷವಾದ ಶಾಸ್ತ್ರದಲ್ಲಿದೆ ಎಂದು ಸಾಧಿಸುವ ಮೂಲಕ ಆಪ್ತವಾಕ್ಯತ್ವ ಎಂಬ ಉಪಾಧಿಗೆ ಸಾಧನವ್ಯಾಪಕತ್ವವನ್ನು ಪ್ರತಿಪಾದಿಸಲು 'ಆಪ್ತವಾಕ್ಯತಯಾ.....' ಎಂಬ ವಾಕ್ಯ ಹೊರಟಿದೆ; ಆದುದರಿಂದ ನೇರವಾಗಿ ಪ್ರಾಮಾಣ್ಯಸಾಧನೆ ಎಂದಿಟ್ಟುಕೊಂಡರೂ ಆ ವಾಕ್ಯ ವ್ಯರ್ಥವೆನಿಸದು ಅನ್ನುವುದು ಸರಿಯಲ್ಲ. ''ವಕ್ತೃಶ್ರೋತೃಪ್ರಸಕ್ತೀನಾಂ.....'' ಎಂಬ ವಾಕ್ಯದಿಂದಲೇ ಉಪಾಧಿಗೆ ಸಾಧನವ್ಯಾಪಕತ್ವವನ್ನು ಸಮರ್ಥಿಸಿ -ದ್ದಾಯಿತು. ಪುನಃ ಅದಕ್ಕಾಗಿ ಮುಂದಿನ ವಾಕ್ಯದ ಆವಶ್ಯಕತೆಯೇನಿದೆ? ಉಪಾಧಿಗೆ ಸಾಧನವ್ಯಾಪಕತ್ವವನ್ನು

ಧರ್ಮ ಘಟ, ಪಟ ಮೊದಲಾದ ಸಮಸ್ತಪಾರ್ಥಿವ ಪದಾರ್ಥಗಳಲ್ಲಿದೆ ಆದ್ದರಿಂದ ''ಘಟತ್ವ'', ಎಂಬ ಧರ್ಮಕ್ಕಿಂತ ''ಪೃಥಿವೀತ್ವ'' ಎಂಬ ಧರ್ಮ ವ್ಯಾಪಕ, ಹಾಗೆಯೇ ಪೃಥಿವೀತ್ವ ಎಂಬ ಧರ್ಮಕ್ಕಿಂತ ದ್ರವ್ಯತ್ವ ಎಂಬ ಧರ್ಮ ವ್ಯಾಪಕ. ಏಕೆಂದರೆ ಪೃಥಿವೀತ್ವ ಎಂಬುದು ಸಮಸ್ತಪೃಥಿವಿಯಲ್ಲಿ ಇದ್ದರೂ 'ಜಲ''ದಲ್ಲಿ ಇಲ್ಲ. ಆದರೆ ''ದ್ರವ್ಯತ್ವ'' ಎಂಬ ಧರ್ಮ ಪೃಥಿವೀ, ಜಲ ಮೊದಲಾದ ಎಲ್ಲಾ ದ್ರವ್ಯಗಳಲ್ಲಿಯೂ ಇದೆ. ಆದ್ದರಿಂದ ''ದ್ರವ್ಯತ್ವ'' ಎಂಬ ಧರ್ಮ ಪೃಥಿವೀತ್ವ ಎಂಬ ಧರ್ಮಕ್ಕಿಂತ ವ್ಯಾಪಕವಾಗಿದೆ. ಹೀಗೆ 'ದ್ರವ್ಯತ್ವ' ಎಂಬುದು ಘಟತ್ವಧರ್ಮಕ್ಕೆ ವ್ಯಾಪಕವಾದ ಪೃಥಿವೀತ್ವಕ್ಕೆ ವ್ಯಾಪಕ. ಹಾಗೇ ಘಟತ್ವ ಎಂಬ ಧರ್ಮಕ್ಕೂ ವ್ಯಾಪಕ ಆಗಿಯೇ ಆಗುತ್ತದೆ. ವ್ಯಾಪಕ ಅಲ್ಲ ಎಂದು ಹೇಳಲು ಬರುವುದಿಲ್ಲ. ಪ್ರಕೃತ ಪ್ರಾಮಾಣ್ಯ ಎಂಬ ಧರ್ಮ ವಕ್ತ್ರಾನುಕೂಲ್ಯವ್ಯಾಪಕವಾದ ಆಪ್ತವಾಕ್ಯತ್ವ ಎಂಬ ಧರ್ಮಕ್ಕೆ ವ್ಯಾಪಕ ಆಗಿರುವುದರಿಂದ ವಕ್ತ್ರಾನುಕೂಲ್ಯಕ್ಕೂ ವ್ಯಾಪಕ ಆಗಿಯೇ ಆಗಿರುತ್ತದೆ. ವ್ಯಾಪಕ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ.

## ಸುಧಾಪರಿಮಳಸಾರ

'ಗುರುರ್ಗುರೂಣಾಂ' ಎಂಬೀ ಪದ್ಯವನ್ನು ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಆಪ್ತವಾಕ್ಯ. ಆಪ್ತವಾಕ್ಯವಾದುದರಿಂದ ಪ್ರಮಾಣ ಎಂದು ಪರಂಪರೆಯನ್ನು ಆಶ್ರಯಿಸಿ ಪ್ರಾಮಾಣ್ಯಸಾಧನಪರ ಎಂದು ಯಾಕೆ ವ್ಯಾಖ್ಯಾನಿಸಿದ್ದು? ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಪ್ರಮಾಣ ಎಂದು ನೇರವಾಗಿಯೇ ಪ್ರಾಮಾಣ್ಯ-ಸಾಧನ ಪರ ಎಂದು ಯಾಕೆ ವ್ಯಾಖ್ಯಾನಿಸಬಾರದು. ವಕ್ತ್ರಾದ್ಯಾನುಕೂಲ್ಯ ಇರುವಲ್ಲೆಲ್ಲ ಆಪ್ತವಾಕ್ಯತ್ವ ಇರುವಂತೆ ಪ್ರಾಮಾಣ್ಯವೂ ಇದೆ. ಹೀಗೆ ವಕ್ತ್ರಾದ್ಯಾನುಕೂಲ್ಯವತ್ವ ಎಂಬ ಹೇತುವಿಗೆ ಆಪ್ತವಾಕ್ಯತ್ವ ಎಂಬ ಸಾಧ್ಯದೊಂದಿಗೆ ವ್ಯಾಪ್ತಿ ಇರುವಂತೆ ಪ್ರಾಮಾಣ್ಯ ಎಂಬ ಸಾಧ್ಯದೊಂದಿಗೂ ವ್ಯಾಪ್ತಿ ಇದೆ. ಆಪ್ತವಾಕ್ಯತ್ವವನ್ನು ಸಾಧಿಸುವಾಗ ಮತ್ತು ಪ್ರಾಮಾಣ್ಯವನ್ನು ಸಾಧಿಸುವಾಗಲೂ ಶಾಸ್ತ್ರವೇ ಪಕ್ಷವಾದುದರಿಂದ ಶಾಸ್ತ್ರದಲ್ಲಿ ಆಪ್ತವಾಕ್ಯತ್ವ ಇರುವಂತೆ ವಕ್ತ್ರಾದ್ಯಾ-ನುಕೂಲ್ಯವೂ ಇರುವುದರಿಂದ ಎರಡು ಹೇತುಗಳಿಗೆ ಪಕ್ಷಧರ್ಮತಾ ಇದೆ. ವಕ್ತ್ರಾದ್ಯಾನುಕೂಲ್ಯಕ್ಕೆ ಪ್ರಾಮಾಣ್ಯವು ವ್ಯಾಪಕ ಆಗುವುದಿಲ್ಲ ಎಂದೇನೂ ಇಲ್ಲ. ಆಪ್ತವಾಕ್ಯತ್ವ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವಂತೆ ಅನುಕೂಲ-ವಕ್ತ್ರಾದಿಮತ್ವಪ್ರಾಮಾಣ್ಯಗಳಿಗೂ ವ್ಯಾಪ್ತಿ ಇದ್ದೇ ಇದೆ. ತನ್ನ ವ್ಯಾಪಕಕ್ಕೆ ವ್ಯಾಪಕವಾಗಿರುವುದು ತನಗೆ ವ್ಯಾಪಕ-ವಲ್ಲವೆಂದಾಗುವ ಸಂಭವವಿಲ್ಲ ತಾನೆ?

ವಕ್ತ್ರಾದ್ಯಾನುಕೂಲ್ಯ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವುದರಿಂದಷ್ಟೆ ವಕ್ತ್ರಾದ್ಯಾನುಕೂಲ್ಯದಿಂದ ನೇರವಾಗಿ ಪ್ರಾಮಾಣ್ಯಸಾಧನಪರ ಎಂದು ವ್ಯಾಖ್ಯಾನಿಸಬಹುದಿತ್ತಲ್ಲ ಎಂದಿಷ್ಟೇ ಆಕ್ಷೇಪವಲ್ಲ. ವಕ್ತ್ರಾದ್ಯಾನು-ಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧನ ಮಾಡಿದರೆ ದೋಷವೂ ಇದೆ. ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ,

ವಿವಕ್ಷಾ, ಕರಣಪಾಟವ ಈ ನಾಲ್ಕರ ಸಮುದಾಯವೇ ಆಪ್ತಿ ಎನಿಸುತ್ತದೆ. ಇದರಲ್ಲಿ ಅವಿಪ್ರಲಿಪ್ಸಾ ಒಂದುಳಿದು ಇತರ ಮೂರು ಸೇರಿದರೆ ಅದೇ ವಕ್ತ್ರಾದ್ಯಾನುಕೂಲ್ಯ. ಅಂದರೆ ವಕ್ತ್ರಾದ್ಯಾನುಕೂಲ್ಯವು ಆಪ್ತಿಯ ಏಕದೇಶವೇ. ಹೀಗೆ ಅಂಶಿಕವಾಗಿ ಆಪ್ತವಾಕ್ಯತ್ವ ಎಂಬ ಸಾಧ್ಯ ಮತ್ತು ವಕ್ತ್ರಾದ್ಯಾನುಕೂಲ್ಯ ಎಂಬ ಹೇತು ಎರಡೂ ಒಂದೇ ಆಯಿತು. ಸಾಧ್ಯವು ಸಂದಿಗ್ಧವಾಗಿರುವಂತೆ ಸಾಧ್ಯಾಭಿನ್ನವಾದ ಹೇತುವೂ ಸಂದಿಗ್ಧವಾದಂತಾಗಿ ಸಂದಿಗ್ಧಾಸಿದ್ಧಿ(ಪಕ್ಷದಲ್ಲಿ ಹೇತು ಇದೆಯೋ ಇಲ್ಲವೋ ಎಂಬ ಸಂದೇಹ) ಎಂಬ ದೋಷವು ಬರುವುದು. ಅಥವಾ ಹೇತುವು ಸಿದ್ಧವಾಗಿರುವಂತೆ ಸಾಧ್ಯವು ಸಿದ್ಧವಾದಂತಾಯಿತು. ಅದನ್ನು ಸಾಧನೆ ಮಾಡಿದರೆ ಸಿದ್ಧಸಾಧನತಾರೂಪದೋಷ ಬರುವುದು.

ಆಚಾರ್ಯರಿಗೆ ಅನುಕೂಲವಕ್ತ್ರಾದಿಮತ್ತ್ವದಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡುವುದರಲ್ಲಿ ತಾತ್ಪರ್ಯ ಇಲ್ಲವೆಂದಲ್ಲ. ''ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ'' ಎಂಬ ಮುಂದಿನ ಪದ್ಯ ವ್ಯರ್ಥವಾಗುತ್ತದೆ ಎಂಬ ಶಂಕೆ ಬೇಡ. ''ಬ್ರಹ್ಮಮೀಮಾಂಸಾಶಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ತ್ವಾತ್'' ಎಂಬ ಅನುಮಾನ-ಪ್ರಯೋಗ ಮಾಡಿದಾಗ ಶಂಕಿಸಿದ 'ಆಪ್ತವಾಕ್ಯತ್ವ' ಎಂಬ ಉಪಾಧಿಗೆ ಅನುಕೂಲವಕ್ತ್ರಾದಿಮತ್ತ್ವ ಎಂಬ ಸಾಧನವಿರುವ ಈ ಶಾಸ್ತ್ರದಲ್ಲಿ ಆಪ್ತವಾಕ್ಯತ್ವ ಎಂಬ ಉಪಾಧಿಯೂ ಇರುವುದರಿಂದ ಸಾಧನವ್ಯಾಪಕತ್ವವೇ ಇದೆ, ಸಾಧನಾ-ವ್ಯಾಪಕತ್ವವೂ ಇಲ್ಲ. ಆದುದರಿಂದ ಅದು ಉಪಾಧಿಯೇ ಅಲ್ಲ ಎಂದು ತಿಳಿಸಲು ಆ ವಾಕ್ಯ ಹೊರಟಿದೆ. ಆದ್ದರಿಂದ ಆ ವಾಕ್ಯವು ಸಾರ್ಥಕವಾಗಿದೆ ಎಂದಿಟ್ಟುಕೊಳ್ಳಬಹುದು.

ಹೀಗೆ ಅನುಕೂಲವಕ್ತ್ರಾದಿಮತ್ತ್ವರೂಪಹೇತುವಿನಿಂದ ಪ್ರಾಮಾಣ್ಯವನ್ನೇ ನೇರವಾಗಿ ಸಾಧನೆ ಮಾಡುವುದನ್ನು ಬಿಟ್ಟು ಮಧ್ಯೆ ಆಪ್ತವಾಕ್ಯತ್ವವನ್ನು ಸಾಧಿಸುವುದೇಕೆ?

ಇದಕ್ಕೆ ಸಮಾಧಾನ—ಅನುಕೂಲವಕ್ತ್ರಾದಿಮತ್ತ್ವರೂಪ ಹೇತುವಿನಿಂದ ಪ್ರಾಮಾಣ್ಯವನ್ನೇ ಸಾಧಿಸಿದರೆ ''ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ'' ಎಂಬ ವಾಕ್ಯದ ಮುಂದಿರುವ 'ಆಪ್ತವಾಕ್ಯತಯಾ ತೇನ....' ಎಂಬ ವಾಕ್ಯವು ವ್ಯರ್ಥವಾಗುತ್ತದೆ. ವಕ್ತ್ರಾದ್ಯಾನುಕೂಲ್ಯರೂಪವಾದ ಆಪ್ತಿ ಇರುವುದರಿಂದ ಸಿದ್ಧವಾದ ಆಪ್ತವಾಕ್ಯತ್ವ ಇರುವುದರಿಂದ ಶಾಸ್ತ್ರವು ಪ್ರಮಾಣ ಎಂದು ಅಲ್ಲಿ ಹೇಳಲಾಗಿದೆಯಷ್ಟೆ. ಇದರಿಂದ ವಕ್ತ್ರಾದ್ಯಾನುಕೂಲ್ಯಮತ್ತ್ವದಿಂದ ಆಪ್ತವಾಕ್ಯತ್ವವನ್ನು, ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸಿರುವುದು ತಿಳಿದು ಬರುತ್ತದೆ.

ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವು ಪಕ್ಷವಾದ ಶಾಸ್ತ್ರದಲ್ಲಿದೆ ಎಂದು ಸಾಧಿಸುವ ಮೂಲಕ ಆಪ್ತವಾಕ್ಯತ್ವ ಎಂಬ ಉಪಾಧಿಗೆ ಸಾಧನವ್ಯಾಪಕತ್ವವನ್ನು ಪ್ರತಿಪಾದಿಸಲು 'ಆಪ್ತವಾಕ್ಯತಯಾ.....' ಎಂಬ ವಾಕ್ಯ ಹೊರಟಿದೆ; ಆದುದರಿಂದ ನೇರವಾಗಿ ಪ್ರಾಮಾಣ್ಯಸಾಧನೆ ಎಂದಿಟ್ಟುಕೊಂಡರೂ ಆ ವಾಕ್ಯ ವ್ಯರ್ಥವೆನಿಸದು ಅನ್ನುವುದು ಸರಿಯಲ್ಲ. ''ವಕ್ತೃಶ್ರೋತೃಪ್ರಸಕ್ತೀನಾಂ.....'' ಎಂಬ ವಾಕ್ಯದಿಂದಲೇ ಉಪಾಧಿಗೆ ಸಾಧನವ್ಯಾಪಕತ್ವವನ್ನು ಸಮರ್ಥಿಸಿ -ದ್ದಾಯಿತು. ಪುನಃ ಅದಕ್ಕಾಗಿ ಮುಂದಿನ ವಾಕ್ಯದ ಆವಶ್ಯಕತೆಯೇನಿದೆ? ಉಪಾಧಿಗೆ ಸಾಧನವ್ಯಾಪಕತ್ವವನ್ನು

ಉಪಪಾದಿಸುವ ಮೂಲಕ ಅದನ್ನು ದೂಷಿಸುವುದೇ ಸಾಲದೆ ವಕ್ತ್ರಾದ್ಯಾನುಕೂಲ್ಯದಿಂದ ಪಕ್ಷದಲ್ಲಿ ಆಪ್ತವಾಕ್ಯತ್ವ ಎಂಬ ಉಪಾಧಿ ಇದೆ ಎಂದು ಸಾಧಿಸಿ ಆ ಉಪಾಧಿಯಿಂದ ಸಾಧ್ಯವನ್ನು ಸಾಧಿಸಬೇಕು ಎಂದು ಕಥಕರ ಸಂಪ್ರದಾಯವೇನು ಇಲ್ಲವಷ್ಟೆ.

## ನೆನೆಪಿಡಿ

* ಪ್ರಾಮಾಣ್ಯದ ಜೊತೆ ಆಪ್ತವಾಕ್ಯತ್ವಕ್ಕೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಹೇಗೆ ಇವೆಯೋ ಅದರಂತೆ ವಕ್ತ್ರಾದ್ಯಾನುಕೂಲ್ಯಮತ್ವ ಎಂಬುದಕ್ಕೂ ವ್ಯಾಪ್ತಿ ಹಾಗೂ ಪಕ್ಷ-ಧರ್ಮತಾಗಳು ಇರುತ್ತವೆ.

* 'ಯತ್ ಯದ್ ವ್ಯಾಪಕಸ್ಯ ವ್ಯಾಪಕಂ ತತ್ ತಸ್ಯ ಅವ್ಯಾಪಕಂ ಇತಿ ನ' 'ಯಾವುದು ಯಾವುದರ ವ್ಯಾಪಕಕ್ಕೆ ವ್ಯಾಪಕವಾಗಿರುತ್ತದೋ ಅದು ಅದಕ್ಕೆ ವ್ಯಾಪಕವಾಗಿರುವುದಿಲ್ಲ ಎಂದು ಹೇಳಲಾಗದು'. ಆದ್ದರಿಂದ ಪ್ರಾಮಾಣ್ಯದ ಜೊತೆ ವಕ್ತ್ರಾದ್ಯಾನುಕೂಲ್ಯವು ವ್ಯಾಪ್ತಿಯನ್ನು ಹೊಂದಿದೆ.

* ಸಾಧನಅವ್ಯಾಪಕತ್ವವು ಉಪಾಧಿಗೆ ಇಲ್ಲವೆಂದು ತಿಳಿಸುವುದಕ್ಕಾಗಿ ವಕ್ತೃಶ್ರೋತೃ-ಪ್ರಸಕ್ತೀನಾಂ ಎಂಬ ವಾಕ್ಯವು ಸಾರ್ಥಕವಾಗುತ್ತದೆ.

* ವಕ್ತ್ರಾದ್ಯಾನುಕೂಲ್ಯಗಳಿಂದ ಪ್ರಾಮಾಣ್ಯವನ್ನು ಆಚಾರ್ಯರು ಏಕೆ ನೇರವಾಗಿ ಸಾಧನೆ ಮಾಡಲಿಲ್ಲ? ಎಂಬುದು ಇಲ್ಲಿ ಮಾಡುತ್ತಿರುವ ಪ್ರಶ್ನೆಯಲ್ಲ. ಆಚಾರ್ಯರ ವಾಕ್ಯಕ್ಕೆ ಹೀಗೇಕೆ ವ್ಯಾಖ್ಯಾನ ಮಾಡಬೇಕು ಎಂಬುದಷ್ಟೇ ಪ್ರಶ್ನೆ.

* ಆಪ್ತವಾಕ್ಯತ್ವದ ಮೂಲಕ ಪ್ರಾಮಾಣ್ಯವನ್ನು ಸಾಧನೆ ಮಾಡದಿದ್ದರೆ ಹಿಂದಿನ ವಾಕ್ಯವು ಕಥಂಚಿತ್ ಸಾರ್ಥಕವಾಗಬಹುದು. ಆದರೆ 'ಆಪ್ತವಾಕ್ಯತಯಾ ತೇನ' ಎಂಬ ಮುಂದಿನ ವಾಕ್ಯವು ಸಾರ್ಥಕವಾಗದು.

* ಯಾರು ಉಪಾಧಿಗೆ ದೋಷ ಹೇಳುತ್ತಾರೋ ಅವರು ಸಾಧ್ಯವ್ಯಾಪಕತ್ವ ಇಲ್ಲ ಎನ್ನುತ್ತಾರೆ. ಅಥವಾ ಸಾಧನಅವ್ಯಾಪಕತ್ವ ಇಲ್ಲವೆನ್ನುತ್ತಾರೆ. ಇದನ್ನು ಬಿಟ್ಟು ಹೇತುವಿನಿಂದ ಉಪಾಧಿಯನ್ನು ಸಾಧಿಸಿ ಅದರಿಂದ ಸಾಧ್ಯಸಾಧನೆಗೆ ಪ್ರಯತ್ನಪಡುವುದಿಲ್ಲ.

* * * * *

## ಸಾಧ್ಯಾವೈಶಿಷ್ಟ್ಯದೋಷಶಂಕೆಗೆ ಅವಕಾಶವೇ ಇಲ್ಲ

**ಶ್ರೀಮನ್ನ್ಯಾಯಸುಧಾ– ಉಪಾಧೇಃ ಸಾಧನಾಭೇದಂ ಪ್ರದರ್ಶ್ಯ, ತೇನ ಸಾಧ್ಯಂ ಸಾಧ್ಯತ ಇತಿ ಚೇನ್ನ। ಆಪ್ತೇಃ ವಕ್ತೃಮಾತ್ರಧರ್ಮಸ್ಯ ಸಾಧನಾಭೇದಾನುಪಪತ್ತೇಃ। ಸಾಧ್ಯಾವಿಶಿಷ್ಟತಾ ತು ನಾಸ್ತ್ಯೇವ । ವಕ್ತ್ರಾದೀನಾಮಾನುಕೂಲ್ಯೇನ ವಕ್ತುರಾಪ್ತಿ-ಸಾಧನೇ ಖಲ್ವಂಶತಃ ಸಾ ಸ್ಯಾತ್ । ಅನುಕೂಲವಕ್ತ್ರಾದಿಮತ್ತಯಾ ಆಪ್ತವಾಕ್ಯತಾ ಸಾಧ್ಯತ ಇತಿ ಚೋಕ್ತಮ್ । ತಥಾಽಪಿ ಸಾಧ್ಯಸಾಧನಯೋಃ ಆಪ್ತ್ಯೇಕದೇಶಾನು-ಪ್ರವೇಶೋಽಸ್ತೀತಿ ಚೇತ್ । ಸತ್ಯಮ್ । ತಥಾಽಪಿ ವಿಶಿಷ್ಟಭೇದೇನ ಅದೋಷ-ತ್ವಾತ್ । ಅನ್ಯಥಾ 'ಯೋ ಧೂಮವಾನಸಾವಗ್ನಿಮಾನ್' ಇತಿ ವ್ಯಾಪ್ಯವ್ಯಾಪಕ-ಭಾವೋಽಪಿ ನ ಸ್ಯಾತ್ । ವಿಶೇಷ್ಯಾಂಶಸ್ಯೋಭಯತ್ರಾನುಪ್ರವೇಶಾತ್ । ಕೃತಕತ್ವಾನಿತ್ಯತ್ವಯೋಃ ಸತ್ತಾನುಪ್ರವೇಶೇಽಪಿ ಪರೈರ್ವ್ಯಾಪ್ಯವ್ಯಾಪಕಭಾವ-ಸ್ಯಾಂಗೀಕೃತತ್ವಾಚ್ಚ । ಯದಾ ತು 'ನಿರ್ದೋಷಃ, ಪ್ರಮಿತಸ್ಯೈವ ವಕ್ತಾ ಆಪ್ತಃ' ಇತ್ಯಾಶ್ರಿತಂ ತದಾ ಸಾಧ್ಯಾವಿಶಿಷ್ಟತಾಯಾಃ ಶಂಕೈವ ನಾಸ್ತಿ ।**

ಆಪ್ತವಾಕ್ಯತ್ವ ಎಂಬ ಉಪಾಧಿಯು ವಕ್ತ್ರಾದ್ಯಾನುಕೂಲ್ಯಮತ್ವ ಎಂಬ ಹೇತುವಿನಿಂದ ಅಭಿನ್ನವಾಗಿದೆ ಎಂದು ತಿಳಿದು ಇದರಿಂದ ಸಾಧ್ಯವನ್ನು ಸಾಧಿಸಬಹುದಲ್ಲವೇ?

ಇದು ತಪ್ಪು. ಏಕೆಂದರೆ ಆಪ್ತಿಯು ಕೇವಲ ವಕ್ತೃವಿನ ಧರ್ಮವಾಗಿದೆ. ಇದಕ್ಕೆ ವಕ್ತ್ರಾ-ದ್ಯಾನುಕೂಲ್ಯಮತ್ವವೆಂಬ ಹೇತುವಿನಿಂದ ಅಭೇದವನ್ನು ಹೇಳಲು ಸಾಧ್ಯವೇ ಇಲ್ಲ. ವಕ್ತ್ರಾದ್ಯಾನುಕೂಲ್ಯಮತ್ವ ಎಂಬ ಹೇತುವಿಗೆ ಆಪ್ತವಾಕ್ಯತ್ವ ಎಂಬ ಸಾಧ್ಯದ ಜೊತೆ ಅಭೇದವು ಸರ್ವಥಾ ಇರುವುದಿಲ್ಲ. ಅದು ಹೀಗೆ – ವಕ್ತ್ರಾದಿಗಳ ಆನುಕೂಲ್ಯದಿಂದ ವಕ್ತೃವಿಗೆ ಆಪ್ತಿಯನ್ನು ಸಾಧನೆ ಮಾಡುವುದಾದರೆ ವಕ್ತ್ರಾದ್ಯಾನುಕೂಲ್ಯವೆಂಬ ಅಂಶದಿಂದ ಸಾಧ್ಯ ಮತ್ತು ಹೇತುಗಳಿಗೆ ಅಭೇದವು ಪ್ರಾಪ್ತವಾಗಬಹುದು. ಆದರೆ ವಕ್ತ್ರಾದ್ಯಾನು-ಕೂಲ್ಯಮತ್ವ ಎಂಬ ಹೇತುವಿನಿಂದ ಆಪ್ತಿಯನ್ನು ಸಾಧಿಸುವುದಿಲ್ಲ. ಆಪ್ತವಾಕ್ಯತ್ವವನ್ನು ಸಾಧಿಸುತ್ತೇವೆ. ಈ ವಿಷಯವನ್ನು ಹಿಂದೆ ಸ್ಪಷ್ಟಪಡಿಸಿದ್ದೇವೆ.

ಆದರೂ ಕೂಡ ಆಪ್ತವಾಕ್ಯತ್ವ ಎಂಬ ಸಾಧ್ಯದಲ್ಲಿ ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ಧರ್ಮದಿಂದ ಕೂಡಿದ ಆಪ್ತಿಯು ಸೇರಿದೆ. ವಕ್ತ್ರಾನುಕೂಲ್ಯವೆಂಬ ಹೇತುವಿನಲ್ಲಿ ಈ ಆಪ್ತಿಯು ಅನುಪ್ರವಿಷ್ಟವಾಗಿದೆ. ಆದ್ದರಿಂದ ಅಂಶತಃ ಸಾಧ್ಯಸಾಧನಗಳಿಗೆ ಐಕ್ಯವು ಇದೆಯಲ್ಲವೇ?

ಹೌದು. ಆದರೆ ವಿಶಿಷ್ಟವಾದ ಆಪ್ತವಾಕ್ಯತ್ವವು ವಕ್ತ್ರಾದ್ಯಾನುಕೂಲ್ಯಮತ್ವವು ಬೇರೆ ಬೇರೆಯೇ ಆಗಿವೆ. ವಿಶೇಷಣಗಳಲ್ಲಿ ಸೇರಿದ ಏಕದೇಶದ ಹೇತು ಸಾಧ್ಯಗಳ ಐಕ್ಯವು ದೋಷವಾಗುವುದಿಲ್ಲ. ಹೀಗೆ ಒಪ್ಪದಿದ್ದರೆ 'ಯಃ ಧೂಮವಾನ್ ಅಸೌ ಅಗ್ನಿಮಾನ್' ಎಂಬುದಕ್ಕೂ ವ್ಯಾಪ್ಯವ್ಯಾಪಕಭಾವವು ಇಲ್ಲದೇ ಇರಬೇಕಾಗುತ್ತದೆ. ಏಕೆಂದರೆ ಎರಡೂ ಕಡೆ ವಿಶೇಷ್ಯಾಂಶವು ಸಮಾನವಾಗಿದೆ. ಮತ್ತು ಕೃತಕತ್ವ-ಅನಿತ್ಯತ್ವಗಳಲ್ಲಿ ಸತ್ತಾ ಎಂಬ ಅಂಶವು ಸಮಾನವಾಗಿದ್ದರೂ ಕೂಡ ಸಾಧ್ಯಸಾಧನಭಾವವನ್ನು ಪರರು ಅಂಗೀಕಾರ ಮಾಡಿದ್ದಾರೆ.

ವಿವಕ್ಷಿತಾರ್ಥತತ್ವಜ್ಞಾನ ಮೊದಲಾದ ಧರ್ಮಗಳಿಂದ ಕೂಡಿದ್ದನ್ನು ಆಪ್ತಿಲಕ್ಷಣವೆಂದು ಒಪ್ಪಿದರೆ ಈ ಸಮಸ್ಯೆ. ಒಂದು ವೇಳೆ 'ನಿರ್ದೋಷಃ ಆಪ್ತಃ' 'ಪ್ರಮಿತಸ್ಯೈವ ವಕ್ತಾ ಆಪ್ತಃ' ಎಂಬ ಉಳಿದೆರಡು ಆಪ್ತನ ಲಕ್ಷಣಗಳನ್ನು ಅಂಗೀಕಾರ ಮಾಡಿದ ಪಕ್ಷದಲ್ಲಿ ಸಾಧ್ಯಾ-ವೈಶಿಷ್ಟ್ಯದ ಆಕ್ಷೇಪಕ್ಕೆ ಅವಕಾಶವೇ ಇರುವುದಿಲ್ಲ.

## ಸನ್ನ್ಯಾಯರತ್ನಾಳಿಯಲ್ಲಿ ಉಪಾಧಿಗೂ ಹೇತುವಿಗೂ ಐಕ್ಯವನ್ನು ಹೇಳಿದ್ದಾರಲ್ಲವೇ?

ಪರಿಮಳ– ನನು ವಕ್ತೃಶ್ರೋತ್ರಿತ್ಯರ್ಥಂ ಭವದ್ವ್ಯಾಖ್ಯಾನರೀತ್ಯಾ 'ಯತ್ ಯತ್ರ' ಇತ್ಯಾಶ್ರಿತ್ಯೋಪಾಧೇರ್ನ ಸಾಧನವ್ಯಾಪಕತ್ವಪ್ರದರ್ಶನಾರ್ಥಂ ಪ್ರವೃತ್ತಮ್ । ಕಿಂತು 'ಇದಮೇವ ಹ್ಯಾಪ್ತತ್ವಂ ಯದ್ವಕ್ತೃಶ್ರೋತೃಪ್ರಸಕ್ತ್ಯಾನುಕೂಲ್ಯಮ್' ಇತಿ ಸನ್ನ್ಯಾಯರತ್ನಾ-ವಲ್ಯುಕ್ತ್ಯಾನುಕೂಲವಕ್ತ್ರಾದಿಮತ್ವರೂಪಸಾಧನಸ್ಯ ಆಪ್ತವಾಕ್ಯತ್ವರೂಪೋಪಾಧೇಶ್ಚಾಭೇದಂ

ದರ್ಶಯಿತುಮ್ 'ಆಪ್ತವಾಕ್ಯತಯಾ ತೇನ' ಇತ್ಯೇತತ್ ತು ಯಸ್ಮಾದಭೇದಸ್ತೇನ ಕಾರಣೇ-ನಾಪ್ತವಾಕ್ಯತಯಾ ಹೇತುನಾ ಮಾನಮ್ ಇತಿ ಪೂರ್ವೇಣಾನ್ವಿತತಯಾ ಪ್ರವೃತ್ತಮಿತ್ಯೇವ ಯೋಜ್ಯತ ಇತ್ಯಾಶಂಕ್ಯಾಹ – ಉಪಾಧೇರಿತಿ ॥

'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಅರ್ಧಪಾದವು ನಿಮ್ಮ ವ್ಯಾಖ್ಯಾನದಂತೆ 'ಯತ್ ಯತ್ರ' ಎಂಬ ಅರ್ಥವನ್ನು ಹೇಳಿ, ಉಪಾಧಿಯು ಸಾಧನವ್ಯಾಪಕವಾಗಿದೆ ಎಂಬುದನ್ನು ತೋರಿಸಲು ಹೊರಟಿರುವುದಿಲ್ಲ ಎಂದು ಅಂಗೀಕರಿಸೋಣ. ಆದರೆ ವಕ್ತೃಶ್ರೋತೃಪ್ರಸಕ್ತಿಗಳ ಅನುಕೂಲ್ಯವೇ ಆಪ್ತಿ ಎಂದು ಕರೆಸಿಕೊಳ್ಳುತ್ತದೆ. ಹೀಗೆ ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳಿಯಲ್ಲಿ ಹೇಳಿದ್ದಾರೆ. ಆದ್ದರಿಂದ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಹೇತು ಬೇರೆ ಅಲ್ಲ; ಆಪ್ತವಾಕ್ಯತ್ವ-ವೆಂಬ ಉಪಾಧಿಯು ಬೇರೆ ಅಲ್ಲ, ಒಂದೇ ಆಗಿವೆ. ಇದನ್ನು ತಿಳಿಸುವುದಕ್ಕಾಗಿಯೇ 'ಆಪ್ತವಾಕ್ಯ-ತಯಾ ತೇನ' ಎಂಬುದಾಗಿ ಹೇತುಸಾಧ್ಯಗಳಲ್ಲಿ ಯಾವ ಕಾರಣದಿಂದ ಅಭೇದವಿದೆಯೋ ಆ ಕಾರಣದಿಂದ 'ಆಪ್ತವಾಕ್ಯತಯಾ' ಆಪ್ತವಾಕ್ಯತ್ವರೂಪವಾದ ವಕ್ತ್ರಾದ್ಯಾನುಕೂಲ್ಯಮತ್ತ್ವವೆಂಬ ಹೇತುವಿನಿಂದ ಈ ಶಾಸ್ತ್ರವು ಪ್ರಮಾಣವಾಗಿದೆ. ಈ ಕ್ರಮದಲ್ಲಿ ಹಿಂದೆ ಪ್ರಸಕ್ತವಾದ 'ಮಾನಮ್' ಎಂಬ ಪದದ ಜೊತೆ ಅನ್ವಯವನ್ನು ಹೊಂದುತ್ತದೆ. ಹೀಗೇಕೆ ತಿಳಿಯಬಾರದು?

ಈ ಆಶಂಕೆಗೆ ಉತ್ತರವನ್ನು ನೀಡುವುದಕ್ಕಾಗಿ 'ಉಪಾಧೇಃ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ - 'ಇದಮೇವ ಹಿ ಆಪ್ತತ್ವಂ ಯದ್ವಕ್ತೃಶ್ರೋತೃಪ್ರಸಕ್ತ್ಯಾನುಕೂಲ್ಯಂ' ಎಂಬುದಾಗಿ ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳಿಯಲ್ಲಿ ವಕ್ತ್ರಾದ್ಯಾನುಕೂಲ್ಯಮತ್ತ್ವವೇ ಆಪ್ತವಾಕ್ಯತ್ವವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಇವೆರಡಕ್ಕೆ ಐಕ್ಯವನ್ನು ತಿಳಿದು ವಕ್ತ್ರಾದ್ಯಾನುಕೂಲ್ಯಮತ್ತ್ವವೆಂಬ ಹೇತುವಿನಿಂದ ಪ್ರಾಮಾಣ್ಯವನ್ನು ನೇರವಾಗಿಯೇ ಸಾಧನೆ ಮಾಡಬಹುದಲ್ಲವೇ ಎಂಬುದು ಆಕ್ಷೇಪದ ಅಭಿಪ್ರಾಯ.

## ಸನ್ನ್ಯಾಯರತ್ನಾವಳಿ, ನಯಚಂದ್ರಿಕಾ, ನ್ಯಾಯಸುಧೆಗಳ ಅಭಿಪ್ರಾಯ ಒಂದೇ ಆಗಿದೆ

ಪರಿಮಳ– ತೇನೇತಿ ॥ ಸಾಧನಾಭಿನ್ನೋಪಾಧಿನಾ ಪ್ರಾಮಾಣ್ಯರೂಪಂ ಸಾಧ್ಯಮಿ-ತ್ಯರ್ಥಃ । ಮೂಲೇ 'ಆಪ್ತಿಃ' ಇತ್ಯೇವ ಶ್ರವಣಾದಾಹ – ಆಪ್ತೇರಿತಿ ॥ ಅತ ಏವ ನಯ-

ಚಂದ್ರಿಕಾಯಾಂ 'ಸ ವೈ ಬಲಂ ಬಲಿನಾಂ ಚಾಪರೇಷಾಮ್ ಇತ್ಯಾದಾವಿವ ಯದಾಪ್ತಿರನುಕೂಲತಾ ಇತಿ ನಿಮಿತ್ತನೈಮಿತ್ತಿಕಯೋರಭೇದವ್ಯವಹಾರಃ' ಇತ್ಯುಕ್ತಮ್ । ನನು ಭವತ್ಪಕ್ಷೇ ಸಾಧ್ಯಾವಿಶಿಷ್ಟತಾ ಇತ್ಯುಕ್ತಮಿತ್ಯತ ಆಹ – ಸಾಧ್ಯೇತಿ ॥ ಇತಿ ಚೋಕ್ತಮಿತಿ ॥ 'ವಕ್ತಿ'ತ್ಯರ್ಥಾವತಾರಿಕಾಯಾಮ್ ಇತ್ಯರ್ಥಃ।

'ತೇನ' – ಸಾಧನದಿಂದ ಅಭಿನ್ನವಾದ ಉಪಾಧಿಯಿಂದ ಎಂದರ್ಥ. ಇದರಿಂದ ಸಾಧ್ಯವಾದ ಪ್ರಾಮಾಣ್ಯವನ್ನು ಸಾಧಿಸುವುದು ಎಂಬುದು ಇದರ ಅಭಿಪ್ರಾಯ. ಮೂಲದಲ್ಲಿ ಆಪ್ತಿಃ ಎಂದು ಶ್ರುತವಾಗುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ 'ಆಪ್ತೇಃ' ಎಂದು ಉತ್ತರಿಸುತ್ತಿದ್ದಾರೆ. ಆದ್ದರಿಂದಲೇ ನಯಚಂದ್ರಿಕಾಗ್ರಂಥದಲ್ಲಿ 'ಸ ವೈ ಬಲಂ ಬಲಿನಾಂ ಚಾಪರೇಷಾಮ್' ಎಂಬ ಪ್ರಯೋಗದಂತೆ ಯದಾಪ್ತಿರನುಕೂಲತಾ ಎಂಬಲ್ಲೂ ಕೂಡ ವಕ್ತ್ರಾದ್ಯಾನುಕೂಲ್ಯತೆಗೆ ಆಪ್ತಿಯು ನಿಮಿತ್ತವಾಗಿದೆ ಎಂಬ ಅಭಿಪ್ರಾಯದಲ್ಲಿ ಅಭೇದವ್ಯವಹಾರವನ್ನು ಮಾಡಿದ್ದಾರೆಂದು ತಿಳಿಯಬೇಕು.

ನೀವೂ ಸಹ ವಕ್ತ್ರಾದ್ಯಾನುಕೂಲ್ಯಮತ್ವ ಎಂಬ ಹೇತುವಿನಿಂದ ಆಪ್ತವಾಕ್ಯತ್ವವನ್ನು ಸಾಧಿಸುವ ಅನುಮಾನದಲ್ಲಿ ಸಾಧ್ಯಾವೈಶಿಷ್ಟ್ಯದೋಷವನ್ನು ಆಕ್ಷೇಪಮಾಡಿಕೊಂಡಿದ್ದೀರಲ್ಲವೇ? ಈ ಪ್ರಶ್ನೆಗೆ 'ಸಾಧ್ಯಾವಿಶಿಷ್ಟತಾ ತು' ಎಂಬುದರಿಂದ ಉತ್ತರಿಸಿದ್ದಾರೆ. 'ಇತಿ ಚೋಕ್ತಮ್' – 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ಶ್ಲೋಕಾರ್ಥಕ್ಕೆ ಅವತಾರಿಕೆ ನೀಡುವ ಸಂದರ್ಭದಲ್ಲಿ ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಸಾಧಿಸುತ್ತಿದ್ದಾರೆಂದು ಹೇಳಲಾಗಿದೆ ಎಂದರ್ಥ.

ವಿವರಣೆ – ಹೇತುವಿನಿಂದ ಅಭಿನ್ನವಾದ ಉಪಾಧಿಯಿಂದ ಸಾಧ್ಯವನ್ನು ಸಾಧಿಸಬಹುದಲ್ಲವೇ? ಎಂಬ ಪ್ರಶ್ನೆಯು ತಪ್ಪು. ಏಕೆಂದರೆ ಆಪ್ತಿಯು ಕೇವಲ ವಕ್ತೃವಿನಲ್ಲಿರುವ ಧರ್ಮವಾಗಿದೆ. ಆದರೆ ಸಾಧನವು ಕೇವಲ ವಕ್ತೃನಿಷ್ಠವಾದ ಧರ್ಮವಾಗಿಲ್ಲ. ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳೂ ಕೂಡ ಅದರಲ್ಲಿ ಸೇರಿವೆ. ಆದ್ದರಿಂದ ಐಕ್ಯವನ್ನು ಹೇಳಲು ಸಾಧ್ಯವೇ ಇಲ್ಲ.

ಹಾಗಾದರೆ 'ಯದಾಪ್ತಿರನುಕೂಲತಾ' ಎಂಬಲ್ಲಿ ಆಪ್ತಿಗೂ ವಕ್ತ್ರಾದ್ಯಾನುಕೂಲ್ಯಕ್ಕೂ ಐಕ್ಯವನ್ನು ಹೇಳಿದ್ದಾರಲ್ಲವೇ ಎಂಬ ಪ್ರಶ್ನೆಗೆ ನಯಚಂದ್ರಿಕೆಯಲ್ಲಿ ಉತ್ತರಿಸಿದ್ದಾರೆ. 'ಸ ವೈ ಬಲಂ ಬಲಿನಾಂ ಚಾಪರೇಷಾಮ್' ಎಂಬುದಾಗಿ ಪ್ರಹ್ಲಾದರಾಜರು ತಂದೆಯ ಬಳಿ ಹೇಳುತ್ತಾರೆ. ನಮ್ಮೆಲ್ಲರ ಬಲ ಆ

ಪರಮಾತ್ಮನದ್ದೇ ಆಗಿದೆ' ಎಂದು. ನಮ್ಮ ಬಲಕ್ಕೂ ಪರಮಾತ್ಮನ ಬಲಕ್ಕೂ ಕೇವಲ ನಿಮಿತ್ತ-ನೈಮಿತ್ತಿಕ-ಭಾವವಿದೆಯೇ ಹೊರತು ಐಕ್ಯವು ಇರುವುದಿಲ್ಲ. ಎಲ್ಲಿ ನಿಮಿತ್ತ-ನೈಮಿತ್ತಕಭಾವವಿರುತ್ತದೋ ಅಲ್ಲಿ ಅಭೇದವ್ಯವಹಾರವಿರುವುದು ಲೋಕಸಿದ್ಧವಾಗಿದೆ. ಅದರಂತೆ ವಕ್ತ್ರಾದ್ಯನುಕೂಲ್ಯಕ್ಕೂ ಆಪ್ತಿಗೂ ನಿಮಿತ್ತ-ನೈಮಿತ್ತಿಕಭಾವವಿದೆ. ಹಾಗಾಗಿ ಯದಾಪ್ತಿರನುಕೂಲತಾ ಎಂಬಲ್ಲಿ ಐಕ್ಯಭಾವವು ಯುಕ್ತವಾಗುತ್ತದೆ.

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ಇದಮೇವ ಹಿ ಆಪ್ತತ್ವಂ ಯದ್ ವಕ್ತೃಶ್ರೋತೃಪ್ರಸಂಗಾ-ನುಕೂಲ್ಯಮ್' ಎಂಬ ಸನ್ನ್ಯಾಯರತ್ನಾವಲಿಯ ಮಾತನ್ನು ಕೂಡ ವ್ಯಾಖ್ಯಾನ ಮಾಡಿದಂತೆ ಆಯಿತು. ಸನ್ನ್ಯಾಯರತ್ನಾವಳಿಯಲ್ಲಿ ವಕ್ತೃಶ್ರೋತೃಪ್ರಸಂಗಾನುಕೂಲ್ಯಕ್ಕೂ ಆಪ್ತತ್ವಕ್ಕೂ ಸ್ಪಷ್ಟವಾಗಿ ಐಕ್ಯವನ್ನು ಹೇಳಿದಂತೆ ಕಾಣುತ್ತದೆ. ಇದನ್ನೂ ಸಹ 'ಸ ವೈ ಬಲಂ ಬಲಿನಾಂ ಚಾಪರೇಷಾಮ್' ಎಂಬ ಪ್ರಯೋಗದಂತೆ ನಿಮಿತ್ತ-ನೈಮಿತ್ತಿಕಗಳ ಅಭೇದವ್ಯವಹಾರವೆಂದು ತಿಳಿಯತಕ್ಕದ್ದು. ಆದ್ದರಿಂದ ಸನ್ನ್ಯಾಯರತ್ನಾವಳಿಕಾರರ ಅಭಿಪ್ರಾಯಕ್ಕೆ ವಿರುದ್ಧವಾಗಿ ನ್ಯಾಯಸುಧೆಯ ಅಭಿಪ್ರಾಯವೆಂದು ಸರ್ವಥಾ ತಿಳಿಯಬಾರದು.

## ಅಂಶೈಕ್ಯದಿಂದ ಹೇತುಸಾಧ್ಯಗಳ ಐಕ್ಯವು ಸರ್ವಥಾ ತಪ್ಪು

ಪರಿಮಳ– ಸತ್ತಾನುಪ್ರವೇಶೇಽಪೀತಿ ॥ 'ಉತ್ಪತ್ತಿರ್ನಾಮ ಕಾರಣಾಧೀನಸತ್ತಾಲಾಭಃ' ಇತ್ಯೇತದಧ್ಯಾಯಾಂತ್ಯಭಾಗೇ ವಕ್ಷ್ಯಮಾಣದಿಶಾ ವಾ ಪೂರ್ವಮಸತಃ ಸತ್ತಾಸಮ-ವಾಯವತ್ತ್ವಂ ವಾ ಕೃತಕತ್ವಮ್ । ಉತ್ತರಕಾಲಮಸತಃ ಪೂರ್ವಂ ಸತ್ತಾಸಮವಾಯವತ್ತ್ವಂ ವಾ, ಸತ್ತಾಸಂಬಂಧಾಪಗಮೋ ವಾ ಅನಿತ್ಯತ್ವಮ್ ಇತ್ಯೇವಂರೂಪೇಣೇತಿ ಭಾವಃ ।

'ಸತ್ತಾನುಪ್ರವೇಶೇಽಪಿ' – ಕಾರಣದ ಅಧೀನವಾಗಿರುವ ಸತ್ತಾ ಎಂಬ ಧರ್ಮವನ್ನು ಯಾವುದು ಹೊಂದಿರುತ್ತದೋ ಅದು ಉತ್ಪತ್ತಿ ಎಂದು ಕರೆಸಿಕೊಳ್ಳುತ್ತದೆ. ಹೀಗೆ ಅಧ್ಯಾಯದ ಕೊನೆಯಲ್ಲಿ ಹೇಳುವವರಿದ್ದಾರೆ. ಅಥವಾ ಮೊದಲು ಇಲ್ಲದೇ ಇರುವ ಪದಾರ್ಥಕ್ಕೆ ಸತ್ತಾ ಎಂಬ ಜಾತಿಯು ಅನಂತರ ಸೇರುವುದನ್ನು ಉತ್ಪತ್ತಿ ಎಂದು ಕರೆಯುತ್ತಾರೆ. ಹೀಗೆ ಕೃತಕತ್ವದಲ್ಲಿ ಸತ್ತಾ ಎಂಬುದು ಸೇರಿದೆ. ಇದರಂತೆ ಅನಿತ್ಯತ್ವದಲ್ಲೂ ಕೂಡ ಸತ್ತಾ ಎಂಬುದು ಸೇರಿದೆ. ಅದು ಹೀಗೆ – ಉತ್ತರಕಾಲದಲ್ಲಿ ಇಲ್ಲದಿರುವ ಸತ್ತಾ ಎಂಬ ಧರ್ಮವನ್ನು ಹೊಂದಿರುವುದೇ ಅನಿತ್ಯತ್ವ

ಎನಿಸುತ್ತದೆ. ಅಥವಾ ಉತ್ತರಕಾಲದಲ್ಲಿ ಸತ್ತಾ ಎಂಬ ಧರ್ಮದ ಸಂಬಂಧವು ನಾಶವಾಗುವುದನ್ನು ಅನಿತ್ಯತ್ವ ಎನ್ನುತ್ತಾರೆ. ಹೀಗೆ ಅನಿತ್ಯತ್ವ ಮತ್ತು ಕೃತಕತ್ವಗಳಲ್ಲಿ ಸತ್ತಾ ಎಂಬುದು ಘಟಕವಾಗಿದೆ.

ವಿವರಣೆ – ಏಕದೇಶದಲ್ಲಿ ಐಕ್ಯವಿದ್ದರೆ ಹೇತುಸಾಧ್ಯಗಳಿಗೆ ಐಕ್ಯವನ್ನು ಸರ್ವಥಾ ಹೇಳಬಾರದು. 'ಯತ್ರ ಕೃತಕತ್ವಂ ತತ್ರ ಅನಿತ್ಯತ್ವಂ' ಎಂಬ ವ್ಯಾಪ್ತಿಯು ನಿರ್ದುಷ್ಟವಾಗಿದೆ ಎಂಬುದು ಎಲ್ಲರಿಗೂ ಸಮ್ಮತವಾಗಿದೆ. ಆದರೆ ಇವುಗಳಲ್ಲೂ ಕೂಡ ಸತ್ತಾ ಎಂಬುದು ಸಮಾನವಾಗಿ ಸೇರಿರುವ ಧರ್ಮವಾಗಿದೆ. ಕೃತಕತ್ವ ಎಂದರೆ 'ಪೂರ್ವಂ ಅಸತಃ ಸತ್ತಾಸಮವಾಯವತ್ವಂ' ಎಂದರ್ಥ. ಅನಿತ್ಯತ್ವ ಎಂದರೆ 'ಉತ್ತರಕಾಲಂ ಅಸತಃ ಪೂರ್ವಂ ಸತ್ತಾ ಸಮವಾಯವತ್ವಂ' ಎಂದರ್ಥ. ಹೀಗೆ ಎರಡೂ ಲಕ್ಷಣಗಳಲ್ಲಿ ಸತ್ತಾ ಎಂಬ ಅಂಶವು ಸಮಾನವಾಗಿರುವುದರಿಂದ ಇಲ್ಲೂ ಕೂಡ ಸಾಧ್ಯಾವೈಶಿಷ್ಟ್ಯದೋಷವನ್ನು ಹೇಳಬೇಕಾದೀತು.

## ಆಪ್ತಿಗೂ ಹೇತುವಿಗೂ ಐಕ್ಯ ಹೇಳುವ ಮೂಲಕ ಹೇತು ಮತ್ತು ಉಪಾಧಿಗಳಿಗೆ ಐಕ್ಯವಿದೆಯೆಂದು ಆಕ್ಷೇಪ

ವಾಕ್ಯಾರ್ಥಚಂದ್ರಿಕಾ— ನನು ಮಾಽಸ್ತು 'ವಕ್ತೃಶ್ರೋತೃಪ್ರಸಕ್ತೀನಾಮ್' ಇತಿ ವಾಕ್ಯಸ್ಯ ಉಪಾಧಿಸಾಧನವ್ಯಾಪಕತಾಪ್ರದರ್ಶನಪರತ್ವಮುತ್ತವಾಕ್ಯವೈಯರ್ಥ್ಯಾಪತ್ತೇಃ ಅಪಿ ತು ಸಾಧನಾನುಪ್ರವಿಷ್ಟವಕ್ತ್ರಾದ್ಯಾನುಕೂಲ್ಯಸ್ಯ ಉಪಾಧ್ಯನುಪ್ರವಿಷ್ಟಾಪ್ತೇಶ್ಚಾಭೇದದರ್ಶನಮುಖೇನ ಸಾಧನೋಪಾಧ್ಯೋರಭೇದಂ ಪ್ರದರ್ಶ್ಯ ತೇನ ಸಾಧ್ಯಸಾಧನೇ ತಾತ್ಪರ್ಯಾಭ್ಯುಪಗಮೇನ ಉತ್ತರವಾಕ್ಯಾವೈಯರ್ಥ್ಯಮಿತಿ ಪ್ರಕಾರಾಂತರೇಣಾನ್ಯಥಾಸಿದ್ಧಿಂ ಶಂಕತೇ – ಉಪಾಧೇರಿತಿ ॥ ವಕ್ತೃಮಾತ್ರಧರ್ಮಭೂತಾಪ್ತೇರ್ವಕ್ತೃಶ್ರೋತೃಪ್ರಸಂಗರೂಪತ್ರಿತಯಧರ್ಮಭೂತಾನುಕೂಲ್ಯಾನಾಮ್ ಅಭೇದಾನುಪಪತ್ತ್ಯಾ ತದ್ಘಟಿತೋಪಾಧಿಸಾಧನಯೋರಪಿ ಅಭೇದಾನುಪಪತ್ತ್ಯಾ ತದಭೇದಪ್ರತಿಪಾದನೇ ವಾಕ್ಯಾರ್ಥೋ ಬಾಧಿತಃ ಸ್ಯಾದಿತ್ಯಾಹ – ಆಪ್ತೇರಿತಿ ॥

'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯವು ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ ಹೊರಟದೆ ಎಂಬುದಾಗಿ ಹೇಳುವುದು ಬೇಡ. ಮತ್ತೇನೆಂದರೆ ಹೇತುವಿನಲ್ಲಿ ಸೇರಿರುವ ವಕ್ತ್ರಾದ್ಯಾನುಕೂಲ್ಯಕ್ಕೂ ಉಪಾಧಿಯಲ್ಲಿ ಸೇರಿರುವ ಆಪ್ತಿಗೂ ಅಭೇದವನ್ನು ತೋರಿಸುವ ಮೂಲಕ

ಹೇತುವಿಗೂ ಉಪಾಧಿಗೂ ಅಭೇದವಿದೆ ಎಂದು ತಿಳಿಯಬೇಕು. ಹೇತುವಿಗೂ ಉಪಾಧಿಗೂ ಐಕ್ಯವನ್ನು ತಿಳಿಯುವುದರಿಂದ ಆ ಉಪಾಧಿಯಿಂದ ಸಾಧ್ಯವನ್ನು ಸಾಧಿಸಬೇಕೆಂಬ ವಿಚಾರವನ್ನು ಹೇಳುವುದಕ್ಕಾಗಿ ಮುಂದಿನ ವಾಕ್ಯವು ಹೊರಟದೆ. ಆದ್ದರಿಂದ ವೈಯರ್ಥ್ಯದೋಷವು ಬರುವುದಿಲ್ಲ. ಹೀಗೆ ಮತ್ತೊಂದು ಪ್ರಕಾರದಿಂದ ಅನ್ಯಥಾಸಿದ್ಧಿಶಂಕೆಯನ್ನು ಪೂರ್ವಪಕ್ಷಿಯು 'ಉಪಾಧೇಃ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾನೆ.

ಕೇವಲ ವಕ್ತೃಧರ್ಮವಾದ ಆಪ್ತಿಗೂ ವಕ್ತೃಶ್ರೋತೃಪ್ರಸಂಗರೂಪವಾದ ಮೂರು ಧರ್ಮಗಳಿಂದ ಕೂಡಿದ ಆನುಕೂಲ್ಯಗಳಿಗೆ ಅಭೇದವು ಸರ್ವಥಾ ಕೂಡುವುದಿಲ್ಲ. ಇಂಥ ಆಪ್ತಿಯಿಂದ ಕೂಡಿದ ಆಪ್ತವಾಕ್ಯತ್ವವೆಂಬ ಉಪಾಧಿಗೂ ವಕ್ತ್ರಾದ್ಯಾನುಕೂಲ್ಯಗಳೆಂಬ ಸಾಧನಕ್ಕೂ ಅಭೇದವು ಅನುಪಪನ್ನ-ವಾಗುತ್ತದೆ. ಆದ್ದರಿಂದ ಉಪಾಧಿಗೂ ಹೇತುವಿಗೂ ಐಕ್ಯವನ್ನು ಪ್ರತಿಪಾದನೆ ಮಾಡಿದರೆ ಅನು-ವ್ಯಾಖ್ಯಾನದ ವಾಕ್ಯದ ಅರ್ಥವು ಬಾಧಿತವಾಗುತ್ತದೆ. ಇದನ್ನು 'ಆಪ್ತೇಃ' ಇತ್ಯಾದಿ ಟೀಕಾವಾಕ್ಯವು ಸಮರ್ಥಿಸುತ್ತಿದೆ.

ವಿವರಣೆ – ಟೀಕಾರಾಯರು 'ಆಪ್ತೇಃ' ಎಂದು ಹೇಳಿದ್ದಕ್ಕೆ ಸ್ಪಷ್ಟವಾದ ಕಾರಣ ಹೀಗಿದೆ – ಆಪ್ತವಾಕ್ಯತ್ವಕ್ಕೂ ವಕ್ತ್ರಾದ್ಯಾನುಕೂಲ್ಯಕ್ಕೂ ನೇರವಾಗಿ ಅಭೇದವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆಪ್ತವಾಕ್ಯತ್ವದಲ್ಲಿ ಆಪ್ತಿಯು ಸೇರಿದೆ. ಆಪ್ತವಾಕ್ಯತ್ವದಲ್ಲಿ ಸೇರಿರುವ ಆಪ್ತಿಯು ವಕ್ತ್ರಾದ್ಯಾನುಕೂಲ್ಯವೂ ಒಂದೇ ಆಗಿದೆ. ಆದ್ದರಿಂದ ಆಪ್ತವಾಕ್ಯತ್ವಕ್ಕೂ ವಕ್ತ್ರಾದ್ಯಾನುಕೂಲ್ಯೋಪೇತತ್ವಕ್ಕೂ ಐಕ್ಯವನ್ನು ಹೇಳಬೇಕು. ಹೀಗೆ ವಕ್ತ್ರಾದ್ಯಾನುಕೂಲ್ಯಕ್ಕೂ ಉಪಾಧಿಯಲ್ಲಿ ಸೇರಿದ ಆಪ್ತಿಗೂ ಅಭೇದವನ್ನು ಮೊದಲು ಹೇಳಿ ಅನಂತರ ಹೇತುವಿಗೂ ಉಪಾಧಿಗೂ ಐಕ್ಯವನ್ನು ಹೇಳಬೇಕು.

## ಸಾಧಕಕ್ಕೆ ಅನ್ಯಥಾಸಿದ್ಧಿಯ ಪರಿಹಾರ ಮೊದಲು ಮಾಡಿದ್ದು ಅರ್ಥಪೂರ್ಣವಾಗಿದೆ

ವಾಕ್ಯಾರ್ಥಚಂದ್ರಿಕಾ– ಬಾಧಕಾಧೀನತ್ವಾತ್ ಸಾಧಕಾನ್ಯಥಾಸಿದ್ಧೇಃ, ಪರೇಣ ಸಾಧ್ಯಾ-ವಿಶಿಷ್ಟತ್ವಮುದ್ಭಾವ್ಯ ಸಾಧಕಾನ್ಯಥಾಸಿದ್ಧಾವುಕ್ತಾಯಾಮಪಿ, ಸಾಧಕಾಧೀನತ್ವಾದ್ ವಸ್ತುಸಿದ್ಧೇಃ ಸ್ವಯಮುತ್ತರವಾಕ್ಯವೈಯರ್ಥ್ಯಪ್ರಸಂಗೇನ ಅನ್ಯಥಾಸಿದ್ಧಿಂ ಪರಿಹೃತ್ಯ ಸಾಧಕೇ ನಿರವಕಾಶತಾ-ಮುಪಪಾದ್ಯ ಇದಾನೀಂ ಬಾಧಕಂ ಪರಿಹರತಿ – ಸಾಧ್ಯೇತಿ ॥

ಸಾಧಕದ ಅನ್ಯಥಾಸಿದ್ಧಿಯು ಬಾಧಕಾಧೀನವಾಗಿದೆ. ಆದ್ದರಿಂದ ಪೂರ್ವಪಕ್ಷಿಯು ಸಾಧ್ಯಾ-ವೈಶಿಷ್ಟ್ಯವನ್ನು ತೋರಿಸಿ ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಅನಂತರ ಹೇಳಿದ್ದಾನೆ. ಆದರೆ ಉತ್ತರವನ್ನು ನೀಡುವಾಗ ವಸ್ತುಸಿದ್ಧಿಯು ಸಾಧಕಾಧೀನವಾಗಿದೆ ಎಂಬ ದೃಷ್ಟಿಯಿಂದ ಉತ್ತರವಾಕ್ಯವು ವ್ಯರ್ಥವಾಗುವ ಪ್ರಸಂಗ ಬರುವ ಕಾರಣ ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಮೊದಲು ಪರಿಹರಿಸಿದ್ದಾರೆ. ಅನಂತರ ಸಾಧಕಕ್ಕೆ ನಿರವಕಾಶತ್ವವನ್ನು ಉಪಪಾದನೆ ಮಾಡಿ, ಈಗ ಬಾಧಕವನ್ನು ಪರಿಹರಿಸುತ್ತಿದ್ದಾರೆ. ಬಾಧಕಪರಿಹಾರಕ್ಕಾಗಿ 'ಸಾಧ್ಯಾವಿಶಿಷ್ಟತಾ ತು' ಎಂಬ ವಾಕ್ಯ ಹೊರಟಿದೆ.

ವಿವರಣೆ – 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯದ ಆಧಾರದಿಂದ ಪ್ರಾಮಾಣ್ಯವನ್ನು ಪರಂಪರಯಾ ಸಾಧಿಸಬೇಕು. ನೇರವಾಗಿ ಸಾಧಿಸಬಾರದು ಎಂಬುದಾಗಿ ಸಿದ್ಧಾಂತಿಗಳು ಸಮರ್ಥಿಸಿ-ದರು. ಇದಕ್ಕೆ ಪೂರ್ವಪಕ್ಷಿಯು ವಕ್ತೃಶ್ರೋತೃಪ್ರಸಕ್ತೀನಾಂ ಎಂಬ ವಾಕ್ಯಕ್ಕೆ ಅನ್ಯಥಾಸಿದ್ಧಿಯನ್ನು ಹೇಳಿ-ದನು. ಶಂಕಿತವಾದ ಉಪಾಧಿಗೆ ಸಾಧ್ಯವ್ಯಾಪಕತ್ವವನ್ನು ಅಥವಾ ಸಾಧನಾಭೇದವನ್ನು ತಿಳಿಸಲು ಹೊರಟಿದೆ ಎಂದು ಸಮರ್ಥಿಸಿದನು. ಮತ್ತು ಮಧ್ಯದಲ್ಲಿ ಆಪ್ತವಾಕ್ಯತ್ವವನ್ನು ಸಮರ್ಥಿಸಿದರೆ ಸಾಧನಾ-ವೈಶಿಷ್ಟ್ಯದೋಷವು ಬರುತ್ತದೆಂಬ ಬಾಧಕವನ್ನು ಕೂಡ ಪೂರ್ವಪಕ್ಷಿಯು ಹೇಳಿದನು.

ಪೂರ್ವಪಕ್ಷಿ ಹೇಳಿದ ನಮ್ಮ ಸಾಧಕಕ್ಕೆ ಅನ್ಯಥಾಸಿದ್ಧಿಶಂಕೆಯನ್ನು ಇಲ್ಲಿಯ ತನಕ ನಿರಾಕರಿಸಿದರು. ಈಗ ಸಾಧ್ಯಾವೈಶಿಷ್ಟ್ಯವೆಂಬ ಯಾವ ಬಾಧಕವನ್ನು ಪೂರ್ವಪಕ್ಷಿಯು ಹೇಳಿದ್ದಾನೋ ಅದರ ನಿರಾ-ಕರಣೆಯನ್ನು 'ಸಾಧ್ಯ' ಇತ್ಯಾದಿ ಟೀಕಾವಾಕ್ಯದಿಂದ ಪರಿಹರಿಸುತ್ತಿದ್ದಾರೆ.

ಪೂರ್ವಪಕ್ಷಿಯು ದೋಷವನ್ನು ಹೇಳುವಾಗ ಮೊದಲು ಬಾಧಕವನ್ನು ಹೇಳಿ, ಅನಂತರ ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಆಕ್ಷೇಪಿಸಿದ್ದಾನೆ. ಆದರೆ ಟೀಕಾರಾಯರು ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಮೊದಲು ಪರಿಹಾರ ಮಾಡಿ ಅನಂತರ ಬಾಧಕವನ್ನು ಪರಿಹರಿಸಿದ್ದಾರೆ. ಟೀಕೆಯಲ್ಲಿ ವ್ಯತ್ಯಾಸ ಮಾಡಲು ಕಾರಣ ಹೀಗಿದೆ – ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಪೂರ್ವಪಕ್ಷಿಯು ಹೇಳಬೇಕೆಂದರೆ ಬಾಧಕಾಧೀನವಾಗಿಯೇ ಹೇಳಬೇಕು. ಬಾಧಕವನ್ನು ಮನಸ್ಸಿನಲ್ಲಿಟ್ಟುಕೊಂಡೇ ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಹೇಳಲು ಸಾಧ್ಯ. ಆದ್ದರಿಂದ ಪೂರ್ವಪಕ್ಷಿಯು ಮೊದಲು ಬಾಧಕವನ್ನು ಹೇಳಿ ಅನಂತರ ಸಾಧಕಕ್ಕೆ ಅನ್ಯಥಾಸಿದ್ಧಿಯನ್ನು ಹೇಳಿದ್ದಾನೆ. ಆದರೆ ಉತ್ತರವನ್ನು ನೀಡುವಾಗ ವಸ್ತುಸಿದ್ಧಿಯು ಸಾಧಕಾಧೀನವಾಗಿರುವ ಕಾರಣ ಮೊದಲು ಸಾಧಕವನ್ನು ಸಮರ್ಥಿಸಿದ್ದೇವೆ. ಸಾಧಕಕ್ಕೆ ಅನ್ಯಥಾಸಿದ್ಧಿಯು ಇರುವುದಿಲ್ಲ ಎಂಬುದನ್ನು ಮೊದಲು ಸಮರ್ಥನೆ ಮಾಡುವುದೇ ಮುಖ್ಯವಾಗುತ್ತದೆ. ಈ ದೃಷ್ಟಿಯಿಂದ ಟೀಕೆಯಲ್ಲಿ ಸಾಧಕಕ್ಕೆ

ಅನ್ಯಥಾಸಿದ್ಧಿಯನ್ನು ಮೊದಲು ಪರಿಹರಿಸಿ ಅನಂತರ ಅವನು ಹೇಳಿದ ಬಾಧಕವನ್ನು ಪರಿಹರಿಸಿದ್ದಾರೆ. ಆದ್ದರಿಂದ ಪೂರ್ವಪಕ್ಷಿ ಮಾಡಿದ ಕ್ರಮ ಹಾಗೂ ಸಿದ್ಧಾಂತದಲ್ಲಿ ಮಾಡಿದ ಕ್ರಮ ಎರಡೂ ಕೂಡ ಸಮಂಜಸವಾಗಿದೆ.

## ಸಾಧ್ಯಾವೈಶಿಷ್ಟ್ಯದೋಷ ಹೇಳಿದವನ ಅಭಿಪ್ರಾಯವೇನು ?

ವಾಕ್ಯಾರ್ಥಚಂದ್ರಿಕಾ– ವಕ್ತ್ರಾನುಕೂಲ್ಯಸ್ಯ ಆಪ್ತ್ಯೇಕದೇಶಕತ್ವೇನ ಸಾಧ್ಯಾವಿಶಿಷ್ಟತೋ-ದ್ಭಾವನಸ್ಯ ವಕ್ತ್ರಾದೀನಾಮಾನುಕೂಲ್ಯೇನ ವಕ್ತುರಾಪ್ತಿಸಾಧನೇ ಸಂಗತತ್ವೇಽಪಿ ಅನುಕೂಲ-ವಕ್ತ್ರಾದಿಮತ್ತಯಾ ಆಪ್ತವಾಕ್ಯತಾಸಾಧನೇ ನ ಕಥಮಪಿ ಸಂಗತಿಃ ಇತ್ಯಸಂಗತಿಕಥನಂ ಪರೋಕ್ತಸ್ಯ ಯಥಾಶ್ರುತಾಭಿಪ್ರಾಯಮಾದಾಯ ಇತಿ ದ್ರಷ್ಟವ್ಯಮ್ । ಸ್ವಾಭಿಪ್ರಾಯಂ ಪರಃ ಶಂಕತೇ – ತಥಾಽಪೀತಿ ॥

ವಕ್ತ್ರಾನುಕೂಲ್ಯವು ಆಪ್ತಿಯ ಏಕದೇಶವೇ ಆಗಿದೆ. ಹಾಗಾಗಿ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಈ ದೋಷವನ್ನು ವಕ್ತ್ರಾನುಕೂಲ್ಯದಿಂದ ವಕ್ತೃವಿಗೆ ಆಪ್ತಿಯನ್ನು ಸಾಧನೆ ಮಾಡಿದಾಗ ಹೇಳುವುದು ಸಂಗತವಾಗುತ್ತದೆ. ಆದರೆ ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿದಾಗ ಯಾವುದೇ ರೀತಿಯಲ್ಲೂ ಕೂಡ ಸಾಧ್ಯಾವೈಶಿಷ್ಟ್ಯದೋಷವು ಸಂಗತವಾಗುವುದಿಲ್ಲ. ಹೀಗೆ ಟೀಕೆಯಲ್ಲಿ ಅಸಂಗತಿಯನ್ನು ಹೇಳಿರುವುದು ಪೂರ್ವಪಕ್ಷಿಯ ವಾಕ್ಯಕ್ಕೆ ಯಥಾಶ್ರುತವಾದ ಅಭಿಪ್ರಾಯ-ವನ್ನು ವಿವಕ್ಷಿಸಿ ಎಂಬುದಾಗಿ ತಿಳಿಯಬೇಕು. ಪೂರ್ವಪಕ್ಷಿಯು ತಾನು ಹೇಳಿದ ಸಾಧ್ಯಾವಿಶಿಷ್ಟದೋಷದ ಅಭಿಪ್ರಾಯವನ್ನು 'ತಥಾಪಿ' ಎಂಬುದಾಗಿ ಸ್ಪಷ್ಟಪಡಿಸುವ ಮೂಲಕ ಆಶಂಕಿಸುತ್ತಿದ್ದಾನೆ.

ವಿವರಣೆ – ಹಿಂದೆ ಪೂರ್ವಪಕ್ಷಿಯು 'ಅನುಕೂಲವಕ್ತ್ರಾದಿಮತ್ತಯಾ ಆಪ್ತವಾಕ್ಯತಾಸಾಧನೇ ವಕ್ತ್ರಾನುಕೂಲ್ಯಸ್ಯ ಆಪ್ತ್ಯೇಕದೇಶತ್ವೇನ ಸಾಧ್ಯಾವಿಶಿಷ್ಟತಾ ಚ ಸ್ಯಾತ್' ಎಂಬುದಾಗಿ ಪೂರ್ವಪಕ್ಷಿಯು ಹೇಳಿದ್ದನು. 'ವಕ್ತ್ರಾದ್ಯಾನುಕೂಲ್ಯಗಳಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡಿದರೆ ವಕ್ತ್ರಾನುಕೂಲ್ಯವು ಆಪ್ತಿಯ ಏಕದೇಶವಾಗಿರುವುದರಿಂದ ಸಾಧ್ಯಾವಿಶಿಷ್ಟತಾದೋಷವು ಪ್ರಾಪ್ತವಾಗುತ್ತದೆ' ಎಂಬ ಪೂರ್ವಪಕ್ಷಿಯ ಆಕ್ಷೇಪಕ್ಕೆ ಉತ್ತರವನ್ನು ನೀಡುವಾಗ 'ಸಾಧ್ಯಾವಿಶಿಷ್ಟತಾ ತು ನಾಸ್ತ್ಯೇವ' ಎಂಬ ವಾಕ್ಯದಿಂದ ಸಾಧ್ಯಾವಿಶಿಷ್ಟತಾವನ್ನು ಹೇಳುವುದು ಅಸಂಗತವಾಗಿದೆ ಎಂದು ಹೇಳಿದರು. ಒಂದು ವೇಳೆ ವಕ್ತ್ರಾನುಕೂಲ್ಯದಿಂದ ವಕ್ತೃವಿಗೆ ಆಪ್ತಿಯನ್ನು ಸಾಧನೆ ಮಾಡಿದ್ದರೆ ಆಗ ಸಾಧ್ಯಾವಿಶಿಷ್ಟವು ಕಥಂಚಿತ್

ಸಾಧ್ಯವಾಗುತ್ತಿತ್ತು. ಅದು ಹೀಗೆ – 'ವಕ್ತಾ ಬಾದರಾಯಣಃ, ಆಪ್ತಃ ವಕ್ತ್ರಾದೀನಾಮ್ ಅನುಕೂಲ್ಯಾತ್' 'ವಕ್ತ್ರಾದಿಗಳಲ್ಲಿ ಅನುಕೂಲ್ಯಗಳಿರುವುದರಿಂದ ವಕ್ತುವಾದ ಬಾದರಾಯಣರಲ್ಲಿ ಆಪ್ತಿಯು ಇದೆ' ಹೀಗೆ ಸಾಧನೆ ಮಾಡಿದ್ದರೆ ಆಪ್ತಿಯ ಏಕದೇಶವು ವಕ್ತ್ರಾನುಕೂಲ್ಯ ಎನಿಸುತ್ತಿತ್ತು. ಸಾಧ್ಯದ ಏಕದೇಶವು ಹೇತುವಿನಲ್ಲಿ ಸೇರಿರುವುದರಿಂದ ಕಥಂಚಿತ್ ಸಾಧ್ಯಾವಿಶಿಷ್ಟತಾವು ಸಂಗತ ಆಗುತ್ತಿತ್ತು. ಆದರೆ ನಾವು ಆಪ್ತಿಯನ್ನು ಸಾಧನೆ ಮಾಡುತ್ತಿಲ್ಲ. ವಕ್ತ್ರಾದ್ಯಾನುಕೂಲ್ಯಗಳಿಂದ ಬ್ರಹ್ಮಸೂತ್ರಗಳಿಗೆ ಆಪ್ತವಾಕ್ಯತ್ವವನ್ನು ಸಾಧನೆ ಮಾಡುತ್ತಿದ್ದೇವೆ. ಬಾದರಾಯಣರಲ್ಲಿ ಆಪ್ತಿ ಇದೆ ಎಂದು ಸಾಧನೆ ಮಾಡುತ್ತಿಲ್ಲ. ಹೀಗೆ ಹೇಳಿದಾಗ ಸಾಧ್ಯಾವೈಶಿಷ್ಟ್ಯಕ್ಕೆ ಸ್ವಲ್ಪವೂ ಕೂಡ ಸಂಗತಿ ಬರಲು ಸಾಧ್ಯವೇ ಇಲ್ಲ. ಹೀಗೆ ಪೂರ್ವಪಕ್ಷಿಯ ವಾಕ್ಯಕ್ಕೆ ಯಥಾಶ್ರುತವಾದ ಅರ್ಥವನ್ನು ವಿವಕ್ಷಿಸಿದಾಗ ಅಸಂಗತಿದೋಷವು ಬರುತ್ತದೆಂದು ಟೀಕೆಯಲ್ಲಿ ಹೇಳಿದ್ದಾರೆ.

ಆದರೆ ಪೂರ್ವಪಕ್ಷಿಯು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾನೆ – ನೇರವಾಗಿ ಸಾಧ್ಯ ಮತ್ತು ಹೇತುಗಳಿಗೆ ಐಕ್ಯವು ಬರುತ್ತದೆಂಬ ಅಭಿಪ್ರಾಯದಿಂದ ಸಾಧ್ಯಾವೈಶಿಷ್ಟ್ಯದೋಷವನ್ನು ನಾನು ಹೇಳಿರುವುದಲ್ಲ. ಸಾಧ್ಯದಲ್ಲಿ ಹಾಗೂ ಹೇತುವಿನಲ್ಲಿ ಒಂದು ಅಂಶವು ಸಮಾನವಾಗಿದೆ. ಅವಿಪ್ರಲಿಪ್ಸಾ, ಕರಣಪಾಟವ ಹಾಗೂ ವಿವಕ್ಷಿತಾರ್ಥತತ್ತ್ವಜ್ಞಾನ ಈ ಮೂರೂ ಸಾಧ್ಯ ಮತ್ತು ಹೇತುಗಳಲ್ಲಿ ಸಮಾನವಾಗಿವೆ. ಹೇತುವಿನಲ್ಲಿ ಸೇರಿರುವ ವಕ್ತ್ರಾನುಕೂಲ್ಯ ಎಂದರೆ ಈ ಮೂರು ಧರ್ಮಗಳೇ ಆಗಿವೆ. ಆಪ್ತವಾಕ್ಯತ್ವವೆಂಬ ಸಾಧ್ಯದಲ್ಲಿ ಆಪ್ತತ್ವವು ಸೇರಿದೆ. ಆಪ್ತಿಯುಳ್ಳವನೇ ಆಪ್ತ ಎನಿಸುತ್ತಾನೆ. ಆ ಆಪ್ತಿಯಲ್ಲಿ ಈ ಮೂರು ಧರ್ಮಗಳಿವೆ. ಈ ಅಂಶದಲ್ಲಿ ಐಕ್ಯವಿರುವುದರಿಂದ ಸಾಧ್ಯಾವೈಶಿಷ್ಟ್ಯದೋಷವನ್ನು ಹೇಳಿರುತ್ತೇನೆ' ಎಂದು. ಇದನ್ನು 'ತಥಾಽಪಿ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ.

## ಅಂಶತಃ ಐಕ್ಯವಿದ್ದರೆ ಸಾಧ್ಯಾವಿಶಿಷ್ಟತಾ ಹೇಳಬಾರದು

ವಾಕ್ಯಾರ್ಥಚಂದ್ರಿಕಾ– ಸಾಧ್ಯಸಾಧನಯೋರೇಕದೇಶಪ್ರವೇಶೇऽಪಿ ಚತುಷ್ಟಯವಿಶಿಷ್ಟ-ವಕ್ತೃಘಟಿತತ್ವಾತ್ ಸಾಧ್ಯಸ್ಯ ತ್ರಿತಯವಿಶಿಷ್ಟವಕ್ತೃಘಟಿತತ್ವಾಚ್ಚ ಸಾಧನಸ್ಯ ವಿಶಿಷ್ಟಯೋಶ್ಚ ಭೇದಾತ್ ತಸ್ಯಾದೋಷತ್ವಮ್ ಇತ್ಯಾಹ – ಸತ್ಯಮಿತಿ ॥ ಯಥಾ ಕಥಂಚಿದ್ ಏಕದೇಶಾನುಪ್ರವೇಶಮಾತ್ರೇಣ ಸಾಧ್ಯಾವಿಶಿಷ್ಟತ್ವೇ ಬಾಧಕಮಾಹ – ಅನ್ಯಥೇತಿ ॥

ಸಾಧ್ಯ ಮತ್ತು ಹೇತುಗಳಲ್ಲಿ ಏಕದೇಶವು ಒಂದೇ ಆಗಿರಬಹುದು. ಆದರೆ ಸಾಧ್ಯವು ನಾಕು ಧರ್ಮಗಳಿಂದ ಕೂಡಿದೆ. ಹೇತುವು ಮೂರು ಧರ್ಮಗಳಿಂದ ವಿಶಿಷ್ಟವಾಗಿದೆ. ಆದ್ದರಿಂದ ಈ

ವಿಶಿಷ್ಟಪದಾರ್ಥಗಳು ಬೇರೆ ಬೇರೆ ಆಗಿರುವ ಕಾರಣ ಸಾಧ್ಯಾವೈಶಿಷ್ಟ್ಯದೋಷವು ಸರ್ವಥಾ ಬರುವುದಿಲ್ಲ ಎಂಬುದಾಗಿ 'ಸತ್ಯಮ್' ಇತ್ಯಾದಿ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ಯಥಾ ಕಥಂಚಿತ್ ಏಕದೇಶದ ಅನುಪ್ರವೇಶ ಮಾತ್ರದಿಂದ ಸಾಧ್ಯಾವೈಶಿಷ್ಟ್ಯದೋಷವನ್ನು ವಿವಕ್ಷಿಸಿದರೆ ಅನ್ಯಥಾ ಎಂಬ ವಾಕ್ಯವು ಬಾಧಕವನ್ನು ಹೇಳುತ್ತಿದೆ.

ವಿವರಣೆ – 'ವಿಮತಮ್ ಆಪ್ತವಾಕ್ಯಮ್' ಎಂದು ಹೇಳಿದಾಗ 'ಆಪ್ತರಾದ ಬಾದರಾಯಣರ ವಾಕ್ಯ' ಎಂದರ್ಥ. ಈ ಬಾದರಾಯಣರು ವಿವಕ್ಷಿತಾರ್ಥತತ್ತ್ವಜ್ಞಾನ, ಅವಿಪ್ರಲಿಪ್ಸಾ, ವಿವಕ್ಷಾ, ಕರಣಪಾಟವ ಈ ನಾಕು ಧರ್ಮಗಳಿಂದ ವಿಶಿಷ್ಟರಾಗಿದ್ದಾರೆ. ಇಂಥ ಬಾದರಾಯಣರಿಂದ ಈ ಶಾಸ್ತ್ರವು ವಿರಚಿತವಾಗಿದೆ ಎಂಬುದು ಸಾಧ್ಯದ ಅಭಿಪ್ರಾಯವಾಗಿದೆ. ಆದರೆ ಹೇತುವಿನಲ್ಲಿ ಮೂರೇ ಧರ್ಮಗಳಿವೆ. ಏಕೆಂದರೆ, ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯ ಈ ಮೂರೇ ಧರ್ಮಗಳಿವೆ. ಆದ್ದರಿಂದ ಒಂದೇ ಅಂಶವು ಎರಡೂ ಕಡೆ ಸಮಾನವಾಗಬಹುದು. ವಿಶಿಷ್ಟಗಳು ಬೇರೆ ಬೇರೆಯೇ ಆಗಿರುವುದರಿಂದ ಸಾಧ್ಯಾವಿಶಿಷ್ಟದೋಷವು ಬರಲು ಸಾಧ್ಯವೇ ಇಲ್ಲ. ಯಥಾ ಕಥಂಚಿತ್ ಏಕದೇಶವು ಅನುಪ್ರವೇಶ ಆದ ಮಾತ್ರಕ್ಕೆ ಸಾಧ್ಯಾವಿಶಿಷ್ಟತಾವನ್ನು ಹೇಳುವುದಾದರೆ ಧೂಮವುಳ್ಳ ಮಹಾನಸವೇ ಅಗ್ನಿ ಉಳ್ಳದ್ದಾಗಿದೆ; 'ಯಃ ಧೂಮವಾನ್ ಸಃ ಅಗ್ನಿಮಾನ್' ಎಂಬ ವ್ಯಾಪ್ತಿಯಲ್ಲಿ ವಿಶೇಷಣಗಳು ಬೇರೆಯಾಗಿದ್ದರೂ ವಿಶೇಷ್ಯವು ಒಂದೇ ಆಗಿದೆ. ಆದ್ದರಿಂದ ಇಲ್ಲೂ ಕೂಡ ಸಾಧ್ಯಾವೈಶಿಷ್ಟ್ಯದೋಷವನ್ನು ಹೇಳಬೇಕಾದೀತು.

## ಕೃತಕತ್ವ ಹಾಗೂ ಅನಿತ್ಯತ್ವಗಳ ಲಕ್ಷಣ

ವಾಕ್ಯಾರ್ಥಚಂದ್ರಿಕಾ– ಕೃತಕತ್ವೇತಿ ॥ ಕೃತಕತ್ವಾನಿತ್ಯತ್ವಯೋಃ ಪರಸ್ಪರವ್ಯಾಪ್ಯವ್ಯಾಪಕಭಾವಮಂಗೀಕುರ್ವದ್ಭಿಃ ಪರೈರ್ಧ್ವಂಸಪ್ರಾಗಭಾವವ್ಯಭಿಚಾರಪರಿಹಾರಾಯ ಪ್ರಾಗಭಾವಧ್ವಂಸಾವಚ್ಛಿನ್ನಸತ್ತಾಯೋಗಿತ್ವರೂಪತ್ವೇನ ತಯೋರಭ್ಯುಪಗಮಾದಿತ್ಯರ್ಥಃ।

'ಕೃತಕತ್ವ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಯಾರು ಕೃತಕತ್ವ ಮತ್ತು ಅನಿತ್ಯತ್ವಗಳಿಗೆ ಪರಸ್ಪರವಾಗಿ ವ್ಯಾಪ್ಯ-ವ್ಯಾಪಕಭಾವವನ್ನು ಅಂಗೀಕಾರ ಮಾಡುತ್ತಾರೋ ಅವರು ಧ್ವಂಸ ಹಾಗೂ ಪ್ರಾಗಭಾವಗಳಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡುವುದಕ್ಕಾಗಿ ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ ಕೃತಕತ್ವಂ' 'ಧ್ವಂಸಾವಚ್ಛಿನ್ನಸತ್ತಾಯೋಗಿತ್ವಂ ಅನಿತ್ಯತ್ವಮ್' ಎಂಬ ಲಕ್ಷಣವನ್ನು ಅಂಗೀಕರಿಸುತ್ತಾರೆ. ಆಗ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ.

ವಿವರಣೆ- 'ಯತ್ರ ಅನಿತ್ಯತ್ವಂ ತತ್ರ ಕೃತಕತ್ವಮ್' 'ಯತ್ರ ಕೃತಕತ್ವಂ ತತ್ರ ಅನಿತ್ಯತ್ವಮ್' ಎಂಬುದಾಗಿ ವ್ಯಾಪ್ತಿಯನ್ನು ಹೇಳಿದಾಗ ಪ್ರಾಗಭಾವದಲ್ಲಿ ಅಥವಾ ಧ್ವಂಸದಲ್ಲಿ ವ್ಯಭಿಚಾರವು ಬರ-ಬಾರದು. ಪ್ರಾಗಭಾವವು ಅನಿತ್ಯವಾಗಿದೆ. ಆದರೆ ಕೃತಕವಾಗಿಲ್ಲ; ಅನಾದಿಯಾಗಿದೆ. ಪ್ರಧ್ವಂಸವು ಕೂಡ ಕೃತಕವೇ ಆಗಿದೆ; ಆದರೆ ಅನಿತ್ಯವಾಗದೇ ನಿತ್ಯವಾಗಿದೆ. ಆದ್ದರಿಂದ ಒಂದು ವ್ಯಾಪ್ತಿಗೆ ಪ್ರಾಗಭಾವದಲ್ಲಿ ಮತ್ತೊಂದು ವ್ಯಾಪ್ತಿಗೆ ಧ್ವಂಸದಲ್ಲಿ ವ್ಯಭಿಚಾರವು ಬರುತ್ತದೆ. ಈ ವ್ಯಭಿಚಾರವನ್ನು ಪರಿಹಾರ ಮಾಡು-ವುದಕ್ಕಾಗಿ ಕೃತಕತ್ವ ಹಾಗೂ ಅನಿತ್ಯತ್ವಗಳ ಲಕ್ಷಣಗಳನ್ನು ಬೇರೆ ರೀತಿಯಾಗಿ ತಿಳಿಯಬೇಕು.

'ಪ್ರಾಗಭಾವಧ್ವಂಸಾವಚ್ಛಿನ್ನಸತ್ತಾಯೋಗಿತ್ವಂ ಕೃತಕತ್ವಮ್' 'ಅನಿತ್ಯತ್ವಂ ನಾಮ ಪ್ರಧ್ವಂಸಾ-ವಚ್ಛಿನ್ನಸತ್ತಾಯೋಗಿತ್ವಂ' ಎಂದು. ಹೀಗೆ ಹೇಳಿದಾಗ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಸತ್ತಾ ಎಂಬ ಜಾತಿಯು ದ್ರವ್ಯ, ಗುಣ, ಕರ್ಮ ಎಂಬ ಮೂರು ಭಾವಪದಾರ್ಥಗಳಲ್ಲಿದೆ. ಪ್ರಾಗಭಾವ ಅಥವಾ ಪ್ರಧ್ವಂಸಾಭಾವವೆಂಬ ಅಭಾವಪದಾರ್ಥ ಇರಲು ಸಾಧ್ಯವಿಲ್ಲ. ಒಂದು ವೇಳೆ ಉತ್ಪತ್ತಿಮತ್ತ್ವಂ ಕೃತಕತ್ವಮ್' ಎಂದಷ್ಟೇ ಹೇಳಿದರೆ ಪ್ರಧ್ವಂಸಾಭಾವಕ್ಕೂ ಉತ್ಪತ್ತಿಯಿದೆ. ಆದರೆ ಅನಿತ್ಯತ್ವವಿಲ್ಲವೆಂದು ವ್ಯಭಿಚಾರ ಹೇಳಬಹುದು. ಆದರೆ ನಾವು ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ ಎಂಬ ಅರ್ಥವನ್ನು ಹೇಳುತ್ತಿದ್ದೇವೆ.

ಉದಾಹರಣೆ – ಘಟದಲ್ಲಿ ಸತ್ತಾ ಎಂಬ ಧರ್ಮವಿದೆ. ಇದು ಪ್ರಾಗಭಾವಾವ- ಚ್ಛಿನ್ನವಾಗಿದೆ. ಏಕೆಂದರೆ ಘಟದ ಸತ್ತಾವಿಗೆ ಪ್ರಾಗಭಾವವಿದೆ. ಪ್ರಧ್ವಂಸಾಭಾವವು ಸತ್ತಾವುಳ್ಳದ್ದೇ ಆಗಿರುವುದಿಲ್ಲ. ಒಂದುವೇಳೆ ಸತ್ತಾಯೋಗಿಯಾಗಿದ್ದರೆ, ಅದು ಪ್ರಾಗಭಾವಾವಚ್ಛಿನ್ನವಾಗಿದೆಯೋ ಇಲ್ಲವೋ ಎಂಬುದರ ಬಗ್ಗೆ ವಿಚಾರ ಮಾಡಬಹುದಿತ್ತು. ಅಭಾವರೂಪವಾಗಿರುವುದರಿಂದ ಸತ್ತಾ ಇರುವುದೇ ಇಲ್ಲ. ಹಾಗಾಗಿ ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ ಎಂಬ ಕೃತಕತ್ವವು ಪ್ರಧ್ವಂಸಾಭಾವದಲ್ಲಿ ಬರುವುದಿಲ್ಲ.

ಇದರಂತೆ 'ಯತ್ರ ಅನಿತ್ಯತ್ವಂ ತತ್ರ ಕೃತಕತ್ವಂ' ಎಂದು ಹೇಳುವಾಗ ಪ್ರಾಗಭಾವದಲ್ಲಿ ವ್ಯಭಿಚಾರವನ್ನು ಹೇಳಲು ಸಾಧ್ಯವಿಲ್ಲ. ಪ್ರಾಗಭಾವದಲ್ಲಿ ಅನಿತ್ಯತ್ವವಿದೆ. ಅನಾದಿಯಾಗಿರುವುದರಿಂದ ಕೃತಕತ್ವವು ಇರುವುದಿಲ್ಲ ಎಂದು ಹೇಳಬೇಕು. ವಿಚಾರ ಮಾಡಿದರೆ ಪ್ರಾಗಭಾವಕ್ಕೆ ಅನಿತ್ಯತ್ವವೇ ಇರುವು-ದಿಲ್ಲ. ಕೇವಲ 'ವಿನಾಶಿತ್ವಂ ಅನಿತ್ಯತ್ವಮ್' ಎಂಬರ್ಥವನ್ನು ವಿವಕ್ಷಿಸಬಾರದು. 'ಪ್ರಧ್ವಂಸಾವಚ್ಛಿನ್ನ-ಸತ್ತಾಯೋಗಿತ್ವಂ ಅನಿತ್ಯತ್ವಮ್' ಎಂದು ಹೇಳಬೇಕು. ಪ್ರಾಗಭಾವದಲ್ಲಿ ಸತ್ತಾ ಎಂಬ ಧರ್ಮವೇ ಇಲ್ಲದ ಕಾರಣ ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವವು ಸರ್ವಥಾ ಬರುವುದಿಲ್ಲ.

## ಹೇತು, ಸಾಧ್ಯ ಎರಡರಲ್ಲೂ ಕೂಡ ಸತ್ತಾ ಎಂಬಂಶವನ್ನು ಸೇರಿಸಬೇಕು

ವಾಕ್ಯಾರ್ಥಚಂದ್ರಿಕಾ– ನ ಚ ಯಸ್ಯ ಯದಾ ಹೇತುತ್ವಂ ತದಾ ವ್ಯಭಿಚಾರಪರಿಹಾರಾಯ ಹೇತೌ ಸತ್ತಾಪ್ರವೇಶೇಽಪಿ ಸಾಧ್ಯೇ ನ ತತ್ಪ್ರವೇಶಃ, ಇತಿ ನ ಸಾಧ್ಯಾವಿಶಿಷ್ಟತಾ ಇತಿ ವಾಚ್ಯಮ್ । ಜನ್ಯಭಾವಪಕ್ಷಕಾನುಮಾನೇ ಅವ್ಯಭಿಚಾರಾಯ ಹೇತಾವಸಾಧಾರಣ್ಯಪರಿಹಾರಾಯ ಸಾಧ್ಯೇಽಪಿ ತತ್ಪ್ರವೇಶಸ್ಯಾವಶ್ಯಕತ್ವಾತ್ । ಏವಂ ಸತ್ತಾಪರಿತ್ಯಾಗೇನ ಭಾವತ್ವವಿಶೇಷಣಾಂತರಪ್ರಕ್ಷೇಪೇಽಪಿ ತತ್ಪ್ರಯುಕ್ತ ಏವಾವಿಶೇಷೋ ದ್ರಷ್ಟವ್ಯಃ ಇತಿ ವದಂತಿ ।

ಕೃತಕತ್ವ ಮತ್ತು ಅನಿತ್ಯತ್ವಗಳಲ್ಲಿ ಯಾವುದನ್ನು ಹೇತುವನ್ನಾಗಿ ಮಾಡುತ್ತೇವೋ ಆಗ ವ್ಯಭಿಚಾರ ಪರಿಹಾರಕ್ಕೋಸ್ಕರ ಹೇತುವಿನಲ್ಲಿ ಸತ್ತಾ ಎಂಬ ಅಂಶವನ್ನು ಸೇರಿಸಬೇಕು. ಸಾಧ್ಯದಲ್ಲಿ ಸೇರಿಸುವ ಅವಶ್ಯಕತೆ ಇಲ್ಲ. ಆದ್ದರಿಂದ ಸಾಧ್ಯಾವಿಶಿಷ್ಟತಾದೋಷವು ಹೇಗೆ ಬರುತ್ತದೆ?

ಈ ಪ್ರಶ್ನೆ ತಪ್ಪು. ಜನ್ಯಭಾವಪಕ್ಷಕವಾದ ಅನುಮಾನದಲ್ಲಿ ವ್ಯಭಿಚಾರಪರಿಹಾರಕ್ಕೋಸ್ಕರ ಹೇತುವಿನಲ್ಲಿ ಸತ್ತಾವನ್ನು ಸೇರಿಸಬೇಕು. ಅಸಾಧಾರಣ್ಯದೋಷವನ್ನು ಪರಿಹಾರ ಮಾಡುವುದಕ್ಕಾಗಿ ಸಾಧ್ಯದಲ್ಲೂ ಕೂಡ ಸತ್ತಾವನ್ನು ಸೇರಿಸಬೇಕು. ಇದೇ ರೀತಿಯಾಗಿ ಸತ್ತಾ ಎಂಬ ಅಂಶವನ್ನು ಬಿಟ್ಟು, ಭಾವತ್ವವೆಂಬ ವಿಶೇಷಣದ ಪ್ರಕ್ಷೇಪ ಮಾಡಿದಾಗಲೂ ತಿಳಿಯಬೇಕು. ಅಸಾಧಾರಣ್ಯದೋಷಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಸತ್ತಾ ಎಂಬಂಶವನ್ನು ಸೇರಿಸಬೇಕು.

ವಿವರಣೆ–

ಆಕ್ಷೇಪ– ಒಂದೇ ಸತ್ತಾ ಎರಡೂ ಕಡೆ ಪ್ರವೇಶವನ್ನು ಹೊಂದಿರುವುದರಿಂದ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆಂಬುದು ನಮ್ಮ ಅಭಿಪ್ರಾಯವಲ್ಲ. ಹೇತುಶರೀರದಲ್ಲಿ ಮಾತ್ರ ಸತ್ತಾ ಎಂಬುದನ್ನು ನಿವೇಶ ಮಾಡುತ್ತೇವೆ. ಸಾಧ್ಯಾಂಶದಲ್ಲಿ ಸತ್ತಾವನ್ನು ನಿವೇಶಮಾಡುವುದೇ ಇಲ್ಲ. ಕೃತಕತ್ವದಿಂದ ಅನಿತ್ಯತ್ವವನ್ನು ಸಾಧನೆ ಮಾಡುವಾಗ 'ಯತ್ರ ಕೃತಕತ್ವಂ ತತ್ರ ಅನಿತ್ಯತ್ವಮ್' ಎಂಬ ವ್ಯಾಪ್ತಿಯನ್ನು ಹೇಳಬೇಕು. ಇದಕ್ಕೆ ಪ್ರಧ್ವಂಸಾಭಾವದಲ್ಲಿ ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕೆ ಹೇತುವಿನಲ್ಲಿ 'ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ' ಎಂಬರ್ಥವನ್ನು ವಿವಕ್ಷಿಸಬೇಕು. ಆಗ ಪ್ರಧ್ವಂಸಾಭಾವದಲ್ಲಿ ಹೇತುವೂ ಬರುವುದಿಲ್ಲ; ಸಾಧ್ಯವೂ ಕೂಡ ಬರುವುದಿಲ್ಲವೆಂದು ಪರಿಹಾರವಾಗುತ್ತದೆ. ಹೀಗೆ ಹೇಳಿದರೆ ಸಾಧ್ಯದಲ್ಲಿ ಪುನಃ ಸತ್ತಾವನ್ನು ಸೇರಿಸುವ ಅವಶ್ಯಕತೆಯೇ ಇಲ್ಲ. ಏಕೆಂದರೆ 'ಘಟಃ ಅನಿತ್ಯಃ ಕೃತಕತ್ವಾತ್' ಎಂಬ ಅನುಮಾನದಲ್ಲಿ ಅನಿತ್ಯತ್ವವು ಸಾಧ್ಯವಾಗಿದೆ. ಇದು ಪ್ರಧ್ವಂಸಾ-

ಭಾವದಲ್ಲಿ ಸರ್ವಥಾ ಇಲ್ಲ ಕೃತಕತ್ವ ಎಂಬ ಹೇತು ಬಂದರಷ್ಟೇ ವ್ಯಭಿಚಾರವು ಬರುತ್ತದೆ. 'ಪ್ರಾಗ-ಭಾವಾವಚ್ಛಿನ್ನಸತ್ತಾಯೋಗಿತ್ವಂ' ಎಂಬುದು ಕೃತಕತ್ವದ ಲಕ್ಷಣವೆಂದು ಹೇಳಿದರೆ ಹೇತುವೇ ಬರುವು-ದಿಲ್ಲವೆಂದು ವ್ಯಭಿಚಾರವು ಪರಿಹಾರವಾಗುತ್ತದೆ. ಹೀಗಿರುವಾಗ ಪುನಃ ಸಾಧ್ಯದಲ್ಲಿ ಸತ್ತಾವನ್ನು ಸೇರಿಸಿ 'ಪ್ರಧ್ವಂಸಾವಚ್ಛಿನ್ನಸತ್ತಾಯೋಗಿತ್ವಂ' ಎಂಬ ಲಕ್ಷಣವನ್ನು ಹೇಳುವ ಅವಶ್ಯಕತೆಯೇ ಇರುವುದಿಲ್ಲ.

ಇದೇ ರೀತಿಯಲ್ಲಿ 'ಘಟಃ ಅನಿತ್ಯಃ ಕೃತಕತ್ವಾತ್' ಎಂಬುದಾಗಿ ಅನುಮಾನ ಮಾಡಿದಾಗ 'ಯತ್ರ ಅನಿತ್ಯತ್ವಂ ತತ್ರ ಕೃತಕತ್ವಮ್' ಎಂಬ ವ್ಯಾಪ್ತಿಯನ್ನು ಹೇಳಬೇಕು. ಈಗ ಪ್ರಾಗಭಾವದಲ್ಲಿ ವ್ಯಭಿಚಾರವು ಬರುತ್ತದೆ. ಇದರ ಪರಿಹಾರಕ್ಕಾಗಿ ಹೇತುವಿನಲ್ಲಿ ಸತ್ತಾನುಪ್ರವೇಶವಾದರೆ ಸಾಕು. ಸಾಧ್ಯದಲ್ಲಿ ಸತ್ತಾನುಪ್ರವೇಶ ಆಗಬೇಕಾಗಿಲ್ಲ. ಹೀಗೆ ಹೇತ್ವಂಶದಲ್ಲಿ ಮಾತ್ರ ಸತ್ತಾ ಸೇರಿದರೆ ಸಾಕು. ಆದರೆ ನೀವು ಎರಡೂ ಕಡೆ ಸತ್ತಾ ಇರಬೇಕೆಂದು ಹೇಳುತ್ತಿದ್ದೀರಿ. ಎರಡೂ ಕಡೆ ಸತ್ತಾ ಎಂಬುದು ಸಮಾನವಾಗಿದೆ ಎಂದು ವಿವಕ್ಷಿಸಿ ಸಾಧ್ಯಾವಿಶಿಷ್ಟತಾದೋಷವನ್ನು ನೀವು ಹೇಳುತ್ತಿದ್ದೀರಿ. ಈಗ ಒಂದರಲ್ಲಿ ಮಾತ್ರ ಸತ್ತಾನುಪ್ರವೇಶವಾಗಿರುವುದರಿಂದ ಅಂಶತಃ ಸಾಧ್ಯಾವಿಶಿಷ್ಟತಾವನ್ನು ಕೂಡ ಹೇಗೆ ಹೇಳುತ್ತೀರಿ?

ಸಮಾಧಾನ– ಕೇವಲ ಘಟವನ್ನೋ ಅಥವಾ ಪಟವನ್ನೋ ಪಕ್ಷವನ್ನಾಗಿ ಮಾಡಿ ಕೃತಕತ್ವವನ್ನು ಅಥವಾ ಅನಿತ್ಯತ್ವವನ್ನು ಸಾಧನೆ ಮಾಡುವುದಾಗಿದ್ದಲ್ಲಿ ನೀವು ಹೇಳಿದಂತೆ ಎರಡೂ ಕಡೆ ಸತ್ತಾನುಪ್ರವೇಶವು ಅನಾವಶ್ಯಕ ಆಗುತ್ತಿತ್ತು. ಆದರೆ ಸಕಲ ಜನ್ಯಭಾವಪದಾರ್ಥಗಳನ್ನು ಪಕ್ಷವನ್ನಾಗಿ ಮಾಡಿದಾಗ ಕೇವಲ ಒಂದರಲ್ಲಿ ಸತ್ತಾನುಪ್ರವೇಶವು ಆದರೆ ಸಾಲುವುದಿಲ್ಲ. 'ಸರ್ವೇ ಜನ್ಯಭಾವಾಃ ಅನಿತ್ಯಾಃ ಕೃತಕತ್ವಾತ್' ಹೀಗೆ ಅನುಮಾನ ಮಾಡಿದಾಗ ಎಲ್ಲಾ ಜನ್ಯಭಾವಪದಾರ್ಥಗಳೂ ಪಕ್ಷವಾಗಿವೆ. ಆದ್ದರಿಂದ ಇದಕ್ಕೆ ಭಾವಪದಾರ್ಥಗಳು ದೃಷ್ಟಾಂತವಾಗುವುದಿಲ್ಲ. 'ಸತಿ ಸಪಕ್ಷೇ ತತ್ರಾವರ್ತಮಾನೋ ಹೇತುಃ ಅಸಾಧಾರಣಃ' 'ಸಪಕ್ಷ ಇದ್ದು ಅದರಲ್ಲಿ ಹೇತು ಇಲ್ಲದೇ ಇದ್ದರೆ ಅಸಾಧಾರಣದೋಷವು ಬರುತ್ತದೆ' ಈ ಅನುಮಾನದಲ್ಲಿ ಭಾವಪದಾರ್ಥಗಳು ದೃಷ್ಟಾಂತವಾಗುವುದಿಲ್ಲ. ಆದರೆ ಪ್ರಾಗಭಾವವು ದೃಷ್ಟಾಂತವಾಗುತ್ತದೆ. ಪ್ರಾಗಭಾವವೆಂಬ ಸಪಕ್ಷದಲ್ಲಿ ಕೃತಕತ್ವವೆಂಬ ಹೇತುವು ಇರುವುದಿಲ್ಲ. ಏಕೆಂದರೆ ಅನಿತ್ಯತ್ವವೆಂಬ ಸಾಧ್ಯದಲ್ಲಿ ಸತ್ತಾವನ್ನು ಹಾಕದೇ ಇದ್ದರೆ ಕೇವಲ ವಿನಾಶಿತ್ವವನ್ನೇ ಅನಿತ್ಯತ್ವವೆಂದು ಹೇಳಿದಂತಾಗುತ್ತದೆ. ಇಂಥ ಸಾಧ್ಯವು ಪ್ರಾಗಭಾವವೆಂಬ ದೃಷ್ಟಾಂತದಲ್ಲಿದೆ. ಸಾಧ್ಯವು ದೃಷ್ಟಾಂತ-ದಲ್ಲಿದ್ದರೂ ಕೂಡ ಅಲ್ಲಿ ಹೇತು ಇರುವುದಿಲ್ಲ. ಏಕೆಂದರೆ, ಹೇತುವಿನಲ್ಲಿ ಸತ್ತಾನುಪ್ರವೇಶ ಆಗಿರು-ವುದರಿಂದ ಹೇತುವು ಬರುವುದಿಲ್ಲ. ಹೀಗೆ ಅಸಾಧಾರಣ್ಯದೋಷವು ಬರುತ್ತದೆ. ಇದರ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಸತ್ತಾನುಪ್ರವೇಶವನ್ನು ಮಾಡಬೇಕು. ಆಗ ಸಾಧ್ಯವೂ ಕೂಡ ಬರುವುದಿಲ್ಲ ಎಂದು

ಅಸಾಧಾರಣದೋಷವು ಪರಿಹಾರವಾಗುತ್ತದೆ. ಸಪಕ್ಷವಿದ್ದು ಅದರಲ್ಲಿ ಹೇತು ಬಾರದೇ ಇದ್ದರೆ ಅಸಾಧಾರಣ್ಯದೋಷವು ಬರುತ್ತದೆ. ಸಾಧ್ಯದಲ್ಲಿ ಸತ್ತಾನುಪ್ರವೇಶ ಮಾಡಿದಾಗ ಸಪಕ್ಷವೇ ಇರುವುದಿಲ್ಲ ಎಂದಂತಾಯಿತು. ಆಗ ಈ ಅನುಮಾನವು ಕೇವಲ ವ್ಯತಿರೇಕಿ ಅನುಮಾನ ಎಂದು ಕರೆಸಿಕೊಳ್ಳುತ್ತದೆ.

ಹೀಗೆ ಹೇತುವಿನಲ್ಲಿ ವ್ಯಭಿಚಾರ ಪರಿಹಾರಕ್ಕೋಸ್ಕರ ಸತ್ತಾವನ್ನು ವಿಶೇಷಣವನ್ನಾಗಿ ನೀಡಬೇಕು. ಅಸಾಧಾರಣ್ಯದೋಷದ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಸತ್ತಾವನ್ನು ವಿಶೇಷಣವನ್ನಾಗಿ ನೀಡಬೇಕು. ಆದ್ದರಿಂದ ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ ಕೃತಕತ್ವಮ್' 'ಧ್ವಂಸಾವಚ್ಛಿನ್ನಸತ್ತಾಯೋಗಿತ್ವಂ ಅನಿತ್ಯತ್ವಮ್' ಎಂಬ ಲಕ್ಷಣವು ಅತ್ಯಂತ ಯುಕ್ತವಾಗಿದೆ.

ಮೇಲೆ ಹೇಳಿದಂತೆ ಪ್ರಾಗಭಾವಾದಿಗಳಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡಲು 'ಭಾವತ್ವೇ ಸತಿ' ಎಂಬ ವಿಶೇಷಣವನ್ನು ನೀಡಿದಾಗ ತತ್ರಯುಕ್ತವಾದ ವಿಶೇಷವನ್ನೂ ಕೂಡ ತಿಳಿಯಬೇಕು. ಅದು ಹೀಗೆ – 'ಸರ್ವೇ ಭಾವಾಃ ಅನಿತ್ಯಾಃ ಕೃತಕತ್ವಾತ್' ಎಂದು ಅನುಮಾನ ಮಾಡಿದಾಗ ಪ್ರಾಗಭಾವದಲ್ಲಿ ವ್ಯಭಿಚಾರವು ಬರುತ್ತದೆ. ಅದಕ್ಕೋಸ್ಕರ ಹೇತುವಿನಲ್ಲಿ 'ಭಾವತ್ವೇ ಸತಿ' ಎಂಬ ವಿಶೇಷಣವನ್ನು ನೀಡ-ಬೇಕು. ಪ್ರಾಗಭಾವದಲ್ಲಿ ಭಾವತ್ವವು ಇಲ್ಲದ ಕಾರಣ ವ್ಯಭಿಚಾರವು ಬರುವುದಿಲ್ಲ. ಆದರೆ ಸಾಧ್ಯದಲ್ಲಿ ಭಾವತ್ವ ಎಂಬ ವಿಶೇಷಣವು ಅನಾವಶ್ಯಕ. ಆದ್ದರಿಂದ ಒಂದೇ ಭಾವತ್ವವು ಹೇತು ಮತ್ತು ಸಾಧ್ಯಗಳಲ್ಲಿ ಅನುಗತವಾಗುತ್ತದೆಂದು ಹೇಳಿದಂತೆ ಆಗುವುದಿಲ್ಲ ಎಂದು ಮೇಲೆ ಹೇಳಿದಂತೆ ಇಲ್ಲೂ ಕೂಡ ತಿಳಿಯಬೇಕು. ಸಾಧ್ಯದಲ್ಲಿ ಭಾವತ್ವವನ್ನು ಹೇಳದೇ ಇದ್ದರೆ ಅಸಾಧಾರಣ್ಯದೋಷವು ಬರುತ್ತದೆ. 'ಭಾವತ್ವೇ ಸತಿ ಕೃತಕತ್ವ' ಎಂಬ ಹೇತುವು ಪ್ರಾಗಭಾವವೆಂಬ ದೃಷ್ಟಾಂತದಲ್ಲಿ ಬಾರದ ಕಾರಣ ಸಾಧ್ಯವಿರುವ ದೃಷ್ಟಾಂತದಲ್ಲಿ ಹೇತು ಬಾರದಿರುವ ಕಾರಣ ಅಸಾಧಾರಣ್ಯದೋಷವು ಬರುತ್ತದೆ. ಇದರ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಭಾವತ್ವವನ್ನು ವಿಶೇಷಣವನ್ನಾಗಿ ನೀಡಬೇಕು. ಆಗ ಅನುಮಾನ ಹೀಗಾಗುತ್ತದೆ. 'ಸರ್ವೇ ಜನ್ಯಾಃ ಭಾವಾಃ, ಭಾವತ್ವೇ ಸತಿ ಅನಿತ್ಯಾಃ, ಭಾವತ್ವೇ ಸತಿ ಕೃತಕತ್ವಾತ್' ಎಂದು. ವ್ಯಭಿಚಾರಪರಿಹಾರಕ್ಕೋಸ್ಕರ ಹೇತುವಿನಲ್ಲಿ ಭಾವತ್ವವನ್ನು ವಿಶೇಷಣವನ್ನಾಗಿ ನೀಡಿದಂತೆ ಅಸಾಧಾರಣ್ಯದೋಷದ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಭಾವತ್ವವೆಂಬ ವಿಶೇಷಣವನ್ನು ನೀಡಬೇಕು. ಇಲ್ಲಿಯ ತನಕ ಹೇಳಿದ್ದು ಕೆಲವರ ಪಕ್ಷ. ಇದರಲ್ಲಿ ಅಸ್ವಾರಸ್ಯವಿದೆ. ಅದಕ್ಕಾಗಿ 'ವಸ್ತುತಸ್ತು' ಎಂಬ ಪಕ್ಷವನ್ನು ಮುಂದೆ ಹೇಳುತ್ತಿದ್ದಾರೆ.

## ಕೃತಕತ್ವ ಹಾಗೂ ಅನಿತ್ಯತ್ವಗಳ ವಾಸ್ತವಲಕ್ಷಣಗಳು

ವಾಕ್ಯಾರ್ಥಚಂದ್ರಿಕಾ– ವಸ್ತುತಸ್ತು ಸತ್ತಾವತೋ ವಿನಾಶಿತ್ವಮನಿತ್ಯತ್ವಂ, ಪ್ರಾಗಸತಃ ಸತ್ತಾಸಂಬಂಧಃ ಕೃತಕತ್ವಮ್ ಇತಿ ಕೃತಕತ್ವಾನಿತ್ಯತ್ವನಿರುಕ್ತ್ಯಾಶ್ರಯೇಣ ಇದಮುಕ್ತಮ್ । ಅತ ಏವ ಸಕಲಪಕ್ಷವೃತ್ತಿತ್ವಂ ಕೃತಕತ್ವಸ್ಯ ಭವತಿ। ಅತ ಏವ ನ ಧ್ವಂಸೇ ವ್ಯಭಿಚಾರೋಽಪಿ ಇತಿ ಭಾವಃ।

ವಸ್ತುತಸ್ತು ಕೃತಕತ್ವ ಅನಿತ್ಯತ್ವಗಳ ಲಕ್ಷಣ ಹೀಗಿದೆ – 'ಸತ್ತಾವತಃ ವಿನಾಶಿತ್ವಮ್ ಅನಿತ್ಯತ್ವಮ್' 'ಪ್ರಾಗಸತಃ ಸತ್ತಾಸಂಬಂಧಃ ಕೃತಕತ್ವಮ್' ಹೀಗೆ ಲಕ್ಷಣವನ್ನು ವಿವಕ್ಷಿಸಿದ್ದರಿಂದ ಸಕಲಸಪಕ್ಷಗಳಲ್ಲಿ ಕೃತಕತ್ವವು ಇದ್ದೇ ಇರುತ್ತದೆ. ಅಸಾಧಾರಣ್ಯದೋಷವು ಬರುವುದಿಲ್ಲ. ಧ್ವಂಸದಲ್ಲಿ ವ್ಯಭಿಚಾರವೂ ಕೂಡ ಬರುವುದಿಲ್ಲ.

ವಿವರಣೆ – ವಾಸ್ತವಿಕವಾಗಿ ಅನಿತ್ಯತ್ವದ ಹಾಗೂ ಕೃತಕತ್ವದ ಲಕ್ಷಣವನ್ನು ಹೀಗೆ ತಿಳಿಯಬೇಕು – 'ಸತ್ತಾವತಃ ವಿನಾಶಿತ್ವಮ್ ಅನಿತ್ಯತ್ವಮ್'; 'ಪ್ರಾಗಸತಃ ಸತ್ತಾಸಂಬಂಧಃ ಕೃತಕತ್ವಮ್' ಎಂದು. ಮೊದಲೇ ಸತ್ತಾ ಇರುವ ಪದಾರ್ಥಕ್ಕೆ ವಿನಾಶವು ಬಂದರೆ ಅದನ್ನು ಅನಿತ್ಯ ಎನ್ನುತ್ತಾರೆ. ಮೊದಲು ಸತ್ತಾಸಂಬಂಧ ಇಲ್ಲದೇ ಇರುವ ಪದಾರ್ಥಕ್ಕೆ ಅನಂತರ ಸತ್ತಾಸಂಬಂಧವು ಪ್ರಾಪ್ತವಾದರೆ ಅದನ್ನು ಕೃತಕ ಎನ್ನುತ್ತಾರೆ. ಈಗ ಪ್ರಾಗಭಾವದಲ್ಲಿ ಸಾಧ್ಯವಿದೆ; ಆದ್ದರಿಂದ ಅದು ಸಪಕ್ಷವಾಗಿದೆ. ಆದರೆ ಹೇತುವಿಲ್ಲದ ಕಾರಣ ಅಸಾಧಾರಣ್ಯದೋಷವು ಬರುತ್ತದೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ಪ್ರಾಗಭಾವದಲ್ಲಿ ಸತ್ತಾ ಎಂಬುದೇ ಇರುವುದಿಲ್ಲ. ಆದ್ದರಿಂದ ಸತ್ತಾವತಃ ವಿನಾಶಿತ್ವರೂಪವಾದ ಅನಿತ್ಯತ್ವವೂ ಕೂಡ ಬಾರದ ಕಾರಣ ಸಾಧ್ಯವಿಲ್ಲ. ಹಾಗಾಗಿ ಅದು ಸಪಕ್ಷ ಎನಿಸುವುದಿಲ್ಲ. ಮತ್ತು ಧ್ವಂಸದಲ್ಲಿ ಹೇತುವಿದೆ ಸಾಧ್ಯವಿಲ್ಲವೆಂದು ವ್ಯಭಿಚಾರವನ್ನು ಕೂಡ ಹೇಳಲು ಸಾಧ್ಯವಿಲ್ಲ. ಏಕೆಂದರೆ ಧ್ವಂಸದಲ್ಲಿ ಸತ್ತಾ-ಸಂಬಂಧವು ಇಲ್ಲದ ಕಾರಣ ಮೊದಲು ಇಲ್ಲದ ಸತ್ತಾಸಂಬಂಧ ಅನಂತರ ಬಂದಿದೆ ಎಂಬ ಕೃತಕತ್ವವು ಅದರಲ್ಲಿಲ್ಲ. ಹೀಗೆ ಹೇತುವೇ ಬಾರದ ಕಾರಣ ಧ್ವಂಸದಲ್ಲಿ ವ್ಯಭಿಚಾರವು ಬರುವುದಿಲ್ಲ.

ಪಾಠಶೋಧನೆ – ಎಲ್ಲಾ ಮುದ್ರಿತಪುಸ್ತಕಗಳಲ್ಲಿ 'ದ್ರಷ್ಟವ್ಯಃ । ಸತ್ತಾವತೋ ವಿನಾಶಿತ್ವಮನಿತ್ಯತ್ವಂ' ಇತ್ಯಾದಿಯಾದ ಪಾಠವು ಕಾಣಸುತ್ತಿದೆ. ಆದರೆ ವಾಕ್ಯಾರ್ಥರತ್ನಮಾಲಾದಲ್ಲಿ ಈ ಪಾಠದ ಬಗ್ಗೆ ವಿಮರ್ಶೆ ಮಾಡಿದ್ದಾರೆ. – "ಅತ್ರ ಟೀಕಾಯಾಂ ದ್ರಷ್ಟವ್ಯ ಇತ್ಯನಂತರಮ್ 'ಇತಿ ವದಂತಿ' ಇತಿ; ತದುತ್ತರಂ ಚ 'ವಸ್ತುತಸ್ತು' ಇತಿ ಪಾಠಃ । ಸತ್ತಾವತೋ ವಿನಾಶಿತ್ವಮಿತ್ಯಾದಿ ಗ್ರಂಥಲೇಖನಾಯ ಪ್ರವೃತ್ತೇನ ತತ್ರೈವ ಭಾರವತೇತಿ ವದಂತೀತ್ಯಾದಿ ಲೇಖನೀಯಮಿತಿ ಜಾನತಾಪಿ ತತ್ಪರಿತ್ಯಾಗಾತ್ । ಪುನಸ್ತದಕ್ಷರ-ಶೋಧಾಭಾವಾತ್ । ಅತ್ರೇತಿ ವದಂತೀತಿ ಪಕ್ಷಾಂತರಾರುಚಿರೂಪಲಕ್ಷಣಮ್ ।"

ವಾಕ್ಯಾರ್ಥರತ್ನಮಾಲಾಕಾರರು ವಾಕ್ಯಾರ್ಥಚಂದ್ರಿಕಾಕ್ಕೆ ಟೀಕೆಯೆಂದು ಕರೆಯುತ್ತಾರೆ. ನ್ಯಾಯ-ಸುಧಾವನ್ನು ಮೂಲ ಎಂದು ಕರೆಯುತ್ತಾರೆ. ಟೀಕಾಯಾಮ್ - ವಾಕ್ಯಾರ್ಥಚಂದ್ರಿಕಾದಲ್ಲಿ ಎಂದರ್ಥ. ಇಲ್ಲಿ ದ್ರಷ್ಟವ್ಯಃ ಎಂಬ ಪದದ ನಂತರ ಇತಿ ವದಂತಿ' ಎಂಬುದನ್ನು ಅದರ ಮುಂದೆ 'ವಸ್ತುತಸ್ತು' ಎಂಬ ಪಾಠವನ್ನು ವಿವಕ್ಷಿಸಬೇಕು. ಸತ್ತಾವತಃ ವಿನಾಶಿತ್ವಮ್ ಎಂಬ ವಾಕ್ಯವನ್ನು ಬರೆಯಲು ಹೊರಟಿರುವ ವ್ಯಕ್ತಿ ಅಲ್ಲೇ ಹೆಚ್ಚಿನ ಗಮನವಿಟ್ಟದ್ದರಿಂದ ವದಂತಿ ಎಂಬುದನ್ನು ಹಾಗೂ ವಸ್ತುತಸ್ತು ಎಂಬುದನ್ನು ಮರೆತುಬಿಟ್ಟಿದ್ದಾರೆ. ಬರೆದ ಮೇಲೆ ಪುನಃ ಅಕ್ಷರಶೋಧನೆಯನ್ನು ಕೂಡ ಮಾಡಿರುವುದಿಲ್ಲ. ಇಲ್ಲಿ ಅತ್ರ ವದಂತಿ ಎಂದು ಹೇಳಿದ್ದರಿಂದ ಈ ಪಕ್ಷವು ಅರುಚಿಯೆಂದು ಸೂಚನೆ ಮಾಡಲಾಗಿದೆ.

## ವಕ್ತೃಶ್ರೋತೃಪ್ರಸಕ್ತೀನಾಂ ಎಂಬುದಕ್ಕೆ ಪೂರ್ವಪಕ್ಷಿಯು ಮಾಡುತ್ತಿರುವ ಯೋಜನೆ

ಯಾದುಪತ್ಯ– ಸಾಧನಾಭೇದಮಿತಿ ॥ ತಥಾ ಚ 'ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನು-ಕೂಲತಾ' ಇತಿ 'ವಕ್ತೃಶ್ರೋತೃಪ್ರಸಕ್ತೀನಾಮನುಕೂಲತಾ ಯದ್ಯಸ್ಮಾದಾಪ್ತಿಸ್ತೇನ ಕಾರಣೇನಾಪ್ತ-ವಾಕ್ಯತಯಾ ಮಾನಮ್' ಇತ್ಯೇವ ಯೋಜನಾऽತ್ರ ಅಭಿಪ್ರೇತಾ ಇತಿ ದ್ರಷ್ಟವ್ಯಾ । ನ ತು 'ಯದ್ಯತ್ರ ವಾಕ್ಯೇ' ಇತ್ಯಾದಿನೋಕ್ತಾ ಪೂರ್ವಯೋಜನೇತಿ ಭಾವಃ ।

'ಸಾಧನಾಭೇದಂ' – ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ವಾಕ್ಯಕ್ಕೆ 'ವಕ್ತೃಶ್ರೋತೃಪ್ರಸಕ್ತೀನಾಂ ಯತ್ - ಯಸ್ಮಾತ್ ಆಪ್ತಿಃ ತೇನಕಾರಣೇನ ಆಪ್ತವಾಕ್ಯತಯಾ ಮಾನಮ್' 'ಯಾವ ಕಾರಣದಿಂದ ವಕ್ತೃಶ್ರೋತೃಪ್ರಸಂಗಾನುಕೂಲ್ಯಗಳು ಆಪ್ತಿ ಎಂದು ಕರೆಸಿಕೊಳ್ಳುತ್ತವೋ ಆ ಕಾರಣದಿಂದ ಆಪ್ತವಾಕ್ಯವಾಗಿರುವ ಕಾರಣ ಪ್ರಮಾಣ ಎಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ಯೋಜನೆಯನ್ನು ತಿಳಿಯಬೇಕು. ಹೊರತು ಹಿಂದೆ ಹೇಳಿದಂತೆ ಯತ್ = ಯತ್ರ ವಾಕ್ಯೇ, ಇತ್ಯಾದಿ ಯೋಜನೆಯನ್ನು ವಿವಕ್ಷಿಸಬಾರದು. ಇಷ್ಟುಪೂರ್ವಪಕ್ಷಿಯ ಅಭಿಪ್ರಾಯ.

ವಿವರಣೆ– ಪೂರ್ವಪಕ್ಷಿಯು ವಕ್ತ್ರಾದ್ಯಾನುಕೂಲ್ಯಗಳಿಂದ ಪ್ರಾಮಾಣ್ಯವನ್ನು ನೇರವಾಗಿ ಏಕೆ ಸಾಧನೆ ಮಾಡುವುದಿಲ್ಲ? ಎಂಬುದಾಗಿ ಆಕ್ಷೇಪ ಮಾಡಿದ್ದನು. ಒಂದು ವೇಳೆ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ಸೇರಿಸದಿದ್ದರೆ 'ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ವಾಕ್ಯವು ವ್ಯರ್ಥವಾಗುತ್ತದೆ. ಆದಕ್ಕಾಗಿ ಪ್ರಾಮಾಣ್ಯವನ್ನು ನೇರವಾಗಿ ಸಾಧಿಸಲು ಬರುವುದಿಲ್ಲ.

ಶಂಕಿತವಾದ ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯ ಹೊರಟಿದೆ. ಆದ್ದರಿಂದ ನೇರವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಿದರೆ ಈ ವಾಕ್ಯವು ವ್ಯರ್ಥವಾಗುವುದಿಲ್ಲ ಎಂದು ಪೂರ್ವಪಕ್ಷಿಯು ಪುನಃ ಆಕ್ಷೇಪವನ್ನು ಸಮರ್ಥನೆ ಮಾಡಿದ್ದನು.

ಹಾಗಾದರೆ 'ಆಪ್ತವಾಕ್ಯತಯಾ ತೇನ' ಎಂಬ ವಾಕ್ಯವು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ವಿವಕ್ಷಿಸಲೇಬೇಕೆಂದು ಟೀಕಾರಾಯರು ಉತ್ತರಿಸಿದರು.

ಇದರ ಮೇಲೆ ಪೂರ್ವಪಕ್ಷಿಯು ಪುನಃ ಹೀಗೆ ಆಕ್ಷೇಪ ಮಾಡುತ್ತಿದ್ದಾನೆ. ಅದು ಹೀಗೆ – 'ಬ್ರಹ್ಮತಂತ್ರಂ ಪ್ರಮಾಣಂ ವಕ್ತ್ರಾದ್ಯಾನುಕೂಲ್ಯಸದ್ಭಾವಾತ್' ಎಂಬುದಾಗಿಯೇ ಅನುಮಾನವನ್ನು ಮಾಡಬೇಕು. ಹೀಗೆ ಹೇಳಿದಾಗ ಆಪ್ತವಾಕ್ಯತ್ವವೆಂಬ ಉಪಾಧಿಯ ಆಶಂಕೆಯು ಬರುತ್ತದೆ. ಉಪಾಧಿ ಹಾಗೂ ಹೇತು ಎರಡೂ ಒಂದೇ ಆಗಿದೆ. ಎರಡೂ ಒಂದೇ ಆಗಿರುವುದರಿಂದ ಆಪ್ತವಾಕ್ಯತ್ವವು ಉಪಾಧಿಯಾಗಿದೆ ಎಂದು ಹೇಳಲು ಬರುವುದಿಲ್ಲ. ಇದನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ವಾಕ್ಯವು ಹೊರಟಿದೆ.

ಹಿಂದೆ ಟೀಕೆಯಲ್ಲಿ 'ಯತ್ ಯತ್ರ ವಾಕ್ಯೇ ವಕ್ತೃಶ್ರೋತೃಪ್ರಸಕ್ತೀನಾಂ ಅನುಕೂಲತಾ ತತ್ರ ಆಪ್ತವಾಕ್ಯತ್ವಂ' ಎಂಬುದಾಗಿ ಈ ವಾಕ್ಯಕ್ಕೆ ಯೋಜನೆಯನ್ನು ಮಾಡಿದ್ದರು. ಅದನ್ನು ಇಲ್ಲಿ ವಿವಕ್ಷಿಸಬಾರದು. ಯತ್ ಎಂಬುದಕ್ಕೆ ಯಸ್ಮಾತ್ ಎಂದು ಅರ್ಥವನ್ನು ಮಾಡಬೇಕು. 'ಯಸ್ಮಾತ್ ವಕ್ತೃಶ್ರೋತೃಪ್ರಸಕ್ತೀನಾಮ್ ಆಪ್ತಿಃ' 'ಯಾವ ಕಾರಣದಿಂದ ವಕ್ತೃ, ಶ್ರೋತೃ, ಪ್ರಸಕ್ತಿಗಳ ಅನುಕೂಲ್ಯವೇ ಆಪ್ತಿ ಎಂದು ಕರೆಸಿಕೊಳ್ಳುತ್ತದೋ ಆ ಕಾರಣದಿಂದ ಆಪ್ತವಾಕ್ಯತ್ವವಿರುವುದರಿಂದ ಪ್ರಮಾಣವಾಗುತ್ತದೆ. ಇಲ್ಲಿ ಆಪ್ತವಾಕ್ಯತ್ವವು ಪ್ರತ್ಯೇಕಪ್ರಮಾಣವಾಗಿಲ್ಲ. ಸಾಧನಾಭಿನ್ನವೇ ಆಗಿದೆ. ಇದನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ವಾಕ್ಯಗಳು ಹೊರಟವೆ. ಇಷ್ಟು ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದಾನೆ.

## ಕಿರಣಾವಲೀಕಾರನು ಹೇಳಿದ ಕೃತಕತ್ವ ಅನಿತ್ಯತ್ವಗಳ ಲಕ್ಷಣ

ಯಾದುಪತ್ಯ– ಸಾಧನಾಭೇದಾನುಪಪತ್ತೇರಿತಿ ॥ ಶ್ರೋತೃಪ್ರಸಂಗಾನುಕೂಲ್ಯಧರ್ಮಯೋಃ ಅಪಿ ಸಾಧನೇ ಪ್ರವಿಷ್ಟತ್ವಾದಿತಿ ಭಾವಃ । ನನು 'ಯೋ ಧೂಮವಾನ್' ಇತ್ಯಾದೌ ವಿಶೇಷ್ಯಾಂಶಸ್ಯೋಭಯತ್ರಾನುಪ್ರವೇಶೇಽಪಿ ನ ದೋಷಃ । ವಿಶೇಷಣಾಂಶಸ್ಯೈವ ಉಭಯತ್ರ ಪ್ರವೇಶಸ್ಯೋಕ್ತದೋಷಹೇತುತ್ವಾತ್ ಇತ್ಯತ ಆಹ – ಕೃತಕತ್ವಾನಿತ್ಯತ್ವಯೋರಿತಿ ॥ ಇದಂ ಚ 'ಅಸತಃ ಸತ್ತಾಸಂಬಂಧ

ಏವ ಕೃತಕತ್ವಮ್ । ಸತಃ ಸತ್ತಾಸಂಬಂಧಸ್ಯಾಪಗಮೋ ಅನಿತ್ಯತ್ವಮ್' ಇತ್ಯಭಿಪ್ರೇತ್ಯೋಕ್ತಮಿತಿ ಜ್ಞಾತವ್ಯಮ್ । ಯದಾಹ ಕಿರಣಾವಲೀಕಾರಃ 'ಕಾರ್ಯತ್ವಮಭೂತ್ವಾಭಾವಿತ್ವಮ್' ಇತಿ, 'ಅನಿತ್ಯತ್ವಂ, ಭೂತ್ವಾ ಅಭಾವಿತ್ವಮ್' ಇತಿ।

'ಸಾಧನಾಭೇದಾನುಪಪತ್ತೇಃ' – ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯ ಎಂಬ ಧರ್ಮಗಳು ಹೇತುವಿನಲ್ಲಿ ಸೇರಿವೆ. ಆಪ್ತಿಗೂ ಹೇತುವಿಗೂ ಐಕ್ಯವು ಸರ್ವಥಾ ಕೂಡುವುದಿಲ್ಲ.

ಪ್ರಶ್ನೆ – 'ಯೋ ಧೂಮವಾನ್' ಇತ್ಯಾದಿ ಸಂದರ್ಭದಲ್ಲಿ ವಿಶೇಷ್ಯಾಂಶವು ಎರಡೂ ಕಡೆ ಸಮಾನವಾಗಿದೆ. ಆದರೂ ಕೂಡ ಅಂಶತಃ ಐಕ್ಯವಿದೆ ಎಂಬ ದೋಷವನ್ನು ಯಾರೂ ಕೂಡ ಹೇಳು-ವುದಿಲ್ಲ. ವಿಶೇಷಣದ ಭಾಗವು ಎರಡೂ ಕಡೆ ಸಮಾನವಾಗಿದ್ದರೆ ಮಾತ್ರ ದೋಷವನ್ನು ಹೇಳಬೇಕು?

ಈ ಪ್ರಶ್ನೆಗೆ 'ಕೃತಕತ್ವಅನಿತ್ಯತ್ವಯೋಃ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಕೃತಕತ್ವ ಎಂದರೆ ಇಲ್ಲದೇ ಇರುವ ಪದಾರ್ಥಕ್ಕೆ ಸತ್ತಾ ಸಂಬಂಧದ ಬರುವಿಕೆ ಎಂದರ್ಥ. ಅನಿತ್ಯತ್ವ ಎಂದರೆ ಇರುವ ಪದಾರ್ಥಕ್ಕೆ ಸತ್ತಾಸಂಬಂಧದ ಅಪಗಮ ಎಂದರ್ಥ. ಇದನ್ನು ಕಿರಾಣಾವಲೀಕಾರನು ಕಾರ್ಯತ್ವಂ = ಅಭೂತ್ವಾಭಾವಿತ್ವಂ ಎಂಬರ್ಥವನ್ನು ಅನಿತ್ಯತ್ವಂ ಎಂಬುದಕ್ಕೆ ಭೂತ್ವಾ ಅಭಾವಿತ್ವಂ ಎಂಬರ್ಥವನ್ನು ಹೇಳಿರುತ್ತಾನೆ.

## ಸುಧಾಪರಿಮಳಸಾರ

ವಕ್ತ್ರಾದ್ಯಾನುಕೂಲ್ಯ ಮತ್ತು ಆಪ್ತವಾಕ್ಯತ್ವಗಳು ಬೇರೆ ಬೇರೆಯಾದರೂ ಹೇತುವಾದ ವಕ್ತ್ರಾದ್ಯಾನುಕೂಲ್ಯ ಮತ್ತು ಆಪ್ತವಾಕ್ಯತ್ವ ಎಂಬ ಸಾಧ್ಯದಲ್ಲಿ ಘಟಕವಾದ ಆಪ್ತಿ ಇವೆರಡಕ್ಕೆ ಅಭೇದವು ಇದ್ದೇ ಇದೆಯಲ್ಲ?

ವಕ್ತ್ರಾದ್ಯಾನುಕೂಲ್ಯಕ್ಕೆ ಮತ್ತು ಆಪ್ತಿಗೆ ಅಭೇದವಿದ್ದರೇನಂತೆ ವಕ್ತ್ರಾದ್ಯಾನುಕೂಲ್ಯ ಮತ್ತು ಆಪ್ತವಾಕ್ಯತ್ವ ಎಂಬ ವಿಶಿಷ್ಟಹೇತುಸಾಧ್ಯಗಳು ಬೇರೆ ಬೇರೆ ತಾನೆ? ವಿಶಿಷ್ಟಭೇದವಿದ್ದರೂ ಏಕದೇಶದ ಸಮಾನತೆಯಿಂದ ಸಾಧ್ಯಾವಿಶಿಷ್ಟತಾವನ್ನು ಹೇಳುವುದಾದಲ್ಲಿ ಯಾವುದು ಧೂಮವುಳ್ಳದ್ದೋ ಅದು ಅಗ್ನಿವುಳ್ಳದ್ದು ಎಂಬಲ್ಲಿಯೂ ಧೂಮ ಉಳ್ಳ ಧರ್ಮಿ ಅಗ್ನಿವುಳ್ಳ ಧರ್ಮಿ ಒಂದೇ ಆದುದರಿಂದ ವಿಶಿಷ್ಟಾಭೇದವಿರುವುದರಿಂದ ಸಾಧ್ಯಾವಿಶಿಷ್ಟತಾ-ದೋಷವು ಬರಬೇಕಾದೀತು.

ಇಲ್ಲಿ ವಿಶಿಷ್ಟಾಭೇದವಿದ್ದರೂ ಧೂಮವಹ್ನಿಗಳೆಂಬ ವಿಶೇಷಣಗಳು ಬೇರೆ ಬೇರೆಯಾದುದರಿಂದ ದೋಷವು ಬರುವುದಿಲ್ಲ ಅನ್ನುವುದಾದರೆ; 'ಕೃತಕತ್ವ' ಎಂದರೆ ಉತ್ಪತ್ತಿಗೆ ಮೊದಲು ಇಲ್ಲದ ವಸ್ತುವಿಗೆ ಕಾರಣಸಾಮಗ್ರಿಯಿಂದ

ಅಸ್ತಿತ್ವ(ಸತ್ತಾ) ಬರುವುದು. 'ಅನಿತ್ಯತ್ವ' ಎಂದರೆ ಮೊದಲು ಅಸ್ತಿತ್ವವನ್ನು(ಸತ್ತಾ) ಹೊಂದಿರತಕ್ಕ ವಸ್ತುವಿಗೆ ಮುಂದೆ ಅದರ(ಸತ್ತಾ) ನಾಶವಾಗುವುದು. ಹೀಗೆ ಕೃತಕತ್ವ, ಅನಿತ್ಯತ್ವಗಳಲ್ಲಿ ಒಂದೇ ವಿಶೇಷಣವಾಗಿ ಸತ್ತಾಂಶವು ಸೇರಿಕೊಂಡಿದೆ. ಆದರೂ ಪರವಾದಿಗಳು ಅವುಗಳಿಗೆ ವ್ಯಾಪ್ಯವ್ಯಾಪಕಭಾವವನ್ನು ಒಪ್ಪಿರುವರಷ್ಟೆ.

ಅನಿತ್ಯತ್ವ, ಕೃತಕತ್ವಗಳಲ್ಲಿ ಸತ್ತಾಂಶ ಸೇರಿದ್ದರಿಂದ ಅವುಗಳು(ಅಂಶತಃ) ಅಭಿನ್ನವಾದರೂ ವ್ಯಾಪ್ಯವ್ಯಾಪಕಭಾವವನ್ನು ಅವುಗಳಿಗೆ ಒಪ್ಪಿದ್ದಾರೆ. ಹಾಗೇ ಪ್ರಕೃತ ಹೇತುಸಾಧ್ಯಾಂಶಗಳಲ್ಲಿ ಏಕದೇಶ ಅಭಿನ್ನವಾದರೂ ಅವುಗಳಿಗೆ ವ್ಯಾಪ್ಯವ್ಯಾಪಕಭಾವ ಕೂಡಬಹುದು.

ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವಾದಿಗಳು ಆಪ್ತಿ. ಅವುಗಳಿಂದ ಕೂಡಿದ ವಾಕ್ಯತ್ವ ಆಪ್ತವಾಕ್ಯತ್ವ ಎಂದು ಅರ್ಥೈಸಿದಾಗ ನಿಮ್ಮ ಆಶಂಕೆಗೆ ಅವಕಾಶವಿರಬಹುದಾದರೂ ನಿರ್ದೋಷನೂ ಪ್ರಮಾಣಸಿದ್ಧವಾದುದನ್ನೇ ಹೇಳುವವನೂ ಆಪ್ತ. ಅವನು ಹೇಳಿದ ವಾಕ್ಯ ಆಪ್ತವಾಕ್ಯ ಎಂದು ಅರ್ಥೈಸಿದಾಗ 'ನಿರ್ದೋಷತ್ವ, ಪ್ರಮಿತಸ್ವೈವ ವಕ್ತೃತ್ವಗಳಲ್ಲಿ ವಕ್ತ್ರಾದ್ಯಾನುಕೂಲ್ಯವು ಸೇರಿಯೇ ಇಲ್ಲವಾದುದರಿಂದ 'ಸಾಧ್ಯಾವಿಶಿಷ್ಟತಾ'ದೋಷಕ್ಕೆ ಪ್ರಸಕ್ತಿಯೇ ಇಲ್ಲ.

## ನೆನೆಪಿಡಿ

* ವಕ್ತ್ರಾದ್ಯಾನುಕೂಲ್ಯದಿಂದ ಆಪ್ತಿಯನ್ನು ಸಾಧನೆ ಮಾಡುವುದಿಲ್ಲ. ವಕ್ತ್ರಾದ್ಯಾನುಕೂಲ್ಯಮತ್ವವೆಂಬ ಧರ್ಮದಿಂದ ಆಪ್ತವಾಕ್ಯತ್ವವನ್ನು ಸಾಧನೆ ಮಾಡುತ್ತೇವೆ. ಆದ್ದರಿಂದ ಅಂಶತಃ ಸಾಧ್ಯಾವಿಶಿಷ್ಟತಾವು ಬರುವುದಿಲ್ಲ.

* ಆಪ್ತವಾಕ್ಯತ್ವವೆಂಬ ಸಾಧ್ಯದಲ್ಲಿ ವಿವಕ್ಷಿತಾರ್ಥತತ್ವಜ್ಞಾನ ಮೊದಲಾದವುಗಳು ಸೇರಿವೆ. ಅವೇ ಹೇತುವಿನಲ್ಲೂ ಸೇರಿರುವುದರಿಂದ ಪುನಃ ಅಂಶತಃ ಐಕ್ಯವು ಬರುತ್ತದಲ್ಲವೇ? ಎಂದರೆ ವಿಶಿಷ್ಟಗಳಿಗೆ ಭೇದವಿರುವುದರಿಂದ ದೋಷವಿರುವುದಿಲ್ಲ. ವಿಶೇಷಣವು ಒಂದೇ ಆಗಿದ್ದರೂ ವಿಶಿಷ್ಟವು ಬೇರೆ ಬೇರೆಯಾಗಿರುವುದರಿಂದ ದೋಷವಿಲ್ಲ.

* ಏಕದೇಶದಲ್ಲಿ ಐಕ್ಯವಿದ್ದಮಾತ್ರಕ್ಕೆ ಹೇತುಸಾಧ್ಯಗಳ ಐಕ್ಯ ಒಪ್ಪುವುದಾದರೆ ಧೂಮ, ಅಗ್ನಿಗಳೆಂಬ ಹೇತುಸಾಧ್ಯಗಳಿಗೂ ವ್ಯಾಪ್ಯವ್ಯಾಪಕಭಾವವು ಇಲ್ಲದಿರಬೇಕಾಗುತ್ತದೆ.

* ಕೃತಕತ್ವ ಹಾಗೂ ಅನಿತ್ಯತ್ವಗಳಲ್ಲಿ ಸತ್ತಾ ಎಂಬ ಅಂಶವು ಸಮಾನವಾಗಿದೆ. ಆದರೂ ವ್ಯಾಪ್ಯವ್ಯಾಪಕಭಾವವಿದೆಯೆಂದು ಪರರು ಒಪ್ಪಿದ್ದಾರೆ.

* ಸತ್ತಾವತಃ ವಿನಾಶಿತ್ವಮ್ ಅನಿತ್ಯತ್ವಮ್, ಪ್ರಾಗಸತಃ ಸತ್ತಾಸಂಬಂಧಃ ಕೃತಕತ್ವಮ್ ಎಂಬ ಲಕ್ಷಣವನ್ನು ತಿಳಿಯಬೇಕು.

## ಆಚಾರ್ಯರು ಪ್ರಾಮಾಣ್ಯವನ್ನು ನೇರವಾಗಿ ಏಕೆ ಸಾಧಿಸಿಲ್ಲ ?

**ಶ್ರೀಮನ್ನ್ಯಾಯಸುಧಾ– ಗ್ರಂಥಕೃತಾ ಅಪಿ ಕಸ್ಮಾದಿಯಂ ಪರಂಪರಾ ಆಶ್ರಿತಾ ಇತಿ ಚೇನ್ನ । ವಕ್ತ್ರಾದ್ಯಾನುಕೂಲ್ಯೇನ ಪ್ರಾಮಾಣ್ಯಂ ಸಾಧಯತಾಽಪಿ ಅಂತತೋ ಅಸ್ಯಾರ್ಥಸ್ಯಾಶ್ರಯಣೀಯತ್ವಾತ್ । ಅನ್ಯಥಾ 'ಅಸ್ತು ವಕ್ತ್ರಾದ್ಯಾನುಕೂಲ್ಯಮ್, ವಕ್ತುರ್ವಿಪ್ರಲಿಪ್ಸಾಮೂಲತ್ವೇನ ಅಪ್ರಾಮಾಣ್ಯಂ ಚ ಭವತು' ಇತ್ಯಾಶಂಕಾಯಾಃ ಕೋ ನಿವಾರಯಿತಾ ।**

**ಯದ್ಯಪಿ 'ಪ್ರಾಮಾಣ್ಯಂ ಸ್ವತ ಏವ' ಇತಿ ಬಾದರಾಯಣೀಯಂ ಮತಮ್ । ಯದ್ ವಕ್ಷ್ಯತಿ 'ನ ವಿಲಕ್ಷಣತ್ವಾತ್' ಇತಿ । ಜೈಮಿನಿರಪಿ 'ತತ್ಪ್ರಾಮಾಣ್ಯಂ ಬಾದರಾಯಣಸ್ಯ ಅನಪೇಕ್ಷತ್ವಾತ್' ಇತಿ । ತಥಾಽಪಿ ಅಪ್ರಾಮಾಣ್ಯಶಂಕಾ-ನಿರಾಸಾರ್ಥೋಽಯಂ ಪ್ರಯತ್ನ ಇತ್ಯವಿರೋಧಃ ।**

ಗ್ರಂಥಕಾರರಾದರೂ ಕೂಡ ಆಪ್ತವಾಕ್ಯತ್ವವನ್ನು ಸಾಧನೆ ಮಾಡುವ ಮೂಲಕ ಪರಂಪರೆಯನ್ನು ಏಕೆ ಆಶ್ರಯಿಸಿದ್ದಾರೆ? ಹೀಗೆ ಪ್ರಶ್ನಿಸಬಾರದು. ವಕ್ತ್ರಾದ್ಯಾನುಕೂಲ್ಯದಿಂದ ಪ್ರಾಮಾಣ್ಯವನ್ನು ಯಾರು ನೇರವಾಗಿ ಸಾಧನೆ ಮಾಡುತ್ತಾನೋ ಅವನು ಅಂತಿಮವಾಗಿ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ಸಾಧನೆ ಮಾಡಲೇಬೇಕು? ಇಲ್ಲದಿದ್ದರೆ 'ವಕ್ತ್ರಾನುಕೂಲ್ಯ-ವಿರಲಿ ವಕ್ತೃವಿಗೆ ವಿಪ್ರಲಿಪ್ಸಾಮೂಲಕವಾಗಿ ಆ ವಚನಕ್ಕೆ ಅಪ್ರಾಮಾಣ್ಯವೇ ಇರಲಿ' ಎಂಬುದಾಗಿ ಅಪ್ರಯೋಜಕಾಶಂಕೆಯು ಬಂದರೆ ಹೇಗೆ ತಾನೇ ಪರಿಹರಿಸಲು ಸಾಧ್ಯ-ವಾಗುತ್ತದೆ?

ವಾಸ್ತವಿಕವಾಗಿ 'ಪ್ರಾಮಾಣ್ಯಂ ಸ್ವತಃ ಏವ' ಎಂಬುದು ಶ್ರೀವೇದವ್ಯಾಸದೇವರ ಅಭಿಪ್ರಾಯ. ನವಿಲಕ್ಷಣತ್ವಾಧಿಕರಣದಲ್ಲಿ ಇದನ್ನು ಮುಂದೆ ಹೇಳುವವರಿದ್ದಾರೆ. ಜೈಮಿನಿ ಋಷಿಗಳು ಕೂಡ 'ತತ್ಪ್ರಾಮಾಣ್ಯಂ ಬಾದರಾಯಣಸ್ಯ ಅನಪೇಕ್ಷತ್ವಾತ್' ಎಂಬ ಸೂತ್ರದಿಂದ

ಪ್ರಾಮಾಣ್ಯಸ್ವತಸ್ತ್ವವನ್ನೇ ಹೇಳಿದ್ದಾರೆ. ಆದರೂ ಕೂಡ ನಮ್ಮ ಈ ಪ್ರಯತ್ನ ಅಪ್ರಾಮಾಣ್ಯ-ಶಂಕೆಯನ್ನು ಪರಿಹಾರ ಮಾಡುವುದಷ್ಟೇ ಆಗಿದೆ. ಆದ್ದರಿಂದ ಈ ಪ್ರಯತ್ನವು ಯಾವುದಕ್ಕೂ ವಿರುದ್ಧವಾಗುವುದಿಲ್ಲ.

## ಅವಿಪ್ರಲಿಪ್ಸಾಘಟಿತವಾದ ಆಪ್ತವಾಕ್ಯತ್ವದ ಸಾಧನೆ ಅತ್ಯಂತ ಅನಿವಾರ್ಯ

ಪರಿಮಳ– ಗ್ರಂಥಕೃತಾ ಭಾಷ್ಯಕೃತಾ ಇತ್ಯರ್ಥಃ । ಅಸ್ಯಾರ್ಥಸ್ಯೇತಿ ॥ ಆಪ್ತವಾಕ್ಯತ್ವ-ದ್ವಾರಕಸ್ಯೇತ್ಯರ್ಥಃ।

'ಗ್ರಂಥಕೃತಾ' – ಭಾಷ್ಯಕಾರರಿಂದ. ಅಸ್ಯಾರ್ಥಸ್ಯ' = ಆಪ್ತವಾಕ್ಯತ್ವದ ಮೂಲಕವಾಗಿ ಎಂದರ್ಥ.

ವಿವರಣೆ – ವಕ್ತ್ರಾನುಕೂಲ್ಯದಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಿದರೂ ಕೂಡ ಅಂತಿಮವಾಗಿ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ಸಾಧನೆ ಮಾಡಿ, ಅನಂತರವೇ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು. ಹೀಗೊಪ್ಪದಿದ್ದರೆ 'ವಕ್ತ್ರಾದ್ಯಾನುಕೂಲ್ಯಮಸ್ತು, ಪ್ರಾಮಾಣ್ಯಂ ಮಾಸ್ತು' ಎಂಬುದಾಗಿ ಅಪ್ರಯೋಜಕ-ಶಂಕಾಮಾಡಿದರೆ ವಿಪಕ್ಷೇ ಬಾಧಕತರ್ಕವನ್ನು ಹೇಳಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ವಿಪ್ರಲಿಪ್ಸೆಯು ಇರುವುದಿಲ್ಲ ಎಂಬುದಾಗಿ ಸಾಧನೆಯನ್ನು ಮಾಡಬೇಕು. ಮುಖ್ಯವಾಗಿ ಸಾಧನೆ ಮಾಡಬೇಕಾದ ಅವಿಪ್ರಲಿಪ್ಸಾದಿಂದ ಘಟಿತವಾದ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ಸಾಧನೆ ಮಾಡಿದರೆ ಮಾತ್ರ ಅಪ್ರಯೋಜಕತ್ವಾಶಂಕೆಯು ಪರಿಹಾರವಾಗುತ್ತದೆ ಎಂದಭಿಪ್ರಾಯ.

## ಪ್ರಮಾಣಪದ್ಧತಿಯ ವಿರೋಧವಿಲ್ಲ

ಪರಿಮಳ– ಪ್ರಾಮಾಣ್ಯಂ ಸ್ವತ ಇತಿ । ನನು ಕಥಮೇತತ್ । ಪದ್ಧತೌ ಕರಣ-ಪ್ರಾಮಾಣ್ಯಂ ಜ್ಞಪ್ತೌ ಪರತಃ ಇತ್ಯುಕ್ತೇರಿತ್ಯತ ಆಹ – ಯದ್ವಕ್ಷ್ಯತೀತಿ ॥ ತಚ್ಚ ವಿವರಿಷ್ಯತೇ – 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಮ್' ಇತ್ಯತ್ರ । ಪದ್ಧತ್ಯುಕ್ತಿಸ್ತು ವಿವಕ್ಷಾಭೇದೇನ ಯುಕ್ತಾ ಇತಿ 'ಪ್ರತ್ಯಕ್ಷವಚ್ಚ' ಇತ್ಯತ್ರ ವ್ಯಕ್ತೀಕರಿಷ್ಯತೀತಿ ಭಾವಃ।

ಸಿದ್ಧವಾಯಿತು. 'ಆಪ್ತವಾಕ್ಯತಯಾ ತೇನ' ಎಂಬುದರಿಂದ ವಕ್ತ್ರಾದ್ಯಾನುಕೂಲ್ಯವನ್ನು ಸಾಧನ ಮಾಡುತ್ತಿದ್ದೀರಿ. ಇದು ಅನಾವಶ್ಯಕ. ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧನ ಮಾಡಿರುವುದೇ ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ. ಇದು ಪೂರ್ವವಾಕ್ಯದಿಂದಲೇ ತೋರಿಸಿದ ಮೇಲೆ ಮುಂದಿನವಾಕ್ಯವು ಅನಾವಶ್ಯಕ. ಹೀಗೆ ಪ್ರಶ್ನಿಸಬಾರದು.

ಉಪಾಧಿಯನ್ನು ಪಕ್ಷದಲ್ಲಿ ಸಾಧಿಸಿದ್ದು ಸಾಧನವ್ಯಾಪಕತ್ವದ ಪ್ರದರ್ಶನಕ್ಕಾಗಿ ಸರ್ವಥಾ ಅಲ್ಲ. ಆ ಉಪಾಧಿಯಿಂದ ಪಕ್ಷದಲ್ಲಿ ಸಾಧ್ಯಸಿದ್ಧಿ ಆಗಬೇಕಾಗಿದೆ. ಆದ್ದರಿಂದ 'ವಕ್ತ್ರಶ್ರೋತೃಪ್ರಸಕ್ತೀನಾಂ ಎಂಬ ವಾಕ್ಯವು ಉಪಾಧಿಗೆ ಸಾಧನವ್ಯಾಪಕತ್ವದ ಪ್ರದರ್ಶನಕ್ಕಾಗಿ ಹೊರಟಿದೆ. 'ಆಪ್ತವಾಕ್ಯತಯಾ ತೇನ' ಎಂಬ ವಾಕ್ಯವು ಇದೇ ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಎಂದು ತಿಳಿಯಬೇಕು. ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವದ ಸಾಧನೆಯು ಸಾಧನವ್ಯಾಪಕತ್ವದ ಪ್ರದರ್ಶನಕ್ಕಾಗಿ ಸರ್ವಥಾ ಅಲ್ಲ. ಈ ಆಪ್ತವಾಕ್ಯತ್ವದಿಂದ ಮುಂದೆ ಪ್ರಾಮಾಣ್ಯಸಮರ್ಥನೆ ಮಾಡುವುದೇ ಉದ್ದೇಶವಾಗಿದೆ. ಈ ಆಶಂಕೆಯು ಕೂಡ ತಪ್ಪು. ಇದನ್ನು ಯಾವಾಗ ಒಪ್ಪಬಹುದಿತ್ತು ಎಂದರೆ ಒಂದು ವೇಳೆ ಪಕ್ಷದಲ್ಲಿ ಪ್ರಾಮಾಣ್ಯದ ಸಿದ್ಧಿಗೋಸ್ಕರ ಮೊದಲೇ ಆಪ್ತವಾಕ್ಯತ್ವವನ್ನು ಸಾಧನ ಮಾಡಿದ್ದರೆ ಈ ಪ್ರಯೋಜನವನ್ನು ಹೇಳಬಹುದಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಮತ್ತೇನೆಂದರೆ ಪ್ರಾಮಾಣ್ಯದ ಸಿದ್ಧಿಗೋಸ್ಕರ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಸಾಧನಾಂತರವನ್ನು ಪ್ರಯೋಗಿಸಿದ್ದೇವೆ. ಅಲ್ಲಿ ಆಪ್ತವಾಕ್ಯತ್ವವು ಉಪಾಧಿಯಾಗಿದೆ ಎಂಬ ಆಶಂಕೆಯು ಪ್ರಸಕ್ತವಾದರೆ ಅದರ ಪರಿಹಾರಕ್ಕಾಗಿ ಸಾಧನವ್ಯಾಪಕತ್ವವನ್ನು ಹೇಳಿದ್ದೇವೆ. ಈಗ ವಕ್ತ್ರಾದ್ಯಾನುಕೂಲ್ಯಮತ್ತ್ವವು ನಿರುಪಾಧಿಕವಾಗಿ ನಿರ್ದುಷ್ಟವಾಯಿತು. ಇಂಥ ಸಾಧನೆಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು ಹೊರತು ಉಪಾಧಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ನ್ಯಾಯವಲ್ಲ. ಇದು ವ್ಯರ್ಥವೇ ಆಗಿದೆ ಈ ಅಭಿಪ್ರಾಯದಿಂದ 'ನ ಹಿ' ಎಂಬ ವಾಕ್ಯವು ಹೊರಟಿದೆ.

## ವಾದ ಮಾಡುವವರ ಸಂಪ್ರದಾಯಕ್ಕೆ ವಿರುದ್ಧವಾದ ಆಕ್ಷೇಪವಿದು

ಯಾದುಪತ್ಯ – ಅತ್ರ ವ್ಯಾಖ್ಯಾಯತಾಮಿತಿ ॥ 'ಗುರುರ್ಗುರೂಣಾಮ್' ಇತಿ ಶ್ಲೋಕೇ ಇತ್ಯರ್ಥಃ । 'ಗುರುರ್ಗುರೂಣಾಮ್' ಇತಿ ಹೇತುಸಿದ್ಧಾನುಕೂಲವಕ್ತ್ರಾದಿಮತ್ತ್ವಂ ಸಾಕ್ಷಾತ್ ಪ್ರಾಮಾಣ್ಯಾನುಮಾಪಕಮೇವಾಸ್ತು । ನ ತ್ವಾಪ್ತವಾಕ್ಯತಾನುಮಿತಿದ್ವಾರಾ ಇತ್ಯರ್ಥಃ । ಶಂಕಿತಸ್ಯೋಪಾಧೇರಿತಿ ॥ ಆಪ್ತವಾಕ್ಯತ್ವರೂಪಸ್ಯೋಪಾಧೇರಿತ್ಯರ್ಥಃ ।

ತಿಳಿಯುತ್ತದೆ ಎಂಬ ನಿಯಮವಿಲ್ಲ. ಆದ್ದರಿಂದ ಕರಣಪ್ರಾಮಾಣ್ಯದಲ್ಲಿ ಸ್ವತಸ್ತ್ವಲಕ್ಷಣವು ಬರುವುದಿಲ್ಲ-ವಾದ್ದರಿಂದ ಪ್ರಮಾಣಪದ್ಧತಿಯಲ್ಲಿ ಟೀಕಾರಾಯರು 'ಜ್ಞಪ್ತೌ ಕರಣಪ್ರಾಮಾಣ್ಯವನ್ನು ಪರತಃ' ಎಂಬುದಾಗಿ ಹೇಳಿದ್ದಾರೆ. ಇಂದ್ರಿಯಸ್ವರೂಪ, ಲಿಂಗಸ್ವರೂಪ, ಶಬ್ದಸ್ವರೂಪಗಳು ಯಥಾಯೋಗ್ಯವಾಗಿ ಪ್ರತ್ಯಕ್ಷಾದಿ ವೇದ್ಯಗಳಾಗಿವೆ. ಶಬ್ದವು ಶ್ರೋತ್ರೇಂದ್ರಿಯದಿಂದ ವೇದ್ಯವಾಗುತ್ತದೆ. ಲಿಂಗವು ಕೆಲವೆಡೆ ಅನುಮಾನವೇದ್ಯ , ಕೆಲವೆಡೆ ಶಬ್ದವೇದ್ಯ ಆಗಿರುತ್ತದೆ.

ಇಂದ್ರಿಯಗಳು ಅತೀಂದ್ರಿಯವಾದ್ದರಿಂದ ಯಾವಾಗಲೂ ಅನುಮಾನವೇದ್ಯವೇ ಆಗಿರುತ್ತವೆ. ಆದರೆ ಇವುಗಳಲ್ಲಿರುವ ಯಥಾರ್ಥಜ್ಞಾನಸಾಧನತ್ವರೂಪವಾದ ಪ್ರಾಮಾಣ್ಯವು ಅನ್ವಯವ್ಯತಿ-ರೇಕದಿಂದ ಗಮ್ಯವಾಗುತ್ತದೆ. ಸಾಧನತ್ವರೂಪವಾದ ಕಾರಣತ್ವವು ಅತೀಂದ್ರಿಯವಾದ್ದರಿಂದ ಅನ್ವಯ-ವ್ಯತಿರೇಕಗಳಿಂದಲೇ ತಿಳಿಯಬೇಕು. ನಿರ್ದುಷ್ಟವಾದ ಅರ್ಥೇಂದ್ರಿಯಸನ್ನಿಕರ್ಷವು ಇದ್ದರೆ ಪ್ರಮಾವು ಹುಟ್ಟುತ್ತದೆ. ಇಲ್ಲದಿದ್ದರೆ ಪ್ರಮಾವು ಹುಟ್ಟುವುದಿಲ್ಲ. ಅಥವಾ ಅನ್ವಯ-ವ್ಯತಿರೇಕಗಳಿಂದ ಸಧ್ರೀಚೀನ-ವಾದ ಸಾಕ್ಷಿಯಿಂದ ತಿಳಿಯಲ್ಪಡುತ್ತದೆ. ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಕರಣಸ್ವರೂಪವು ಯಾವುದರಿಂದ ತಿಳಿಯುತ್ತದೋ ಅದರಿಂದಲೇ ಕರಣಗಳಲ್ಲಿರುವ ಪ್ರಾಮಾಣ್ಯವೂ ಕೂಡ ತಿಳಿಯಲ್ಪ-ಡುತ್ತದೆ ಎಂಬ ಸ್ವತಸ್ತ್ವಲಕ್ಷಣವು ಬರುವುದಿಲ್ಲ.

ಕರಣಪ್ರಾಮಾಣ್ಯವು 'ಜ್ಞಪ್ತಿಯಲ್ಲಿ ಸ್ವತಃ' ಎಂಬುದಾಗಿ ಇದೇ ಮುಂದಿನ ಗ್ರಂಥದಲ್ಲಿ ಹೇಳಿದ್ದಾರೆ. ಈಗ ಲಕ್ಷಣವನ್ನು ಹೀಗೆ ತಿಳಿಯಬೇಕು –

'ಕರಣಾನಾಂ ಜ್ಞಾನಜನಕತ್ವಂ ಯೇನ ಗೃಹ್ಯತೇ ತೇನೈವ ತತ್ಪ್ರಮಾಜನಕತ್ವಂ ಗೃಹ್ಯತೇ' ಕರಣಗಳಿಗೆ ಜ್ಞಾನಜನಕತ್ವವು ಇದೆ; ಇದು ಪ್ರತಿಯೊಂದಕ್ಕೂ ಕೂಡ ಇದೆ. ಆದರೆ ಪ್ರಮಾಜನಕತ್ವವೇ ಪ್ರಾಮಾಣ್ಯ ಎನಿಸಿಕೊಳ್ಳುತ್ತದೆ. ಜ್ಞಾನಜನಕತ್ವವು ಯಾವ ಪ್ರಮಾಣದಿಂದ ಗೃಹೀತವಾಗುತ್ತಿದೆಯೋ ಅದರಿಂದಲೇ ಕರಣಗಳ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವೂ ಕೂಡ ಗೃಹೀತವಾಗುತ್ತದೆ. ಪ್ರತ್ಯಕ್ಷ, ಅನುಮಾನ, ಶಬ್ದಗಳೆಂಬ ಪ್ರಮಾಣಗಳಿಗೆ ಜ್ಞಾನಜನಕತ್ವವಿದೆ. ಪ್ರಮಾಜನಕತ್ವವೂ ಕೂಡ ಇದೆ. ಜ್ಞಾನಜನಕತ್ವವು ಅನ್ವಯ-ವ್ಯತಿರೇಕಸಧ್ರೀಚೀನವಾದ ಸಾಕ್ಷಿಯಿಂದ ತಿಳಿಯಲ್ಪಡುತ್ತದೆ. ಇದೇ ಸಾಕ್ಷಿ-ಯಿಂದ ಪ್ರಮಾಜನಕತ್ವವೂ ಕೂಡ ಗೃಹೀತವಾಗುತ್ತದೆ. ಈ ಲಕ್ಷಣವನ್ನು ವಿವಕ್ಷಿಸಿದಾಗ ಕರಣ-ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವಿದೆ ಎಂದು ತಿಳಿಯಬೇಕು.

## ನ್ಯಾಯಸುಧೆಯಲ್ಲಿ 'ಪ್ರಾಮಾಣ್ಯಂ ಸ್ವತಃ ಏವ' ಎಂಬ ಆಕ್ಷೇಪ ಮಾಡಿದ್ದು ಎಷ್ಟು ಸರಿ

ಪರಿಮಳ– ನನು 'ಏತಚ್ಛಾಸ್ತ್ರಂ ಪ್ರಮಾಣಂ ಪ್ರಮಿತಿಜನಕಮ್ । ಆಪ್ತವಾಕ್ಯತ್ವಾತ್' ಇತಿ ಶಾಸ್ತ್ರಪ್ರಾಮಾಣ್ಯಜ್ಞಾನಾಯ ನ ವಿಜಾತೀಯಸಂವಾದರೂಪಾನುಮಾನೋಕ್ತಿರ್ಯುಕ್ತಾ । ಶಾಸ್ತ್ರಸ್ಯ ಜ್ಞಾನಜನನಶಕ್ತಿಃ ಯೇನ ಜ್ಞಾಯತೇ ತೇನೈವ ತಸ್ಯ ಪ್ರಮಾಜನನಶಕ್ತಿರೂಪಪ್ರಾಮಾಣ್ಯಸ್ಯಾಪಿ ಜ್ಞಾಯಮಾನತ್ವರೂಪಸ್ವತಸ್ತ್ವೋಪಗಮವಿರೋಧಾತ್ । ನ ಚಾಪ್ತವಾಕ್ಯತ್ವರೂಪಮನುಮಾನಂ ಪ್ರಮಾಜನನಶಕ್ತಿಗ್ರಾಹಕಂ ಸತ್ ಜ್ಞಾನಜನನಶಕ್ತಿಂ ನ ಗೃಹ್ಣಾತೀತಿ ಯುಕ್ತಮ್ । ತಯೋರಭೇದಾತ್ । ಭೇದೇ ವಾ 'ಇದಂ ಜ್ಞಾನಜನಕಮ್ ಆಪ್ತವಾಕ್ಯತ್ವಾತ್' ಇತಿ ಪ್ರಯೋಗಸಂಭವೇನ ತಸ್ಯಾ ಅಪಿ ಗ್ರಾಹಕತ್ವಾದಿತಿ ಚೇನ್ನ । ಪರ್ಯಾಯೇಣ ಗ್ರಾಹಕತ್ವೇ ಅಪಿ 'ಜ್ಞಾನಂ ಪ್ರಮಾಣಮ್' ಇತಿವತ್ 'ಜ್ಞಾನಜನಕಮಿದಂ, ಪ್ರಮಾಜನಕಂ' ಇತಿ ಯುಗಪದಗ್ರಹಾತ್ ।

ಆಕ್ಷೇಪ– 'ಏತಚ್ಛಾಸ್ತ್ರಂ ಪ್ರಮಾಣಂ = ಪ್ರಮಿತಿಜನಕಮ್, ಆಪ್ತವಾಕ್ಯತ್ವಾತ್' 'ಆಪ್ತವಾಕ್ಯವಾಗಿರುವುದರಿಂದ ಈ ಶಾಸ್ತ್ರವು ಪ್ರಮಿತಿಜನಕವಾಗಿದೆ' ಎಂಬುದಾಗಿ ಸಾಧನೆ ಮಾಡುವುದಾದರೆ ಶಾಸ್ತ್ರಪ್ರಾಮಾಣ್ಯಜ್ಞಾನಕ್ಕೋಸ್ಕರ ವಿಜಾತೀಯಸಂವಾದರೂಪವಾದ ಅನುಮಾನವನ್ನು ಹೇಳುವುದು ಅಯುಕ್ತವಾಗುತ್ತದೆ. ಏಕೆಂದರೆ, ಶಾಸ್ತ್ರದಲ್ಲಿ ಇರುವ ಜ್ಞಾನಜನನಶಕ್ತಿಯು ಯಾವ ಪ್ರಮಾಣದಿಂದ ತಿಳಿಯುತ್ತದೋ ಅದೇ ಪ್ರಮಾಣದಿಂದ ಶಾಸ್ತ್ರದಲ್ಲಿರುವ ಯಥಾರ್ಥಜ್ಞಾನಜನನಶಕ್ತಿಯು ಕೂಡ ತಿಳಿಯುತ್ತದೆ. ಹೀಗೆ ಜ್ಞಾನಜನನಶಕ್ತಿಯನ್ನು ತಿಳಿಸುವ ಪ್ರಮಾಣದಿಂದಲೇ ಯಥಾರ್ಥಜ್ಞಾನಜನನಶಕ್ತಿಯು ತಿಳಿಯುತ್ತದೆ. ಕರಣಪ್ರಾಮಾಣ್ಯವು ಜ್ಞಪ್ತಿಯಲ್ಲಿ ಸ್ವತಃ ಎಂದು ಹೇಳುವುದಾದರೆ ಆಪ್ತವಾಕ್ಯತ್ವ ಎಂಬ ಅನುಮಾನದಿಂದ ಶಾಸ್ತ್ರಪ್ರಾಮಾಣ್ಯವು ತಿಳಿಯುತ್ತದೆಂದು ಈಗ ಹೇಳುತ್ತಿರುವುದರಿಂದ ವಿರೋಧವು ಬರುತ್ತದೆ.

ಇನ್ನು ಆಪ್ತವಾಕ್ಯತ್ವರೂಪವಾದ ಅನುಮಾನವು ಪ್ರಮಾಜನನಶಕ್ತಿಗ್ರಾಹಕವಾಗಿದೆ. ಆದರೆ ಜ್ಞಾನಜನನಶಕ್ತಿಗ್ರಾಹಕ ಆಗಿರುವುದಿಲ್ಲ ಎಂದು ಹೇಳಬಹುದಲ್ಲವೇ? ಎಂಬುದಾಗಿ ಪ್ರಶ್ನಿಸ-

ಧರ್ಮ ಘಟ, ಪಟ ಮೊದಲಾದ ಸಮಸ್ತಪಾರ್ಥಿವ ಪದಾರ್ಥಗಳಲ್ಲಿದೆ ಆದ್ದರಿಂದ "ಘಟತ್ವ", ಎಂಬ ಧರ್ಮಕ್ಕಿಂತ "ಪೃಥಿವೀತ್ವ" ಎಂಬ ಧರ್ಮ ವ್ಯಾಪಕ, ಹಾಗೆಯೇ ಪೃಥಿವೀತ್ವ ಎಂಬ ಧರ್ಮಕ್ಕಿಂತ ದ್ರವ್ಯತ್ವ ಎಂಬ ಧರ್ಮ ವ್ಯಾಪಕ. ಏಕೆಂದರೆ ಪೃಥಿವೀತ್ವ ಎಂಬುದು ಸಮಸ್ತಪೃಥಿವಿಯಲ್ಲಿ ಇದ್ದರೂ 'ಜಲ'ದಲ್ಲಿ ಇಲ್ಲ. ಆದರೆ "ದ್ರವ್ಯತ್ವ" ಎಂಬ ಧರ್ಮ ಪೃಥಿವೀ, ಜಲ ಮೊದಲಾದ ಎಲ್ಲಾ ದ್ರವ್ಯಗಳಲ್ಲಿಯೂ ಇದೆ. ಆದ್ದರಿಂದ "ದ್ರವ್ಯತ್ವ" ಎಂಬ ಧರ್ಮ ಪೃಥಿವೀತ್ವ ಎಂಬ ಧರ್ಮಕ್ಕಿಂತ ವ್ಯಾಪಕವಾಗಿದೆ. ಹೀಗೆ 'ದ್ರವ್ಯತ್ವ' ಎಂಬುದು ಘಟತ್ವಧರ್ಮಕ್ಕೆ ವ್ಯಾಪಕವಾದ ಪೃಥಿವೀತ್ವಕ್ಕೆ ವ್ಯಾಪಕ. ಹಾಗೇ ಘಟತ್ವ ಎಂಬ ಧರ್ಮಕ್ಕೂ ವ್ಯಾಪಕ ಆಗಿಯೇ ಆಗುತ್ತದೆ. ವ್ಯಾಪಕ ಅಲ್ಲ ಎಂದು ಹೇಳಲು ಬರುವುದಿಲ್ಲ. ಪ್ರಕೃತ ಪ್ರಾಮಾಣ್ಯ ಎಂಬ ಧರ್ಮ ವಕ್ತ್ರಾನುಕೂಲ್ಯವ್ಯಾಪಕವಾದ ಆಪ್ತವಾಕ್ಯತ್ವ ಎಂಬ ಧರ್ಮಕ್ಕೆ ವ್ಯಾಪಕ ಆಗಿರುವುದರಿಂದ ವಕ್ತ್ರಾನುಕೂಲ್ಯಕ್ಕೂ ವ್ಯಾಪಕ ಆಗಿಯೇ ಆಗಿರುತ್ತದೆ. ವ್ಯಾಪಕ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ.

## ಸುಧಾಪರಿಮಳಸಾರ

'ಗುರುರ್ಗುರೂಣಾಂ' ಎಂಬೀ ಪದ್ಯವನ್ನು ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಆಪ್ತವಾಕ್ಯ. ಆಪ್ತವಾಕ್ಯವಾದುದರಿಂದ ಪ್ರಮಾಣ ಎಂದು ಪರಂಪರೆಯನ್ನು ಆಶ್ರಯಿಸಿ ಪ್ರಾಮಾಣ್ಯಸಾಧನಪರ ಎಂದು ಯಾಕೆ ವ್ಯಾಖ್ಯಾನಿಸದ್ದು? ವಕ್ತ್ರಾದ್ಯಾನುಕೂಲ್ಯ ಇರುವುದರಿಂದ ಪ್ರಮಾಣ ಎಂದು ನೇರವಾಗಿಯೇ ಪ್ರಾಮಾಣ್ಯ-ಸಾಧನ ಪರ ಎಂದು ಯಾಕೆ ವ್ಯಾಖ್ಯಾನಿಸಬಾರದು. ವಕ್ತ್ರಾದ್ಯಾನುಕೂಲ್ಯ ಇರುವಲ್ಲೆಲ್ಲ ಆಪ್ತವಾಕ್ಯತ್ವ ಇರುವಂತೆ ಪ್ರಾಮಾಣ್ಯವೂ ಇದೆ. ಹೀಗೆ ವಕ್ತ್ರಾದ್ಯಾನುಕೂಲ್ಯವತ್ವ ಎಂಬ ಹೇತುವಿಗೆ ಆಪ್ತವಾಕ್ಯತ್ವ ಎಂಬ ಸಾಧ್ಯದೊಂದಿಗೆ ವ್ಯಾಪ್ತಿ ಇರುವಂತೆ ಪ್ರಾಮಾಣ್ಯ ಎಂಬ ಸಾಧ್ಯದೊಂದಿಗೂ ವ್ಯಾಪ್ತಿ ಇದೆ. ಆಪ್ತವಾಕ್ಯತ್ವವನ್ನು ಸಾಧಿಸುವಾಗ ಮತ್ತು ಪ್ರಾಮಾಣ್ಯವನ್ನು ಸಾಧಿಸುವಾಗಲೂ ಶಾಸ್ತ್ರವೇ ಪಕ್ಷವಾದುದರಿಂದ ಶಾಸ್ತ್ರದಲ್ಲಿ ಆಪ್ತವಾಕ್ಯತ್ವ ಇರುವಂತೆ ವಕ್ತ್ರಾದ್ಯಾ-ನುಕೂಲ್ಯವೂ ಇರುವುದರಿಂದ ಎರಡು ಹೇತುಗಳಿಗೆ ಪಕ್ಷಧರ್ಮತಾ ಇದೆ. ವಕ್ತ್ರಾದ್ಯಾನುಕೂಲ್ಯಕ್ಕೆ ಪ್ರಾಮಾಣ್ಯವು ವ್ಯಾಪಕ ಆಗುವುದಿಲ್ಲ ಎಂದೇನೂ ಇಲ್ಲ. ಆಪ್ತವಾಕ್ಯತ್ವ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವಂತೆ ಅನುಕೂಲ-ವಕ್ತ್ರಾದಿಮತ್ವಪ್ರಾಮಾಣ್ಯಗಳಿಗೂ ವ್ಯಾಪ್ತಿ ಇದ್ದೇ ಇದೆ. ತನ್ನ ವ್ಯಾಪಕಕ್ಕೆ ವ್ಯಾಪಕವಾಗಿರುವುದು ತನಗೆ ವ್ಯಾಪಕ-ವಲ್ಲವೆಂದಾಗುವ ಸಂಭವವಿಲ್ಲ ತಾನೆ?

ವಕ್ತ್ರಾದ್ಯಾನುಕೂಲ್ಯ ಮತ್ತು ಪ್ರಾಮಾಣ್ಯಗಳಿಗೆ ವ್ಯಾಪ್ತಿ ಇರುವುದರಿಂದಷ್ಟೆ ವಕ್ತ್ರಾದ್ಯಾನುಕೂಲ್ಯದಿಂದ ನೇರವಾಗಿ ಪ್ರಾಮಾಣ್ಯಸಾಧನಪರ ಎಂದು ವ್ಯಾಖ್ಯಾನಿಸಬಹುದಿತ್ತಲ್ಲ ಎಂದಿಷ್ಟೇ ಆಕ್ಷೇಪವಲ್ಲ. ವಕ್ತ್ರಾದ್ಯಾನು-ಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧನ ಮಾಡಿದರೆ ದೋಷವೂ ಇದೆ. ವಿವಕ್ಷಿತಾರ್ಥತತ್ವಜ್ಞಾನ, ಅವಿಪ್ರಲಿಪ್ಸಾ,

ಎಂದು ಅಂಗೀಕರಿಸಿದ್ದೇವೆ. ಆದರೆ ನೀವು ಪರ್ಯಾಯೇಣ ಗ್ರಾಹಕವಾಗಿದೆ ಎಂದು ಹೇಳುತ್ತಿದ್ದೀರಿ. ಇದರಿಂದ ಸ್ವತಸ್ತ್ವವು ಪ್ರಾಪ್ತವಾಗುವುದಿಲ್ಲ.

## 'ಯದ್ಯಪಿ' ಎಂಬ ಸುಧೆಯಲ್ಲಿ ಮಾಡಿದ ಪ್ರಶ್ನೆ ಮತ್ತು ಉತ್ತರಗಳು ಮುಂದಿನ ವಿಷಯಕ್ಕೆ ಸಂಬಂಧಪಟ್ಟಿದ್ದು

ಪರಿಮಳ– ನನು ಚ 'ಜ್ಞಾನಜನಕಮಿದಂ ಶಾಸ್ತ್ರಂ ಪ್ರಮಾಜನಕಮ್ ಆಪ್ತವಾಕ್ಯತ್ವಾತ್' ಇತ್ಯುಕ್ತೌ ಯುಗಪದುಭಯಗ್ರಾಹಕತ್ವಮಪ್ಯಸ್ತಿ ಇತಿ ಚೇತ್ । ಏವಂ ತರ್ಹಿ ವಕ್ಷ್ಯ-ಮಾಣಶ್ರುತಿಯುಕ್ತಿಸಂವಾದೇನ ಪ್ರಾಮಾಣ್ಯಗ್ರಹಸ್ಯೋತ್ತರವಾಕ್ಯೇ ವಕ್ಷ್ಯಮಾಣತ್ವಾತ್ ತದಪೇಕ್ಷಯಾ ಏತೇ ಶಂಕೋತ್ತರೇ ಸ್ಯಾತಾಮ್ । ಅತ ಏವ 'ನ ವಿಲಕ್ಷಣತ್ವಾತ್' ಇತಿ ಸಮ್ಮತ್ಯುಕ್ತಿಃ ಸಂಗತಾ । ತತ್ರ ಸಂವಾದನಿರಪೇಕ್ಷೇಣ ಪ್ರಾಮಾಣ್ಯಗ್ರಹಸ್ಯ ವಕ್ಷ್ಯಮಾಣ-ತ್ವಾತ್ ।

'ಜ್ಞಾನಜನಕಮಿದಂ ಶಾಸ್ತ್ರಂ ಪ್ರಮಾಜನಕತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಿದಾಗ ಆಪ್ತವಾಕ್ಯತ್ವವು ಪ್ರಮಾಜನಕತ್ವವನ್ನು ಹಾಗೂ ಜ್ಞಾನಜನಕತ್ವಗಳೆರಡನ್ನೂ ಒಂದೇ ಕಾಲದಲ್ಲಿ ಗ್ರಹಣ ಮಾಡುತ್ತದಲ್ಲವೇ?

ಹೀಗೆ ವಿವಕ್ಷಿಸುವುದಾದರೆ ಈ ಸುಧಾವಾಕ್ಯದಲ್ಲಿ ಮಾಡಿದ ಪ್ರಶ್ನೆ ಹಾಗೂ ಉತ್ತರಗಳು ಮುಂದಿನ ವಿಷಯಕ್ಕೆ ಸಂಬಂಧಪಟ್ಟವೆ. ಮುಂದೆ ಶ್ರುತಿಸಂವಾದ ಹಾಗೂ ಯುಕ್ತಿಸಂವಾದ-ಗಳಿಂದ ಪ್ರಾಮಾಣ್ಯವನ್ನು ಸಾಧಿಸುತ್ತಾರೆ. ಅವುಗಳು ಸಜಾತೀಯಸಂವಾದಗಳಾಗಿರುವುದರಿಂದ ಈ ಪ್ರಶ್ನೆಯು ಅಲ್ಲಿ ಸಮಂಜಸವಾಗುತ್ತದೆ. ಆದ್ದರಿಂದಲೇ ನವಿಲಕ್ಷಣತ್ವಾತ್ ಎಂಬ ಸಮ್ಮತಿ-ಯನ್ನು ಕೂಡ ಹೇಳಿದ್ದು ಸಂಗತವಾಗುತ್ತದೆ. ಏಕೆಂದರೆ ಸಂವಾದದ ಅಪೇಕ್ಷೆ ಇಲ್ಲದೇ ಪ್ರಾಮಾಣ್ಯಗ್ರಹವನ್ನು ಅಲ್ಲಿ ಸಮರ್ಥಿಸುವವರಿದ್ದಾರೆ.

ಸಾರಾಂಶ– ನ್ಯಾಯಸುಧೆಯಲ್ಲಿ ಯುಕ್ತಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವುದು ಹೇಗೆ ಸಮಂಜಸವಾಗುತ್ತದೆ? ಹಾಗಾದಲ್ಲಿ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದಲ್ಲವೇ? ಎಂಬ ಪ್ರಶ್ನೆಯನ್ನು

ಮಾಡಿದ್ದಾರೆ. ಈ ಪ್ರಶ್ನೆಗೆ ಅಪ್ರಾಮಾಣ್ಯಶಂಕಾನಿರಾಸಕ್ಕೋಸ್ಕರ ಈ ಪ್ರಯತ್ನವೆಂದು ಹೇಳಿದ್ದಾರೆ. ವಾಸ್ತವಿಕವಾಗಿ ಉತ್ತರದಲ್ಲಿ ವಿವಾದವೇ ಇಲ್ಲ. ಆದರೆ ಪ್ರಶ್ನೆಯನ್ನು ಮಾಡಿದ್ದು ಹೇಗೆ ಸಮಂಜಸ? ಎಂಬುದಷ್ಟೇ ಇಲ್ಲಿ ಮಾಡಬೇಕಾದ ವಿಮರ್ಶೆ. 'ಜ್ಞಾನಜನಕತ್ವಂ ಯೇನ ಗೃಹ್ಯತೇ ಪ್ರಮಾಜನಕತ್ವಮಪಿ ತೇನೈವ ಗೃಹ್ಯತೇ' ಎಂಬುದೇ ಪ್ರಾಮಾಣ್ಯದ ಸ್ವತಸ್ತ್ವ ಎಂದು ಕರೆಸಿಕೊಳ್ಳುತ್ತದೆ. ಆಪ್ತವಾಕ್ಯತ್ವವೆಂಬ ಲಿಂಗವು ಪ್ರಮಾಜನಕತ್ವವನ್ನು ಗ್ರಹಣಮಾಡುವಂತೆ ಜ್ಞಾನಜನಕತ್ವವನ್ನೂ ಕೂಡ ಗ್ರಹಣ ಮಾಡುತ್ತಿದೆ. ಎರಡೂ ಶಕ್ತಿಗಳು ಅಭಿನ್ನವಾಗಿವೆ. ಒಂದು ವೇಳೆ ಎರಡೂ ಶಕ್ತಿಗಳು ಭಿನ್ನವೆಂದು ಒಪ್ಪಿದರೂ ಕೂಡ ಪ್ರಮಾಜನಕತ್ವವನ್ನು ಅನುಮಾನ ಮಾಡುವಂತೆ ಜ್ಞಾನಜನಕತ್ವವನ್ನೂ ಕೂಡ ಅನುಮಾನ ಮಾಡ-ಬಹುದು. ಆಗ ಒಂದೇ ಲಿಂಗವು ಎರಡನ್ನೂ ಕೂಡ ಗ್ರಹಣ ಮಾಡುತ್ತಿರುವುದರಿಂದ ಪ್ರಾಮಾಣ್ಯ-ಸ್ವತಸ್ತ್ವಕ್ಕೆ ಭಂಗಬರುವುದಿಲ್ಲ. ಒಂದು ವೇಳೆ ಆಪ್ತವಾಕ್ಯತ್ವದಿಂದ ಪ್ರಮಾಜನಕತ್ವವನ್ನು ಸಾಧನೆ ಮಾಡಿ ಪ್ರಮಾಜನಕತ್ವವೆಂಬ ವಿಶೇಷದಿಂದ ಜ್ಞಾನಜನಕತ್ವವೆಂಬ ಸಾಮಾನ್ಯವು ಸಿದ್ಧವಾಗುತ್ತದೆಂದು ಅನುಮಾನ ಮಾಡುವುದಾದರೆ ಆಗಷ್ಟೇ ಪ್ರಯೋಗಾಂತರವಾಗುತ್ತದೆ. ಆದರೆ ಹಾಗೆ ಮಾಡುತ್ತಿಲ್ಲವಾದ್ದರಿಂದ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುವುದಿಲ್ಲ.

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ, ಪ್ರಮಾಜನಕತ್ವ ಹಾಗೂ ಜ್ಞಾನಜನಕತ್ವವು ಒಂದೇ ಆಪ್ತವಾಕ್ಯತ್ವವೆಂಬ ಲಿಂಗದಿಂದ ಸಿದ್ಧವಾಗಿದೆ. ಈ ವಿಷಯದಲ್ಲಿ ವಿವಾದವಿಲ್ಲ. ಆದರೆ ಒಂದೇ ಕಾಲದಲ್ಲಿ ಒಟ್ಟಿಗೆ ಎರಡರ ಗ್ರಹಣವು ಆಗಿರುವುದಿಲ್ಲ. ಪ್ರಮಾಣ್ಯಸ್ವತಸ್ತ್ವವೆಂದರೆ ಪ್ರಮಾಜನಕತ್ವವು ಗ್ರಹಣ-ವಾಗುವ ಕಾಲದಲ್ಲಿಯೇ ಜ್ಞಾನಜನಕತ್ವವೂ ಗ್ರಹಣವಾಗಬೇಕು ಎಂದರ್ಥ.

ಹಾಗಾದರೆ ಹೀಗೆ ಪ್ರಶ್ನಿಸುತ್ತೇವೆ – 'ಜ್ಞಾನಜನಕಂ ಇದಂ ಶಾಸ್ತ್ರಂ, ಪ್ರಮಾಜನಕಂ ಆಪ್ತವಾಕ್ಯತ್ವಾತ್' ಎಂಬುದಾಗಿ ಅನುಮಾನಪ್ರಯೋಗವನ್ನು ಮಾಡುತ್ತೇವೆ. ಹೀಗೆ ಹೇಳಿದಾಗ ಉಭಯಗ್ರಾಹಕತ್ವವು ಆಪ್ತವಾಕ್ಯಕ್ಕೆ ಏಕಕಾಲದಲ್ಲೇ ಆಗುತ್ತದೆ. ಒಂದು ವೇಳೆ ಸಾಧ್ಯದಲ್ಲಿ ಜ್ಞಾನಜನಕತ್ವವೆಂಬ ವಿಶೇಷಣವನ್ನು ನೀಡಿದರೆ ಅರ್ಥಾಂತರತಾನಿವಾರಣೆ ವ್ಯಭಿಚಾರಪರಿಹಾರ ಮೊದಲಾದ ಪ್ರಯೋಜನಗಳು ಇರು-ವುದಿಲ್ಲ. ಆದ್ದರಿಂದ ಪಕ್ಷತಾವಚ್ಛೇದಕದಲ್ಲಿ ಜ್ಞಾನಜನಕತ್ವವನ್ನು ನೀಡುತ್ತೇವೆ. ಪಕ್ಷತಾವಚ್ಛೇದಕ-ಸಾಮಾನಾಧಿಕರಣ್ಯೇನ ಸಾಧ್ಯಗ್ರಾಹಕ ಅನುಮಿತಿಯು ಹುಟ್ಟುತ್ತಿರುವುದರಿಂದ ಉಭಯಗ್ರಾಹಕತ್ವವನ್ನು ಯುಗಪತ್ ಹೇಳಬಹುದು. ಈಗ ಜ್ಞಾನಜನಕತ್ವಸಮಾನಾಧಿಕರಣವಾದ ಪ್ರಮಾಜನಕತ್ವವಿಷಯಕವಾಗಿ ಅನುಮಿತಿಯು ಹುಟ್ಟುತ್ತಿದೆ. ಹೀಗೆ ಆಪ್ತವಾಕ್ಯತ್ವವು ಯುಗಪತ್ ಉಭಯಗ್ರಾಹಕವಾಗುತ್ತದಲ್ಲವೇ?

ಹೀಗೆ ವಿವಕ್ಷಿಸುವುದಾದರೆ ಟೀಕೆಯಲ್ಲಿ ಮಾಡಿಕೊಂಡ ಪ್ರಶ್ನೆ ಮತ್ತು ಉತ್ತರಗಳು ಮುಂದಿನ ವಿಷಯಕ್ಕೆ ಸಂಬಂಧಪಟ್ಟವೆ ಎಂದು ತಿಳಿಯೋಣ. ಮುಂದೆ ಸಜಾತೀಯಸಂವಾದವನ್ನು ಹೇಳುವವ-ರಿದ್ದಾರೆ. ಈಗ ಆಪ್ತವಾಕ್ಯತ್ವರೂಪವಾದ ಹೇತುವು ಪ್ರಾಮಾಣ್ಯವನ್ನು ಸಾಧಿಸುತ್ತದೆಂಬುದು ವಿಜಾತೀಯ-ಸಂವಾದವಾಗಿದೆ. ಏಕೆಂದರೆ ಇದು ಸಾಕ್ಷಾತ್ ಬ್ರಹ್ಮಸೂತ್ರವಿಷಯಕವಲ್ಲ. ಬ್ರಹ್ಮಸೂತ್ರವಿಷಯ-ವಿಷಯಕವಾಗಿದೆ. ಬ್ರಹ್ಮಸೂತ್ರಪ್ರಾಮಾಣ್ಯದ ಮೂಲಕ ಬ್ರಹ್ಮಸೂತ್ರವನ್ನು ವಿಷಯೀಕರಿಸುವುದರಿಂದ ಈ ಆಪ್ತವಾಕ್ಯತ್ವವು ವಿಜಾತೀಯಸಂವಾದವಾಗಿದೆ. ಈ ವಿಷಯದಲ್ಲಿ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದಲ್ಲವೇ ಎಂಬ ಪ್ರಶ್ನೆಯೂ ಬೇಡ. ಇದಕ್ಕೆ ಸಮಾಧಾನವೂ ಬೇಡ. ಇದಕ್ಕೆ ಶ್ರುತಿಮೂಲಕವಾಗಿ ಯುಕ್ತಿಮೂಲಕವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡುತ್ತಾರೆ. ಅದು ಸಜಾತೀಯಸಂವಾದವಾಗಿದೆ. ಆ ಸಜಾತೀಯಸಂವಾದವು ಕೇವಲ ಪ್ರಾಮಾಣ್ಯಕ್ಕೆ ಸಾಧಕವಾಗುತ್ತದೆ ಹೊರತು ಜ್ಞಾನಜನಕತ್ವಕ್ಕೆ ಸಾಧಕ-ವಾಗುವುದಿಲ್ಲ. ಏಕೆಂದರೆ, ಸಜಾತೀಯಸಂವಾದ ಆಗಿದೆಯೆಂದು ತಿಳಿಯಬೇಕೆಂದರೆ ಜ್ಞಾನಜನಕವಾಗಿ-ದೆಯೆಂದು ಮೊದಲೇ ತಿಳಿದಿರಬೇಕು. 'ಬ್ರಹ್ಮಸೂತ್ರಂ ಪ್ರಮಾಣಂ ಶ್ರುತಿಸಮಾನವಿಷಯಕತ್ವಾತ್ ಯುಕ್ತಿಸಮಾನವಿಷಯಕತ್ವಾತ್' ಈ ಶ್ರುತಿಸಂವಾದತ್ವ ಹಾಗೂ ಯುಕ್ತಿಸಂವಾದತ್ವವೆಂಬ ಸಜಾತೀಯ-ಸಂವಾದದಿಂದ ಕೇವಲ ಪ್ರಾಮಾಣ್ಯವನ್ನು ನಿಶ್ಚಯಮಾಡಬೇಕೇ ಹೊರತು ಜ್ಞಾನಜನಕತ್ವವನ್ನು ನಿಶ್ಚಯಮಾಡಲು ಸಾಧ್ಯವಿಲ್ಲ. ಏಕೆಂದರೆ ಜ್ಞಾನಜನಕತ್ವವು ಮೊದಲೇ ಗೃಹೀತವಾಗಿದೆ. ಜ್ಞಾನ ಹುಟ್ಟಿರುವುದರಿಂದಲೇ ಇದು ಸಜಾತೀಯಸಂವಾದವಾಗಿದೆ. ಬ್ರಹ್ಮಸೂತ್ರ ಹೇಳುವ ಹಾಗೂ ಶ್ರುತಿ ಹೇಳುವ ವಿಷಯವು ಒಂದೇ ಆಗಿದೆ. ಆದ್ದರಿಂದ ಸಂವಾದಿಯಾಗಿದೆ. ಹೀಗೆ ಸಜಾತೀಯಸಂವಾದದಿಂದ ಪ್ರಾಮಾಣ್ಯವು ಸಿದ್ಧವಾಗುವಾಗ ಜ್ಞಾನಜನಕತ್ವವೂ ಕೂಡ ಅದೇ ಕಾಲದಲ್ಲಿಯೇ ಸಿದ್ಧವಾಗುತ್ತದೆಂದು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ 'ಯದ್ಯಪಿ' ಎಂಬ ನ್ಯಾಯಸುಧಾ ವಾಕ್ಯದಲ್ಲಿ ಮಾಡಲ್ಪಟ್ಟ ಪ್ರಶ್ನೆ ಹಾಗೂ ಉತ್ತರಗಳು ಮುಂದಿನ ಮೂಲಕ್ಕೆ ಸಂಬಂಧಪಟ್ಟದ್ದೆಂದು ತಿಳಿಯಬೇಕು.

## ಜ್ಞಾನಪ್ರಾಮಾಣ್ಯವನ್ನು ಸಾಧಿಸುವ ಉದ್ದೇಶದಲ್ಲಿ ಪ್ರಶ್ನೆ ಹಾಗೂ ಉತ್ತರಗಳು

ಪರಿಮಳ– ಯದ್ವಾ ಮೂಲೇ 'ಬ್ರಹ್ಮಸೂತ್ರಾಣಾಂ ಪ್ರಾಮಾಣ್ಯಮ್' ಇತ್ಯಸ್ಯ 'ಬ್ರಹ್ಮಸೂತ್ರಜ್ಞಾನಪ್ರಾಮಾಣ್ಯಮ್' ಇತ್ಯರ್ಥಃ । 'ಆಪ್ತವಾಕ್ಯತಯಾ' ಇತ್ಯಾದೇರಾಪ್ತ-

ವಾಕ್ಯಜತ್ವೇನ ಇತ್ಯಾದಿರರ್ಥಃ । ಏವಂ ಚ ತತ್ಪ್ರಾಮಾಣ್ಯಸ್ಯ ಸಾಕ್ಷಿವೇದ್ಯತಯಾ ಅನುಮಾನಾವೇದ್ಯತ್ವಾತ್ 'ಆಪ್ತವಾಕ್ಯತ್ವಾತ್' ಇತ್ಯುಕ್ತಿರಯುಕ್ತಾ ಇತಿ ಶಂಕಾಭಿಪ್ರಾಯಃ । 'ನ ವಿಲಕ್ಷಣತ್ವಾತ್' ಇತ್ಯತ್ರಾಪಿ ತಜ್ಜನ್ಯಜ್ಞಾನಪ್ರಾಮಾಣ್ಯಸ್ವತಸ್ತ್ವಾಶಯೇನೈವ ಸಮ್ಮತ್ಯುಕ್ತಿರಿತಿ ಧ್ಯೇಯಮ್ ।

ಅಥವಾ ಮೂಲದಲ್ಲಿ 'ಬ್ರಹ್ಮಸೂತ್ರಾಣಾಂ ಪ್ರಾಮಾಣ್ಯಮ್' ಎಂಬುದಕ್ಕೆ 'ಬ್ರಹ್ಮಸೂತ್ರ-ಜ್ಞಾನಪ್ರಮಾಣ್ಯಂ' ಎಂದರ್ಥ. 'ಆಪ್ತವಾಕ್ಯತಯಾ' ಎಂಬುದಕ್ಕೂ ಕೂಡ 'ಆಪ್ತವಾಕ್ಯಜತ್ವೇನ' ಎಂದರ್ಥ. ಆದ್ದರಿಂದ ಬ್ರಹ್ಮಸೂತ್ರಪ್ರಾಮಾಣ್ಯವು ಸಾಕ್ಷಿವೇದ್ಯವಾಗಿದ್ದರಿಂದ ಅನುಮಾನ-ವೇದ್ಯವು ಆಗಿರುವುದಿಲ್ಲ. ಹೀಗಿರುವಾಗ 'ಆಪ್ತವಾಕ್ಯತ್ವಾತ್' ಎಂಬ ಯುಕ್ತಿಯನ್ನು ಹೇಳಿದ್ದು ಅಯುಕ್ತವಲ್ಲವೇ? ಇಟ್ಟು ಆಶಂಕೆಯ ಅಭಿಪ್ರಾಯ.

'ನವಿಲಕ್ಷಣತ್ವಾತ್' ಎಂಬ ಸೂತ್ರದಲ್ಲೂ ಕೂಡ ತಜ್ಜನ್ಯಜ್ಞಾನದ ಪ್ರಾಮಾಣ್ಯದ ಸ್ವತಸ್ತ್ವಾ-ಭಿಪ್ರಾಯದಿಂದಲೇ ಸಮ್ಮತಿಯನ್ನು ಹೇಳಿರುತ್ತಾರೆಂದು ತಿಳಿಯಬೇಕು.

ವಿವರಣೆ – ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧನೆ ಮಾಡುತ್ತಿಲ್ಲ. ಬ್ರಹ್ಮಸೂತ್ರಜ್ಞಾನಕ್ಕೆ ಪ್ರಾಮಾಣ್ಯವನ್ನು ಸಾಧನೆ ಮಾಡುತ್ತಿದ್ದಾರೆ. ಆಪ್ತವಾಕ್ಯತ್ವಾತ್ ಎಂಬ ಹೇತುವಿಗೂ ಕೂಡ 'ಆಪ್ತ-ವಾಕ್ಯಜತ್ವೇನ' ಎಂಬರ್ಥವನ್ನು ಮಾಡಬೇಕು. ಆದ್ದರಿಂದ 'ಬ್ರಹ್ಮಸೂತ್ರಜ್ಞಾನಂ ಪ್ರಮಾಣಂ ಆಪ್ತವಾಕ್ಯ-ಜತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಿದಂತಾಯಿತು. ಬ್ರಹ್ಮಸೂತ್ರಜ್ಞಾನಕ್ಕೆ ಪ್ರಾಮಾಣ್ಯವು ಅನುಮಾನದಿಂದ ಸಿದ್ಧವಾಗುತ್ತದೆಂದು ಹೇಳಿದರೆ ಜ್ಞಾನಕ್ಕೆ ಸ್ವತಃಪ್ರಾಮಾಣ್ಯವನ್ನು ಕೈಬಿಟ್ಟಂತಾಗು-ತ್ತದಲ್ಲವೇ? ಎಂಬುದು ಶಂಕೆಯ ಅಭಿಪ್ರಾಯ. ಅಪ್ರಾಮಾಣ್ಯಶಂಕೆಯ ನಿರಾಸಕ್ಕೋಸ್ಕರ ಅನುಮಾನ-ವನ್ನು ಪ್ರಯೋಗ ಮಾಡಿದ್ದೇವೆ. ಪ್ರಾಮಾಣ್ಯಸಮರ್ಥನೆಗೆ ಅಲ್ಲವೆಂದು ಉತ್ತರಿಸಿದ್ದಾರೆ.

ಜ್ಞಾನಪ್ರಾಮಾಣ್ಯದಲ್ಲಿ 'ಯದ್ಯಪಿ' ಎಂಬ ವಾಕ್ಯವನ್ನು ವಿವಕ್ಷಿಸುವುದಾದರೆ 'ಯದ್ವಕ್ಷ್ಯತಿ ನ ವಿಲಕ್ಷಣತ್ವಾತ್' ಎಂಬುದಾಗಿ ನವಿಲಕ್ಷಣತ್ವಾಧಿಕರಣದ ಸಮ್ಮತಿಯನ್ನು ಹೇಗೆ ವಿವಕ್ಷಿಸುವುದು? ಏಕೆಂದರೆ ನ ವಿಲಕ್ಷಣತ್ವಾಧಿಕರಣದಲ್ಲಿ ವೇದಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾರೆ. ವೇದಗಳು ಕರಣಗಳಾಗಿವೆ. ನೀವು ಜ್ಞಾನಪ್ರಾಮಾಣ್ಯದಲ್ಲಿ ಅದನ್ನು ಹೇಗೆ ಸಂವಾದಿಯಾಗಿ ವಿವಕ್ಷಿಸುತ್ತೀರಿ?

ಈ ಪ್ರಶ್ನೆಯು ತಪ್ಪು. ಏಕೆಂದರೆ ನ ವಿಲಕ್ಷಣತ್ವಾಧಿಕರಣದಲ್ಲೂ ಕೂಡ ಕೇವಲ ಕರಣ-ಪ್ರಾಮಾಣ್ಯವನ್ನಷ್ಟೇ ಸಮರ್ಥನೆ ಮಾಡಿರುವುದಲ್ಲ. ಜ್ಞಾನಪ್ರಾಮಾಣ್ಯವನ್ನೂ ಕೂಡ ಸಮರ್ಥನೆ ಮಾಡಿದ್ದಾರೆ. ಅಲ್ಲಿ ಮಾಡಿರುವ ತಜ್ಜನ್ಯಜ್ಞಾನಪ್ರಾಮಾಣ್ಯಸ್ವತಸ್ತ್ವದ ಅಭಿಪ್ರಾಯದಿಂದಲೇ ಇಲ್ಲಿ 'ಯದ್ ವಕ್ಷ್ಯತಿ' ಎಂಬುದಾಗಿ ನ ವಿಲಕ್ಷಣತ್ವಾಧಿಕರಣದ ಸಮ್ಮತಿಯನ್ನು ತಿಳಿಸಿದ್ದಾರೆ.

## ಆಪ್ತವಾಕ್ಯತ್ವವು ಪ್ರಾಮಾಣ್ಯಸಾಧಕವೇ ಅಲ್ಲ; ಕೇವಲ ವಿಶೇಷ್ಯಾಸಿದ್ಧಿಪರಿಹಾರಕ

**ಪರಿಮಳ–** ಅಥವಾ 'ಇದಂ ಶಾಸ್ತ್ರಂ ಪ್ರಮಾಜನಕಂ ಜ್ಞಾನಜನಕತ್ವೇ ಸತಿ ಸಂಶಯ-ವಿಪರ್ಯಯಾಜನಕತ್ವಾತ್ ಸಮ್ಮತವಾಕ್ಯವತ್' ಇತ್ಯನುಮಾನಮೇವ ಪ್ರಾಮಾಣ್ಯ-ಗ್ರಾಹಕಮ್ । ಆಪ್ತವಾಕ್ಯತ್ವಾದಿಹೇತುತ್ರಯಂ ಚೋಕ್ತಹೇತೋಃ ವಿಶೇಷ್ಯಾಸಿದ್ಧಿವಾರಕಮಿತಿ ಶಂಕೋತ್ತರೇ ಧ್ಯೇಯೇ ।

ಅಥವಾ 'ಇದಂ ಶಾಸ್ತ್ರಂ ಪ್ರಮಾಜನಕಂ ಜ್ಞಾನಜನಕತ್ವೇ ಸತಿ ಸಂಶಯವಿಪರ್ಯಯಾ-ಜನಕತ್ವಾತ್ ಸಮ್ಮತವಾಕ್ಯವತ್' ಎಂಬ ಅನುಮಾನವೇ ಪ್ರಾಮಾಣ್ಯಸಾಧಕವಾಗಿದೆ. ಆಪ್ತ-ವಾಕ್ಯತ್ವವೇ ಮೊದಲಾದ ಮೂರು ಹೇತುಗಳು ಸಂಶಯವಿಪರ್ಯಯಾಜನಕತ್ವವೆಂಬ ವಿಶೇಷ್ಯಾಸಿದ್ಧಿಯನ್ನು ಪರಿಹಾರಮಾಡಲು ಹೊರಟಿವೆ. ಹೀಗೆ ವಿವಕ್ಷಿಸಿದಾಗ 'ಯದ್ಯಪಿ' ಇತ್ಯಾದಿಯಾದ ವಾಕ್ಯದಿಂದ ಮಾಡಲ್ಪಟ್ಟ ಆಶಂಕೆ ಹಾಗೂ ಸಮಾಧಾನಗಳು ಸಮಂಜಸ-ವಾಗುತ್ತವೆ.

ವಿವರಣೆ– 'ಇದಂ ಶಾಸ್ತ್ರಂ ಪ್ರಮಾಜನಕಂ ಜ್ಞಾನಜನಕತ್ವೇ ಸತಿ ಸಂಶಯವಿಪರ್ಯಯಾಜನಕತ್ವಾತ್' ಎಂಬ ಅನುಮಾನದಿಂದ ಈ ಶಾಸ್ತ್ರವು ಜ್ಞಾನಜನಕವಾಗಿದೆ; ಆದರೆ ಸಂಶಯವಿಪರ್ಯಯಜನಕವಾಗಿಲ್ಲ ಪರಿಶೇಷಾತ್ ಪ್ರಮಾಜನಕವೇ ಆಗಿರಬೇಕು ಎಂಬುದಾಗಿ ಸಾಧಿಸುತ್ತೇವೆ. ಈ ಅನುಮಾನದಲ್ಲಿ ಸಂಶಯವಿಪರ್ಯಯಾಜನಕತ್ವ ಎಂಬ ವಿಶೇಷಾಂಶವನ್ನು ಸಾಧನೆ ಮಾಡುವುದಕ್ಕಾಗಿ ಆಪ್ತವಾಕ್ಯತ್ವವೆಂಬ ಹೇತುವನ್ನು ಹೇಳಿರುತ್ತೇವೆ. ಶ್ರುತಿಸಂವಾದಿತ್ವ ಯುಕ್ತಿಸಂವಾದಿತ್ವ ಮೊದಲಾದ ಹೇತುಗಳನ್ನು ಹೇಳಿರು-ವುದೂ ಕೂಡ ಇದೇ ಸಂಶಯವಿಪರ್ಯಯಾಜನಕತ್ವವನ್ನು ಸಾಧನೆ ಮಾಡುವುದಕ್ಕಾಗಿ. ಸೂತ್ರಗಳಿಗೆ

ಪ್ರಾಮಾಣ್ಯಸಿದ್ಧವಾಗುವುದು ಪ್ರಮಾಜನಕತ್ವಾನುಮಾನದಿಂದಲೇ ಎಂಬುದಾಗಿ ತಿಳಿಯಬೇಕು. ಈ ಅನುಮಾನದಿಂದ ಜ್ಞಾನಜನಕತ್ವವನ್ನು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಆ ಜ್ಞಾನಜನಕತ್ವವು ಹೇತುಶರೀರದಲ್ಲಿ ಪ್ರವಿಷ್ಟವಾಗಿದೆ. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವಕ್ಕೆ ಹಾನಿ ಬರುತ್ತದಲ್ಲವೇ? ಎಂಬ ಆಶಂಕೆಯು ಯುಕ್ತವಾಗುತ್ತದೆ. ಅದಕ್ಕನುಗುಣವಾದ ಸಮಾಧಾನನೀಡುವ ವಾಕ್ಯವೂ ಕೂಡ ಸಮಂಜಸವಾಗುತ್ತದೆ.

## ನಿಜವಾಗಿಯೂ ಪ್ರಾಮಾಣ್ಯಸ್ವತಸ್ತ್ವ ಎಂದರೇನು?

**ಪರಿಮಳ–** ವಸ್ತುತಸ್ತು ವಾಕ್ಯಶ್ರವಣಾತ್ ಜಾಯಮಾನಬೋಧರೂಪಕಾರ್ಯ-ಲಿಂಗೇನ ಜ್ಞಾನಜನನಶಕ್ತಿರನುಮೀಯತೇ । ತೇನೈವ ಪ್ರಮಾಜನನಶಕ್ತಿರಪಿ ನ ತ್ವಾಪ್ತ-ವಾಕ್ಯತ್ವಾದಿನಾ ಇತಿ ಸ್ವತಃಪ್ರಾಮಾಣ್ಯಮಿತಿ ಶಂಕಾರ್ಥಃ।

ವಸ್ತುತಸ್ತು ನಿಜವಾದ ಅಭಿಪ್ರಾಯ ಹೀಗಿದೆ – ವಾಕ್ಯವನ್ನು ಕೇಳಿದ ಮೇಲೆ ಹುಟ್ಟುವಂತಹ ಶಾಬ್ದಬೋಧರೂಪವಾದ ಅನ್ವಯವ್ಯತಿರೇಕರೂಪವಾದ ಕಾರ್ಯಲಿಂಗದಿಂದ ಜ್ಞಾನಜನನ-ಶಕ್ತಿಯನ್ನು ಅನುಮಾನ ಮಾಡುತ್ತೇವೆ. ಅದರಿಂದಲೇ ಪ್ರಮಾಜನನಶಕ್ತಿಯು ಕೂಡ ತಿಳಿಯುತ್ತದೆ. ಆಪ್ತವಾಕ್ಯದಿಂದ ಪ್ರಮಾಜನನಶಕ್ತಿಯು ತಿಳಿಯುವುದಿಲ್ಲ. ಇದೇ ಸ್ವತಃಪ್ರಮಾಣ ಎಂದು ಕರೆಸಿಕೊಳ್ಳುತ್ತದೆ. ಹೀಗೆ ವಿವಕ್ಷಿಸಿದಾಗ ಆಪ್ತವಾಕ್ಯತ್ವವೆಂಬ ಮತ್ತೊಂದು ಹೇತುವಿನಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಿದರೆ ಸ್ವತಃಪ್ರಾಮಾಣ್ಯವು ಭಂಗವಾಗುತ್ತದಲ್ಲವೇ ಎಂಬುದು ಆಶಂಕೆಯ ಅಭಿಪ್ರಾಯ.

ವಿವರಣೆ – ಇಲ್ಲಿಯ ತನಕ ಬೇರೆ ಬೇರೆ ಪಕ್ಷಗಳನ್ನು ಹೇಳಿ ಈಗ ತಮ್ಮ ನಿಜವಾದ ಅಭಿಪ್ರಾಯವನ್ನು ಸ್ಥಾಪನೆ ಮಾಡುತ್ತಿದ್ದಾರೆ. 'ಪ್ರಾಮಾಣ್ಯಂ ಯೇನ ಗೃಹ್ಯತೇ ತೇನೈವ ಜ್ಞಾನಂ ಗೃಹ್ಯತೇ' ಎಂಬುದು ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಲ್ಲ. 'ಜ್ಞಾನಂ ಯೇನ ಗೃಹ್ಯತೇ ತೇನೈವ ಪ್ರಾಮಾಣ್ಯಂ ಗೃಹ್ಯತೇ' ಎಂಬುದೇ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾಗಿದೆ. ಹೀಗೊಪ್ಪದಿದ್ದರೆ ನೈಯಾಯಿಕರೂ ಕೂಡ ಸ್ವತಸ್ತ್ವವಾದಿಗಳು ಎಂದಾಗಬೇಕಾದೀತು. ಅವರು ಪ್ರಾಮಾಣ್ಯವನ್ನು ಅನುಮೇಯವೆಂದು ಹೇಳುತ್ತಾರೆ. ಯಾವುದೇ ಅನುಮಾನಗಳು ಜ್ಞಾನವನ್ನು ಗ್ರಹಣ ಮಾಡದೇ ಪ್ರಾಮಾಣ್ಯವನ್ನು ಗ್ರಹಣ ಮಾಡುವುದಿಲ್ಲ. 'ಇದಂ ಜ್ಞಾನಂ ಪ್ರಮಾ, ಸಮರ್ಥಪ್ರವೃತ್ತಿಜನಕತ್ವಾತ್' ಇತ್ಯಾದಿ ಅನುಮಾನಗಳು ಜ್ಞಾನವನ್ನು ಗ್ರಹಣ

ಮಾಡದೇ ಇರುವುದಿಲ್ಲ. ಈ ಪ್ರಾಮಾಣ್ಯಗ್ರಾಹಕವಾದ ಸಜಾತೀಯವಿಜಾತೀಯ ಸಂವಾದರೂಪವಾದ ಅನುಮಾನವು ಜ್ಞಾನವನ್ನು ಅವಶ್ಯವಾಗಿ ಗ್ರಹಣ ಮಾಡಿಯೇ ಮಾಡುತ್ತದೆ. ಜ್ಞಾನಗ್ರಾಹಕವಾದದ್ದೆಲ್ಲಾ ಪ್ರಾಮಾಣ್ಯಗ್ರಾಹಕವಾಗಬೇಕು. ಆಗ ಮಾತ್ರ ಪ್ರಾಮಾಣ್ಯಸ್ವತಸ್ತ್ವವು ಬರುತ್ತದೆ. ಆದ್ದರಿಂದ 'ಜ್ಞಾನಂ ಯೇನ ಗೃಹ್ಯತೇ ತೇನೈವ ಪ್ರಾಮಾಣ್ಯಂ ಗೃಹ್ಯತೇ' ಎಂಬುದೇ ನಾವು ಹೇಳುತ್ತಿರುವ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾಗಿದೆ. 'ಜ್ಞಾನಜನಕತ್ವಂ ಯೇನ ಗೃಹ್ಯತೇ ಪ್ರಮಾಜನಕತ್ವಂ ತೇನೈವ ಗೃಹ್ಯತೇ' ಎಂಬುದು ಕರಣಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾಗಿದೆ. ಪ್ರಕೃತ ಆಪ್ತವಾಕ್ಯತ್ವವೆಂಬ ಬೇರೆ ಪ್ರಮಾಣದಿಂದ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿದರೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುತ್ತದೆ. ಬ್ರಹ್ಮಸೂತ್ರಗಳನ್ನು ಕೇಳಿದಾಗ ವ್ಯುತ್ಪನ್ನನಾದವನಿಗೆ ಜ್ಞಾನವು ಹುಟ್ಟುತ್ತದೆ. ಇದೇ ಪ್ರಾಮಾಣ್ಯವನ್ನು ಗ್ರಹಣ ಮಾಡಿದರೆ ಪ್ರಾಮಾಣ್ಯಸ್ವತಸ್ತ್ವವು ಬರುತ್ತದೆ. ಬೇರೆ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಗ್ರಹಣ ಮಾಡಿದರೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುತ್ತದೆ.

ಪ್ರಮಾಜನಕತ್ವಸಾಧಕವಾದ ಆಪ್ತವಾಕ್ಯತ್ವರೂಪವಾದ ಹೇತುವು ಜ್ಞಾನಜನಕತ್ವಕ್ಕೂ ಕೂಡ ಸಾಧಕವಾಗುವುದರಿಂದ ಸ್ವತಸ್ತ್ವವು ಹಾನಿಯಾಗುವುದಿಲ್ಲವೆಂದು ಹಿಂದೆ ಹೇಳಲಾಗಿತ್ತು. ಆದರೆ ಇಲ್ಲಿ ಸ್ವತಸ್ತ್ವದ ಪರಿಷ್ಕಾರವನ್ನೇ ಬೇರೆ ರೀತಿಯಲ್ಲಿ ವಿವಕ್ಷಿಸುತ್ತಿದ್ದಾರೆ. 'ಜ್ಞಾನಜನಕತ್ವಂ ಯೇನ ಗೃಹ್ಯತೇ ತೇನೈವ ಪ್ರಾಮಾಣ್ಯಂ ಗೃಹ್ಯತೇ' ಎಂಬುದೇ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣವಾಗಿದೆ. ಕರಣದಿಂದ ಜ್ಞಾನವು ಹುಟ್ಟುತ್ತದೆ. ಕಾರ್ಯರೂಪವಾದ ಲಿಂಗದಿಂದ ಕಾರ್ಯಜನಕತ್ವವನ್ನು ಅನುಮಾನ ಮಾಡುತ್ತೇವೆ. ಅದರ ಜೊತೆಯಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಣ ಮಾಡಿದರೆ ಅದೇ ಅನುಮಾನವು ಪ್ರಮಾ-ಜನಕತ್ವವನ್ನೂ ಕೂಡ ಗ್ರಹಣ ಮಾಡಿದಂತೆ ಆಗುತ್ತದೆ. ಶಬ್ದದಿಂದ ಹುಟ್ಟುವ ಶಾಬ್ದಬೋಧರೂಪವಾದ ಕಾರ್ಯವೆಂಬ ಲಿಂಗದಿಂದ ಅರ್ಥಾತ್ ಅನ್ವಯವ್ಯತಿರೇಕರೂಪವಾದ ಲಿಂಗದಿಂದ ಜ್ಞಾನಜನಕತ್ವವು ಕರಣಕ್ಕೆ ಯಾವಾಗ ಗೃಹೀತವಾಗುತ್ತದೋ ಅದೇ ಕಾಲದಲ್ಲಿ ಜ್ಞಾನನಿಷ್ಠವಾದ ಪ್ರಾಮಾಣ್ಯವನ್ನೂ ಕೂಡ ಸಾಕ್ಷಿಯು ಗ್ರಹಣ ಮಾಡುತ್ತದೆ. ಆಗ ಈ ಅನುಮಾನವೇ ಪ್ರಮಾಜನಕತ್ವವನ್ನೂ ಕೂಡ ಗ್ರಹಣ ಮಾಡುತ್ತದೆ. ಪ್ರತಾರಕವಾಕ್ಯದಿಂದ ಜ್ಞಾನವು ಗೃಹೀತವಾದಾಗ ಅದರಲ್ಲಿ ಪ್ರಮಾಜನಕತ್ವವು ಗೃಹೀತ-ವಾಗಿರುವುದಿಲ್ಲ. ಈ ಹಂತದಲ್ಲಿ ಅನ್ವಯವ್ಯತಿರೇಕರೂಪವಾದ ಕಾರ್ಯರೂಪವಾದ ಲಿಂಗವು ಪ್ರಮಾಜನಕತ್ವಪರ್ಯಂತರವಾಗಿ ಪರ್ಯವಸಾನವಾಗುವುದಿಲ್ಲ.

ಈ ಅನುಮಾನದಿಂದ ಕೇವಲ ಜ್ಞಾನಜನಕತ್ವವಷ್ಟೇ ಗೃಹೀತವಾಗಿದೆ. ಸಾಕ್ಷಿಯು ಜ್ಞಾನಪ್ರಾಮಾಣ್ಯ-ದಲ್ಲಿ ಉದಾಸೀನವಾಗಿದೆ ಎಂದು ಅಂಗೀಕರಿಸಿ ಆಪ್ತವಾಕ್ಯತ್ವರೂಪಲಿಂಗದಿಂದ ಪ್ರಾಮಾಣ್ಯವನ್ನು ಸಾಧನೆ

ಮಾಡುವುದಾದರೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುತ್ತದಲ್ಲವೇ? ಎಂಬುದು ಈ ನ್ಯಾಯಸುಧೆಯಲ್ಲಿ ಮಾಡಿದ ಆಕ್ಷೇಪದ ಅಭಿಪ್ರಾಯ.

ಹೀಗೆ ವ್ಯಾಖ್ಯಾನ ಮಾಡಿದಾಗ ಬ್ರಹ್ಮಸೂತ್ರವೆಂಬ ಪದಕ್ಕೆ ಬ್ರಹ್ಮಸೂತ್ರಜ್ಞಾನವೆಂಬ ಅರ್ಥವನ್ನು ವಿವಕ್ಷಿಸುವ ಅವಶ್ಯಕತೆ ಇಲ್ಲ. ಆಪ್ತವಾಕ್ಯತ್ವಾತ್ ಎಂಬ ಹೇತುವಿಗೆ ಆಪ್ತವಾಕ್ಯಜತ್ವಾತ್ ಎಂಬ ಅರ್ಥ-ವನ್ನೂ ಕೂಡ ಅಂಗೀಕರಿಸಬೇಕಾಗಿಲ್ಲ. ಅಥವಾ ವಿಶೇಷ್ಯಾಸಿದ್ಧಿಪರಿಹಾರಕವಾಗಿದೆ. ಸಜಾತೀಯ-ಸಂವಾದವನ್ನು ಮುಂದೆ ಹೇಳುತ್ತಾರೆ; ಅದರ ವ್ಯಾಖ್ಯಾನವಾಗಿದೆ ಇತ್ಯಾದಿಯಾಗಿ ಯಾವುದೇ ಸಮಾಧಾನವನ್ನು ವಿವಕ್ಷಿಸುವ ಅವಶ್ಯಕತೆಯೂ ಇರುವುದಿಲ್ಲ. ವಸ್ತುತಸ್ತು ಎಂಬ ಪಕ್ಷದಲ್ಲಿ ಹೇಳಿದ್ದಕ್ಕೆ ಯಾವುದೇ ಅನುಪಪತ್ತಿ ಇರುವುದಿಲ್ಲ.

## 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ

**ಪರಿಮಳ–** ನೇತಿ ॥ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಇತಿ ಯುಕ್ತಿಪಾದೀಯದ್ವಿತೀಯಾಧಿಕರಣೇ ಅಸ್ಯ ವೇದಾದಿಶಾಸ್ತ್ರಸ್ಯ ವಿಲಕ್ಷಣತ್ವಾತ್ ಸಂವಾದಾ-ನಪೇಕ್ಷತ್ವರೂಪಸ್ವತಃಪ್ರಾಮಾಣ್ಯಾಖ್ಯಾತ್ ಪಾಶುಪತಾದ್ಯಾಗಮವಿಲಕ್ಷಣತ್ವಾನ್ನ ತಥಾತ್ವಂ ನಾಪ್ರಾಮಾಣ್ಯಮಿತಿ ವಕ್ಷ್ಯತೀತ್ಯರ್ಥಃ।

ಮೂಲದಲ್ಲಿ 'ನ ವಿಲಕ್ಷಣತ್ವಾದಿತಿ' ಎಂದು ಹೇಳಿದ್ದಾರೆ. 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬುದು ಯುಕ್ತಿಪಾದದ ಎರಡನೆಯ ಅಧಿಕರಣದ ಸೂತ್ರವಾಗಿದೆ. ಸೂತ್ರಾರ್ಥ ಹೀಗಿದೆ – ಅಸ್ಯ = ವೇದಾದಿಶಾಸ್ತ್ರಕ್ಕೆ, ವಿಲಕ್ಷಣತ್ವಾತ್ = ಸಂವಾದದ ಅಪೇಕ್ಷೆಯಿಲ್ಲದಿ-ರುವಿಕೆಯೆಂಬ, ಸ್ವತಃ ಪ್ರಾಮಾಣ್ಯವೆಂಬ ವೈಲಕ್ಷಣ್ಯವು ವೇದಾದಿಶಾಸ್ತ್ರಗಳಲ್ಲಿದೆ. ಈ ಸ್ವತಃ-ಪ್ರಾಮಾಣ್ಯವು ಪಾಶುಪತಾದಿಶಾಸ್ತ್ರಗಳಲ್ಲಿ ಇಲ್ಲದ ಕಾರಣ ವೇದಪ್ರಾಮಾಣ್ಯವು ವಿಲಕ್ಷಣವಾಗಿದೆ ಎಂದರ್ಥ.

ಆದ್ದರಿಂದ ಅಸ್ಯ ತಥಾತ್ವಂ ನ = ಶಾಸ್ತ್ರಗಳಿಗೆ ಅಪ್ರಾಮಾಣ್ಯವು ಇರುವುದಿಲ್ಲ. ಹೀಗೆ ಮುಂದೆ ಸಮರ್ಥಿಸುವವರಿದ್ದಾರೆ ಎಂದರ್ಥ.

ಅಸಾಧಾರಣದೋಷವು ಪರಿಹಾರವಾಗುತ್ತದೆ. ಸಪಕ್ಷವಿದ್ದು ಅದರಲ್ಲಿ ಹೇತು ಬಾರದೇ ಇದ್ದರೆ ಅಸಾಧಾರಣ್ಯದೋಷವು ಬರುತ್ತದೆ. ಸಾಧ್ಯದಲ್ಲಿ ಸತ್ತಾನುಪ್ರವೇಶ ಮಾಡಿದಾಗ ಸಪಕ್ಷವೇ ಇರುವುದಿಲ್ಲ ಎಂದಂತಾಯಿತು. ಆಗ ಈ ಅನುಮಾನವು ಕೇವಲ ವ್ಯತಿರೇಕಿ ಅನುಮಾನ ಎಂದು ಕರೆಸಿಕೊಳ್ಳುತ್ತದೆ.

ಹೀಗೆ ಹೇತುವಿನಲ್ಲಿ ವ್ಯಭಿಚಾರ ಪರಿಹಾರಕ್ಕೋಸ್ಕರ ಸತ್ತಾವನ್ನು ವಿಶೇಷಣವನ್ನಾಗಿ ನೀಡಬೇಕು. ಅಸಾಧಾರಣ್ಯದೋಷದ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಸತ್ತಾವನ್ನು ವಿಶೇಷಣವನ್ನಾಗಿ ನೀಡಬೇಕು. ಆದ್ದರಿಂದ ಪ್ರಾಗಭಾವಾವಚ್ಛಿನ್ನಸತ್ತಾಯೋಗಿತ್ವಂ ಕೃತಕತ್ವಮ್' 'ಧ್ವಂಸಾವಚ್ಛಿನ್ನಸತ್ತಾಯೋಗಿತ್ವಂ ಅನಿತ್ಯತ್ವಮ್' ಎಂಬ ಲಕ್ಷಣವು ಅತ್ಯಂತ ಯುಕ್ತವಾಗಿದೆ.

ಮೇಲೆ ಹೇಳಿದಂತೆ ಪ್ರಾಗಭಾವಾದಿಗಳಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡಲು 'ಭಾವತ್ವೇ ಸತಿ' ಎಂಬ ವಿಶೇಷಣವನ್ನು ನೀಡಿದಾಗ ತತ್ಪ್ರಯುಕ್ತವಾದ ವಿಶೇಷವನ್ನೂ ಕೂಡ ತಿಳಿಯಬೇಕು. ಅದು ಹೀಗೆ – 'ಸರ್ವೇ ಭಾವಾಃ ಅನಿತ್ಯಾಃ ಕೃತಕತ್ವಾತ್' ಎಂದು ಅನುಮಾನ ಮಾಡಿದಾಗ ಪ್ರಾಗಭಾವದಲ್ಲಿ ವ್ಯಭಿಚಾರವು ಬರುತ್ತದೆ. ಅದಕ್ಕೋಸ್ಕರ ಹೇತುವಿನಲ್ಲಿ 'ಭಾವತ್ವೇ ಸತಿ' ಎಂಬ ವಿಶೇಷಣವನ್ನು ನೀಡ-ಬೇಕು. ಪ್ರಾಗಭಾವದಲ್ಲಿ ಭಾವತ್ವವು ಇಲ್ಲದ ಕಾರಣ ವ್ಯಭಿಚಾರವು ಬರುವುದಿಲ್ಲ. ಆದರೆ ಸಾಧ್ಯದಲ್ಲಿ ಭಾವತ್ವ ಎಂಬ ವಿಶೇಷಣವು ಅನಾವಶ್ಯಕ. ಆದ್ದರಿಂದ ಒಂದೇ ಭಾವತ್ವವು ಹೇತು ಮತ್ತು ಸಾಧ್ಯಗಳಲ್ಲಿ ಅನುಗತವಾಗುತ್ತದೆಂದು ಹೇಳಿದಂತೆ ಆಗುವುದಿಲ್ಲ ಎಂದು ಮೇಲೆ ಹೇಳಿದಂತೆ ಇಲ್ಲೂ ಕೂಡ ತಿಳಿಯಬೇಕು. ಸಾಧ್ಯದಲ್ಲಿ ಭಾವತ್ವವನ್ನು ಹೇಳದೇ ಇದ್ದರೆ ಅಸಾಧಾರಣ್ಯದೋಷವು ಬರುತ್ತದೆ. 'ಭಾವತ್ವೇ ಸತಿ ಕೃತಕತ್ವ' ಎಂಬ ಹೇತುವು ಪ್ರಾಗಭಾವವೆಂಬ ದೃಷ್ಟಾಂತದಲ್ಲಿ ಬಾರದ ಕಾರಣ ಸಾಧ್ಯವಿರುವ ದೃಷ್ಟಾಂತದಲ್ಲಿ ಹೇತು ಬಾರದಿರುವ ಕಾರಣ ಅಸಾಧಾರಣ್ಯದೋಷವು ಬರುತ್ತದೆ. ಇದರ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಭಾವತ್ವವನ್ನು ವಿಶೇಷಣವನ್ನಾಗಿ ನೀಡಬೇಕು. ಆಗ ಅನುಮಾನ ಹೀಗಾಗುತ್ತದೆ. 'ಸರ್ವೇ ಜನ್ಯಾಃ ಭಾವಾಃ, ಭಾವತ್ವೇ ಸತಿ ಅನಿತ್ಯಾಃ, ಭಾವತ್ವೇ ಸತಿ ಕೃತಕತ್ವಾತ್' ಎಂದು. ವ್ಯಭಿಚಾರಪರಿಹಾರಕ್ಕೋಸ್ಕರ ಹೇತುವಿನಲ್ಲಿ ಭಾವತ್ವವನ್ನು ವಿಶೇಷಣವನ್ನಾಗಿ ನೀಡಿದಂತೆ ಅಸಾಧಾರಣ್ಯದೋಷದ ಪರಿಹಾರಕ್ಕಾಗಿ ಸಾಧ್ಯದಲ್ಲೂ ಕೂಡ ಭಾವತ್ವವೆಂಬ ವಿಶೇಷಣವನ್ನು ನೀಡಬೇಕು. ಇಲ್ಲಿಯ ತನಕ ಹೇಳಿದ್ದು ಕೆಲವರ ಪಕ್ಷ. ಇದರಲ್ಲಿ ಅಸ್ವಾರಸ್ಯವಿದೆ. ಅದಕ್ಕಾಗಿ 'ವಸ್ತುತಸ್ತು' ಎಂಬ ಪಕ್ಷವನ್ನು ಮುಂದೆ ಹೇಳುತ್ತಿದ್ದಾರೆ.

ಲಾಗದ, ಅರ್ಥೇ = ವಸ್ತುವಿನ ವಿಷಯದಲ್ಲಿ, ಪ್ರಮಾಣಂ = ಪ್ರಮಾಣವು, ಅನಪೇಕ್ಷತ್ವಾತ್ = ಮತ್ತೊಂದನ್ನು ಅಪೇಕ್ಷೆ ಪಡುವುದಿಲ್ಲ; ಆ ಕಾರಣದಿಂದ ಬಾದರಾಯಣಸ್ಯ = ಇದು ಬಾದರಾಯಣರ ಮತವಾಗಿದೆ. ಇಷ್ಟು ಈ ಜೈಮಿನಿಸೂತ್ರದ ಅರ್ಥ. ಸೂತ್ರದಲ್ಲಿ 'ಬಾದರಾಯಣಸ್ಯ' ಎಂಬುದಾಗಿ ಹೆಸರನ್ನು ಉಲ್ಲೇಖ ಮಾಡಿದ್ದು ಗೌರವಕ್ಕೋಸ್ಕರ ಎಂದು ತಿಳಿಯಬೇಕು.

ಬುದ್ಧಿಯಲ್ಲಿ ಪ್ರಸಕ್ತವಾದ ದೋಷಗಳನ್ನು ಪರಿಹಾರ ಮಾಡುವುದರಲ್ಲಿ ಮಾತ್ರ ಯುಕ್ತಿಗಳು ಉಪಯೋಗವಾಗುತ್ತವೆ. ಹೀಗೆ ತತ್ವನಿರ್ಣಯಗ್ರಂಥದಲ್ಲಿ ಹೇಳಿದ್ದಾರೆ. ಅದಕ್ಕನುಸಾರಿಯಾದ ಸಮಾಧಾನವನ್ನು 'ತಥಾಪಿ' ಎಂಬ ವಾಕ್ಯದಿಂದ ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ.

## ಆಪ್ತವಾಕ್ಯತ್ವದ ಮೂಲಕ ಪ್ರಾಮಾಣ್ಯಸಾಧನೆಗೆ ಕಾರಣನಿರೂಪಣೆ

ವಾಕ್ಯಾರ್ಥಚಂದ್ರಿಕಾ— ಏವಂ ಗ್ರಂಥಕೃತಃ ಪರಂಪರಾಶ್ರಯಣಾಭಿಪ್ರಾಯಮುಪಪಾದ್ಯ, ತತ್ರ ನಿಮಿತ್ತಂ ಶಂಕತೇ – ಗ್ರಂಥೇತಿ ॥ ವಕ್ತ್ರಾನುಕೂಲ್ಯಸ್ಯ ವಿವಕ್ಷಿತಾರ್ಥತತ್ವಜ್ಞಾನಕರಣಪಾಟವವಿವಕ್ಷಾರೂಪತ್ವಾತ್ ಸತಿ ತಸ್ಮಿನ್ ವಿವಕ್ಷಿತಾರ್ಥತತ್ವಜ್ಞಾನವಿರೋಧಿಪ್ರಯುಕ್ತಾಪ್ರಾಮಾಣ್ಯಶಂಕಾಯಾ ಅಸಂಭವೇಽಪಿ ಅವಿಪ್ರಲಿಪ್ಸಾ ವಕ್ತೃಶ್ರೋತೃಪ್ರಸಂಗಾನುಕೂಲ್ಯರೂಪತ್ವಾಭಾವೇನ, ಸತ್ಯಪಿ ತಸ್ಮಿಂಸ್ತದಭಾವಪ್ರಯುಕ್ತಾಪ್ರಾಮಾಣ್ಯಶಂಕಾಯಾಃ ಸಂಭವೇನ, ತಚ್ಛಂಕಾಯಾಃ ಶ್ರೋತೃಪ್ರಸಂಗಾನಾನುಕೂಲ್ಯೈಕನಿಬಂಧನತ್ವಾತ್ ವಿಪ್ರಲಿಪ್ಸಾಯಾಃ ತದಭಾವೇ ಪ್ರಯೋಜಕಾಭಾವೇನಾನುಪಪತ್ತಿಃ ಇತ್ಯೇವಂ ಶ್ರೋತೃಪ್ರಸಂಗಾನುಕೂಲ್ಯೇನ ವಕ್ತರ್ಯವಿಪ್ರಲಿಪ್ಸಾನಾಶ್ರಯಣೇಽನಿವೃತ್ತೇರಂತತಃ ತತ್ಸಾಧನಾಶ್ರಯಣೇ ಪ್ರಥಮತ ಏವ ತದಸ್ತು ಇತಿ ಭಾವೇನ ಭಾಷ್ಯಕೃತಃ ಪರಂಪರಾಶ್ರಯಣಂ ಯುಕ್ತಮೇವ ಇತ್ಯಾಹ – ವಕ್ತ್ರಾದೀತಿ ॥

ಗ್ರಂಥಕಾರರು ಆಪ್ತವಾಕ್ಯತ್ವದ ಮೂಲಕವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡುತ್ತಿದ್ದಾರೆ. ಹೀಗೆ ಪರಂಪರೆಯನ್ನು ಏಕೆ ಆಶ್ರಯಿಸಿದ್ದಾರೆ? ಎಂಬ ಪ್ರಶ್ನೆಗೆ ಗ್ರಂಥಕಾರರ ಅಭಿಪ್ರಾಯವನ್ನು ಉಪಪಾದನೆ ಮಾಡಿ, ಅದಕ್ಕೇನು ನಿಮಿತ್ತ? ಎಂಬುದರ ಬಗ್ಗೆ 'ಗ್ರಂಥ' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ.

ವಕ್ತ್ರಾನುಕೂಲ್ಯವು ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವ, ವಿವಕ್ಷಾರೂಪವಾಗಿದೆ. ಎಲ್ಲಿ ವಕ್ತ್ರಾನುಕೂಲ್ಯವು ಇರುತ್ತದೋ ಅಲ್ಲಿ ವಿವಕ್ಷಿತಾರ್ಥತತ್ವಜ್ಞಾನಕ್ಕೆ ಯಾವುದು ವಿರೋಧಿಯೋ

ತತ್ತ್ವಯುಕ್ತವಾದ ಅಪ್ರಾಮಾಣ್ಯಶಂಕೆಯು ಸರ್ವಥಾ ಬರುವುದಿಲ್ಲ. ಆದರೆ ಅವಿಪ್ರಲಿಪ್ಸೆಯು ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯರೂಪವಾಗಿರುವುದಿಲ್ಲ. ಆದ್ದರಿಂದ ಈ ಮೂರು ಬಗೆಯ ಆನುಕೂಲ್ಯಗಳಿದ್ದರೂ ಕೂಡ ಅವಿಪ್ರಲಿಪ್ಸಾಭಾವಪ್ರಯುಕ್ತವಾದ ಅಪ್ರಾಮಾಣ್ಯಶಂಕೆಯು ಪ್ರಾಪ್ತವಾಗುತ್ತದೆ. ಇಂಥ ಅವಿಪ್ರಲಿಪ್ಸಾಭಾವಪ್ರಯುಕ್ತವಾದ ಆಶಂಕೆಯು ಶ್ರೋತ್ರಾನುಕೂಲ್ಯ-ಪ್ರಸಂಗಾನುಕೂಲ್ಯೈಕನಿಬಂಧನವಾಗಿದೆ. ಒಂದು ವೇಳೆ ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಇಲ್ಲದಿದ್ದರೆ ಪ್ರಯೋಜಕವೇ ಇಲ್ಲದ್ದರಿಂದ ವಿಪ್ರಲಿಪ್ಸೆಯು ಅನುಪಪನ್ನವಾಗುತ್ತದೆ. ಹೀಗೆ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯೈಕನಿಬಂಧನವಾಗಿರುವುದರಿಂದ ವಿಪ್ರಲಿಪ್ಸೆಯು ಆನುಕೂಲ್ಯವಿಲ್ಲದ ಕಾರಣ ಪ್ರಯೋಜಕಾಭಾವದಿಂದ ಅನುಪಪನ್ನವಾಗುತ್ತದೆ. ಆದ್ದರಿಂದ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳಿಂದ ವಕ್ತೃವಿನಲ್ಲಿ ಅವಿಪ್ರಲಿಪ್ಸೆಯನ್ನು ಅಂಗೀಕಾರ ಮಾಡದಿದ್ದರೆ ಇದೇ ಆಪ್ತವಾಕ್ಯತ್ವದ ಸಾಧನೆ ಎನಿಸುತ್ತದೆ. ಹೀಗೆ ಒಪ್ಪದಿದ್ದರೆ ಅವಿಪ್ರಲಿಪ್ಸಾಶಂಕೆಯು ಪರಿಹಾರವಾಗುವುದೇ ಇಲ್ಲ. ಆಪ್ತವಾಕ್ಯತ್ವ-ಸಾಧನೆಯನ್ನು ಆಶ್ರಯಿಸಲೇಬೇಕು. ಕೊನೆಯಲ್ಲಿ ಆಪ್ತವಾಕ್ಯತ್ವದ ಸಾಧನೆಯನ್ನು ಆಶ್ರಯಿಸುವುದಕ್ಕಿಂತ ಮೊದಲೇ ಆಶ್ರಯಿಸುವುದು ಯುಕ್ತ ಎಂಬ ಅಭಿಪ್ರಾಯದಿಂದ ಭಾಷ್ಯಕಾರರು ಪರಂಪರೆಯಿಂದ ಆಶ್ರಯಿಸಿದ್ದು ಯುಕ್ತವೇ ಆಗಿದೆ ಇತ್ಯಾದಿ ವಿಚಾರವನ್ನು 'ವಕ್ತೃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ– 'ಬ್ರಹ್ಮಸೂತ್ರಂ ಪ್ರಮಾಣಂ ವಕ್ತ್ರಾದ್ಯಾನುಕೂಲ್ಯಸದ್ಭಾವಾತ್' ಎಂಬುದಾಗಿ ಅನುಮಾನವನ್ನು ಮಾಡಿದಾಗ ಈ ಅನುಮಾನದಲ್ಲಿರುವ ಹೇತುವಿನಲ್ಲಿ ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳು ಸೇರಿವೆ. ವಕ್ತ್ರಾನುಕೂಲ್ಯದಲ್ಲಿ ಅವಿಪ್ರಲಿಪ್ಸಾ ಬಿಟ್ಟು ವಿವಕ್ಷಿತಾರ್ಥ-ತತ್ತ್ವಜ್ಞಾನ, ವಿವಕ್ಷಾ ಹಾಗೂ ಕರಣಪಾಟವಗಳು ಸೇರಿವೆ. ಹೀಗೆ ವಿವಕ್ಷಿಸಿದಾಗ ವಿವಕ್ಷಿತಾರ್ಥತತ್ತ್ವಜ್ಞಾನಕ್ಕೆ ವಿರೋಧಿಯಾದ ಅಪ್ರಾಮಾಣ್ಯಶಂಕೆಯು ಪರಿಹಾರವಾಗುತ್ತದೆ. ಕರಣಪಾಟವವು ಇಲ್ಲದಿದ್ದರೆ ಅಬೋಧಕತ್ವಪ್ರಯುಕ್ತವಾಗಿ ಅಪ್ರಾಮಾಣ್ಯವು ಬರುತ್ತದೆ. ವಿವಕ್ಷಿತಾರ್ಥತತ್ತ್ವಜ್ಞಾನವು ಇಲ್ಲದಿದ್ದರೆ ವಿಪರೀತಬೋಧಕತ್ವಪ್ರಯುಕ್ತವಾಗಿ ಅಪ್ರಾಮಾಣ್ಯಶಂಕೆಯು ಬರುತ್ತದೆ. ಆದ್ದರಿಂದ ಬ್ರಹ್ಮಸೂತ್ರವು ಅಬೋಧಕತ್ವೇನ ಅಥವಾ ವಿಪರೀತಬೋಧಕತ್ವೇನ ಅಪ್ರಮಾಣವಾಗುತ್ತದೇನು? ಎಂಬ ಶಂಕೆಯು ಪ್ರಾಪ್ತವಾದರೆ ವಕ್ತ್ರಾದ್ಯಾನುಕೂಲ್ಯಮತ್ತ್ವ ಎಂಬ ಹೇತುವಿನಿಂದ ಪರಿಹಾರವಾಯಿತು. ಅಥವಾ ಈ ಹೇತುವನ್ನು ಹೇಳಿದ್ದರಿಂದಲೇ ಈ ಶಂಕೆಗಳೇ ಉತ್ಪನ್ನವಾಗುವುದಿಲ್ಲ. ಆದರೆ ಅವಿಪ್ರಲಿಪ್ಸೆಯು ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ ಹಾಗೂ ಪ್ರಸಂಗಾನುಕೂಲ್ಯಗಳ ಸ್ವರೂಪವಾಗಿರುವುದಿಲ್ಲ. ಹಾಗಾಗಿ ಈ ಮೂರು ಬಗೆಯ ಆನುಕೂಲ್ಯಗಳಿದ್ದರೂ ಕೂಡ ಅವಿಪ್ರಲಿಪ್ಸಾಭಾವಪ್ರಯುಕ್ತವಾದ ಅಪ್ರಾಮಾಣ್ಯಶಂಕೆಯು ಬಂದೇ ಬರುತ್ತದೆ.

ಶಂಕಿತವಾದ ಉಪಾಧಿಗೆ ಸಾಧನವ್ಯಾಪಕತ್ವವನ್ನು ತೋರಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬ ವಾಕ್ಯ ಹೊರಟಿದೆ. ಆದ್ದರಿಂದ ನೇರವಾಗಿ ಪ್ರಾಮಾಣ್ಯವನ್ನು ಸಾಧನೆ ಮಾಡಿದರೆ ಈ ವಾಕ್ಯವು ವ್ಯರ್ಥವಾಗುವುದಿಲ್ಲ ಎಂದು ಪೂರ್ವಪಕ್ಷಿಯು ಪುನಃ ಆಕ್ಷೇಪವನ್ನು ಸಮರ್ಥನೆ ಮಾಡಿದ್ದನು.

ಹಾಗಾದರೆ 'ಆಪ್ತವಾಕ್ಯತಯಾ ತೇನ' ಎಂಬ ವಾಕ್ಯವು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ವಿವಕ್ಷಿಸಲೇಬೇಕೆಂದು ಟೀಕಾರಾಯರು ಉತ್ತರಿಸಿದರು.

ಇದರ ಮೇಲೆ ಪೂರ್ವಪಕ್ಷಿಯು ಪುನಃ ಹೀಗೆ ಆಕ್ಷೇಪ ಮಾಡುತ್ತಿದ್ದಾನೆ. ಅದು ಹೀಗೆ – 'ಬ್ರಹ್ಮತಂತ್ರಂ ಪ್ರಮಾಣಂ ವಕ್ತ್ರಾದ್ಯಾನುಕೂಲ್ಯಸದ್ಭಾವಾತ್' ಎಂಬುದಾಗಿಯೇ ಅನುಮಾನವನ್ನು ಮಾಡಬೇಕು. ಹೀಗೆ ಹೇಳಿದಾಗ ಆಪ್ತವಾಕ್ಯತ್ವವೆಂಬ ಉಪಾಧಿಯ ಆಶಂಕೆಯು ಬರುತ್ತದೆ. ಉಪಾಧಿ ಹಾಗೂ ಹೇತು ಎರಡೂ ಒಂದೇ ಆಗಿದೆ. ಎರಡೂ ಒಂದೇ ಆಗಿರುವುದರಿಂದ ಆಪ್ತವಾಕ್ಯತ್ವವು ಉಪಾಧಿಯಾಗಿದೆ ಎಂದು ಹೇಳಲು ಬರುವುದಿಲ್ಲ. ಇದನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ' ಎಂಬ ವಾಕ್ಯವು ಹೊರಟಿದೆ.

ಹಿಂದೆ ಟೀಕೆಯಲ್ಲಿ 'ಯತ್ ಯತ್ರ ವಾಕ್ಯೇ ವಕ್ತೃಶ್ರೋತೃಪ್ರಸಕ್ತೀನಾಂ ಅನುಕೂಲತಾ ತತ್ರ ಆಪ್ತವಾಕ್ಯತ್ವಂ' ಎಂಬುದಾಗಿ ಈ ವಾಕ್ಯಕ್ಕೆ ಯೋಜನೆಯನ್ನು ಮಾಡಿದ್ದರು. ಅದನ್ನು ಇಲ್ಲಿ ವಿವಕ್ಷಿಸಬಾರದು. ಯತ್ ಎಂಬುದಕ್ಕೆ ಯಸ್ಮಾತ್ ಎಂದು ಅರ್ಥವನ್ನು ಮಾಡಬೇಕು. 'ಯಸ್ಮಾತ್ ವಕ್ತೃಶ್ರೋತೃಪ್ರಸಕ್ತೀನಾಮ್ ಆಪ್ತಿಃ' 'ಯಾವ ಕಾರಣದಿಂದ ವಕ್ತೃ, ಶ್ರೋತೃ, ಪ್ರಸಕ್ತಿಗಳ ಆನುಕೂಲ್ಯವೇ ಆಪ್ತಿ ಎಂದು ಕರೆಸಿಕೊಳ್ಳುತ್ತದೋ ಆ ಕಾರಣದಿಂದ ಆಪ್ತವಾಕ್ಯತ್ವವಿರುವುದರಿಂದ ಪ್ರಮಾಣವಾಗುತ್ತದೆ. ಇಲ್ಲಿ ಆಪ್ತವಾಕ್ಯತ್ವವು ಪ್ರತ್ಯೇಕಪ್ರಮಾಣವಾಗಿಲ್ಲ. ಸಾಧನಾಭಿನ್ನವೇ ಆಗಿದೆ. ಇದನ್ನು ತಿಳಿಸುವುದಕ್ಕಾಗಿ 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿ ವಾಕ್ಯಗಳು ಹೊರಟವೆ. ಇಷ್ಟು ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದಾನೆ.

## ಕಿರಣಾವಲೀಕಾರನು ಹೇಳಿದ ಕೃತಕತ್ವ ಅನಿತ್ಯತ್ವಗಳ ಲಕ್ಷಣ

ಯಾದುಪತ್ಯ– ಸಾಧನಾಭೇದಾನುಪಪತ್ತೇರಿತಿ ॥ ಶ್ರೋತೃಪ್ರಸಂಗಾನುಕೂಲ್ಯಧರ್ಮಯೋಃ ಅಪಿ ಸಾಧನೇ ಪ್ರವಿಷ್ಟತ್ವಾದಿತಿ ಭಾವಃ । ನನು 'ಯೋ ಧೂಮವಾನ್' ಇತ್ಯಾದೌ ವಿಶೇಷ್ಯಾಂಶಸ್ಯೋಭಯತ್ರಾನುಪ್ರವೇಶೇಽಪಿ ನ ದೋಷಃ । ವಿಶೇಷಣಾಂಶಸ್ಯೈವ ಉಭಯತ್ರ ಪ್ರವೇಶಸ್ಯೋಕ್ತದೋಷಹೇತುತ್ವಾತ್ ಇತ್ಯತ ಆಹ – ಕೃತಕತ್ವಾನಿತ್ಯತ್ವಯೋರಿತಿ ॥ ಇದಂ ಚ 'ಅಸತಃ ಸತ್ತಾಸಂಬಂಧ

'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶೋಽವ್ಯತಿರೇಕಶ್ಚಾರ್ಥೇ ಅನುಪಲಬ್ಧೇ ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್' ಎಂಬುದು ಜೈಮಿನಿಋಷಿಗಳ ಸೂತ್ರ. ಈ ಸೂತ್ರದ ಅರ್ಥ ಹೀಗಿದೆ – ಉಪದೇಶಃ = ವಿಧಿವಾಕ್ಯಗಳು. ತಸ್ಯ = ಧರ್ಮಗಳಿಗೆ, ಜ್ಞಾನಂ = ಜ್ಞಾಪಕವಾಗಿದೆ; ತಚ್ಚ = ಆ ವಿಧಿವಾಕ್ಯಗಳು ಪ್ರಮಾಣವೇ ಆಗಿವೆ. ಪ್ರಾಮಾಣ್ಯವು ಸ್ವತಃ ಆಗಿರುವುದರಿಂದ ಆಪ್ತಿಮೂಲತ್ವ ಮೊದಲಾದ ಗುಣಗಳನ್ನು ಅಪೇಕ್ಷೆ ಪಡುವುದಿಲ್ಲ. ಹಾಗಾದರೆ ಅನಾಪ್ತವಾಕ್ಯಕ್ಕೂ ಕೂಡ ಪ್ರಾಮಾಣ್ಯವು ಬರಬೇಕಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರಾಮಾಣ್ಯವು ಔತ್ಸರ್ಗಿಕವೇ ಆಗಿದೆ. ಆದರೆ ಅನಾಪ್ತಸಂಸರ್ಗಪ್ರಯುಕ್ತವಾದ ಕರಣದೋಷ, ಬಾಧಕಪ್ರತ್ಯಯ, ಜ್ಞಾತಾರ್ಥಕತ್ವ ಈ ದೋಷಗಳಿಂದ ಪ್ರಾಮಾಣ್ಯವು ಅಪೋದಿತವಾಗುತ್ತದೆ. ಆದ್ದರಿಂದ ಅನಾಪ್ತವಾಕ್ಯದಲ್ಲಿ ಪ್ರಾಮಾಣ್ಯವು ಇಲ್ಲದೇ ಇದ್ದರೂ ಕೂಡ ಪ್ರಾಮಾಣ್ಯಸ್ವತಸ್ತ್ವಕ್ಕೆ ಯಾವುದೇ ತೊಂದರೆ ಬರುವುದಿಲ್ಲ. ಪ್ರಾಮಾಣ್ಯವು ಸಹಜವಾಗಿ ಇದ್ದೇ ಇರುತ್ತದೆ. ಆದರೆ ದೋಷವಿದ್ದಾಗ ಮಾತ್ರ ಪ್ರಾಮಾಣ್ಯವು ಇರುವುದಿಲ್ಲ ಎಂದಭಿಪ್ರಾಯ. ಇದನ್ನೇ 'ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ' ಎಂಬುದಾಗಿ ಹೇಳಲಾಗಿದೆ. ಸೂತ್ರದಲ್ಲಿರುವ ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ ಎಂಬ ಭಾಗದಿಂದ ಶಬ್ದಗಳಿಗೆ ಅರ್ಥದಲ್ಲಿ ಸ್ವಾಭಾವಿಕವಾದ ಸಂಬಂಧವಿದೆ ಎಂದು ಹೇಳಲಾಗಿದೆ. ಅಪೌರುಷೇಯವಾದ ವೇದದಲ್ಲಿ ಅನಾದಿ ಕಾಲದಿಂದ ಶಬ್ದಾರ್ಥಗಳ ಸಂಬಂಧವು ಸ್ವಾಭಾವಿಕವಾಗಿ ಇದ್ದೇ ಇರುತ್ತದೆ. ಆದ್ದರಿಂದ ಅನಾಪ್ತಸಂಸರ್ಗಪ್ರಯುಕ್ತವಾದ ಕರಣದೋಷವು ವೇದದಲ್ಲಿ ಸರ್ವಥಾ ಇಲ್ಲವೆಂದು ಹೇಳಿದಂತಾಯಿತು. ಸೂತ್ರದಲ್ಲಿರುವ 'ಅವ್ಯತಿರೇಕಃ' ಎಂಬ ಪದದಿಂದ, ಬಾಧಕಪ್ರತ್ಯಯವು ಇರುವುದಿಲ್ಲ ಎಂದು ಹೇಳಿದಂತಾಯಿತು. ಏಕೆಂದರೆ ವ್ಯತಿರೇಕಶಬ್ದಕ್ಕೆ ವಿಪರ್ಯಯ ಎಂದರ್ಥ. ಅವ್ಯತಿರೇಕಶಬ್ದಕ್ಕೆ ವಿಪರ್ಯಯ ಇಲ್ಲದ್ದು; ಬಾಧಕಪ್ರತ್ಯಯ ಇಲ್ಲದ್ದು ಎಂಬರ್ಥವನ್ನು ಹೇಳಿದಂತಾಗುತ್ತದೆ. ಅನುಪಲಬ್ಧೇ ಅರ್ಥೇ ಎಂಬ ಸೂತ್ರಭಾಗದಿಂದ ಜ್ಞಾತಾರ್ಥಕತ್ವವು ವೇದದಲ್ಲಿ ಇಲ್ಲ ಎಂದು ಹೇಳಿದಂತಾಯಿತು. ಆದ್ದರಿಂದ ಅನಾಪ್ತಸಂಸರ್ಗಪ್ರಯುಕ್ತಕರಣದೋಷವಾಗಲೀ ಬಾಧಕಪ್ರತ್ಯಯವಾಗಲೀ, ಜ್ಞಾತಾರ್ಥಕತ್ವವಾಗಲೀ ವೇದದಲ್ಲಿ ಸರ್ವಥಾ ಇರುವುದಿಲ್ಲ. ಹೀಗೆ ಯಾವುದೇ ಅಪವಾದಕವೂ ಇಲ್ಲದ್ದರಿಂದ ವೇದವು ಸ್ವತಃ ಪ್ರಮಾಣವಾಗುತ್ತದೆಂದು ಉಪಪಾದನೆ ಮಾಡಿದ್ದಾರೆ.

ಸಂಪೂರ್ಣ ಸೂತ್ರವನ್ನೇಕೆ ಟೀಕೆಯಲ್ಲಿ ಉಲ್ಲೇಖ ಮಾಡಿಲ್ಲ? ಎಂಬ ಪ್ರಶ್ನೆಗೆ ಪ್ರಕೃತಕ್ಕೆ ಉಪಯೋಗ ಇಲ್ಲದ್ದರಿಂದ ಸೂತ್ರಖಂಡವನ್ನಷ್ಟೇ ಉದಾಹರಿಸಿದ್ದಾರೆಂದು ಉತ್ತರ. 'ತಥಾಪಿ' ಎಂಬುದರ ಅಭಿಪ್ರಾಯ ಹೀಗಿದೆ – ಪ್ರಾಮಾಣ್ಯವು ಔತ್ಸರ್ಗಿಕವಾಗಿರುವುದರಿಂದ ಬುದ್ಧಿದೋಷನಿರಾಸಕ್ಕೋಸ್ಕರ

ಯುಕ್ತಿಯ ಅಪೇಕ್ಷೆಯು ಇದ್ದೇ ಇರುತ್ತದೆ. ಯುಕ್ತಿಯನ್ನು ಹೇಳಿದ ಮಾತ್ರಕ್ಕೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುವುದಿಲ್ಲ.

ವಿವರಣೆ – ಔತ್ಪತ್ತಿಕಸ್ತು ಶಬ್ದಸ್ಯ ಇತ್ಯಾದಿ ಸೂತ್ರದ ಸಾರಾಂಶ ಹೀಗಿದೆ - ವಿಧಿವಾಕ್ಯಗಳು ಧರ್ಮಬೋಧಕಗಳಾಗಿವೆ. ಈ ಅರ್ಥದಲ್ಲಿ ವಿಧಿವಾಕ್ಯಗಳಿಗೆ ಸ್ವತಃ ಪ್ರಾಮಾಣ್ಯವಿದೆ. ಏಕೆಂದರೆ, ಪ್ರಾಮಾಣ್ಯಕ್ಕೆ ಆಪ್ತಿಮೂಲತ್ವಾದಿಗಳ ಅಪೇಕ್ಷೆಯು ಇರುವುದಿಲ್ಲ. ಅನಾಪ್ತಸಂಸರ್ಗಪ್ರಯುಕ್ತವಾದ ಕರಣದೋಷಗಳು, ಬಾಧಕಪ್ರತ್ಯಯಗಳು, ಜ್ಞಾತಜ್ಞಾಪಕತ್ವ ಮೊದಲಾದ ದೋಷಗಳು ಈ ಅಪೌರುಷೇಯವಾದ ವೇದಗಳಲ್ಲಿ ಸರ್ವಥಾ ಇರುವುದಿಲ್ಲ. ಆದ್ದರಿಂದ ಯಾವುದೇ ಅಪವಾದಕ-ವಿಲ್ಲದ್ದರಿಂದ ವಿಧಿವಾಕ್ಯಗಳು ಕರ್ಮಾರ್ಥದಲ್ಲಿ ಸ್ವತಃ ಪ್ರಮಾಣವಾಗುತ್ತವೆ. ಇದು ಬಾದರಾಯಣರಿಗೂ ಕೂಡ ಸಮ್ಮತವಾಗಿದೆ.

## ವಿಪಕ್ಷೇ ಬಾಧಕತರ್ಕ ಹೇಳಬೇಕೆಂದರೆ ಆಪ್ತವಾಕ್ಯತ್ವ ಬೇಕು

ಯಾದುಪತ್ಯ– ಅಂತತೋಽಸ್ಯಾರ್ಥಸ್ಯೇತಿ ॥ ವಿಪ್ರಲಿಪ್ಸಾಭಾವಘಟಿತಾಪ್ತಿಸಾಧನಸ್ಯ ಇತ್ಯರ್ಥಃ । ಕೋ ನಿವಾರಯಿತೇತಿ ॥ ತಥಾ ಚ ವಿಪಕ್ಷೇ ಬಾಧಕೋಪನ್ಯಾಸಾರ್ಥಮಾಪ್ತವಾಕ್ಯತ್ವ-ಸಾಧನಮಾವಶ್ಯಕಮಿತ್ಯರ್ಥಃ ।

'ಅಂತತೋಽಸ್ಯಾರ್ಥಸ್ಯ' – ವಿಪ್ರಲಿಪ್ಸಾಭಾವಘಟಿತವಾದ ಆಪ್ತಿಯ ಸಾಧನೆಗೆ ಎಂದರ್ಥ.

'ಕೋ ನಿವಾರಯಿತಾ' – ಆದ್ದರಿಂದ ಈ ಪಕ್ಷದಲ್ಲಿ ಬಾಧಕ ಉಪನ್ಯಾಸಮಾಡುವುದಕ್ಕೆ ಆಪ್ತವಾಕ್ಯತ್ವವನ್ನು ಅವಶ್ಯವಾಗಿ ಸಾಧನೆ ಮಾಡಬೇಕು ಎಂದರ್ಥ.

ವಿವರಣೆ– ಮಧ್ಯದಲ್ಲಿ ಆಪ್ತವಾಕ್ಯತ್ವಸಾಧನೆಯನ್ನು, ಅಂತಿಮವಾಗಿ ಸಾಕ್ಷಾತ್ ಸಾಧನೆ ಮಾಡುತ್ತೇವೆಂದು ಹೇಳುವವರು ಕೂಡ ಒಪ್ಪಲೇ ಬೇಕು. ಏಕೆಂದರೆ, ಆಪ್ತವಾಕ್ಯತ್ವವೆಂಬ ಸಾಧ್ಯದಲ್ಲಿ ಆಪ್ತಿಯು ಸೇರಿದೆ. ಆಪ್ತಿಯಲ್ಲಿ ವಿಪ್ರಲಿಪ್ಸಾಭಾವವು ಸೇರಿದೆ. ಹೀಗೆ ವಿಪ್ರಲಿಪ್ಸಾಭಾವದಿಂದ ಕೂಡಿರುವ ಆಪ್ತಿಯನ್ನು ಸಾಧನೆ ಮಾಡಿ, ಅಂತಹ ಆಪ್ತಿಯುಳ್ಳ ಆಪ್ತನ ವಾಕ್ಯವಿದು ಎಂದು ಸಾಧನೆ ಮಾಡಬೇಕು. ಹೀಗೆ ಒಪ್ಪದಿದ್ದರೆ ಅಪ್ರಯೋಜಕಾಶಂಕೆಯು ಪರಿಹಾರವಾಗುವುದಿಲ್ಲ.

ಯಾರು 'ಹೇತುರಸ್ತು, ಸಾಧ್ಯಂ ಮಾಸ್ತು' ಎಂದು ಹೇಳುತ್ತಾನೋ ಅವನು ವಿವಕ್ಷಾ, ಕರಣ-ಪಾಟವ, ವಿವಕ್ಷಿತಾರ್ಥತತ್ವಜ್ಞಾನವೆಂಬ ಮೂರು ಧರ್ಮಗಳನ್ನು ವಕ್ತ್ರಾನುಕೂಲ್ಯವನ್ನು ಒಪ್ಪುವ ಮೂಲಕ

ಅಂಗೀಕರಿಸಿದ್ದಾನೆ. ಆದರೂ ಕೂಡ ಪ್ರಮಾಣವಾಗುವುದು ಬೇಡ ಎಂದರೆ ಅವಿಪ್ರಲಿಪ್ಸಾ-ಮೂಲಕವಾಗಿಯೇ ಅಪ್ರಾಮಾಣ್ಯವನ್ನು ಅವನು ಹೇಳಬೇಕು. ಈಗ ಬ್ರಹ್ಮಸೂತ್ರವು ಅವಿಪ್ರಲಿಪ್ಸಾ-ಮೂಲಕವಾದ ಆಪ್ತರ ವಾಕ್ಯವಾಗಿದೆ. ಒಂದು ವೇಳೆ ಬ್ರಹ್ಮಸೂತ್ರವು ಪ್ರಮಾಣವಾಗದಿದ್ದರೆ ಇಂಥ ಆಪ್ತವಾಕ್ಯತ್ವವು ಇಲ್ಲದೇ ಇರಬೇಕಾದೀತು. ಈ ವಿಪಕ್ಷೇ ಬಾಧಕತರ್ಕವನ್ನು ಹೇಳುವುದಕ್ಕಾಗಿ ಆಪ್ತ-ವಾಕ್ಯತ್ವಾಭಾವವನ್ನೇ ಆಪಾದ್ಯವನ್ನಾಗಿ ಹೇಳಿದ್ದೇವೆ. ಹೀಗೆ ವಿಪಕ್ಷೇ ಬಾಧಕತರ್ಕವನ್ನು ಸಮರ್ಥನೆ ಮಾಡುವುದಕ್ಕಾಗಿ ಮಧ್ಯದಲ್ಲಿ ಆಪ್ತವಾಕ್ಯತ್ವವನ್ನು ಸಾಧಿಸಲೇಬೇಕು.

## 'ನ ವಿಲಕ್ಷಣತ್ವಾತ್' ಎಂಬುದರ ಅರ್ಥ

ಯಾದುಪತ್ಯ– ಯದ್ಯಪೀತಿ ॥ ತಥಾ ಚ ಯುಕ್ತ್ಯಾ ತತ್ಸಾಧನೇಽಪಸಿದ್ಧಾಂತ ಇತಿ ಭಾವಃ। ನ ವಿಲಕ್ಷಣತ್ವಾದಿತಿ ॥ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಇತಿ ಸೂತ್ರಖಂಡಸ್ಯ 'ನ ವಿಲಕ್ಷಣತ್ವಾತ್' ಇತ್ಯಸ್ಯ ನೈವಂ ಶ್ರುತೇಸ್ತದನುಸಾರಿಸ್ಮೃತೇಶ್ಚ ತದುಕ್ತಾನುಪಲಬ್ಧೇರಪ್ರಾಮಾಣ್ಯಂ ವಾಚ್ಯಂ ವಿಲಕ್ಷಣತ್ವಾತ್ ತತ್ಪ್ರಾಮಾಣ್ಯಸ್ಯ ಸಂವಾದಾನಪೇಕ್ಷತಯಾ ಸ್ವತಸ್ತ್ವಾದಿತ್ಯರ್ಥಃ।

ಯುಕ್ತಿಯಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಿದರೂ ಕೂಡ ಅಪಸಿದ್ಧಾಂತ ಬರುತ್ತದೆಂದು 'ಯದ್ಯಪಿ' ಎಂಬುದರ ಅರ್ಥ. 'ನ ವಿಲಕ್ಷಣತ್ವಾತ್' ಎಂಬ ವಾಕ್ಯದ ಅಭಿಪ್ರಾಯವು ಹೀಗಿದೆ – 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರದಲ್ಲಿರುವ ನ ವಿಲಕ್ಷಣತ್ವಾತ್ ಎಂಬ ಭಾಗಕ್ಕೆ ಹೀಗರ್ಥ. ಶ್ರುತಿ ಹಾಗೂ ತದನುಸಾರಿಯಾದ ಸ್ಮೃತಿಗಳಲ್ಲಿ ಹೇಳಲ್ಪಟ್ಟ ಅನುಷ್ಠಾನಗಳನ್ನು ಮಾಡಿದರೂ ಕೂಡ ಫಲವು ಉಪಲಂಭವಾಗುತ್ತಿಲ್ಲ. ಆದ್ದರಿಂದ ಅಪ್ರಾಮಾಣ್ಯವನ್ನು ಹೇಳಬೇಕೆಂಬ ಆಕ್ಷೇಪ ಮಾಡಬಾರದು. ಪಾಶುಪತಾದಿ ಸ್ಮೃತಿಗಳಿಗಿಂತ ಇವು ವಿಲಕ್ಷಣವಾಗಿವೆ. ವೇದಪ್ರಮಾಣ್ಯವು ಸಂವಾದ ನಿರಪೇಕ್ಷಿತವಾಗಿ ಸಿದ್ಧವಾಗುತ್ತದೆ. ಏಕೆಂದರೆ ಪ್ರಾಮಾಣ್ಯಸ್ವತಸ್ತ್ವವನ್ನು ನಾವು ಒಪ್ಪಿದ್ದೇವೆ. ಆ ವೇದಾನು-ಸಾರಿಯಾದ ಸ್ಮೃತಿಯೂ ಕೂಡ ಸ್ವತಃ ಪ್ರಮಾಣವೇ ಆಗುತ್ತದೆ ಎಂಬ ವಿಚಾರವನ್ನು 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರವ್ಯಾಖ್ಯಾನದಲ್ಲಿ ಪ್ರತಿಪಾದನೆ ಮಾಡುತ್ತಾರೆ.

## 'ಔತ್ಪತ್ತಿಕಸ್ತು' ಇತ್ಯಾದಿ ಸೂತ್ರದ ಅರ್ಥ

ಯಾದುಪತ್ಯ– ತತ್ಪ್ರಾಮಾಣ್ಯಮಿತಿ ॥ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶೋಽವ್ಯತಿರೇಕಶ್ಚಾರ್ಥೇ ಅನುಪಲಬ್ಧೇ ತತ್ಪ್ರಮಾಣಂ ಬಾದರಾಯಣಸ್ಯ ಅನ-

ಪೇಕ್ಷತ್ವಾತ್' ಇತಿ ಜೈಮಿನಿಸೂತ್ರಖಂಡಸ್ಯ 'ತತ್ಪ್ರಾಮಾಣ್ಯಮ್' ಇತ್ಯಾದೇಸ್ತಸ್ಯ ಅಪೌರುಷೇಯತ್ವೇನ ಅನಾಶಂಕಿತದೋಷಸ್ಯ ವೇದಸ್ಯ, ಸ್ವತ ಏವ ಪ್ರಾಮಾಣ್ಯಂ, ಬಾದರಾಯಣಸ್ಯಾಪಿ ಸಮ್ಮತಮ್ । ಪ್ರಾಮಾಣ್ಯಸ್ಯೋತ್ಪತ್ತೌ ಆಪ್ತೋಕ್ತತ್ವಾದೇಃ ಜ್ಞಪ್ತೌ ಸಂವಾದಾದೇಃ ಚಾನಪೇಕ್ಷಣಾತ್ ಇತ್ಯರ್ಥೋऽತ್ರ ಬೋಧ್ಯಃ । 'ಬುದ್ಧಿದೋಷನಿರಾಸಮಾತ್ರಕಾರಣತ್ವಾದ್ ಯುಕ್ತೀನಾಮ್' ಇತಿ ಭಗವತ್ಪಾದೀಯ-ವಾಕ್ಯಂ ಮನಸಿ ನಿಧಾಯ ಆಹ – ತಥಾऽಪೀತಿ ॥

'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶೋऽವ್ಯತಿರೇಕಶ್ಚಾರ್ಥೇऽನುಪಲಬ್ಧೇ ತತ್ಪ್ರಮಾಣಂ ಬಾದರಾಯಣಸ್ಯ ಅನಪೇಕ್ಷತ್ವಾತ್' ಎಂಬ ಜೈಮಿನಿಸೂತ್ರದಲ್ಲಿರುವ ತತ್ಪ್ರಾಮಾಣ್ಯಂ ಎಂಬ ಭಾಗಕ್ಕೆ ಹೀಗರ್ಥ. ವೇದವು ಅಪೌರುಷೇಯವಾಗಿರುವುದರಿಂದ ಯಾವುದೇ ದೋಷಶಂಕೆಗೆ ಅವಕಾಶವಿಲ್ಲ. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬೇಕೆಂಬುದೇ ಶ್ರೀವೇದ-ವ್ಯಾಸದೇವರ ಅಭಿಪ್ರಾಯವಾಗಿದೆ. ಪ್ರಾಮಾಣ್ಯವು ಉತ್ಪತ್ತಿಯಲ್ಲಿ ಹಾಗೂ ಆಪ್ತೋಕ್ತತ್ವಾದಿ ಜ್ಞಪ್ತಿಯಲ್ಲಿ ಸಂವಾದಾದಿಗಳನ್ನು ಅಪೇಕ್ಷೆ ಪಡುವುದಿಲ್ಲವಾದ್ದರಿಂದ ಸ್ವತಃ ಎಂದು ತಿಳಿಯಬೇಕು. 'ಬುದ್ಧಿದೋಷ-ನಿರಾಸವನ್ನಷ್ಟೇ ಯುಕ್ತಿಗಳು ಮಾಡುತ್ತಿವೆ' ಎಂಬ (ವಿಷ್ಣುತತ್ವನಿರ್ಣಯ ಪ್ರಥಮಪರಿಚ್ಛೇದದಲ್ಲಿನ) ಶ್ರೀಮದಾಚಾರ್ಯರ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು 'ತಥಾಪಿ' ಇತ್ಯಾದಿ ಗ್ರಂಥವು ಹೊರಟಿದೆ.

## ಸುಧಾಪರಿಮಳಸಾರ

ಗ್ರಂಥಕಾರರಾದರೂ ವಕ್ತ್ರಾದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಆಪ್ತವಾಕ್ಯತ್ವದಿಂದ ಪ್ರಾಮಾಣ್ಯವನ್ನು ಸಾಧಿಸುವ ಈ ಪರಂಪರೆಯನ್ನು ಏಕೆ ಆಶ್ರಯಿಸಿದರು?

ವಕ್ತ್ರಾದ್ಯಾನುಕೂಲ್ಯದಿಂದ ಪ್ರಾಮಾಣ್ಯವನ್ನು ಸಾಧಿಸುವಾತನು ಕೊನೆಗೂ ಆಪ್ತವಾಕ್ಯತ್ವದ ಮೂಲಕವೇ ಪ್ರಾಮಾಣ್ಯವನ್ನು ಸಾಧಿಸುವ ಮಾರ್ಗವನ್ನೇ ಆಶ್ರಯಿಸಬೇಕಾಗಿರುವುದರಿಂದ ಈ ಪರಂಪರೆಯನ್ನು ಅನುಸರಿಸ-ಲಾಗಿದೆ.

ವಕ್ತ್ರಾದ್ಯಾನುಕೂಲ್ಯದಿಂದ ಪ್ರಾಮಾಣ್ಯವನ್ನು ಸಾಧಿಸಿದಾಗ ವಕ್ತ್ರಾದ್ಯಾನುಕೂಲ್ಯವಿದ್ದರೂ ವಕ್ತೃವಿನ ವಿಪ್ರಲಿಪ್ಸಾ (ವಂಚನೆಯ ಬಯಕೆ) ನಿಮಿತ್ತವಾಗಿ ಅಪ್ರಾಮಾಣ್ಯವಿರಲಿ ಎಂದು ಅಪ್ರಯೋಜಕಶಂಕೆಯನ್ನು ಇದು ಆಪ್ತವಾಕ್ಯವಾದುದರಿಂದ ಇಲ್ಲಿ ವಿಪ್ರಲಿಪ್ಸೆಕ್ಕೆ(ವಂಚನೆಗೆ) ಅವಕಾಶವಿಲ್ಲ; ಆದುದರಿಂದ ತನ್ನಿಮಿತ್ತವಾಗಿ ಅಪ್ರಮಾಣ ಯಾಕಾಗಬಾರದು ಎಂದು ಶಂಕಿಸುವಂತಿಲ್ಲ ಎಂದೇ ಉತ್ತರಿಸಬೇಕು. ಅದನ್ನು ಸಮರ್ಥಿಸಲು ಆಪ್ತವಾಕ್ಯತ್ವವನ್ನು ಸಾಧಿಸುವುದು ಅನಿವಾರ್ಯ. ಮೊದಲು ಪ್ರಾಮಾಣ್ಯವನ್ನು ಸಾಧಿಸಿ, ಬಳಿಕ ವಿಪಕ್ಷೇ ಬಾಧಕವನ್ನು ಸಮರ್ಥಿಸುವು-

ದಕ್ಕಾಗಿ ಆಪ್ತವಾಕ್ಯತ್ವವನ್ನು ಸಾಧಿಸುವುದಕ್ಕಿಂತ ಮೊದಲೇ ವಕ್ತಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧಿಸಿ, ಬಳಿಕ ಆದರಿಂದ ಪ್ರಾಮಾಣ್ಯವನ್ನು ಸಾಧಿಸುವುದು ಯುಕ್ತವಲ್ಲವೇ?

ವಸ್ತುತಃ ಶಾಸ್ತ್ರದ ಪ್ರಾಮಾಣ್ಯವು ಸ್ವತಃ ಎಂದು ಬಾದರಾಯಣರ ಅಭಿಪ್ರಾಯ. ಶಾಸ್ತ್ರದ ಜ್ಞಾನವುಂಟುಮಾಡುವ ಶಕ್ತಿಯು ಯಾವುದರಿಂದ ತಿಳಿದು ಬರುತ್ತದೋ ಅದರಿಂದಲೇ ಪ್ರಮಾ(ಯಥಾರ್ಥವಾದ ಜ್ಞಾನ)ವನ್ನು ಉಂಟುಮಾಡುವ ಶಕ್ತಿ ಎಂಬ ಪ್ರಾಮಾಣ್ಯವೂ, ತಿಳಿದು ಬರುತ್ತದೆ. ಅದಕ್ಕಾಗಿ ಅನುಮಾನದ ಆವಶ್ಯಕತೆ ಇಲ್ಲ. 'ನವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಬ್ರಹ್ಮಸೂತ್ರದಲ್ಲಿ ವೇದಾದಿಶಾಸ್ತ್ರವು ಪ್ರಮಾಣವೆಂದು ವ್ಯಾಸರು ಹೇಳಿರುತ್ತಾರೆ.

"ತತ್ ಪ್ರಮಾಣಂ ಬಾದರಾಯಣಸ್ಯ ಅನಪೇಕ್ಷತ್ವಾತ್" ಎಂಬ ಸೂತ್ರದಲ್ಲಿ ಜೈಮಿನಿ ಆಚಾರ್ಯರೂ ವೇದಾದಿಶಾಸ್ತ್ರಗಳು ಸ್ವತಃ ಪ್ರಮಾಣ ಎಂದು ಹೇಳಿರುವರು. ಹೀಗೆ ಶಾಸ್ತ್ರದ ಪ್ರಾಮಾಣ್ಯವು ಸ್ವತಃ ಎಂದು ಬಾದರಾಯಣರ ಅಭಿಪ್ರಾಯವಿರುವಾಗ ಶಾಸ್ತ್ರವು ಆಪ್ತವಾಕ್ಯವಾದುದರಿಂದ ಪ್ರಮಾಣ ಎಂದು ಶಾಸ್ತ್ರದ ಪ್ರಾಮಾಣ್ಯವನ್ನು ವಿಜಾತೀಯ(ಅನುಮಾನರೂಪ)ಸಂವಾದದಿಂದ ಸಮರ್ಥಿಸಿರುವುದು ಸರಿಯಲ್ಲ. ಹೀಗೆ ಸಮರ್ಥಿಸುವುದರಿಂದ ಶಾಸ್ತ್ರವು ಸ್ವತಃಪ್ರಮಾಣ ಎಂದು ಸಾರುವ ಪ್ರಮಾಣಗಳ ವಿರೋಧ. ಹಾಗೆಯೇ ಸಿದ್ಧಾಂತದ ವಿರೋಧವಿದ್ದಂತೆ ಕಾಣಿಸೀತು.

'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶೋಽವ್ಯತಿರೇಕಶ್ಚಾರ್ಥೇ ಅನುಪಲಬ್ಧೇ ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್' ಎಂಬ ಸೂತ್ರದ ಅರ್ಥ ಹೀಗಿದೆ, ಶಬ್ದಸ್ಯ ಅರ್ಥೇನ ಸಂಬಂಧಃ ಶಬ್ದಕ್ಕೆ ಅರ್ಥದೊಂದಿಗಿನ ಸಂಬಂಧವು, ಔತ್ಪತ್ತಿಕಃ ಸ್ವಾಭಾವಿಕವು, ಉಪದೇಶಃ ವೇದರೂಪವಾದ ಉಪದೇಶವು, ತಸ್ಯ=ಆ ಸಂಬಂಧದ, ಜ್ಞಾನಂ ಜ್ಞಾಪಕವಾಗಿದೆ, ಅವ್ಯತಿರೇಕಃ ಚ= ಭ್ರಮಜನಕವು ಅಲ್ಲ, ಸಂದೇಹಜನಕವೂ ಅಲ್ಲ, ತತ್= ಆದ್ದರಿಂದ, ಅನುಪಲಬ್ಧೇ=ಬೇರೆ ಪ್ರಮಾಣದಿಂದ ತಿಳಿಯಲ್ಪಡದೆ ಇರುವ ವಿಷಯದಲ್ಲಿ, ಪ್ರಮಾಣಂ= ಪ್ರಮಾಣವು, ಅನಪೇಕ್ಷತ್ವಾತ್= ಪ್ರಾಮಾಣ್ಯಕ್ಕೆ ಬೇರೆಯದರ ಅಪೇಕ್ಷೆ ಇಲ್ಲದೆ ಇರುವುದರಿಂದ. ಇಲ್ಲಿ 'ಬಾದರಾಯಣಸ್ಯ'(ವೇದವ್ಯಾಸರ ಮತದಲ್ಲಿ) ಎಂದಿರುವುದು ಗೌರವಕ್ಕಾಗಿ.

ಶಂಕಾಪರಿಹಾರ—ಆದರೆ ಆಚಾರ್ಯರ ಈ ಪ್ರಯತ್ನ ಪ್ರಾಮಾಣ್ಯಸಾಧನೆಯ ಉದ್ದೇಶದಿಂದ ಕೂಡಿದ್ದಲ್ಲ. ಅಪ್ರಾಮಾಣ್ಯಶಂಕೆಯನ್ನು ನಿವಾರಿಸುವುದಕ್ಕಷ್ಟೆ, ಇದು ಸೀಮಿತ. ಇದನ್ನೇ ತತ್ವನಿರ್ಣಯದಲ್ಲಿ "ಬುದ್ಧಿದೋಷನಿರಾಸಮಾತ್ರಕಾರಣತ್ವಾತ್ ಯುಕ್ತೀನಾಂ" ಯುಕ್ತಿಗಳೆಲ್ಲ ಅಪ್ರಾಮಾಣ್ಯಶಂಕೆ ಎಂಬ ಬುದ್ಧಿದೋಷನಿರಾಸ ಮಾಡುವುದಕ್ಕಷ್ಟೆ ಎಂದು ಆಚಾರ್ಯರು ತಿಳಿಸಿರುವರು. ಆದುದರಿಂದ ಯಾವ ವಿರೋಧವೂ ಇಲ್ಲ.

## ನೆನೆಪಿಡಿ

* ವಿಪ್ರಲಿಪ್ಸಾಘಟಿತವಾದ ಆಪ್ತವಾಕ್ಯತ್ವವನ್ನು ಮಧ್ಯದಲ್ಲಿ ಸಾಧನೆ ಮಾಡಿದರೆ ಮಾತ್ರ ಅಪ್ರಯೋಜಕತ್ವಾಶಂಕೆಯು ಪರಿಹಾರವಾಗುತ್ತದೆ.

* ಕರಣಪ್ರಾಮಾಣ್ಯವು ಜ್ಞಪ್ತಿಯಲ್ಲಿ ಪರತಃ ಎಂದು ಪ್ರಮಾಣಪದ್ಧತಿಯಲ್ಲಿ ಹೇಳಿದ್ದಕ್ಕೆ ವಿರೋಧ ಬರುವುದಿಲ್ಲವೇ? ಎಂಬುದರ ಬಗ್ಗೆ ವಿಮರ್ಶಿಸಲಾಗಿದೆ.

* ಬ್ರಹ್ಮಸೂತ್ರವು ಕರಣರೂಪವಾದ ಪ್ರಮಾಣವಾಗಿದೆ. ಆದರೂ ಕೂಡ ಸ್ವತಃ ಪ್ರಮಾಣವಾಗಿದೆ.

* ಪ್ರಮಾಜನನಶಕ್ತಿಗ್ರಾಹಕವಾದ ಆಪ್ತವಾಕ್ಯವು ಜ್ಞಾನಜನನಶಕ್ತಿಗ್ರಾಹಕವೂ ಆಗಿದೆ. ಏಕೆಂದರೆ, ಎರಡೂ ಶಕ್ತಿಗಳೂ ಒಂದೇ.

* ಪ್ರಮಾಜನಕತ್ವವನ್ನು ಹಾಗೂ ಜ್ಞಾನಜನಕತ್ವವನ್ನು ಒಟ್ಟಿಗೆ ಗ್ರಹಣ ಮಾಡುವುದನ್ನೇ ಪ್ರಾಮಾಣ್ಯಸ್ವತಸ್ತ್ವ ಎಂದು ವಿವಕ್ಷಿಸಿದರೆ 'ಜ್ಞಾನಜನಕಮ್ ಇದಂ ಶಾಸ್ತ್ರಂ ಪ್ರಮಾಜನಕಮ್ ಆಪ್ತವಾಕ್ಯತ್ವಾತ್' ಎಂಬ ಅನುಮಾನದ ಮೂಲಕ ಉಭಯಗ್ರಾಹಕತ್ವವನ್ನು ಸಮರ್ಥನೆ ಮಾಡಬೇಕು.

* ಜ್ಞಾನಪ್ರಾಮಾಣ್ಯವನ್ನೇ ವಿವಕ್ಷಿಸಬೇಕು. ಕರಣಪ್ರಾಮಾಣ್ಯವನ್ನು ವಿವಕ್ಷಿಸಬಾರದು.

* 'ಇದಂ ಶಾಸ್ತ್ರಂ ಪ್ರಮಾಜನಕಂ ಜ್ಞಾನಜನಕತ್ವೇ ಸತಿ ಸಂಶಯವಿಪರ್ಯಯಾ-ಜನಕತ್ವಾತ್' ಎಂಬ ಅನುಮಾನವು ಪ್ರಾಮಾಣ್ಯಗ್ರಾಹಕವಾಗಿದೆ. ಈ ಅನುಮಾನದಲ್ಲಿ ವಿಶೇಷಾಸಿದ್ಧಿಪರಿಹಾರಕ್ಕೋಸ್ಕರ ಆಪ್ತವಾಕ್ಯತ್ವ ಮೊದಲಾದ ಮೂರು ಹೇತುಗಳು ಪ್ರಯುಕ್ತವಾಗಿವೆ.

* 'ಜ್ಞಾನಂ ಯೇನ ಗೃಹ್ಯತೇ ತೇನೈವ ಪ್ರಾಮಾಣ್ಯಮಪಿ ಗೃಹ್ಯತೇ' ಎಂಬುದೇ ಪ್ರಾಮಾಣ್ಯಸ್ವತಸ್ತ್ವದ ಲಕ್ಷಣ. ಆದ್ದರಿಂದ ಶಾಬ್ದಬೋಧವೆಂಬ ಲಿಂಗದಿಂದಲೇ ಜ್ಞಾನ ಹುಟ್ಟುತ್ತದೆ; ಇದರಿಂದಲೇ ಪ್ರಾಮಾಣ್ಯವು ತಿಳಿಯುವಾಗ ಆಪ್ತವಾಕ್ಯತ್ವವೆಂಬ ಹೇತುವಿನ ಅವಶ್ಯಕತೆ ಏನು? ಎಂಬುದೇ ಪ್ರಶ್ನೆಯ ಅಭಿಪ್ರಾಯ. ಅಪ್ರಾಮಾಣ್ಯಶಂಕೆಯ ನಿರಾಸಕ್ಕೋಸ್ಕರ-ಮಾತ್ರ ಆಪ್ತವಾಕ್ಯತ್ವವೆಂಬ ಹೇತುವು ಉಪಯುಕ್ತವಾಗುತ್ತದೆಂದು ಸಮಾಧಾನ.

* ವಿಧಿವಾಕ್ಯವು ಧರ್ಮಜ್ಞಾನದಲ್ಲಿ ಸ್ವತಃ ಪ್ರಮಾಣವಾಗಿದೆ; ಅನಾಪ್ತಸಂಸರ್ಗ-ಪ್ರಯುಕ್ತವಾದ ಕರಣದೋಷ, ಬಾಧಕಪ್ರತ್ಯಯ ಹಾಗೂ ಜ್ಞಾತಾರ್ಥಕತ್ವ ಎಂಬ ದೋಷಗಳು

ವೇದದಲ್ಲಿ ಇಲ್ಲದ ಕಾರಣ ವೇದವು ಸ್ವತಃ ಪ್ರಮಾಣವಾಗಿದೆ ಎಂಬುದು 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ' ಇತ್ಯಾದಿ ಜೈಮಿನಿಸೂತ್ರದ ಅರ್ಥ.

## ಬ್ರಹ್ಮಮೀಮಾಂಸಾಶಾಸ್ತ್ರವೇ ಸರ್ವೋತ್ತಮ ಎನ್ನಲು ಎರಡು ಸಜಾತೀಯಸಂವಾದಗಳಿವೆ.

**ಅನುವ್ಯಾಖ್ಯಾನಮ್–**

**................ ಶ್ರುತಿಮೂಲತಯಾ ತಥಾ ।**

**ಯುಕ್ತಿಮೂಲತಯಾ ಚ .... ........... ॥**

ಶ್ರುತಿಮೂಲತ್ವ, ಯುಕ್ತಿಮೂಲತ್ವದಿಂದಲೂ ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ.

**ಶ್ರೀಮನ್ನ್ಯಾಯಸುಧಾ–** ಏವಂ ವಿಜಾತೀಯಸಂವಾದೇನ ಅಸ್ಯ ಶಾಸ್ತ್ರಸ್ಯ ಪ್ರಾಮಾಣ್ಯಮುಪಪಾದ್ಯ ತದನುತ್ತಮತಾಸಿದ್ಧಯೇ ಸಜಾತೀಯದ್ವಯಸಂವಾದ-ಮಪ್ಯಾಹ – ಶ್ರುತೀತಿ ॥

**ತಥಾಚಶಬ್ದೌ ಸಮುಚ್ಚಯಾರ್ಥೌ । 'ಮಾನಮ್' ಇತ್ಯಸ್ಯಾನುಕರ್ಷಣಾರ್ಥೌ ವಾ । ಯಥಾ ಆಪ್ತವಾಕ್ಯತಯಾ ತಥಾ ಶ್ರುತಿಮೂಲತಯಾಽಪಿ ಇತ್ಯುಪ-ಮಾರ್ಥೋ ವಾ ತಥಾ ಶಬ್ದಃ ।**

ಹೀಗೆ ವಿಜಾತೀಯಸಂವಾದದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಉಪಪಾದನೆ ಮಾಡಿದ್ದಾಯಿತು. ಈಗ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸರ್ವೋತ್ತಮತ್ವವನ್ನು ಸಾಧಿಸುವುದಕ್ಕಾಗಿ ಎರಡು ಬಗೆಯ ಸಜಾತೀಯಸಂವಾದಗಳನ್ನು 'ಶ್ರುತಿ' ಇತ್ಯಾದಿ ಅನು-ವ್ಯಾಖ್ಯಾನದಲ್ಲಿ ಹೇಳುತ್ತಿದ್ದಾರೆ.

'ತಥಾ' ಎಂಬ ಶಬ್ದ ಹಾಗೂ ಚ ಎಂಬ ಶಬ್ದಗಳು ಸಮುಚ್ಚಯಾರ್ಥದಲ್ಲಿವೆ. ಅಥವಾ 'ಮಾನಮ್ ಎಂಬ ಹಿಂದಿನ ಶ್ಲೋಕದಲ್ಲಿರುವ ಅನುಕರ್ಷಣವನ್ನು ಮಾಡಬೇಕೆಂದು ತಿಳಿಸುತ್ತಿವೆ. ಅಥವಾ ಆಪ್ತವಾಕ್ಯತ್ವವಿರುವುದರಿಂದ ಹೇಗೆ ಪ್ರಾಮಾಣ್ಯವು ಸಿದ್ಧವಾಗುತ್ತದೋ ಅದರಂತೆ ಶ್ರುತಿಮೂಲತ್ವವಿರುವುದರಿಂದಲೂ ಪ್ರಾಮಾಣ್ಯವು ಸಿದ್ಧವಾಗುತ್ತದೆ' ಎಂಬ ಉಪಮಾರ್ಥದಲ್ಲಿ 'ತಥಾ' ಎಂಬ ಶಬ್ದವಿದೆ.

## ಆಪ್ತವಾಕ್ಯತ್ವವು ವಿಜಾತೀಯಪ್ರಮಾಣ

ಪರಿಮಳ–ವಿಜಾತೀಯೇತಿ ॥ 'ಆಪ್ತವಾಕ್ಯತ್ವರೂಪಪ್ರಮಾಣಸಂವಾದೇನ' ಇತ್ಯರ್ಥಃ । ತಸ್ಯ ಶ್ರುತಿಯುಕ್ತ್ಯೋರಿವ ಸಾಕ್ಷಾತ್ ಶಾಸ್ತ್ರಸಮಾನಾರ್ಥಾವಿಷಯಕತ್ವೇನ ವಿಜಾತೀಯತ್ವಮ್ ಇತಿ ಭಾವಃ । ಅನುತ್ತಮತೇತಿ ॥ 'ಸರ್ವೋತ್ತಮತಾ' ಇತ್ಯರ್ಥಃ । 'ಚಕ್ರೇ ಶಾಸ್ತ್ರಮನುತ್ತಮಮ್' ಇತ್ಯತ್ರ ಪ್ರಾಗೇವ ವಿಗ್ರಹಃ ಪ್ರದರ್ಶಿತಃ । ತದನುವಾದತ್ವಾತ್ ಏತತ್ಪ್ರಯೋಗಃ । ಅನುಕರ್ಷಣಾರ್ಥೋ ವೇತಿ ॥ 'ಶ್ರುತಿಮೂಲತಯಾ ಮಾನಮ್, ಯುಕ್ತಿಮೂಲತಯಾಽಪಿ ಮಾನಮ್' ಇತಿ ಪ್ರತ್ಯೇಕಮನುಕರ್ಷಣಾರ್ಥೌ ಇತ್ಯರ್ಥಃ ।

'ವಿಜಾತೀಯಸಂವಾದ' – 'ಆಪ್ತವಾಕ್ಯತ್ವವೆಂಬ ಪ್ರಮಾಣದ ಸಂವಾದವಿರುವುದರಿಂದ' ಎಂದರ್ಥ. ಈ ಆಪ್ತವಾಕ್ಯತ್ವವೆಂಬ ಪ್ರಮಾಣವು ಶ್ರುತಿಯುಕ್ತಿಗಳಂತೆ ನೇರವಾಗಿ ಶಾಸ್ತ್ರಕ್ಕೆ ಸಮಾನವಿಷಯವುಳ್ಳದ್ದಾಗಿಲ್ಲ. ಆದ್ದರಿಂದ ವಿಜಾತೀಯಸಂವಾದ ಎನಿಸುತ್ತದೆ ಎಂದು ತಿಳಿಯಬೇಕು.

'ಅನುತ್ತಮತಾ'– ಸರ್ವೋತ್ತಮತಾ(ತ್ವ) ಎಂದರ್ಥ. 'ಚಕ್ರೇ ಶಾಸ್ತ್ರಮನುತ್ತಮಮ್' ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗಲೇ ಇದರ ವಿಗ್ರಹವನ್ನು ತೋರಿಸಿದ್ದಾಗಿದೆ. ಅದರ ಅನುವಾದವನ್ನು ಮಾಡುತ್ತಿರುವುದರಿಂದ 'ಅನುತ್ತಮತಾ ಸಿದ್ಧಯೇ' ಎಂದು ಹೇಳಿದ್ದಾರೆ.

'ಅನುಕರ್ಷಣಾರ್ಥೌ'– ಶ್ರುತಿಮೂಲಕವಾಗಿರುವುದರಿಂದ ಪ್ರಮಾಣವಾಗಿದೆ. ಯುಕ್ತಿಮೂಲಕವಾಗಿರುವುದರಿಂದಲೂ ಪ್ರಮಾಣವಾಗಿದೆ. ಹೀಗೆ ಪ್ರತ್ಯೇಕವಾಗಿ ಅನುಕರ್ಷವನ್ನು 'ಚ ಮತ್ತು 'ತಥಾ'ಶಬ್ದಗಳು ತಿಳಿಸುತ್ತಿವೆ.

ವಿವರಣೆ – ಶ್ರುತಿಸಂವಾದ ಹಾಗೂ ಯುಕ್ತಿಸಂವಾದಗಳೆರಡೂ ಬ್ರಹ್ಮಸೂತ್ರಪ್ರತಿಪಾದ್ಯವಾದ ಯಾವ ವಿಷಯವಿದೆಯೋ ತತ್ಸಮಾನವಾದ ವಿಷಯಗಳನ್ನೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಇವೆರಡೂ ಸಜಾತೀಯಸಂವಾದ ಎಂದು ಕರೆಸಿಕೊಳ್ಳುತ್ತವೆ. ಆದರೆ ಆಪ್ತವಾಕ್ಯತ್ವವೆಂಬ ಸಂವಾದವು ಬ್ರಹ್ಮಸೂತ್ರಪ್ರತಿಪಾದ್ಯವಾದ ವಿಷಯದ ಸಮಾನವಿಷಯವನ್ನು ಪ್ರತಿಪಾದನೆ ಮಾಡುವುದಿಲ್ಲ. ಆದ್ದರಿಂದ ವಿಜಾತೀಯಸಂವಾದ ಎನಿಸುತ್ತದೆ. ಹೀಗೆ ಪ್ರಾಮಾಣ್ಯಸಾಧಕವಾದ ಮೂರರಲ್ಲಿ ಒಂದು ವಿಜಾತೀಯ-ಸಂವಾದವೆಂದು ಉಳಿದೆರಡು ಸಜಾತೀಯಸಂವಾದವೆಂದು ತಿಳಿಯಬೇಕು.

ಟೀಕೆಯಲ್ಲಿ ಸರ್ವೋತ್ತಮತ್ವಸಿದ್ಧಯೇ ಎಂದು ಹೇಳದೇ 'ಅನುತ್ತಮತ್ವಸಿದ್ಧಯೇ' ಎಂದೇಕೆ ಹೇಳಿದರು? ಎಂಬ ಪ್ರಶ್ನೆಗೆ ಹೀಗೆ ಉತ್ತರವನ್ನು ತಿಳಿಯಬೇಕು – ಅನುವ್ಯಾಖ್ಯಾನದಲ್ಲಿ ಅನುತ್ತಮಂ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅದನ್ನೇ ಇಲ್ಲಿ ಸಮರ್ಥನೆ ಮಾಡುತ್ತಿದ್ದಾರೆಂದು ತಿಳಿಸುವುದಕ್ಕಾಗಿ ಅದೇ ಶಬ್ದವನ್ನು ಅನುವಾದ ಮಾಡಿದ್ದಾರೆ.

'ತಥಾ'ಶಬ್ದಕ್ಕೆ ಒಟ್ಟು ಮೂರು ಅರ್ಥ. (೧) ಸಮುಚ್ಚಯ, (೨) ಮಾನಮ್ ಎಂಬ ಪದದ ಅನುಕರ್ಷಣೆ, (೩) ಉಪಮೆ ಈ ಮೂರೂ ಅರ್ಥಗಳನ್ನು ಇಲ್ಲಿ ವಿವಕ್ಷಿಸಿ ವ್ಯಾಖ್ಯಾನ ಮಾಡಿದ್ದಾರೆಂದು ತಿಳಿಯಬೇಕು.

## ನಿಜವಾಗಿಯೂ ಸಮುಚ್ಚಯ ಎಂದರೇನು?

ವಾಕ್ಯಾರ್ಥಚಂದ್ರಿಕಾ– 'ಆದೌ ತಾವತ್ಪ್ರಾಮಾಣ್ಯೇ' ಇತಿ ತಾವಚ್ಛಬ್ದಸೂಚಿತಮಾಹ – ತದನುತ್ತಮತಾ ಇತಿ ॥ ವಕ್ತ್ರಾದ್ಯಾನುಕೂಲ್ಯಾಪ್ತವಾಕ್ಯತ್ವಯೋರಿವ ನ ಶ್ರುತಿಯುಕ್ತಿಮೂಲತ್ವಯೋಃ ಪೂರ್ವೋಕ್ತಹೇತುಂ ಪ್ರತಿ ಸಾಧ್ಯತ್ವಮಪಿ ತು ಮಾನತ್ವಂ ಪ್ರತಿ ಸ್ವತಂತ್ರಸಾಧಕತ್ವಮಿತಿ ಅಭಿಪ್ರೇತ್ಯ ಭಾಷ್ಯಕೃತಾ ಪ್ರಯುಕ್ತಯೋಃ 'ತಥಾಚ'ಶಬ್ದಯೋಸ್ತದಭಿಪ್ರಾಯಂ ವಿಶದಯತಿ – ತಥೇತಿ ॥

ಹಿಂದೆ 'ಆದೌ ತಾವತ್ ಪ್ರಾಮಾಣ್ಯೇ' ಎಂಬುದಾಗಿ ತಾವತ್‌ಶಬ್ದವನ್ನು ಪ್ರಯೋಗಿಸಿದ್ದರು. ಇದರಿಂದ ಅನುತ್ತಮತ್ವವೂ ಕೂಡ ಇದೆ ಎಂದು ಸೂಚಿಸಿದ್ದರು. ಅದನ್ನೇ ಈಗ ಸಮರ್ಥಿಸುತ್ತಿದ್ದಾ-ರೆಂಬುದನ್ನು 'ತದನುತ್ತಮತಾ ಸಿದ್ಧಯೇ' ಎಂಬುದಾಗಿ ಹೇಳುತ್ತಿದ್ದಾರೆ.

ವಕ್ತ್ರಾದ್ಯಾನುಕೂಲ್ಯ, ಆಪ್ತವಾಕ್ಯತ್ವ ಇವುಗಳಂತೆ ಶ್ರುತಿಮೂಲತ್ವ ಹಾಗೂ ಯುಕ್ತಿ-ಮೂಲತ್ವಗಳು ಹಿಂದೆ ಹೇಳಿದ ಹೇತುವಿಗೆ ಸಾಧಕವಲ್ಲ. ಮಾನತ್ವವನ್ನು ಕುರಿತು ಸ್ವತಂತ್ರವಾಗಿ

ಸಾಧಕಗಳಾಗಿವೆ. ಈ ಅಭಿಪ್ರಾಯದಿಂದ ಭಾಷ್ಯಕಾರರು ಪ್ರಯೋಗಿಸಿದ 'ತಥಾ' ಮತ್ತು 'ಚ'ಶಬ್ದಗಳ ಅಭಿಪ್ರಾಯವನ್ನು 'ತಥಾ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

ವಿವರಣೆ – 'ಗುರುರ್ಗುರೂಣಾಂ' ಎಂಬ ಶ್ಲೋಕಕ್ಕೆ ಅವತಾರಿಕೆಯನ್ನು ನೀಡುವಾಗ 'ಆದೌ ತಾವತ್ ಪ್ರಾಮಾಣ್ಯಮಾತ್ರ' ಎಂದು ಹೇಳಿದ್ದರು. ಅಲ್ಲಿ ತಾವತ್‌ಶಬ್ದದಿಂದ ಮುಂದೆ ಅನುತ್ತಮತ್ವವನ್ನು ಸಾಧಿಸುತ್ತೇವೆ ಎಂಬ ಅಭಿಪ್ರಾಯವನ್ನು ತಿಳಿಸಿದ್ದರು. ಅದನ್ನೇ ಈಗ ಸಮರ್ಥಿಸುತ್ತಿದ್ದಾರೆ. ಇದರಿಂದ ಅಲ್ಲಿರುವ 'ತಾವತ್' ಎಂಬ ಪದಕ್ಕೆ ವ್ಯಾಖ್ಯಾನ ಮಾಡಿದಂತಾಯಿತು.

'ಗುರುರ್ಗುರೂಣಾಮ್' ಇತ್ಯಾದಿ ಹೇತುಗಳು ವಕ್ತ್ರಾದ್ಯಾನುಕೂಲ್ಯಕ್ಕೆ ಸಾಧಕಗಳಾಗಿವೆ. ವಕ್ತ್ರಾದ್ಯಾ-ನುಕೂಲ್ಯಗಳೆಂಬ ಹೇತುಗಳು ಆಪ್ತವಾಕ್ಯತ್ವಕ್ಕೆ ಸಾಧಕಗಳಾಗಿವೆ. ಆಪ್ತವಾಕ್ಯತ್ವವೆಂಬ ಹೇತುವು ಪ್ರಾಮಾಣ್ಯಕ್ಕೆ ಸಾಧಕವಾಗಿದೆ. ಆದ್ದರಿಂದ 'ಪೂರ್ವೋಕ್ತಹೇತುಂ ಪ್ರತಿ' ಎಂದರೆ ವಕ್ತ್ರಾದ್ಯಾನುಕೂಲ್ಯಕ್ಕೆ ಎಂದರ್ಥ. ಶ್ರುತಿಮೂಲತ್ವ ಹಾಗೂ ಯುಕ್ತಿಮೂಲತ್ವಗಳು ಪರಸ್ಪರಅಪೇಕ್ಷಿತವಾಗಿ ಪೂರ್ವೋಕ್ತ-ಹೇತುವಿಗೆ ಸಾಧಕಗಳಲ್ಲ. ಸ್ವತಂತ್ರವಾಗಿಯೇ ಸಾಧಕಗಳಾಗಿವೆ.

ಸ್ಪಷ್ಟವಾದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – 'ಚ'ಶಬ್ದಕ್ಕೆ ಎರಡರ್ಥ, (೧) ಇತರೇತರ-ಯೋಗ, ಮತ್ತು (೨) ಸಮುಚ್ಚಯ ಎಂದು. ಇತರೇತರಯೋಗದಲ್ಲಿ ಪರಸ್ಪರ ಅಪೇಕ್ಷೆಯು ಇರುತ್ತದೆ. ಆದರೆ ಸಮುಚ್ಚಯದಲ್ಲಿ ಪರಸ್ಪರ ಅಪೇಕ್ಷೆಯಿರುವುದಿಲ್ಲ. ಉದಾ – ರಾಮಃ ಆಗತಃ ಕೃಷ್ಣಶ್ಚ ಆಗತಃ' ಎಂದು ಹೇಳಿದಾಗ ರಾಮನ ಆಗಮನಕ್ಕೂ ಕೃಷ್ಣನ ಆಗಮನಕ್ಕೂ ಪರಸ್ಪರ ಅಪೇಕ್ಷೆ ಇರುವುದಿಲ್ಲ. ಇಬ್ಬರೂ ಕೂಡ ಸ್ವತಂತ್ರವಾಗಿ ಬಂದು ಎಂದಷ್ಟೇ ಅರ್ಥ. ಇದರಂತೆ ಪ್ರಕೃತ ಶ್ರುತಿಮೂಲತ್ವವನ್ನು ಯುಕ್ತಿಮೂಲತ್ವವು ಅಪೇಕ್ಷಿಸುವುದಿಲ್ಲ. ಯುಕ್ತಿಮೂಲತ್ವವನ್ನು ಶ್ರುತಿಮೂಲತ್ವವು ಅಪೇಕ್ಷಿಸುವುದಿಲ್ಲ. ಎರಡೂ ಕೂಡ ಸ್ವತಂತ್ರವಾಗಿಯೇ ಪ್ರಾಮಾಣ್ಯಕ್ಕೆ ಸಾಧಕಗಳಾಗುತ್ತವೆ. ಆದರೆ ಆಪ್ತವಾಕ್ಯತ್ವವು ವಕ್ತ್ರಾದ್ಯಾನುಕೂಲ್ಯವನ್ನು ಅಪೇಕ್ಷಿಸುತ್ತದೆ. ಹಾಗಾಗಿ ವಕ್ತ್ರಾದ್ಯಾನುಕೂಲ್ಯ ಹಾಗೂ ಆಪ್ತವಾಕ್ಯತ್ವಗಳಂತೆ ಶ್ರುತಿಮೂಲತ್ವ ಯುಕ್ತಿಮೂಲತ್ವಗಳು ಪರಸ್ಪರಅಪೇಕ್ಷೆಯನ್ನು ಹೊಂದಿ ಪ್ರಾಮಾಣ್ಯಕ್ಕೆ ಸಾಧಕಗಳಾ-ಗಿರುವುದಿಲ್ಲ. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ 'ತಥಾ'ಶಬ್ದ ಹಾಗೂ 'ಚ'ಶಬ್ದಗಳು ಸಮುಚ್ಚಯಾ-ರ್ಥದಲ್ಲಿ ಪ್ರಯುಕ್ತವಾಗಿವೆ ಎಂದು ಗ್ರಂಥಕಾರರು ತಿಳಿಸಿದ್ದಾರೆ.

* * * *

## ಸಮುಚ್ಚಯಪಕ್ಷವನ್ನು ಬಿಟ್ಟು ಉಳಿದೆರಡು ಪಕ್ಷಗಳನ್ನು ಏಕೆ ಆಶ್ರಯಿಸಿದ್ದಾರೆ?

ವಾಕ್ಯಾರ್ಥಚಂದ್ರಿಕಾ— 'ತಥಾಚ'ಶಬ್ದಯೋರ್ಹೇತುಸಮುಚ್ಚಯಾರ್ಥತ್ವೇ ತದ್ಬಲಾತ್ ಸಾಧ್ಯಸಂಬಂಧಲಾಭಃ । ಅನುಕ್ತಸಾಧ್ಯಸಮುಚ್ಚಯರೂಪಸಾಧ್ಯಾನುಕರ್ಷಣಾರ್ಥತ್ವೇ ತು ಸಾಕ್ಷಾತ್ ಸಾಧ್ಯಸಂಬಂಧಾಲಾಭಾತ್ ಪರಸ್ಪರಹೇತುಸಮುಚ್ಚಯಫಲಸ್ಯಾಪಿ ಲಾಭಾತ್ ಪಕ್ಷಾಂತರಮಾಹ – ಮಾನಮಿತಿ ॥ 'ಚ'ಶಬ್ದಸ್ಯೋಕ್ತರೀತ್ಯಾ ಸಮುಚ್ಚಯಾರ್ಥತಾಮಂಗೀಕೃತ್ಯ 'ತಥಾ'ಶಬ್ದಸ್ಯೋಪಮಾರ್ಥತಯಾ ಪ್ರಸಿದ್ಧತ್ವಾತ್ ತದರ್ಥತ್ವೇಽಪಿ ಸಮುಚ್ಚಯಫಲಲಾಭಾತ್ ತಥಾಶಬ್ದೇ ಪ್ರಕಾರಾಂತರಮಾಹ – ಯಥೇತಿ ॥

'ತಥಾ'ಶಬ್ದ ಹಾಗೂ 'ಚ'ಶಬ್ದಗಳು ಹೇತುವನ್ನು ಸಮುಚ್ಚಯ ಮಾಡುತ್ತಿವೆ. ಪ್ರತ್ಯೇಕವಾಗಿ ಸಾಧ್ಯಸಂಬಂಧವನ್ನು ಹೊಂದಿವೆ ಎಂಬುದನ್ನು ಕೂಡ ಈ ಸಮುಚ್ಚಯದಿಂದಲೇ ಸಿದ್ಧವಾಗುತ್ತದೆ. ಅನುಕ್ತವಾದ ಸಾಧ್ಯಸಮುಚ್ಚಯವೆಂಬ ಸಾಧ್ಯವನ್ನು ಅನುಕರ್ಷಣೆ ಮಾಡುವುದಾದರೆ ಸಾಕ್ಷಾತ್ತಾಗಿ ಸಾಧ್ಯಸಂಬಂಧ ಹೊಂದುತ್ತವೆಂಬುದು ಸಿದ್ಧವಾಗುವುದಿಲ್ಲ. ಆದ್ದರಿಂದ ಪರಸ್ಪರ ಹೇತುಸಮುಚ್ಚಯದ ಫಲವು ಅರ್ಥಾತ್ ಸಿದ್ಧವಾಗುತ್ತದೆ. ಈ ದೃಷ್ಟಿಯಿಂದ ಮತ್ತೊಂದು ಪಕ್ಷವನ್ನು 'ಮಾನಮ್' ಎಂಬುದಾಗಿ ಹೇಳುತ್ತಿದ್ದಾರೆ.

ಚಶಬ್ದಕ್ಕೆ ಹಿಂದೆ ಹೇಳಿದ ಪ್ರಕಾರ ಸಮುಚ್ಚಯ ಎಂಬರ್ಥವನ್ನು ಅಂಗೀಕರಿಸಿ, ತಥಾಶಬ್ದಕ್ಕೆ ಮಾತ್ರ ಉಪಮಾ ಎಂಬರ್ಥವನ್ನು ಹೇಳುತ್ತಿದ್ದಾರೆ. ತಥಾ ಶಬ್ದಕ್ಕೆ ಉಪಮಾ ಎಂಬರ್ಥವನ್ನು ವಿವಕ್ಷಿಸಿದಾಗಲೂ ಸಮುಚ್ಚಯವೆಂಬ ಫಲದ ಲಾಭವು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ತಥಾಶಬ್ದಕ್ಕೆ ಮತ್ತೊಂದು ಅರ್ಥವನ್ನು "ಯಥಾ" ಇತ್ಯಾದಿ ವಾಕ್ಯದಿಂದ ತಿಳಿಸಿದ್ದಾರೆ.

ವಿವರಣೆ – 'ತಥಾ' ಮತ್ತು 'ಚ'ಶಬ್ದಗಳಿಗೆ ಎರಡನೆಯ ವ್ಯಾಖ್ಯಾನ ಹೀಗಿದೆ – 'ಮಾನಮ್' ಎಂಬುದನ್ನು ಪ್ರತ್ಯೇಕವಾಗಿ ಅನುಕರ್ಷಣೆ ಮಾಡಬೇಕಾಗಿದೆ. 'ಶ್ರುತಿಮೂಲತಯಾ ಮಾನಮ್' 'ಯುಕ್ತಿಮೂಲತಯಾ ಮಾನಮ್' ಎಂದು. ಈ ಪಕ್ಷದಲ್ಲಿ ಸ್ವಾರಸ್ಯ ಹೀಗಿದೆ – ಶ್ರುತಿಮೂಲತ್ವ ಹಾಗೂ ಯುಕ್ತಿಮೂಲತ್ವಗಳಿಗೆ ಪರಸ್ಪರ ಅಪೇಕ್ಷೆ ಇರುವುದಿಲ್ಲ. ಆದರೆ ಪ್ರತ್ಯೇಕವಾಗಿ ಸಾಧ್ಯಸಂಬಂಧವು ಇದ್ದೇ ಇರುತ್ತದೆ. ಒಂದು ವೇಳೆ 'ತಥಾ'ಶಬ್ದ ಮತ್ತು 'ಚ'ಶಬ್ದಗಳನ್ನು ಪ್ರತ್ಯೇಕವಾಗಿ ಸಾಧ್ಯಸಂಬಂಧದ ಅನುಕರ್ಷಕ್ಕೋಸ್ಕರ ಎಂದು ಹೇಳಿದರೆ ಸಾಧ್ಯಸಂಬಂಧವು ನೇರವಾಗಿಯೇ ತಿಳಿಯುತ್ತದೆ. ಪ್ರತ್ಯೇಕವಾಗಿ

ಅನ್ವಯ ಮಾಡುವುದರಿಂದಲೇ ಶ್ರುತಿಮೂಲತ್ವ ಹಾಗೂ ಯುಕ್ತಿಮೂಲತ್ವಗಳಿಗೆ ಪರಸ್ಪರವಾಗಿ ಅಪೇಕ್ಷೆ ಇರುವುದಿಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಅದಕ್ಕೋಸ್ಕರ ಈ ಎರಡನೇ ಪಕ್ಷವನ್ನು ಹೇಳಿದ್ದಾರೆ.

ಮೂರನೆಯ ಅರ್ಥ ಹೀಗಿದೆ – 'ಚ'ಶಬ್ದಕ್ಕೆ ಸಮುಚ್ಚಯ ಎಂದೇ ಅರ್ಥ. 'ತಥಾ'ಶಬ್ದಕ್ಕೆ ಉಪಮಾ ಎಂದರ್ಥ. ಉಪಮಾ ಎಂಬರ್ಥವನ್ನು ವಿವಕ್ಷಿಸಿದಾಗಲೂ ಸಮುಚ್ಚಯವೆಂಬ ಫಲವು ಸಿದ್ಧವಾಗುತ್ತದೆಂಬ ಸ್ವಾರಸ್ಯ ಈ ಪಕ್ಷದಲ್ಲಿದೆ.

## ಸುಧಾ-ಪರಿಮಳಸಾರ

ಇದುವರೆಗೆ ತಿಳಿಸಿದ ರೀತಿಯಂತೆ ಆಪ್ತವಾಕ್ಯತ್ವ ಎಂಬ ವಿಜಾತೀಯಪ್ರಮಾಣಸಂವಾದದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಉಪಪಾದನೆ ಮಾಡಿ ಆ ಶಾಸ್ತ್ರದ ಪ್ರಾಮಾಣ್ಯಕ್ಕೆ ಸರ್ವೋತ್ತಮತ್ವದ ಸಿದ್ಧಿಗಾಗಿ ಎರಡು ಸಜಾತೀಯಸಂವಾದಗಳನ್ನು ಕೂಡ "ಶ್ರುತಿಮೂಲತಯಾ ತಥಾ ಯುಕ್ತಿಮೂಲತಯಾ ಚ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ಇಲ್ಲಿರುವ 'ತಥಾ, ಚ' ಶಬ್ದಗಳು ಸಮುಚ್ಚಯ ಎಂಬ ಅರ್ಥವುಳ್ಳವುಗಳು. ಶ್ರುತಿಮೂಲವಾದುದರಿಂದಲೂ, ಯುಕ್ತಿಮೂಲವಾದುದರಿಂದಲೂ ಶಾಸ್ತ್ರವು ಪ್ರಮಾಣ ಎಂದು ಅರ್ಥೈಸಬೇಕು. ಅಥವಾ ಶ್ರುತಿಮೂಲತಯಾ ಮಾನಂ, ಯುಕ್ತಿಮೂಲತಯಾಽಪಿ ಮಾನಂ (ಶ್ರುತಿಮೂಲವಾದುದರಿಂದ ಪ್ರಮಾಣವು ಯುಕ್ತಿಮೂಲವಾದುದರಿಂದಲೂ ಪ್ರಮಾಣ.) ಎಂದು "ಯತಸ್ತದುದಿತಂ ಮಾನಂ" ಎಂಬ ಹಿಂದಿನ ವಾಕ್ಯದಿಂದ "ಮಾನಂ" ಎಂಬ ಪದವನ್ನು ಪ್ರತ್ಯೇಕವಾಗಿ ಅನುಕರ್ಷಣ ಮಾಡಿಕೊಳ್ಳಬೇಕೆಂದು ತಥಾ ಚ ಶಬ್ದಗಳು ತಿಳಿಸುತ್ತವೆ. ಅಥವಾ ಆಪ್ತವಾಕ್ಯವಾದುದರಿಂದ ಹೇಗೆ ಪ್ರಮಾಣವೋ ಹಾಗೆಯೇ ಶ್ರುತಿಮೂಲವಾದುದರಿಂದಲೂ ಪ್ರಮಾಣ ಎಂದು, ಹೋಲಿಕೆಯೆಂಬ ಅರ್ಥವುಳ್ಳದ್ದು "ತಥಾ"ಶಬ್ದ ಎಂದೂ ಇಟ್ಟುಕೊಳ್ಳಬಹುದು.

## ನೆನೆಪಿಡಿ

* ಶ್ರುತಿಮೂಲತ್ವ, ಯುಕ್ತಿಮೂಲತ್ವಗಳೆರಡೂ ಸಜಾತೀಯಸಂವಾದಗಳು; ಆಪ್ತವಾಕ್ಯತ್ವ ಮಾತ್ರ ವಿಜಾತೀಯಸಂವಾದ ಎನಿಸುತ್ತದೆ.

* ಶ್ರುತಿಮೂಲತ್ವ, ಹಾಗೂ ಯುಕ್ತಿಮೂಲತ್ವಗಳು ಪರಸ್ಪರ ಅಪೇಕ್ಷೆಯನ್ನು ಹೊಂದದೇ ಸ್ವತಂತ್ರವಾಗಿ ಪ್ರಾಮಾಣ್ಯಕ್ಕೆ ಸಾಧಕವಾಗುತ್ತವೆ. ಆದರೆ ವಕ್ತ್ರಾದ್ಯಾನುಕೂಲ್ಯ ಮತ್ತು ಆಪ್ತವಾಕ್ಯತ್ವಗಳು ಪರಸ್ಪರ ಅಪೇಕ್ಷೆಯನ್ನು ಹೊಂದಿ ಪ್ರಾಮಾಣ್ಯಕ್ಕೆ ಸಾಧಕಗಳಾಗಿವೆ.

* ಇತರೇತರಯೋಗದಲ್ಲಿ ಪರಸ್ಪರ ಅಪೇಕ್ಷೆಯಿರುತ್ತದೆ. ಸಮುಚ್ಚಯದಲ್ಲಿ ಪರಸ್ಪರ ಅಪೇಕ್ಷೆ ಇರುವುದಿಲ್ಲ. ಇಲ್ಲಿರುವ 'ಚ'ಶಬ್ದವು ಸಮುಚ್ಚಯಾರ್ಥದಲ್ಲಿರುತ್ತದೆ.

## 'ಶ್ರುತಿಮೂಲ', 'ಯುಕ್ತಿಮೂಲ ಶಬ್ದಗಳ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ– ಯದ್ಯಪಿ ಶ್ರುತಿಯುಕ್ತಿಮೂಲಶಬ್ದೌ ಶ್ರುತಿಯುಕ್ತಿಭ್ಯಾಂ ಅರ್ಥಮುಪಲಭ್ಯ ರಚಿತಸ್ಯ ವಾಚಕೌ । ತಥಾಽಪ್ಯತ್ರ ಸಮಾನಾರ್ಥತಾಸಾಮ್ಯೇನ ಗೌಣ್ಯಾ ವೃತ್ತ್ಯಾ ಶ್ರುತಿಯುಕ್ತಿಸಂವಾದಿತಾರ್ಥೌ ವ್ಯಾಖ್ಯೇಯೌ । ಭಗವತೋ ಬಾದರಾಯಣಸ್ಯ ಸ್ವತಃ ಸರ್ವಜ್ಞತ್ವೇನ ಮುಖ್ಯಾರ್ಥಾಸಂಭವಾತ್ । ಯದಿ ಚ 'ಶ್ರುತಿಯುಕ್ತಿಸಂವಾದಿತ್ವಾತ್' ಇತ್ಯೇವಾವಕ್ಷ್ಯತ್, ತದಾ ಯಾದೃಚ್ಛಿಕಸಂವಾದಿತಾ ಅಪಿ ವ್ಯಜ್ಞಾಸ್ಯತ । ಸಾ ಮಾ ವಿಜ್ಞಾಯೀತಿ ಗೌಣಪ್ರಯೋಗಃ । ಏವಂ ಹಿ ಪ್ರಯೋಗೇ ಅಂಗಾಂಗಿಭಾವೋಽಪ್ಯಧಿಕೋ ವಿಜ್ಞಾಯತೇ । ಸ ಚ ಪಕ್ಷಧರ್ಮತೋಪಪಾದಕೋ ಭವಿಷ್ಯತಿ ।**

ವಾಸ್ತವಿಕವಾಗಿ 'ಶ್ರುತಿಮೂಲ' 'ಯುಕ್ತಿಮೂಲ' ಎಂಬ ಎರಡು ಶಬ್ದಗಳಿಗೆ 'ಶ್ರುತಿಯಿಂದ ಅರ್ಥವನ್ನು ತಿಳಿದು ರಚನೆ ಮಾಡುವಿಕೆ' 'ಯುಕ್ತಿಯಿಂದ ವಿಷಯವನ್ನು ತಿಳಿದು ರಚನೆ ಮಾಡುವಿಕೆ' ಎಂದರ್ಥ. ಆದರೆ ಈ ಅರ್ಥವನ್ನು ಬ್ರಹ್ಮಮೀಮಾಂಸಾಶಾಸ್ತ್ರದ ವಿಷಯದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಯಾವ ಮನುಸ್ಮೃತಿಯು ಶ್ರುತಿಯಿಂದ ವಿಷಯವನ್ನು ತಿಳಿದು ರಚಿತವಾಗಿ ಶ್ರುತಿಮೂಲ ಎನಿಸಿದೆಯೋ ಅದರ ಸಾಮ್ಯವು ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿದೆ. ಅದರಂತೆ ಯುಕ್ತಿಯಿಂದ ಅರ್ಥವನ್ನು ತಿಳಿದು ಯಾವ ಜೈಮಿನಿಸೂತ್ರವು ರಚಿತವಾಗಿ ಯುಕ್ತಿಮೂಲ ಎನಿಸಿದೆಯೋ ಅದರ ಸಾಮ್ಯವು ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿದೆ. ಹೀಗೆ ಶ್ರುತಿಮೂಲಕವಾದ ಮತ್ತು ಯುಕ್ತಿಮೂಲಕವಾದ ಶಾಸ್ತ್ರಗಳ ಸಾಮ್ಯವು ಇದಕ್ಕಿರುವುದರಿಂದ ಗೌಣೀವೃತ್ತಿಯಿಂದ ಶ್ರುತಿಸಂವಾದಿಯಾಗಿದೆ.

ಹಾಗೂ ಯುಕ್ತಿಸಂವಾದಿಯಾಗಿದೆ ಎಂಬರ್ಥವನ್ನೇ ಶ್ರುತಿಮೂಲ ಹಾಗೂ ಯುಕ್ತಿಮೂಲ ಶಬ್ದಗಳಿಗೆ ಹೇಳಬೇಕು. ಏಕೆಂದರೆ, ಭಗವಾನ್ ಬಾದರಾಯಣರು ಸ್ವತಃ ಸರ್ವಜ್ಞರಾಗಿ-ರುವುದರಿಂದ ಶ್ರುತಿ ಮತ್ತು ಯುಕ್ತಿಗಳಿಂದ ಅರ್ಥವನ್ನು ತಿಳಿದು ಈ ಶಾಸ್ತ್ರವನ್ನು ರಚನೆ ಮಾಡಿರುವರು ಎಂಬ ಮುಖ್ಯಾರ್ಥವು ಅಸಂಭಾವಿತವಾಗಿದೆ.

ಹಾಗಾದರೆ 'ಶ್ರುತಿಸಂವಾದಿತ್ವಾತ್' ಯುಕ್ತಿಸಂವಾದಿತ್ವಾತ್' ಎಂದೇ ಹೇಳಬಹುದಿತ್ತು. 'ಶ್ರುತಿಮೂಲತ್ವಾತ್' 'ಯುಕ್ತಿಮೂಲತ್ವಾತ್' ಎಂದೇಕೆ ಹೇಳಿದರು.?

ಉತ್ತರ ಹೀಗಿದೆ – ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಶ್ರುತಿಸಂವಾದ ಹಾಗೂ ಯುಕ್ತಿ-ಸಂವಾದಗಳು ಯದೃಚ್ಛಯಾ ಪ್ರಾಪ್ತವಾಗುತ್ತವೆ ಎಂದೂ ಕೂಡ ಅರ್ಥವಾಗುತ್ತದೆ. ಯದೃಚ್ಛಯಾಸಂವಾದವು ಪ್ರಾಮಾಣ್ಯಕ್ಕೆ ಸಾಧಕವಲ್ಲ. ಆದ್ದರಿಂದ ಯಾದೃಚ್ಛಿಕಸಂವಾದ-ವನ್ನು ತಿಳಿಯಬಾರದೆಂಬ ಉದ್ದೇಶದಿಂದ ಗೌಣೀವೃತ್ತಿಯನ್ನು ಆಶ್ರಯಿಸಿದ್ದಾರೆ. ಮತ್ತು 'ಶ್ರುತಿಮೂಲತಯಾ, ಯುಕ್ತಿಮೂಲತಯಾ' ಎಂಬ ಪ್ರಯೋಗದಿಂದ ಹೆಚ್ಚಿನ ಲಾಭವೂ ಇದೆ – ಅಂಗಾಂಗಿಭಾವವು ಅಧಿಕವಾಗಿ ಜ್ಞಾತವಾಗುತ್ತಿದೆ. ಶ್ರುತಿಗಳು ಮೂಲ ಎನಿಸಿವೆ. ಈ ಶಾಸ್ತ್ರವು ಮೂಲಿ ಎನಿಸಿದೆ. ಹೀಗೆ ಮೂಲಮೂಲಿಭಾವವನ್ನು ತಿಳಿಸುವುದು ಮತ್ತೊಂದು ಪ್ರಯೋಜನ. ಇದರಿಂದ ಶ್ರುತಿಸಂವಾದಿತ್ವ, ಯುಕ್ತಿಸಂವಾದಿತ್ವಗಳೆಂಬ ಹೇತುಗಳು ಬ್ರಹ್ಮಮೀಮಾಂಸಾಶಾಸ್ತ್ರವೆಂಬ ಪಕ್ಷದಲ್ಲಿರುತ್ತವೆಂದು ಪಕ್ಷಧರ್ಮತಾವನ್ನು ಕೂಡ ಉಪ-ಪಾದನೆ ಮಾಡಿದಂತಾಗುತ್ತದೆ.

## ಬ್ರಹ್ಮಸೂತ್ರ ಮತ್ತು ವೇದಗಳಿಗೆ ಅಂಗಾಂಗಿಭಾವಪ್ರದರ್ಶನದ ಸಾರ್ಥಕ್ಯ

ಪರಿಮಳ– ಸಮಾನಾರ್ಥತಾ ಇತಿ ॥ ಮೂಲಮೂಲಿಭಾವಮಾಪನ್ನಯೋಃ ಯಥೈಕಾರ್ಥತ್ವಂ ತಥಾ ಅತ್ರಾಪಿ, ಇತ್ಯೇಕಾರ್ಥತಾಗುಣಸಾಮ್ಯೇನ ಇತ್ಯರ್ಥಃ । 'ಕಿಂ ಗೌಣಪ್ರಯೋಗೇ ಪ್ರಯೋಜನಮ್?' ಇತ್ಯತ ಏಕಂ ಪ್ರಯೋಜನಮುಕ್ತ್ವಾ, ಅನ್ಯದ-ಪ್ಯಾಹ – ಏವಂ ಹಿ ಪ್ರಯೋಗೇ ಇತಿ ॥ 'ಶ್ರುತಿಮೂಲತಯಾ' ಇತಿ ಪ್ರಯೋಗೇ ಹಿ

ತದ್ವಿಚಾರಪರತ್ವಾತ್ 'ಶಾಸ್ತ್ರಮಂಗಂ ಅಂಗಿ ತು ಶ್ರುತಯಃ' ಇತ್ಯೇವಂ ವಿಜ್ಞಾಯತೇ । ಮೂಲಮೂಲಿನೋರಂಗಾಂಗಿತ್ವಸ್ಯ ಕಾವ್ಯಟೀಕಾದೌ ಪ್ರಸಿದ್ಧೇಃ । ನ ಚ ಅಂಗಾಂಗಿಭಾವಜ್ಞಾಪನಂ ವ್ಯರ್ಥಮ್ । 'ಶಾಸ್ತ್ರಂ ಮಾನಂ ಶ್ರುತಿಸಂವಾದಿತ್ವಾತ್' ಇತ್ಯತ್ರ ಅಸಿದ್ಧಿಶಂಕಾನಿರಾಸಾರ್ಥಮ್ । ಮೂಲಮೂಲಿತಯಾ ಅಂಗಾಂಗಿಭಾವಾಪನ್ನಯೋಃ ಏಕಾರ್ಥತ್ವಸ್ಯಾನ್ಯತ್ರ ದರ್ಶನಾದಿತ್ಯೇತತ್ ಪ್ರಯೋಜನಲಾಭಾಯ ಚ ಗೌಣಪ್ರಯೋಗ ಇತಿ ಭಾವಃ।

'ಸಮಾನಾರ್ಥತಾಸಾಮ್ಯೇನ' – ಮೂಲಮೂಲಿಭಾವವನ್ನು ಹೊಂದಿರುವ ಗ್ರಂಥಗಳಲ್ಲಿ ಸಮಾನಾರ್ಥತ್ವವು ಇರುತ್ತದೆ. ಅದರಂತೆ ಇಲ್ಲೂ ಕೂಡ ಏಕಾರ್ಥತ್ವ ಎಂಬ ಗುಣಸಾಮ್ಯವಿದೆ - ಎಂದರ್ಥ.

ಶ್ರುತಿಮೂಲ ಹಾಗೂ ಯುಕ್ತಿಮೂಲ ಎಂಬೆರಡು ಶಬ್ದಗಳಿಗೆ ಗೌಣಾರ್ಥಮಾಡಲು ಏನು ಪ್ರಯೋಜನ? ಎಂಬ ಪ್ರಶ್ನೆಗೆ ಒಂದು ಪ್ರಯೋಜನವನ್ನು ಹೇಳಿ, ಮತ್ತೊಂದು ಪ್ರಯೋಜನವನ್ನೂ ಕೂಡ 'ಏವಂ ಹಿ ಪ್ರಯೋಗೇ' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ.

'ಶ್ರುತಿಮೂಲತಯಾ' ಎಂಬುದಾಗಿ ಶಬ್ದಪ್ರಯೋಗ ಮಾಡಿದರೆ ಈ ಶಾಸ್ತ್ರವು ಶ್ರುತಿವಿಚಾರಪರವಾಗಿರುವುದರಿಂದ ಅಂಗ ಎನಿಸುತ್ತದೆ. ಶ್ರುತಿಗಳು ಅಂಗಿ ಎನಿಸುತ್ತವೆ ಎಂಬುದಾಗಿ ತಿಳಿಯುತ್ತದೆ. ಏಕೆಂದರೆ ಮೂಲಮೂಲಿಭಾವವಿರುವ ಕಾವ್ಯಟೀಕಾದಿಗ್ರಂಥಗಳಲ್ಲಿ ಅಂಗಾಂಗಿಭಾವವಿರುವುದು ಪ್ರಸಿದ್ಧವಾಗಿದೆ.

ಅಂಗಾಂಗಿಭಾವವನ್ನು ತಿಳಿಸುವುದು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. 'ಶಾಸ್ತ್ರಂ ಮಾನಂ ಶ್ರುತಿಸಂವಾದಿತ್ವಾತ್' ಎಂಬ ಅನುಮಾನದಲ್ಲಿ ಶ್ರುತಿಸಂವಾದಿತ್ವ ಎಂಬ ಹೇತುವು ಶಾಸ್ತ್ರದಲ್ಲಿ ಅಸಿದ್ಧವಾಗಿದೆ ಎಂಬ ಆಶಂಕೆಯು ಬರುತ್ತದೆ. ಅದನ್ನು ಈ ಅಂಗಾಂಗಿಭಾವಜ್ಞಾಪನವು ನಿರಾಕರಣೆ ಮಾಡುತ್ತದೆ. ಎಲ್ಲಿ ಮೂಲಮೂಲಿಭಾವ ಇರುತ್ತದೋ ಅಲ್ಲಿ ಅಂಗಾಂಗಿಭಾವವಿರುತ್ತದೆ. ಮತ್ತು ಸಮಾನಾರ್ಥತ್ವವೂ ಇರುತ್ತದೆಂಬುದು ಬೇರೆ ಕಡೆ ಪ್ರಸಿದ್ಧವಾಗಿದೆ. ಈ ಪ್ರಯೋಜನದ ಲಾಭಕ್ಕಾಗಿ ಗೌಣಪ್ರಯೋಗವನ್ನು ಮಾಡಿದ್ದಾರೆಂದು ತಿಳಿಯಬೇಕು.

ವಿವರಣೆ – ಯಾವ ಗ್ರಂಥಗಳಲ್ಲಿ ಶ್ರುತಿಯಿಂದ ಅರ್ಥವನ್ನು ತಿಳಿದು ಅಥವಾ ಯುಕ್ತಿಯಿಂದ ಅರ್ಥವನ್ನು ತಿಳಿದು ರಚನೆ ಮಾಡಿರುವ ಕಾರಣ ಶ್ರುತಿಸಂವಾದಿತ್ವ ಹಾಗೂ ಯುಕ್ತಿಸಂವಾದಿತ್ವಗಳು ಇರುತ್ತವೋ ಅದರಂತೆ ಈ ಬ್ರಹ್ಮಸೂತ್ರದಲ್ಲೂ ಕೂಡ ಶ್ರುತಿಸಮಾನಾರ್ಥಕತ್ವ ಹಾಗೂ ಯುಕ್ತಿ-ಸಮಾನಾರ್ಥಕತ್ವಗಳು ಇರುತ್ತವೆ. ಆದ್ದರಿಂದ ಇತರ ಗ್ರಂಥಗಳಲ್ಲಿ ಇರುವ ಶ್ರುತಿಸಂವಾದಿತ್ವ ಯುಕ್ತಿ-ಸಂವಾದಿತ್ವಗಳು ಬ್ರಹ್ಮಸೂತ್ರದಲ್ಲೂ ಇರುವುದರಿಂದ ಏಕಾರ್ಥತ್ವವೆಂಬ ಗುಣಸಾಮ್ಯವಿದೆ. ಇದನ್ನು ಸಮಾನಾರ್ಥತಾಸಾಮ್ಯೇನ ಎಂಬ ಪದದಿಂದ ಗ್ರಂಥದಲ್ಲಿ ಹೇಳಿದ್ದಾರೆ. ಈ ಸಾಮ್ಯವೇ ಗೌಣಾರ್ಥವನ್ನು ಸ್ವೀಕರಿಸಲು ಕಾರಣವಾಗಿದೆ.

ಬ್ರಹ್ಮಸೂತ್ರಕ್ಕೆ ಯಾದೃಚ್ಛಿಕಸಂವಾದ ಇರುವುದಿಲ್ಲ ಎಂದು ತಿಳಿಸುವುದಕ್ಕಾಗಿ ಶ್ರುತಿಸಂವಾದಿತ್ವ, ಯುಕ್ತಿಸಂವಾದಿತ್ವ ಎಂದು ಹೇಳದೇ ಶ್ರುತಿಮೂಲಕವಾಗಿದೆ, ಯುಕ್ತಿಮೂಲಕವಾಗಿದೆ ಎಂದು ಗೌಣಪ್ರಯೋಗವನ್ನು ಮಾಡಿದ್ದಾರೆ. ಗೌಣಪ್ರಯೋಗವನ್ನು ಆಶ್ರಯಿಸಲು ಇದು ಮೊದಲನೆಯ ಪ್ರಯೋಜನ. ಮತ್ತೊಂದು ಪ್ರಯೋಜನವೂ ಕೂಡ ಇದೆ. 'ಶ್ರುತಿಮೂಲ' ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ ಶ್ರುತಿಗಳು ಅಂಗಿಯಾಗಿವೆ, ಶಾಸ್ತ್ರಗಳು ಅಂಗವಾಗಿವೆ ಎಂದು ತಿಳಿಯುತ್ತದೆ. ಏಕೆಂದರೆ, ಮೂಲಮೂಲಿಭಾವವಿದ್ದಲ್ಲಿ ಅಂಗಾಂಗಿಭಾವ ಇದ್ದೇ ಇರುತ್ತದೆಂಬುದು ಕಾವ್ಯಟೀಕಾದಿ-ಗಳಿಂದ ಲೋಕದಲ್ಲಿ ಪ್ರಸಿದ್ಧವಾಗಿದೆ.

ಮೂಲಶಬ್ದದ ಪ್ರಯೋಗಕ್ಕೆ ಅಂಗಾಂಗಿಭಾವಪ್ರದರ್ಶನವೇ ಪ್ರಯೋಜನವೆಂದು ಹೇಳಿದಿರಿ. ಆದರೆ ಆ ಅಂಗಾಂಗಿಭಾವವನ್ನು ತಿಳಿಸುವುದೂ ಕೂಡ ವ್ಯರ್ಥವಲ್ಲವೇ? ಅಂಗಾಂಗಿಭಾವಪ್ರದರ್ಶನ-ದಿಂದ ಏನನ್ನು ಸಾಧಿಸಿದಂತಾಯಿತು?

'ಶಾಸ್ತ್ರಂ ಮಾನಂ ಶ್ರುತಿಸಂವಾದಿತ್ವಾತ್' ಎಂಬ ಅನುಮಾನದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಈ ಅನುಮಾನದಲ್ಲಿ ಶ್ರುತಿಸಂವಾದಿತ್ವವೆಂಬ ಹೇತುವೇ ಅಸಿದ್ಧವಾಗಿದೆ ಎಂಬ ಹೇತ್ವಸಿದ್ಧಿ ದೋಷವು ಬಂದರೆ ಇದರ ಪರಿಹಾರಕ್ಕಾಗಿ ಅಂಗಾಂಗಿಭಾವವನ್ನು ಹೇಳಬೇಕು. ಈ ಶಾಸ್ತ್ರವು ಶ್ರುತಿಗಳಿಗೆ ಅಂಗವಾಗಿದೆ ಎಂದು ತಿಳಿದಾಗ ಅಂಗಾಂಗಿಭಾವವಿದ್ದ ಮೇಲೆ ಶ್ರುತಿಸಂವಾದವು ಈ ಶಾಸ್ತ್ರಕ್ಕೆ ಇರಲೇಬೇಕೆಂಬುದು ಸಿದ್ಧವಾಗುತ್ತದೆ. ಹೀಗೆ ಯಾದೃಚ್ಛಿಕಸಂವಾದವಿಲ್ಲವೆಂದು ತಿಳಿಸುವುದು ಮೊದಲನೆಯ ಪ್ರಯೋಜನ. ಪಕ್ಷಧರ್ಮತಾಸಮರ್ಥನೆಯು ಎರಡನೆಯ ಪ್ರಯೋಜನ ಎಂದು ತಿಳಿಯಬೇಕು.

## 'ಶ್ರುತಿಮೂಲ' 'ಯುಕ್ತಿಮೂಲ' ಶಬ್ದಗಳಿಗೆ ಮುಖ್ಯಾರ್ಥತ್ವವನ್ನು ತಿಳಿಯಬಾರದು.

ವಾಕ್ಯಾರ್ಥಚಂದ್ರಿಕಾ - ಶ್ರುತಿಯುಕ್ತಿಮೂಲತ್ವಶಬ್ದಯೋರ್ಮುಖ್ಯಾರ್ಥತ್ವಭ್ರಾಂತಿಂ ವಾರಯತಿ – ಯದ್ಯಪೀತಿ ॥ ಸಮಾನಾರ್ಥತಾಸಾಮ್ಯೇನೇತಿ ॥ ಶ್ರುತಿಯುಕ್ತಿಭ್ಯಾಮರ್ಥಮುಪಲಭ್ಯ ರಚಿತವದಸ್ಯಾಪಿ ಶ್ರುತಿಯುಕ್ತಿಸಮಾನಾರ್ಥತ್ವಾದಿತಿ ಭಾವಃ । ಮುಖ್ಯಾರ್ಥಾನುಪಪತ್ತಿಮಭಿಧಾಯ, ಗೌಣಪ್ರಯೋಗೇ ಪ್ರಯೋಜನಂ ವಕ್ತುಂ, ತದಪ್ರಯೋಗೇ ತದಸಿದ್ಧಿಮಾಹ – ಯದಿ ಚೇತಿ ॥ ಮೂಲಸ್ಯಾಂಗಿತ್ವನಿಯಮೇನ ತನ್ಮೂಲಕತ್ವೋಕ್ತ್ಯಾ ತದಂಗತ್ವಸೂಚನೋಪಪತ್ತಿರಿತ್ಯಾಹ – ಏವಂ ಹೀತಿ ॥

ಶ್ರುತಿಮೂಲ ಹಾಗೂ ಯುಕ್ತಿಮೂಲಶಬ್ದಗಳಿಗೆ ಮುಖ್ಯಾರ್ಥತ್ವಭ್ರಾಂತಿಯನ್ನು ಪರಿಹರಿಸುವುದಕ್ಕಾಗಿ 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ.

'ಸಮಾನಾರ್ಥತಾಸಾಮ್ಯೇನ' – ಶ್ರುತಿ ಹಾಗೂ ಯುಕ್ತಿಗಳಿಂದ ಅರ್ಥವನ್ನು ತಿಳಿದು ರಚನೆ-ಮಾಡಿದ ಶಾಸ್ತ್ರದಂತೆ ಈ ಶಾಸ್ತ್ರವೂ ಕೂಡ ಶ್ರುತಿಸಮಾನಾರ್ಥ, ಯುಕ್ತಿಸಮಾನಾರ್ಥವುಳ್ಳದ್ದಾಗಿದೆ ಎಂದಭಿಪ್ರಾಯ. ಮುಖ್ಯಾರ್ಥತ್ವದಲ್ಲಿ ಅನುಪಪತ್ತಿಯನ್ನು ಹೇಳಿ ಗೌಣಪ್ರಯೋಗದಲ್ಲಿ ಪ್ರಯೋಜನ-ವನ್ನು ಹೇಳುವುದಕ್ಕಾಗಿ ಗೌಣಪ್ರಯೋಗವನ್ನು ಮಾಡಿದ್ದರೆ ಪ್ರಯೋಜನವೂ ಕೂಡ ಅಸಿದ್ಧವಾಗು-ತ್ತದೆಂದು 'ಯದಿ ಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಮೂಲವು ಅಂಗಿಯಾಗಿರುತ್ತದೆಂಬ ನಿಯಮವಿದೆ. ಶ್ರುತಿಮೂಲಕತ್ವವನ್ನು ಶಾಸ್ತ್ರಕ್ಕೆ ಹೇಳಿದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರುತಿಗೆ ಅಂಗವಾಗಿದೆ ಎಂದು ಸಮರ್ಥಿಸುವುದಕ್ಕಾಗಿ 'ಏವಂ ಹಿ' ಇತ್ಯಾದಿ ಗ್ರಂಥವು ಹೊರಟಿದೆ.

## ಶ್ರುತಿಮೂಲ, ಯುಕ್ತಿಮೂಲಶಬ್ದಕ್ಕೆ ಮುಖ್ಯಾರ್ಥವನ್ನೇ ಸ್ವೀಕರಿಸಬಹುದು.

ಯಾದುಪತ್ಯ– ಗೌಣಪ್ರಯೋಗ ಇತಿ ॥ ತಥಾ ಚ ಶ್ರುತ್ಯಾದಿನಾ ಅರ್ಥಮುಪಲಭ್ಯ ರಚಿತಂ ಯದ್ವಾಕ್ಯಂ ತತ್ಸಾದೃಶ್ಯೇ ನಿಯಮೇನ ಸಂವಾದಿತ್ವಸ್ಯ ಲಾಭೇನ, ಯಾದೃಚ್ಛಿಕಸಂವಾದಿತಾಶಂಕಯಾ ಯಾ ವ್ಯಭಿಚಾರಶಂಕಾ ತಸ್ಯಾ ನಿರಾಸ ಇತಿ ಭಾವಃ । ಏವಂ ಪ್ರಯೋಗೇ ಕೃತ್ಯಾಂತರಮಪ್ಯಾಹ – ಏವಂ ಹೀತಿ ॥ 'ಶ್ರುತಿರ್ಮೂಲಭೂತಾ ವಿಚಾರ್ಯತಯೋಪಜೀವ್ಯಾ ಯಸ್ಯ' ಇತ್ಯಪಿ

ವ್ಯಾಖ್ಯಾನಸಂಭವೇನ ವಿಚಾರ್ಯವಿಚಾರಕಭಾವಲಾಭಾದ್ ಅಂಗಾಂಗಿಭಾವೋಽಪಿ ಜ್ಞಾಯತ ಇತ್ಯರ್ಥಃ । ಏವಂ 'ಶ್ರುತಿರ್ಮೂಲಭೂತೋಪಜೀವ್ಯಾ ಸ್ವಾರ್ಥನಿರ್ಣಯಾಯ ಉಪಾದೀಯ-ಮಾನಾ ಯತ್ರ' ಇತಿ ವ್ಯಾಖ್ಯಾನೇ ವಿಚಾರಾಂಗಯುಕ್ತಿಗ್ರಥನಾತ್ಮಕತ್ವಲಾಭೇನ ಅಂಗಾಂಗಿಭಾವೋ ಜ್ಞಾಯತ ಇತ್ಯರ್ಥಃ । ಯದ್ವಾ ಯಾದೃಚ್ಛಿಕಸಂವಾದಿತಾ ಇತ್ಯಸ್ಯ ವಿವಕ್ಷಿತತ್ವಸ್ಯ ನಿಯಮೇನ ಶ್ರುತ್ಯಾದಿಸಂವಾದಿತ್ವಸ್ಯ ಪ್ರಾಮಾಣ್ಯಸಾಧಕಹೇತೋರಸಿದ್ಧಿರಾಶಂಕಿತಾ ಇತ್ಯರ್ಥಃ । ನನು ಗೌಣಪ್ರಯೋಗೇ ಕಥಮುಕ್ತಶಂಕಾಪರಿಹಾರ ಇತ್ಯತ ಆಹ – ಏವಂ ಹೀತಿ ॥ ತಥಾ ಚ ಅಂಗಾಂಗಿಭಾವೇ ಸತಿ ನಿಯಮೇನ ಶ್ರುತ್ಯಾದಿಸಂವಾದಿತ್ವಸ್ಯ ಕರ್ಮಮೀಮಾಂಸಾದೌ ದರ್ಶನಾತ್, ಅತ್ರಾಪಿ ತತ್ಸಾದೃಶ್ಯೇನ ತಲ್ಲಾಭ ಇತಿ ಭಾವಃ । ಪಕ್ಷಧರ್ಮತೋಪಪಾದಕ ಇತಿ ॥ 'ವಕ್ಷ್ಯ-ಮಾಣಾನುಮಾನಯೋಃ' ಇತಿ ಶೇಷಃ।

'ಗೌಣಪ್ರಯೋಗಃ' – ಶ್ರುತ್ಯಾದಿಗಳಿಂದ ಅರ್ಥವನ್ನು ತಿಳಿದು ರಚಿಸಲ್ಪಟ್ಟ ಯಾವ ಮನುಸ್ಮೃತಿ ಮೊದಲಾದ ವಾಕ್ಯಗಳಿವೆಯೋ ಅವುಗಳಲ್ಲಿ ನಿಯಮೇನ ಶ್ರುತಿಸಂವಾದಿತ್ವವು ಇದ್ದೇ ಇರುತ್ತದೆ. ತತ್ಸಾದೃಶ್ಯವು ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿದೆ ಎಂಬುದಾಗಿ ತಿಳಿಯಬೇಕು. ಹೀಗೆ ಹೇಳಿದ್ದರಿಂದ ಯಾದೃಚ್ಛಿಕಸಂವಾದಿತ್ವವು ಇರಬಹುದೆಂಬ ಆಶಂಕೆಯಿಂದ ಯಾವ ವ್ಯಭಿಚಾರದೋಷವನ್ನು ಆಕ್ಷೇಪಿಸಲಾಗಿತ್ತೋ, ಅದನ್ನು ನಿರಾಕರಣೆ ಮಾಡಿದಂತಾಯಿತು.

ಹೀಗೆ ಪ್ರಯೋಗ ಮಾಡುವುದರಿಂದ ಮತ್ತೊಂದು ಸಾರ್ಥಕ್ಯವನ್ನು 'ಏವಂ ಹಿ' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ. 'ಶ್ರುತಿಃ ಮೂಲಭೂತಾ = ವಿಚಾರಿತಯಾ ಉಪಜೀವ್ಯಾ ಯಸ್ಯ ತತ್' ಎಂಬುದಾಗಿ ವಿಗ್ರಹ ಮಾಡಿದಾಗ ಶ್ರುತಿಗೂ ಶಾಸ್ತ್ರಕ್ಕೂ ವಿಚಾರ್ಯವಿಚಾರಕಭಾವವು ತಿಳಿಯುತ್ತದೆ. ಇದರಿಂದ ಅಂಗಾಂಗಿಭಾವವೂ ಕೂಡ ಅರ್ಥಾತ್ ಸಿದ್ಧವಾಗುತ್ತದೆ. ಇದರಂತೆ 'ಯುಕ್ತಿಃ ಮೂಲಭೂತಾ ಉಪಜೀವ್ಯಾ ಸ್ವಾರ್ಥನಿರ್ಣಯಾಯ ಉಪಾದೀಯಮಾನಾ ಯತ್ರ' 'ಯುಕ್ತಿಗಳೂ ಕೂಡ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸ್ವಾರ್ಥನಿರ್ಣಯಕ್ಕಾಗಿ ಉಪಜೀವ್ಯಗಳಾಗುತ್ತವೆ' ಎಂಬುದಾಗಿ ವ್ಯಾಖ್ಯಾನ ಮಾಡಿದಾಗ ವಿಚಾರಕ್ಕೆ ಅಂಗವಾದ ಯುಕ್ತಿಗ್ರಥನಾತ್ಮಕವಾಗಿದೆ ಎಂಬರ್ಥವು ತಿಳಿಯುತ್ತದೆ. ಇದರಿಂದಲೂ ಅಂಗಾಂಗಿಭಾವವು ತಿಳಿಯುತ್ತದೆಂದರ್ಥ.

ಅಥವಾ ಟೀಕಾವಾಕ್ಯಕ್ಕೆ ಒಂದೇ ಪ್ರಯೋಜನ ತಿಳಿಯಬಹುದು – 'ಯಾದೃಚ್ಛಿಕಸಂವಾದಿತಾ' ಎಂಬ ಟೀಕಾವಾಕ್ಯಕ್ಕೆ ವಿವಕ್ಷಿತವಾದ ನಿಯಮೇನ ಶ್ರುತ್ಯಾದಿಸಂವಾದಿತ್ವವು ಪ್ರಾಮಾಣ್ಯಸಾಧಕವಾದ

ಹೇತುವಾಗಿದೆ. ಇದಕ್ಕೆ ಅಸಿದ್ಧಿದೋಷವನ್ನು ಆಶಂಕಿಸಿದರೆ ಎಂದರ್ಥ. ಗೌಣಪ್ರಯೋಗವನ್ನು ಮಾಡಿದರೆ ಈ ಆಶಂಕೆಯ ಪರಿಹಾರ ಹೇಗೆ? ಎಂಬ ಪ್ರಶ್ನೆಗೆ 'ಏವಂ ಹಿ' ಎಂಬ ವಾಕ್ಯವು ಉತ್ತರಿಸುತ್ತದೆ. ಅಂಗಾಂಗಿಭಾವವಿದ್ದ ಮೇಲೆ ನಿಯಮೇನ ಶ್ರುತ್ಯಾದಿಸಂವಾದಿತ್ವವು ಕರ್ಮಮೀಮಾಂಸಾದಿಗಳಲ್ಲಿ ಕಂಡಿದೆ. ಇಲ್ಲೂ ಕೂಡ ತತ್ಸಾದೃಶ್ಯವಿರುವುದರಿಂದ ಅಂಗಾಂಗಿಭಾವವು ಸಿದ್ಧವಾಗುತ್ತದೆ ಎಂದಭಿಪ್ರಾಯ. ಮುಂದೆ ಹೇಳುವ ಎರಡು ಅನುಮಾನಗಳಿಗೆ ಪಕ್ಷಧರ್ಮತಾವನ್ನೂ ಕೂಡ ಉಪಪಾದನೆ ಮಾಡಿದಂತಾಗುತ್ತದೆ.

ವಿವರಣೆ – ಆಚಾರ್ಯರು 'ಶ್ರುತಿಸಂವಾದಿತ್ವಾತ್, ಯುಕ್ತಿಸಂವಾದಿತ್ವಾತ್' ಎಂಬುದಾಗಿ ಹೇಳಿದ್ದರೆ ಯಾದೃಚ್ಛಿಕಸಂವಾದಿಯಲ್ಲಿ ವ್ಯಭಿಚಾರಶಂಕೆಯು ಬರುತ್ತದೆ. ನಾವು ಪ್ರಯೋಗಿಸುವ ವಾಕ್ಯಗಳೂ ಕೂಡ ಕೆಲವೊಮ್ಮೆ ಯದೃಚ್ಛಯಾ ಶ್ರುತಿಸಂವಾದಿಗಳಾಗುತ್ತವೆ, ಯುಕ್ತಿಸಂವಾದಿಗಳಾಗುತ್ತವೆ. ಆದರೆ ನಿಯಮೇನ ಪ್ರಾಮಾಣ್ಯವು ಅಂಥಾ ವಾಕ್ಯಗಳಲ್ಲಿ ಇರುವುದಿಲ್ಲ. ಈ ವ್ಯಭಿಚಾರದೋಷವನ್ನು ಪರಿಹಾರಮಾಡು-ವುದಕ್ಕಾಗಿ ಗೌಣಪ್ರಯೋಗವನ್ನು ಮಾಡಿರುತ್ತಾರೆ. ಗೌಣಪ್ರಯೋಗ ಮಾಡಿದ್ದರಿಂದ ಯದೃಚ್ಛಯಾ-ಸಂವಾದಿಯಾಗಿಲ್ಲ. ನಿಯಮೇನ ಸಂವಾದಿಯಾಗಿದೆ ಎಂದು ಹೇಳಿದಂತಾಯಿತು. ಶ್ರುತಿಯಿಂದ ಅರ್ಥವನ್ನು ತಿಳಿದು ರಚಿಸಿರುವ ಗ್ರಂಥಗಳು ಹೇಗೆ ನಿಯಮೇನ ಶ್ರುತಿಸಂವಾದ ಪಡೆದಿದೆಯೋ ಹಾಗೆ ಈ ಶಾಸ್ತ್ರವೂ ಕೂಡ ನಿಯಮೇನ ಶ್ರುತಿಸಂವಾದವನ್ನು ಪಡೆದಿದೆ ಎಂದು ಹೇಳಿದಂತಾಯಿತು. ಮನುಸ್ಮೃತ್ಯಾದಿಗಳು ಮುಖ್ಯಾರ್ಥ ಎನಿಸುತ್ತವೆ. ಅದರಲ್ಲಿ ನಿಯಮೇನ ಶ್ರುತಿಸಂವಾದಿತ್ವವು ಇರುತ್ತದೆ. ತತ್ಸಾದೃಶ್ಯವು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಇದೆ ಎಂದು ಹೇಳಿದಾಗ, ಇದರಲ್ಲೂ ಕೂಡ ನಿಯಮೇನ ಸಂವಾದಿತ್ವವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಯಾದೃಚ್ಛಿಕಸಂವಾದಿತ್ವಶಂಕೆಯು ಈ ಶಾಸ್ತ್ರದಲ್ಲಿ ಉಂಟಾಗುವುದಿಲ್ಲ. ಅದಕ್ಕಾಗಿ ಗೌಣಪ್ರಯೋಗ ಮಾಡಿದ್ದು ಸಾರ್ಥಕವೆಂದು ತಿಳಿಯಬೇಕು.

ಪರಿಮಳದಲ್ಲಿ ಹೇಳಿದ್ದಕ್ಕಿಂತ ವಿಭಿನ್ನವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪರಿಮಳದಲ್ಲಿ ಶ್ರುತಿಮೂಲ ಹಾಗೂ ಯುಕ್ತಿಮೂಲ ಎಂಬ ಶಬ್ದಪ್ರಯೋಗದಿಂದ ಅಂಗಾಂಗಿಭಾವವು ತಿಳಿಯುತ್ತದೆ. ಮೂಲ-ಮೂಲಿಭಾವವಿದ್ದಲ್ಲಿ ಅಂಗಾಂಗಿಭಾವ ಇದ್ದೇ ಇರುವುದು ಲೋಕದಲ್ಲಿ ಸಿದ್ಧವಾಗಿದೆ. ಇದರಿಂದ ಅಸಿದ್ಧಿಶಂಕೆಯು ಪರಿಹಾರವಾಗಿ ಶ್ರುತಿಸಂವಾದಿತ್ವವೆಂಬ ಹೇತುವಿಗೆ ಪಕ್ಷಧರ್ಮತಾವನ್ನು ಸಮರ್ಥಿಸಿ-ದಂತಾಗುತ್ತದೆಂಬ ಪ್ರಯೋಜನವನ್ನು ಗೌಣಪ್ರಯೋಗಕ್ಕೆ ಹೇಳಿದರು. ಆದರೆ ಯಾದುಪತ್ಯದಲ್ಲಿ ಬೇರೆ ರೀತಿಯಾಗಿಯೇ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಶ್ರುತಿಮೂಲ ಹಾಗೂ ಯುಕ್ತಿಮೂಲ' ಶಬ್ದಗಳು ಗೌಣೀವೃತ್ತಿಯನ್ನು ಹೊಂದಿರುವುದಿಲ್ಲ. 'ಶ್ರುತಿಃ ಮೂಲಂ ಯಸ್ಯ ತತ್' ಎಂಬುದಾಗಿ ಶ್ರುತಿಮೂಲ-

ವ್ಯಾಖ್ಯಾನಸಂಭವೇನ ವಿಚಾರ್ಯವಿಚಾರಕಭಾವಲಾಭಾದ್ ಅಂಗಾಂಗಿಭಾವೋಽಪಿ ಜ್ಞಾಯತ ಇತ್ಯರ್ಥಃ । ಏವಂ 'ಶ್ರುತಿರ್ಮೂಲಭೂತೋಪಜೀವ್ಯಾ ಸ್ವಾರ್ಥನಿರ್ಣಯಾಯ ಉಪಾದೀಯ-ಮಾನಾ ಯತ್ರ' ಇತಿ ವ್ಯಾಖ್ಯಾನೇ ವಿಚಾರಾಂಗಯುಕ್ತಿಗ್ರಥನಾತ್ಮಕತ್ವಲಾಭೇನ ಅಂಗಾಂಗಿಭಾವೋ ಜ್ಞಾಯತ ಇತ್ಯರ್ಥಃ । ಯದ್ವಾ ಯಾದೃಚ್ಛಿಕಸಂವಾದಿತಾ ಇತ್ಯಸ್ಯ ವಿವಕ್ಷಿತತ್ವಸ್ಯ ನಿಯಮೇನ ಶ್ರುತ್ಯಾದಿಸಂವಾದಿತ್ವಸ್ಯ ಪ್ರಾಮಾಣ್ಯಸಾಧಕಹೇತೋರಸಿದ್ಧಿರಾಶಂಕಿತಾ ಇತ್ಯರ್ಥಃ । ನನು ಗೌಣಪ್ರಯೋಗೇ ಕಥಮುಕ್ತಶಂಕಾಪರಿಹಾರ ಇತ್ಯತ ಆಹ – ಏವಂ ಹೀತಿ ॥ ತಥಾ ಚ ಅಂಗಾಂಗಿಭಾವೇ ಸತಿ ನಿಯಮೇನ ಶ್ರುತ್ಯಾದಿಸಂವಾದಿತ್ವಸ್ಯ ಕರ್ಮಮೀಮಾಂಸಾದೌ ದರ್ಶನಾತ್, ಅತ್ರಾಪಿ ತತ್ಸಾದೃಶ್ಯೇನ ತಲ್ಲಾಭ ಇತಿ ಭಾವಃ । ಪಕ್ಷಧರ್ಮತೋಪಪಾದಕ ಇತಿ ॥ 'ವಕ್ಷ್ಯ-ಮಾಣಾನುಮಾನಯೋಃ' ಇತಿ ಶೇಷಃ ।

'ಗೌಣಪ್ರಯೋಗಃ' – ಶ್ರುತ್ಯಾದಿಗಳಿಂದ ಅರ್ಥವನ್ನು ತಿಳಿದು ರಚಿಸಲ್ಪಟ್ಟ ಯಾವ ಮನುಸ್ಮೃತಿ ಮೊದಲಾದ ವಾಕ್ಯಗಳಿವೆಯೋ ಅವುಗಳಲ್ಲಿ ನಿಯಮೇನ ಶ್ರುತಿಸಂವಾದಿತ್ವವು ಇದ್ದೇ ಇರುತ್ತದೆ. ತತ್ಸಾದೃಶ್ಯವು ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿದೆ ಎಂಬುದಾಗಿ ತಿಳಿಯಬೇಕು. ಹೀಗೆ ಹೇಳಿದ್ದರಿಂದ ಯಾದೃಚ್ಛಿಕಸಂವಾದಿತ್ವವು ಇರಬಹುದೆಂಬ ಆಶಂಕೆಯಿಂದ ಯಾವ ವ್ಯಭಿಚಾರದೋಷವನ್ನು ಆಕ್ಷೇಪಿಸಲಾಗಿತ್ತೋ , ಅದನ್ನು ನಿರಾಕರಣೆ ಮಾಡಿದಂತಾಯಿತು.

ಹೀಗೆ ಪ್ರಯೋಗ ಮಾಡುವುದರಿಂದ ಮತ್ತೊಂದು ಸಾರ್ಥಕ್ಯವನ್ನು 'ಏವಂ ಹಿ' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ. 'ಶ್ರುತಿಃ ಮೂಲಭೂತಾ = ವಿಚಾರಿತಯಾ ಉಪಜೀವ್ಯಾ ಯಸ್ಯ ತತ್' ಎಂಬುದಾಗಿ ವಿಗ್ರಹ ಮಾಡಿದಾಗ ಶ್ರುತಿಗೂ ಶಾಸ್ತ್ರಕ್ಕೂ ವಿಚಾರ್ಯವಿಚಾರಕಭಾವವು ತಿಳಿಯುತ್ತದೆ. ಇದರಿಂದ ಅಂಗಾಂಗಿಭಾವವೂ ಕೂಡ ಅರ್ಥಾತ್ ಸಿದ್ಧವಾಗುತ್ತದೆ. ಇದರಂತೆ 'ಯುಕ್ತಿಃ ಮೂಲಭೂತಾ ಉಪಜೀವ್ಯಾ ಸ್ವಾರ್ಥನಿರ್ಣಯಾಯ ಉಪಾದೀಯಮಾನಾ ಯತ್ರ' 'ಯುಕ್ತಿಗಳೂ ಕೂಡ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸ್ವಾರ್ಥನಿರ್ಣಯಕ್ಕಾಗಿ ಉಪಜೀವ್ಯಗಳಾಗುತ್ತವೆ' ಎಂಬುದಾಗಿ ವ್ಯಾಖ್ಯಾನ ಮಾಡಿದಾಗ ವಿಚಾರಕ್ಕೆ ಅಂಗವಾದ ಯುಕ್ತಿಗ್ರಥನಾತ್ಮಕವಾಗಿದೆ ಎಂಬರ್ಥವು ತಿಳಿಯುತ್ತದೆ. ಇದರಿಂದಲೂ ಅಂಗಾಂಗಿಭಾವವು ತಿಳಿಯುತ್ತದೆಂದರ್ಥ.

ಅಥವಾ ಟೀಕಾವಾಕ್ಯಕ್ಕೆ ಒಂದೇ ಪ್ರಯೋಜನ ತಿಳಿಯಬಹುದು – 'ಯಾದೃಚ್ಛಿಕಸಂವಾದಿತಾ' ಎಂಬ ಟೀಕಾವಾಕ್ಯಕ್ಕೆ ವಿವಕ್ಷಿತವಾದ ನಿಯಮೇನ ಶ್ರುತ್ಯಾದಿಸಂವಾದಿತ್ವವು ಪ್ರಾಮಾಣ್ಯಸಾಧಕವಾದ

ಹೇತುವಾಗಿದೆ. ಇದಕ್ಕೆ ಅಸಿದ್ಧಿದೋಷವನ್ನು ಆಶಂಕಿಸಿದರೆ ಎಂದರ್ಥ. ಗೌಣಪ್ರಯೋಗವನ್ನು ಮಾಡಿದರೆ ಈ ಆಶಂಕೆಯ ಪರಿಹಾರ ಹೇಗೆ? ಎಂಬ ಪ್ರಶ್ನೆಗೆ 'ಏವಂ ಹಿ' ಎಂಬ ವಾಕ್ಯವು ಉತ್ತರಿಸುತ್ತದೆ. ಅಂಗಾಂಗಿಭಾವವಿದ್ದ ಮೇಲೆ ನಿಯಮೇನ ಶ್ರುತ್ಯಾದಿಸಂವಾದಿತ್ವವು ಕರ್ಮಮೀಮಾಂಸಾದಿಗಳಲ್ಲಿ ಕಂಡಿದೆ. ಇಲ್ಲೂ ಕೂಡ ತತ್ಸಾದೃಶ್ಯವಿರುವುದರಿಂದ ಅಂಗಾಂಗಿಭಾವವು ಸಿದ್ಧವಾಗುತ್ತದೆ ಎಂದಭಿಪ್ರಾಯ. ಮುಂದೆ ಹೇಳುವ ಎರಡು ಅನುಮಾನಗಳಿಗೆ ಪಕ್ಷಧರ್ಮತಾವನ್ನೂ ಕೂಡ ಉಪಪಾದನೆ ಮಾಡಿದಂತಾಗುತ್ತದೆ.

ವಿವರಣೆ – ಆಚಾರ್ಯರು 'ಶ್ರುತಿಸಂವಾದಿತ್ವಾತ್, ಯುಕ್ತಿಸಂವಾದಿತ್ವಾತ್' ಎಂಬುದಾಗಿ ಹೇಳಿದ್ದರೆ ಯಾದೃಚ್ಛಿಕಸಂವಾದಿಯಲ್ಲಿ ವ್ಯಭಿಚಾರಶಂಕೆಯು ಬರುತ್ತದೆ. ನಾವು ಪ್ರಯೋಗಿಸುವ ವಾಕ್ಯಗಳೂ ಕೂಡ ಕೆಲವೊಮ್ಮೆ ಯದೃಚ್ಛಯಾ ಶ್ರುತಿಸಂವಾದಿಗಳಾಗುತ್ತವೆ, ಯುಕ್ತಿಸಂವಾದಿಗಳಾಗುತ್ತವೆ. ಆದರೆ ನಿಯಮೇನ ಪ್ರಾಮಾಣ್ಯವು ಅಂಥಾ ವಾಕ್ಯಗಳಲ್ಲಿ ಇರುವುದಿಲ್ಲ. ಈ ವ್ಯಭಿಚಾರದೋಷವನ್ನು ಪರಿಹಾರಮಾಡು-ವುದಕ್ಕಾಗಿ ಗೌಣಪ್ರಯೋಗವನ್ನು ಮಾಡಿರುತ್ತಾರೆ. ಗೌಣಪ್ರಯೋಗ ಮಾಡಿದ್ದರಿಂದ ಯದೃಚ್ಛಯಾ-ಸಂವಾದಿಯಾಗಿಲ್ಲ. ನಿಯಮೇನ ಸಂವಾದಿಯಾಗಿದೆ ಎಂದು ಹೇಳಿದಂತಾಯಿತು. ಶ್ರುತಿಯಿಂದ ಅರ್ಥವನ್ನು ತಿಳಿದು ರಚಿಸಿರುವ ಗ್ರಂಥಗಳು ಹೇಗೆ ನಿಯಮೇನ ಶ್ರುತಿಸಂವಾದ ಪಡೆದಿದೆಯೋ ಹಾಗೆ ಈ ಶಾಸ್ತ್ರವೂ ಕೂಡ ನಿಯಮೇನ ಶ್ರುತಿಸಂವಾದವನ್ನು ಪಡೆದಿದೆ ಎಂದು ಹೇಳಿದಂತಾಯಿತು. ಮನುಸ್ಮೃತ್ಯಾದಿಗಳು ಮುಖ್ಯಾರ್ಥ ಎನಿಸುತ್ತವೆ. ಆದರಲ್ಲಿ ನಿಯಮೇನ ಶ್ರುತಿಸಂವಾದಿತ್ವವು ಇರುತ್ತದೆ. ತತ್ಸಾದೃಶ್ಯವು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಇದೆ ಎಂದು ಹೇಳಿದಾಗ, ಇದರಲ್ಲೂ ಕೂಡ ನಿಯಮೇನ ಸಂವಾದಿತ್ವವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಯಾದೃಚ್ಛಿಕಸಂವಾದಿತ್ವಶಂಕೆಯು ಈ ಶಾಸ್ತ್ರದಲ್ಲಿ ಉಂಟಾಗುವುದಿಲ್ಲ. ಆದಕ್ಕಾಗಿ ಗೌಣಪ್ರಯೋಗ ಮಾಡಿದ್ದು ಸಾರ್ಥಕವೆಂದು ತಿಳಿಯಬೇಕು.

ಪರಿಮಳದಲ್ಲಿ ಹೇಳಿದ್ದಕ್ಕಿಂತ ವಿಭಿನ್ನವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪರಿಮಳದಲ್ಲಿ ಶ್ರುತಿಮೂಲ ಹಾಗೂ ಯುಕ್ತಿಮೂಲ ಎಂಬ ಶಬ್ದಪ್ರಯೋಗದಿಂದ ಅಂಗಾಂಗಿಭಾವವು ತಿಳಿಯುತ್ತದೆ. ಮೂಲ-ಮೂಲಿಭಾವವಿದ್ದಲ್ಲಿ ಅಂಗಾಂಗಿಭಾವ ಇದ್ದೇ ಇರುವುದು ಲೋಕದಲ್ಲಿ ಸಿದ್ಧವಾಗಿದೆ. ಇದರಿಂದ ಅಸಿದ್ಧಿಶಂಕೆಯು ಪರಿಹಾರವಾಗಿ ಶ್ರುತಿಸಂವಾದಿತ್ವವೆಂಬ ಹೇತುವಿಗೆ ಪಕ್ಷಧರ್ಮತಾವನ್ನು ಸಮರ್ಥಿಸಿ-ದಂತಾಗುತ್ತದೆಂಬ ಪ್ರಯೋಜನವನ್ನು ಗೌಣಪ್ರಯೋಗಕ್ಕೆ ಹೇಳಿದರು. ಆದರೆ ಯಾದುಪತ್ಯದಲ್ಲಿ ಬೇರೆ ರೀತಿಯಾಗಿಯೇ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಶ್ರುತಿಮೂಲ ಹಾಗೂ ಯುಕ್ತಿಮೂಲ' ಶಬ್ದಗಳು ಗೌಣೀವೃತ್ತಿಯನ್ನು ಹೊಂದಿರುವುದಿಲ್ಲ. 'ಶ್ರುತಿಃ ಮೂಲಂ ಯಸ್ಯ ತತ್' ಎಂಬುದಾಗಿ ಶ್ರುತಿಮೂಲ-

ಶಬ್ದಕ್ಕೆ ವಿಗ್ರಹವನ್ನು ತಿಳಿಯಬೇಕು. ಮೂಲ ಎಂಬುದಕ್ಕೆ 'ವಿಚಾರ್ಯತಯಾ ಉಪಜೀವ್ಯವಾಗಿರುವಿಕೆ' ಎಂದರ್ಥ. ಈ ಬ್ರಹ್ಮಮೀಮಾಂಸಾಶಾಸ್ತ್ರವು ವಿಚಾರರೂಪವಾಗಿದೆ. ಶ್ರುತಿಯು ವಿಚಾರ್ಯ ಎಂದೆನಿಸುತ್ತದೆ. ಆದ್ದರಿಂದಲೇ ಉಪಜೀವ್ಯ ಆಗಿದೆ. ಇದರಿಂದ ಶ್ರುತ್ಯರ್ಥವಿಚಾರಪರತ್ವವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಿದ್ಧವಾಯಿತು. ಇದರಿಂದಲೇ ಶ್ರುತಿಗೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ಅಂಗಾಂಗಿಭಾವವು ತಿಳಿಯುತ್ತದೆ. ಇದರಂತೆ ಬ್ರಹ್ಮಸೂತ್ರಗಳಿಗೆ ಯುಕ್ತಿಗಳೂ ಸಹ ಮೂಲವಾಗಿವೆ. ಏಕೆಂದರೆ, ಸ್ವಾರ್ಥನಿರ್ಣಯವನ್ನು ಮಾಡುವುದಕ್ಕಾಗಿ ಬ್ರಹ್ಮಸೂತ್ರಗಳು ಯುಕ್ತಿಯನ್ನು ಆಶ್ರಯಿಸುತ್ತವೆ. ಯುಕ್ತಿಗಳು ಸೂತ್ರಗಳಿಗೆ ಮೂಲವಾಗಿವೆ ಎಂದು ಹೇಳಿದ ಮಾತ್ರಕ್ಕೆ ಸೂತ್ರಗಳಿಗೆ ನೀಚತ್ವವನ್ನು ಹೇಳಿದಂತಾಗುವುದಿಲ್ಲ. ಕೇವಲ ಉಪಜೀವನ ಮಾಡಿದೆ ಎಂಬುದರಲ್ಲಷ್ಟೇ ತಾತ್ಪರ್ಯ. ಇದರಿಂದ ಶ್ರುತಿಸಂವಾದಿತ್ವ ಎಂಬ ಹೇತುವಿಗೆ ಪಕ್ಷಧರ್ಮತ್ವವನ್ನು ಸಾಧಿಸಿದಂತಾಗುತ್ತದೆ.

ಟೀಕೆಯ ವಾಕ್ಯಕ್ಕೆ ಎರಡು ಪ್ರಯೋಜನಗಳೆಂಬುದಾಗಿ ತಿಳಿಯಬೇಕು. ಆಚಾರ್ಯರು ಕೇವಲ ಶ್ರುತಿಸಂವಾದಿತ್ವಾತ್' ಅಥವಾ 'ಯುಕ್ತಿಸಂವಾದಿತ್ವಾತ್' ಎಂದು ಹೇಳಿದ್ದಲ್ಲಿ ಯಾದೃಚ್ಛಿಕಸಂವಾದವಷ್ಟೇ ಪ್ರಾಪ್ತವಾಗುತ್ತಿತ್ತು. ಅದಕ್ಕೋಸ್ಕರ 'ಶ್ರುತಿಮೂಲ' ಹಾಗೂ 'ಯುಕ್ತಿಮೂಲ' ಶಬ್ದಗಳನ್ನು ಪ್ರಯೋಗಿಸಿದರೆಂಬುದು ಮೊದಲನೆಯ ಪ್ರಯೋಜನ. 'ಶ್ರುತಿಮೂಲ' ಹಾಗೂ 'ಯುಕ್ತಿಮೂಲ'-ಶಬ್ದಗಳಿಗೆ ಬಹುವ್ರೀಹಿಸಮಾಸವನ್ನು ಆಶ್ರಯಿಸಿದಾಗ ಅಂಗಾಂಗಿಭಾವವೂ ಕೂಡ ತಿಳಿಯುತ್ತದೆ. ತನ್ಮೂಲಕವಾಗಿ ಪಕ್ಷಧರ್ಮತಾವು ಕೂಡ ಲಾಭವಾಗುತ್ತದೆಂಬುದು ಮತ್ತೊಂದು ಪ್ರಯೋಜನವೆಂದು ಇಲ್ಲಿಯತನಕ ವ್ಯಾಖ್ಯಾನ ಮಾಡಿದರು. 'ಯದ್ವಾ' ಎಂಬ ಮತ್ತೊಂದುಪಕ್ಷದಲ್ಲಿ ಒಂದೇ ಪ್ರಯೋಜನವೆಂದು ಸಮರ್ಥಿಸುತ್ತಿದ್ದಾರೆ. ಒಂದು ವೇಳೆ 'ಶ್ರುತಿಸಂವಾದಿತ್ವಾತ್' 'ಯುಕ್ತಿಸಂವಾದಿತ್ವಾತ್' ಎಂದಷ್ಟೇ ಆಚಾರ್ಯರು ಹೇಳಿದ್ದಲ್ಲಿ ಯಾದೃಚ್ಛಿಕಸಂವಾದಿಯೆಂದು ಭಾಸವಾಗುತ್ತಿತ್ತು. ಆಗ ಅಸಿದ್ಧಿದೋಷವು ಪ್ರಾಪ್ತವಾಗುತ್ತಿತ್ತು. 'ಬ್ರಹ್ಮಸೂತ್ರಂ ಪ್ರಮಾಣಂ ನಿಯಮೇನ ಶ್ರುತಿಸಂವಾದಿತ್ವಾತ್' ಅಥವಾ 'ನಿಯಮೇನ ಯುಕ್ತಿಸಂವಾದಿತ್ವಾತ್' ಎಂಬುದೇ ವಿವಕ್ಷಿತವಾದ ಅನುಮಾನ. ಯಾದೃಚ್ಛಿಕಸಂವಾದಿಯು ಕೂಡ ಆಗಿರಬಹುದಾದ್ದರಿಂದ ನಿಯಮೇನ ಶ್ರುತಿಸಂವಾದಿತ್ವ, ಹಾಗೂ ನಿಯಮೇನ ಯುಕ್ತಿಸಂವಾದಿತ್ವಗಳು ಬರುವುದಿಲ್ಲ. ಯಾದೃಚ್ಛಸಂವಾದಿತ್ವ ಎಂದರೆ ಈ ಪಕ್ಷದಲ್ಲಿ ಅಸಿದ್ಧಿಶಂಕಾ ಎಂದೇ ಅರ್ಥ. ಈ ಅಸಿದ್ಧಿಶಂಕೆಯ ಪರಿಹಾರಕ್ಕೋಸ್ಕರ ಗೌಣಪ್ರಯೋಗವನ್ನು ಮಾಡಿದ್ದಾರೆ. ಇದರಿಂದ ಹೇಗೆ ಪರಿಹಾರವಾಯಿತು? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ. ಆಚಾರ್ಯರು ಶ್ರುತಿಮೂಲತ್ವಾತ್ ಇತ್ಯಾದಿಯಾಗಿ ಗೌಣಪ್ರಯೋಗವನ್ನು ಮಾಡಿದ್ದರಿಂದ ಆ ಶ್ರುತಿಮೂಲಶಬ್ದಕ್ಕೆ ಬಹುವ್ರೀಹಿಸಮಾಸವನ್ನು

ಆಶ್ರಯಿಸಿದ್ದರಿಂದ ಅಂಗಾಂಗಿಭಾವವು ತಿಳಿಯುತ್ತದೆ. ಈ ಅಂಗಾಂಗಿಭಾವದಿಂದ ನಿಯಮೇನ ಸಂವಾದಿತ್ವವು ಲಾಭವಾಯಿತು. ತನ್ಮೂಲಕವಾಗಿ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಏಕೆಂದರೆ, ಕರ್ಮಮೀಮಾಂಸಾದಲ್ಲಿ ನಿಯಮೇನ ಯುಕ್ತಿಸಂವಾದಿತ್ವವು ಇರುತ್ತದೆ. ಮನುಸ್ಮೃತಿಯಲ್ಲಿ ನಿಯಮೇನ ಶ್ರುತಿಸಂವಾದಿತ್ವವು ಇರುತ್ತದೆ. ಆದ್ದರಿಂದ ಅಲ್ಲಿ ಅಂಗಾಂಗಿಭಾವವು ಇದೆ. ಎಲ್ಲಿ ಅಂಗಾಂಗಿಭಾವವಿರುತ್ತದೋ ಅಲ್ಲಿ ನಿಯಮೇನ ಸಂವಾದಿತ್ವವು ಇದ್ದೇ ಇರುತ್ತದೆ. ಬ್ರಹ್ಮಸೂತ್ರದಲ್ಲಿ ನಿಯಮೇನ ಶ್ರುತ್ಯಾದಿ ಸಂವಾದಿತ್ವವು ಸಿದ್ಧವಾಗುತ್ತದೆ.

## ಸುಧಾ ಪರಿಮಳಸಾರ

ವಸ್ತುತಃ ಶ್ರುತಿಮೂಲ ಮತ್ತು ಯುಕ್ತಿಮೂಲಶಬ್ದಗಳಿಗೆ ಶ್ರುತಿಯುಕ್ತಿಗಳಿಂದ ಅರ್ಥವನ್ನು ತಿಳಿದು ರಚಿತವಾದವುಗಳು ಎಂದು ಸಹಜವಾದ ಅರ್ಥ. ಆದರೆ ಇಲ್ಲಿ ಶ್ರುತಿಯುಕ್ತಿಸಂವಾದಿಯಾದ ಅರ್ಥವುಳ್ಳದ್ದು ಎಂಬೀ ಅಮುಖ್ಯಾರ್ಥವನ್ನು ಇಟ್ಟುಕೊಳ್ಳಬೇಕು. ಶ್ರುತಿಯುಕ್ತಿಗಳಿಂದ ಅರ್ಥವನ್ನು ತಿಳಿದು ರಚಿತವಾದದ್ದು ಹೇಗೆ ಶ್ರುತಿ-ಯುಕ್ತಿಸಮಾನಾರ್ಥವಾಗಿರುತ್ತದೋ ಅಂತೆಯೇ ಶ್ರುತಿಯುಕ್ತಿಸಂವಾದಿಯಾದ ಅರ್ಥವುಳ್ಳದ್ದೂ ಕೂಡ ಶ್ರುತಿ-ಯುಕ್ತಿಗಳ ಸಮಾನಾರ್ಥವುಳ್ಳದ್ದೇ ಆಗಿರುತ್ತದೆ. ಆದ್ದರಿಂದ ಈ ಶಬ್ದಗಳಿಗೆ ಇಂತಹ ಅಮುಖ್ಯಾರ್ಥವನ್ನು ಇಟ್ಟು-ಕೊಳ್ಳಲು ಸಾಧ್ಯ. ಷಡ್ಗುಣೈಶ್ವರ್ಯಸಂಪನ್ನರಾದ ಬಾದರಾಯಣರು ಸ್ವತಃ ಸರ್ವಜ್ಞರಾದುದರಿಂದ ಅವರು ಶ್ರುತಿಯುಕ್ತಿಗಳಿಂದ ಅರ್ಥವನ್ನು ತಿಳಿದು ಬ್ರಹ್ಮಸೂತ್ರವನ್ನು ರಚನೆ ಮಾಡಬೇಕಾಗಿಲ್ಲ. ಆದ್ದರಿಂದಲೇ 'ಶ್ರುತಿಮೂಲ, ಯುಕ್ತಿ ಮೂಲ' ಶಬ್ದಗಳಿಗೆ ಹಿಂದೆ ಹೇಳಿದ ಅದರ ಸಹಜವಾದ ಅರ್ಥವನ್ನು ಹೇಳದೆ ಗೌಣವಾದ ಅರ್ಥವನ್ನು ಇಟ್ಟುಕೊಳ್ಳುವುದು ಅನಿವಾರ್ಯ.

ಶ್ರುತಿಯುಕ್ತಿಮೂಲ ಎಂದು ಹೇಳಿ ಶ್ರುತಿಯುಕ್ತಿಸಂವಾದಿ ಎಂಬ ಗೌಣಾರ್ಥವನ್ನು ಹೇಳುವ ಬದಲು ಶ್ರುತಿ-ಯುಕ್ತಿಸಂವಾದಿ ಎಂದೆ ಹೇಳಬಹುದಿತ್ತಲ್ಲ? ಹೇಳಬಹುದಿತ್ತು. ಆದರೆ ಹಾಗೆ ಹೇಳಿದ್ದರೆ ವ್ಯಾಸರು ಉದ್ದೇಶ-ಪೂರ್ವಕವಾಗಿ ಶ್ರುತಿಯುಕ್ತಿಸಂವಾದಿಯಾದ ಅರ್ಥವನ್ನು ಹೇಳಿರುವುದಿಲ್ಲ. ಅವರು ಹೇಳಿರುವುದಕ್ಕೆ ಯಾದೃಚ್ಛಿಕ-ವಾಗಿ ಶ್ರುತಿಯುಕ್ತಿಸಂವಾದ ಇದೆಯಷ್ಟೆ, ಎಂದು ಅರ್ಥವಾಗುತ್ತಿತ್ತು. ಹಾಗೆ ಅರ್ಥವಾಗುವುದು ಬೇಡವೆಂದೇ ಶ್ರುತಿಯುಕ್ತಿಮೂಲ ಎಂದು ಗೌಣಪ್ರಯೋಗವನ್ನು ಆಚಾರ್ಯರು ಮಾಡಿದ್ದು.

ಹೀಗೆ ಗೌಣಪ್ರಯೋಗ ಮಾಡಿದುದರಿಂದ ಮತ್ತೊಂದು ಲಾಭವೂ ಇದೆ. ಶ್ರುತಿಮೂಲವಾಗಿದೆ ಎಂದಾಗ ಶ್ರುತ್ಯರ್ಥವಿಚಾರಪರವಾದ ಈ ಶಾಸ್ತ್ರವು ಅಂಗ, ಶ್ರುತಿಗಳು ಅಂಗಿ ಎಂದು ಶ್ರುತಿ ಮತ್ತು ಶಾಸ್ತ್ರಗಳಿಗೆ ಅಂಗಾಂಗಿಭಾವವು ತಿಳಿದುಬರುತ್ತದೆ. ಕಾವ್ಯಟೀಕಾದಿಗಳಲ್ಲಿ ಮೂಲವಾದ ಕಾವ್ಯವು ಅಂಗಿ, ಮೂಲಿಯಾದ ಟೀಕಾವು

ಅಂಗ ಎಂದು ಪ್ರಸಿದ್ಧಿ ಇದೆಯಷ್ಟೆ. ಈ ಅಂಗಾಂಗಿಭಾವವನ್ನು ತಿಳಿಸುವುದರಿಂದ ಏನು ಪ್ರಯೋಜನ? ಪ್ರಯೋಜನವಿದೆ. "ಶಾಸ್ತ್ರಂ ಮಾನಂ, ಶ್ರುತಿಸಂವಾದಿತ್ವಾತ್" ಶಾಸ್ತ್ರವು ಶ್ರುತಿಸಂವಾದಿಯಾದುದರಿಂದ ಪ್ರಮಾಣ ಎಂದು ಸಾಧಿಸುವಾಗ ಬರಬಹುದಾದ 'ಶಾಸ್ತ್ರವು ಶ್ರುತಿಸಂವಾದಿಯಾಗಿದೆಯೋ ಇಲ್ಲವೋ' ಎಂಬ ಸಂದೇಹವು ಶ್ರುತಿ-ಶಾಸ್ತ್ರಗಳಿಗೆ ಅಂಗಾಂಗಿಭಾವವನ್ನು ತಿಳಿಸುವುದರಿಂದ ಬಗೆಹರಿಯುತ್ತದೆ. ಮೂಲಮೂಲಿಭಾವವುಳ್ಳದ್ದರಿಂದ ಅಂಗಾಂಗಿಭಾವವನ್ನು ಹೊಂದಿರುವಂತಹವುಗಳು ಸಮಾನಾರ್ಥವುಳ್ಳವುಗಳೆಂದು ಬೇರೆಡೆ ಕಾವ್ಯವ್ಯಾಖ್ಯಾನಗಳಲ್ಲಿ ಕಂಡುಬಂದಿರುವುದಷ್ಟೆ. ಹೀಗೆ ಅಂಗಾಂಗಿಭಾವವು ಸಂದೇಹವನ್ನು ಪರಿಹಾರ ಮಾಡುವ ಮೂಲಕ ಪಕ್ಷಧರ್ಮತಾಕ್ಕೆ ಉಪಯುಕ್ತವಾಗಿದೆ.

## ನೆನೆಪಿಡಿ

* ಶ್ರುತಿಮೂಲಶಬ್ದಕ್ಕೆ ಯುಕ್ತಿಮೂಲ ಎಂಬ ಶಬ್ದಕ್ಕೆ ಶ್ರುತಿಸಂವಾದವಿರುವುದರಿಂದ, ಹಾಗೂ ಯುಕ್ತಿಸಂವಾದವಿರುವುದರಿಂದ ಎಂದರ್ಥ.

* ಶ್ರುತಿ, ಸೂತ್ರಗಳಿಗೆ ಅಂಗಾಂಗಿಭಾವವನ್ನು ತಿಳಿಸುವುದಕ್ಕಾಗಿ ಆಚಾರ್ಯರು ಶ್ರುತಿ-ಸಂವಾದಿತ್ವಾತ್ ಎಂದು ಹೇಳದೇ ಶ್ರುತಿಮೂಲತ್ವಾತ್ ಎಂದು ಹೇಳಿದ್ದಾರೆ.

* ಮೂಲಮೂಲಿಭಾವವಿದ್ದಲ್ಲಿ ಅಂಗಾಂಗಿಭಾವ ಇದ್ದೇ ಇರುತ್ತದೆ; ಅಂಗಾಂಗಿ-ಭಾವವಿದ್ದಲ್ಲಿ ಏಕಾರ್ಥತ್ವವಿದ್ದೇ ಇರುತ್ತದೆ; ಶ್ರುತಿಸಂವಾದವಿದ್ದಮೇಲೆ ಪ್ರಾಮಾಣ್ಯವು ಕೂಡ ಸಿದ್ಧವಾಗುತ್ತದೆ ಎಂದು ಒಟ್ಟು ಅಭಿಪ್ರಾಯ.

* ಗೌಣಪ್ರಯೋಗಕ್ಕೆ ಒಟ್ಟು ಎರಡು ಪ್ರಯೋಜನ. (1) ಯಾದೃಚ್ಛಿಕಸಂವಾದವನ್ನು ಪರಿಹರಿಸುವುದು; (2) ಶ್ರುತಿಸಂವಾದಿತ್ವ ಎಂಬ ಹೇತುವಿಗೆ ಪಕ್ಷಧರ್ಮತ್ವವನ್ನು ಉಪಪಾದನೆ ಮಾಡುವುದು.

## ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಶ್ರುತಿಸಂವಾದಿತ್ವ ಯುಕ್ತಿಸಂವಾದಿತ್ವಗಳ ಸಮರ್ಥನೆ

**ಶ್ರೀಮನ್ನ್ಯಾಯಸುಧಾ–** ತತಶ್ಚ ಅಯಮರ್ಥಃ – ಯತ್ ಶ್ರುತಿಸಂವಾದಿ ತತ್ ಪ್ರಮಾಣಮ್ । ಯಥಾ ಮನ್ವಾದಿವಾಕ್ಯಮ್ । ಶ್ರುತಿಸಂವಾದಿ ಚೇದಂ

**ಶಾಸ್ತ್ರಮ್ । ತದರ್ಥವಿಚಾರಪರತ್ವಾತ್ । ವಿಸಂವಾದೇ ತದನುಪಪತ್ತೇಃ । ತಚ್ಚ 'ಪುನಸ್ತಸ್ಯಾರ್ಥವಿತ್ತಯೇ' ಇತ್ಯಾಗಮಸಿದ್ಧಮ್ । ಯಚ್ಚ ಯುಕ್ತಿಸಂವಾದಿ ತತ್ ಪ್ರಮಾಣಮ್ । ಯಥಾ ಧೂಮವಂತಂ ಪರ್ವತಮುದ್ದಿಶ್ಯ 'ಪರ್ವತೋಽಯ-ಮಗ್ನಿಮಾನ್' ಇತ್ಯುಕ್ತಂ ವಾಕ್ಯಮ್ । ಯುಕ್ತಿಸಂವಾದ ಚೇದಮ್ । ಮೀಮಾಂಸಾ-ರೂಪತ್ವಾತ್ । ಮೀಮಾಂಸಾಯಾಶ್ಚ ಯುಕ್ತ್ಯನುಸಂಧಾನಾತ್ಮಕತ್ವಾತ್ । ತಸ್ಮಾತ್ ಪ್ರಮಾಣಮ್ । ಅನ್ಯಥಾ ಶ್ರುತೇರ್ಯುಕ್ತೇಶ್ಚ ಅಪ್ರಾಮಾಣ್ಯಪ್ರಸಂಗಃ । ಅರ್ಥವೈಶಸಾಸಂಭವಾತ್ – ಇತಿ ।**

ಒಟ್ಟು ಅಭಿಪ್ರಾಯ ಇಷ್ಟು – ಯಾವುದು ಶ್ರುತಿಸಂವಾದಿಯಾಗಿದೆಯೋ ಅದು ಪ್ರಮಾಣವಾಗಿದೆ. ಉದಾಹರಣೆ – ಮನ್ವಾದಿವಾಕ್ಯ. ಈ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರುತಿಸಂವಾದಿಯಾಗಿದೆ. ಈ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರುತ್ಯರ್ಥವಿಚಾರಪರವಾಗಿದೆ. ಶ್ರುತಿಸಂವಾದಿಯಾಗದಿದ್ದರೆ ವಿರುದ್ಧವಾಗಿ ವಿಸಂವಾದಿಯಾದರೆ ಶ್ರುತ್ಯರ್ಥವಿಚಾರ ಪರ-ವಾಗುವುದು ಅನುಪಪನ್ನವಾಗುತ್ತದೆ. ಶ್ರುತ್ಯರ್ಥವಿಚಾರಪರತ್ವವು 'ಪುನಃ ತಸ್ಯಾರ್ಥ-ವಿತ್ತಯೇ' ಎಂಬ ಆಗಮಸಿದ್ಧವಾಗಿದೆ.

ಯಾವುದು ಯುಕ್ತಿಸಂವಾದವುಳ್ಳದ್ದಾಗಿದೆಯೋ ಅದು ಪ್ರಮಾಣವಾಗಿದೆ. ಉದಾ-ಹರಣೆ – ಧೂಮವುಳ್ಳ ಪರ್ವತವನ್ನು ಉದ್ದೇಶಿಸಿ 'ಹೊಗೆ ಇರುವುದರಿಂದ ಪರ್ವತವು ಅಗ್ನಿವುಳ್ಳದ್ದಾಗಿದೆ' ಎಂಬ ವಾಕ್ಯ. ಈ ಶಾಸ್ತ್ರವೂ ಕೂಡ ಯುಕ್ತಿಯ ಸಂವಾದಿಯುಳ್ಳ-ದ್ದಾಗಿದೆ. ಏಕೆಂದರೆ ಇದು ಮೀಮಾಂಸಾರೂಪವಾಗಿದೆ. ಮೀಮಾಂಸೆಯು ಯುಕ್ತ್ಯನು-ಸಂಧಾನಾತ್ಮಕವಾಗಿದೆ. ಆದ್ದರಿಂದ ಪ್ರಮಾಣವೆಂದು ತಿಳಿಯಬೇಕು. ಹೀಗೊಪ್ಪದಿದ್ದರೆ ಶ್ರುತಿ ಹಾಗೂ ಯುಕ್ತಿಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಎರಡೂ ಕೂಡ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುತ್ತಿರುವಾಗ ಒಂದನ್ನು ಪ್ರಮಾಣವೆಂದು ಒಪ್ಪಿ, ಮತ್ತೊಂದನ್ನು ಅಪ್ರಮಾಣವೆಂದು ಅರ್ಥವೈಶಸ ಮಾಡುವುದು ಅಯುಕ್ತವಾಗಿದೆ.

ವಿವರಣೆ – ಶ್ರುತಿಯು ಅಂಗಿಯಾಗಿದೆ; ಬ್ರಹ್ಮಸೂತ್ರವು ಅಂಗವಾಗಿದೆ. ಇದರ ಅರ್ಥ ಏನೆಂದರೆ – ಬ್ರಹ್ಮಸೂತ್ರವು ಶ್ರುತ್ಯರ್ಥವಿಚಾರಪರವಾಗಿದೆ ಎಂದರ್ಥ. ಯಾವುದು ತದರ್ಥವಿಚಾರಪರವೋ ಅದು ಅದರ ಅಂಗವಾಗಿರುತ್ತದೆಂಬುದು ನಿಯಮಸಿದ್ಧವಾಗಿದೆ. ಸೂತ್ರವು ಶ್ರುತಿಯಿಂದ ವಿಸಂವಾದಿಯಾದರೆ ತದರ್ಥವಿಚಾರಪರವಾಗಲು ಸಾಧ್ಯವೇ ಇಲ್ಲ. ಇಲ್ಲಿ ಅನುಮಾನಸ್ವರೂಪವನ್ನು ಹೀಗೆ ತಿಳಿಯಬೇಕು. 'ಬ್ರಹ್ಮಸೂತ್ರಂ ಶ್ರುತಿಸಂವಾದಿ ಶ್ರುತ್ಯರ್ಥವಿಚಾರಪರತ್ವಾತ್, ಮನ್ವಾದಿವಾಕ್ಯವತ್' ಎಂದು. ಈ ಅನುಮಾನದಿಂದ ಬ್ರಹ್ಮಸೂತ್ರಗಳಿಗೆ ಶ್ರುತಿಸಂವಾದಿತ್ವವು ಸಿದ್ಧವಾಗುತ್ತದೆ. ಇದರಿಂದ 'ಶಾಸ್ತ್ರಂ ಪ್ರಮಾಣಂ ಶ್ರುತಿಸಂವಾದಿತ್ವಾತ್' ಎಂಬ ಅನುಮಾನದಲ್ಲಿ ಪಕ್ಷಧರ್ಮತ್ವವನ್ನು ಸಮರ್ಥನೆ ಮಾಡಿ, ಅಸಿದ್ಧಿಯನ್ನು ಪರಿಹರಿಸಿದಂತಾಗುತ್ತದೆ.

ಬ್ರಹ್ಮಸೂತ್ರವು ಶ್ರುತ್ಯರ್ಥವಿಚಾರಪರವಾಗಿದೆ ಎಂಬುದು ಹೇಗೆ ಸಿದ್ಧವಾಗಿದೆ? ಎಂಬುದಾಗಿ ಪುನಃ ಹೇತ್ವಸಿದ್ಧಿಯನ್ನು ಆಶಂಕಿಸಿದರೆ 'ಪುನಸ್ತಸ್ಯಾರ್ಥವಿತ್ತಯೇ' ಎಂಬ ಆಗಮದಿಂದ ತದರ್ಥವಿಚಾರ-ಪರತ್ವವು ಬ್ರಹ್ಮಸೂತ್ರಗಳಿಗೆ ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಸಂವಾದಿಸಾಧಕವಾದ ಅನುಮಾನದಲ್ಲಿ ಹೇತ್ವಸಿದ್ಧಿಯನ್ನು ಆಶಂಕಿಸಬಾರದು. ಆಚಾರ್ಯರು 'ಶ್ರುತಿಮೂಲ' ಎಂಬ ಶಬ್ದವನ್ನು ಪ್ರಯೋಗ-ಮಾಡುವ ಮೂಲಕ ಸೂತ್ರಗಳು ಅಂಗ ಎನಿಸುತ್ತವೆ. ಶ್ರುತಿಗಳು ಅಂಗಿ ಎನಿಸುತ್ತವೆಂದು ತಿಳಿಸಿದ್ದಾರೆ. ಅಂಗತ್ವವೆಂದರೆ ತದರ್ಥವಿಚಾರಪರತ್ವ ಎಂದರ್ಥ. ಈ ತದರ್ಥವಿಚಾರಪರತ್ವದಿಂದ ಶ್ರುತಿ-ಸಂವಾದಿಯಾಗಿರಲೇ ಬೇಕೆಂದು ಸಿದ್ಧವಾಗುತ್ತದೆ. ಹೀಗೆ ಪಕ್ಷಧರ್ಮತ್ವವು ಶ್ರುತಿಸಂವಾದಿತ್ವಹೇತುವಿಗೆ ಸಿದ್ಧವಾಗುವುದರಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆಂದು ತಿಳಿಯಬೇಕು.

ಧೂಮವುಳ್ಳ ಪರ್ವತವನ್ನು ನೋಡಿ ಆಪ್ತನು 'ಪರ್ವತೋಽಯಂ ಅಗ್ನಿಮಾನ್' ಎಂಬ ವಾಕ್ಯವನ್ನು ಪ್ರಯೋಗಿಸುತ್ತಾನೆ. ಇದಕ್ಕೆ ಯುಕ್ತಿಸಂವಾದವಿದೆ. ಈ ವಾಕ್ಯದಂತೆ ಬ್ರಹ್ಮಸೂತ್ರಗಳಿಗೂ ಕೂಡ ಯುಕ್ತಿ-ಸಂವಾದವು ಇರುತ್ತದೆ. ಇಲ್ಲೂ ಕೂಡ ಅಂಗಾಂಗಿಭಾವವನ್ನು ತಿಳಿಯಬೇಕು. ಆದರೆ ವಿಪರೀತವಾಗಿ ತಿಳಿಯಬೇಕು. ಬ್ರಹ್ಮಸೂತ್ರವು ಅಂಗಿಯಾಗುತ್ತದೆ. ಯುಕ್ತಿಗಳು ಅಂಗವಾಗುತ್ತವೆ. ಯುಕ್ತಿಗಳ ಅನು-ಸಂಧಾನವನ್ನು ಬ್ರಹ್ಮಸೂತ್ರಗಳು ಮಾಡುತ್ತಿವೆ. ಯುಕ್ತ್ಯನುಸಂಧಾನವನ್ನು ಮಾಡುವುದರಿಂದ ಯುಕ್ತಿ-ಸಂವಾದವು ಇದ್ದೇ ಇರುತ್ತದೆ. ಇಲ್ಲಿ ಅನುಮಾನಸ್ವರೂಪವನ್ನು ಹೀಗೆ ತಿಳಿಯಬೇಕು – 'ಬ್ರಹ್ಮಸೂತ್ರಂ ಯುಕ್ತಿಸಂವಾದಿ ಯುಕ್ತ್ಯನುಸಂಧಾನಮೀಮಾಂಸಕತ್ವಾತ್, ಪರ್ವತೋಽಯಮಗ್ನಿಮಾನ್ ಇತಿ ಆಪ್ತ-ವಾಕ್ಯವತ್' ಎಂದು.

'ಬ್ರಹ್ಮಸೂತ್ರಂ ಪ್ರಮಾಣಂ ಶ್ರುತಿಸಂವಾದಿತ್ವಾತ್, ಯುಕ್ತಿಸಂವಾದಿತ್ವಾತ್' ಎಂಬ ಅನುಮಾನದಲ್ಲಿ 'ಶ್ರುತಿಸಂವಾದಿತ್ವಂ ಯುಕ್ತಿಸಂವಾದಿತ್ವಂ ಚ ಅಸ್ತು, ಪ್ರಾಮಾಣ್ಯಂ ಮಾಸ್ತು' ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಬಾರದು. ಏಕೆಂದರೆ, ಶ್ರುತಿ ಹಾಗೂ ಯುಕ್ತಿಗಳಿಗೆ ಪ್ರಾಮಾಣ್ಯವೇ ಇಲ್ಲದಂತಾಗಬೇಕಾಗುತ್ತದೆ. ಏಕೆಂದರೆ, ಸಂವಾದ ಎಂದರೆ ಸಮಾನಾರ್ಥವುಳ್ಳದ್ದು ಎಂದರ್ಥ. ಶ್ರುತಿಗಳಿಗೆ ಸಮಾನವಾದ ಅರ್ಥವನ್ನೇ ಸೂತ್ರಗಳು ಕೂಡ ಹೇಳುತ್ತಿವೆ. ಸೂತ್ರಗಳು ಅಪ್ರಮಾಣವಾದರೆ ಶ್ರುತಿಗಳು ಕೂಡ ಅಪ್ರಮಾಣವೇ ಆಗುತ್ತವೆ. ಒಂದನ್ನು ಪ್ರಮಾಣವೆಂದು ಹೇಳಿ ಮತ್ತೊಂದನ್ನು ಅಪ್ರಮಾಣವೆಂದು ಅರ್ಧವಿಶಸನ ಮಾಡಲು ಸಾಧ್ಯವಿಲ್ಲ.

## ಮೀಮಾಂಸಕರ ಮತದಂತೆ ಮೂರು ಅವಯವಗಳನ್ನಷ್ಟೇ ಪ್ರಯೋಗಿಸಿದ್ದಾರೆ.

ಪರಿಮಳ– ಯದ್ವಾ ಉದಾಹರಣಾದಿಕಾನಿ ಇತ್ಯುಕ್ತತ್ವಾದಸ್ಯ ಮೀಮಾಂಸಾಶಾಸ್ತ್ರತ್ವಾತ್ ಉದಾಹರಣಾವಯವಪೂರ್ವಂ ಪ್ರಯೋಗಮಾಹ – ಯತ್ ಶ್ರುತೀತಿ ॥ ಉಪನಯಮಾಹ – ಶ್ರುತೀತಿ ॥ ತತ್ರ ಹೇತುಃ – ತದರ್ಥೇತಿ ॥ ತಚ್ಚೇತಿ ॥ ಶ್ರುತಿವಿಚಾರಣಪರತ್ವಮ್ ।

'............... ಪುನಸ್ತಸ್ಯಾರ್ಥವಿತ್ತಯೇ ।
ಚಕಾರ ಬ್ರಹ್ಮಸೂತ್ರಾಣಿ ............ ॥'

ಇತಿ ಭಾಷ್ಯೋಕ್ತಸ್ಮೃತಿಸಿದ್ಧಮಿತ್ಯರ್ಥಃ । ತಸ್ಯ = 'ವೇದರಾಶೇಃ' ಇತ್ಯರ್ಥಃ । ಉಭಯತ್ರ ನಿಗಮನಮಾಹ – ತಸ್ಮಾದಿತಿ ॥ 'ಶ್ರುತಿಯುಕ್ತಿಸಂವಾದಿತ್ವಾತ್' ಇತ್ಯರ್ಥಃ । ಅಪ್ರಯೋಜಕತ್ವನಿರಾಸಾಯ ವಿಪಕ್ಷೇ ಬಾಧಕಮಾಹ – ಅನ್ಯಥೇತಿ ॥ ಶಾಸ್ತ್ರಾಪ್ರಾಮಾಣ್ಯೇ ಶ್ರುತ್ಯಾದೇಃ ಕುತೋಽಪ್ರಾಮಾಣ್ಯಪ್ರಸಂಗ ಇತ್ಯತ ಆಹ – ಅರ್ಧೇತಿ ॥ ವೈಶಸಃ = ಹಿಂಸಾ । ಅಂಗಾಂಗಿನೋಃ ಏಕಶರೀರಾಪನ್ನತ್ವಾತ್ ಇತಿ ಭಾವಃ । ವಿಪೂರ್ವಾತ್ 'ಶಸು ಹಿಂಸಾಯಾಮ್' ಇತ್ಯತಃ ಪಚಾದ್ಯಜಂತಾತ್ ತಸ್ಯೇದಮ್ ಇತ್ಯಣಿ ವೈಶಸೇತಿ ರೂಪನಿಷ್ಪತ್ತೇಃ ।

ಅಥವಾ 'ಉದಾಹರಣಾದಿಕಾನಿ' ಎಂದು ಹೇಳಿರುವುದರಿಂದ ಇದು ಮೀಮಾಂಸಾ-ಶಾಸ್ತ್ರವಾದ ಕಾರಣ ಉದಾಹರಣೆ ಎಂಬ ಅವಯವವೇ ಮೊದಲಾಗಿ ಉಳ್ಳ ಅನುಮಾನ ಪ್ರಯೋಗವನ್ನು 'ಯತ್ ಶ್ರುತಿಸಂವಾದಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಉಪನಯವನ್ನು 'ಶ್ರುತಿಸಂವಾದಿ ಚೇದಂ ಶಾಸ್ತ್ರಮ್' ಎಂಬ ವಾಕ್ಯದಿಂದ ಹೇಳಿದ್ದಾರೆ. 'ತಚ್ಚ' ಎಂಬುದಕ್ಕೆ ಶ್ರುತಿವಿಚಾರಪರತ್ವವು ಎಂದರ್ಥ. 'ಪುನಸ್ತಸ್ಯಾರ್ಥವಿತ್ತಯೇ । ಚಕಾರ ಬ್ರಹ್ಮಸೂತ್ರಾಣಿ' ಎಂದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯದಿಂದ ಸಿದ್ಧವಾಗಿದೆ ಎಂದರ್ಥ. ಇಲ್ಲಿರುವ ತಸ್ಯ ಎಂಬ ಪದಕ್ಕೆ ವೇದರಾಶಿಯ ಎಂದರ್ಥ. ಎರಡೂ ಬಗೆಯ ಅನುಮಾನಗಳಲ್ಲಿ ನಿಗಮನವನ್ನು "ತಸ್ಮಾತ್" ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಶ್ರುತಿಸಂವಾದಿಯಾಗಿರುವುದರಿಂದ ಮತ್ತು ಯುಕ್ತಿಸಂವಾದಿಯಾಗಿರುವುದರಿಂದ ಎಂದರ್ಥ. ಅಪ್ರಯೋಜಕತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ವಿಪಕ್ಷದಲ್ಲಿ ಬಾಧಕತರ್ಕವನ್ನು 'ಅನ್ಯಥಾ' ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ. ಶಾಸ್ತ್ರವು ಅಪ್ರಮಾಣವಾಗುವುದಾದರೆ ಶ್ರುತ್ಯಾದಿಗಳು ಕೂಡ ಏಕೆ ಪ್ರಮಾಣಗಳಾಗಬೇಕು? ಎಂಬ ಪ್ರಶ್ನೆಗೆ 'ಅರ್ಧವೈಶಸಾಸಂಭವಾತ್' ಎಂದು ಉತ್ತರಿಸಿದ್ದಾರೆ. ವೈಶಸಃ ಎಂದರೆ ಹಿಂಸೆ ಎಂದರ್ಥ. ಅಂಗಾಂಗಿಗಳು ಒಂದೇ ಶರೀರವಾಗಿರುವುದರಿಂದ ಶಾಸ್ತ್ರವು ಅಪ್ರಮಾಣವಾಗು-ವುದಾದರೆ ಅಂಗಿಯೆನಿಸಿದ ವೇದವೂ ಕೂಡ ಅಪ್ರಮಾಣವಾಗುತ್ತದೆ ಎಂದಭಿಪ್ರಾಯ. ವಿ ಎಂಬ ಉಪಸರ್ಗದ ಮುಂದೆ ಶಸ್ ಎಂಬ ಧಾತುವು ಹಿಂಸೆ ಎಂಬರ್ಥದಲ್ಲಿಪ್ರಾಪ್ತವಾಗಿದೆ. ಈ ಧಾತುವಿಗೆ ಪಚಾದ್ಯಚ್ ಎಂಬ ಸೂತ್ರದಿಂದ ಅಕಾರವು ಕೊನೆಯಲ್ಲಿ ಬಂದಿದೆ. ತಸ್ಯೇದಂ ಎಂಬ ನಿಯಮದಂತೆ ಅಣುಪ್ರತ್ಯಯವು ಬಂದು ವೈಶಸ ಎಂಬ ರೂಪವು ನಿಷ್ಪನ್ನವಾಗಿದೆ.

ವಿವರಣೆ – ಮೀಮಾಂಸಕರು ಪ್ರತಿಜ್ಞಾ, ಹೇತು, ಉದಾಹರಣೆ ಎಂಬ ಮೂರು ಅವಯವಗಳು ಮಾತ್ರ ಅನುಮಾನದ ಅಂಗವೆನ್ನುತ್ತಾರೆ. ಅಥವಾ ಉದಾಹರಣ, ಉಪನಯ, ನಿಗಮನಗಳೆಂಬ ಮೂರು ಅವಯವಗಳು ಅನುಮಾನದ ಅಂಗವೆನ್ನುತ್ತಾರೆ. ಇದು ಮೀಮಾಂಸಾಶಾಸ್ತ್ರವಾಗಿರುವುದರಿಂದ ಅವರ ಮತವನ್ನು ಅನುಸರಿಸಿ ಗ್ರಂಥದಲ್ಲಿ ಉದಾಹರಣೆ, ಉಪನಯ, ನಿಗಮನ ಎಂಬ ಮೂರು ಅವಯವಗಳನ್ನಷ್ಟೇ ಪ್ರಯೋಗಿಸಿದ್ದಾರೆ. ಇದು ನಮ್ಮ ಸಿದ್ಧಾಂತವಲ್ಲ. ನಮ್ಮಲ್ಲಿ ಅನುಮಾನಕ್ಕೆ ಇಷ್ಟೇ ಅವಯವಗಳಿರಬೇಕೆಂಬ ನಿಯಮವಿಲ್ಲ. ಕೇವಲ ಮೀಮಾಂಸಕರ ಮತವನ್ನು ಅನುಸರಿಸಿ ಮೂರು ಅವಯವಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದ್ದಾರೆ. 'ಯಥಾ ಮನ್ವಾದಿವಾಕ್ಯಮ್' ಎಂಬುದು ಉದಾಹರಣ ವಾಕ್ಯ. 'ಶ್ರುತಿಸಂವಾದಿ ಚೇದಂ ವಾಕ್ಯಮ್' ಎಂಬುದು ಉಪನಯವಾಕ್ಯ. 'ತಸ್ಮಾತ್

ಪ್ರಮಾಣಮ್'' ಎಂಬುದು ನಿಗಮನ ವಾಕ್ಯ. ಇದರಂತೆ 'ಯಥಾ ಧೂಮವಂತಂ ಪರ್ವತಮುದ್ದಿಶ್ಯ ಪರ್ವತೋಽಯಮಗ್ನಿಮಾನ್'' ಎಂಬುದು ಉದಾಹರಣವಾಕ್ಯ. 'ಯುಕ್ತಿಸಂವಾದೀ ಚ ಇದಂ' ಎಂಬುದು ಉಪನಯವಾಕ್ಯ. 'ತಸ್ಮಾತ್ ಪ್ರಮಾಣಮ್'' ಎಂಬುದು ನಿಗಮನವಾಕ್ಯ ಎಂಬುದಾಗಿ ತಿಳಿಯಬೇಕು.

ಅಂಗ ಮತ್ತು ಅಂಗಿಗಳು ಹೇಗೆ ಒಂದೇ ಶರೀರವೋ ಅದರಂತೆ ಶ್ರುತಿಸೂತ್ರಗಳು ಒಂದೇ ಶರೀರ ಎನಿಸಿವೆ. ಹೀಗಿರುವಾಗ ಸೂತ್ರವು ಅಪ್ರಮಾಣವಾಗಲಿ; ಶ್ರುತಿಯು ಅಪ್ರಮಾಣವಾಗುವುದು ಬೇಡ ಎಂದು ಹೇಳಿದರೆ ಅರ್ಧಕ್ಕೆ ಪ್ರಾಮಾಣ್ಯವನ್ನು ಒಪ್ಪಿ, ಇನ್ನರ್ಧಕ್ಕೆ ಅಪ್ರಾಮಾಣ್ಯವನ್ನು ಒಪ್ಪಿದಂತಾಗುತ್ತದೆ. ಇದು ಅರ್ಧ ಹಿಂಸೆ ಮಾಡಿದಂತೆ ಆಗುತ್ತದೆ. ಇದು ಸರ್ವಥಾ ಕೂಡುವುದಿಲ್ಲ. ನಾಕುಮಂದಿ ತಪ್ಪು ಮಾಡಿರುತ್ತಾರೆ. ಅವರಲ್ಲಿ ಇಬ್ಬರಿಗೆ ಮಾತ್ರ ಶಿಕ್ಷೆಯನ್ನು ನೀಡಿ, ಇನ್ನಿಬ್ಬರಿಗೆ ಶಿಕ್ಷೆಯನ್ನು ನೀಡದಿರುವುದು ಹೇಗೆ ಅಯುಕ್ತವೋ ಅದರಂತೆ ತಿಳಿಯಬೇಕು.

ವಾಕ್ಯಾರ್ಥಚಂದ್ರಿಕಾ – ವ್ಯಾಪ್ತಿಪಕ್ಷಧರ್ಮತಯೋರುಭಯೋರಪಿ ಅನುಮಾನಾಂಗತ್ವಾತ್ ಭಾಷ್ಯಕಾರೀಯಂ ಪಕ್ಷಧರ್ಮತಾಸೂಚನಂ ವ್ಯಾಪ್ತೇರಪ್ಯುಪಲಕ್ಷಣಮ್ ಇತ್ಯಭಿಪ್ರೇತ್ಯ, ವ್ಯಾಪ್ತಿ-ಪ್ರದರ್ಶನಪೂರ್ವಕಂ ಕೀದೃಶೋಽಂಗಾಂಗಿಭಾವಃ, ಕುತಶ್ಚ ಸಃ, ಕಥಂ ಚ ಪಕ್ಷಧರ್ಮತೋಪ-ಪಾದಕಃ? ಇತ್ಯಾಶಂಕಾಂ ಪರಿಹರತಿ – ತತಶ್ಚೇತಿ ॥ ಅರ್ಧೇತಿ ॥ ಸಮಾನಾರ್ಥತ್ವಾವಿಶೇಷೇಽಪಿ ಏಕಪ್ರಾಮಾಣ್ಯಸ್ಯಾಪರಪ್ರಾಮಾಣ್ಯಸ್ಯ ಚಾರ್ಧವೈಶಸವದಸಂಭವಾವಿತತ್ವಾತ್ ಇತ್ಯರ್ಥಃ।

ವ್ಯಾಪ್ತಿ ಮತ್ತು ಪಕ್ಷಧರ್ಮತಾ ಇವೆರಡೂ ಕೂಡ ಅನುಮಾನಕ್ಕೆ ಅಂಗಗಳಾಗಿವೆ. ಭಾಷ್ಯಕಾರರು ಪಕ್ಷಧರ್ಮತಾವನ್ನಷ್ಟೇ ಸೂಚನೆ ಮಾಡಿದ್ದಾರೆ. ವ್ಯಾಪ್ತಿಯನ್ನು ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ ವ್ಯಾಪ್ತಿಪ್ರದರ್ಶನವನ್ನು ಮಾಡುತ್ತಿದ್ದಾರೆ. ಮತ್ತು ಅಂಗಾಂಗಿಭಾವದ ಸ್ವರೂಪವನ್ನು ತೋರಿಸುತ್ತಾ ಯಾವ ಕಾರಣಕ್ಕಾಗಿ ಇದನ್ನು ಒಪ್ಪಬೇಕು ಮತ್ತು ಹೇಗೆ ಪಕ್ಷಧರ್ಮತ್ವಕ್ಕೆ ಉಪಪಾದಕವಾಗುತ್ತದೆ ಎಂಬ ಆಶಂಕೆಗೂ ಉತ್ತರಿಸಲು ''ತತಶ್ಚ'' ಇತ್ಯಾದಿ ಗ್ರಂಥವು ಹೊರಟಿದೆ.

'ಅರ್ಧವೈಶಸಾಸಂಭವಾತ್' – ಎರಡರ ಅರ್ಥವು ಸಮಾನವಾಗಿರುವಾಗ ಒಂದಕ್ಕೆ ಪ್ರಾಮಾಣ್ಯ -ವನ್ನು ಒಪ್ಪಿ ಮತ್ತೊಂದಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ತಪ್ಪಾಗುತ್ತದೆ. ಹೀಗೆ ಅರ್ಧವೈಶಸ ಮಾಡುವುದು ಅಸಂಭಾವಿತವಾಗಿದೆ ಎಂದರ್ಥ.

## ಅರ್ಥವೈಶಸಾಸಂಭವಾತ್ ಎಂಬುದು ಮತ್ತೊಂದು ಪಾಠ

ಯಾದುಪತ್ಯ- ಅರ್ಥವೈಶಸಾಸಂಭವಾದಿತಿ ॥ 'ಅರ್ಥಹಿಂಸಾನ್ಯಾಯಾಸಂಭವಾತ್' ಇತ್ಯರ್ಥಃ। 'ಅರ್ಥವೈಶಸಾಸಂಭವಾತ್' ಇತಿ ಪಾಠೇ 'ಅರ್ಥವೈಶಸಾऽಸಂಭವಾದ್ ವಿರೋಧಾ-ऽಸಂಭವಾತ್, ವಸ್ತುನೋ ದ್ವೈರೂಪ್ಯಾಸಂಭವಾದಿತಿ ಯಾವತ್' ಇತಿ ವ್ಯಾಖ್ಯಾನಂ ದ್ರಷ್ಟವ್ಯಮ್।

'ಅರ್ಥವೈಶಸಾಸಂಭವಾತ್' – ಅರ್ಥಹಿಂಸಾನ್ಯಾಯವು ಅಸಂಭಾವಿತವಾಗಿದೆ ಎಂದರ್ಥ.

'ಅರ್ಥವೈಶಸಾಸಂಭವಾತ್' ಎಂಬುದು ಮತ್ತೊಂದು ಪಾಠ. ಇದಕ್ಕೆ ಒಂದೇ ವಸ್ತುವಿನಲ್ಲಿ ವಿರೋಧವು ಕೂಡುವುದಿಲ್ಲ ಎಂದರ್ಥ. ಒಂದು ವಸ್ತುವಿಗೆ ದ್ವೈರೂಪ್ಯವು ಅಸಂಭಾವಿತವಾಗಿದೆ ಎಂದಭಿಪ್ರಾಯ.

## ಸುಧಾಪರಿಮಳಸಾರ

ತಾತ್ಪರ್ಯಾರ್ಥ ಹೀಗಿದೆ. ಮನ್ವಾದಿವಾಕ್ಯವು ಶ್ರುತಿಸಂವಾದಿಯಾದುದರಿಂದ ಹೇಗೆ ಪ್ರಮಾಣವೋ ಹಾಗೇ ಶ್ರುತಿಸಂವಾದಿಯಾದ ಈ ಬ್ರಹ್ಮಮೀಮಾಂಸಾಶಾಸ್ತ್ರವೂ ಪ್ರಮಾಣವು. ಶ್ರುತಿಯ ಅರ್ಥವನ್ನು ಇದು ವಿಚಾರ ಮಾಡುವುದರಿಂದ ಶ್ರುತಿಸಂವಾದಿಯಾಗಿದೆ. ಒಂದು ವೇಳೆ ಶ್ರುತಿಸಂವಾದಿಯಲ್ಲವೆಂದಾದರೆ ಇದು ಶ್ರುತಿಯ ಅರ್ಥವನ್ನು ವಿಚಾರ ಮಾಡಲು ಸಾಧ್ಯವಿಲ್ಲ. ಇದು ಶ್ರುತ್ಯರ್ಥವನ್ನು ವಿಚಾರ ಮಾಡಲು ಹೊರಟ ಶಾಸ್ತ್ರ ಎಂಬ ವಿಷಯವು 'ಪುನಃ ತಸ್ಯಾರ್ಥವಿತ್ತಯೇ ಚಕಾರ ಬ್ರಹ್ಮಸೂತ್ರಾಣಿ' ಎಂಬಿತ್ಯಾದಿ ಆಗಮಗಳಿಂದ ಸಿದ್ಧವಾಗಿದೆ.

ಯಾವುದು ಯುಕ್ತಿಸಂವಾದ ಉಳ್ಳದ್ದೋ ಅದು ಪ್ರಮಾಣ. ಉದಾಹರಣೆ : ಧೂಮವುಳ್ಳ ಪರ್ವತವನ್ನು ಕುರಿತು ಇದು ಅಗ್ನಿವುಳ್ಳದ್ದು ಎಂದು ಹೊರಟ ವಾಕ್ಯ, ಧೂಮವುಳ್ಳದ್ದರಿಂದ ಅಗ್ನಿ ಇದೆ ಎಂಬ ಯುಕ್ತಿಯ ಸಂವಾದವುಳ್ಳದ್ದರಿಂದ ಹೇಗೆ ಪ್ರಮಾಣವೋ ಹಾಗೆ ಯುಕ್ತಿಸಂವಾದವುಳ್ಳದ್ದುದರಿಂದ ಈ ಶಾಸ್ತ್ರವು ಪ್ರಮಾಣ, ಯುಕ್ತ್ಯನುಸಂಧಾನರೂಪವಾದ ಮೀಮಾಂಸಾರೂಪದ್ದು ಈ ಶಾಸ್ತ್ರವಾದುದರಿಂದ ಇದು ಯುಕ್ತಿಸಂವಾದಿಯಾಗಿದೆ. ಶ್ರುತಿಯುಕ್ತಿಸಂವಾದಿಯಾದರೂ ಬ್ರಹ್ಮಮೀಮಾಂಸಾಶಾಸ್ತ್ರವು, ಅಪ್ರಮಾಣ ಎಂದು ಹೇಳಿದರೆ, ಬ್ರಹ್ಮಮೀಮಾಂಸಾ-ಶಾಸ್ತ್ರಸಮಾನಾರ್ಥಕವಾದ ಶ್ರುತಿಯುಕ್ತಿಗಳೂ ಅಪ್ರಮಾಣ ಆಗಬೇಕಾದೀತು. ಬ್ರಹ್ಮಮೀಮಾಂಸಾಶಾಸ್ತ್ರ ಮತ್ತು ಶ್ರುತಿ-ಯುಕ್ತಿಗಳು ಸಮಾನಾರ್ಥಕಗಳಾಗಿರುವಾಗ ಶ್ರುತಿಯುಕ್ತಿಗಳು ಪ್ರಮಾಣಗಳು. ಕೇವಲ ಬ್ರಹ್ಮಮೀಮಾಂಸಾ-ಶಾಸ್ತ್ರವು ಅಪ್ರಮಾಣ ಎನ್ನುವುದು ಸರಿಯಲ್ಲ, ಅಲ್ಲದೆ ಶ್ರುತಿಯುಕ್ತಿಗಳು ಪ್ರಮಾಣವಾದರೆ ಅವುಗಳ ಅರ್ಥ ಸತ್ಯವಾಗುತ್ತದೆ. ಅದೇ ಅರ್ಥವನ್ನು ಹೇಳುವ ಬ್ರಹ್ಮಮೀಮಾಂಸಾಶಾಸ್ತ್ರ ಅಪ್ರಮಾಣವಾದರೆ ಅದರ ಅರ್ಥ ಅಸತ್ಯ-ವೆಂದಾಯಿತು. ಅಂದರೆ ಒಂದೇ ಅರ್ಥ ಸತ್ಯವು, ಅಸತ್ಯವೂ ಆಗಬೇಕಾದೀತು. ಅರ್ಧಜರತೀಯ ನ್ಯಾಯದಂತೆ ಇದು ಯುಕ್ತವಲ್ಲ.

## ನೆನೆಪಿಡಿ

* 'ಬ್ರಹ್ಮಮೀಮಾಂಸಾಶಾಸ್ತ್ರಂ ಪ್ರಮಾಣಂ ಶ್ರುತಿಸಂವಾದಿತ್ವಾತ್' ಎಂಬ ಅನುಮಾನದಲ್ಲಿ ಹೇತ್ವಸಿದ್ಧಿಯ ಪರಿಹಾರಕ್ಕಾಗಿ 'ಇದಂ ಶಾಸ್ತ್ರಂ ಶ್ರುತಿಸಂವಾದೀ ತದರ್ಥವಿಚಾರಪರತ್ವಾತ್' ಎಂಬ ಅನುಮಾನವನ್ನು ಪ್ರಯೋಗಿಸುತ್ತಿದ್ದಾರೆ.

* 'ಇದಂ ಶಾಸ್ತ್ರಂ ಶ್ರುತಿಸಂವಾದೀ ತದರ್ಥವಿಚಾರಪರತ್ವಾತ್' ಎಂಬ ಅನುಮಾನದಲ್ಲಿ ಹೇತ್ವಸಿದ್ಧಿಯನ್ನು ಪರಿಹರಿಸಲು 'ಪುನಸ್ತಸ್ಯಾರ್ಥವಿತ್ತಯೇ' ಎಂಬ ಆಗಮವನ್ನು ಪ್ರಮಾಣವಾಗಿ ಹೇಳಿದ್ದಾರೆ.

* ಈ ಶಾಸ್ತ್ರವು ಶ್ರುತಿಸಂವಾದಿಯಾದಾಗ ಶ್ರುತಿಯು ಅಂಗಿಯಾಗುತ್ತದೆ. ಶಾಸ್ತ್ರವು ಅಂಗವಾಗುತ್ತದೆ. ಯುಕ್ತಿಸಂವಾದಿಯಾದಾಗ ಯುಕ್ತಿಯು ಅಂಗವಾಗುತ್ತದೆ. ಶಾಸ್ತ್ರವು ಅಂಗಿಯಾಗುತ್ತದೆ.

* ಶಾಸ್ತ್ರವು ಅಪ್ರಮಾಣವಾದರೆ ಶ್ರುತಿಯು ಕೂಡ ಅಪ್ರಮಾಣವೇ ಆಗುತ್ತದೆ. ಶಾಸ್ತ್ರವನ್ನು ಅಪ್ರಮಾಣವೆಂದು ಒಪ್ಪಿ ಶ್ರುತಿಯನ್ನು ಮಾತ್ರ ಪ್ರಮಾಣವೆಂದು ಹೇಳುವುದು ಅರ್ಧಜರತೀಯವಾಗುತ್ತದೆ.

* * * * *

## ಬ್ರಹ್ಮಸೂತ್ರಗಳಲ್ಲಿ ತ್ರಿವಿಧಪ್ರಾಮಾಣ್ಯವಿದೆ

**ಅನು–** **............... ಏವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।**

**ದೃಶ್ಯತೇ ಬ್ರಹ್ಮಸೂತ್ರಾಣಾಂ ............**

ಆಪ್ತತ್ವಾದಿಯುಕ್ತಿಗಳಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಮೂರು ವಿಧದಲ್ಲಿ ತಿಳಿದು ಬರುತ್ತಿದೆ.

**ಶ್ರೀಮನ್ನ್ಯಾಯಸುಧಾ– ಕಿಮತೋ ಯದ್ಯೇವಮ್ ಇತ್ಯತ ಆಹ – ಏವ-ಪ್ರಾಮಾಣ್ಯಮಿತಿ ॥**

**ಏವಶಬ್ದೋ ಬ್ರಹ್ಮಸೂತ್ರಾಣಾಮ್ ಇತ್ಯನೇನ ಸಂಬಧ್ಯತೇ । ತ್ರಿವಿಧಮ್ ಇತಿ ಕ್ರಿಯಾವಿಶೇಷಣಮ್ । ಬ್ರಹ್ಮ = ವೇದಃ, ತದರ್ಥಃ ಪರಂಬ್ರಹ್ಮ ವಾ; ತಸ್ಯ ಸೂತ್ರಾಣಿ = ಬ್ರಹ್ಮಸೂತ್ರಾಣಿ । ಸಕಲವೇದಾರ್ಥಭೂತಸ್ಯ ಪರಸ್ಯ ಬ್ರಹ್ಮಣೋ ವಿಷ್ಣೋಃ ಸ್ವರೂಪನಿರ್ಣಯಾರ್ಥಾನಿ ಸೂತ್ರಾಣೀತಿ ಯಾವತ್ । ಸೂತ್ರ-ಶಬ್ದಾರ್ಥಶ್ಚ 'ಅಲ್ಪಾಕ್ಷರಮ್' ಇತ್ಯಾದ್ಯಾಗಮಾದವಗಂತವ್ಯಃ ॥**

ಬ್ರಹ್ಮಸೂತ್ರವು ಶ್ರುತಿಮೂಲಕವಾಗಿದೆ. ಮತ್ತು ಯುಕ್ತಿಮೂಲಕವಾಗಿದೆ ಎಂಬುದಾಗಿ ಹೇಳಲಾಯಿತು. ಇದರಿಂದ ಏನು ತಿಳಿಯುತ್ತದೆ ಎಂಬ ಪ್ರಶ್ನೆಗೆ ''ಏವ ಪ್ರಾಮಾಣ್ಯಂ'' ಎಂಬ ವಾಕ್ಯದಿಂದ ಉತ್ತರವನ್ನು ಹೇಳುತ್ತಿದ್ದಾರೆ.

'ಬ್ರಹ್ಮಸೂತ್ರಾಣಾಮ್' ಎಂಬ ಪದದ ಮುಂದೆ 'ಏವ' ಎಂಬ ಶಬ್ದವನ್ನು ಯೋಜನೆ ಮಾಡಬೇಕು. 'ತ್ರಿವಿಧಮ್' ಎಂಬ ಶಬ್ದವು 'ದೃಶ್ಯತೇ' ಎಂಬ ಕ್ರಿಯೆಯಲ್ಲಿ ವಿಶೇಷಣ-ವಾಗುತ್ತದೆ. ಬ್ರಹ್ಮಶಬ್ದಕ್ಕೆ ವೇದ ಮತ್ತು ತದರ್ಥವಾದ ಬ್ರಹ್ಮ ಎಂದರ್ಥ. ಆ ಬ್ರಹ್ಮನಿಗೆ ಸಂಬಂಧಪಟ್ಟ ಸೂತ್ರಗಳು ಅಥವಾ ವೇದಕ್ಕೆ ಸಂಬಂಧಪಟ್ಟ ಸೂತ್ರಗಳು ಬ್ರಹ್ಮಸೂತ್ರ-

ಗಳೆಂದು ಕರೆಸಿಕೊಳ್ಳುತ್ತವೆ. ಪರಬ್ರಹ್ಮನು ಸಕಲ ವೇದಾರ್ಥನಾಗಿದ್ದಾನೆ. ಇವನು ವಿಷ್ಣುವಿನ ಸ್ವರೂಪನಾಗಿದ್ದಾನೆ. ವಿಷ್ಣುವಿನ ಸ್ವರೂಪವನ್ನು ಸೂತ್ರಗಳು ನಿರ್ಣಯಿಸುತ್ತವೆ ಎಂದರ್ಥ. ಸೂತ್ರಶಬ್ದದ ಅರ್ಥವನ್ನು 'ಅಲ್ಪಾಕ್ಷರಮಸಂದಿಗ್ಧಂ' ಎಂಬ ಪುರಾಣವಚನದಿಂದ ತಿಳಿದು-ಕೊಳ್ಳಬೇಕು.

## ತ್ರಿವಿಧಪ್ರಾಮಾಣ್ಯ ಹೇಗೆ?

ಪರಿಮಳ – ಪ್ರಮಾಜನಕತ್ವರೂಪಪ್ರಾಮಾಣ್ಯಸ್ಯೈವ ಏಕವಿಧತ್ವೇನ ತ್ರೈವಿಧ್ಯಾ-ಯೋಗಾದಾಹ – ಕ್ರಿಯಾವಿಶೇಷಣಮಿತಿ ॥ ವಿವರಿಷ್ಯತೇ ಚೈತತ್ । ತ್ರಿವಿಧಂ ದೃಶ್ಯತೇ ॥ ಆಪ್ತವಾಕ್ಯತ್ವಾದಿಪ್ರಮಾಣತ್ರಯೇಣ ದೃಶ್ಯತ ಇತಿ ಯಾವದಿತಿ ಗ್ರಂಥೇನ । ಬ್ರಹ್ಮಪದಸ್ಯ ತಂತ್ರತಾಮುಪೇತ್ಯಾರ್ಥಮಾಹ – ಬ್ರಹ್ಮ ವೇದ ಇತ್ಯಾದಿ ॥ 'ವಾ'ಶಬ್ದಃ ಸಮುಚ್ಚಯೇ ।

ಪ್ರಮಾಜನಕವಾದದ್ದು ಪ್ರಮಾಣ ಎಂದು ಕರೆಸಿಕೊಳ್ಳುತ್ತದೆ. ಈ ಕರಣಪ್ರಾಮಾಣ್ಯವು ಎಲ್ಲಾ ಕರಣಗಳಲ್ಲಿ ಒಂದೇ ವಿಧವಾಗಿದೆ. ಇದರಲ್ಲಿ ಮೂರು ವೈವಿಧ್ಯವು ಸರ್ವಥಾ ಯುಕ್ತ-ವಾಗುವುದಿಲ್ಲ. ಆದ್ದರಿಂದ ಗ್ರಂಥದಲ್ಲಿ 'ಕ್ರಿಯಾವಿಶೇಷಣಮ್' ಎಂಬುದಾಗಿ ಹೇಳಿದ್ದಾರೆ.

'ತ್ರಿವಿಧಂ ದೃಶ್ಯತೇ' – ತ್ರಿವಿಧಂ ಎಂಬುದಕ್ಕೆ ದೃಶ್ಯತೇ ಎಂಬಲ್ಲಿ ಅನ್ವಯ. ಆಪ್ತವಾಕ್ಯತ್ವ ಮೊದಲಾದ ಮೂರು ಪ್ರಮಾಣಗಳಿಂದ ಪ್ರಾಮಾಣ್ಯವು ತೋರುತ್ತಿದೆ ಎಂದರ್ಥ. ಬ್ರಹ್ಮಸೂತ್ರ ಎಂಬಲ್ಲಿ ಬ್ರಹ್ಮಪದವನ್ನು ತಂತ್ರದಿಂದ (ಆವೃತ್ತಿಯಿಂದ) ಅನ್ವಯ ಮಾಡಿಕೊಳ್ಳಬೇಕೆಂಬ ಅಭಿ-ಪ್ರಾಯದಿಂದ 'ಬ್ರಹ್ಮ ವೇದಃ' ಎಂಬ ವಾಕ್ಯವು ಹೊರಟಿದೆ. ಇಲ್ಲಿರುವ ವಾಶಬ್ದವು ವಿಕಲ್ಪಾರ್ಥದಲ್ಲಿದೆ ಎಂದು ತಿಳಿಯಬಾರದು; ಸಮುಚ್ಚಯಾರ್ಥದಲ್ಲಿರುತ್ತದೆ.

ವಿವರಣೆ – ಅನುವ್ಯಾಖ್ಯಾನದಲ್ಲಿ ಪ್ರಾಮಾಣ್ಯವು ತ್ರಿವಿಧವೆಂದಿದ್ದಾರೆ. ಆದರೆ ಎಲ್ಲಾ ಕರಣಗಳ-ಲ್ಲಿರುವ ಪ್ರಮಾಜನಕತ್ವವು ಒಂದೇ ಆಗಿದೆ. ಆದ್ದರಿಂದ ಪ್ರಾಮಾಣ್ಯವನ್ನು ತ್ರಿವಿಧವೆಂದು ಅನು-ವ್ಯಾಖ್ಯಾನದಲ್ಲಿ ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ಸುಧಾಗ್ರಂಥದಲ್ಲಿ 'ಕ್ರಿಯಾವಿಶೇಷಣಮ್' ಎಂದು ಉತ್ತರ ನೀಡಿದ್ದಾರೆ. ಪ್ರಾಮಾಣ್ಯವು ಮೂರು ವಿಧವಾಗಿರುವುದಿಲ್ಲ; ಮೂರು ವಿಧವಾಗಿರುವಂತೆ

ಕಾಣಿಸುತ್ತದೆ. ಆಪ್ತವಾಕ್ಯತ್ವದಿಂದ ಶ್ರುತಿಮೂಲಕವಾಗಿರುವುದರಿಂದ ಮತ್ತು ಯುಕ್ತಿ ಮೂಲಕವಾಗಿ-ರುವುದರಿಂದ ಎಂಬುದಾಗಿ ಮೂರು ಪ್ರಕಾರಗಳಿಂದ ಪ್ರಾಮಾಣ್ಯವು ಕಾಣಿಸುತ್ತದೆ ಎಂದರ್ಥ.

ಬ್ರಹ್ಮಸೂತ್ರಾಣಾಮ್' ಎಂಬಲ್ಲಿ ಬ್ರಹ್ಮ ಎಂಬುದಕ್ಕೆ ವೇದ ಎಂದರ್ಥ. ವೇದದ ಅರ್ಥವನ್ನು ಜೈಮಿನೀಸೂತ್ರಗಳು ಕೂಡ ಪ್ರತಿಪಾದನೆ ಮಾಡುತ್ತವೆ. ಅಂಥ ಜೈಮಿನೀಸೂತ್ರಕ್ಕೆ ತ್ರಿವಿಧಪ್ರಾಮಾಣ್ಯವನ್ನು ಹೇಳಿದ್ದಾರೆಯೇ ಎಂಬ ಶಂಕೆಯ ಪರಿಹಾರಕ್ಕಾಗಿ 'ಬ್ರಹ್ಮ ವೇದಃ' ಎಂಬುದಾಗಿ ತಂತ್ರತ್ವೇನ ಬ್ರಹ್ಮಶಬ್ದ-ವನ್ನು ಆವೃತ್ತಿ ಮಾಡಿಕೊಳ್ಳಬೇಕು. ವೇದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಅಂಥ ಬ್ರಹ್ಮನ ಸ್ವರೂಪದ ನಿರ್ಧಾರಣೆ ಮಾಡುವುದಕ್ಕಾಗಿ ಸೂತ್ರಗಳು ಹೊರಟವೆ ಎಂಬರ್ಥವನ್ನು ಈಗ ಹೇಳಿದಂತಾ-ಗುತ್ತದೆ.

ಸೂತ್ರಶಬ್ದಕ್ಕೆ 'ಸೂತ್ರತೇ ಅನೇನ ಇತಿ ಸೂತ್ರಮ್ (ಪ್ರತಿಪಾದ್ಯತೇ ಅನೇನ ಇತಿ ) ಎಂಬ ವ್ಯುತ್ಪತ್ತಿಯಿಂದ ಮಹಾಭಾರತಾದಿಗಳೂ ಕೂಡ ವಿಷ್ಣುಸ್ವರೂಪವನ್ನು ಪ್ರತಿಪಾದನೆ ಮಾಡುವುದರಿಂದ ಬ್ರಹ್ಮಸೂತ್ರ ಎಂದು ಕರೆಸಿಕೊಳ್ಳಬೇಕಾದೀತು. ಅದಕ್ಕೋಸ್ಕರ 'ಸೂತ್ರಶಬ್ದಾರ್ಥಶ್ಚ ಅಲ್ಪಾಕ್ಷರಮ್' ಇತ್ಯಾದಿ ವಾಕ್ಯವು ಹೊರಟಿದೆ.

> ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
> ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥'

ಎಂಬ ಪುರಾಣವಚನಕ್ಕೆ ಅನುಗುಣವಾಗಿ ಸೂತ್ರಶಬ್ದಾರ್ಥವನ್ನು ತಿಳಿದುಕೊಳ್ಳಬೇಕು.

## ಏವಶಬ್ದಕ್ಕೆ ಹಾಗೂ ತ್ರಿವಿಧಶಬ್ದಕ್ಕೆ ಎಲ್ಲಿ ಅನ್ವಯ ತಿಳಿಯಬೇಕು?

ವಾಕ್ಯಾರ್ಥಚಂದ್ರಿಕಾ – ಯದ್ಯೇವಂ ಶ್ರುತಿಯುಕ್ತಿಸಂವಾದಿತಯಾ ಪ್ರಾಮಾಣ್ಯಂ ಲಬ್ಧಮ್, ಅತೋಽಪಿ ತದನುತ್ತಮತಾ ಸಿದ್ಧಾ ಕಿಮ್? ಇತ್ಯಾಶಂಕತೇ – ಕಿಮಿತಿ ॥ 'ಯಥಾಶ್ರುತಾನ್ವಯೇ ಏವಶಬ್ದಸ್ಯ ವೈಯರ್ಥ್ಯಾದ್, ಬ್ರಹ್ಮಸೂತ್ರಾಣಾಮ್' ಇತ್ಯನೇನ ಸಂಬಂಧೇ ಪ್ರಯೋಜನಂ ಕಥಯಿಷ್ಯಾಮ ಇತ್ಯಭಿಪ್ರೇತ್ಯ ಭಿನ್ನಕ್ರಮತಯಾ ತಂ ವ್ಯಾಚಷ್ಟೇ – ಏವಶಬ್ದ ಇತಿ ॥ ಪ್ರಾಮಾಣ್ಯ-ಸ್ಯೈಕವಿಧತ್ವೇನ ತ್ರೈವಿಧ್ಯಾಸಂಭವಾತ್, ಸ್ವರೂಪೇಣ ತ್ರೈವಿಧ್ಯಸ್ಯಾನುತ್ತಮತಾನುಪಪಾದಕತ್ವಾಚ್ಚ, ಕ್ರಿಯಾವಿಶೇಷಣತಾಯಾಂ ಬಾಧಕಾಭಾವಾದ್ ವಕ್ಷ್ಯಮಾಣರೀತ್ಯಾ ಅನುತ್ತಮತೋಪಪಾದಕತ್ವ-ಸಂಭವಾಚ್ಚ ತಥಾ ವ್ಯಾಚಷ್ಟೇ – ತ್ರಿವಿಧಮಿತೀತಿ ॥

ಒಂದು ವೇಳೆ ಶ್ರುತಿಸಂವಾದಿಯಾಗಿರುವುದರಿಂದ ಮತ್ತು ಯುಕ್ತಿಸಂವಾದಿಯಾಗಿರುವುದರಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಸಿದ್ಧವಾಯಿತು ಎಂದು ಹೇಳುವುದಾದರೆ; ಬ್ರಹ್ಮಸೂತ್ರಗಳಿಗೆ ಸರ್ವೋತ್ತಮತ್ವವು ಹೇಗೆ ಸಾಧಿಸಿದಂತಾಯಿತು? ಎಂಬ ಆಶಂಕೆಗೆ 'ಕಿಮತಃ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಶ್ರುತಿಮೂಲತಯಾ ತಥಾ ಯುಕ್ತಿಮೂಲತಯಾ ಚೈವ ಎಂಬುದಾಗಿ ಏವಶಬ್ದವನ್ನು ಯಥಾಶ್ರುತವಾಗಿ ಯುಕ್ತಿಮೂಲತಯಾ ಎಂಬಲ್ಲಿ ಅನ್ವಯವನ್ನು ತಿಳಿಯುವುದಾದರೆ ನಿರರ್ಥಕವಾಗುತ್ತದೆ. ಅದೇ ಏವಶಬ್ದಕ್ಕೆ 'ಬ್ರಹ್ಮಸೂತ್ರಾಣಾಂ' ಎಂಬಲ್ಲಿ ಅನ್ವಯವನ್ನು ತಿಳಿದರೆ ಸಾರ್ಥಕವಾಗುತ್ತದೆಂಬುದನ್ನು ಮುಂದೆ ತೋರಿಸುವವರಿದ್ದೇವೆ. ಈ ಅಭಿಪ್ರಾಯದಿಂದ ಭಿನ್ನಕ್ರಮದಲ್ಲಿ 'ಏವ'ಶಬ್ದವನ್ನು 'ಏವಶಬ್ದಃ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಯಥಾರ್ಥಜ್ಞಾನಸಾಧನತ್ವ ಎಂಬ ಪ್ರಾಮಾಣ್ಯವು ಏಕವಿಧವೇ ಆಗಿರುತ್ತದೆ. ಹೀಗಿರುವಾಗ ತ್ರಿವಿಧಂ ಎಂದು ಹೇಳಿದ್ದು ಅಸಂಭಾವಿತವಾಗಿದೆ. ಪ್ರಮಾಣಗಳು ಸ್ವರೂಪತಃ ಪ್ರತ್ಯಕ್ಷ, ಅನುಮಾನ ಹಾಗೂ ಆಗಮವೆಂದು ಮೂರುವಿಧವಾಗಿವೆ. ಅದನ್ನುದ್ದೇಶಿಸಿ ತ್ರೈವಿಧ್ಯವನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಈ ಮೂರು ಬಗೆಯ ಪ್ರಮಾಣಗಳಿಗೆ ಅನುತ್ತಮತ್ವದ ಉಪಪಾದನೆಯು ಪ್ರಕೃತಕ್ಕೆ ಅನುಪಯುಕ್ತವಾಗಿದೆ. 'ತ್ರಿವಿಧಂ' ಎಂಬುದಕ್ಕೆ ಪ್ರಾಮಾಣ್ಯದಲ್ಲಿ ಅನ್ವಯವನ್ನು ತಿಳಿಯಬಾರದು. ದೃಶ್ಯತೇ ಎಂಬ ಕ್ರಿಯೆಯಲ್ಲಿ ವಿಶೇಷಣತ್ವೇನ ಅನ್ವಯವನ್ನು ತಿಳಿಯಬೇಕು. ಇದಕ್ಕೆ ಯಾವುದೇ ರೀತಿಯಲ್ಲಿ ಬಾಧಕವು ಇರುವುದಿಲ್ಲ. ಮತ್ತು ಮುಂದೆ ಹೇಳುವಂತೆ ಅನುತ್ತಮತ್ವಕ್ಕೆ ಉಪಪಾದಕವೂ ಕೂಡ ಆಗಿದೆ ಎಂಬುದಾಗಿ 'ತ್ರಿವಿಧಂ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – 'ಪ್ರಾಮಾಣ್ಯಂ ತ್ರಿವಿಧಂ ಮಹತ್ ದೃಶ್ಯತೇ' ಎಂಬಲ್ಲಿ ತ್ರಿವಿಧಂ ಎಂಬುದಕ್ಕೆ ಪ್ರಾಮಾಣ್ಯದಲ್ಲಿ ಅನ್ವಯವಲ್ಲ. ದೃಶ್ಯತೇ ಎಂಬಲ್ಲಿ ಅನ್ವಯವನ್ನು ಮಾಡಬೇಕು. ಆಗ 'ತ್ರಿವಿಧಂ ಯಥಾ ಭವತಿ ತಥಾ ಪ್ರಾಮಾಣ್ಯಂ ದೃಶ್ಯತೇ' ಎಂಬರ್ಥವನ್ನು ಹೇಳಿದಂತಾಗುತ್ತದೆ. ಉಳಿದ ಶಾಸ್ತ್ರಗಳಲ್ಲಿ ಮೂರು ರೀತಿಯಾಗಿ ಪ್ರಾಮಾಣ್ಯವು ದೊರೆಯುವುದಿಲ್ಲ. ಆದರೆ ಬ್ರಹ್ಮಸೂತ್ರಗಳಿಗೆ ಶ್ರುತಿಮೂಲತ್ವ, ಯುಕ್ತಿಮೂಲತ್ವ, ಆಪ್ತವಾಕ್ಯತ್ವಗಳ ಮೂಲಕವಾಗಿ ಪ್ರಾಮಾಣ್ಯವು ತಿಳಿಯುತ್ತದೆ. ಆದ್ದರಿಂದ ಇದಕ್ಕೆ ಅನುತ್ತಮತ್ವವು ಇದೆಯೆಂದು ಮುಂದೆ ಸಮರ್ಥಿಸುತ್ತಾರೆ.

## ಬ್ರಹ್ಮಸೂತ್ರಾಣಾಂ ಎಂದೇಕೇ ಹೇಳಬೇಕಿತ್ತು?

**ವಾಕ್ಯಾರ್ಥಚಂದ್ರಿಕಾ – ಸಾಧನಂ ಪರಿತ್ಯಜ್ಯ, ಧಾತ್ವರ್ಥಮಾತ್ರವಿಶೇಷಣಂ ಹಿ ಕ್ರಿಯಾವಿಶೇಷಣಮ್ ಇತ್ಯರ್ಥಃ। 'ಚಕ್ರೇ ಶಾಸ್ತ್ರಮನುತ್ತಮಮ್' ಇತಿ ಪ್ರಕೃತಶಾಸ್ತ್ರಸ್ಯೈವ ಪೂರ್ವತ್ರೇವಾಪಿ ಪ್ರಾಮಾಣ್ಯಸಂಬಂಧಿತ್ವೇನ ಲಾಭೇ ಸಿದ್ಧೇऽಪಿ ಯದ್ 'ಬ್ರಹ್ಮಸೂತ್ರಾಣಾಮ್' ಇತಿ ವಿಶೇಷಣಗ್ರಹಣಂ ತಸ್ಯ ಪ್ರಯೋಜನಂ ವಕ್ತುಮ್, ತಸ್ಯ ಸ್ವಾಭಿಪ್ರೇತಯಥಾಸ್ಥಿತೋಕ್ತಿಂ ವಿನಾऽಸಂಭವಾತ್ ಸ್ವಾಭಿಪ್ರೇತಾರ್ಥಂ ತಾವದಾಹ – ಬ್ರಹ್ಮೇತಿ ॥**

ಕರ್ತೃ, ಕರಣ, ಕರ್ಮ ಮೊದಲಾದ ಪ್ರತ್ಯಯಾರ್ಥವನ್ನು ಪರಿತ್ಯಾಗ ಮಾಡಿ ಧಾತ್ವರ್ಥದಲ್ಲಿ ಮಾತ್ರ ವಿಶೇಷಣವಾಗುವುದನ್ನು ಕ್ರಿಯಾವಿಶೇಷಣ ಎಂದು ಕರೆಯುತ್ತಾರೆ.

'ಚಕ್ರೇ ಶಾಸ್ತ್ರಮನುತ್ತಮಮ್' ಎಂಬುದರಿಂದ ಶಾಸ್ತ್ರವು ಪ್ರಕೃತವೇ ಆಗಿದೆ. ಹಿಂದಿನಂತೆ ಇಲ್ಲೂ ಕೂಡ ಪ್ರಾಮಾಣ್ಯಕ್ಕೆ ಈ ಶಾಸ್ತ್ರವೇ ಸಂಬಂಧಪಡುತ್ತದೆಂದು ಸಿದ್ಧವಾಗುತ್ತದೆ. ಆದರೂ ಕೂಡ ಅನುವ್ಯಾಖ್ಯಾನದಲ್ಲಿ 'ಬ್ರಹ್ಮಸೂತ್ರಾಣಾಂ' ಎಂಬ ವಿಶೇಷಣವಾಚಕಪದವನ್ನು ಹೇಳಿದ್ದಾರೆ. ಇದರ ಪ್ರಯೋಜನವನ್ನು ಹೇಳುವುದಕ್ಕಾಗಿ ಸ್ವಾಭಿಪ್ರೇತವಾದ ಯಥಾಸ್ಥಿತವಾದ ಅರ್ಥವನ್ನು ತಿಳಿಯದೇ ಉಪಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವಾಭಿಪ್ರೇತವಾದ ಅರ್ಥವನ್ನು 'ಬ್ರಹ್ಮಸೂತ್ರಾಣ' ಎಂಬುದರಿಂದ ಹೇಳುತ್ತಿದ್ದಾರೆ.

ವಿವರಣೆ – ಗಚ್ಛತಿ ಎಂದು ಹೇಳಿದಾಗ ಗಮ್ ಧಾತುವು ಗಮನಕ್ರಿಯೆಯನ್ನು ಹೇಳುತ್ತದೆ. ತಿಪ್ ಪ್ರತ್ಯಯವು ಕರ್ತೃವನ್ನು ಹೇಳುತ್ತದೆ. ಗಮ್ಯತೇ ಎಂಬಲ್ಲಿ ಇರುವ ಆಖ್ಯಾತಪ್ರತ್ಯಯವು ಕರ್ಮ ಎಂಬರ್ಥವನ್ನು ಹೇಳುತ್ತದೆ. 'ದೇವದತ್ತಃ ಶೀಘ್ರಂ ಗ್ರಾಮಂ ಗಚ್ಛತಿ' ಎಂದು ಹೇಳಿದಾಗ ಗ್ರಾಮದಲ್ಲಿ ಅಥವಾ ಗಮನಕರ್ತೃವಾದ ದೇವದತ್ತನಲ್ಲಿ ಶೀಘ್ರಂ ಎಂಬುದು ವಿಶೇಷಣ ಆಗುವುದಿಲ್ಲ. ಗಮ್ ಧಾತ್ವರ್ಥವಾದ ಗಮನದಲ್ಲೇ ವಿಶೇಷಣವಾಗುತ್ತದೆ. ಈ ಶೀಘ್ರಂ ಎಂಬುದನ್ನು ಕ್ರಿಯಾವಿಶೇಷಣ ಎಂದು ಕರೆಯುತ್ತಾರೆ. 'ಸಾಧನಂ ಪರಿತ್ಯಜ್ಯ' ಎಂಬಲ್ಲಿ ಸಾಧನಶಬ್ದಕ್ಕೆ ಕರ್ತೃಸಾಧನ, ಕರಣಸಾಧನ ಇತ್ಯಾದ್ಯರ್ಥಗಳನ್ನು ತಿಳಿಯಬೇಕು.

'ದೃಶ್ಯತೇ ಬ್ರಹ್ಮಸೂತ್ರಾಣಾಮ್' ಎಂಬಲ್ಲಿ ಬ್ರಹ್ಮಸೂತ್ರಾಣಾಂ ಎಂಬ ಪದವನ್ನು ಪ್ರಯೋಗಿಸುವ ಆವಶ್ಯಕತೆಯೇ ಇರಲಿಲ್ಲ. ಏಕೆಂದರೆ 'ಚಕ್ರೇ ಶಾಸ್ತ್ರಮನುತ್ತಮಮ್' ಎಂಬುದಾಗಿ ಶಾಸ್ತ್ರವು ಪ್ರಕೃತವೇ ಆಗಿದೆ. 'ಪ್ರಾಮಾಣ್ಯಂ' ಎಂದು ಹೇಳಿದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ಪ್ರಮಾಣವಾಗಿದೆ ಎಂಬರ್ಥವು

ಸ್ಪಷ್ಟವಾಗಿ ತಿಳಿಯುತ್ತದೆ. ಹೀಗಿದ್ದರೂ ಕೂಡ 'ಬ್ರಹ್ಮಸೂತ್ರಾಣಾಂ' ಎಂಬುದಾಗಿ ಪುನಃ ಏಕೆ ಹೇಳಿದ್ದಾರೆ? ಎಂದರೆ ಪರಕೀಯರ ವ್ಯಾಖ್ಯಾನವನ್ನು ಖಂಡನೆ ಮಾಡಬೇಕಾಗಿದೆ. ಅದಕ್ಕೂ ಮೊದಲು ಸ್ವಾಭಿಪ್ರೇತವಾದ ಯಥಾಸ್ಥಿತವಾದ ಅರ್ಥವನ್ನು ಹೇಳಬೇಕಾಗಿದೆ. ಅದನ್ನು ಗ್ರಂಥದಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

## ಏಕಪದದಿಂದ ತಿಳಿಯುವ ಅರ್ಥದ್ವಯಗಳಿಗೆ ಪರಸ್ಪರ ಅನ್ವಯವು ಯುಕ್ತವಾಗುತ್ತದೆ.

ವಾಕ್ಯಾರ್ಥಚಂದ್ರಿಕಾ – ವೇದಪರಬ್ರಹ್ಮಣೋರುಭಯೋರಪಿ ಬ್ರಹ್ಮಪದಶಕ್ಯತ್ವೇನ ಬ್ರಹ್ಮಪದಾತ್ ತಯೋಃ ಸ್ವಾತಂತ್ರ್ಯೇಣ ಉಪಸ್ಥಿತಾವಪಿ ಪ್ರತ್ಯಯೋಪಸ್ಥಿತಕರ್ತೃತ್ವೈಕತ್ವಯೋರೇಕ-ಪ್ರತ್ಯಯಶ್ರುತ್ಯಾ ವಾ, ಯೋಗ್ಯತಾವಶಾದ್ ವಾ, ವಿವಕ್ಷಾಬಲಾದ್ ವಾ ಯಥಾ ಪರಸ್ಪರಾನ್ವಯಸ್ತಥಾ ಪ್ರಕೃತೇಽಪ್ಯೇಕಪದಶ್ರುತ್ಯಾದಿನಾ ಪ್ರತಿಪಾದ್ಯಪ್ರತಿಪಾದಕಭಾವೇನ ಪರಸ್ಪರಾನ್ವಯ ಇತ್ಯಭಿಪ್ರೇತ್ಯ 'ತದರ್ಥ' ಇತ್ಯುಕ್ತಮ್, ನತು ಶಕ್ಯಸಂಬಂಧಾಭಿಪ್ರಾಯೇಣ ಪರಬ್ರಹ್ಮಣೋಽಪಿ ಶಕ್ಯತ್ವಾದಿತಿ ಬೋಧ್ಯಮ್ ॥

ಬ್ರಹ್ಮಪದಕ್ಕೆ ವೇದ ಮತ್ತು ಪರಬ್ರಹ್ಮ ಎಂಬೆರಡರ್ಥವನ್ನು ಶಕ್ಯವೃತ್ತಿಯಿಂದಲೇ ತಿಳಿಯಬೇಕು. ಆ ಬ್ರಹ್ಮಪದದಿಂದ ತಿಳಿಯುವ ವೇದ ಮತ್ತು ಪರಬ್ರಹ್ಮರು ಸ್ವತಂತ್ರವಾಗಿ ಉಪಸ್ಥಿತರಾದರೂ ಕೂಡ ಪ್ರತ್ಯಯದಿಂದ ಉಪಸ್ಥಿತವಾದ ಕರ್ತೃತ್ವಕ್ಕೆ ಹಾಗೂ ಏಕತ್ವಕ್ಕೆ ಏಕಪ್ರತ್ಯಯಶ್ರುತಿಯಿಂದ ಪರಸ್ಪರ ಅನ್ವಯವಿರುವುದು ಕಂಡಿದೆ. ಯೋಗ್ಯತಾಬಲದಿಂದ ಅಥವಾ ವಿವಕ್ಷಾಬಲದಿಂದಲೂ ಕೂಡ ಪರಸ್ಪರ ಅನ್ವಯವಿರುವುದು ಲೋಕದಲ್ಲಿ ಕಂಡಿದೆ. ಅದೇ ರೀತಿಯಾಗಿ ಪ್ರಕೃತದಲ್ಲಿ ಏಕಪದಶ್ರುತಿಯಿಂದ ತಿಳಿಯುವ ವೇದ ಹಾಗೂ ಪರಬ್ರಹ್ಮರಿಗೆ ಪ್ರತಿಪಾದ್ಯಪ್ರತಿಪಾದಕಭಾವರೂಪವಾದ ಪರಸ್ಪರ ಅನ್ವಯವನ್ನು ಹೇಳಬಹುದು. ಈ ಅಭಿಪ್ರಾಯದಿಂದ ಟೀಕೆಯಲ್ಲಿ 'ತದರ್ಥಃ' ಎಂದು ಹೇಳಿದ್ದಾರೆ. ಹೊರತು ಶಕ್ಯ-ಸಂಬಂಧಾಭಿಪ್ರಾಯದಿಂದ ಪರಬ್ರಹ್ಮನು ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಸರ್ವಥಾ ತಿಳಿಯಬಾರದು.

ವಿವರಣೆ – ಪರರು 'ಶಾರೀರಕಮೀಮಾಂಸಾ' ಎಂಬ ಪದಕ್ಕೆ ಯಾವ ಅರ್ಥವನ್ನು ವಿವಕ್ಷಿಸಿ-ದ್ದಾರೋ ಅದನ್ನು ನಿರಾಕರಣೆ ಮಾಡುವುದಕ್ಕಾಗಿ ಇಲ್ಲಿ ಆಚಾರ್ಯರು 'ಬ್ರಹ್ಮಸೂತ್ರಾಣಾಂ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

'ಶರೀರೇ ಭವಃ ಶಾರೀರಕಃ = ಜೀವಃ, ಜೀವವಿಷಯಕಃ ಮೀಮಾಂಸಾ ಶಾರೀರಕಮೀಮಾಂಸಾ' ಎಂಬುದಾಗಿ ಪರರು ಶಾರೀರಕಮೀಮಾಂಸಾಶಬ್ದದ ಅರ್ಥವನ್ನು ಹೇಳುತ್ತಾರೆ. ಈ ವ್ಯಾಖ್ಯಾನಕ್ಕೆ 'ಬ್ರಹ್ಮಸೂತ್ರ' ಎಂಬ ಪ್ರಸಿದ್ಧಿಯ ವಿರೋಧವು ಬರುತ್ತದೆ. ಬ್ರಹ್ಮ ಎಂದರೆ ವೇದ; ತದರ್ಥನಾದವನು ಪರಬ್ರಹ್ಮ; ತತ್ಪ್ರತಿಪಾದಕವಾದ ಸೂತ್ರಗಳು ಬ್ರಹ್ಮಸೂತ್ರಗಳೆಂದು ಕರೆಸಿಕೊಳ್ಳುತ್ತವೆ ಹೊರತು ಜೀವ-ವಿಷಯಕವಾದ ಮೀಮಾಂಸಾ ಗ್ರಂಥವನ್ನು ಬ್ರಹ್ಮಸೂತ್ರ ಎಂದು ಕರೆಯಲು ಸಾಧ್ಯವಿಲ್ಲ.

ಟೀಕೆಯಲ್ಲಿ ಬ್ರಹ್ಮ ಎಂಬ ಪದಕ್ಕೆ 'ವೇದಃ ತದರ್ಥಃ ಪರಬ್ರಹ್ಮ ವಾ' ಎಂಬುದಾಗಿ ಟೀಕೆಯಲ್ಲಿ ಒಂದೇ ಬ್ರಹ್ಮಶಬ್ದಕ್ಕೆ ವೇದ ಮತ್ತು ಪರಬ್ರಹ್ಮ ಎಂಬುದಾಗಿ ಎರಡರ್ಥವನ್ನು ಹೇಳಿದ್ದಾರೆ. ಅನಂತರ ಅವೆರಡಕ್ಕೆ ಪರಸ್ಪರ ಅನ್ವಯವನ್ನು ತಿಳಿಸಿದ್ದಾರೆ. ಇದು ಹೇಗೆ ಸಾಧ್ಯ ? ಒಂದೇ ಪದದಿಂದ ತಿಳಿಯುವ ಎರಡು ಅರ್ಥಗಳಿಗೆ ಪರಸ್ಪರ ಅನ್ವಯವನ್ನು ತಿಳಿಯಬಾರದೆಂಬುದು ಸಾಮಾನ್ಯನಿಯಮ. ಆದ್ದರಿಂದ ತದರ್ಥಃ ಎಂಬುದರಿಂದ ಶಕ್ಯಸಂಬಂಧರೂಪವಾದ ಲಕ್ಷಣಾವೃತ್ತಿಯನ್ನು ಪರಬ್ರಹ್ಮನಲ್ಲಿ ತಿಳಿಯಬೇಕು. ಆಗ ಬ್ರಹ್ಮಶಬ್ದದ ಶಕ್ಯಾರ್ಥವಾದ ವೇದಕ್ಕೂ ಲಕ್ಷಣಾರ್ಥವಾದ ಪರಬ್ರಹ್ಮನಿಗೂ ಪರಸ್ಪರ ಪ್ರತಿಪಾದ್ಯ-ಪ್ರತಿಪಾದಕಭಾವಸಂಬಂಧವನ್ನು ಸುಲಭವಾಗಿ ತಿಳಿಯಬಹುದು. ಹೀಗೆ ಟೀಕೆಯ ವಾಕ್ಯವನ್ನು ನೋಡಿ-ದಾಗ ಆಪಾತತಃ ಕಾಣಿಸುತ್ತದೆ.

ಆದರೆ ಇದು ತಪ್ಪು; ಟೀಕಾರಾಯರಿಗೆ ವೇದವು ಮಾತ್ರ ವಾಚ್ಯಾರ್ಥವಾಗಿದೆ ಎಂಬ ಅಭಿಪ್ರಾಯ ಸರ್ವಥಾ ಇರುವುದಿಲ್ಲ. ವೇದದಂತೆ ಪರಬ್ರಹ್ಮನೂ ಕೂಡ ವಾಚ್ಯಾರ್ಥನೇ ಆಗಿದ್ದಾನೆಂಬುದು ಅಭಿಪ್ರಾಯವಾಗಿದೆ.

ಹಾಗಾದರೆ 'ತದರ್ಥಃ' ಎಂಬ ಪದವನ್ನು ಏಕೆ ಪ್ರಯೋಗಿಸಬೇಕಿತ್ತು ? ಎಂದರೆ ಏಕಪದೋಪಾತ್ತ-ವಾದ ಅರ್ಥದ್ವಯಗಳಿಗೂ ಕೂಡ ಪರಸ್ಪರ ಅನ್ವಯವನ್ನು ತಿಳಿಯಬಹುದೆಂದು ತೋರಿಸುವುದಕ್ಕಾಗಿ ತದರ್ಥಃ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಉದಾಹರಣೆ – 'ರಾಮೇಣ ಬಾಣೇನ ಹತೋ ವಾಲಿಃ' ಎಂಬಲ್ಲಿ ರಾಮೇಣ ಎಂಬುದು ತೃತೀಯಾವಿಭಕ್ತ್ಯಂತವಾದ ಪದವಾಗಿದೆ. ಇಲ್ಲಿರುವ ಟಾ ಎಂಬ ಪ್ರತ್ಯಯಕ್ಕೆ ಕರ್ತೃತ್ವ ಎಂದರ್ಥ. ಅದರಂತೆ ಏಕತ್ವ ಎಂಬರ್ಥವೂ ಇದೆ. ಒಂದೇ ಪ್ರತ್ಯಯದಿಂದ ಪ್ರತಿಪಾದ್ಯವಾದ ಕರ್ತೃತ್ವ ಹಾಗೂ ಏಕತ್ವಗಳಿಗೆ ಪರಸ್ಪರ ಸಾಮಾನಾಧಿಕರಣ್ಯರೂಪವಾದ ಸಂಬಂಧ-ವಿರುವುದು ಶಾಬ್ದಬೋಧದಲ್ಲಿ ಕಾಣಿಸುತ್ತಿದೆ. ಹೀಗೆ ಕರ್ತೃತ್ವಕ್ಕೂ ಮತ್ತು ಏಕತ್ವಕ್ಕೂ ಪರಸ್ಪರ ಅನ್ವಯವನ್ನು ಹೇಳಿದಾಗ ಯಾವುದೇ ಪ್ರಮಾಣವಿರೋಧವು ಇರುವುದಿಲ್ಲ. ಹೀಗೆ ಯೋಗ್ಯತಾ-ಬಲದಿಂದ ಒಂದೇ ಪದದಿಂದ ತಿಳಿಯುವ ಅರ್ಥದ್ವಯಗಳಿಗೆ ಪರಸ್ಪರ ಅನ್ವಯವನ್ನು ಹೇಳಬಹುದು.

ಮೀಮಾಂಸಕರೂ ಕೂಡ 'ಯಜೇತ' ಎಂಬ ಲಿಙ್ ಪ್ರತ್ಯಯದಿಂದ ಅಪೂರ್ವತ್ವ ಹಾಗೂ ಕಾರ್ಯತ್ವ ಎಂಬೆರಡರ್ಥಗಳು ತಿಳಿಯುತ್ತವೆ. ಅವೆರಡಕ್ಕೂ ಪರಸ್ಪರ ಸಾಧ್ಯಸಾಧನಭಾವರೂಪವಾದ ಅನ್ವಯವಿದೆಯೆಂದು ಅಂಗೀಕರಿಸಿದ್ದಾರೆ. ಇದನ್ನು ಮೀಮಾಂಸಕರು 'ಏಕಪ್ರತ್ಯಯಶ್ರುತಿ' ಎಂದು ಕರೆಯುತ್ತಾರೆ.

ಪ್ರಕೃತ ಬ್ರಹ್ಮ ಎಂಬ ಒಂದೇ ಪದಕ್ಕೆ ವೇದ ಮತ್ತು ಪರಬ್ರಹ್ಮ ಎಂದು ಎರಡರ್ಥವಿದೆ. ಈ ಎರಡಕ್ಕೂ ಪರಸ್ಪರ ಅನ್ವಯವಿದೆ. ಏಕಪದಶ್ರುತಿಯಿಂದ ಯೋಗ್ಯತಾಬಲದಿಂದ ಅಥವಾ ವಿವಕ್ಷಾಬಲದಿಂದ ಬ್ರಹ್ಮ ಹಾಗೂ ವೇದಗಳಿಗೆ ಪ್ರತಿಪಾದ್ಯಪ್ರತಿಪಾದಕಭಾವರೂಪವಾದ ಸಂಬಂಧವನ್ನು ಹೇಳಬಹುದು. ಅದಕ್ಕೋಸ್ಕರ ಟೀಕೆಯಲ್ಲಿ 'ತದರ್ಥಃ' ಎಂದು ಹೇಳಿದ್ದಾರೆ ಹೊರತು ಶಕ್ಯ-ಸಂಬಂಧಾಭಿಪ್ರಾಯಕ್ಕೋಸ್ಕರ ಹೇಳಿದ್ದಾರೆಂದು ತಿಳಿಯಬಾರದು.

## ಸುಧಾಪರಿಮಳಸಾರ

ಶ್ರುತಿ-ಯುಕ್ತಿಸಂವಾದಿಯಾದುದರಿಂದ ಈ ಶಾಸ್ತ್ರವು ಪ್ರಮಾಣ ಎಂದಾಗಲಿ, ಆದರಿಂದೇನು? ಸರ್ವೋತ್ತಮಪ್ರಾಮಾಣ್ಯ ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರ "ಏವ ಪ್ರಾಮಾಣ್ಯಂ ತ್ರಿವಿಧಂ ಮಹತ್" ಎಂಬ ಗ್ರಂಥಭಾಗದಿಂದ ಏವಶಬ್ದವು 'ಬ್ರಹ್ಮಸೂತ್ರಾಣಾಂ' ಎಂಬುದರೊಂದಿಗೆ ಸಂಬಂಧ ಹೊಂದಿ ಬ್ರಹ್ಮ-ಸೂತ್ರಾಣಾಮೇವ = ಬ್ರಹ್ಮಸೂತ್ರಗಳಿಗೇ ಅತ್ಯುತ್ತಮ ಪ್ರಾಮಾಣ್ಯ ಎಂದು ಆಗುತ್ತದೆ. 'ತ್ರಿವಿಧಂ' ಎಂಬುದು ಕ್ರಿಯಾವಿಶೇಷಣ. ಆಗ ಮೂರು ರೀತಿಯಿಂದ ಪ್ರಾಮಾಣ್ಯವು ತಿಳಿಯಲ್ಪಡುತ್ತದೆ ಎಂದರ್ಥವಾಯಿತು. 'ಬ್ರಹ್ಮ-ಸೂತ್ರಾಣಾಂ' ಎಂಬಲ್ಲಿ ಬ್ರಹ್ಮಶಬ್ದಕ್ಕೆ ವೇದ ಮತ್ತು ವೇದಪ್ರತಿಪಾದ್ಯನಾದ ಪರಬ್ರಹ್ಮ ಎಂದರ್ಥ. ಸಕಲವೇದಾರ್ಥ-ನಾದ ವಿಷ್ಣುವಿನ ಸ್ವರೂಪನಿರ್ಣಯಕ್ಕಾಗಿ ಇರುವ ಸೂತ್ರಗಳೇ ಬ್ರಹ್ಮಸೂತ್ರಗಳು ಎಂದು ಇದರ ಅರ್ಥ. ಸೂತ್ರಶಬ್ದಾರ್ಥವನ್ನು "ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ । ಅಸ್ತೋಭಂ ಅನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥ ಎಂಬ ಭಾಷ್ಯದಲ್ಲಿ ಉದಾಹರಿಸಿರುವ ಆಗಮದಿಂದ ತಿಳಿಯಬೇಕು.

## ನೆನೆಪಿಡಿ

* ತ್ರಿವಿಧಂ ಎಂಬ ಪದಕ್ಕೆ ದೃಶ್ಯತೇ ಎಂಬಲ್ಲಿ ಅನ್ವಯ. ಪ್ರಾಮಾಣ್ಯಂ ಎಂಬಲ್ಲಿ ಅಲ್ಲ.

* ಬ್ರಹ್ಮಸೂತ್ರಾಣಾಂ ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ ವೇದ ಹಾಗೂ ಪರಬ್ರಹ್ಮ ಎಂದು ಎರಡು ಅರ್ಥ. ಅಥವಾ ಬ್ರಹ್ಮಪದವನ್ನು ತಂತ್ರೇಣ ಆವೃತ್ತಿಮಾಡಿಕೊಂಡು ಎರಡರ್ಥವನ್ನು ಹೇಳಬೇಕು.

* ಬ್ರಹ್ಮಸೂತ್ರಾಣಾಂ ಎಂದು ಹೇಳಿದ್ದರಿಂದ ಪರರು ಹೇಳುವ ಶಾರೀರಕಮೀಮಾಂಸಾ ಎಂಬ ಪದದ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದ್ದಾರೆ.

* ಬ್ರಹ್ಮ ಎಂಬ ಒಂದೇ ಪದದಿಂದ ತಿಳಿಯುವ ವೇದ ಮತ್ತು ಬ್ರಹ್ಮವೆಂಬ ಎರಡರ್ಥಗಳಿಗೆ ಪ್ರತಿಪಾದ್ಯಪ್ರತಿಪಾದಕಭಾವರೂಪವಾದ ಪರಸ್ಪರ ಅನ್ವಯವನ್ನು ತಿಳಿಯಬಹುದು.

## ಶಾರೀರಕಮೀಮಾಂಸಾ ಎಂದರೆ ಈಶ್ವರನು ಸಕಲಗುಣಪರಿಪೂರ್ಣತ್ವಾದಿಗುಣವುಳ್ಳವನಾಗಿದ್ದಾನೆಂಬ ಮೀಮಾಂಸೆ

**ಶ್ರೀಮನ್ನ್ಯಾಯಸುಧಾ – ಏತೇನ ಏತಚ್ಛಾಸ್ತ್ರವಾಚಿನಃ ಶಾರೀರಕಶಬ್ದಸ್ಯ 'ಶರೀರಮೇವ ಶರೀರಕಂ, ತತ್ರ ಭಾವಃ ಶಾರೀರಕೋ ಜೀವಃ । ತಮಧಿಕೃತ್ಯ ಕೃತೋಽಯಂ ಗ್ರಂಥಃ ಶಾರೀರಕಃ' ಇತಿ ವ್ಯಾಖ್ಯಾನಂ ನಿರಸ್ತಂ ಭವತಿ । ಬ್ರಹ್ಮಸೂತ್ರಶಬ್ದಾರ್ಥೇನ ವಿರುದ್ಧತ್ವಾತ್ । 'ತ್ವಂಪದಾಭಿಧೇಯಸ್ಯ ತತ್ಪದಾಭಿಧೇಯಬ್ರಹ್ಮರೂಪತಾಮೀಮಾಂಸಾ' ಇತಿ ವ್ಯಾಖ್ಯಾನಾದವಿರೋಧ ಇತಿ ಚೇನ್ನ । ಅಸಂಭವಾತ್ । 'ನ ಹಿ ಜನ್ಮಾದಿಸೂತ್ರಾಣಿ ಅಭೇದಪರಾಣಿ । ಪ್ರತ್ಯುತ ತನ್ನಿರಾಸಪರಾಣಿ' ಇತಿ ವಕ್ಷ್ಯತೇ । ಅತಃ ಶಾರೀರಕಃ ಪರಮಾತ್ಮೈವ । ಯಥೋಕ್ತಮ್ 'ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತೌ' ಇತಿ । ತಸ್ಯ ಸಕಲಗುಣಪೂರ್ಣತ್ವಾದಿಮೀಮಾಂಸೈವ ಶಾರೀರಕಮೀಮಾಂಸಾ । ತಥಾ ಚೋಕ್ತಂ ಪುರಾಣೇ 'ಸರ್ವದೋಷವಿಹೀನತ್ವಮ್' ಇತ್ಯಾದಿ ॥**

ಹೀಗೆ ಅನುವ್ಯಾಖ್ಯಾನದಲ್ಲಿ 'ಬ್ರಹ್ಮಸೂತ್ರಾಣಿ' ಎಂಬ ಶಬ್ದವನ್ನು ಉಲ್ಲೇಖ ಮಾಡಿದ್ದರಿಂದ ಪರರು ಹೇಳುವ ಶಾರೀರಕಮೀಮಾಂಸಾ ಎಂಬುದರ ಅರ್ಥವನ್ನು ನಿರಾಕರಣೆ ಮಾಡಿದಂತಾಯಿತು. ಪರರು ಹೀಗೆ ಹೇಳುತ್ತಾರೆ.

ಈ ಶಾಸ್ತ್ರಕ್ಕೆ 'ಶಾರೀರಕ' ಎಂದು ಹೆಸರು. ಶಾರೀರಕ ಎಂದರೆ ಶರೀರವೇ ಶರೀರಕ ಎನಿಸುತ್ತದೆ. ಆದರಲ್ಲಿ ಹುಟ್ಟಿರುವವ ಶಾರೀರಕ ಎನಿಸುತ್ತಾನೆ. ಅಂಥ ಜೀವನ ವಿಷಯದಲ್ಲಿ ರಚಿತವಾಗಿರುವುದರಿಂದ ಈ ಶಾಸ್ತ್ರಕ್ಕೆ ಶಾರೀರಕ ಮೀಮಾಂಸಾ ಎಂದು ಕರೆಯುತ್ತಾರೆ.

ಪರರ ಈ ವ್ಯಾಖ್ಯಾನವನ್ನು ಈಗ ನಿರಾಕರಣೆ ಮಾಡಿದಂತಾಯಿತು. ಅದು ಹೀಗೆ – ಪರರು ಹೇಳುವ ಶಾರೀರಕಶಬ್ದದ ಅರ್ಥಕ್ಕೆ ಬ್ರಹ್ಮಸೂತ್ರಶಬ್ದದ ಅರ್ಥದಿಂದ ವಿರೋಧವು ಬರುತ್ತದೆ.

ತ್ವಂಪದವಾಚ್ಯನಾದ ಜೀವನೇ ತತ್ಪದವಾಚ್ಯನಾದ ಬ್ರಹ್ಮರೂಪನಾಗಿದ್ದಾನೆ ಎಂಬುದರ ಮೀಮಾಂಸೆಯನ್ನೇ ಶಾರೀರಕಮೀಮಾಂಸಾ ಎನ್ನುತ್ತೇವೆ.

ಪರರ ಈ ಸಮರ್ಥನೆಯೂ ಕೂಡ ಅಯುಕ್ತವಾಗಿದೆ. ಏಕೆಂದರೆ ಜೀವನು ಬ್ರಹ್ಮ-ಸ್ವರೂಪನಾಗಿದ್ದಾನೆಂಬುದು ಅಸಂಭಾವಿತವಾಗಿದೆ. 'ಜನ್ಮಾದ್ಯಸ್ಯ ಯತಃ' ಮೊದಲಾದ ಸೂತ್ರಗಳು ಅಭೇದವನ್ನು ಪ್ರತಿಪಾದನೆ ಮಾಡುತ್ತಲೇ ಇಲ್ಲ. ಮತ್ತೇನೆಂದರೆ ಅಭೇದವನ್ನು ನಿರಾಕರಣೆ ಮಾಡಿ ಭೇದವನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದನ್ನು ಮುಂದೆ ಸಮರ್ಥಿಸುತ್ತೇವೆ. ಆದ್ದರಿಂದ 'ಶಾರೀರಕ' ಎಂದರೆ ಪರಮಾತ್ಮನೇ ಆಗಿದ್ದಾನೆ. 'ಶಾರೀರೌ ತೌ ಉಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತಃ' ಜೀವ ಮತ್ತೆ ಪರಮಾತ್ಮರಿಬ್ಬರು ಶಾರೀರ ಎಂದು ಕರೆಸಿಕೊಳ್ಳುತ್ತಾರೆ. ಆ ಪರಮಾತ್ಮನು ಸಕಲಗುಣಪರಿಪೂರ್ಣನಾಗಿದ್ದಾನೆ, ನಿರ್ದುಷ್ಟನಾಗಿದ್ದಾನೆ ಎಂಬ ಮೀಮಾಂಸೆಯೇ 'ಶಾರೀರಕಮೀಮಾಂಸಾ' ಎಂದು ಕರೆಸಿ-ಕೊಳ್ಳುತ್ತದೆ. 'ಸರ್ವದೋಷವಿಹೀನತ್ವಮ್' ಎಂಬ ಪುರಾಣದ ವಚನವೂ ಕೂಡ ಇದನ್ನೇ ಸ್ಪಷ್ಟಪಡಿಸುತ್ತದೆ.

* * * * *

## ಶಾರೀರಕಮೀಮಾಂಸಾ ಎಂದರೆ ಬ್ರಹ್ಮನ ಗುಣಪರಿಪೂರ್ಣತ್ವದ ಮೀಮಾಂಸಾ ಎಂಬುದಕ್ಕೆ ಪ್ರಮಾಣ

ಪರಿಮಳ – ಏತೇನೇತಿ ॥ 'ಬ್ರಹ್ಮಸೂತ್ರಪದೋಪಾದಾನೇನ' ಇತ್ಯರ್ಥಃ । ತ್ವಂಪದೇತಿ ॥ 'ತತ್ತ್ವಮಸೀತಿವಾಕ್ಯಸ್ಯ' ಇತ್ಯರ್ಥಃ । ಯಥೋಕ್ತಮಿತಿ ॥ ಸಪ್ತಮೇ ಗೀತಾಭಾಷ್ಯೇ – ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತೌ' ಇತಿ । 'ಪರಮಸ್ತಥಾ' ಇತಿ ಪಾಠೋ ಲೇಖಕಾಯತ್ತಃ । ಸರ್ವದೋಷವಿಹೀನತ್ವಮಿತಿ ॥

'ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಚ ।
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।
ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ॥'

ಇತಿ ಭಾರತತಾತ್ಪರ್ಯನಿರ್ಣಯೋಕ್ತಪುರಾಣೇ ಉಕ್ತಮಿತ್ಯರ್ಥಃ ।

'ಏತೇನೇತಿ' – ಬ್ರಹ್ಮಸೂತ್ರವೆಂಬ ಪದವನ್ನು ಪ್ರಯೋಗಿಸಿರುವುದರಿಂದ ಎಂದರ್ಥ.

'ತ್ವಂಪದಾಭಿಧೇಯಸ್ಯ' – 'ತತ್ವಮಸಿ ಎಂಬ ವಾಕ್ಯದಲ್ಲಿರುವ ತ್ವಂಪದದಿಂದ ಪ್ರತಿಪಾದ್ಯನಾದ' ಎಂದರ್ಥ.

'ಯಥೋಕ್ತಮ್' – 'ಶಾರೀರೌ ತೌ' ಇತ್ಯಾದಿವಾಕ್ಯವು ಗೀತಾಭಾಷ್ಯದ ಏಳನೆಯ ಅಧ್ಯಾಯದಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಕೆಲವು ಪುಸ್ತಕಗಳಲ್ಲಿ 'ಜೀವಶ್ಚ ಪರಮಸ್ತಥಾ' ಎಂಬ ಪಾಠವಿದೆ. ಇದು ಲೇಖಕರಿಂದ ಸೇರಿಸಿದ್ದು. (ನಿಜವಾದ ಪಾಠವಲ್ಲ).

'ಸರ್ವದೋಷವಿಹೀನತ್ವಮ್' –

'ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಚ ।
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇತ್ಯಶಾ ತಥಾ ।
ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ॥'

"ಈಶ್ವರನು ಸಕಲದೋಷರಹಿತನಾಗಿದ್ದಾನೆ. ಸಕಲಗುಣಪರಿಪೂರ್ಣನಾಗಿದ್ದಾನೆ. ತನ್ನೆಲ್ಲ ರೂಪಗಳಿಂದ ಅಭಿನ್ನನಾಗಿದ್ದಾನೆ. ಜೀವರಿಂದ ನಿತ್ಯವಾಗಿಯೂ ಭಿನ್ನನಾಗಿದ್ದಾನೆ. ಹೀಗೆ ಸಕಲವೇದಪ್ರತಿಪಾದ್ಯನಾಗಿದ್ದಾನೆಂದು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿಸಲಾಗಿದೆ. ಮುಕ್ತರಲ್ಲೂ ಕೂಡ ತಾರತಮ್ಯವಿದೆ. ಈ ಜ್ಞಾನದಿಂದ ಮೋಕ್ಷವು ಪ್ರಾಪ್ತವಾಗುತ್ತದೆ" ಹೀಗೆ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ ಪುರಾಣವಾಕ್ಯವು ಹೇಳುತ್ತಿದೆ. ಈ ಬಗೆಯ ಮೀಮಾಂಸೆಯೇ ಬ್ರಹ್ಮಮೀಮಾಂಸಾ ಎಂದು ಅಥವಾ ಶಾರೀರಕಮೀಮಾಂಸಾ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಶಾರೀರಕಮೀಮಾಂಸಾ ಎಂದರೆ ಬ್ರಹ್ಮಮೀಮಾಂಸಾ ಎಂದರ್ಥ.

## ಪಂಚಪಾದಿಯಲ್ಲಿ ಬ್ರಹ್ಮಸೂತ್ರಪದದ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ – ಏವಂ ಬ್ರಹ್ಮಸೂತ್ರಪದಂ ವ್ಯಾಖ್ಯಾ, ತದ್ಗ್ರಹೇಣ ಪಂಚಪಾದ್ಯುಕ್ತಶಾರೀರಕಮೀಮಾಂಸಾಪದಾಂತರ್ಗತಶಾರೀರಕಪದವ್ಯಾಖ್ಯಾನಂ ನಿರಸ್ತಮ್ ಇತ್ಯಾಹ – ಏತೇನೇತಿ ॥ ಬ್ರಹ್ಮೇತಿ ॥ ಜೀವಮಧಿಕೃತ್ಯ ಪ್ರವೃತ್ತೇ ಗ್ರಂಥೇ ಪರಬ್ರಹ್ಮಸ್ವರೂಪನಿರ್ಣಯಾರ್ಥಸೂತ್ರತ್ವಾಭಾವೇನ ಬ್ರಹ್ಮಸೂತ್ರಶಬ್ದಾರ್ಥವಿರುದ್ಧತ್ವಾತ್ ಇತ್ಯರ್ಥಃ। ನನು 'ಶಾರೀರಕಸ್ಯ ತ್ವಂಪದಾಭಿಧೇಯಸ್ಯ ಜೀವಸ್ಯ ತತ್ಪದಾಭಿಧೇಯಬ್ರಹ್ಮರೂಪತಾಪ್ರತಿಪಾದಕಮೀಮಾಂಸಾಯಾ ಅಪಿ ಶಾರೀರಕಜೀವಮಧಿಕೃತ್ಯ ಪ್ರವೃತ್ತತ್ವಾದ್, ಬ್ರಹ್ಮವಿಷಯಕಸೂತ್ರತ್ವಸಂಭವಾಚ್ಚ, ನ ವಿರೋಧಃ' ಇತಿ ಶಂಕತೇ – ತ್ವಂಪದೇತಿ ॥

'ಬ್ರಹ್ಮಸೂತ್ರ' ಎಂಬ ಪದಕ್ಕೆ ವ್ಯಾಖ್ಯಾನ ಮಾಡಿದ್ದಾಯಿತು. ಅನುವ್ಯಾಖ್ಯಾನದಲ್ಲಿ 'ಬ್ರಹ್ಮಸೂತ್ರಾಣಿ' ಎಂಬ ಪದವನ್ನು ಗ್ರಹಣಮಾಡಿದ್ದರಿಂದ ಪಂಚಪಾದಿಯಲ್ಲಿ ಹೇಳಲ್ಪಟ್ಟ 'ಶಾರೀರಕಮೀಮಾಂಸಾ' ಎಂಬುದರಲ್ಲಿ ಸೇರಿರುವ 'ಶಾರೀರಕ' ಎಂಬ ಪದದ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದಂತಾಯಿತು. ಇದನ್ನು 'ಏತೇನ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

'ಬ್ರಹ್ಮಸೂತ್ರಶಬ್ದಾರ್ಥೇನ' – ನಿಮ್ಮ ಪ್ರಕಾರ ಈ ಗ್ರಂಥವು ಜೀವನನ್ನು ಪ್ರತಿಪಾದನೆ ಮಾಡಲು ಹೊರಟಿದೆ ಎಂದಾಯಿತು. ಆಗ ಪರಬ್ರಹ್ಮನ ಸ್ವರೂಪದ ನಿರ್ಣಯಕ್ಕೋಸ್ಕರ ಯಾವುದೇ ಸೂತ್ರಗಳು ಹೊರಟಿಲ್ಲ ಎಂದಂತಾಯಿತು. ಇದು ಬ್ರಹ್ಮಸೂತ್ರ ಎಂಬ ಶಬ್ದದ ಅರ್ಥಕ್ಕೆ ವಿರುದ್ಧವಾಗಿದೆ ಎಂದರ್ಥ.

ಅದ್ವೈತಿಗಳು ಹೀಗೆ ಸಮರ್ಥಿಸುತ್ತಾರೆ – 'ಶಾರೀರಕ' ಎಂದರೆ ತ್ವಂಪದದಿಂದ ಪ್ರತಿಪಾದ್ಯನಾದ ಜೀವ ಎಂದೇ ಅರ್ಥ. ಇವನಿಗೆ ತತ್‌ಪದದಿಂದ ಪ್ರತಿಪಾದ್ಯನಾದ ಬ್ರಹ್ಮಸ್ವರೂಪದಿಂದ ಅಭೇದವನ್ನು ಈ ಶಾಸ್ತ್ರವು ಪ್ರತಿಪಾದನೆ ಮಾಡುತ್ತಿದೆ. ಹೀಗೆ ಜೀವಬ್ರಹ್ಮಾಭೇದಕಪ್ರತಿಪಾದಕವಾಗಿರುವುದರಿಂದ ಸೂತ್ರ-ಗಳಿಗೆ ಬ್ರಹ್ಮವಿಷಯಕತ್ವವೂ ಕೂಡ ಯುಕ್ತವಾಗುತ್ತದೆ. ಆದ್ದರಿಂದ ಯಾವುದೇ ವಿರೋಧದ ಆಶಂಕೆಗೆ ಅವಕಾಶವಿಲ್ಲ ಎಂಬುದಾಗಿ. 'ತ್ವಂಪದ' ಇತ್ಯಾದಿ ವಾಕ್ಯದಿಂದ ಈ ಅದ್ವೈತಿಗಳ ಆಕ್ಷೇಪವನ್ನು ತೋರಿಸಿದ್ದಾರೆ.

## ಭಾಮತಿಯಲ್ಲಿ ಬ್ರಹ್ಮಸೂತ್ರಪದದ ವ್ಯಾಖ್ಯಾನದ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – ಯದ್ವಾ । ನನ್ವಸ್ತು ಶಾರೀರಕಂ ಜೀವಮಧಿಕೃತ್ಯ ಕೃತೋ ಗ್ರಂಥಃ ಶಾರೀರಕಸ್ತದ್ರೂಪಾ ಮೀಮಾಂಸಾ ಇತಿ ಪಂಚಪಾದೀಯವ್ಯಾಖ್ಯಾನಸ್ಯೇದಂ ದೂಷಣಮ್ । 'ಶರೀರಮೇವ ಶರೀರಕಮ್ । ತತ್ರ ನಿವಾಸೀ ಶಾರೀರಕೋ ಜೀವಾತ್ಮಾ । ತಸ್ಯ ತ್ವಂಪದಾಭಿಧೇಯಸ್ಯ ತತ್ಪದಾಭಿಧೇಯಪರಮಾತ್ಮರೂಪತಾ ಮೀಮಾಂಸಾ ತಥೋಕ್ತಾ' ಇತಿ ಭಾಮತೀವ್ಯಾಖ್ಯಾನೇ ನೇದಂ ದೂಷಣಂ ಸಂಭವತಿ ಇತ್ಯಾಶಂಕತೇ – ತ್ವಂಪದೇತಿ ॥

ಅಥವಾ, 'ತ್ವಂಪದಾಭಿಧೇಯಸ್ಯ' ಇತ್ಯಾದಿ ವಾಕ್ಯಕ್ಕೆ ಮತ್ತೊಂದು ರೀತಿಯಲ್ಲಿ ಅವತಾರಿಕೆ-ಯನ್ನು ತಿಳಿಯಬಹುದು. – 'ಶರೀರೇ ಭವಃ ಶಾರೀರಕಃ = ಜೀವಃ, ಶಾರೀರಕಂ ಜೀವಮಧಿಕೃತ್ಯ ಕೃತಃ ಗ್ರಂಥಃ = ಶಾರೀರಕಃ, ತದ್ರೂಪಃ ಮೀಮಾಂಸಾ' ಶರೀರದಲ್ಲಿ ಹುಟ್ಟಿರುವ ಜೀವನು ಶಾರೀರಕ ಎಂದು ಕರೆಸಿಕೊಳ್ಳುತ್ತಾನೆ. ಅವನನ್ನು ಕುರಿತು ಹೊರಟಿರುವ ಗ್ರಂಥವು ಕೂಡ ಶಾರೀರಕ ಎಂದು ಕರೆಸಿ-ಕೊಳ್ಳುತ್ತದೆ. ಆ ಶಾರೀರಕನಾದ ಜೀವನ ಮೀಮಾಂಸೆಯೇ ಶಾರೀರಕಮೀಮಾಂಸಾ ಎಂಬುದಾಗಿ ಪಂಚ-ಪಾದಿಯಲ್ಲಿ ವಿವರಣಕಾರನು ವ್ಯಾಖ್ಯಾನ ಮಾಡಿದ್ದಾನೆ. ಇದು ಬ್ರಹ್ಮಸೂತ್ರಪದದಿಂದ ವಿರುದ್ಧವಾಗಿದೆ ಎಂಬ ದೋಷವನ್ನು ಪಂಚಪಾದಿಗೆ ಬೇಕಾದರೆ ಬರಲಿ, ಭಾಮತೀಕಾರನಿಗೆ ಬರುವುದಿಲ್ಲ. ಏಕೆಂದರೆ ಭಾಮತೀಕಾರ ಹೀಗೆ ಹೇಳಿದ್ದಾನೆ. 'ಶರೀರಮೇವ ಶರೀರಕಮ್ । ತತ್ರ ನಿವಾಸೀ ಶಾರೀರಕೋ ಜೀವಾತ್ಮಾ, ತಸ್ಯ ತ್ವಂಪದಾಭಿಧೇಯಸ್ಯ ತತ್ಪದಾಭಿಧೇಯಪರಮಾತ್ಮರೂಪತಾ ಮೀಮಾಂಸಾ ತಥೋಕ್ತಾ'

ಶರೀರವೇ ಶರೀರಕ; ಅಲ್ಲಿರುವ ಜೀವನು ಶಾರೀರಕ. ಅಂಥ ತ್ವಂಪದಾಭಿಧೇಯನಾದ ಜೀವನಿಗೆ ತತ್ಪದಾಭಿಧೇಯವಾದ ಪರಮಾತ್ಮರೂಪತ್ವದ ವಿಚಾರವೇ ಶಾರೀರಕಮೀಮಾಂಸಾ ಎಂಬುದು ಭಾಮತಿಯ ವ್ಯಾಖ್ಯಾನ. ಭಾಮತೀಕಾರನ ಈ ವ್ಯಾಖ್ಯಾನವನ್ನೂ ಕೂಡ 'ತ್ವಂಪದಾಭಿಧೇಯಸ್ಯ' ಇತ್ಯಾದಿ ವಾಕ್ಯದಿಂದಲೇ ಆಶಂಕಿಸಿದ್ದಾರೆ.

ವಿವರಣೆ – ಶಾರೀರಕಮೀಮಾಂಸಾ ಎಂಬ ಪದಕ್ಕೆ ಪಂಚಪಾದಿಯಲ್ಲಿ ಹೇಳಿದ ವ್ಯಾಖ್ಯಾನಕ್ಕಿಂತ ಭಾಮತಿಯಲ್ಲಿ ಹೇಳಿದ ವ್ಯಾಖ್ಯಾನದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ. ಪಂಚಪಾದಿಯಲ್ಲಿ ಶಾರೀರಕ ಎಂದರೆ ಜೀವ ಎಂಬರ್ಥವನ್ನು ವಿವಕ್ಷಿಸಲಾಗಿದೆ. ಶರೀರದ ಮೂಲಕ ಹುಟ್ಟಿರುವ ಜೀವನಿಗೆ ಶಾರೀರಕ ಎನ್ನಲಾಗಿದೆ. ಆದರೆ ಭಾಮತಿಯಲ್ಲಿ ಶರೀರವನ್ನೇ ಶರೀರಕ ಎಂಬ ಪದದಿಂದ ವಿವಕ್ಷಿಸಿ ಅಲ್ಲಿ ನೆಲೆಸಿರುವ ಜೀವನನ್ನು ಶಾರೀರಕ ಎಂದು ಗ್ರಹಣ ಮಾಡಲಾಗಿದೆ.

## ಪರರಿಗೆ ಬ್ರಹ್ಮಶಬ್ದಾರ್ಥದಿಂದ ವಿರೋಧ ಹಾಗೂ ಅಸಂಭವದೋಷಗಳು

ವಾಕ್ಯಾರ್ಥಚಂದ್ರಿಕಾ – ಯದ್ವಾ ವ್ಯಾಖ್ಯಾನದ್ವಯಸ್ಯಾನತಿವಿಶೇಷತಯಾ ವ್ಯಾಖ್ಯಾನ-ದ್ವಯಮ್ 'ಏತೇನ' ಇತ್ಯಾದಿನಾ ಸಮ್ಮುಗ್ಧತಯಾಽನೂದ್ಯ, ಬ್ರಹ್ಮಸೂತ್ರಶಬ್ದಾರ್ಥವಿರೋಧೇನ ಅಪಾಕೃತ್ಯ, 'ತ್ವಂಪದೇ'ತ್ಯಾದಿನೋಭಯಾಭಿಪ್ರಾಯವಿಷ್ಕರಣಪೂರ್ವಮ್ 'ಅಸಂಭಾವಾತ್' ಇತಿ ದೂಷಣಾಭಿಧಾನಮಿತಿ ದ್ರಷ್ಟವ್ಯಮ್ । ಅಸಂಭವಾದಿತಿ ॥ ಏವಂ ಚ ಜನ್ಮಾದಿಸೂತ್ರೇಷು ತ್ವದುಕ್ತಬ್ರಹ್ಮಶಬ್ದಾರ್ಥಾಭಾವೇನ ತಸ್ಯ ಬ್ರಹ್ಮಸೂತ್ರಾರ್ಥಶಬ್ದತಯಾ ವಕ್ತುಮಶಕ್ಯತ್ವೇ ಅಸ್ಮದುಕ್ತಾರ್ಥ-ಕತ್ವೇ ವಕ್ತವ್ಯೇ, ತದ್ವಿರೋಧಸ್ತದವಸ್ಥ ಇತಿ ಭಾವಃ। ಅತ ಇತಿ ॥ 'ಪರೋಕ್ತಾರ್ಥಸ್ಯಾನುಪಪನ್ನತ್ವಾತ್' ಇತಿ ಭಾವಃ। ಬ್ರಹ್ಮಸೂತ್ರಶಬ್ದಾರ್ಥವಿರೋಧಾಸಂಭವಯೋಃ ಪರಪಕ್ಷ ಇವ ಸ್ವಪಕ್ಷೇಽಭಾವಾದಿತಿ ಭಾವಃ । ನ ಕೇವಲಂ ಸ್ವಪಕ್ಷೇಽಸಂಭವಾಭಾವೋ ಅಪಿ ತು ಶಾರೀರಕಮೀಮಾಂಸಾಶಬ್ದಾರ್ಥ-ತಯಾಽಸ್ಮದುಕ್ತಾರ್ಥಃ ಪ್ರಮಾಣಿಕಶ್ಚೇತ್ಯಾಹ – ತಥಾ ಚೇತಿ ॥

ಅಥವಾ, ಹೀಗೂ ಹೇಳಬಹುದು – ಪಂಚಪಾದಿಯ ವ್ಯಾಖ್ಯಾನಕ್ಕೂ ಭಾಮತಿಯ ವ್ಯಾಖ್ಯಾನಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಆದ್ದರಿಂದ ಈ ಎರಡೂ ಬಗೆಯ ವ್ಯಾಖ್ಯಾನಗಳನ್ನು "ಏತೇನ" ಇತ್ಯಾದಿ ವಾಕ್ಯದಿಂದ ಸಮ್ಮುಗ್ಧವಾಗಿ ಗ್ರಂಥಕಾರರು ಅನುವಾದ ಮಾಡಿದ್ದಾರೆ. ಮತ್ತು ಬ್ರಹ್ಮಸೂತ್ರ-

ಶಬ್ದಾರ್ಥದಿಂದ ವಿರೋಧವನ್ನು ಹೇಳಿ ನಿರಾಕರಣೆಯನ್ನು ಮಾಡಿದ್ದಾರೆ. 'ತ್ವಂಪದ' ಇತ್ಯಾದಿವಾಕ್ಯದಿಂದ ಇಬ್ಬರ ಅಭಿಪ್ರಾಯವನ್ನು ಸ್ಪಷ್ಟಪಡಿಸುವ ಮೂಲಕ 'ಅಸಂಭವಾತ್' ಎಂಬುದಾಗಿ ಅಸಂಭವ ದೋಷವನ್ನು ಹೇಳಿದ್ದಾರೆ.

'ಅಸಂಭವಾತ್' – ಜನ್ಮಾದಿ ಸೂತ್ರಗಳಲ್ಲಿ ವಿಷ್ಣುವೇ ಬ್ರಹ್ಮಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಜೀವನಿಗಿಂತ ಭಿನ್ನನಾಗಿದ್ದಾನೆಂದು ಸಮರ್ಥಿಸಲಾಗುತ್ತದೆ. ಇದರಿಂದ ಪರರು ಹೇಳುವ ಬ್ರಹ್ಮಶಬ್ದದ ಅರ್ಥವು ಅಯುಕ್ತವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಅದ್ವೈತಿಗಳ ಬ್ರಹ್ಮಶಬ್ದದ ಅರ್ಥವನ್ನು ಹೇಳಲು ಅಶಕ್ಯವಾಗಿರುವುದರಿಂದ ನಾವು ಹೇಳುವ ಬ್ರಹ್ಮಶಬ್ದದ ಅರ್ಥವೇ ಸಾಧುವಾಗಿದೆ. ಹಾಗಾಗಿ ಬ್ರಹ್ಮಶಬ್ದಾರ್ಥದ ವಿರೋಧವು ಅದ್ವೈತವ್ಯಾಖ್ಯಾನಕ್ಕೆ ಬಂದೇ ಬರುತ್ತದೆ ಎಂದಭಿಪ್ರಾಯ.

"ಅತಃ" – ಪರರು ಹೇಳಿರುವ ಬ್ರಹ್ಮಶಬ್ದದ ಅರ್ಥವು ಅನುಪಪನ್ನವಾಗಿರುವುದರಿಂದ ಎಂದರ್ಥ.

ಬ್ರಹ್ಮಸೂತ್ರಶಬ್ದಾರ್ಥದ ವಿರೋಧ ಹಾಗೂ ಬ್ರಹ್ಮಶಬ್ದಾರ್ಥಕ್ಕೆ ಅಸಂಭವ ದೋಷಗಳು ಪರಪಕ್ಷದಲ್ಲಷ್ಟೇ ಬರುತ್ತವೆ. ಸಿದ್ಧಾಂತಪಕ್ಷದಲ್ಲಿ ಬರುವುದಿಲ್ಲ ಎಂದಭಿಪ್ರಾಯ.

ಸ್ವಪಕ್ಷದಲ್ಲಿ ಅಸಂಭವದೋಷವಿಲ್ಲ ಎಂದಷ್ಟೇ ಅಲ್ಲ 'ಶಾರೀರಕಮೀಮಾಂಸಾ' ಶಬ್ದಾರ್ಥತ್ವೇನ ಹೇಳಿದ್ದೂ ಕೂಡ ಪ್ರಾಮಾಣಿಕವೇ ಆಗಿದೆ ಎಂಬುದನ್ನು "ತಥಾ ಚ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

## ಶಾರೀರ ಎಂಬಲ್ಲಿರುವ ತದ್ಧಿತಪ್ರತ್ಯಯಕ್ಕೆ ವಾಸ ಎಂದರ್ಥ

**ಯಾದುಪತ್ಯ– ಬ್ರಹ್ಮಮೀಮಾಂಸಾಶಬ್ದಸ್ಯೋಕ್ತವಿರೋಧಪರಿಹಾರಾಯ ವ್ಯಾಖ್ಯಾನಾಂತರಮಾಶಂಕತೇ – ತ್ವಂಪದಾಭಿಧೇಯಸ್ಯ ಇತಿ ॥ ಶಾರೀರಾವಿತಿ ॥ ತದ್ಧಿ ತಸ್ಯ ಭಾವಾರ್ಥಕತ್ವಾನುಪಪತ್ತ್ಯಾ ವಾಸಾದ್ಯರ್ಥತಾ ಸ್ವೀಕಾರ್ಯಾ ಇತಿ ಭಾವಃ। ಸರ್ವದೋಷವಿಹೀನತ್ವಮಿತ್ಯಾದೀತಿ ॥**

'ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಚ।
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ।'

ಇತ್ಯಾದಿನಾ ಪುರಾಣೇನ ಸಕಲಗುಣಪೂರ್ಣತ್ವಾದಿಮೀಮಾಂಸಾರೂಪತ್ವಂ ಸೂತ್ರಾಣಾ-ಮುಕ್ತಮಿತ್ಯರ್ಥಃ ॥

"ಬ್ರಹ್ಮಮೀಮಾಂಸಾ" ಎಂಬ ಶಬ್ದಕ್ಕೆ ಹಿಂದೆ ಹೇಳಿದ ವಿರೋಧವನ್ನು ಪರಿಹರಿಸಲು ಮತ್ತೊಂದು ವ್ಯಾಖ್ಯಾನವನ್ನು 'ತ್ವಂಪದಾಭಿಧೇಯಸ್ಯ' ಎಂಬುದಾಗಿ ಆಶಂಕಿಸುತ್ತಿದ್ದಾರೆ. ಶಾರೀರ ಎಂಬ ಶಬ್ದದಲ್ಲಿರುವ ತದ್ಧಿತಪ್ರತ್ಯಯಕ್ಕೆ ಅಭಿಮಾನವುಳ್ಳವನು ಎಂಬರ್ಥವು ಅಥವಾ ಶರೀರದಿಂದ ಹುಟ್ಟಿದವನು ಎಂಬರ್ಥವು ಅನುಪಪನ್ನವಾಗಿದೆ. 'ವಾಸವಾಗಿದ್ದಾನೆ' ಎಂಬರ್ಥವನ್ನು ಮಾತ್ರ ಸ್ವೀಕರಿಸಬಹುದು.

"ಸರ್ವದೋಷವಿಹೀನತ್ವಮ್" –

'ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಚ ।
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।'

"ವಿಷ್ಣುವು ಸಕಲಗುಣಪರಿಪೂರ್ಣನಾಗಿದ್ದಾನೆ. ಸರ್ವದೋಷರಹಿತನಾಗಿದ್ದಾನೆ. ಸಕಲ ತನ್ನ ರೂಪಗಳಿಂದ ಅಭಿನ್ನನಾಗಿದ್ದಾನೆ. ನಿರಂತರ ಜೀವಭೇದವನ್ನೇ ಹೊಂದಿದ್ದಾನೆ. ಹೀಗೆ ವೇದಪ್ರತಿಪಾದ್ಯ-ನಾಗಿದ್ದಾನೆಂದು ಬ್ರಹ್ಮಸೂತ್ರಗಳು ಪ್ರತಿಪಾದನೆ ಮಾಡುತ್ತಿವೆ" ಇತ್ಯಾದಿಯಾದ ಪುರಾಣವಚನದಿಂದ ಸಕಲಗುಣಪರಿಪೂರ್ಣತ್ವಾದಿ ಮೀಮಾಂಸಾರೂಪತ್ವವು ಬ್ರಹ್ಮಸೂತ್ರಗಳಿಗಿದೆ ಎಂದು ಹೇಳಿದ್ದಾರೆ ಎಂದರ್ಥ.

## ಸುಧಾಪರಿಮಳಸಾರ

"ಬ್ರಹ್ಮಸೂತ್ರ" ಎಂಬ ಪದವನ್ನು ಹೇಳಿದುದರಿಂದ ಇದೇ ಶಾಸ್ತ್ರದ ಹೆಸರಾದ ಶಾರೀರಕ ಎಂಬಲ್ಲಿ ಶರೀರವೇ ಶರೀರಕ ಆ ಶರೀರಕದಲ್ಲಿರುವವನೇ "ಜೀವ" ಎಂಬ ವ್ಯುತ್ಪತ್ತಿಯಿಂದ ಶರೀರದಲ್ಲಿರತಕ್ಕ ಜೀವನಿಗೆ ಸಂಬಂಧಿಸಿದ ಗ್ರಂಥ ಎಂಬ ವ್ಯಾಖ್ಯಾನವನ್ನು ನಿರಾಕರಣ ಮಾಡಿದಂತಾಗುತ್ತದೆ. ಹಾಗಿದ್ದಲ್ಲಿ ಬ್ರಹ್ಮಸೂತ್ರಶಬ್ದದ 'ಸಕಲವೇದಾರ್ಥ-ವಾದ ಪರಬ್ರಹ್ಮಸ್ವರೂಪನಿರ್ಣಾಯಕ ಶಾಸ್ತ್ರ' ಎಂಬೀ ಅರ್ಥಕ್ಕೆ ವಿರುದ್ಧವೆನಿಸುತ್ತದೆ.

ಆಕ್ಷೇಪ—'ತತ್ವಮಸಿ' ಎಂಬ ಶ್ರುತಿಯಲ್ಲಿ ಹೇಳಿದ ತ್ವಂಪದವಾಚ್ಯನಾದ ಜೀವನಿಗೆ ತತ್‌ಪದದಿಂದ ವಾಚ್ಯನಾದ ಬ್ರಹ್ಮನ ಅಭೇದದ ಮೀಮಾಂಸೆ ಎಂಬುದು ಶಾರೀರಕಮೀಮಾಂಸಾಪದದ ಅರ್ಥವೆಂದಿಟ್ಟುಕೊಂಡಾಗ ಶಾರೀರಶಬ್ದಕ್ಕೆ ಜೀವ ಎಂದರ್ಥೈಸಲು ವಿರೋಧವೇನಿಲ್ಲ. ಏಕೆಂದರೆ ಜೀವಬ್ರಹ್ಮರಿಗೆ ಅಭೇದ ಇರುವುದರಿಂದ ಬ್ರಹ್ಮವಿಷಯಕಜಿಜ್ಞಾಸಾ ಎಂದರೆ ಬ್ರಹ್ಮಾಭಿನ್ನನಾದ ಜೀವವಿಷಯಕಜಿಜ್ಞಾಸಾ ಎಂದು ಹೇಳಿದಂತೆ ಆಗುತ್ತದೆ.

ಸಮಾಧಾನ—ಜೀವಬ್ರಹ್ಮರ ಅಭೇದಪರ ಶಾಸ್ತ್ರ ಬ್ರಹ್ಮಸೂತ್ರ ಎಂಬ ವ್ಯಾಖ್ಯಾನವೇ ಅಸಂಭಾವಿತ. ಜೀವನಲ್ಲಿ ಇಲ್ಲದಿರುವ "ಜಗಜ್ಜನ್ಮಾದಿಕಾರಣತ್ವ" ಎಂಬ ಬ್ರಹ್ಮನ ಲಕ್ಷಣವನ್ನು ನಿರೂಪಿಸುವ "ಜನ್ಮಾದ್ಯಸ್ಯ ಯತಃ" ಮುಂತಾದ ಸೂತ್ರಗಳು ಅಭೇದವನ್ನೇನೂ ಹೇಳುತ್ತಿಲ್ಲವಷ್ಟೆ. ಅಷ್ಟೇ ಅಲ್ಲ. ಜೀವಬ್ರಹ್ಮರಲ್ಲಿರುವ ವಿರುದ್ಧಧರ್ಮಗಳನ್ನು ಹೇಳಿ ಭೇದೋಕ್ತಿಗಳನ್ನು ಸಯುಕ್ತಿಕವಾಗಿ ಸಮರ್ಥಿಸುವ ಮೂಲಕ ಈ ಸೂತ್ರಗಳು ಅಭೇದನಿರಾಸಕಗಳೇ ಆಗಿವೆ. ಆದುದರಿಂದ ಶಾರೀರಕಶಬ್ದಕ್ಕೆ ಜೀವ ಎಂಬರ್ಥ ಇಟ್ಟುಕೊಂಡು ಜೀವನಿಗೆ ಬ್ರಹ್ಮನ ಏಕತೆಯನ್ನೂ ಪ್ರತಿಪಾದಿಸುವ ಗ್ರಂಥ ಎಂದರ್ಥ ಮಾಡುವುದು ಸರಿಯಲ್ಲ. ಶಾರೀರಕ ಎಂದರೆ ಪರಮಾತ್ಮನೇ. "ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತಃ' ಎಂಬೀ ಪ್ರಮಾಣವಾಕ್ಯವೇ ಇದಕ್ಕೆ ಆಧಾರ. ಶಾರೀರೌ= ವಿಷ್ಣುವಿನ ಸಕಲಗುಣಪೂರ್ಣತ್ವಾದಿಮೀಮಾಂಸೆಯೇ ಶಾರೀರಕಮೀಮಾಂಸಾ ಎಂದು ವ್ಯಾಖ್ಯಾನಿಸುವುದೇ ಸರಿ.

ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ ।
ಅಭೇದಸ್ಸರ್ವರೂಪೇಷು ಜೀವಭೇದಃ ಸದೈವ ಚ ॥
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।

ಎಂಬ ಪುರಾಣವಾಕ್ಯವು ಬ್ರಹ್ಮಸೂತ್ರಗಳಲ್ಲಿ ಭಗವಂತನ ನಿರ್ದೋಷತೆ, ಗುಣಪೂರ್ಣತೆ, ಸರ್ವರೂಪಾಭೇದ, ಜೀವನಿಂದ ಸರ್ವದಾ ಭೇದ, ಸರ್ವವೇದಪ್ರತಿಪಾದ್ಯತ್ವಗಳು ಹೇಳಲ್ಪಟ್ಟಿದೆ ಎಂದು ತಿಳಿಸುತ್ತದೆ. ಆದುದರಿಂದ ಶಾರೀರಕಮೀಮಾಂಸಾಶಬ್ದಕ್ಕೆ ನಾವು ಹೇಳಿದ ಅರ್ಥವೇ ಪ್ರಮಾಣಸಮ್ಮತವಾಗಿದೆ.

## ನೆನೆಪಿಡಿ

* ಶಾರೀರಕಮೀಮಾಂಸಾ ಎಂಬುದಕ್ಕೆ ಅದ್ವೈತಿಗಳು ಜೀವಬ್ರಹ್ಮಾಭೇದಮೀಮಾಂಸಾ ಎಂಬರ್ಥವನ್ನು ಹೇಳುತ್ತಾರೆ. ನಾವು ಶಾರೀರಕ ಶಬ್ದಕ್ಕೆ ಪರಮಾತ್ಮ ಎಂಬರ್ಥವನ್ನು ಹೇಳಿ ತದ್ವಿಷಯಕಮೀಮಾಂಸಾ ಎಂದು ಹೇಳುತ್ತೇವೆ.

* ಭಾಮತೀ ಹಾಗೂ ಪಂಚಪಾದಿಯಲ್ಲಿ ಶಾರೀರಕ ಎಂಬ ಪದಕ್ಕೆ ಜೀವ ಎಂಬರ್ಥವನ್ನು ಹೇಳಿದ್ದಾರೆ. ಇವರಿಬ್ಬರಿಗೂ ಬ್ರಹ್ಮಶಬ್ದಾರ್ಥದಿಂದ ವಿರೋಧ ಹಾಗೂ ಅಸಂಭವದೋಷಗಳು ಬರುತ್ತವೆ.

* * * *

**ಅನು– .............. ಏಕಧಾಽನ್ಯತ್ರ ಸರ್ವಶಃ ॥**

ಬೇರೆ ಗ್ರಂಥಗಳಲ್ಲಿ ಒಂದು ಬಗೆಯ ಅಥವಾ ಎರಡು ಬಗೆಯ ಪ್ರಾಮಾಣ್ಯ-ವಿದೆ. ಬ್ರಹ್ಮಸೂತ್ರಗಳಲ್ಲಿ ಮಾತ್ರ ನಿರವಧಿಕವಾದ ಮೂರು ಬಗೆಯ ಪ್ರಾಮಾಣ್ಯಗಳಿರುತ್ತವೆ.

**ಶ್ರೀಮನ್ನ್ಯಾಯಸುಧಾ – ಯತ ಏವಂ ಬ್ರಹ್ಮಸೂತ್ರಾಣಾಂ ಪ್ರಾಮಾಣ್ಯಂ ತ್ರಿ-ವಿಧಂ ದೃಶ್ಯತೇ । ಆಪ್ತವಾಕ್ಯತ್ವಾದಿಪ್ರಮಾಣತ್ರಯೇಣ ದೃಶ್ಯತ ಇತಿ ಯಾವತ್ । ಅತಸ್ತನ್ಮಹದನುತ್ತಮಂ ಮಂತವ್ಯಮ್ ॥**

**ಆಪ್ತವಾಕ್ಯತ್ವಾದಿಲಿಂಗತ್ರಯಾವಸಿತಂ ಪ್ರಾಮಾಣ್ಯಮ್ ಅನ್ಯತ್ರಾಪಿ ಚೇತ್ ಸ್ಯಾತ್ ತದಾ ಕಥಮೇಷಾಂ ತದನುತ್ತಮಮ್ ಇತ್ಯತೋ 'ಬ್ರಹ್ಮಸೂತ್ರಾಣಾಮೇವ' ಇತ್ಯುಕ್ತಮ್ । ತತ್ಕಥಮಿತ್ಯತ ಆಹ – ಏಕಧೇತಿ ॥**

**'ಸರ್ವಶಃ' ಇತಿ ವಚನಾದ್ 'ಏಕಧಾ' ಇತ್ಯುಪಲಕ್ಷಣಮ್ ।**

**ತಥಾ ಹಿ – ಕ್ವಚಿದ್ ಏಕಧಾ । ಯಥಾಽಽಪ್ತಿಮೂಲತಯಾ ಲೌಕಿಕವಿಷಯೇ ಪಿತೃವಾಕ್ಯೇ । ಶ್ರುತಿಸಂವಾದೇನ ಧರ್ಮಾದಿವಿಷಯೇ ಪ್ರತಿವಾದ್ಯುದೀರಿತ-ವಚನೇ । ತದುಕ್ತ ಏವ 'ಪರ್ವತೋಽಗ್ನಿಮಾನ್' ಇತಿ ವಾಕ್ಯೇ ಯುಕ್ತಿ-ಸಂವಾದೇನ । ಕ್ವಚಿದ್ ದ್ವೇಧಾ । ಯಥಾಽಽಪ್ತಿಶ್ರುತಿಭ್ಯಾಂ ಮನ್ವಾದಿವಾಕ್ಯೇ । ಆಪ್ತಿಯುಕ್ತಿಭ್ಯಾಂ 'ಪರ್ವತೋಽಗ್ನಿಮಾನ್' ಇತ್ಯಾದೌ ಪಿತೃವಾಕ್ಯೇ । ಶ್ರುತಿ-ಯುಕ್ತಿಭ್ಯಾಮ್ 'ಈಶ್ವರಃ ಸರ್ವಜ್ಞಃ' ಇತಿ ಪ್ರತಿವಾದ್ಯುದೀರಿತವಚಸೀತಿ ॥**

**ಜೈಮಿನ್ಯಾದಿವಾಕ್ಯೇ ತ್ರೇಧಾಽಪ್ಯಸ್ತೀತಿ ಚೇತ್, ಸತ್ಯಮ್ । ಯಥಾ ಬ್ರಹ್ಮ-**

**ಸೂತ್ರೇಷು ನ ತಥಾ । ನಿರವಧಿಕಂ ಹಿ ತತ್ರಾಪ್ರಾಮಾಣ್ಯಾದಿಕಮ್ । ಏತದರ್ಥಮಪಿ 'ಮಹತ್' ಇತ್ಯೇತತ್ 'ತ್ರಿವಿಧಮ್' ಇತ್ಯನೇನಾಪಿ ಯೋಜನೀಯಮ್ ॥**

**ನನು ಪ್ರಮಾಣ್ಯೈಕತ್ವಾನೇಕತ್ವಯೋಃ ಪ್ರಮೇಯತಾದವಸ್ಥ್ಯಾತ್ ಕಥಮೇತತ್ । ಇತ್ಥಮ್ – ನ ಹಿ ಪ್ರಮಾಣಮಾತ್ರಂ ನಿಃಶಂಕಪ್ರವೃತ್ತಾವುಪಯುಜ್ಯತೇ । ಕಿಂ ನಾಮ ಪ್ರಮಾಣತಯಾ ಪ್ರಮಿತಮೇವ । ತಚ್ಚ ಯಾವದ್ಯಾವದಧಿಕಂ ಪ್ರಮೀಯತೇ ತತ್ತದನುಸಾರಿಣೀಮವಿಶಂಕಾಂ ಕ್ಷಿಪ್ರಪ್ರವೃತ್ತಿಂ ಪ್ರಸೂತ ಇತ್ಯನುಭವಸಿದ್ಧಮ್ । ತತಃ ಪ್ರಾಮಾಣ್ಯಮೇವ ಸ್ವಕಾರ್ಯಾತಿಶಯವಶೇನಾತಿಶಯವದುಚ್ಯತೇ ॥**

**ಏವಂ ವಿಷಯಪ್ರಯೋಜನಾತಿಶಯವಶೇನಾಪಿ ಅತಿಶಯೋ ದ್ರಷ್ಟವ್ಯಃ ।**

ಯಾವ ಕಾರಣದಿಂದ ಬ್ರಹ್ಮಸೂತ್ರಗಳಿಗೆ ಮೂರು ಬಗೆಯ ಪ್ರಾಮಾಣ್ಯವು ಕಾಣಿಸುತ್ತಿದೆ. ಆಪ್ತವಾಕ್ಯತ್ವ, ಶ್ರುತಿಮೂಲತ್ವ ಹಾಗೂ ಯುಕ್ತಿಮೂಲತ್ವ ಎಂಬ ಮೂರು ಪ್ರಮಾಣಗಳಿಂದ ಪ್ರಾಮಾಣ್ಯವು ತಿಳಿದು ಬರುತ್ತಿದೆ ಎಂದು ತಾತ್ಪರ್ಯ. ಆ ಕಾರಣದಿಂದ ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವು ಮಹತ್ = ಸರ್ವೋತ್ತಮವಾಗಿದೆ ಎಂದು ತಿಳಿಯಬೇಕು.

ಆಪ್ತವಾಕ್ಯತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವಗಳೆಂಬ ಮೂರು ಲಿಂಗಗಳಿಂದ ತಿಳಿಯಲ್ಪಡುವ ಪ್ರಾಮಾಣ್ಯವು ಬೇರೆ ಶಾಸ್ತ್ರಗಳಲ್ಲಿಯೂ ಕೂಡ ಇರುತ್ತದೆ. ಹೀಗಿರುವಾಗ ಬ್ರಹ್ಮಸೂತ್ರಗಳಿಗೆ ಮಾತ್ರ ಸರ್ವೋತ್ತಮಪ್ರಾಮಾಣ್ಯವನ್ನು ಹೇಗೆ ಸಮರ್ಥಿಸುತ್ತೀರಿ? ಈ ಪ್ರಶ್ನೆಗೆ ಉತ್ತರವನ್ನು ಹೇಳುವುದಕ್ಕಾಗಿ 'ಏಕಧಾನ್ಯತ್ರ ಸರ್ವಶಃ' ಎಂಬ ವಾಕ್ಯವು ಹೊರಟಿದೆ.

'ಸರ್ವಶಃ' ಎಂಬ ಪದವನ್ನು ಮುಂದೆ ಪ್ರಯೋಗ ಮಾಡಿರುವುದರಿಂದ 'ಏಕಧಾ' ಎಂಬ ಪದವು ದ್ವೇಧಾ ಎಂಬುದಕ್ಕೆ ಉಪಲಕ್ಷಣವಾಗಿದೆ.

ಅದು ಹೀಗೆ – ಕೆಲವೆಡೆ ಒಂದೇ ವಿಧದ ಪ್ರಾಮಾಣ್ಯವಿರುತ್ತದೆ. ಉದಾಹರಣೆ – ಲೌಕಿಕವಿಷಯವನ್ನು ತಿಳಿಸುವ ಪಿತೃವಾಕ್ಯವು ಆಪ್ತವಾಕ್ಯತ್ವವೆಂಬ ಒಂದೇ ಯುಕ್ತಿಯಿಂದ ಪ್ರಾಮಾಣ್ಯವನ್ನು ಹೊಂದಿದೆ. ಮತ್ತು ಧರ್ಮ ಮೊದಲಾದ ಅದೃಷ್ಟವಿಷಯಗಳ ಬಗ್ಗೆ ಹೇಳಿರುವ ಪ್ರತಿವಾದಿಯ ವಾಕ್ಯದಲ್ಲಿ ಕೇವಲ ಶ್ರುತಿಮೂಲತ್ವವೆಂಬ ಯುಕ್ತಿಯಿಂದ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಅದರಂತೆ 'ಧೂಮವಿರುವುದರಿಂದ ಅಗ್ನಿಯು ಇದೆ' ಎಂಬ ವಾಕ್ಯದಲ್ಲಿ ಕೇವಲ ಯುಕ್ತಿಸಂವಾದದಿಂದ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಇನ್ನು ಕೆಲವೆಡೆ ಎರಡು ಯುಕ್ತಿಗಳಿಂದ ಪ್ರಾಮಾಣ್ಯನಿಶ್ಚಿತವಾದದ್ದು ಕಂಡಿದೆ. ಮನ್ವಾದಿ ವಾಕ್ಯಗಳು ಇದಕ್ಕೆ ಉದಾಹರಣೆಯಾಗಿವೆ. ಮನ್ವಾದಿವಾಕ್ಯಗಳಲ್ಲಿ ಆಪ್ತವಾಕ್ಯತ್ವ ಹಾಗೂ ಶ್ರುತಿಮೂಲತ್ವಗಳೆರಡು ಇವೆ. 'ಪರ್ವತಃ ವಹ್ನಿಮಾನ್' ಎಂಬುದಾಗಿ ತಂದೆಯು ಹೇಳಿದರೆ ಅದರಲ್ಲಿ ಯುಕ್ತಿಮೂಲತ್ವದ ಜೊತೆ ಆಪ್ತವಾಕ್ಯತ್ವವು ಕೂಡ ಸೇರಿದೆ. ಮತ್ತು 'ಈಶ್ವರನು ಸರ್ವಜ್ಞನಾಗಿದ್ದಾನೆ' ಎಂಬುದಾಗಿ ಹೇಳುವ ಪ್ರತಿವಾದಿಯ ವಾಕ್ಯದಲ್ಲಿ ಶ್ರುತಿಮೂಲಕತ್ವ ಯುಕ್ತಿಮೂಲತ್ವಗಳೆರಡರಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆ.

ವಾಸ್ತವಿಕವಾಗಿ ಜೈಮಿನ್ಯಾದಿ ಮಹರ್ಷಿಗಳ ವಾಕ್ಯಗಳಲ್ಲಿ ಯುಕ್ತಿಮೂಲತ್ವ, ಶ್ರುತಿ-ಮೂಲತ್ವ, ಆಪ್ತವಾಕ್ಯತ್ವವೆಂಬ ಮೂರು ಬಗೆಯ ಪ್ರಾಮಾಣ್ಯಗಳು ಕೂಡ ಇರುತ್ತವ-ಲ್ಲವೇ? ಎಂದು ಪ್ರಶ್ನಿಸಬಹುದು. ಹೌದು ನಿಜ. ಆದರೆ ಬ್ರಹ್ಮಸೂತ್ರಗಳಲ್ಲಿ ಹೇಗೋ ಅದರಂತೆ ಜೈಮಿನ್ಯಾದಿ ವಾಕ್ಯಗಳಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಏಕೆಂದರೆ, ವಿವಕ್ಷಿತಾ-ರ್ಥತತ್ವಜ್ಞಾನ ಮೊದಲಾದ ಧರ್ಮಗಳು ಶ್ರೀವೇದವ್ಯಾಸದೇವರಲ್ಲಿ ನಿರವಧಿಕವಾಗಿವೆ. ಜೈಮಿನ್ಯಾದಿಗಳಲ್ಲಿ ಸಾವಕಾಶವಾಗಿವೆ. ಇದನ್ನು ತಿಳಿಸುವ ಉದ್ದೇಶದಿಂದಲೂ ಕೂಡ 'ಮಹತ್' ಎಂಬ ಪದವನ್ನು 'ತ್ರಿವಿಧಮ್' ಎಂಬ ಪದದ ಜೊತೆಗೆ ಅನ್ವಯ ಮಾಡಬೇಕು.

ಪ್ರಮಾಣವು ಒಂದಾದರೇನು, ಅನೇಕವಿದ್ದರೇನು? ಆ ಪ್ರಮಾಣದಿಂದ ನಿರ್ಣಯ-ವಾಗುವ ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಪ್ರಾಮಾಣ್ಯವೆಂಬ ಸಾಧ್ಯದಲ್ಲಿ ತ್ರೈವಿಧ್ಯ ಹೇಳಿದ್ದು ಹೇಗೆ ಯುಕ್ತವಾಗುತ್ತದೆ?

ಈ ಪ್ರಶ್ನೆಗೆ ಉತ್ತರ ಹೀಗಿದೆ – ಕೇವಲ ಪ್ರಮಾಣವಿದ್ದ ಮಾತ್ರದಿಂದ ನಿಃಶಂಕಾ-ಪ್ರವೃತ್ತಿಯು ಉಂಟಾಗುವುದಿಲ್ಲ. ಪ್ರಮಾಣವಾಗಿರುವುದರಿಂದ ಪ್ರಮೇಯವು ಯಥಾರ್ಥ-ವಾಗಿದೆ ಎಂದು ತಿಳಿದರೆ ಮಾತ್ರ ನಿಃಶಂಕಾಪ್ರವೃತ್ತಿಯು ಉಂಟಾಗುತ್ತದೆ. ಆ ನಿಃಶಂಕಾ-ಪ್ರವೃತ್ತಿಗೆ ಕಾರಣವಾಗಿರುವ ಪ್ರಮಾಣವನ್ನು ಎಷ್ಟು ಅಧಿಕಪ್ರಮಾಣಗಳಿಂದ ಯಥಾರ್ಥ-ವೆಂದು ನಿಶ್ಚಯಿಸುತ್ತೇವೋ, ಅದಕ್ಕನುಸಾರಿಯಾಗಿ ಪ್ರಮಾಣವು ಅಷ್ಟೇ ಕ್ಷಿಪ್ರಪ್ರವೃತ್ತಿಗೆ ಮತ್ತು ನಿಃಶಂಕಾಪ್ರವೃತ್ತಿಗೆ ಕಾರಣವಾಗುತ್ತದೆ. ಪ್ರತಿಯೊಬ್ಬರಿಗೂ ಹೀಗೆಯೇ ಅನುಭವ-ವಿದೆ. ಆದ್ದರಿಂದ ಪ್ರಾಮಾಣ್ಯವೇ ತನ್ನ ಕಾರ್ಯವೆನಿಸಿದ ಪ್ರವೃತ್ತಿಯಲ್ಲಿ ಕ್ಷಿಪ್ರತ್ವ, ನಿಃಶಂಕತ್ವ ಮೊದಲಾದವುಗಳನ್ನು ಹುಟ್ಟಿಸುವ ಮೂಲಕ ಅತಿಶಯವುಳ್ಳದ್ದಾಗಿದೆಯೆಂದು ಕರೆಸಿ-ಕೊಳ್ಳುತ್ತದೆ.

ಇದೇ ಕ್ರಮದಲ್ಲಿ ವಿಷಯಪ್ರಯೋಜನಗಳಲ್ಲಿರುವ ಅತಿಶಯದಿಂದಲೂ ಕೂಡ ಅತಿಶಯವನ್ನು ತಿಳಿಯಬೇಕು.

## ಏಕಧಾ ಎಂಬ ಪದವು ದ್ವೇಧಾ, ತ್ರೇಧಾ ಎಂಬುದಕ್ಕೆ ಉಪಲಕ್ಷಕ

ಪರಿಮಳ – ಉಪಲಕ್ಷಣತ್ವೇ ಬೀಜೋಕ್ತಿಃ – ಇತಿ ವಚನಾದಿತಿ ॥ ಸರ್ವಶಃ ಸರ್ವತ್ರಾನ್ಯತ್ರೇತ್ಯುಕ್ತ್ಯೈಕಧಾ ಇತ್ಯುಕ್ತಿರಯುಕ್ತಾ। ಕ್ವಚಿದ್ ದ್ವೇಧಾ ತ್ರೇಧಾಽಪಿ ಸಂಭವಾದತ ಉಪಲಕ್ಷಣಂ ಕಾರ್ಯಮಿತಿ ಭಾವಃ। ಶ್ರುತಿಯುಕ್ತಿಭ್ಯಾಮಿತಿ ॥ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತ್ಯಾ 'ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್' ಇತ್ಯಾದಿಯುಕ್ತ್ಯಾ ಚ ಮೂಲಭೂತಯಾ ಇತ್ಯರ್ಥಃ। 'ಪ್ರಾಮಾಣ್ಯಮ್' ಇತಿ ಸರ್ವತ್ರಾನುಷಂಗಃ। ಏತದರ್ಥಮ್ ॥ ಜೈಮಿನ್ಯಾದಿ-ವಾಕ್ಯವ್ಯಾವೃತ್ತಪ್ರಾಮಾಣ್ಯಸಿದ್ಧ್ಯರ್ಥಮಿತ್ಯರ್ಥಃ।

'ಏಕಧಾ' ಎಂಬ ಪದವು ಉಪಲಕ್ಷಣವಾಗಿದೆ ಎನ್ನಲು ಕಾರಣವನ್ನು 'ಇತಿ ವಚನಾತ್' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

'ಸರ್ವಶಃ' ಎಂಬ ಪದಕ್ಕೆ ಸರ್ವತ್ರ ಎಂದರ್ಥ. ಆದ್ದರಿಂದ ಏಕಧಾ ಎಂಬ ಪದಕ್ಕೆ 'ಒಂದೇ ರೀತಿಯಲ್ಲಿ' ಎಂಬ ಅರ್ಥವನ್ನು ವಿವಕ್ಷಿಸಿದರೆ ಸರ್ವತ್ರ ಎಂಬರ್ಥವು ಅಯುಕ್ತವಾಗುತ್ತದೆ. ಕೆಲವೆಡೆ ಎರಡು ರೀತಿಯಲ್ಲಿ ಇನ್ನು ಕೆಲವೆಡೆ ಮೂರು ರೀತಿಯಲ್ಲಿ ಪ್ರಾಮಾಣ್ಯವು ಇರುತ್ತದೆ. ಆದ್ದರಿಂದ ದ್ವೇಧಾ ಮತ್ತು ತ್ರೇಧಾ ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

'ಶ್ರುತಿಯುಕ್ತಿಭ್ಯಾಮ್' – 'ಯಃ ಸರ್ವಜ್ಞಃ' ಎಂಬ ಶ್ರುತಿಯ ಆಧಾರದಿಂದ ಹಾಗೂ 'ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್' ಎಂಬ ಯುಕ್ತಿಯಿಂದ ಸಾಧಿಸಿದಾಗ ಎರಡು ಬಗೆಯ ಪ್ರಾಮಾಣ್ಯವಿರುತ್ತದೆ. ಪ್ರಾಮಾಣ್ಯಂ ಎಂಬುದನ್ನು ಎಲ್ಲೆಡೆಯೂ ವಿವಕ್ಷಿಸಬೇಕು.

'ಏತದರ್ಥಮ್' – ಜೈಮಿನಿ ಮೊದಲಾದವರ ಮಾತುಗಳಲ್ಲಿ ಇಲ್ಲದ ಪ್ರಾಮಾಣ್ಯದ ಸಿದ್ಧಿಗೋಸ್ಕರ ಎಂದರ್ಥ.

ವಿವರಣೆ – 'ಏಕಧಾನ್ಯತ್ರ ಸರ್ವಶಃ' ಎಂಬ ಅನುವ್ಯಾಖ್ಯಾನದ ಮಾತಿಗೆ ಬೇರೆಡೆ ಒಂದು, ಎರಡು ಅಥವಾ ಮೂರು ಪ್ರಕಾರಗಳಿಂದ ಪ್ರಾಮಾಣ್ಯವು ತೋರುತ್ತದೆ. ನಿರವಧಿಕವಾದ ಮೂರು ಬಗೆಯ ಪ್ರಾಮಾಣ್ಯವಿರುವುದು ಬ್ರಹ್ಮಸೂತ್ರಗಳಲ್ಲಿ ಮಾತ್ರ ಎಂದರ್ಥ. ಆದ್ದರಿಂದ 'ಏಕಧಾ' ಎಂಬ ಪದವು ದ್ವೇಧಾ ಮತ್ತು ತ್ರೇಧಾ ಎಂಬುದಕ್ಕೆ ಉಪಲಕ್ಷಣವಾಗಿದೆ. 'ಸರ್ವಶಃ' ಎಂಬ ಪದಕ್ಕೆ ಉಳಿದೆಲ್ಲ ವಚನಗಳಲ್ಲಿ ಎಂದರ್ಥ. ಆದ್ದರಿಂದ ಏಕಧಾ ಎಂಬ ಪದಕ್ಕೆ 'ಒಂದು ತರಹದಿಂದ' ಎಂಬ ಅರ್ಥವು ಅಸಂಗತವಾಗುತ್ತದೆ. ಏಕೆಂದರೆ ಆ ಉಳಿದ ವಾಕ್ಯಗಳಲ್ಲಿ ಎರಡು ತರಹದ ಅಥವಾ ಮೂರು ತರಹದ ಪ್ರಾಮಾಣ್ಯವು ಇರಬಹುದು. ಈ ಅಸಂಗತಿಯನ್ನು ಪರಿಹಾರ ಮಾಡುವುದಕ್ಕಾಗಿ ಗ್ರಂಥದಲ್ಲಿ 'ಏಕಧಾ' ಎಂಬ ಪದವನ್ನು ಉಪಲಕ್ಷಣವೆಂದು ವಿವಕ್ಷಿಸಿದ್ದಾರೆ.

ಪ್ರತಿವಾದಿಯಾದವನು 'ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್' ಎಂಬ ಯುಕ್ತಿಯನ್ನು ಪ್ರಯೋಗಿಸಿದಾಗ, 'ಯಃ ಸರ್ವಜ್ಞಃ' ಎಂಬ ಶ್ರುತಿಮೂಲತ್ವವಿದೆ. 'ಸರ್ವಕರ್ತೃತ್ವ' ಎಂಬ ಯುಕ್ತಿಮೂಲಕತ್ವವೂ ಇದೆ. ಆದರೆ ಪ್ರತಿವಾದಿಯಾಗಿರುವುದರಿಂದ ಆಪ್ತಿಮೂಲಕತ್ವವು ಇರುವುದಿಲ್ಲ. ಇಂಥ ಸಂದರ್ಭದಲ್ಲಿ ದ್ವೇಧಾ ಪ್ರಾಮಾಣ್ಯವಿರುತ್ತದೆಂದು ತಿಳಿಯಬೇಕು.

* * * *

## ಮೂರು ಬಗೆಯ ಪ್ರಮಾಣಗಳಲ್ಲಿ ನಿರವಧಿಕತ್ವದ ಸಮರ್ಥನೆ

ಪರಿಮಳ – ತ್ರಿವಿಧಮಿತ್ಯನೇನಾಪಿ ಇತಿ ॥ 'ತ್ರಿವಿಧಮ್' ಇತ್ಯಸ್ಯ ಕ್ರಿಯಾವಿಶೇಷಣತ್ವಾದ್ ಆಪ್ತವಾಕ್ಯತ್ವಾದಿಪ್ರಮಾಣತ್ರಯೇಣೇತಿ ಪೂರ್ವಂ ತದರ್ಥೋ ದರ್ಶಿತಃ । ತತ್ರ ಮಹದಿತ್ಯಸ್ಯ ಪ್ರಾಮಾಣ್ಯೇನೇವ ತೇನಾಪ್ಯನ್ವಯೇ ಸತಿ ಮಹದಾಪ್ತವಾಕ್ಯತ್ವಾದಿಪ್ರಮಾಣತ್ರಯೇಣೇತ್ಯರ್ಥಃ । ಮಹತ್ತ್ವಂ ಚ ಪ್ರಮಾಣಸ್ಯ ಆಪ್ತೇಃ ನಿರವಧಿಕತ್ವೇನ ಶ್ರುತಿಯುಕ್ತ್ಯೋರನಂತತ್ವೇನೇತ್ಯರ್ಥೋ ಲಭ್ಯತ ಇತಿ ಕರ್ಮಮೀಮಾಂಸಾದೇವಮೀಮಾಂಸಾವ್ಯಾವೃತ್ತಪ್ರಾಮಾಣ್ಯಂ ಸಿದ್ಧ್ಯತೀತಿ ಭಾವಃ ॥

'ತ್ರಿವಿಧಮ್' ಎಂಬ ಪದವು 'ದೃಶ್ಯತೇ' ಎಂಬ ಕ್ರಿಯಾವಿಶೇಷಣವಾಗಿದೆ. ಆದ್ದರಿಂದ ಆಪ್ತವಾಕ್ಯತ್ವ ಮೊದಲಾದ ಮೂರು ಬಗೆಯ ಪ್ರಮಾಣಗಳಿಂದ ಪ್ರಾಮಾಣ್ಯವು ತೋರುತ್ತದೆ. ಈ ಅರ್ಥವನ್ನು ಹಿಂದೆ ತಿಳಿಸಲಾಗಿದೆ. 'ಮಹತ್' ಎಂಬ ಪದವನ್ನು 'ಪ್ರಾಮಾಣ್ಯ' ಎಂಬ ಪದದ ಜೊತೆ ಅನ್ವಯ ಮಾಡಬೇಕು. ಒಂದು ವೇಳೆ ತ್ರಿವಿಧಮ್ ಎಂಬುದರ ಜೊತೆಗೂ ಅನ್ವಯವನ್ನು ಮಾಡಿದರೆ ಆಗ 'ನಿರವಧಿಕವಾದ ಆಪ್ತವಾಕ್ಯತ್ವಾದಿ ಮೂರು ಬಗೆಯ ಪ್ರಮಾಣಗಳಿಂದ' ಎಂಬರ್ಥವನ್ನು ಹೇಳಿದಂತಾಗುತ್ತದೆ. ನಿರವಧಿಕವಾದ ಆಪ್ತಿಯು ಇರುವುದರಿಂದ ಮತ್ತು ಶ್ರುತಿಗಳು ಹಾಗೂ ಯುಕ್ತಿಗಳು ಅನಂತವಾಗಿರುವುದರಿಂದ ಪ್ರಮಾಣಗಳ ಮಹತ್ವವೆಂದು ಅರ್ಥವು ಲಭ್ಯವಾಗುತ್ತದೆ. ಆದ್ದರಿಂದ ನಿರವಧಿಕವಾದ ಆಪ್ತಿ ಮೊದಲಾದವುಗಳಿಂದ ಪ್ರಾಪ್ತವಾಗುವ ಮಹತ್ವಪೂರ್ಣವಾದ ಪ್ರಾಮಾಣ್ಯವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಮಾತ್ರ ಬರುತ್ತದೆ. ಜೈಮಿನೀಮೀಮಾಂಸಾದಿ ಗ್ರಂಥಗಳಲ್ಲಿ ಬರುವುದಿಲ್ಲ ಎಂದಭಿಪ್ರಾಯ.

ವಿವರಣೆ – ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಮೂರು ಬಗೆಯ ಪ್ರಮಾಣಗಳಿಂದ ತಿಳಿಯುತ್ತಿದೆ ಎಂಬರ್ಥವನ್ನು ಹಿಂದೆ ಹೇಳಿದ್ದಾಗಿದೆ. ಈ ಮಹತ್‌ಶಬ್ದಕ್ಕೆ ಪ್ರಾಮಾಣ್ಯದ ಜೊತೆ ಅನ್ವಯ ಮಾಡಿದಂತೆ ತ್ರಿವಿಧಂ ಎಂಬುದರ ಜೊತೆಗೂ ಕೂಡ ಅನ್ವಯವನ್ನು ಮಾಡಿದರೆ ಮಹತ್ತಾದ ಆಪ್ತವಾಕ್ಯತ್ವಾದಿ ಮೂರು ಬಗೆಯ ಪ್ರಮಾಣಗಳಿಂದ ಮಹತ್ ಪ್ರಾಮಾಣ್ಯವು ತಿಳಿಯುತ್ತದೆ ಎಂಬರ್ಥವನ್ನು ಹೇಳಿದಂತಾಗುತ್ತದೆ. ಪ್ರಮಾಣಕ್ಕೆ ಮಹತ್ವವೆಂದರೆ ಏನರ್ಥ? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ – ಮೂರು ರೀತಿಯಲ್ಲಿ ಮಹತ್ವವನ್ನು ತಿಳಿಯಬೇಕು. ಆಪ್ತವಾಕ್ಯತ್ವದ ಮಹತ್ವವೆಂದರೆ ಆಪ್ತಿಯು ನಿರವಧಿಕ-

ವಾಗಿರಬೇಕು ಎಂದರ್ಥ. ಶ್ರುತಿಮೂಲಕತ್ವ ಹಾಗೂ ಯುಕ್ತಿಮೂಲತ್ವಗಳಲ್ಲಿರುವ ಮಹತ್ವವೆಂದರೆ ಅನಂತ ಶ್ರುತಿಗಳಿರಬೇಕು; ಅನಂತ ಯುಕ್ತಿಗಳಿರಬೇಕು ಎಂದರ್ಥ. ಆದ್ದರಿಂದ ಆಪ್ತಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವಗಳು ಮಹತ್ತಾಗಿವೆ. ಇಂಥ ಮಹತ್ತಾದ ಪ್ರಮಾಣಗಳಿಂದ ಪ್ರಾಮಾಣ್ಯವು ಬ್ರಹ್ಮಸೂತ್ರದಲ್ಲಿರುತ್ತದೆ.

## ವಿಷಯಪ್ರಯೋಜನಗಳಲ್ಲಿ ಅತಿಶಯಿತತ್ವದ ಸಮರ್ಥನೆ

ಪರಿಮಳ – ಪ್ರಮಾಣೇತಿ ॥ 'ಪ್ರಾಮಾಣ್ಯಜ್ಞಾಪಕಪ್ರಮಾಣೈಕತ್ವಾನೇಕತ್ವಯೋಃ' ಇತ್ಯರ್ಥಃ। ಏತದಿತಿ ॥ ಉತ್ತಮಾನುತ್ತಮಪ್ರಮಾಣೇ ಇತ್ಯೇತದಿತ್ಯರ್ಥಃ ॥

'ಬ್ರಹ್ಮಸೂತ್ರ'ಪದಪ್ರಯೋಗಸೂಚಿತಂ 'ತದರ್ಥತಃ' ಇತಿ ಪದಪ್ರಯೋಗಸೂಚಿತಂ ಚ ಕಾರ್ಯಾತಿಶಯಮಪ್ಯಾಹ – ಏವಂ ವಿಷಯೇತಿ ॥ ಯಥಾ ನಿಃಶಂಕಕ್ಷಿಪ್ರಪ್ರವೃತ್ತಿಜನಕತ್ವೇನ ಅತಿಶಯಃ ತಥಾ ಕರ್ಮದೇವತಾದಿತೋಽಪಿ ಪ್ರಾಗುಕ್ತದಿಶಾ ಸರ್ವದೋಷವಿಹೀನತ್ವಾದಿ ಗುಣವಿಶಿಷ್ಟಪರಬ್ರಹ್ಮಾಖ್ಯಾತಿಶಯಿತವಿಷಯಪ್ರತಿಪಾದನೇನ ಅನಲ್ಪಸ್ಥಿರಮೋಕ್ಷಾಖ್ಯಾತಿ-ಶಯಿತಪ್ರಯೋಜನಕತ್ವೇನ ಚೈತಚ್ಛಾಸ್ತ್ರಪ್ರಾಮಾಣ್ಯಸ್ಯಾತಿಶಯೋ ದ್ರಷ್ಟವ್ಯ ಇತ್ಯರ್ಥಃ ॥

'ಪ್ರಮಾಣೈಕತ್ವಾನೇಕತ್ವಯೋಃ' – ಪ್ರಾಮಾಣ್ಯವನ್ನು ನಿಶ್ಚಯಮಾಡುವ ಪ್ರಮಾಣವು ಒಂದಾದರೆ ಅಥವಾ ಅನೇಕವಾದರೂ ಕೂಡ ಎಂದರ್ಥ.

'ಏತದ್' – ಉತ್ತಮಪ್ರಾಮಾಣ್ಯ ಎಂದರ್ಥ.

ಬ್ರಹ್ಮಸೂತ್ರಪದದಿಂದ ತದರ್ಥತಃ ಎಂಬ ಪದದಿಂದ ಸೂಚಿತವಾದ ಕಾರ್ಯಾತಿಶಯವು ಏನು ಎಂಬುದನ್ನು 'ಏವಂ' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ.

'ಏವಂ ವಿಷಯಪ್ರಯೋಜನಾತಿಶಯವಶೇನ' – ನಿಃಶಂಕಾಪ್ರವೃತ್ತಿಯನ್ನು ಹುಟ್ಟಿಸು-ವುದರಿಂದ ಹೇಗೆ ಅತಿಶಯವು ಉಂಟಾಗುತ್ತದೋ ಹಾಗೆ ಹಿಂದೆ ಹೇಳಿದ ಪ್ರಕಾರ ಸರ್ವ-ದೋಷವಿಹೀನತ್ವ ಮೊದಲಾದ ಗುಣವಿಶಿಷ್ಟನಾದ ಪರಬ್ರಹ್ಮನೆಂಬ ಅತಿಶಯಿತವಾದ ವಿಷಯ-

ವುಳ್ಳದ್ದಾಗಿದೆ. ಅದರಂತೆ ಅನಲ್ಪಸ್ಥಿರವಾದ ಮೋಕ್ಷವೆಂಬುದು ಅತಿಶಯಿತ ಪ್ರಯೋಜನವಾಗಿದೆ. ಹೀಗೆ ವಿಷಯಾದಿಗಳಲ್ಲಿ ಅತಿಶಯವಿದೆ ಎಂದು ತಿಳಿಯಬೇಕು. ಆದ್ದರಿಂದ ಕರ್ಮ-ಮೀಮಾಂಸಾ, ದೈವೀಮೀಮಾಂಸಾಗಳಲ್ಲಿ ಇಲ್ಲದ ಅತಿಶಯಿತಪ್ರಾಮಾಣ್ಯವು ಈ ಬ್ರಹ್ಮ-ಮೀಮಾಂಸಾಶಾಸ್ತ್ರದಲ್ಲಿದೆಯೆಂದು ತಿಳಿಯಬೇಕು.

ವಿವರಣೆ – ಬ್ರಹ್ಮಸೂತ್ರಪ್ರಾಮಾಣ್ಯವೇ ಪ್ರಮೇಯವಾಗಿದೆ. ಅದಕ್ಕೆ ಜ್ಞಾಪಕವಾದದ್ದು ಮೂರು ಬಗೆಯಾಗಿವೆ. ಇವುಗಳು ಮೂರಾದರೂ ಪ್ರಮೇಯವು ಒಂದೇ ಆಗಿದೆ. ಯಾವುದೇ ಒಂದು ಪ್ರಮಾಣವು ಸ್ವತಃ ಪ್ರವೃತ್ತಿಗೆ ಉಪಯುಕ್ತವಾಗುವುದಿಲ್ಲ. ಪ್ರಮಾಣತಯಾ ಪ್ರಮಿತವಾದರೆ ಮಾತ್ರ ಉಪಯುಕ್ತವಾಗುತ್ತದೆ. ಪ್ರಮಾಣದ ಪ್ರಾಮಾಣ್ಯವು ಎಷ್ಟು ಬಲಿಷ್ಠವಾದ ಪ್ರಮಾಣಗಳಿಂದ ಸಿದ್ಧ-ವಾಗುತ್ತದೋ ಅಷ್ಟೇ ದೃಢವಾದ ಮತ್ತು ಕ್ಷಿಪ್ರವಾದ ಪ್ರವೃತ್ತಿಯು ಆ ಪ್ರಮೇಯದಲ್ಲಿ ಉಂಟಾಗುತ್ತದೆ. ಆದಕ್ಕೋಸ್ಕರ 'ಪ್ರಮಾಣ್ಯಂ ಮಹತ್' ಎಂಬುದಾಗಿ ಮೂಲದಲ್ಲಿ ಹೇಳಿದ್ದಾರೆ.

ಪ್ರವೃತ್ತಿಯಲ್ಲಿ ಶೀಘ್ರತಾರೂಪವಾದ ಅತಿಶಯವು ಇರುತ್ತದೆ. ಈ ಕಾರ್ಯಾತಿಶಯದಿಂದ ಪ್ರಾಮಾಣ್ಯವು ಮಹತ್ತಾಗಿದೆ ಎಂಬುದಾಗಿ ಹೇಳಿದ್ದಾಯಿತು. ಈಗ ವಿಷಯಾತಿಶಯ ಹಾಗೂ ಪ್ರಯೋ-ಜನಾತಿಶಯದಿಂದಲೂ ಕೂಡ ಬ್ರಹ್ಮಸೂತ್ರದಲ್ಲಿ ಅತಿಶಯವಿದೆ ಎಂಬುದನ್ನು ಸಮರ್ಥಿಸುತ್ತಿದ್ದಾರೆ. ಬ್ರಹ್ಮಸೂತ್ರ ಎಂಬ ಪದಪ್ರಯೋಗದಿಂದ ಪರಬ್ರಹ್ಮ ಎಂಬ ವಿಷಯವನ್ನು ಉಲ್ಲೇಖ ಮಾಡಿದ್ದಾರೆ. 'ಅಜಾದಿಭ್ಯಸ್ತದರ್ಥತಃ' ಎಂಬುದರಿಂದ ಮೋಕ್ಷರೂಪಪ್ರಯೋಜನವನ್ನು ತಿಳಿಸಿದ್ದಾರೆ. ಹೀಗೆ ಸರ್ವೋತ್ತಮವಾದ ವಿಷಯ ಹಾಗೂ ಪ್ರಯೋಜನಗಳು ಇರುವುದರಿಂದಲೂ ಸರ್ವೋತ್ತಮ-ಪ್ರಾಮಾಣ್ಯವು ಬ್ರಹ್ಮಸೂತ್ರಗಳಲ್ಲಿದೆ ಎಂದು ತಿಳಿಯಬೇಕು.

## ಅನುವ್ಯಾಖ್ಯಾನದಲ್ಲಿ 'ಯತಃ' 'ಅತಃ' ಎಂಬೆರಡು ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು.

ವಾಕ್ಯಾರ್ಥಚಂದ್ರಿಕಾ – 'ಏಕಧಾऽನ್ಯತ್ರ ಸರ್ವಶಃ' ಇತ್ಯನೇನ, 'ಅತೋ ನೈತಾದೃಶಮ್' ಇತ್ಯುಪಸಂಹಾರಬಲೇನ ಚ ಲಬ್ಧಂ, ಪ್ರಾಮಾಣ್ಯಸಾಧಕಪ್ರಮಾಣೇ ತ್ರೈವಿಧ್ಯಂ, ತಸ್ಯಾನುತ್ತಮತ್ವೇ ಹೇತುತ್ವಂ ಚ, ದರ್ಶಯಿತುಂ ಯತ್ತಚ್ಛಬ್ದಾರ್ಥಾಧ್ಯಾಹಾರೇಣ ವಾಕ್ಯಂ ವ್ಯಾಖ್ಯಾತಿ – ಯತ ಇತಿ ॥ ಯದ್ವಾ ಏವಂ ಪದಾರ್ಥಮುಕ್ತ್ವಾ ವಾಕ್ಯಾರ್ಥಮಾಹ – ಯತ ಇತಿ ॥

'ಏಕಧಾऽನ್ಯತ್ರ ಸರ್ವಶಃ' ಎಂಬುದರಿಂದ, 'ಅತೋ ನೈತಾದೃಶಮ್' ಎಂಬ ಉಪಸಂಹಾರದ ಬಲದಿಂದ ಯಾವ ಪ್ರಾಮಾಣ್ಯಸಾಧಕಪ್ರಮಾಣದಲ್ಲಿ ತ್ರೈವಿಧ್ಯವು ಲಬ್ಧವಾಗಿದೆಯೋ ಅದು ಅನುತ್ತಮವಾಗಿದೆ ಎಂಬ ವಿಷಯದಲ್ಲಿ ಕಾರಣವನ್ನು ತಿಳಿಸುವುದಕ್ಕಾಗಿ ಯತ್ ಮತ್ತು ತತ್ ಶಬ್ದಗಳ ಅರ್ಥವನ್ನು ಅಧ್ಯಾಹಾರ ಮಾಡುವ ಮೂಲಕ ''ಯತಃ'' ಇತ್ಯಾದಿಯಾಗಿ ಅನುವ್ಯಾಖ್ಯಾನದ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅಥವಾ ಪದಗಳ ಅರ್ಥವನ್ನು ಹೇಳಿ ವಾಕ್ಯದ ಅರ್ಥವನ್ನು ತಿಳಿಸಲು ''ಯತಃ'' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ –

ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।
ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ ॥

ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।
ದೃಶ್ಯತೇ ಬ್ರಹ್ಮಸೂತ್ರಾಣಾಂ ಏಕಧಾऽನ್ಯತ್ರ ಸರ್ವಶಃ ॥

ಈ ಅನುವ್ಯಾಖ್ಯಾನಪದ್ಯದಲ್ಲಿ ಟೀಕಾರಾಯರು 'ಯತಃ' ಮತ್ತು 'ತತಃ' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡುತ್ತಿದ್ದಾರೆ. 'ಯತಃ' = ಯಾವ ಕಾರಣದಿಂದ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ತ್ರಿವಿಧವೆಂದು ತಿಳಿಯುತ್ತಿದೆಯೋ 'ತತಃ' = ಆ ಕಾರಣದಿಂದ ಈ ಬ್ರಹ್ಮಸೂತ್ರದ ಪ್ರಾಮಾಣ್ಯವು ಅನುತ್ತಮವಾಗಿದೆ ಎಂದು ವಾಕ್ಯಯೋಜನೆಯನ್ನು ಮಾಡಿದ್ದಾರೆ.

ಇಲ್ಲಿ ಯತಃ ಮತ್ತು ಅತಃ ಎಂಬೆರಡು ಪದಗಳನ್ನು ಏಕೆ ಅಧ್ಯಾಹಾರ ಮಾಡಿದ್ದಾರೆ? ಪ್ರಮಾಣ-ತ್ರಯೇಣ ಅವಸಿತತ್ವವು ಪ್ರಾಮಾಣ್ಯದ ಅನುತ್ತಮತ್ವಕ್ಕೆ ಹೇತುವಾಗಿದೆ ಎಂಬುದನ್ನು ತಿಳಿಸುವ ಉದ್ದೇಶ-ದಿಂದ ಯತಃ ಮತ್ತು ಅತಃ ಪದಗಳನ್ನು ಅಧ್ಯಾಹಾರ ಮಾಡಿದ್ದಾರೆ. ಮತ್ತು 'ತ್ರಿವಿಧಂ ಪ್ರಾಮಾಣ್ಯಂ' ಎಂದು ಅನ್ವಯವನ್ನು ತಿಳಿಯಬಾರದು. ಕ್ರಿಯಾವಿಶೇಷಣವನ್ನಾಗಿ ತಿಳಿದು 'ಪ್ರಾಮಾಣ್ಯಂ ತ್ರಿವಿಧಂ ದೃಶ್ಯತೇ' = 'ಪ್ರಮಾಣತ್ರಯೇಣ ಜ್ಞಾಯತೇ' ಎಂಬುದಾಗಿ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ಮೂರು ಬಗೆಯ ಪ್ರಮಾಣಗಳಿಂದ ತಿಳಿಯುತ್ತಿದೆ ಎಂದು ವ್ಯಾಖ್ಯಾನ ಮಾಡಲಾಗಿತ್ತು. ಈ ಕಾರಣದಿಂದ ಬ್ರಹ್ಮ-ಸೂತ್ರಗಳ ಪ್ರಾಮಾಣ್ಯವು ಅನುತ್ತಮವಾಗಿದೆಯೆಂದು ತಿಳಿಯುತ್ತದೆ. ಇಲ್ಲಿ ಅನುಮಾನಪ್ರಯೋಗವನ್ನು ಹೀಗೆ ತಿಳಿಯಬೇಕು. – 'ಬ್ರಹ್ಮಸೂತ್ರಪ್ರಾಮಾಣ್ಯಂ ಅನುತ್ತಮಂ ಪ್ರಮಾಣತ್ರಯೇಣ ಅವಸಿತತ್ವಾತ್' -

ಯತಃ ಮತ್ತು ತತಃ ಎಂಬ ಪದಗಳನ್ನು ಅಧ್ಯಾಹಾರ ಮಾಡಿದರೆ ಮಾತ್ರ 'ಪ್ರಮಾಣತ್ರಯೇಣ ಅವಸಿತತ್ವ' ಎಂಬುದು ಅನುತ್ತಮತ್ವಕ್ಕೆ ಸಾಧಕವಾಗುತ್ತದೆ ಎಂದು ತಿಳಿಯುತ್ತದೆ.

'ಏಕಧಾನ್ಯತ್ರ ಸರ್ವಶಃ' ಎಂಬುದಾಗಿ ಮುಂದೆ ಆಚಾರ್ಯರು ಹೇಳುತ್ತಾರೆ. 'ಉಳಿದ ಕಡೆ ಒಂದು ಅಥವಾ ಎರಡು ಬಗೆಯಲ್ಲಿ ಪ್ರಾಮಾಣ್ಯವು ಕಾಣಸುತ್ತಿದೆ' ಎಂದು ಹೇಳಿದ್ದರಿಂದ 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬಲ್ಲಿ ಪ್ರಾಮಾಣ್ಯಸಾಧಕವಾದ ಪ್ರಮಾಣದಲ್ಲಿ ತ್ರೈವಿಧ್ಯವು ಕಾಣಸುತ್ತಿದೆ ಎಂಬರ್ಥವು ಆಚಾರ್ಯರಿಗೆ ಇಲ್ಲಿ ಸಮ್ಮತವಾಗಿದೆಯೆಂದು ತಿಳಿಯುತ್ತದೆ. ಅರ್ಥಾತ್ ತ್ರಿವಿಧಂ ಎಂಬುದಕ್ಕೆ ದೃಶ್ಯತೇ ಎಂಬಲ್ಲಿ ಅನ್ವಯವೆಂದು ತಿಳಿಯುತ್ತದೆ. 'ಅತೋ ನೈತಾದೃಶಂ ಕಿಂಚಿತ್' ಎಂಬುದಾಗಿ ಆಚಾರ್ಯರು ಉಪಸಂಹಾರ ಮಾಡಿದ್ದಾರೆ. ಇದರಿಂದ ಅನುತ್ತಮತ್ವಕ್ಕೆ ಲಿಂಗತ್ರಯಾವಸಿತತ್ವವು ಹೇತುವಾಗಿದೆಯೆಂದು ತಿಳಿಯುತ್ತದೆ. ಈ ಎರಡೂ ವಿಚಾರಗಳನ್ನು ಸ್ಪಷ್ಟಪಡಿಸುವುದಕ್ಕಾಗಿ ಯತಃ ಮತ್ತು ತತಃ ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ವ್ಯಾಖ್ಯಾನ ಮಾಡಿದ್ದಾರೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು – 'ಏಕಧಾಽನ್ಯತ್ರ ಸರ್ವಶಃ' ಎಂಬುದರಿಂದ ಪ್ರಾಮಾಣ್ಯಸಾಧಕ-ಪ್ರಮಾಣದಲ್ಲಿ ತ್ರೈವಿಧ್ಯವನ್ನು ಆಚಾರ್ಯರು ಅಭಿಪ್ರಾಯ ಪಟ್ಟಿದ್ದಾರೆ. 'ಅತೋ ನೈತಾದೃಶಂ' ಎಂಬ ಉಪಸಂಹಾರದ ವಾಕ್ಯದಿಂದ ಬ್ರಹ್ಮಸೂತ್ರಪ್ರಾಮಾಣ್ಯವು ಅನುತ್ತಮವಾಗಿದೆಯೆನ್ನಲು ಲಿಂಗತ್ರಯಾ-ವಸಿತತ್ವವು ಹೇತುವಾಗಿದೆ ಎಂಬುದನ್ನು ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ ವಾಕ್ಯಾರ್ಥಚಂದ್ರಿಕಾದಲ್ಲಿರುವ 'ಏಕಧಾ' ಇತ್ಯಾದಿವಾಕ್ಯದಲ್ಲಿ ಪ್ರತ್ಯೇಕವಾಗಿ ಅನ್ವಯವನ್ನು ತಿಳಿದುಕೊಳ್ಳಬೇಕು. 'ಏಕಧಾನ್ಯತ್ರ ಸರ್ವಶಃ ಇತ್ಯನೇನ ಪ್ರಾಮಾಣ್ಯಸಾಧಕಪ್ರಮಾಣೇ ತ್ರೈವಿಧ್ಯಂ ದರ್ಶಯಿತುಂ' ಎಂದು ಅನ್ವಯವನ್ನು ತಿಳಿದು 'ಅತೋ ನೈತಾದೃಶಂ ಇತ್ಯುಪಸಂಹಾರಬಲೇನ ಚ ಲಬ್ಧಂ ತಸ್ಯ ಅನುತ್ತಮತ್ವೇ ಹೇತುತ್ವಂ ಚ ದರ್ಶಯಿತುಂ' ಎಂಬುದಾಗಿ ಅನ್ವಯವನ್ನು ಮಾಡಿಕೊಂಡು ಯತಃ ಏವಂ ಇತ್ಯಾದಿ ಗ್ರಂಥದ ಅರ್ಥವನ್ನು ತಿಳಿದುಕೊಳ್ಳಬೇಕು.

## ಬ್ರಹ್ಮಸೂತ್ರಗಳಲ್ಲಿರುವ ತ್ರಿವಿಧಪ್ರಾಮಾಣ್ಯವು ಮಾತ್ರ ಅನುತ್ತಮ

ವಾಕ್ಯಾರ್ಥಚಂದ್ರಿಕಾ – ಅನ್ಯತ್ರ ದ್ವೈವಿಧ್ಯಸ್ಯ ಸ್ಪಷ್ಟದೃಷ್ಟತ್ವೇಽಪಿ 'ಸರ್ವಶಃ' ಇತಿ ಯದ್ವಚನಂ ತತ್ 'ಏಕಧಾ' ಇತ್ಯಸ್ಯೋಪಲಕ್ಷಣತ್ವಜ್ಞಾಪಕಮಿತ್ಯಾಹ – ಸರ್ವಶ ಇತೀತಿ ॥ 'ಆಪ್ತ್ಯಾದಿಕಮ್' ಇತ್ಯತ್ರ ಆದಿಪದೇನ ಶ್ರುತಿಮಹಾತಾತ್ಪರ್ಯವಿಷಯಸಮಾನಾರ್ಥತ್ವಮಿತಿ ನಿರವಕಾಶಯುಕ್ತ್ಯನುಸಂಧಾನಾ-ತ್ಮಕತ್ವಂ ಚ ಪರಿಗೃಹ್ಯತೇ ॥

ಬೇರೆಡೆ ದ್ವೈವಿಧ್ಯವು ಸ್ಪಷ್ಟವಾಗಿ ಕಂಡಿದ್ದರೂ ಕೂಡ 'ಸರ್ವಶಃ' ಎಂಬ ಆಚಾರ್ಯರ ಮಾತಿನಿಂದ 'ಏಕಧಾ' ಎಂಬುದು ಉಪಲಕ್ಷಣವಾಗಿದೆ ಎಂಬುದು ತಿಳಿಯುತ್ತದೆ. ಅದನ್ನೇ 'ಸರ್ವಶಃ ಇತಿ' ಎಂಬ ವಾಕ್ಯವು ತಿಳಿಸುತ್ತಿದೆ. 'ಆಪ್ತ್ಯಾದಿಕಂ' ಎಂಬಲ್ಲಿರುವ ಆದಿಪದದಿಂದ ಶ್ರುತಿಮಹಾತಾತ್ಪರ್ಯವಿಷಯಸಮಾನಾರ್ಥತ್ವವು ಬ್ರಹ್ಮಸೂತ್ರಗಳಲ್ಲಿ ಇರುತ್ತದೆ. ಮತ್ತು ನಿರವಕಾಶಯುಕ್ತ್ಯನುಸಂಧಾನಾತ್ಮಕತ್ವವು ಕೂಡ ಇರುತ್ತದೆಂದು ವಿವಕ್ಷಿಸಬೇಕು.

ವಿವರಣೆ – 'ಏಕಧಾನ್ಯತ್ರ ಸರ್ವಶಃ' ಎಂಬುದಾಗಿ ಆಚಾರ್ಯರು 'ಸರ್ವಶಃ' ಎಂಬ ಪದದಿಂದ 'ಉಳಿದೆಲ್ಲ ಕಡೆ' ಎಂದು ಹೇಳಿದ್ದಾರೆ. ಇದರಿಂದ ಏಕಧಾ ಎಂಬ ಪದವು ದ್ವೈವಿಧ್ಯಕ್ಕೆ ಮತ್ತು ತ್ರೈವಿಧ್ಯಕ್ಕೆ ಉಪಲಕ್ಷಕವೆಂದು ತಿಳಿಯುತ್ತದೆ. ಏಕೆಂದರೆ ಬೇರೆಡೆ ದ್ವಿವಿಧ ಪ್ರಾಮಾಣ್ಯವಿರುವುದು ಸ್ಪಷ್ಟವಾಗಿ ಕಾಣಿಸುತ್ತಿದೆ. ಆದರೂ 'ಏಕಧಾ' ಎಂಬ ಪದಪ್ರಯೋಗವನ್ನು ಮಾಡಿದ್ದರಿಂದ ದ್ವೈವಿಧ್ಯಕ್ಕೆ ಹಾಗೂ ತ್ರೈವಿಧ್ಯಕ್ಕೆ ಉಪಲಕ್ಷಣವಾಗಿದೆಯೆಂದೇ ತಿಳಿಯತಕ್ಕದ್ದು.

ಜೈಮಿನೀಸೂತ್ರದಲ್ಲಿ ಆಪ್ತಿಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವವೆಂಬ ತ್ರಿವಿಧಪ್ರಾಮಾಣ್ಯವೂ ಕೂಡ ಇರುತ್ತದೆ. ಆದರೆ ಜೈಮಿನ್ಯಾಚಾರ್ಯರಲ್ಲಿ ಇರುವಂಥ ಆಪ್ತಿಯು ಸಾವಧಿಕವಾಗಿದೆ. ಏಕೆಂದರೆ, ಆಪ್ತಿಶಬ್ದದಲ್ಲಿ ವಿವಕ್ಷಿತಾರ್ಥತತ್ವಜ್ಞಾನವು ಸೇರಿದೆ. ಆ ತತ್ವಜ್ಞಾನವು ಜೈಮಿನ್ಯಾಚಾರ್ಯರಲ್ಲಿ ನಿರವಧಿಕವಾಗಿಲ್ಲ. ನಿರವಧಿಕ ಎಂದರೆ 'ನಿತ್ಯವಾಗಿರಬೇಕು. ಸರ್ವವಿಷಯಕವಾಗಿರಬೇಕು' ಎಂದರ್ಥ. ಜೈಮಿನ್ಯಾಚಾರ್ಯರ ತತ್ವಜ್ಞಾನವು ಅನಿತ್ಯವಾಗಿದೆ ಮತ್ತು ಅಸರ್ವವಿಷಯಕವಾಗಿದೆ. ಅನಂತವಾದ ಶ್ರುತಿ, ಯುಕ್ತಿಗಳ ಪರಿಜ್ಞಾನ ಜೈಮಿನ್ಯಾಚಾರ್ಯರಿಗೆ ಇರುವುದಿಲ್ಲ. ಆದ್ದರಿಂದ ಅಸರ್ವಜ್ಞರಾದ ಕಾರಣ ವೇದವ್ಯಾಸದೇವರಂತೆ ಜೈಮಿನ್ಯಾಚಾರ್ಯರಲ್ಲಿ ಆಪ್ತಿಯು ಸರ್ವಥಾ ನಿರವಧಿಕವಾಗಿಲ್ಲ. 'ಆದಿ'ಪದದಿಂದ ಜೈಮಿನ್ಯಾಚಾರ್ಯರ ಸೂತ್ರವು ಶ್ರುತಿಯ ಅವಾಂತರತಾತ್ಪರ್ಯವಿಷಯಕ್ಕೆ ಸಮಾನಾರ್ಥವುಳ್ಳದ್ದಾಗಿದೆ ಎಂಬುದನ್ನು ವಿವಕ್ಷಿಸಬೇಕು. ಶ್ರುತಿಯ ಮಹಾತಾತ್ಪರ್ಯಕ್ಕೆ ಪರಮಾತ್ಮನೇ ವಿಷಯನಾಗಿದ್ದಾನೆ. ತತ್ಸಮಾನಾರ್ಥವನ್ನು ಬ್ರಹ್ಮಸೂತ್ರಗಳು ಹೊಂದಿವೆ. ಆದರೆ ಜೈಮಿನೀಸೂತ್ರಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿಲ್ಲ. ಕರ್ಮವನ್ನಷ್ಟೇ ಪ್ರತಿಪಾದನೆ ಮಾಡುತ್ತಿವೆ. ಈ ಕರ್ಮಗಳೆಲ್ಲವೂ ಶ್ರುತಿಯ ಅವಾಂತರತಾತ್ಪರ್ಯಗಳಾಗಿವೆ. ಆದ್ದರಿಂದ ಶ್ರುತಿಗೆ ಯಾವ ಧರ್ಮಗಳು ಅವಾಂತರತಾತ್ಪರ್ಯಕ್ಕೆ ವಿಷಯವಾಗಿವೆಯೋ ತತ್ಸಮಾನಾರ್ಥತ್ವವು ಜೈಮಿನೀಸೂತ್ರಗಳಿವೆ. ಆದ್ದರಿಂದ ಸಾವಕಾಶವಾಗಿವೆ. ಬ್ರಹ್ಮಸೂತ್ರಗಳು ನಿರವಕಾಶವಾಗಿದೆ. ಹೀಗೆ ನಿರವಕಾಶಯುಕ್ತ್ಯನುಸಂಧಾನಾತ್ಮಕತ್ವವು ಕೂಡ ಬ್ರಹ್ಮಸೂತ್ರಗಳಲ್ಲಿರುವುದರಿಂದ ತ್ರಿವಿಧಪ್ರಾಮಾಣ್ಯವು ಅನುತ್ತಮವಾಗಿದೆ.

## ಸ್ವಕಾರ್ಯದ ಅತಿಶಯದಿಂದಷ್ಟೇ ಪ್ರಾಮಾಣ್ಯದಲ್ಲಿ ಅತಿಶಯವಿರುವುದಲ್ಲ

ವಾಕ್ಯಾರ್ಥಚಂದ್ರಿಕಾ – ಕಥಮೇತದಿತಿ ॥ ಪ್ರಾಮಾಣ್ಯಜ್ಞಾಪಕತ್ರೈವಿಧ್ಯಾತ್ ಪ್ರಾಮಾಣ್ಯೇ ಮಹತ್ತ್ವಂ ನೋಪಪನ್ನಮಿತ್ಯರ್ಥಃ।

ನ ಕೇವಲಂ ಸಾಕ್ಷಾದ್ಭಾಷ್ಯಕಾರೋಕ್ತೋ ಲಿಂಗತ್ರಯಾವಸಿತತ್ವಪ್ರಯುಕ್ತಸ್ವಕಾರ್ಯಾತಿಶಯವಶಾದೇವ ಪ್ರಾಮಾಣ್ಯೇಽತಿಶಯಃ ಅಪಿ ತು ಫಲವತ್ತ್ವೇ ಸತಿ ಜ್ಞಾನಸಾಧನತ್ವೋಪಾಧಿನಾ ಯಥಾಸ್ಥಿತಜ್ಞೇಯವಿಷಯಕಾರಿತ್ವರೂಪವಾಕ್ಯಪ್ರಾಮಾಣ್ಯಸ್ಯ ಪ್ರಕೃತೇ ಸರ್ವೋತ್ತಮಜ್ಞೇಯವಿಷಯೀಕಾರಿತ್ವರೂಪತಯಾ, ಸರ್ವೋತ್ತಮಫಲಸಾಧನಜ್ಞಾನಸಾಧನತ್ವೋಪಾಧಿಕತ್ವಾತ್ ಚಾತಿಶಯೋ ಭಾಷ್ಯಕಾರಾಭಿಪ್ರೇತೋ ದ್ರಷ್ಟವ್ಯ ಇತ್ಯಾಹ – ಏವಮಿತಿ ॥ ಭಾಷ್ಯಮುಪಲಕ್ಷಣಮಿತಿ ಅಭಿಪ್ರೇತ್ಯ ವಾಽಽಹ – ಏವಮಿತಿ ॥

ಪ್ರಾಮಾಣ್ಯಜ್ಞಾಪಕವಾದದ್ದರಲ್ಲಿ ತ್ರೈವಿಧ್ಯವು ಇದ್ದ ಮಾತ್ರಕ್ಕೆ ಪ್ರಾಮಾಣ್ಯದಲ್ಲಿ ಮಹತ್ವವು ಉಪಪನ್ನವಾಗುವುದಿಲ್ಲ ಎಂಬ ಆಕ್ಷೇಪವನ್ನು "ಕಥಮೇತತ್" ಎಂಬುದರಿಂದ ಹೇಳಿದ್ದಾರೆ. ಭಾಷ್ಯಕಾರರು ಸಾಕ್ಷಾತ್ತಾಗಿ ಹೇಳಲ್ಪಟ್ಟ ಲಿಂಗತ್ರಯಾವಸಿತತ್ವಪ್ರಯುಕ್ತವಾದ ಸ್ವಕಾರ್ಯದ ಅತಿಶಯದಿಂದಲೇ ಪ್ರಾಮಾಣ್ಯದಲ್ಲಿ ಅತಿಶಯವು ಇರುವುದಲ್ಲ; ಮತ್ತೊಂದು ಕಾರಣದಿಂದಲೂ ಅತಿಶಯವು ಸಿದ್ಧವಾಗುತ್ತದೆ. ಫಲವತ್ವವಿಶಿಷ್ಟವಾದ ಜ್ಞಾನಸಾಧನತ್ವ ಎಂಬ ನಿಮಿತ್ತದಿಂದ ಯಥಾವಸ್ಥಿತಜ್ಞೇಯವಿಷಯಕಾರಿತ್ವವೆಂಬ ವಾಕ್ಯಪ್ರಾಮಾಣ್ಯಕ್ಕೆ ಪ್ರಕೃತ ಬ್ರಹ್ಮಸೂತ್ರದಲ್ಲಿ ಸರ್ವೋತ್ತಮನಾದ ನಾರಾಯಣನೆಂಬ ಜ್ಞೇಯವಿಷಯಕಾರಿತ್ವವಿದೆ. ಸರ್ವೋತ್ತಮವಾದ ಮೋಕ್ಷವೆಂಬ ಫಲಕ್ಕೆ ಸಾಧನವಾದ ಜ್ಞಾನಕ್ಕೆ ಸಾಧನವಾಗಿರುವಿಕೆ ಎಂಬ ಉಪಾಧಿಯೂ ಇದೆ. ಆದ್ದರಿಂದ ಪ್ರಾಮಾಣ್ಯದಲ್ಲಿ ಅತಿಶಯವಿದೆ. ಇಂಥ ಅತಿಶಯವನ್ನು ಕೂಡ ಭಾಷ್ಯಕಾರರು ಅಭಿಪ್ರಾಯ ಪಟ್ಟಿದ್ದಾರೆಂದು ತಿಳಿಯಬೇಕು. ಇದನ್ನು "ಏವಂ" ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಅಥವಾ ಭಾಷ್ಯವು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ ಮತ್ತೊಂದು ವ್ಯಾಖ್ಯಾನವನ್ನು "ಏವಂ" ಇತ್ಯಾದಿಗ್ರಂಥದಿಂದ ತೋರಿಸಿದ್ದಾರೆಂದು ಕೂಡ ತಿಳಿಯಬಹುದು.

ವಿವರಣೆ – ಬ್ರಹ್ಮಸೂತ್ರಪ್ರಾಮಾಣ್ಯವು ಅತಿಶಯಿತವಾಗಿದೆ. ಏಕೆಂದರೆ, ಪ್ರಾಮಾಣ್ಯಕಾರ್ಯವಾದ ಪ್ರವೃತ್ತಿಯಲ್ಲಿ ಅತಿಶಯಿತವಿದೆ. ಬ್ರಹ್ಮಸೂತ್ರಪ್ರಾಮಾಣ್ಯದ ನಿಶ್ಚಯವಾದ ಮೇಲೆ ನಿಃಶಂಕಾಪ್ರವೃತ್ತಿಯನ್ನು

ಮಾಡುತ್ತಾರೆ. ಅನೇಕ ಪ್ರಮಾಣಗಳಿಂದ ಪ್ರಾಮಾಣ್ಯವು ದೃಢವಾಗಿರುವುದರಿಂದ ನಿಃಶಂಕಾಪ್ರವೃತ್ತಿಯು ಉಂಟಾಗುತ್ತದೆ. ಭಾಷ್ಯಕಾರರು ಇಷ್ಟನ್ನು ಹೇಳಿದ್ದಾರೆ. ಆದರೆ ಇಷ್ಟು ಮಾತ್ರ ಭಾಷ್ಯಕಾರರಿಗೆ ಅಭಿಪ್ರೇತವಲ್ಲ. ವಿಷಯದಲ್ಲಿ ಹಾಗೂ ಪ್ರಯೋಜನದಲ್ಲೂ ಕೂಡ ಅತಿಶಯವಿದೆ ಎಂಬುದನ್ನು ತಿಳಿಯಬೇಕು. ಬ್ರಹ್ಮಸೂತ್ರದ ವಿಷಯವು ಸರ್ವೋತ್ತಮವಾಗಿದೆ. ಪ್ರಯೋಜನವೂ ಕೂಡ ಸರ್ವೋತ್ತಮವಾಗಿದೆ. ಇವೆರಡರಲ್ಲಿ ಸರ್ವೋತ್ತಮತ್ವವು ಇದ್ದ ಮಾತ್ರಕ್ಕೆ ಪ್ರಾಮಾಣ್ಯದಲ್ಲಿ ಸರ್ವೋತ್ತಮತ್ವವು ಏಕೆ ಬರಬೇಕು? ಎಂದರೆ ಉತ್ತರವನ್ನು ಹೀಗೆ ತಿಳಿಯಬೇಕು – 'ಯಥಾವಸ್ಥಿತಜ್ಞೇಯವಿಷಯಕಾರಿತ್ವ'ವನ್ನು ಪ್ರಾಮಾಣ್ಯವೆಂದು ಹೇಳುತ್ತಾರೆ. ಯಾವುದು ಕೇವಲ ಪ್ರಮಾಣವಾಗಿರುತ್ತದೋ ಅದು ಸಾಕ್ಷಾತ್ ಜ್ಞೇಯವಿಷಯಕಾರಿಯಾಗಿರುತ್ತದೆ. ಅನುಪ್ರಮಾಣವು ಯಥಾರ್ಥಜ್ಞಾನಸಾಧನವಾಗಿದ್ದುಕೊಂಡು ಯಥಾವಸ್ಥಿತಜ್ಞೇಯವಿಷಯಕಾರಿ ಆಗಿರುತ್ತದೆ. ಮತ್ತು ಪ್ರತ್ಯಕ್ಷ, ಅನುಮಾನಗಳನ್ನು ಬಿಟ್ಟು ಆಗಮದಲ್ಲಿ ಫಲವತ್ತ್ವವು ಇರಬೇಕು. ವಾಕ್ಯಪ್ರಾಮಾಣ್ಯಕ್ಕೆ ಫಲವತ್ತ್ವವು ಪ್ರಯೋಜಕವಾಗುತ್ತದೆ. ಫಲ ಇದ್ದರೆ ಅದನ್ನು ಪ್ರಮಾಣ ಎಂದು ಹೇಳುವುದಿಲ್ಲ. ಯಥಾವಸ್ಥಿತಜ್ಞೇಯವಿಷಯಕಾರಿ ಆದರೆ ಮಾತ್ರ ಪ್ರಮಾಣವಾಗುತ್ತದೆ. ಇಂಥ ವಾಕ್ಯಪ್ರಾಮಾಣ್ಯಕ್ಕೆ ಫಲವತ್ತ್ವವು ಉಪಾಧಿಯೆಂದು ಕರೆಸಿಕೊಳ್ಳುತ್ತದೆ. ಅರ್ಥಾತ್ ಇಷ್ಟಸಾಧನಬೋಧಕವಾಗಿದ್ದರೆ ಮಾತ್ರ ಆ ವಾಕ್ಯವು ಪ್ರಮಾಣವಾಗುತ್ತದೆ. ಆದ್ದರಿಂದ ಯಥಾವಸ್ಥಿತಜ್ಞೇಯವಿಷಯಕಾರಿತ್ವವಷ್ಟೇ ಪ್ರಾಮಾಣ್ಯ ಎಂದು ಕರೆಸಿಕೊಂಡರೂ ಕೂಡ 'ಫಲವತ್ತ್ವೇ ಸತಿ ಜ್ಞಾನಸಾಧನತ್ವ' ಎಂಬ ಉಪಾಧಿಯು ಪ್ರಾಮಾಣ್ಯಕ್ಕೆ ಪ್ರಯೋಜಕವಾಗುತ್ತದೆ. ಪ್ರಕೃತ ಸರ್ವೋತ್ತಮನಾದ ಪರಮಾತ್ಮನು ವಿಷಯನಾಗಿದ್ದಾನೆ; ಮೋಕ್ಷವು ಪ್ರಯೋಜನರೂಪವಾಗಿದೆ. ಆದ್ದರಿಂದ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮಪ್ರಾಮಾಣ್ಯವು ಸಿದ್ಧವಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ಪ್ರಾಮಾಣ್ಯ ಎಂದರೆ ಯಥಾವಸ್ಥಿತಜ್ಞೇಯವಿಷಯಕಾರಿತ್ವ ಎಂದರ್ಥ. ಅನುಪ್ರಮಾಣದ ಪ್ರಾಮಾಣ್ಯಕ್ಕೆ ಜ್ಞಾನಸಾಧನತ್ವವು ನಿಮಿತ್ತವಾಗಿರುತ್ತದೆ. ಅನುಪ್ರಮಾಣವೇ ಎನಿಸಿದ ವಾಕ್ಯದ ಪ್ರಾಮಾಣ್ಯಕ್ಕೆ ಫಲವತ್ತ್ವವು ಕೂಡ ಬೇಕಾಗುತ್ತದೆ. ಆದ್ದರಿಂದ 'ಫಲವತ್ತ್ವವಿಶಿಷ್ಟವಾದ ಜ್ಞಾನಸಾಧನತ್ವ' ಎಂಬ ನಿಮಿತ್ತದಿಂದ ಕೂಡಿದ ಯಥಾವಸ್ಥಿತಜ್ಞೇಯವಿಷಯಕಾರಿತ್ವ ಎಂಬ ವಾಕ್ಯಪ್ರಾಮಾಣ್ಯವನ್ನು ಇಲ್ಲಿ ವಿವಕ್ಷಿಸಬೇಕು. ಪ್ರಕೃತ ಯಥಾವಸ್ಥಿತವಾದ ಜ್ಞೇಯ ಎಂದರೆ ಸರ್ವೋತ್ತಮನಾದ ನಾರಾಯಣನೇ ಆಗಿದ್ದಾನೆ. ಅವನನ್ನು ಈ ಬ್ರಹ್ಮಸೂತ್ರವು ವಿಷಯೀಕರಿಸುತ್ತಿದೆ. ಮೋಕ್ಷವೆಂಬ ಫಲವಿರುವುದರಿಂದ ಇಷ್ಟಸಾಧನವನ್ನೇ ವಾಕ್ಯವು ಬೋಧನೆ ಮಾಡುತ್ತಿದೆ. ಹೀಗೆ ಸರ್ವೋತ್ತಮವಾದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಸರ್ವೋತ್ತಮವಾದ ಮೋಕ್ಷವೆಂಬ ಫಲಕ್ಕೆ

ಸಾಧನವಾದ ಜ್ಞಾನಕ್ಕೆ ಸಾಧನವಾಗಿರುವುದರಿಂದ ಪ್ರಾಮಾಣ್ಯದಲ್ಲಿ ಅತಿಶಯವು ಬರುತ್ತದೆ ಎಂದಭಿಪ್ರಾಯ.

ಯಾದುಪತ್ಯ – ತತ್ರೇತಿ ॥ 'ಬ್ರಹ್ಮಸೂತ್ರಕರ್ತರಿ ಬಾದರಾಯಣೇ' ಇತ್ಯರ್ಥಃ ।

'ತತ್ರ' ಎಂಬುದಕ್ಕೆ 'ಬ್ರಹ್ಮಸೂತ್ರಕರ್ತೃಗಳಾದ ಬಾದರಾಯಣರಲ್ಲಿ' ಎಂದರ್ಥ.

## ಸುಧಾಪರಿಮಳಸಾರ

'ಏವ ಪ್ರಾಮಾಣ್ಯಂ ತ್ರಿವಿಧಂ ಮಹತ್ । ದೃಶ್ಯತೇ ಬ್ರಹ್ಮಸೂತ್ರಾಣಾಂ' ಎಂಬ ವಾಕ್ಯದಲ್ಲಿ 'ಯತಃ'(ಯಾವ ಕಾರಣದಿಂದ) ಮತ್ತು 'ಅತಃ'(ಆ ಕಾರಣದಿಂದ) ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪ್ರತಿಪದಾರ್ಥದ ಜೋಡಣೆ ಹೀಗೆ– ಯಾವ ಕಾರಣದಿಂದ ಹೀಗೆ (ಆಪ್ತಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವ) ಮೂರು ಪ್ರಮಾಣಗಳಿಂದ ಬ್ರಹ್ಮಸೂತ್ರಗಳಿಗೇ ಪ್ರಾಮಾಣ್ಯವು ತಿಳಿಯಲ್ಪಡುತ್ತದೆಯೋ ಆ ಕಾರಣದಿಂದ ಬ್ರಹ್ಮಸೂತ್ರದ ಪ್ರಾಮಾಣ್ಯವು ಅನುತ್ತಮ ಎಂದು ತಿಳಿಯಬೇಕು. ಬ್ರಹ್ಮಸೂತ್ರಗಳಿಗೆ ಮೂರು ಬಗೆಯ ಪ್ರಮಾಣಗಳಿಂದ ಕಾಣಸುತ್ತಿರುವ ಪ್ರಾಮಾಣ್ಯವು ಬೇರೆ ಗ್ರಂಥಗಳಿಗೂ ಸಿದ್ಧವಾದರೆ ಈ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ಅನುತ್ತಮವಾಗುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮಸೂತ್ರಾಣಾಮೇವ' ಎಂದು ಏವಕಾರವನ್ನು ಹೇಳಲಾಗಿದೆ. ಅದು ಹೇಗೆ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ—"ಏಕಧಾಽನ್ಯತ್ರ ಸರ್ವಶಃ" ಎಂಬ ಪದ್ಯಭಾಗದಿಂದ, ಅನ್ಯತ್ರ ಸರ್ವಶಃ ಬೇರೆ ಎಲ್ಲ ಕಡೆಯಲ್ಲಿಯೂ, ಏಕಧಾ=ಪ್ರಾಮಾಣ್ಯವು ಒಂದು ವಿಧ. ಎಲ್ಲ ಕಡೆ ಒಂದು ವಿಧ ಎಂದರೆ ಮೂರು ವಿಧವಿಲ್ಲ ಎಂದಿಷ್ಟೇ ಅಭಿಪ್ರಾಯ ವಿನಹ, ಒಂದೇ ವಿಧ ಎಂದಲ್ಲ; ಇದು ಅನ್ಯತ್ರ ಸರ್ವಶಃ ಎಂದಿರುವುದರಿಂದ ತಿಳಿದು ಬರುತ್ತದೆ. ಆದುದರಿಂದ ಕೆಲವೆಡೆ ಒಂದು ವಿಧ, ಕೆಲವೆಡೆ ಎರಡು ವಿಧ ಎಂದು ಭಾವ. ಒಂದೆ ವಿಧವಾದ ಪ್ರಾಮಾಣ್ಯವೆ ಎಲ್ಲೆಡೆ ಇರಲು ಸಾಧ್ಯವಿಲ್ಲಷ್ಟೆ.

ಬೇರೆಡೆಯಲ್ಲಿರುವ ಪ್ರಾಮಾಣ್ಯದ ವೈವಿಧ್ಯಗಳು ಹೀಗಿವೆ—ಕೆಲವು ಕಡೆ ಒಂದು ವಿಧವಾಗಿರುತ್ತದೆ.

ಉದಾಹರಣೆ : ಲೌಕಿಕವಿಷಯಕವಾದ ತಂದೆಯ ಮಾತು ಆಪ್ತಿಮೂಲವಾದುದರಿಂದ ಪ್ರಮಾಣ. ಧರ್ಮಾದಿ ಅತೀಂದ್ರಿಯವಿಷಯಕವಾದ ಪ್ರತಿವಾದಿಯ ಮಾತು. ಶ್ರುತಿಸಂವಾದ ಇದ್ದರೆ ಅದರಿಂದ ಪ್ರಮಾಣ. ಪ್ರತಿವಾದಿಯು ಪರ್ವತವು ಬೆಂಕಿಯುಳ್ಳದ್ದು ಎಂದು ಹೇಳಿದರೆ ಯುಕ್ತಿಸಂವಾದ(ಧೂಮವುಳ್ಳದ್ದರಿಂದ)-ವಿರುವುದರಿಂದ ಆ ಮಾತು ಪ್ರಮಾಣ.

ಕೆಲವೆಡೆ ಎರಡು ವಿಧವಾದ ಪ್ರಾಮಾಣ್ಯ—ಮನ್ವಾದಿಸ್ಮೃತಿವಾಕ್ಯದಲ್ಲಿ. ಅದು ಆಪ್ತಿಮೂಲ ಮತ್ತು ಶ್ರುತಿಸಂವಾದಿಯಾಗಿರುವುದರಿಂದ ಪ್ರಮಾಣ. ಪರ್ವತವು ಬೆಂಕಿಯುಳ್ಳದ್ದು ಎಂದು ಹೇಳಿದ ತಂದೆಯ ಮಾತು

ಆಪ್ತಿಮೂಲ ಮತ್ತು ಯುಕ್ತಿಮೂಲವಾದುದರಿಂದ ಪ್ರಮಾಣ. "ಈಶ್ವರನು ಸರ್ವಜ್ಞ" ಎಂಬ ಪ್ರತಿವಾದಿಯ ಮಾತು ಶ್ರುತಿಯುಕ್ತಿಮೂಲವಾದುದರಿಂದ ಪ್ರಮಾಣ.

"ಜೈಮಿನಿ ಮೊದಲಾದವರ ವಾಕ್ಯದಲ್ಲಿಯೂ ಒಂದೆ ತಿಳಿಸಿದ ಮೂರು ವಿಧ ಪ್ರಾಮಾಣ್ಯವಿರುವಾಗ ಬ್ರಹ್ಮಸೂತ್ರದಲ್ಲಿ ಮಾತ್ರ ಮೂರು ವಿಧ ಆದುದರಿಂದ ಪ್ರಾಮಾಣ್ಯ ಅನುತ್ತಮ ಎನಿಸುವುದು ಹೇಗೆಂಬ ಆಕ್ಷೇಪ ಸರಿಯೆ. ಆದರೆ ಜೈಮಿನಿ ಮೊದಲಾದವರ ವಾಕ್ಯದಲ್ಲಿಯೂ ಮೂರು ವಿಧ ಪ್ರಾಮಾಣ್ಯವಿದ್ದರೂ ಬ್ರಹ್ಮಸೂತ್ರದಲ್ಲಿ ಹೇಗಿದೆಯೋ ಹಾಗಿಲ್ಲ. ಬ್ರಹ್ಮಸೂತ್ರದಲ್ಲಿ ಆಪ್ತಿಮೂಲತ್ವ ಶ್ರುತಿಯುಕ್ತಿಮೂಲತ್ವಗಳು ನಿರವಧಿಕವಾಗಿವೆ. ಈ ಅಂಶವನ್ನು ತಿಳಿಸಲೋಸುಗವೂ "ಮಹತ್" ಎಂಬ ವಿಶೇಷಣವನ್ನು ತ್ರಿವಿಧಂ ಎಂಬುದರೊಂದಿಗೆ ಸೇರಿಸಬೇಕು. ಮಹತ್ತಾದ ಆಪ್ತವಾಕ್ಯತ್ವಾದಿ ಪ್ರಮಾಣತ್ರಯದಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವಿರುವುದರಿಂದ ಆ ಪ್ರಾಮಾಣ್ಯವು ಅನುತ್ತಮ. ನಿರವಧಿಕತ್ವವೇ ಆಪ್ತವಾಕ್ಯತ್ವಾದಿಪ್ರಮಾಣಗಳಲ್ಲಿರುವ ಮಹತ್ತ್ವ.

ಪ್ರಮಾಣವು ಒಂದಿದ್ದರೇನು, ಅನೇಕ ಇದ್ದರೇನು, ಪ್ರಮೇಯ ಹಾಗೇ ಇರುತ್ತದೆ ತಾನೆ? ಹೀಗಿರುವಾಗ ಮೂರು ಪ್ರಮಾಣದಿಂದ ಸಿದ್ಧವಾದ ಮಾತ್ರಕ್ಕೆ ಪ್ರಾಮಾಣ್ಯವು ಅನುತ್ತಮವೆಂದಾಗುವುದು ಹೇಗೆ ಎಂಬ ಆಕ್ಷೇಪಕ್ಕೆ ಉತ್ತರ ಹೀಗಿದೆ – ಪ್ರಮಾಣವಿದೆ ಎಂದಿಷ್ಟರಿಂದಲೇ ಒಂದು ಪ್ರಮಾಣವು ನಿಶ್ಶಂಕವಾದ ಪ್ರವೃತ್ತಿಗೆ ಕಾರಣವೆನಿಸುವುದಿಲ್ಲ. ಅದು ಪ್ರಮಾಣ ಎಂದು ಪ್ರಮಾಣಸಿದ್ಧವಾಗಿರಬೇಕು. ಆ ಪ್ರಾಮಾಣ್ಯವು ಎಷ್ಟೆಷ್ಟು ಪ್ರಮಾಣಗಳಿಂದ ಪ್ರಮಿತವಾಗುವುದೋ ಅಷ್ಟಷ್ಟು ದಾರ್ಢ್ಯವುಂಟಾಗಿ ಬೇಗ ನಿಶ್ಶಂಕಪ್ರವೃತ್ತಿಯಾಗುವುದು ಎಂಬುದು ಲೋಕಾನುಭವದಿಂದ ಸಿದ್ಧ. ಹೀಗೆ ಪ್ರಾಮಾಣ್ಯದ ಕಾರ್ಯವಾದ ನಿಶ್ಶಂಕಪ್ರವೃತ್ತಿಯಲ್ಲಿ ಇರುವ ಅತಿಶಯದಿಂದ ಪ್ರಾಮಾಣ್ಯವೇ ಅತಿಶಯವುಳ್ಳದ್ದು ಎನ್ನಲಾಗುವುದು.

ನಿಶ್ಶಂಕವಾದ ಕ್ಷಿಪ್ರಪ್ರವೃತ್ತಿಜನಕವಾದುದರಿಂದ ಬ್ರಹ್ಮಸೂತ್ರದ ಪ್ರಾಮಾಣ್ಯದಲ್ಲಿ ಅನುತ್ತಮತ್ವವೆಂಬ ಅತಿಶಯವಿರುವಂತೆ ಸರ್ವದೋಷವಿಹೀನತ್ವ ಮೊದಲಾದ ಗುಣವಿಶಿಷ್ಟನಾದ ಪರಬ್ರಹ್ಮನೆಂಬ ವಿಷಯ ಅತಿಶಯ-ವಿರುವುದರಿಂದಲೂ ಅನಲ್ಪಸ್ಥಿರವಾದ ಮೋಕ್ಷರೂಪನಿರತಿಶಯಪ್ರಯೋಜನ ಇರುವುದರಿಂದಲೂ ಬ್ರಹ್ಮಸೂತ್ರದ ಪ್ರಾಮಾಣ್ಯದಲ್ಲಿ ಅತಿಶಯವಿದೆ ಎಂದು ತಿಳಿಯಬೇಕು.

## ನೆನೆಪಿಡಿ

* 'ಪ್ರಾಮಾಣ್ಯಂ ತ್ರಿವಿಧಂ ಮಹತ್' ಎಂಬ ಅನುವ್ಯಾಖ್ಯಾನಶ್ಲೋಕದಲ್ಲಿ ಯತಃ ಮತ್ತು ಅತಃ ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.
* 'ಏಕಧಾ' ಎಂಬ ಪದವು ದ್ವೈವಿಧ್ಯ ಹಾಗೂ ತ್ರೈವಿಧ್ಯಗಳಿಗೆ ಉಪಲಕ್ಷಕವಾಗಿದೆ.

* ಜೈಮಿನೀ ಋಷಿಗಳು ರಚಿಸಿದ ಕರ್ಮಮೀಮಾಂಸಾದಲ್ಲಿ ನಿರವಧಿಕವಾದ ಆಪ್ತ-ಮೂಲಕತ್ವವು ಇರುವುದಿಲ್ಲ. ಮತ್ತು ಶ್ರುತಿಮಹಾತಾತ್ಪರ್ಯವಿಷಯಸಮಾನಾರ್ಥತ್ವವು ಕೂಡ ಇರುವುದಿಲ್ಲ. ಆದ್ದರಿಂದ ತ್ರಿವಿಧಪ್ರಾಮಾಣ್ಯವು ಅದರಲ್ಲಿದ್ದರೂ ಅನುತ್ತಮತ್ವವು ಪ್ರಾಪ್ತವಾಗು-ವುದಿಲ್ಲ.

* ಪ್ರಾಮಾಣ್ಯಜ್ಞಾಪಕಗಳಲ್ಲಿ ತ್ರೈವಿಧ್ಯವಿರುವುದರಿಂದ ಪ್ರಮೇಯದಲ್ಲಿ ಕ್ಷಿಪ್ರಪ್ರವೃತ್ತಿ ಉಂಟಾಗುತ್ತದೆ.

* ನಿಃಶಂಕಾಪ್ರವೃತ್ತಿಯಲ್ಲಿ ಅತಿಶಯವಿರುವುದರಿಂದ ಪ್ರಾಮಾಣ್ಯದಲ್ಲಿಅತಿಶಯವು ಸಿದ್ಧವಾಗುತ್ತದೆ.

* ಫಲವತ್ವವಿಶಿಷ್ಟವಾದ ಜ್ಞಾನಸಾಧನತ್ವವೆಂಬ ನಿಮಿತ್ತದಿಂದಲೇ ಯಥಾವಸ್ಥಿತಜ್ಞೇಯ-ವಿಷಯಕಾರಿತ್ವರೂಪವಾದ ಪ್ರಾಮಾಣ್ಯವು ವಾಕ್ಯದಲ್ಲಿ ಪ್ರಾಪ್ತವಾಗುತ್ತದೆ. ಇದು ಬ್ರಹ್ಮಸೂತ್ರ-ದಲ್ಲಿರುವುದರಿಂದ ಪ್ರಾಮಾಣ್ಯಾತಿಶಯವು ಸಿದ್ಧವಾಗುತ್ತದೆ.

**ಅನು– ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ।**

ಆದ್ದರಿಂದ ಬ್ರಹ್ಮಸೂತ್ರವೇ ಸರ್ವೋತ್ತಮಪ್ರಮಾಣವಾಗಿದೆ. ಇದರಂತೆ ಮತ್ತೊಂದು ಸರ್ವೋತ್ತಮಪ್ರಮಾಣವಿದೆ ಎಂದು ಪ್ರಾಮಾಣಿಕರು ಒಪ್ಪುವುದಿಲ್ಲ.

## ಪ್ರಾದುರ್ಭೂತ ಇತ್ಯಾದಿ ನಾಕು ಶ್ಲೋಕಗಳಿಂದ ಪ್ರಾಮಾಣ್ಯಸಮರ್ಥನೆ ಏಕೆ?

**ಶ್ರೀಮನ್ನ್ಯಾಯಸುಧಾ – ತದೇವಂ ಶ್ರುತ್ಯನುಮಾನಾಭ್ಯಾಮಿದಮೇವ ಶಾಸ್ತ್ರಂ ಪ್ರಮಾಣತಮಮ್, ನಾನ್ಯದೇತಾದೃಶಮಸ್ತಿ ಇತ್ಯುಪಸಂಹರತಿ – ಅತ ಇತಿ ॥ ಇಷ್ಯತೇ - 'ಪ್ರಾಮಾಣಿಕೈಃ' ಇತಿ ಶೇಷಃ । ತಥಾ ಚಾನ್ಯಪರಿಹಾರೇಣಾಸ್ಯೈವ ವ್ಯಾಖ್ಯಾನಂ ಯುಕ್ತಮಿತಿ ಹೃದಯಮ್ ।**

**ನನು ಭಾರತಂ ಸರ್ವಶಾಸ್ತ್ರೇಷೂತ್ತಮಮುಚ್ಯತೇ । ಸತ್ಯಮ್ । ವಿಚಾರ್ಯೇಷು ಶಾಸ್ತ್ರೇಷು ತದಿತ್ಯವಿರೋಧಃ ।**

**ನನು ಚ ಅಸ್ಯ ಶಾಸ್ತ್ರಸ್ಯಾರಂಭಣೀಯತ್ವಂ ಸೂತ್ರಕಾರ ಏವ ಪ್ರಥಮಸೂತ್ರೇ ಸಮರ್ಥಯತೇ । ತದ್ವ್ಯಾಖ್ಯಾನೇನೈವ ಸರ್ವಂ ಸಂಪದ್ಯತೇ । ಕಿಮನೇನ । ಪ್ರಥಮಸೂತ್ರ ಏವ ಕಥಂ ಪ್ರವೃತ್ತಿರಿತಿ ಚೇತ್, ಪ್ರಥಮಭಾಷ್ಯೇऽಪಿ ಕಥಮ್ । ಸಂದೇಹಾತ್ ಪ್ರವೃತ್ತಸ್ಯ ಪುನರುಕ್ತಪ್ರಮಾಣೈಃ ನಿರ್ಣಯ ಇತಿ ಚೇತ್, ಸಮಂ ಪ್ರಥಮಸೂತ್ರೇऽಪಿ । ಮೈವಮ್ । ವಿಷಯಾದಿಸಂಪಾದನೇನೈವ ತತ್ । ನಚ ತಾವತಾ ಆರಂಭಣೀಯತ್ವಮ್ । ಪ್ರಾಮಾಣ್ಯೇ ಹಿ ಸತಿ ಕಾಕದಂತಪರೀಕ್ಷಾದಿ-ಗ್ರಂಥವೈಲಕ್ಷಣ್ಯಾರ್ಥಂ ವಿಷಯಾದಿವ್ಯುತ್ಪಾದನಮುಪಯುಜ್ಯತೇ । ಅತಃ ಸೂತ್ರಾಕ್ಷಿಪ್ತಮೇವೇದಂ ಶಿಷ್ಯಾಣಾಂ ಬುದ್ಧಿಶುದ್ಧ(ಸಿದ್ಧ)ಯೇ ಭಾಷ್ಯಕೃತೋಕ್ತ-ಮಿತಿ ॥**

'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಎಂಬ ಶ್ರುತಿಯಿಂದ ಹಾಗೂ 'ಬ್ರಹ್ಮಸೂತ್ರಪ್ರಾಮಾಣ್ಯಂ ಸರ್ವೋತ್ತಮಂ ಲಿಂಗತ್ರಯಾವಸಿತತ್ವಾತ್' ಎಂಬ ಅನುಮಾನ-ದಿಂದ ಬ್ರಹ್ಮಮೀಮಾಂಸಾಶಾಸ್ತ್ರವೇ ಶ್ರೇಷ್ಠವಾದ ಪ್ರಮಾಣವಾಗಿದೆ. ಇದರಂತೆ ಮತ್ತೊಂದು ಪ್ರಮಾಣತಮವಾದ ಶಾಸ್ತ್ರವು ಇರುವುದಿಲ್ಲ ಎಂಬುದಾಗಿ ಉಪಸಂಹಾರ ಮಾಡಲು ''ಅತಃ'' ಇತ್ಯಾದಿ ಮೂಲವು (ಅನುವ್ಯಾಖ್ಯಾನವು) ಹೊರಟಿದೆ.

'ಇಷ್ಯತೇ' ಎಂಬಲ್ಲಿ 'ಪ್ರಾಮಾಣಿಕೈಃ' ಎಂಬುದನ್ನು ಶೇಷಪೂರಣಮಾಡಿಕೊಳ್ಳಬೇಕು. ಆದ್ದರಿಂದ ಈ ಶಾಸ್ತ್ರವೇ ಸರ್ವೋತ್ತಮಪ್ರಮಾಣವಾಗಿದೆ. ಉಳಿದ ಶಾಸ್ತ್ರಗಳು ಸರ್ವೋ-ತ್ತಮಪ್ರಮಾಣ ಆಗಿರುವುದಿಲ್ಲ. ಉಳಿದ ಶಾಸ್ತ್ರಗಳನ್ನು ಬಿಟ್ಟು ಈ ಶಾಸ್ತ್ರವನ್ನೇ ವ್ಯಾಖ್ಯಾನ-ಮಾಡುವುದು ಯುಕ್ತಿಯುಕ್ತವಾಗಿದೆ ಎಂಬುದು ಮೂಲವಾಕ್ಯದ ಅಭಿಪ್ರಾಯ.

ಮಹಾಭಾರತವನ್ನು ಸರ್ವಶಾಸ್ತ್ರಗಳಲ್ಲಿ ಉತ್ತಮವೆಂದು ಹೇಳಿದೆಯಲ್ಲವೇ? ಎಂದು ಪ್ರಶ್ನಿಸಬಹುದು. ಇದು ನಿಜ. ಆದರೆ ವಿಚಾರದಿಂದ ನಿರ್ಣಯಮಾಡಲ್ಪಡುವ ಶಾಸ್ತ್ರಗಳಲ್ಲಿ ಮಹಾಭಾರತವು ಸರ್ವೋತ್ತಮವಾಗಿದೆ. ಆದ್ದರಿಂದ ಪ್ರಕೃತ ನಿರ್ಣಾಯಕಗಳಲ್ಲಿ ಉತ್ತಮ-ವೆಂದು ಹೇಳುವ ವಿಷಯಕ್ಕೆ ವಿರೋಧವು ಬರುವುದಿಲ್ಲ.

ಪ್ರಶ್ನೆ – ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವಾಗಿದೆ ಎಂಬ ವಿಷಯವನ್ನು ಬ್ರಹ್ಮಸೂತ್ರದಲ್ಲಿ ಸೂತ್ರಕಾರರೇ ಸಮರ್ಥಿಸುತ್ತಾರೆ. ಆ ಪ್ರಥಮಸೂತ್ರದ ವ್ಯಾಖ್ಯಾನ ಮಾಡಿದರೆ ಸಾಕು ಈ ಶಾಸ್ತ್ರಕ್ಕೆ ಆರಂಭಣೀಯತ್ವದ ಜೊತೆ ಪ್ರಾಮಾಣ್ಯಾದಿಗಳು ಕೂಡ ಸಿದ್ಧವಾಗುತ್ತವೆ. ಹೀಗಿರುವಾಗ ಹಿಂದಿನ ನಾಕುಶ್ಲೋಕಗಳಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಏಕೆ ಸಮರ್ಥಿಸಿದಿರಿ?

ಉತ್ತರ – ಪ್ರಥಮಸೂತ್ರದಲ್ಲಿ ಪ್ರವೃತ್ತಿಯಾಗುವುದಕ್ಕಾಗಿ ಹಿಂದಿನ ನಾಕು ಪದ್ಯಗಳಲ್ಲಿ ಶಾಸ್ತ್ರಪ್ರಾಮಾಣ್ಯವನ್ನು ಸಮರ್ಥಿಸಿದ್ದೇವೆ.

ಪ್ರಶ್ನೆ – ಹಾಗಾದರೆ ಈ ಪ್ರಥಮಭಾಷ್ಯದಲ್ಲಾದರೂ ಪ್ರವೃತ್ತಿಯು ಹೇಗೆ ತಾನೇ ಕೂಡುತ್ತದೆ?

ಉತ್ತರ – ಪ್ರಥಮಭಾಷ್ಯದಲ್ಲಿ ಸಂದೇಹದಿಂದ ಪ್ರವೃತ್ತಿಮಾಡುತ್ತಾನೆ. ಆಗ ನಾಕು ಶ್ಲೋಕಗಳಿಂದ ತಿಳಿಸಿದಂತೆ ಈ ಶಾಸ್ತ್ರದಲ್ಲಿ ಪ್ರಾಮಾಣ್ಯದ ನಿರ್ಧಾರವು ಆಗುತ್ತದೆ.

ಪ್ರಶ್ನೆ – ಸಂದೇಹದಿಂದ ಪ್ರವೃತ್ತಿಯು ಪ್ರಥಮ ಭಾಷ್ಯದಲ್ಲೇ ಏಕೆ? ಪ್ರಥಮಸೂತ್ರ-ದಲ್ಲೂ ಕೂಡ ಇದೇ ಥರ ಹೇಳಬಹುದಲ್ಲವೇ? ಆದ್ದರಿಂದ 'ಪ್ರಾದುರ್ಭೂತಃ' ಇತ್ಯಾದಿ ನಾಕು ಶ್ಲೋಕಗಳು ವ್ಯರ್ಥವಾಗಿವೆ.

ಉತ್ತರ – ಈ ಆಕ್ಷೇಪವು ತಪ್ಪು. ಏಕೆಂದರೆ ಪ್ರಥಮಸೂತ್ರವು ವಿಚಾರಕರ್ತವ್ಯತ್ವಕ್ಕೆ ಉಪಯೋಗಿಯಾದ ವಿಷಯಾದಿಗಳನ್ನು ಸಮರ್ಥಿಸುತ್ತಿದೆ. ಇಷ್ಟರಿಂದಲೇ ಶಾಸ್ತ್ರಕ್ಕೆ

ಆರಂಭಣೀಯತ್ವವು ಸಿದ್ಧವಾಗುವುದಿಲ್ಲ. ಪ್ರಾಮಾಣ್ಯವನ್ನು ಸಮರ್ಥಿಸಿದಾಗ ಮಾತ್ರ ಆರಂಭಣೀಯತ್ವವು ಸಿದ್ಧವಾಗುತ್ತದೆ. ಯಾವ ಶಾಸ್ತ್ರದಲ್ಲಿ ಪ್ರಾಮಾಣ್ಯವಿದೆಯೋ ಅದರಲ್ಲಿ ಕಾಕದಂತಾಪರೀಕ್ಷಾಗ್ರಂಥಗಳಿಗಿಂತ ವೈಲಕ್ಷಣ್ಯವು ಸಿದ್ಧವಾಗುತ್ತದೆ. ಅದಕ್ಕಾಗಿ ವಿಷಯಾದಿಗಳನ್ನು ತಿಳಿಸುವುದು ಆವಶ್ಯಕವಾಗುತ್ತದೆ. ಹೀಗೆ ಸೂತ್ರದಲ್ಲಿ ಪ್ರಾಮಾಣ್ಯಾದಿಗಳು ಅರ್ಥಾತ್ ಹೇಳಲ್ಪಟ್ಟಿವೆ. ಇವುಗಳನ್ನು ಶಿಷ್ಯರಿಗೆ ಸುಲಭವಾಗಿ ತಿಳಿಸುವುದಕ್ಕಾಗಿ ಭಾಷ್ಯಕಾರರು ಮೊದಲೇ ಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಸಮರ್ಥಿಸಿದ್ದಾರೆ. ಆದ್ದರಿಂದ ಈ ಪ್ರಾಮಾಣ್ಯದ ಸಮರ್ಥನೆಯು ವ್ಯರ್ಥವಲ್ಲ.

## ಬ್ರಹ್ಮಸೂತ್ರವು ಅನುತ್ತಮವಾಗಿದೆ ಎಂಬುದರ ಉಪಸಂಹಾರವನ್ನೂ ಕೂಡ ಮಾಡುತ್ತಿದ್ದಾರೆ

ಪರಿಮಳ – 'ಏಕಧಾಽನ್ಯತ್ರ ಸರ್ವಶಃ' ಇತ್ಯುಕ್ತಮಾತ್ರೋಪಸಂಹಾರಪರತ್ವಭ್ರಮನಿರಾಸಾಯ ವ್ಯಾಕುರ್ವನ್ನೇವಾವತಾರಯತಿ – ತದೇವಮಿತ್ಯಾದಿನಾ ॥ 'ಅತಃ' ಇತ್ಯಸ್ಯಾರ್ಥಃ – ಶ್ರುತ್ಯನುಮಾನಾಭ್ಯಾಮಿತಿ ॥ 'ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮ್' ಇತ್ಯತ್ರೋಕ್ತಯಾ 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ಶ್ರುತ್ಯಾ । ಆಪ್ತವಾಕ್ಯತ್ವಾದ್ ಅನುಮಾನತ್ರಯಾವಗತಪ್ರಾಮಾಣ್ಯಕತ್ವರೂಪಾನುಮಾನೇನ ಚ ಇತ್ಯರ್ಥಃ।

'ಏಕಧಾಽನ್ಯತ್ರ ಸರ್ವಶಃ' ಎಂಬ ಹಿಂದಿನ ಪದ್ಯದಲ್ಲಿ ಹೇಳಿದ್ದರ ಉಪಸಂಹಾರವಾಕ್ಯವು ಅತಃ ಇತ್ಯಾದಿಯಾದುದು ಎಂಬ ಭ್ರಮೆ ಬರುತ್ತದೆ. ಇದರ ನಿರಾಕರಣೆಗಾಗಿ ಮುಂದಿನ ಪದ್ಯಕ್ಕೆ ವ್ಯಾಖ್ಯಾನ ಮಾಡುವ ಮೂಲಕ ಅವತಾರಿಕೆಯನ್ನು 'ತದೇವಂ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಅತಃ ಎಂಬ ಮೂಲದಲ್ಲಿರುವ ಪದದ ಅರ್ಥವನ್ನು 'ಶ್ರುತ್ಯನುಮಾನಾಭ್ಯಾಂ' ಎಂಬುದರಿಂದ ಹೇಳಿದ್ದಾರೆ.

'ಶ್ರುತ್ಯನುಮಾನಾಭ್ಯಾಮ್' – 'ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮ್' ಎಂಬ ಪದ್ಯಕ್ಕೆ ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಉಲ್ಲೇಖಿಸಲ್ಪಟ್ಟ 'ದ್ವೇ ವಿದ್ಯೇ ವೇದಿತವ್ಯೇ' ಎಂಬ

ಶ್ರುತಿಪ್ರಮಾಣದಿಂದ ಹಾಗೂ ಆಪ್ತವಾಕ್ಯತ್ವ ಮೊದಲಾದ ಮೂರು ಅನುಮಾನಗಳಿಂದ ಸಮರ್ಥಿಸಲ್ಪಡುವ ಪ್ರಾಮಾಣ್ಯವೆಂಬ ಅನುಮಾನದಿಂದ ಎಂದರ್ಥ.

ವಿವರಣೆ – 'ಏಕಧಾऽನ್ಯತ್ರ ಸರ್ವಶಃ' ಎಂಬ ಹಿಂದಿನ ವಾಕ್ಯದಲ್ಲಿ ಬೇರೆಡೆ ಒಂದು ಅಥವಾ ಎರಡು ರೀತಿಯಲ್ಲಷ್ಟೇ ಪ್ರಾಮಾಣ್ಯವಿರುತ್ತದೆ. ಆದರೆ ಬ್ರಹ್ಮಸೂತ್ರದಲ್ಲಿ ಮಾತ್ರ ಮೂರು ರೀತಿಯಾದ ಮತ್ತು ನಿರವಕಾಶವಾದ ಪ್ರಾಮಾಣ್ಯವಿದೆ ಎಂದು ಹೇಳಿದರು. ಅದರ ಉಪಸಂಹಾರವನ್ನು ಅತಃ ಎಂಬ ಈ ವಾಕ್ಯದಿಂದ ಮಾಡುತ್ತಿದ್ದಾರೆ. ಅರ್ಥಾತ್ ಬೇರೆ ಯಾವುದರಲ್ಲಿಯೂ ತ್ರಿವಿಧ ಪ್ರಾಮಾಣ್ಯವಿಲ್ಲದ ಕಾರಣ ಬ್ರಹ್ಮಸೂತ್ರವೇ ಶ್ರೇಷ್ಠಪ್ರಮಾಣವಾಗಿದೆ ಎಂಬುದಾಗಿ ಉಪಸಂಹಾರ ಮಾಡಿದ್ದಾರೆಂದು ಭ್ರಮೆ ಬರುತ್ತದೆ. ಆದರೆ ಇದಕ್ಕಿಂತಲೂ ಹಿಂದೆ 'ಚಕ್ರೇ ಶಾಸ್ತ್ರಮನುತ್ತಮಮ್' ಎಂಬುದಾಗಿ ಬ್ರಹ್ಮಸೂತ್ರಗಳಿಗೆ ಯಾವ ಅನುತ್ತಮತ್ವವನ್ನು ಸಮರ್ಥಿಸಿದರೋ ಅದರ ಉಪಸಂಹಾರವನ್ನೂ ಕೂಡ ಈಗ ಮಾಡು-ತ್ತಿದ್ದಾರೆಂದು ತಿಳಿಯಬೇಕು. ಕೇವಲ ನಿಷೇಧದ ಉಪಸಂಹಾರವಷ್ಟೇ ಅಲ್ಲ; ಬ್ರಹ್ಮಸೂತ್ರವು ಪ್ರಮಾಣತಮವಾಗಿದೆಯೆಂಬ ವಿಧಿಗೂ ಕೂಡ ಉಪಸಂಹಾರಕವಾಗಿದೆ. 'ತದೇವಂ' ಎಂಬ ವಾಕ್ಯವು ಇಷ್ಟನ್ನು ಮಾತ್ರ ಸಮರ್ಥನೆ ಮಾಡುತ್ತಿರುವುದಲ್ಲ 'ಅತೋ ನೈತಾದೃಶಂ' ಎಂಬ ವಾಕ್ಯಕ್ಕೆ ಪೀಠಿಕೆಯಾಗಿದೆ ಮತ್ತು ಅದರ ವ್ಯಾಖ್ಯಾನವೂ ಆಗಿದೆ. ಅದು ಹೇಗೆ ವ್ಯಾಖ್ಯಾನವಾಗಿದೆ ಎಂಬುದನ್ನು ಪರಿಮಳದಲ್ಲಿ 'ಅತಃ ಇತ್ಯಸ್ಯಾರ್ಥಃ' ಇತ್ಯಾದಿಯಾಗಿ ತಿಳಿಸಿದ್ದಾರೆ.

'ಬ್ರಹ್ಮಸೂತ್ರಂ ಪ್ರಮಾಣಂ ಆಪ್ತವಾಕ್ಯತ್ವಾತ್ ಶ್ರುತಿಮೂಲತ್ವಾತ್ ಯುಕ್ತಿಮೂಲತ್ವಾತ್' ಎಂಬು-ದಾಗಿ ಮೂರು ಅನುಮಾನಗಳಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಅಂಥ ಪ್ರಮಾಣ್ಯವುಳ್ಳ ಬ್ರಹ್ಮ-ಸೂತ್ರವು ಶ್ರೇಷ್ಠಪ್ರಮಾಣವಾಗಿದೆ ಎಂದಭಿಪ್ರಾಯ.

## ಮಹಾಭಾರತವೂ ಕೂಡ ಅನುತ್ತಮ ಆಗಿದೆಯಲ್ಲವೇ?

ಪರಿಮಳ – ಶಾಸ್ತ್ರಪದಮನುವರ್ತ್ಯ ತೇನ ಪ್ರಮಾಣತಮಪದಸ್ಯ ಅನ್ವಯಮು-ಪೇತ್ಯೋಕ್ತಮ್ – ಇದಮೇವೇತ್ಯಾದಿ ॥ ಪ್ರಮಾಣತಮತ್ವೋಕ್ತೇಃ ಕ ಉಪಯೋಗಃ? ಇತ್ಯತಃ ಪ್ರಾಗುಕ್ತಶಂಕಾನಿರಾಸಃ ಫಲಮಿತ್ಯಾಹ – ತಥಾ ಚೇತಿ ॥

ಭಾರತಮಿತಿ ॥ ಗೀತಾಭಾಷ್ಯೇ ಪ್ರಥಮೇ

'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್' ।

'ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ'

ಇತ್ಯಾದಿನೋಕ್ತಭಾರತೋತ್ತಮತ್ವವಿರೋಧಮಾಶಂಕ್ಯ ನಿರಾಹ – ನನು ಇತಿ ॥

'ಶಾಸ್ತ್ರಂ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಮತ್ತು 'ಪ್ರಮಾಣತಮಂ' ಎಂಬ ಪದದ ಜೊತೆ ಅದಕ್ಕೆ ಅನ್ವಯ ತಿಳಿಯಬೇಕು. ಇದನ್ನು 'ಇದಮೇವ' ಎಂಬ ವಾಕ್ಯದಿಂದ ತಿಳಿಸಿದ್ದಾರೆ. ಪ್ರಮಾಣತಮಂ ಎಂದು ಹೇಳಿದ್ದಕ್ಕೆ ಏನು ಪ್ರಯೋಜನ? ಎಂಬ ಪ್ರಶ್ನೆಯು ಬಂದರೆ ಹಿಂದೆ ಹೇಳಲ್ಪಟ್ಟ ಆಶಂಕೆಯ ನಿರಾಸೆಯೇ ಫಲವಾಗಿದೆ ಎಂಬುದಾಗಿ 'ತಥಾ ಚ' ಎಂಬ ವಾಕ್ಯವು ಹೇಳುತ್ತಿದೆ.

ಭಾರತಮಿತಿ ॥ – 'ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ' ಇತ್ಯಾದಿ ವಾಕ್ಯದಿಂದ ಭಾರತವೇ ಸರ್ವಶ್ರೇಷ್ಠವಾಗಿದೆ ಅದರಲ್ಲೂ ಕೂಡ ಭಗವದ್‌ಗೀತೆಯು ಶ್ರೇಷ್ಠವಾಗಿದೆ' ಎಂಬ ಆಶಂಕೆಯನ್ನು ''ನನು'' ಇತ್ಯಾದಿ ಗ್ರಂಥದಿಂದ ಪರಿಹರಿಸಿದ್ದಾರೆ.

ಗೀತಾಭಾಷ್ಯದ ಪ್ರಾರಂಭದಲ್ಲಿ 'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್ - ನಾಲ್ಕು ವೇದಗಳಿಗಿಂತ ಶ್ರೇಷ್ಠವಾದ ಮಹಾಭಾರತವನ್ನು ರಚನೆ ಮಾಡಿರುವರು ಎಂಬುದಾಗಿ ಮಹಾಭಾರತಕ್ಕೆ ಸರ್ವೋತ್ತಮತ್ವವನ್ನು ಹೇಳಿದ್ದಾರೆ. ಅದರ ವಿರೋಧವನ್ನು 'ತಥಾ ಚ' ಎಂಬ ವಾಕ್ಯವು ಪರಿಹಾರ ಮಾಡಿದೆ.

ವಿವರಣೆ – ಬ್ರಹ್ಮಸೂತ್ರಗಳಲ್ಲಿ ಅರ್ಥವಿವಕ್ಷಾಪೂರ್ವಕತ್ವವು ಇಲ್ಲದಿದ್ದರೆ ವಿಷಹರ ಮಂತ್ರಾದಿಗಳಂತೆ ವ್ಯಾಖ್ಯೇಯವೇ ಆಗುವುದಿಲ್ಲ. ಕೇವಲ ಅರ್ಥವಿವಕ್ಷಾಪೂರ್ವಕತ್ವವಿದ್ದರೂ ಉಪಯೋಗವಾಗುವುದಿಲ್ಲ ಪ್ರಾಮಾಣ್ಯವಿರಬೇಕು.

ಪ್ರಾಮಾಣ್ಯವಿದ್ದರೂ ಕೂಡ ಬೇರೆ ಗ್ರಂಥಗಳು ಇರುವಾಗ ಇದನ್ನೇ ಏಕೆ ವ್ಯಾಖ್ಯಾನ ಮಾಡಬೇಕು? ಎಂಬ ಆಶಂಕೆಗೆ ಇಲ್ಲಿ ಉತ್ತರಿಸಿದ್ದಾರೆ.

## ಶಾಸ್ತ್ರಾಧ್ಯಯನದಲ್ಲಿ ಪ್ರವೃತ್ತಿಯು ಹೇಗೆ?

ಪರಿಮಳ – 'ಪ್ರಾದುರ್ಭೂತಃ' ಇತ್ಯಾದಿಶ್ಲೋಕಚತುಷ್ಟಯಸ್ಯೋತ್ಸೂತ್ರಿತಾರ್ಥತ್ವೇನ ವಕ್ಷ್ಯಮಾಣದಿಶಾ ಪರಮತೇ ಅಧ್ಯಾಸಭಾಷ್ಯಸ್ಯೇವ ವೈಯರ್ಥ್ಯದೋಷಮಾಶಂಕ್ಯ ನಿರಾಹ – ನನು ಚೇತ್ಯಾದಿನಾ ॥ ಸಮರ್ಥಯತ ಇತಿ ॥ ತತ್ಪ್ರಕಾರೋಽಗ್ರೇ ವ್ಯಕ್ತಃ । ಕಿಮನೇನೇತಿ ॥ ಶ್ಲೋಕಚತುಷ್ಟಯಕೃತೇನಾರಂಭಣೀಯತೋಪಯುಕ್ತಪ್ರಾಮಾಣ್ಯಸಮರ್ಥನೇನ' ಇತ್ಯರ್ಥಃ । ಕಥಂ ಪ್ರವೃತ್ತಿರಿತಿ ॥ ಆರಂಭಣೀಯತ್ವಾನ್ನಿರ್ಣಯೇ ತತ್ಪ್ರವೃತ್ತೇರಯೋಗಾತ್ ಪ್ರಾದುರ್ಭೂತ ಇತ್ಯಾದಿ ಭಾಷ್ಯೇಣಾರಂಭಣೀಯತ್ವಸಿದ್ಧೌ ಪಶ್ಚಾತ್ ತತ್ರ ಪ್ರವೃತ್ತಿರಿತಿ ಭಾವಃ।

'ಪ್ರಾದುರ್ಭೂತ' ಮೊದಲಾದ ಮುಂದಿನ ನಾಕು ಶ್ಲೋಕಗಳು ಸೂತ್ರದಲ್ಲಿ ಹೇಳಲ್ಪಡದ ವಿಷಯವನ್ನು ತಿಳಿಸುತ್ತಿವೆ. ಆದ್ದರಿಂದ ಮುಂದೆ ಹೇಳುವ ಪ್ರಕಾರ ಅದ್ವೈತಮತದಲ್ಲಿ ಅಧ್ಯಾಸಭಾಷ್ಯವು ಹೇಗೆ ವ್ಯರ್ಥವೋ ಅದರಂತೆ 'ಪ್ರಾದುರ್ಭೂತ' ಇತ್ಯಾದಿ ನಾಕು ಶ್ಲೋಕಗಳು ಕೂಡ ವ್ಯರ್ಥವೇ ಆಗಿವೆ. ಈ ಆಶಂಕೆಯನ್ನು "ನನು ಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ("ಸಮರ್ಥಯತೇ" ಎಂಬ ಗ್ರಂಥದಿಂದ) ಆ ಪರಿಹಾರಕ್ರಮವನ್ನು ಮುಂದೆ ಸ್ಪಷ್ಟಪಡಿಸುತ್ತಾರೆ (ಎಂದು ತಿಳಿಸುತ್ತಿದ್ದಾರೆ).

"ಕಿಮನೇನ ಇತಿ" – ಆರಂಭಣೀಯತ್ವವನ್ನು ಸಮರ್ಥಿಸುವ ಪ್ರಾಮಾಣ್ಯವನ್ನು ಈ ನಾಕು ಶ್ಲೋಕಗಳಲ್ಲಿ ಸಮರ್ಥಿಸಿದ್ದರಿಂದ ಎಂದರ್ಥ.

'ಕಥಂ ಪ್ರವೃತ್ತಿರಿತಿ" – 'ಶಾಸ್ತ್ರವು ಆರಂಭಣೀಯವಾಗಿದೆ' ಹೀಗೆ ನಿಶ್ಚಯವಿಲ್ಲದಿದ್ದರೆ ಸೂತ್ರವನ್ನು ಓದಲು ಯಾರಿಗೂ ಪ್ರವೃತ್ತಿಯೇ ಉಂಟಾಗುವುದಿಲ್ಲ. ಆದ್ದರಿಂದ 'ಪ್ರಾದು-ರ್ಭೂತಃ' ಇತ್ಯಾದಿ ಭಾಷ್ಯದಿಂದ ಆರಂಭಣೀಯತ್ವವು ಮೊದಲು ಸಿದ್ಧವಾಗಬೇಕು. ಅನಂತರ ಸೂತ್ರವನ್ನು ಓದುವ ಪ್ರವೃತ್ತಿಯು ಉಂಟಾಗುತ್ತದೆ ಎಂದಭಿಪ್ರಾಯ.

ವಿವರಣೆ – ಅದ್ವೈತಿಗಳು ಬ್ರಹ್ಮಸೂತ್ರಗಳಿಗೆ ಯಾವ ಭಾಷ್ಯವನ್ನು ಬರೆದಿದ್ದಾರೋ ಅದು ಅಧ್ಯಾಸವನ್ನು ಹೇಳುವ ಮೂಲಕ ಪ್ರಾರಂಭವಾಗುತ್ತದೆ. ಬಂಧಮಿಥ್ಯಾತ್ವವನ್ನೇ ಮೊದಲು ಸಮರ್ಥಿ-

ಸುತ್ತಿದೆ. ಇದು ಸೂತ್ರದಲ್ಲಿ ಹೇಳದ ಕಾರಣ ಉತ್ಸೂತ್ರಿತವಾಗಿದೆ ಎಂಬ ದೋಷವನ್ನು ನಾವು ಮುಂದೆ ಹೇಳುವವರಿದ್ದೇವೆ. ಅದ್ವೈತಭಾಷ್ಯಕ್ಕೆ ಯಾವ ವೈಯರ್ಥ್ಯದೋಷ ಬರುತ್ತದೋ ಅದು ಸಿದ್ಧಾಂತಪಕ್ಷದಲ್ಲೂ ಕೂಡ ಸಮಾನವಾಗಿದೆ. ಏಕೆಂದರೆ, ಪ್ರಾದುರ್ಭೂತಃ ಇತ್ಯಾದಿ ನಾಕು ಶ್ಲೋಕಗಳಿಂದ ಯಾವ ವಿಷಯವನ್ನು ಹೇಳುತ್ತಾರೋ ಅದು ಉತ್ಸೂತ್ರಿತವಾಗಿದೆ. ಅಧ್ಯಾಸಭಾಷ್ಯದಂತೆ ನಿಮ್ಮ ಭಾಷ್ಯವೂ ಕೂಡ ವ್ಯರ್ಥವಾಯಿತಲ್ಲವೇ? ಈ ಆಶಂಕೆಯನ್ನು "ನನು ಚ" ಇತ್ಯಾದಿ ಗ್ರಂಥವು ಪರಿಹಾರ ಮಾಡುತ್ತಿದೆ.

ಪ್ರಾಮಾಣ್ಯದ ಸಮರ್ಥನೆಗಾಗಿ ಆರಂಭಣೀಯತ್ವವನ್ನು ಸಮರ್ಥನೆ ಮಾಡುತ್ತಿದ್ದೀರಿ. ಅದೇ ಆರಂಭಣೀಯತ್ವಕ್ಕೆ ಗ್ರಂಥಕಾರರು ವಿಷಯಾದಿಗಳನ್ನು ನಿರೂಪಣೆ ಮಾಡುತ್ತಿದ್ದಾರೆ. ಅದಕ್ಕೋಸ್ಕರ ಪ್ರಾಮಾಣ್ಯದ ಸಮರ್ಥನೆಯು ಅನಾವಶ್ಯಕ. ಪ್ರಥಮಸೂತ್ರದಲ್ಲಿ ಆರಂಭಣೀಯತ್ವವನ್ನು ಸಮರ್ಥನೆ ಮಾಡಿದರೂ ಕೂಡ ಪ್ರವೃತ್ತಿಯು ಹೇಗೆ ಕೂಡುತ್ತದೆ? ಪ್ರಥಮಸೂತ್ರದಲ್ಲಿ ಪ್ರವೃತ್ತಿಯನ್ನು ಕೂಡಿಸುವುದಕ್ಕಾಗಿ ಪ್ರಥಮಭಾಷ್ಯದಲ್ಲಿ ಆಚಾರ್ಯರು ಆರಂಭಣೀಯತ್ವವನ್ನು ಸಮರ್ಥನೆ ಮಾಡಿರುತ್ತಾರೆ.

## ಭಾಷ್ಯದಲ್ಲಿ ಪ್ರಾಮಾಣ್ಯಸಂದೇಹಪ್ರಯುಕ್ತವಾದ ಆರಂಭಣೀಯತ್ವದ ಸಂದೇಹದ ಪರಿಹಾರವೇ ಸೂತ್ರದ ಪ್ರವೃತ್ತಿಗೆ ಕಾರಣವಾಗಿದೆ.

ಪರಿಮಳ – ಕಥಮಿತಿ ॥ 'ಪ್ರವೃತ್ತಿಃ' ಇತ್ಯನುಷಂಗಃ । ಸೂತ್ರಸ್ಯೈವಾರಂಭಣೀಯತ್ವಾನಿರ್ಣಯೇ ತದ್ವ್ಯಾಖ್ಯಾರೂಪಭಾಷ್ಯೇಽಪಿ ಪ್ರವೃತ್ತೇರಯೋಗಾದಿತಿ ಭಾವಃ । ಉತ್ತರಂ ಶಂಕತೇ – ಸಂದೇಹಾದಿತಿ ॥ ಆರಂಭಣೀಯತ್ವಾನಾರಂಭಣೀಯತ್ವಸಂದೇಹಾತ್ ಇತ್ಯರ್ಥಃ । ಉಕ್ತೇತಿ ॥ ಆಪ್ತವಾಕ್ಯತ್ವಾದಿರೂಪಪ್ರಮಾಣೈಃ ಸೂತ್ರಪ್ರಾಮಾಣ್ಯಸಿದ್ಧೌ ತದ್ವ್ಯಾಖ್ಯಾನತ್ವಯುಕ್ತ್ಯಾ ಆರಂಭಣೀಯತ್ವನಿರ್ಣಯೋ ಭವಿಷ್ಯತೀತ್ಯರ್ಥಃ । ಸತ್ಯಮ್ । ಪ್ರಥಮಸೂತ್ರೇಽಪಿ ಆರಂಭಣೀಯತ್ವಸಂದೇಹಾತ್ ಪ್ರವೃತ್ತಸ್ಯ ಸೂತ್ರಸ್ಥಾದಿಪದೋಕ್ತಪ್ರಮಾಣೈರಾರಂಭಣೀಯತ್ವನಿರ್ಣಯೋ ಭವತೀತಿ । ತಥಾಪ್ಯಾರಂಭಣೀಯತ್ವಸಂದೇಹೋ ದ್ವೇಧಾ । ಪ್ರಾಮಾಣ್ಯಸಂದೇಹನಿಮಿತ್ತಕೋ ವಿಷಯಪ್ರಯೋಜನಾಧಿಕಾರಿಸಂಬಂಧಸಂದೇಹನಿಮಿತ್ತಕಶ್ಚ । ತತ್ರಾಂತ್ಯಸ್ಯ ಸೂತ್ರೇಣ ಪರಿಹಾರೇಽಪಿ ಆದ್ಯಸ್ಯ ನ ಪರಿಹಾರಃ । ಅತೋ ಭಾಷ್ಯಮೇತತ್ಸಾರ್ಥಕಮಿತಿ ಭಾವೇನಾಹ – ಮೈವಮಿತ್ಯಾದಿನಾ ॥

'ಕಥಮ್' – ಪ್ರವೃತ್ತಿ ಎಂಬುದನ್ನು ಅನುಷಂಗ ಮಾಡಬೇಕು. ಕಥಂ ಪ್ರವೃತ್ತಿಃ ಎಂದು ಹೇಳಿದಂತಾಗುತ್ತದೆ. ಸೂತ್ರವೇ ಆರಂಭಣೀಯವಾಗಿದೆ ಎಂದು ನಿರ್ಣಯವಾಗದಿದ್ದರೆ ಅದರ ವ್ಯಾಖ್ಯಾನರೂಪವಾದ ಭಾಷ್ಯದ ಅಧ್ಯಯನದಲ್ಲೂ ಕೂಡ ಪ್ರವೃತ್ತಿಯು ಯಾರಿಗೂ ಯುಕ್ತ-ವಾಗುವುದಿಲ್ಲ. ಆದ್ದರಿಂದ 'ಪ್ರಾದುರ್ಭೂತಃ' ಇತ್ಯಾದಿ ಭಾಷ್ಯದಿಂದ ಆರಂಭಣೀಯತ್ವವನ್ನು ಸಮರ್ಥಿಸಿ ಅನಂತರ ಸೂತ್ರದ ಅಧ್ಯಯನದಲ್ಲಿ ಪ್ರವೃತ್ತಿಯು ಉಂಟಾಗುತ್ತದೆಂದು ಅಭಿ-ಪ್ರಾಯ. ಸೂತ್ರವು ಆರಂಭಣೀಯವಾಗಿದೆಯೆಂದು ನಿರ್ಣಯವಾಗದೇ ಇದ್ದಾಗ ತದ್ವ್ಯಾ-ಖ್ಯಾನರೂಪವಾದ ಭಾಷ್ಯದಲ್ಲೂ ಕೂಡ ಪ್ರವೃತ್ತಿಯು ಕೂಡುವುದಿಲ್ಲ.

ಇದಕ್ಕೆ ಉತ್ತರವನ್ನು "ಸಂದೇಹಾತ್" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಬ್ರಹ್ಮ-ಮೀಮಾಂಸಾಶಾಸ್ತ್ರವು ಆರಂಭಣೀಯವಾಗಿದೆಯೋ ಅನಾರಂಭಣೀಯವಾಗಿದೆಯೋ? ಎಂಬ ಸಂಶಯದಿಂದ ಯಾವ ಪ್ರವೃತ್ತಿ ಉಂಟಾಗುತ್ತದೋ ಅದನ್ನೇ ಸಂದೇಹಾತ್ ಎಂಬುದರಿಂದ ಹೇಳಿದ್ದಾರೆ. ಆರಂಭಣೀಯತ್ವ ಹಾಗೂ ಅನಾರಂಭಣೀಯತ್ವದ ಸಂದೇಹದಿಂದ ಎಂದರ್ಥ.

'ಉಕ್ತಪ್ರಮಾಣ್ಯೈಃ' – ಆಪ್ತವಾಕ್ಯತ್ವ ಮೊದಲಾದ ಪ್ರಮಾಣಗಳಿಂದ ಸೂತ್ರಗಳ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಅದರ ವ್ಯಾಖ್ಯಾನರೂಪವಾದ ಭಾಷ್ಯವೂ ಕೂಡ ಆರಂಭಣೀಯವಾಗಿದೆ ಎಂಬ ನಿರ್ಣಯವು ಉಂಟಾಗುತ್ತದೆ.

ಇಷ್ಟು ಆಕ್ಷೇಪ.

ಹೌದು; ಪ್ರಥಮಸೂತ್ರದಲ್ಲೂ ಕೂಡ ಆರಂಭಣೀಯತ್ವದ ಸಂದೇಹದಿಂದ ಯಾರು ಪ್ರವೃತ್ತಿಯನ್ನು ಮಾಡುತ್ತಾನೋ ಅವನಿಗೆ 'ಸೂತ್ರದಲ್ಲಿರುವ ಅಥ ಮತ್ತು ಅತ ಪದಗಳಿಂದ ಆರಂಭಣೀಯತ್ವವು ಸಿದ್ಧವಾಗುತ್ತದೆಂಬ ನಿರ್ಣಯವು ಉಂಟಾಗುತ್ತದೆಂಬುದು ಸತ್ಯ. ಆದರೆ ಆರಂಭಣೀಯವೆಂಬ ವಿಷಯದಲ್ಲಿ ಸಂಶಯವು ಎರಡು ಕಾರಣಗಳಿಂದ ಬರುತ್ತದೆ. (1) ಶಾಸ್ತ್ರದ ಪ್ರಾಮಾಣ್ಯದ ಬಗ್ಗೆ ಇರುವ ಸಂಶಯದಿಂದಲೂ ಶಾಸ್ತ್ರವು ಆರಂಭಣೀಯವಾಗಿದೆ ಎಂಬಲ್ಲಿ ಸಂದೇಹವು ಇರುತ್ತದೆ. ಮತ್ತು (2) ಶಾಸ್ತ್ರದ ವಿಷಯ ಪ್ರಯೋಜನ ಅಧಿಕಾರಿ ಸಂಬಂಧಗಳ ಬಗ್ಗೆ ಇರುವಂಥ ಸಂಶಯ ನಿಮಿತ್ತಕವಾಗಿಯೂ ಶಾಸ್ತ್ರದ ಆರಂಭಣೀಯತ್ವದ

ವಿಷಯದಲ್ಲಿ ಸಂದೇಹವು ಪ್ರಾಪ್ತವಾಗುತ್ತದೆ. ಈ ಎರಡೂ ಕಾರಣಗಳಿಂದ ಸಂದೇಹಗಳಲ್ಲಿ ವಿಷಯಪ್ರಯೋಜನಾದಿಗಳ ಸಂಶಯನಿಮಿತ್ತಕವಾದ ಶಾಸ್ತ್ರದ ಆರಂಭಣೀಯತ್ವಸಂದೇಹವು ಸೂತ್ರದಿಂದ ಪರಿಹಾರವಾಗುತ್ತದೆ. ಆದರೆ ಪ್ರಾಮಾಣ್ಯಸಂಶಯನಿಮಿತ್ತಕವಾದ ಆರಂಭ-ಣೀಯತ್ವಸಂದೇಹವು ಪ್ರಥಮಸೂತ್ರದ 'ಅಥ' ಇತ್ಯಾದಿ ಪದಗಳಿಂದ ಪರಿಹಾರವಾಗುವುದಿಲ್ಲ. ಆದ್ದರಿಂದ ಪ್ರಾಮಾಣ್ಯಾದಿಗಳನ್ನು ಸಮರ್ಥನೆ ಮಾಡುವ ಈ ಭಾಷ್ಯವು ಸಾರ್ಥಕವಾಗಿದೆ. ಈ ಅಭಿಪ್ರಾಯದಿಂದ ''ಮೈವಮ್'' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ –

ಆಕ್ಷೇಪ – ಸೂತ್ರದಲ್ಲಿ ಆರಂಭಣೀಯತ್ವವು ನಿರ್ಣಯವಾಗದಿದ್ದಾಗ ತದ್ವ್ಯಾಖ್ಯಾನರೂಪವಾದ ಭಾಷ್ಯದಲ್ಲಿ ಹೇಗೆ ತಾನೇ ಪ್ರವೃತ್ತಿಯನ್ನು ಮಾಡುತ್ತಾನೆ?

ಪ್ರಥಮಭಾಷ್ಯದಲ್ಲಿ ಪ್ರವೃತ್ತಿಯನ್ನು ಹೀಗೆ ಕೂಡಿಸಬೇಕು – ಶ್ರುತಿಮೂಲತ್ವ, ಯುಕ್ತಿ-ಮೂಲತ್ವಾದಿಗಳಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಮೊದಲು ಭಾಷ್ಯಕಾರರು ಸಮರ್ಥನೆ ಮಾಡಿದ್ದಾರೆ. ಹೀಗೆ ಸೂತ್ರಗಳಿಗೆ ಪ್ರಾಮಾಣ್ಯವು ಸಿದ್ಧವಾದ ಮೇಲೆ ಆದರ ವ್ಯಾಖ್ಯಾನವಾಗಿರು-ವುದರಿಂದ ಭಾಷ್ಯದಲ್ಲೂ ಕೂಡ ಪ್ರವೃತ್ತಿಯನ್ನು ಮಾಡುತ್ತಾರೆ. ಹೀಗೆ ಉತ್ತರಿಸಬೇಕು. ಆದರೆ ಭಾಷ್ಯವು ಅನಾವಶ್ಯಕ. ಪ್ರಥಮಸೂತ್ರದಲ್ಲೇ ಇದನ್ನು ಸಮರ್ಥಿಸಬಹುದು. ಮೊದಲು ಆರಂಭಣೀಯತ್ವದ ಸಂದೇಹದಿಂದ ಪ್ರವೃತ್ತಿಯನ್ನು ಮಾಡುತ್ತಾನೆ. ಅನಂತರ ಸೂತ್ರಕಾರರು ಹೇಳುವ ಪ್ರಮಾಣಗಳಿಂದ ಆರಂಭಣೀಯತ್ವದ ನಿರ್ಣಯವನ್ನು ಮಾಡುತ್ತಾನೆ. ಆದ್ದರಿಂದ ಸೂತ್ರಕಾರರ ಆರಂಭಣೀಯತ್ವವಷ್ಟೇ ಸಾಕು. ಭಾಷ್ಯಕಾರರ ಆರಂಭಣೀಯತ್ವದ ಸಮರ್ಥನೆಯು ಅನಾವಶ್ಯಕವಾಗಿದೆ.

ಸಮಾಧಾನ – ಹೌದು. ಪ್ರಥಮಸೂತ್ರದಲ್ಲೂ ಕೂಡ ಆರಂಭಣೀಯತ್ವದ ಸಂದೇಹದಿಂದ ಪ್ರವೃತ್ತಿಯು ಉಂಟಾಗುತ್ತದೆ. ಈ ಸೂತ್ರದ ಪ್ರವೃತ್ತಿಗಿಂತ ಮೊದಲೇ ಆರಂಭಣೀಯತ್ವವು ನಿಶ್ಚಯ-ವಾದರೆ ಈ ಸೂತ್ರವೇ ವ್ಯರ್ಥವಾಗುತ್ತದೆ. ವಿಷಯಪ್ರಯೋಜನಾದಿಗಳು ಇರುವುದರಿಂದ ಈ ಶಾಸ್ತ್ರವು ಆರಂಭಣೀಯವಾಗಿದೆ ಎಂಬುದಾಗಿ ಪ್ರಥಮಸೂತ್ರವು ಪ್ರಮಾಣಪುರಸ್ಸರವಾಗಿ ಸಮರ್ಥಿಸುತ್ತದೆ. ಇದನ್ನು ಕೇಳಿ ತಿಳಿದವನು ದ್ವಿತೀಯಾದಿ ಸೂತ್ರಗಳ ಅಧ್ಯಯನದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಇದರಲ್ಲೇನೂ ಸಂಶಯವಿಲ್ಲ. ಆದರೂ ಕೂಡ ಭಾಷ್ಯದಲ್ಲಿ ಆರಂಭಣೀಯತ್ವವನ್ನು ಸಮರ್ಥನೆ

ಮಾಡಿದ್ದು ವ್ಯರ್ಥವಲ್ಲ. ಏಕೆಂದರೆ ಒಟ್ಟು ಎರಡು ರೀತಿಯಲ್ಲಿ ಸಂದೇಹವು ಗ್ರಂಥಾಧ್ಯೇತೃವಿಗೆ ಬರುತ್ತದೆ. ಭಾಷ್ಯದಲ್ಲಿ ಪರಿಹರಿಸುವ ಸಂದೇಹವನ್ನು ಪರಿಹರಿಸದಿದ್ದರೆ ಪ್ರಥಮಸೂತ್ರಾಧ್ಯಯನದಿಂದ ಪ್ರಾಪ್ತವಾಗುವ ಸಂದೇಹವೇ ಹುಟ್ಟುವುದಿಲ್ಲ. ಅಪ್ರಾಮಾಣ್ಯಶಂಕಾಪ್ರಯುಕ್ತವಾದ ಸಂದೇಹವು ಪ್ರತಿ-ಬಂಧಕವಾಗಿದೆ. ಈ ಪ್ರತಿಬಂಧಕವಿದ್ದಾಗ ವಿಷಯಪ್ರಯೋಜನಾಧಿಕಾರಿಸಂಬಂಧಗಳ ಸಮರ್ಥನೆಯೇ ಅಸಂಗತವಾಗುತ್ತದೆ. ಪ್ರಾಮಾಣ್ಯದ ಸಂದೇಹವು ಪರಿಹಾರವಾದಮೇಲೆ ಕಾಕದಂತಾಪರೀಕ್ಷಾಗ್ರಂಥಕ್ಕಿಂತ ವೈಲಕ್ಷಣ್ಯವು ಸಿದ್ಧವಾಗುತ್ತದೆ. ಅನಂತರ ವಿಷಯಾದಿಗಳನ್ನು ಸಮರ್ಥಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿ ಪ್ರತಿಬಂಧಕಬೋಧವಾದ ಅಪ್ರಾಮಾಣ್ಯಸಂದೇಹವನ್ನು ಮೊದಲು ಸಮರ್ಥಿಸಿದ್ದು ಸೂತ್ರಾಧ್ಯಯನದಿಂದ ಪ್ರಾಪ್ತವಾಗುವ ವಿಷಯಾದ್ಯಭಾವವೆಂಬ ಸಂದೇಹಕ್ಕೆ ಪ್ರಯೋ-ಜಕವಾಗಿದೆ. ಸೂತ್ರಾಧ್ಯಯನಕ್ಕಿಂತ ಮೊದಲು ಭಾಷ್ಯದಲ್ಲಿ ಅಪ್ರಾಮಾಣ್ಯಶಂಕೆಯನ್ನು ಪರಿಹಾರವನ್ನು ಮಾಡಿದ್ದು ಅತ್ಯಂತ ಸಮಂಜಸವಾಗಿದೆ.

## ಗ್ರಂಥಕ್ಕೆ ಪ್ರಾಮಾಣ್ಯಸಿದ್ಧವಾಗದೇ ವಿಷಯಾದಿಗಳು ಸಿದ್ಧಿಸುವುದಿಲ್ಲ

ಪರಿಮಳ – ತದಿತಿ ॥ ಪ್ರಥಮಸೂತ್ರೇ ಆರಂಭಣೀಯತ್ವಸಮರ್ಥನಮಿತ್ಯರ್ಥಃ । ತಾವತ್ಯೈವಾಲಮಿತ್ಯತ ಆಹ – ನ ಚೇತಿ ॥ ಬೌದ್ಧಾದಾವಪಿ ತತ್ಸಂಪಾದನಸ್ಯ ಬೌದ್ಧಾದಿ-ಗ್ರಂಥಕರ್ತೃಕ್ರಿಯಮಾಣತ್ವೇನ ವ್ಯಭಿಚಾರಾದಿತಿ ಭಾವಃ । ತರ್ಹಿ ಸೂತ್ರೇ ವಿಷಯಾದಿ-ವ್ಯುತ್ಪಾದನಂ ವ್ಯರ್ಥಮ್ । ತಾವನ್ಮಾತ್ರಸ್ಯಾರಂಭಾನುಪಯೋಗಾತ್ ಇತ್ಯತ ಆಹ – ಪ್ರಾಮಾಣ್ಯೇ ಹೀತಿ ॥ ಅತ ಇತಿ ॥ ಪ್ರಾಮಾಣ್ಯೇ ಸತ್ಯೇವ ವಿಷಯಾದಿವ್ಯುತ್ಪಾದನಸ್ಯೋ-ಪಯೋಗಾತ್ ಇತ್ಯರ್ಥಃ । ಸೂತ್ರಾಕ್ಷಿಪ್ತಮಿತಿ ॥ ವಿಷಯಾದಿವ್ಯುತ್ಪಾದನಾನ್ಯಥಾನು-ಪಪತ್ತ್ಯೈವಾರ್ಥಾಲ್ಲಬ್ಧಂ ಪ್ರಾಮಾಣ್ಯಮಿತ್ಯರ್ಥಃ । ಆರ್ಥಿಕೋಽಪ್ಯರ್ಥಃ ಸೂತ್ರಾರ್ಥ ಏವ ಇತಿ ತು 'ಬಂಧಮಿಥ್ಯಾತ್ವಮ್' ಇತ್ಯೇತದವತಾರಿಕಾಯಾಂ ಪರಮತಾನುವಾದಪ್ರಸ್ತಾವೇ ನಿಪುಣತರಮುಪಪಾದಯಿಷ್ಯತ ಇತಿ ಭಾವಃ । ಏತೇನ 'ಪ್ರಾಮಾಣ್ಯೇ ಹಿ' ಇತ್ಯಾದಿ-ಗ್ರಂಥೇನೈವ ಶ್ರೌತಾರ್ಥಂ ಪ್ರಾಗನುಕ್ತ್ವಾ ಆರ್ಥಿಕಾಮೇವ ಪ್ರಾಕ್ಕಥಯನ್ ಭಾಷ್ಯಕಾರೋ-ಽಕುಶಲ ಇತಿ ಪರಾಸ್ತಮ್ । ಪ್ರಾಮಾಣ್ಯೇನ ವಿನಾ ವಿಷಯಾದಿವ್ಯುತ್ಪಾದನಸ್ಯೈವ ಅಯೋಗಾದಿತಿ । ಬುದ್ಧಿಸಿದ್ಧಯೇ = ಪ್ರವೃತ್ತಿಬುದ್ಧ್ಯುತ್ಪಾದನಾಯ ।

'ತತ್' – ಪ್ರಥಮಸೂತ್ರದಲ್ಲಿ ಮಾಡಿದ ಆರಂಭಣೀಯತ್ವದ ಸಮರ್ಥನೆಯು.

ಕೇವಲ ವಿಷಯಾದಿಗಳ ಇರುವಿಕೆಯಿಂದ ಆರಂಭಣೀಯತ್ವವನ್ನು ಸಮರ್ಥನೆ ಮಾಡಿದರೆ ಸಾಕಲ್ಲವೇ? ಈ ಪ್ರಶ್ನೆಗೆ "ನಚ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಬೌದ್ಧಗ್ರಂಥಗಳಲ್ಲೂ ಕೂಡ ವಿಷಯಾದಿಗಳನ್ನು ಸಮರ್ಥಿಸಿರುತ್ತಾರೆ. ಆದರೆ ಅಲ್ಲಿ ಆರಂಭಣೀಯತ್ವವು ಇರುವುದಿಲ್ಲ. ವಿಷಯಾದಿಮತ್ವವೆಂಬ ಹೇತುವಿದ್ದರೂ ಆರಂಭಣೀಯತ್ವವೆಂಬ ಸಾಧ್ಯವಿಲ್ಲದ ಕಾರಣ ಬೌದ್ಧಗ್ರಂಥದಲ್ಲಿ ವ್ಯಭಿಚಾರ ಬರುತ್ತದೆಂಬುದು "ನಚ" ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

ಹಾಗಾದರೆ ಕೇವಲ ವಿಷಯಾದಿಗಳ ಸಮರ್ಥನೆಗೆ ಸೂತ್ರವನ್ನು ಪ್ರಾರಂಭಮಾಡಿದ್ದು ವ್ಯರ್ಥವಾಗಿದೆ. ಕೇವಲ ವಿಷಯಾದಿಗಳ ಸಮರ್ಥನೆಯಿಂದ ಯಾವುದೇ ರೀತಿಯಲ್ಲಿ ಪ್ರಯೋಜನವಿರುವುದಿಲ್ಲ? ಈ ಆಶಂಕೆಯನ್ನು "ಪ್ರಾಮಾಣ್ಯೇ ಹಿ" ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

"ಅತಃ" – ಪ್ರಾಮಾಣ್ಯವು ಇರುವಾಗಲೇ ವಿಷಯಾದಿಗಳ ಪ್ರತಿಪಾದನೆಯು ಸಾರ್ಥಕವಾಗಿದೆ ಎಂದರ್ಥ.

"ಸೂತ್ರಾಕ್ಷಿಪ್ತಮ್" – ವಿಷಯಾದಿಗಳ ಪ್ರತಿಪಾದನೆಯು ಪ್ರಾಮಾಣ್ಯವಿಲ್ಲದಿದ್ದರೆ ಅನುಪಪನ್ನವಾಗುತ್ತದೆ. ಆದ್ದರಿಂದ ವಿಷಯಾದಿಗಳ ಪ್ರತಿಪಾದನೆಯಿಂದ ಅರ್ಥಾತ್ ಲಭ್ಯವಾಗುವ ವಿಷಯಾದಿಗಳ ಪ್ರತಿಪಾದನೆಯನ್ನು ಸಫಲಗೊಳಿಸುವ ಸೂತ್ರಪ್ರಾಮಾಣ್ಯವೂ ಸಹ ಅತ್ಯಂತ ಯುಕ್ತವಾಗುತ್ತದೆಂದರ್ಥ.

ಅರ್ಥಾತ್ ಸಿದ್ಧವಾಗುವ ಅರ್ಥವೂ ಕೂಡ ಸೂತ್ರಾರ್ಥವೇ ಆಗುತ್ತದೆ. ಈ ವಿಷಯವು ಬಂಧಮಿಥ್ಯಾತ್ವವೆಂಬ ಶ್ಲೋಕಕ್ಕೆ ಅವತಾರಿಕೆಯನ್ನು ನೀಡುವ ಸಂದರ್ಭದಲ್ಲಿ ಅದ್ವೈತಮತವನ್ನು ಅನುವಾದ ಮಾಡುವ ಪ್ರಸ್ತಾವದಲ್ಲಿ ಅತ್ಯಂತ ನೈಪುಣ್ಯದಿಂದ ಗ್ರಂಥಕಾರರು ಸಮರ್ಥಿಸುವವರಿದ್ದಾರೆ ಎಂದಭಿಪ್ರಾಯ.

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು. ಆಕ್ಷೇಪ ಹೀಗಿದೆ – ಶಬ್ದದಿಂದ ತಿಳಿಯುವ ಅರ್ಥವನ್ನು ಮೊದಲು ಉಪಪಾದನೆ ಮಾಡದೇ ಆರ್ಥಾತ್ ಸಿದ್ಧವಾಗುವ ಪ್ರಾಮಾಣ್ಯವನ್ನು ಮೊದಲು ಸಮರ್ಥಿಸಿದ್ದು ಅಯುಕ್ತವಾಗಿದೆ. ಇದು ಭಾಷ್ಯಕಾರರ ವ್ಯಾಖ್ಯಾನದ ಅಕೌಶಲ್ಯವನ್ನು ತೋರಿಸುತ್ತಿದೆ?

ಈ ಆಕ್ಷೇಪವು ತಪ್ಪು. ಏಕೆಂದರೆ ಪ್ರಾಮಾಣ್ಯವಿಲ್ಲದೇ ವಿಷಯಾದಿಗಳ ವ್ಯುತ್ಪಾದನೆಯೇ ಕೂಡುವುದಿಲ್ಲ. ಇದನ್ನು ತಿಳಿದೇ ಭಾಷ್ಯಕಾರರು ಆರ್ಥಿಕವಾದ ಪ್ರಾಮಾಣ್ಯಸಮರ್ಥನೆಯನ್ನು ಮೊದಲು ಮಾಡಿದ್ದಾರೆ. ಇದನ್ನು "ಪ್ರಾಮಾಣ್ಯೇ ಹಿ" ಇತ್ಯಾದಿ ಗ್ರಂಥವು ಉಪಪಾದನೆ ಮಾಡಿದೆ.

"ಬುದ್ಧಿಸಿದ್ಧ್ಯರ್ಥೇ" – ಗ್ರಂಥಾಧ್ಯಯನದಲ್ಲಿ ಪ್ರವೃತ್ತಿಮಾಡಬೇಕೆಂಬ ಬುದ್ಧಿಯು ಹುಟ್ಟುವುದಕ್ಕಾಗಿ ಎಂದರ್ಥ.

ವಿವರಣೆ – ಸೂತ್ರಕಾರರು ಪ್ರಥಮಸೂತ್ರದಿಂದ ವಿಷಯಾದಿಗಳನ್ನು ಸಮರ್ಥನೆ ಮಾಡಿದ್ದಾರೆ. ಅರ್ಥಾತ್ ಪ್ರಾಮಾಣ್ಯವು ಸಿದ್ಧವಾಗುತ್ತದೆಂಬುದು ಸೂತ್ರಕಾರರ ಹೃದಯ. ಆದ್ದರಿಂದ ಸೂತ್ರವ್ಯಾಖ್ಯಾನಮಾಡುವ ಮೊದಲು ಭಾಷ್ಯಕಾರರು ಗ್ರಂಥಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾರೆ. ಶ್ರೌತಾರ್ಥ ಆರ್ಥಿಕಾರ್ಥಗಳಲ್ಲಿ ಮೊದಲು ಶ್ರೌತಾರ್ಥವನ್ನೇ ಹೇಳಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಆರ್ಥಿಕಾರ್ಥವನ್ನು ಸಮರ್ಥನೆ ಮಾಡದಿದ್ದಾಗ ಶ್ರೌತಾರ್ಥವೇ ಸಿದ್ಧವಾಗದಿರುವ ಸಂದರ್ಭದಲ್ಲಿ ಆರ್ಥಿಕಾರ್ಥವನ್ನು ಮೊದಲು ಹೇಳುವುದು ಅನಿವಾರ್ಯ. ಪ್ರಕೃತ ಆರ್ಥಿಕಾರ್ಥವೆನಿಸಿದ ಪ್ರಾಮಾಣ್ಯಸಂದೇಹವನ್ನುಂಟುಮಾಡುವ ಆರಂಭಣೀಯತ್ವಸಂದೇಹವನ್ನು ಪರಿಹಾರ ಮಾಡದಿದ್ದರೆ ವಿಷಯಾದಿಗಳ ಸಂದೇಹನಿಮಿತ್ತಕವಾದ ಆರಂಭಣೀಯತ್ವಸಂದೇಹವು ಪರಿಹಾರ ಆಗುವುದೇ ಇಲ್ಲ.

ಆದ್ದರಿಂದ ಭಾಷ್ಯಕಾರರು ಶ್ರೌತಾರ್ಥವನ್ನು ಬಿಟ್ಟು ಮೊದಲೇ ಆರ್ಥಿಕಾರ್ಥವನ್ನು ಸಮರ್ಥನೆ ಮಾಡಿದ್ದು ಅತ್ಯಂತ ಸಮಂಜಸವಾಗಿದೆ.

* * * *

## 'ಇಷ್ಯತೇ' ಎಂಬಲ್ಲಿ ಪ್ರಾಮಾಣಿಕೈಃ ಎಂದೇಕೆ ಶೇಷಪೂರಣೆ ಮಾಡಬೇಕು?

ವಾಕ್ಯಾರ್ಥಚಂದ್ರಿಕಾ – ನನು 'ಅತಃ ಇತ್ಯುತ್ತರವಾಕ್ಯಸ್ಯ ಪೂರ್ವೋಕ್ತಾರ್ಥಪ್ರತಿಪಾದಕತ್ವಾತ್ ಪೌನರುಕ್ತ್ಯಮಿತ್ಯತಃ 'ಪರಮಾಖ್ಯವಿದ್ಯಾ' ಇತ್ಯಾರಭ್ಯ ಪ್ರಕೃತಪ್ರಮೇಯೋಪಸಂಹಾರತ್ವಾನ್ನ ವೈಯರ್ಥ್ಯಮಿತ್ಯಾಹ – ತದೇವಮಿತಿ ॥ 'ಮಯೇ'ತ್ಯಧ್ಯಾಹಾರಸ್ಯ ಸ್ವತಃಸಿದ್ಧತ್ವೇಽಪಿ, ಪ್ರಮಾಣತಮತ್ವೇನ ಸ್ವಾಂಗೀಕಾರಮಾತ್ರಸ್ಯಾನುಪಯುಕ್ತತ್ವಾತ್ ಸರ್ವಾಂಗೀಕಾರಸ್ಯ ಚ ಬಾಧಿತತ್ವಾತ್ ಪ್ರಮಾಣಾನಾಂ ಚಾನುಪದಮೇವೋಪಪಾದಿತತ್ವಾತ್, 'ಪ್ರಾಮಾಣಿಕೈಃ' ಇತ್ಯೇವ ಶೇಷಪೂರಣಂ ಯುಕ್ತಮಿತ್ಯಭಿಪ್ರೇತ್ಯಾಹ – ಇಷ್ಯತೇ ಇತಿ ॥ ಪರಮಪ್ರಮೇಯಾನುಪಸಂಹಾರೇಣೋಪಸಂಹಾರಭಾಷ್ಯನ್ಯೂನತಾಂ ಪರಿಹರ್ತುಂ ಭಾಷ್ಯಕಾರಾಭಿಪ್ರೇತಂ ಪರಮಪ್ರಮೇಯಂ ಸ್ವಯಂ ದರ್ಶಯತಿ – ತಥಾ ಚೇತಿ ॥

'ಅತಃ' ಎಂಬ ಉತ್ತರವಾಕ್ಯದಲ್ಲಿ ಹಿಂದೆ ಹೇಳಿದ ಅರ್ಥವನ್ನೇ ಪ್ರತಿಪಾದನೆ ಮಾಡಲಾಗಿದೆ. ಆದ್ದರಿಂದ ಪುನರುಕ್ತಿದೋಷವು ಬರುತ್ತದಲ್ಲವೇ?

ಈ ಆಕ್ಷೇಪವು ತಪ್ಪು. ಏಕೆಂದರೆ, 'ಪರಮಾಖ್ಯವಿದ್ಯಾವ್ಯಾಖ್ಯಾಂ' ಎಂಬುದರಿಂದ ಪ್ರಾರಂಭಮಾಡಿ ಇಲ್ಲಿಯ ತನಕ ಯಾವ ಪ್ರಮೇಯವನ್ನು ಉಪಪಾದನೆ ಮಾಡಲಾಯಿತೋ ಅದರ ಉಪಸಂಹಾರವನ್ನು ಈಗ ಮಾಡುತ್ತಿರುವುದರಿಂದ ವೈಯರ್ಥ್ಯದೋಷವು ಬರುವುದಿಲ್ಲ. ಇದನ್ನು "ತದೇವಂ" ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

'ಮಯಾ' ಎಂಬ ಅಧ್ಯಾಹಾರವು ಸ್ವತಃಸಿದ್ಧವಾಗಿದೆ. ಆದರೂ ಕೂಡ ಪ್ರಮಾಣತಮವಾಗಿದೆ ಎಂದು ತಾವಷ್ಟೇ ಅಂಗೀಕಾರ ಮಾಡುವುದು ಅನುಪಯುಕ್ತವಾಗುತ್ತದೆ. ಸರ್ವಾಂಗೀಕಾರವಂತೂ ಬಾಧಿತವಾಗಿದೆ. ಆದ್ದರಿಂದ ಪ್ರಮಾಣಗಳನ್ನು ಈಗಷ್ಟೇ ಉಪಪಾದನೆ ಮಾಡಿರುವುದರಿಂದ 'ಪ್ರಾಮಾಣಿಕೈಃ' ಎಂಬುದಾಗಿಯೇ ಶೇಷಪೂರಣ ಮಾಡಿಕೊಳ್ಳುವುದು ಯುಕ್ತವಾಗುತ್ತದೆ. ಈ ಅಭಿಪ್ರಾಯದಿಂದ "ಇಷ್ಯತೇ" ಎಂಬ ಟೀಕಾವಾಕ್ಯವು ಹೊರಟಿದೆ.

ಪರಮಪ್ರಮೇಯವನ್ನು ಉಪಸಂಹಾರಮಾಡದೇ ಇರುವುದರಿಂದ ಉಪಸಂಹಾರಭಾಷ್ಯಕ್ಕೆ ನ್ಯೂನತಾದೋಷವನ್ನು ಪರಿಹರಿಸಲು ಭಾಷ್ಯಕಾರರಿಗೆ ಅಭಿಪ್ರೇತವಾದ ಯಾವ ಪರಮಪ್ರಮೇಯವಿದೆಯೋ ಅದನ್ನು ಸ್ವತಃ ಗ್ರಂಥಕಾರರು "ತಥಾ ಚ" ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

ವಿವರಣೆ – 'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ' ಎಂಬಲ್ಲಿ 'ಇಷ್ಯತೇ' ಎಂಬುದನ್ನು ಕರ್ಮಣಿ ಪ್ರಯೋಗದಲ್ಲಿ ಹೇಳಿದ್ದಾರೆ. ಕೇನ ಇಷ್ಯತೇ ಎಂಬ ಪ್ರಶ್ನೆಗೆ 'ಮಯಾ' ಎಂಬ ಅಧ್ಯಾಹಾರವು ಸ್ವತಃಸಿದ್ಧವಾಗುತ್ತದೆ. ಆದರೆ ಶಿಷ್ಯರನ್ನು ಕುರಿತು 'ನನ್ನಿಂದ ಅಂಗೀಕರಿಸಲ್ಪಡುತ್ತದೆ' ಎಂದು ಹೇಳುವುದು ತಪ್ಪಾಗುವುದಿಲ್ಲ. ಪರವಾದಿಗಳನ್ನು ಕುರಿತು ಹೇಗೆ ತಾನೇ ಇದನ್ನು ಹೇಳಲು ಸಾಧ್ಯ? ಶ್ರೀಮದಾಚಾರ್ಯರ ವಿಷಯದಲ್ಲಿ ಪರವಾದಿಗಳಿಗೆ ವಿಶ್ವಾಸವು ಇರುವುದಿಲ್ಲ. ಇನ್ನು ಬ್ರಹ್ಮಸೂತ್ರವೇ ಶ್ರೇಷ್ಠಪ್ರಮಾಣವಾಗಿದೆ ಎಂಬುದನ್ನು ಎಲ್ಲರೂ ಅಂಗೀಕರಿಸುವುದರಿಂದ ''ಸರ್ವೈಃ'' ಎಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಯೂ ಕೂಡ ತಪ್ಪು. ಏಕೆಂದರೆ ಬ್ರಹ್ಮಸೂತ್ರವೇ ಸರ್ವೋತ್ತಮ ಎಂಬುದನ್ನು ಎಲ್ಲರೂ ಕೂಡ ಅಂಗೀಕಾರ ಮಾಡುವುದೇ ಇಲ್ಲ. ಆದ್ದರಿಂದ ''ಪ್ರಾಮಾಣಿಕೈಃ'' ಎಂಬುದನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕು. ಇಲ್ಲಿಯ ತನಕ ಆಪ್ತಿಮೂಲತ್ವ, ಯುಕ್ತಿಮೂಲತ್ವ, ಶ್ರುತಿಮೂಲತ್ವ ಮೊದಲಾದ ಪ್ರಮಾಣಗಳ ಬಲದಿಂದ ಬ್ರಹ್ಮಸೂತ್ರವೇ ಅನುತ್ತಮವಾಗಿದೆ ಎಂಬುದನ್ನು ಸಮರ್ಥಿಸಿದ್ದಾಗಿದೆ. ಈ ಕಾರಣದಿಂದ 'ಪ್ರಾಮಾಣಿಕೈಃ' ಎಂಬ ಶೇಷಪೂರಣವು ಅರ್ಥಾತ್ ಸಿದ್ಧವಾಗುತ್ತದೆ.

ಬ್ರಹ್ಮಸೂತ್ರವು ಪರಮಪ್ರಮೇಯವಾಗಿದೆ ಎಂಬುದನ್ನು ಅಂಗೀಕರಿಸೋಣ; ಇದರಿಂದೇನು ಪ್ರಯೋಜನ? ಎಂಬ ಪ್ರಶ್ನೆಗೆ ಉತ್ತರವನ್ನು ತಿಳಿಸುವ ಮೂಲಕ ಪರಮಪ್ರಮೇಯದ ಉಪಸಂಹಾರವನ್ನು ಮಾಡುತ್ತಿದ್ದಾರೆ. ಅದು ಹೀಗಿದೆ – 'ಬ್ರಹ್ಮಸೂತ್ರವೇ ಶ್ರೇಷ್ಠವಾಗಿರುವುದರಿಂದ ಇದನ್ನು ಬಿಟ್ಟು ಬೇರೆ ಗ್ರಂಥಗಳಿಗೆ ವ್ಯಾಖ್ಯಾನಮಾಡುವುದು ಯುಕ್ತವಾಗುವುದಿಲ್ಲ. ಬ್ರಹ್ಮಸೂತ್ರವನ್ನು ವ್ಯಾಖ್ಯಾನ ಮಾಡುವುದೇ ಸಮಂಜಸವಾಗುತ್ತದೆ'. ಭಾಷ್ಯಕಾರರು ಇದುವರೆಗೂ ಸಾಧಿಸಿದ್ದರಿಂದ ಸಿದ್ಧವಾಗುವ ಈ ಪರಮಪ್ರಮೇಯವನ್ನು ಕಂಠತಃ ಹೇಳದಿರಬಹುದು. ಆದರೆ ಅಭಿಪ್ರಾಯವನ್ನು ಹೊಂದಿದ್ದಾರೆಂಬುದಾಗಿ ಗ್ರಂಥಕಾರರು ತಿಳಿಸುತ್ತಿದ್ದಾರೆ.

## ನಿರ್ಣೇತವ್ಯಗ್ರಂಥಗಳಲ್ಲಿ ಮಾತ್ರ ಮಹಾಭಾರತವು ಶ್ರೇಷ್ಠ

ವಾಕ್ಯಾರ್ಥಚಂದ್ರಿಕಾ – ನನು ಶ್ರುತ್ಯನುಮಾನಾಭ್ಯಾಮಸ್ಯೈವ ಪ್ರಮಾಣತಮತ್ವೇ 'ಭಾರತಸ್ಯ ಸರ್ವಶಾಸ್ತ್ರೇಷೂತ್ತಮತ್ವೋಕ್ತಿಃ ವ್ಯಾಹನ್ಯೇತೇತಿ ಶಂಕತೇ – ನನ್ವಿತಿ ॥ 'ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ' ಇತಿ ಪ್ರಮಾಣಮನೇನಾನುಕರೋತಿ । 'ದ್ವೇ ವಿದ್ಯೇ ವೇದಿತವ್ಯೇ' ಇತಿ ಶ್ರುತೌ ಋಗಾದಿಪದೋಪಲಕ್ಷಿತಾಶೇಷಶಾಸ್ತ್ರಾಣಾಮಪರವಿದ್ಯಾತ್ವಮುಕ್ತ್ವಾ ಅನುಗ್ರಾಹಕತ್ವೇನಾಸ್ಯೈವ ಪರವಿದ್ಯಾತ್ವೇನೋಕ್ತ್ಯಾ ಲಿಂಗತ್ರಯಾವಸಿತತತ್ವರೂಪಸ್ಯ ಮಹತ್ತ್ವಸ್ಯಾಸ್ಯೈವ ಸಂಭವೇನ,

ಅಸ್ಯೈವ ಶಾಸ್ತ್ರಸ್ಯ ಭಾರತಾಪೇಕ್ಷಯಾ ಉತ್ತಮತ್ವೇऽಪಿ ಭಾರತಸ್ಯೋತ್ತಮತ್ವೋಕ್ತಿಃ ನಿರ್ಣೇತ-ವ್ಯಾಂತರಾಪೇಕ್ಷಯಾ ಸಂಕೋಚಯಿತವ್ಯಾ ಇತ್ಯಾಹ – ಸತ್ಯಮಿತಿ ॥

ಶ್ರುತಿ ಹಾಗೂ ಅನುಮಾನಗಳ ಆಧಾರದಿಂದ ಬ್ರಹ್ಮಸೂತ್ರಕ್ಕೆ ಮಾತ್ರ ಅನುತ್ತಮಪ್ರಾಮಾಣ್ಯ-ವನ್ನು ಸಮರ್ಥನೆ ಮಾಡಿದಿರಿ. ಹಾಗಾದರೆ ಮಹಾಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವನ್ನು ಹೇಳಿದ್ದು ವ್ಯಾಹತವಾಗುತ್ತದಲ್ಲವೇ? ಈ ಆಶಂಕೆಯನ್ನು "ನನು" ಇತ್ಯಾದಿ ಗ್ರಂಥದಿಂದ ಮಾಡುತ್ತಿದ್ದಾರೆ.

'ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ' 'ಸಕಲಶಾಸ್ತ್ರಗಳಲ್ಲಿ ಮಹಾಭಾರತವೇ ಶ್ರೇಷ್ಠ; ಮಹಾಭಾರತದಲ್ಲಿ ಭಗವದ್ಗೀತೆಯು ಶ್ರೇಷ್ಠ' ಎಂಬ ಪ್ರಮಾಣವನ್ನು ಈ ವಾಕ್ಯದಿಂದ ಗ್ರಂಥ-ಕಾರರು ಅನುಕರಣೆ ಮಾಡಿದ್ದಾರೆ.

'ದ್ವೇ ವಿದ್ಯೇ ವೇದಿತವ್ಯೇ' ಎಂಬ ಶ್ರುತಿಯಲ್ಲಿ ಋಗಾದಿಪದಗಳಿಂದ ಉಪಲಕ್ಷಿತವಾದ ಸಕಲ-ಶಾಸ್ತ್ರಗಳಿಗೆ ಅಪರವಿದ್ಯಾತ್ವವನ್ನು ಹೇಳಲಾಗಿದೆ. ಮತ್ತು ಅನುಗ್ರಾಹಕವಾಗಿರುವುದರಿಂದ ಬ್ರಹ್ಮಸೂತ್ರವೇ ಪರಿವಿದ್ಯೆಯಾಗಿದೆ ಎಂದೂ ಕೂಡ ಹೇಳಲಾಗಿದೆ. ಇದರ ಬಲದಿಂದ ಲಿಂಗತ್ರಯಾವಸಿತತ್ವವೆಂಬ ಮಹತ್ವವು ಬ್ರಹ್ಮಸೂತ್ರಕ್ಕೆ ಮಾತ್ರ ಯುಕ್ತವಾಗುತ್ತದೆ. ಆದ್ದರಿಂದ ಮಹಾಭಾರತಕ್ಕಿಂತಲೂ ಬ್ರಹ್ಮಸೂತ್ರವೇ ಶ್ರೇಷ್ಠವಾಗಿದೆ; ಹಾಗಿದ್ದರೂ ಮಹಾಭಾರತಕ್ಕೆ ಉತ್ತಮತ್ವವನ್ನು ಹೇಳಿರುವುದು ನಿರ್ಣೇತವ್ಯವಾದ ಗ್ರಂಥಾಂತರಗಳ ದೃಷ್ಟಿಯಿಂದ ಮಾತ್ರ ಎಂಬುದಾಗಿ ಸಂಕೋಚ ಮಾಡಬೇಕು. ಈ ವಿಷಯವನ್ನು "ಸತ್ಯಮ್" ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ.

## ಬ್ರಹ್ಮಸೂತ್ರಗಳ ಪ್ರಾಮಾಣ್ಯ ಹಾಗೂ ಅನುತ್ತಮತ್ವಗಳು ಪ್ರಥಮಸೂತ್ರದಿಂದಲೇ ಸಿದ್ಧವಾಗುವಾಗ ಪ್ರಥಮಭಾಷ್ಯ ಏಕೆ?

ವಾಕ್ಯಾರ್ಥಚಂದ್ರಿಕಾ– ನನು ಇಯತಾ ಪ್ರಬಂಧೇನ ಪ್ರತಿಪಾದಿತಯೋಃ ಪ್ರಾಮಾಣ್ಯ-ತದನುತ್ತಮತ್ವಯೋರುಕ್ತರೀತ್ಯಾ ಶಾಸ್ತ್ರಾರಂಭಣೀಯತಾರ್ಥತ್ವಾತ್ ಶಾಸ್ತ್ರಾರಂಭಣೀಯತಾಯಾಶ್ಚ ಸೂತ್ರಕಾರೇಣೈವ ಪ್ರಥಮಸೂತ್ರೇ ಸಮರ್ಥನಾತ್ ತದ್ವ್ಯಾಖ್ಯಾನೇನೈವ ಆರಂಭಣೀಯತೌ-ಪಯಿಕವಿಷಯಾದಿವತ್ ಪ್ರಾಮಾಣ್ಯಾದೇರಪಿ ಸಿದ್ಧೇಃ ತದೇವ ವ್ಯಾಖ್ಯಾಯತಾಂ, ಕಿಮನೇನ ಸೂತ್ರಾನರ್ಥತಯಾ ಪ್ರಾಮಾಣ್ಯಾದಿವ್ಯುತ್ಪಾದಕೇನ ಪ್ರಥಮಭಾಷ್ಯೇಣೇತಿ ಶಂಕತೇ – ನನು ಚೇತಿ ॥

ಇಲ್ಲಿಯ ತನಕ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಹಾಗೂ ಅನುತ್ತಮತ್ವವನ್ನು ಸಮರ್ಥಿಸಿ-ದ್ದಾಯಿತು. ಇದರಿಂದ ಶಾಸ್ತ್ರವು ಆರಂಭಣೀಯವಾಗಿದೆ ಎಂಬರ್ಥವನ್ನು ಸಮರ್ಥನೆ ಮಾಡಿದಂತಾ-ಗುತ್ತದೆ. ಆದರೆ ಈ ಶಾಸ್ತ್ರಾರಂಭಣೀಯತ್ವವನ್ನು ಪ್ರಥಮಸೂತ್ರದಲ್ಲಿ ಸೂತ್ರಕಾರರೇ ಸ್ವತಃ ಸಮರ್ಥನೆ ಮಾಡುವವರಿದ್ದಾರೆ. ಆ ಪ್ರಥಮಸೂತ್ರಕ್ಕೆ ವ್ಯಾಖ್ಯಾನ ಮಾಡುವುದರಿಂದಲೇ ಆರಂಭಣೀಯತ್ವಕ್ಕೆ ಉಪಯುಕ್ತವಾದ ವಿಷಯಾದಿಗಳಂತೆ ಪ್ರಾಮಾಣ್ಯಾದಿಗಳೂ ಕೂಡ ಸಿದ್ಧವಾಗುತ್ತವೆ. ಹಾಗಾಗಿ ಆ ಪ್ರಥಮಸೂತ್ರವನ್ನೇ ವ್ಯಾಖ್ಯಾನ ಮಾಡಿದರೆ ಸಾಕು. ಸೂತ್ರದ ವ್ಯಾಖ್ಯಾನರೂಪ ಆಗದೇ ಇರುವ ಈ ಪ್ರಾಮಾಣ್ಯಾದಿಗಳ ವ್ಯುತ್ಪಾದನೆಯಾದರೂ ಕೂಡ ಏಕೆ ಬೇಕಿತ್ತು ? ಸೂತ್ರಕ್ಕೆ ಪೀಠಿಕಾರೂಪದಲ್ಲಿರುವ ಈ ಪ್ರಥಮಭಾಷ್ಯದಲ್ಲಿ ಪ್ರಾಮಾಣ್ಯದ ಸಮರ್ಥನೆ ಹಾಗೂ ಅನುತ್ತಮತ್ವದ ಸಮರ್ಥನೆಯೂ ವ್ಯರ್ಥವಾಗಿದೆ. ಈ ಆಶಂಕೆಯನ್ನು ''ನನು ಚ'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

## ಅಧ್ಯಯನಪ್ರವೃತ್ತಿಯು ಪ್ರಾಮಾಣ್ಯನಿಶ್ಚಯಾಧೀನ

ವಾಕ್ಯಾರ್ಥಚಂದ್ರಿಕಾ– ಪ್ರಾಮಾಣ್ಯನಿಶ್ಚಯಸ್ಯ ಪ್ರವೃತ್ತಿಪ್ರಯೋಜಕತ್ವಾತ್ ಶಾಸ್ತ್ರಪ್ರವೃತ್ತಿ-ಪ್ರಯೋಜಕಪ್ರಾಮಾಣ್ಯನಿಶ್ಚಯಾಯ ಪ್ರಥಮಸೂತ್ರಗವೇಷಣಾಯಾಂ, ತತ್ರ ಪ್ರವೃತ್ತೇರಪಿ ಪ್ರಾಮಾಣ್ಯನಿಶ್ಚಯಾಧೀನತಯಾ ತತ್ಪ್ರಾಮಾಣ್ಯೇಽವಶ್ಯಂ ಪ್ರತಿಪಾದ್ಯೇ, ಸಮಾನನ್ಯಾಯತಯಾ ಶಾಸ್ತ್ರಪ್ರಮಾಣೋಕ್ತಿಃ ಪ್ರಥಮಭಾಷ್ಯೇ ಇತ್ಯಾಶಂಕತೇ – ಪ್ರಥಮೇತಿ ॥ ತರ್ಹಿ ಪ್ರವೃತ್ತೇಃ ಪ್ರಾಮಾಣ್ಯನಿಶ್ಚಯಸಾಧ್ಯತ್ವಾದೇವ, ವ್ಯಾಖ್ಯಾನಪ್ರಾಮಾಣ್ಯನಿಶ್ಚಯಸ್ಯ ವ್ಯಾಖ್ಯೇಯಪ್ರಾಮಾಣ್ಯ-ನಿಶ್ಚಯಾಧೀನತಯಾ ತನ್ನಿಶ್ಚಯಾಭಾವೇ ಪ್ರಥಮಭಾಷ್ಯೇಽಪಿ ನ ಪ್ರವೃತ್ತ್ಯುಪಪತ್ತಿರಿತಿ ಸಮಾಧತ್ತೇ – ಪ್ರಥಮೇತಿ ॥

ಶಾಸ್ತ್ರಾಧ್ಯಯನದಲ್ಲಿ ಪ್ರವೃತ್ತಿಯನ್ನು ಮಾಡಬೇಕೆಂದರೆ ಮೊದಲು ಆ ಶಾಸ್ತ್ರದ ಪ್ರಾಮಾಣ್ಯವು ನಿಶ್ಚಯವಾಗಿರಬೇಕು. ಆ ಪ್ರಾಮಾಣ್ಯದ ನಿಶ್ಚಯಕ್ಕೋಸ್ಕರ ಪ್ರಥಮಸೂತ್ರದ ಅಧ್ಯಯನದಲ್ಲಿ ತೊಡಗ-ಬೇಕು. ಆದರೆ ಪ್ರಥಮಸೂತ್ರವನ್ನು ಅಧ್ಯಯನ ಮಾಡಲು ಪ್ರವೃತ್ತಿಮಾಡಬೇಕಾದರೂ ಕೂಡ ಆ ಪ್ರಥಮಸೂತ್ರದಲ್ಲಿ ಪ್ರಾಮಾಣ್ಯನಿಶ್ಚಯವು ಆಗಿರಲೇಬೇಕು. ಆದ್ದರಿಂದ ಪ್ರಥಮಸೂತ್ರಪ್ರವೃತ್ತಿಗಿಂತ ಮೊದಲು ಪ್ರಥಮಸೂತ್ರಪ್ರಾಮಾಣ್ಯವನ್ನು ಅವಶ್ಯವಾಗಿ ಪ್ರತಿಪಾದನೆ ಮಾಡಲೇಬೇಕು. ಸಮಾನ-ನ್ಯಾಯದಿಂದ ಸಮಸ್ತಶಾಸ್ತ್ರಕ್ಕೂ ಕೂಡ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಹಾಗಾಗಿ ಪ್ರಥಮಭಾಷ್ಯದಲ್ಲಿ ಸಮಸ್ತಶಾಸ್ತ್ರದ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿರುವುದು ಯುಕ್ತವಾಗಿದೆ. ಈ ಆಶಂಕೆಯನ್ನು ''ಪ್ರಥಮ'' ಇತ್ಯಾದಿಗ್ರಂಥದಿಂದ ತೋರಿಸುತ್ತಿದ್ದಾರೆ.

ಪ್ರವೃತ್ತಿಯು ಪ್ರಾಮಾಣ್ಯನಿಶ್ಚಯದಿಂದಷ್ಟೇ ಸಾಧ್ಯವೆಂದು ಹೇಳುತ್ತಿದ್ದೀರಿ. ವ್ಯಾಖ್ಯೇಯಕ್ಕೆ ಪ್ರಾಮಾಣ್ಯವು ನಿಶ್ಚಯವಾದರೆ ಮಾತ್ರ ವ್ಯಾಖ್ಯಾನಕ್ಕೆ ಪ್ರಾಮಾಣ್ಯವು ನಿಶ್ಚಯವಾಗುತ್ತದೆ. ವ್ಯಾಖ್ಯಾನಕ್ಕೆ ಪ್ರಾಮಾಣ್ಯವು ನಿಶ್ಚಯ ಆಗದೇ ಇದ್ದರೆ ಪ್ರಥಮಭಾಷ್ಯದ ಅಧ್ಯಯನದಲ್ಲೂ ಕೂಡ ಪ್ರವೃತ್ತಿಯನ್ನು ಮಾಡಲಾರ. ಈ ಸಮಾಧಾನವನ್ನು ''ಪ್ರಥಮ'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಿವರಣೆ – ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವು ನಿಶ್ಚಯವಾದರೆ ಮಾತ್ರ ಭಾಷ್ಯಕ್ಕೆ ಪ್ರಾಮಾಣ್ಯವು ನಿಶ್ಚಯವಾಗುತ್ತದೆ. ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವು ನಿಶ್ಚಯವಾಗದ ಕಾರಣ ಭಾಷ್ಯದಲ್ಲೂ ಕೂಡ ಪ್ರಾಮಾಣ್ಯವು ನಿಶ್ಚಯವಾಗಿರುವುದಿಲ್ಲ. ಆದ್ದರಿಂದ ಪ್ರಥಮಭಾಷ್ಯದಲ್ಲಾದರೂ ಪ್ರವೃತ್ತಿಯು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸಿದ್ದಾರೆ.

## ಭಾಷ್ಯಕಾರರು ಮಾಡಿದ ಪ್ರಾಮಾಣ್ಯಸಮರ್ಥನೆಯು ವ್ಯರ್ಥವೇ?

ವಾಕ್ಯಾರ್ಥಚಂದ್ರಿಕಾ– ಸೂತ್ರೇ ಪ್ರಾಮಾಣ್ಯಾನುಕ್ತ್ಯಾ ಸಮಾಧತ್ತೇ – ವಿಷಯಾದೀತಿ ॥ ತತ್ = ಶಾಸ್ತ್ರಸ್ಯಾರಂಭಣೀಯತ್ವಮ್ । ಸಂಪಾದನೇನ = ವ್ಯುತ್ಪಾದನೇನ । 'ಸೂತ್ರಕಾರಃ ಪ್ರಥಮಸೂತ್ರೇ ಸಮರ್ಥಯತೇ' ಇತಿ ಪೂರ್ವೇಣ ಸಂಬಂಧಃ । ನನು ಸೂತ್ರಸ್ಯ ವಿಷಯಾದಿವ್ಯುತ್ಪಾದನೇನೈವ ಆರಂಭಣೀಯತ್ವಸಮರ್ಥಕತ್ವೇ, ತಾವತೈವಾರಂಭಣೀಯತ್ವಸಿದ್ಧೌ ಭಾಷ್ಯಕಾರೀಯಂ ಪ್ರಾಮಾಣ್ಯ-ವ್ಯುತ್ಪಾದನಂ ವ್ಯರ್ಥಮೇವೇತ್ಯತ ಆಹ – ನ ಚೇತಿ ॥ ತಾವತಾ = ವಿಷಯಾದಿವ್ಯುತ್ಪಾದನೇನ । ಆರಂಭಣೀಯತ್ವಂ 'ಸಿದ್ಧಂ ಭವಿಷ್ಯತಿ' ಇತಿ ಶೇಷಃ ।

ಸೂತ್ರದಲ್ಲಿ ಶಾಸ್ತ್ರಪ್ರಾಮಾಣ್ಯವನ್ನು ಹೇಳಿರುವುದಿಲ್ಲ ಎಂಬ ಸಮಾಧಾನವನ್ನು ''ವಿಷಯಾದಿ'' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ''ತತ್'' – ಶಾಸ್ತ್ರದ ಆರಂಭಣೀಯತ್ವವು. 'ಸಂಪಾದನೇನ' – ವ್ಯುತ್ಪಾದನೆಯಿಂದ, 'ಸೂತ್ರಕಾರಃ ಪ್ರಥಮಸೂತ್ರೇ ಸಮರ್ಥಯತೇ' ಎಂಬುದಾಗಿ ಹಿಂದಿನ ವಾಕ್ಯದ ಜೊತೆ ಅನ್ವಯವನ್ನು ತಿಳಿಯಬೇಕು.

ಸೂತ್ರವು ವಿಷಯಾದಿಗಳ ವ್ಯುತ್ಪಾದನೆಯಿಂದ ಶಾಸ್ತ್ರಕ್ಕೆ ಆರಂಭಣೀಯತ್ವವನ್ನು ಸಮರ್ಥನೆ ಮಾಡುವುದಾದರೆ, ಅಷ್ಟರಿಂದಲೇ ಆರಂಭಣೀಯತ್ವವು ಸಿದ್ಧವಾಗುತ್ತಿರುವಾಗ ಪುನಃ ಭಾಷ್ಯಕಾರರು ಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಿದ್ದು ವ್ಯರ್ಥವಲ್ಲವೇ? ಈ ಆಕ್ಷೇಪಕ್ಕೆ ''ನಚ'' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

"ತಾವತಾ" – ವಿಷಯಾದಿ ವ್ಯುತ್ಪಾದನೆಯಿಂದ ಎಂದರ್ಥ. 'ಆರಂಭಣೀಯತ್ವಂ' ಎಂಬಲ್ಲಿ 'ಸಿದ್ಧಂ ಭವಿಷ್ಯತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

## ಸೂತ್ರಾಕ್ಷಿಪ್ತವಾದದ್ದನ್ನೇ ಭಾಷ್ಯಕಾರರು ಹೇಳಿದ್ದಾರೆ

ವಾಕ್ಯಾರ್ಥಚಂದ್ರಿಕಾ– ನನ್ವೇವಂ ಪ್ರಾಮಾಣ್ಯವ್ಯುತ್ಪಾದನಸ್ಯಾವಶ್ಯಕತ್ವೇ, ಪ್ರಮಾಣಸ್ಯ ಸತೋ ನಿರ್ವಿಷಯತ್ವಾದಿಪ್ರಯುಕ್ತಾನಾರಂಭಣೀಯತ್ವಶಂಕಾಯಾ ಅಪ್ರಸಕ್ತೇಃ ವಿಷಯಾದಿ-ವ್ಯುತ್ಪಾದನಂ ವ್ಯರ್ಥಂ ಸೂತ್ರೇ ಆವಶ್ಯಕಪ್ರಾಮಾಣ್ಯಾವ್ಯುತ್ಪಾದನಾತ್ ನ್ಯೂನತಾ ಚ ಇತ್ಯತಃ ಕಾಕದಂತಪರೀಕ್ಷಾಗ್ರಂಥಾದೌ ಸತ್ಯಪಿ ಯಥಾರ್ಥ್ಯರೂಪಪ್ರಾಮಾಣ್ಯೇ, ನಿಷ್ಪ್ರಯೋಜನತ್ವಾದಿ-ಪ್ರಯುಕ್ತಾನಾರಂಭಣೀಯತಾಯಾ ಚ ದೃಷ್ಟತ್ವೇನ ಶಂಕಾಪ್ರಸಂಜಕಸದ್ಭಾವಾತ್ । ಅಪ್ರಾಮಾಣ್ಯೇ ಚ ತೇನೈವಾನಾರಂಭಣೀಯತ್ವಪ್ರಾಪ್ತೌ, ಕಾಕದಂತಪರೀಕ್ಷಾಗ್ರಂಥಸಾಲಕ್ಷಣ್ಯಶಂಕಾಯಾ ಅನವಸರ-ಗ್ರಸ್ತತಯಾ, ತದ್ವೈಲಕ್ಷಣ್ಯಾಯ ಸವಿಷಯಕತ್ವಾದೇರಪ್ರತಿಪಾದನೀಯತಯಾ, ತತಪ್ರತಿಪಾದನೇನೈವ ಪ್ರಾಮಾಣ್ಯವ್ಯುತ್ಪಾದನಸ್ಯ ಸೂತ್ರಕೃದಭಿಮತತಯಾ ಸುಜ್ಞಾನತ್ವಾಚ್ಚ ನ ನ್ಯೂನತಾಽಪೀತ್ಯಾ-ಶಯೇನಾಹ – ಪ್ರಾಮಾಣ್ಯೇ ಹಿ ಸತೀತಿ ॥ ನನ್ವಸ್ತು ಸೂತ್ರಕಾರೀಯವಿಷಯಾದಿವ್ಯುತ್ಪಾದನಸ್ಯ ಪ್ರಾಮಾಣ್ಯೇ ಸತ್ಯೇವೋಪಯೋಗಃ, ತಥಾಪಿ ಪ್ರಾಮಾಣ್ಯವ್ಯುತ್ಪಾದಕಸ್ಯಾಸ್ಯ ಕಥಂ ಭಾಷ್ಯತ್ವಮ್? ಇತ್ಯಾಶಂಕಾಂ ಪರಿಹರನ್ನೇವ ಭಾಷ್ಯಕಾರೀಯತದುಕ್ತೇಃ ಪ್ರಯೋಜನಂ ಚೋಪಸಂಹಾರವ್ಯಾಜೇನ ದರ್ಶಯತಿ – ಅತ ಇತಿ ॥ 'ನ ಚ ಯಾಥಾರ್ಥ್ಯೇ ಮಾನಮಸ್ತಿ' ಇತ್ಯಾದಿಶಂಕಾಪರಿಹಾರಃ – ಬುದ್ಧಿಶುದ್ಧಿಃ ॥

ಪ್ರಾಮಾಣ್ಯದ ಸಮರ್ಥನೆಯು ಆವಶ್ಯಕವೆಂದು ಹೇಳುತ್ತಿದ್ದೀರಿ. ಹಾಗಾದರೆ ಯಾವುದು ಪ್ರಮಾಣವಾಗಿರುತ್ತದೋ ಅದರಲ್ಲಿ ನಿರ್ವಿಷಯತ್ವಪ್ರಯುಕ್ತವಾದ ಆರಂಭಣೀಯತ್ವದ ಶಂಕೆಗೆ ಪ್ರಸಕ್ತಿಯೇ ಇರುವುದಿಲ್ಲ. ಮತ್ತು ವಿಷಯಾದಿಗಳ ಸಮರ್ಥನೆಯೂ ಕೂಡ ಸೂತ್ರದಲ್ಲಿ ಮಾಡಿದ್ದು ವ್ಯರ್ಥವಾಗುತ್ತದೆ. ಆವಶ್ಯಕವಾದ ಪ್ರಾಮಾಣ್ಯದ ವ್ಯುತ್ಪಾದನೆಯನ್ನು ಮಾಡದೇ ಇರುವುದೂ ಕೂಡ ಸೂತ್ರಕಾರರಿಗೆ ಬರುವ ಮತ್ತೊಂದು ನ್ಯೂನತೆಯಾಗಿದೆ?

ಇದು ತಪ್ಪು; ಕಾಕದಂತಪರೀಕ್ಷಾಗ್ರಂಥದಲ್ಲಿ ಯಾಥಾರ್ಥ್ಯವೆಂಬ ಪ್ರಾಮಾಣ್ಯವಿದೆ. ಆದರೆ ನಿಷ್ಪ್ರಯೋಜನತ್ವಾದಿ ಪ್ರಯುಕ್ತವಾದ ಅನಾರಂಭಣೀಯತ್ವವೇ ಕಂಡಿದೆ. ಆದ್ದರಿಂದ ಪ್ರಮಾಣವಾಗಿದ್ದರೂ ಕೂಡ ನಿರ್ವಿಷಯತ್ವಪ್ರಯುಕ್ತವಾದ ಆಶಂಕೆಗೆ ಅವಕಾಶ ಇದ್ದೇ ಇದೆ. ಯಾವ ಗ್ರಂಥವು ಅಪ್ರಮಾಣ-

ವಾಗುತ್ತದೋ ತತ್ಪ್ರಯುಕ್ತವಾಗಿಯೇ ಆ ಗ್ರಂಥಕ್ಕೆ ಅನಾರಂಭಣೀಯತ್ವವು ಪ್ರಾಪ್ತವಾಗುತ್ತಿರುವಾಗ ಕಾಕದಂತಪರೀಕ್ಷಾಗ್ರಂಥದ ಸಾಲಕ್ಷಣ್ಯಶಂಕೆಗೆ ಸಂಗತಿಯೇ ಇರುವುದಿಲ್ಲ. ಆದ್ದರಿಂದ ಕಾಕದಂತಪರೀಕ್ಷಾ ಗ್ರಂಥದ ವೈಲಕ್ಷಣ್ಯಕ್ಕೋಸ್ಕರ ಸವಿಷಯಕತ್ವಾದಿಗಳನ್ನು ಪ್ರತಿಪಾದನೆ ಮಾಡಬೇಕಾಗಿಲ್ಲ. ಅದನ್ನು ಪ್ರತಿಪಾದನೆ ಮಾಡುವುದರಿಂದಲೇ ಪ್ರಾಮಾಣ್ಯವ್ಯುತ್ಪಾದನೆಯು ಸೂತ್ರಕಾರರಿಗೆ ಅಭಿಮತವಾಗಿದೆ-ಯೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ನ್ಯೂನತಾಶಂಕೆಗೆ ಅವಕಾಶವಿರುವುದಿಲ್ಲ. ಈ ಅಭಿಪ್ರಾಯದಿಂದ "ಪ್ರಾಮಾಣ್ಯೇ ಹಿ ಸತಿ" ಇತ್ಯಾದಿ ವಾಕ್ಯವು ಹೊರಟಿದೆ.

ಸೂತ್ರಕಾರರು ಸಮರ್ಥಿಸಿದ ವಿಷಯಾದಿಗಳು ಪ್ರಾಮಾಣ್ಯವಿದ್ದರಷ್ಟೇ ಉಪಯುಕ್ತವಾಗುತ್ತ-ದೆಂಬುದನ್ನು ಅಂಗೀಕರಿಸೋಣ; ಆದರೂ ಕೂಡ ಪ್ರಾಮಾಣ್ಯದ ಸಮರ್ಥನೆಗಾಗಿ ಹೊರಟಿರುವ ಪ್ರಾರಂಭದ ಈ ಭಾಗಕ್ಕೆ ಭಾಷ್ಯತ್ವವು ಹೇಗೆ ಪ್ರಾಪ್ತವಾಗುತ್ತದೆ? ಈ ಆಶಂಕೆಯನ್ನು ಪರಿಹಾರ ಮಾಡುವ ಮೂಲಕ ಭಾಷ್ಯಕಾರರು ಮಾಡಿದ ಪ್ರಾಮಾಣ್ಯದ ಸಮರ್ಥನೆಗೆ ಪ್ರಯೋಜನವನ್ನು ಕೂಡ ಉಪ-ಸಂಹಾರಮಾಡುವ ನೆಪದಿಂದ "ಅತಃ" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

'ನ ಚ ಯಾಥಾರ್ಥ್ಯೇ ಮಾನಮಸ್ತಿ' 'ಯಾಥಾರ್ಥ್ಯವಿಷಯದಲ್ಲಿ ಪ್ರಮಾಣವಿರುವುದಿಲ್ಲ' ಎಂಬ ಆಶಂಕೆಯ ಪರಿಹಾರವೇ "ಬುದ್ಧಿಶುದ್ಧಿ" ಎಂದು ಕರೆಸಿಕೊಳ್ಳುತ್ತದೆ.

ವಿವರಣೆ – 'ಯಥಾವಸ್ಥಿತಜ್ಞೇಯವಿಷಯಕಾರಿತ್ವಂ ಪ್ರಾಮಾಣ್ಯಮ್' ಎಂಬುದು ಪ್ರಾಮಾಣ್ಯದ ಲಕ್ಷಣ. ಈ ಲಕ್ಷಣದಲ್ಲಿ ವಿಷಯವೂ ಕೂಡ ಸೇರಿದೆ. ಪ್ರಾಮಾಣ್ಯವು ಇದ್ದರೆ ವಿಷಯವೂ ಕೂಡ ಇದ್ದೇ ಇರುತ್ತದೆ. ಹೀಗೆ ಪ್ರಾಮಾಣ್ಯದ ಸಮರ್ಥನೆಯಿಂದಲೇ ಆರಂಭಣೀಯತ್ವವು ಸಿದ್ಧವಾಯಿತು. ನಿರ್ವಿಷಯಪ್ರಯುಕ್ತವಾದ ಅನಾರಂಭಣೀಯಶಂಕೆಯು ಪರಿಹಾರವಾಯಿತು. ಹೀಗಿರುವಾಗ ಸೂತ್ರ-ಕಾರರು ವಿಷಯಾದಿಗಳ ಸಮರ್ಥನೆ ಮಾಡಿದ್ದು ವ್ಯರ್ಥವಲ್ಲವೇ? ಮತ್ತು ಆವಶ್ಯಕವಾದ ಪ್ರಾಮಾಣ್ಯದ ವ್ಯುತ್ಪಾದನೆಯನ್ನು ಕೂಡ ಸೂತ್ರಕಾರರು ಏಕೆ ಮಾಡಿರುವುದಿಲ್ಲ?

ಉತ್ತರವನ್ನು ಹೀಗೆ ತಿಳಿಯಬೇಕು. ಪ್ರಾಮಾಣ್ಯವು ಸೂತ್ರದಿಂದ ಆಕ್ಷೇಪಾತ್ ಸಿದ್ಧವಾಗುತ್ತಿರುವು-ದರಿಂದ ಸೂತ್ರಕಾರರಿಗೆ ನ್ಯೂನತಾ ದೋಷವು ಬರುವುದಿಲ್ಲ. ಮತ್ತು ಪ್ರಮಾಣವಾದ ಮಾತ್ರಕ್ಕೆ ವಿಷಯ ಇರಬಾರದು ಎಂದೇನಿಲ್ಲ. ಪ್ರಾಮಾಣ್ಯವಿದ್ದರೂ ಕೂಡ ನಿರ್ವಿಷಯತ್ವಶಂಕೆಯು ಬಂದೇ ಬರುತ್ತದೆ. ಕಾಕದಂತಪರೀಕ್ಷಾಗ್ರಂಥದಲ್ಲಿ ಪ್ರಾಮಾಣ್ಯವಿದೆ. ಆದರೆ ವಿಷಯಾದಿಗಳು ಅದರಲ್ಲಿ ಇರುವುದಿಲ್ಲ.

ಇಲ್ಲಿ 'ಯತ್ಸನ್ನಿಕೃಷ್ಟಕರಣೇನ ಯಜ್ಞಾನಂ ಉತ್ಪದ್ಯತೇ ಸಃ ತಸ್ಯ ವಿಷಯಃ' ಎಂಬ ವಿಷಯ-ಲಕ್ಷಣವನ್ನು ಇಟ್ಟುಕೊಳ್ಳಬಾರದು. ಆರಂಭಣೀಯತ್ವಕ್ಕೆ ಉಪಯುಕ್ತವಾದ ವಿಷಯತ್ವವೇ ಬೇರೆ-ಯಾಗಿದೆ. ಅಂಥ ವಿಷಯತ್ವವು ಕಾಕದಂತಪರೀಕ್ಷಾಗ್ರಂಥದಲ್ಲಿ ಸರ್ವಥಾ ಇರುವುದಿಲ್ಲ. ಅಥವಾ ವಿಷಯವನ್ನು ಬಿಟ್ಟು ಪ್ರಯೋಜನ ಮತ್ತು ಅಧಿಕಾರಿಗಳಿರುವುದಿಲ್ಲ ಎಂಬಂಶವನ್ನು ವಿವಕ್ಷಿಸಬಹುದು. ವಿಷಯವಿದೆ ಎಂದು ಒಪ್ಪಿದರೂ ಕೂಡ ಯಾವುದೇ ಪ್ರಯೋಜನವೂ ಇಲ್ಲದ ಕಾರಣ ಅನಾರಂಭಣೀಯತ್ವವಿರುವುದು ಸಿದ್ಧವಾಗಿದೆ. ಕಾಕದಂತಪರೀಕ್ಷಾಗ್ರಂಥದಲ್ಲಿ ವಿಷಯ ಇಲ್ಲ ಎಂಬುದನ್ನು ಹೀಗೆ ತಿಳಿಯಬೇಕು. ಯಾವುದು ಸಾಮಾನ್ಯತಃ ಜ್ಞಾತವಾಗಿರುತ್ತದೋ ವಿಶೇಷತಃ ಅಜ್ಞಾತವಾಗಿದ್ದು ವಿಶೇಷಜಿಜ್ಞಾಸೆಗೆ ವಿಷಯವಾಗಿರುತ್ತದೋ ಮತ್ತು ಪ್ರಮಾಣಾಂತರದಿಂದ ತಿಳಿದಿರುವುದಿಲ್ಲವೋ ಅದೇ ಶಾಸ್ತ್ರಕ್ಕೆ ವಿಷಯವಾಗುತ್ತದೆ. ಕಾಕದಂತಪರೀಕ್ಷಾಗ್ರಂಥದಲ್ಲಿ ಸಾಮಾನ್ಯಜ್ಞಾನವೂ ಇಲ್ಲ; ಪ್ರಯೋಜನಾದಿ ಉದ್ದೇಶದಿಂದ ವಿಶೇಷಾಕಾಂಕ್ಷೆಯೂ ಕೂಡ ಇರುವುದಿಲ್ಲ ಆದ್ದರಿಂದ ಇದು ವಿಷಯ ಎಂದು ಕರೆಸಿ-ಕೊಳ್ಳುವುದಿಲ್ಲ. ಹೀಗೆ ನಿರ್ವಿಷಯತ್ವವನ್ನು ಕೂಡ ಕಾಕದಂತಪರೀಕ್ಷಾಗ್ರಂಥದಲ್ಲಿ ತಿಳಿಯಬೇಕು.

ಬ್ರಹ್ಮಮೀಮಾಂಸಾಗ್ರಂಥವು ಪ್ರಮಾಣವೆಂದು ಸಿದ್ಧವಾದ ಮೇಲೆ ಕಾಕದಂತಪರೀಕ್ಷಾಗ್ರಂಥದಂತೆ ಇದನ್ನು ತಿಳಿಯಬೇಕು; ಅಥವಾ ಬೇರೆ ಗ್ರಂಥದಂತೆ ತಿಳಿಯಬೇಕೋ ಎಂಬ ಶಂಕೆಯು ಬರುತ್ತದೆ. ಆದರೆ ಅಪ್ರಮಾಣವೆಂದು ಸಿದ್ಧವಾದ ಮೇಲೆ ಇದರಿಂದಲೇ ಅನಾರಂಭಣೀಯತ್ವವೂ ಕೂಡ ಸಿದ್ಧವಾಗುತ್ತದೆ. ಇದರ ಅನಂತರ ಕಾಕದಂತಪರೀಕ್ಷಾಗ್ರಂಥದ ಸಾಲಕ್ಷಣ್ಯವಿದೆಯೋ ಇಲ್ಲವೋ ಎಂಬ ಸಂಶಯ ಬರಲು ಪ್ರಸಂಗವೇ ಇರುವುದಿಲ್ಲ. ಆದರೆ ಯಾವಾಗ ಸೂತ್ರಕಾರರು ವಿಷಯಾದಿಗಳನ್ನು ಸಮರ್ಥಿಸುತ್ತಿದ್ದಾರೋ ಅದರಿಂದಲೇ ಮೂಲಭೂತವಾದ ಪ್ರಾಮಾಣ್ಯವೂ ಕೂಡ ಅವರಿಗೆ ಅಭಿಪ್ರೇತವಾಗಿದೆಯೆಂದು ಸಿದ್ಧವಾಗುತ್ತದೆ.

ಸೂತ್ರಕಾರರು ಹೇಳಿದ ವಿಷಯಾದಿಗಳ ಸಮರ್ಥನೆಗೆ ಪ್ರಾಮಾಣ್ಯವು ಉಪಯುಕ್ತವಾಗಿದೆ-ಯೆಂಬುದನ್ನು ಒಪ್ಪೋಣ; ಆದರೆ ಆರಂಭದ ಭಾಷ್ಯದಲ್ಲಿ ಬ್ರಹ್ಮಸೂತ್ರಪ್ರಾಮಾಣ್ಯಸಮರ್ಥನೆಯು ಉತ್ಸೂತ್ರಿತವಾಗಿದೆಯಲ್ಲವೇ? ಎಂಬ ಆಶಂಕೆಗೆ ಅರ್ಥಾಕ್ಷಿಪ್ತವಾಗಿರುವುದರಿಂದ ಉತ್ಸೂತ್ರಿತವಲ್ಲ ಎಂಬ ಸಮಾಧಾನವನ್ನು ತಿಳಿಯಬೇಕು.

ಯಾದುಪತ್ಯ – ತದೇವಂ ಶ್ರುತ್ಯನುಮಾಭ್ಯಾಮಿತಿ ॥ ಶ್ರುತಿಃ 'ಪರವಿದ್ಯಾಖ್ಯಮ್' ಇತ್ಯತ್ರೋಕ್ತಾ।

'ತದೇವಂ ಶ್ರುತ್ಯನುಮಾನಾಭ್ಯಾಮ್' – ಶ್ರುತಿ ಎಂದರೆ 'ಪರವಿದ್ಯಾಖ್ಯಮ್' ಎಂಬ ಶ್ರುತಿ ಎಂದರ್ಥ.

## ಪ್ರಾಮಾಣ್ಯವ್ಯುತ್ಪಾದನೆಯು ಗತಾರ್ಥವಲ್ಲ

ಯಾದುಪತ್ಯ –ವಿಷಯಾದಿಸಂಪಾದನೇನೈವ ತದಿತಿ ॥ ಆರಂಭಣೀಯತ್ವಮಿತ್ಯರ್ಥಃ । 'ಪ್ರಥಮಸೂತ್ರೇ ಸಮರ್ಥ್ಯಯತೇ' ಇತಿ ಪೂರ್ವೇಣಾನ್ವಯಃ । ನ ಪ್ರಾಮಾಣ್ಯಸಂಪಾದನೇನ ಇತ್ಯರ್ಥಃ। ಅತೋ ನಾಸ್ಯ ಪ್ರಾಮಾಣ್ಯವ್ಯುತ್ಪಾದನಸ್ಯ ಪ್ರಥಮಸೂತ್ರೇಣ ಗತಾರ್ಥತೇತಿ ಭಾವಃ॥

'ವಿಷಯಾದಿಸಂಪಾದನೇನೈವ ತತ್' – ಆರಂಭಣೀಯತ್ವವನ್ನು ಎಂದರ್ಥ. 'ಪ್ರಥಮಸೂತ್ರೇ ಸಮರ್ಥ್ಯಯತೇ' ಎಂಬುದಾಗಿ ಹಿಂದಿನ ವಾಕ್ಯದ ಜೊತೆ ಅನ್ವಯವನ್ನು ತಿಳಿಯಬೇಕು. ಪ್ರಾಮಾಣ್ಯ-ಸಂಪಾದನೆಮೂಲಕವಲ್ಲ ಎಂದರ್ಥ. ಆದ್ದರಿಂದ ಗ್ರಂಥಕ್ಕೆ ಪ್ರಾಮಾಣ್ಯಸಮರ್ಥನೆಯು ಪ್ರಥಮ-ಸೂತ್ರದಿಂದ ಗತಾರ್ಥವಾಗುವುದಿಲ್ಲ ಎಂದರ್ಥ.

ಆರಂಭಣೀಯತ್ವವನ್ನು ಪ್ರಾಮಾಣ್ಯವನ್ನು ಸಮರ್ಥನೆ ಮಾಡುವುದರ ಮೂಲಕವು ಕೂಡಾ ಹೇಳಬಹುದು. ವಿಷಯಾದಿಗಳ ಸಂಪಾದನೆ ಮೂಲಕವು ಕೂಡ ಹೇಳಬಹುದು. ಸೂತ್ರಕಾರರು ಪ್ರಥಮಸೂತ್ರದಲ್ಲಿ ವಿಷಯಾದಿಸಮರ್ಥನೆ ಮೂಲಕ ಆರಂಭಣೀಯತ್ವವನ್ನು ಉಪಪಾದನೆ ಮಾಡು-ತ್ತಾರೆ. ಪ್ರಾಮಾಣ್ಯಸಮರ್ಥನೆ ಮೂಲಕ ಆರಂಭಣೀಯತ್ವವನ್ನು ಉಪಪಾದನೆ ಮಾಡುವುದಿಲ್ಲ. ಆದ್ದರಿಂದ ಪ್ರಥಮಸೂತ್ರದ ಆರಂಭಣೀಯತ್ವಸಮರ್ಥನೆಯಿಂದ ಭಾಷ್ಯದಲ್ಲಿ ಮಾಡಿದ ಆರಂಭಣೀಯತ್ವಸಮರ್ಥನೆಗೆ ಗತಾರ್ಥತ್ವದೋಷವು ಬರುವುದಿಲ್ಲ.

## ಅಪ್ರಾಮಾಣ್ಯಾಶಂಕೆಯ ಪರಿಹಾರವು ಸಂಗತವಾಗಿದೆ

ಯಾದುಪತ್ಯ – ನನು ವಿಷಯಾದಿಸಂಪಾದನೇನೈವ ಆರಂಭಣೀಯತ್ವಸಿದ್ಧಿಸಂಭವೇ ಪ್ರಾಮಾಣ್ಯವ್ಯುತ್ಪಾದನಂ ವ್ಯರ್ಥಮಿತ್ಯಾಶಂಕ್ಯ ನಿರಾಕರೋತಿ – ನ ಚೇತಿ ॥ ತಾವತಾ ತಾವತೈವಾ-ರಂಭಣೀಯತ್ವಂ ಸಮರ್ಥಯಿತುಂ ಶಕ್ಯಮಿತಿ ಶೇಷಃ । ಕುತೋ ನೇತ್ಯತ ಆಹ – ಪ್ರಾಮಾಣ್ಯೇ ಹೀತಿ ॥ ಅನ್ಯಥಾಽಪ್ರಾಮಾಣ್ಯೇನೈವಾನಾರಂಭಣೀಯತ್ವಶಂಕಾಯಾಂ ಪ್ರಯೋಜನಾದಿವ್ಯುತ್ಪಾದನ-ಸ್ಯಾವಸರ ಏವ ನೇತಿ ಭಾವಃ।

ವಿಷಯಾದಿಗಳ ಸಮರ್ಥನೆಯಿಂದಲೇ ಆರಂಭಣೀಯತ್ವವು ಸಿದ್ಧವಾಗುತ್ತಿರುವಾಗ ಭಾಷ್ಯದ ಪ್ರಾರಂಭದಲ್ಲಿ ಪ್ರಾಮಾಣ್ಯವನ್ನು ವ್ಯುತ್ಪಾದನೆ ಮಾಡಿದ್ದು ವ್ಯರ್ಥವಲ್ಲವೇ? ಈ ಆಶಂಕೆಯನ್ನು "ನಚ" ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ಕೇವಲ ವಿಷಯಾದಿಗಳ ಸಂಪಾದನೆಯಿಂದಲೇ ಆರಂಭಣೀಯತ್ವವನ್ನು ಸಮರ್ಥನೆ ಮಾಡಲು ಸಾಧ್ಯವಿದೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳ-ಬೇಕು.

ವಿಷಯಾದಿಸಂಪಾದನೆಯಿಂದಷ್ಟೇ ಆರಂಭಣೀಯತ್ವದ ಸಮರ್ಥನೆಯು ಏಕೆ ಕೂಡುವುದಿಲ್ಲ ಎಂಬ ಪ್ರಶ್ನೆಗೆ "ಪ್ರಾಮಾಣ್ಯೇ:" ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಅಪ್ರಾಮಾಣ್ಯಶಂಕೆಯು ಪ್ರಾಪ್ತವಾದರೆ ಅನಾರಂಭಣೀಯತ್ವಶಂಕೆಯು ಬರುತ್ತದೆ. ಆಗ ಪ್ರಯೋಜನಾದಿಗಳ ವ್ಯುತ್ಪಾದನೆಗೆ ಅವಸರಸಂಗತಿಯೇ ಇರುವುದಿಲ್ಲ ಎಂದಭಿಪ್ರಾಯ.

ವಿವರಣೆ – 'ಪ್ರತಿಬಂಧಕಜಿಜ್ಞಾಸಾವಿಚ್ಛೇದಃ ಅವಸರಸಂಗತಿಃ' ಪ್ರತಿಬಂಧಕವಾದ ಜಿಜ್ಞಾಸೆಯನ್ನು ಪರಿಹಾರ ಮಾಡಿದರೆ ಮಾತ್ರ ಅವಸರಸಂಗತಿಯು ಪ್ರಾಪ್ತವಾಗುತ್ತದೆ. ಪ್ರಕೃತ ಅಪ್ರಾಮಾಣ್ಯಶಂಕೆಯೆಂಬ ಪ್ರತಿಬಂಧಕಸಂದೇಹವನ್ನು ಪರಿಹಾರ ಮಾಡದಿದ್ದರೆ ವಿಷಯಾದಿಗಳಿವೆಯೋ ಇಲ್ಲವೋ ಎಂಬ ಸಂದೇಹವು ಹುಟ್ಟುವುದೇ ಇಲ್ಲ. ಹೀಗೆ ಅವಸರಸಂಗತಿಯಿರುವ ಕಾರಣ ಭಾಷ್ಯದ ಪ್ರಾರಂಭದಲ್ಲಿ ಅಪ್ರಾಮಾಣ್ಯಶಂಕೆಯನ್ನು ಪರಿಹರಿಸಿದ್ದು ಸಂಗತವಾಗಿದೆ.

## ಪ್ರಾಮಾಣ್ಯಸಮರ್ಥನೆಯು ಕೂಡ ಸೂತ್ರದಿಂದಲೇ ಅರ್ಥಾತ್ ಸಿದ್ಧವಾಗಿದೆ

ಯಾದುಪತ್ಯ – ನನು ಇದಂ ಪ್ರಾಮಾಣ್ಯಸಮರ್ಥನಂ ಸೂತ್ರೋಕ್ತಂ ನ ಚೇತ್ ತರ್ಹಿ 'ಗುರುರ್ಗುರೂಣಾಮ್' ಇತ್ಯಾದೇರ್ಭಾಷ್ಯತ್ವವ್ಯಾಘಾತಃ । ತದುಕ್ತಂ ಚೇತ್ ಭಾಷ್ಯಕಾರೀಯಂ ತದ್ ವ್ಯುತ್ಪಾದನಂ ವ್ಯರ್ಥಮಸಂಗತಂ ಸ್ಯಾದಿತ್ಯಾಶಂಕಾಂ ಪರಿಹರನ್ನುಪಸಂಹರತಿ – ಅತ ಇತಿ ॥ ಪ್ರಾಮಾಣ್ಯಸಮರ್ಥನಾಭಾವೇ ವಿಷಯಾದಿವ್ಯುತ್ಪಾದನಸ್ಯಾವಸರ ಏವ ನೇತಿ ವಿಷಯಾದಿ-ವ್ಯುತ್ಪಾದಕಸೂತ್ರೇಣ ತದಾಕ್ಷಿಪ್ತಮಿತ್ಯರ್ಥಃ । ಬುದ್ಧಿಶುದ್ಧ್ಯ ಇತಿ ॥ ವಿಷಯಾದಿವ್ಯುತ್ಪಾದನಪ್ರತಿ-ಬಂಧಕಾಪ್ರಾಮಾಣ್ಯಶಂಕಾನಿರಾಸಾಯ ಇತ್ಯರ್ಥಃ ।

ಸೂತ್ರದಲ್ಲಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡದೇ ಇದ್ದರೆ 'ಗುರುರ್ಗುರೂಣಾಮ್' ಇತ್ಯಾದಿ ಶ್ಲೋಕಗಳಿಗೆ ಭಾಷ್ಯತ್ವವೇ ವ್ಯಾಹತವಾಗುತ್ತದೆ. ಒಂದು ವೇಳೆ ಪ್ರಾಮಾಣ್ಯವನ್ನು ಸೂತ್ರಕಾರರೇ

ಸಮರ್ಥನೆ ಮಾಡಿದ್ದರೆ ಪುನಃ ಭಾಷ್ಯಕಾರರು ಅದನ್ನು ಸಮರ್ಥಿಸುವುದು ಅಸಂಗತವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಮೂಲಕ "ಅತಃ" ಎಂಬುದಾಗಿ ಉಪಸಂಹಾರ ಮಾಡುತ್ತಿದ್ದಾರೆ. ಅತಃ ಎಂದರೆ ಪ್ರಾಮಾಣ್ಯವನ್ನು ಸಮರ್ಥನೆ ಮಾಡದಿದ್ದರೆ ವಿಷಯಾದಿಗಳ ವ್ಯುತ್ಪಾದನೆಗೆ ಅವಸರ-ಸಂಗತಿಯೇ ಇರುವುದಿಲ್ಲ. ಆದ್ದರಿಂದ ವಿಷಯಾದಿಗಳನ್ನು ವ್ಯುತ್ಪಾದನೆ ಮಾಡುವ ಸೂತ್ರದಿಂದ ಪ್ರಾಮಾಣ್ಯಸಮರ್ಥನೆಯು ಆಕ್ಷೇಪಾತ್ ಲಭ್ಯವಾಗಿದೆ ಎಂದರ್ಥ.

"ಬುದ್ಧಿಶುದ್ಧಯೇ" – ವಿಷಯಾದಿಗಳ ವ್ಯುತ್ಪಾದನೆಗೆ ಪ್ರತಿಬಂಧಕವಾದ ಅಪ್ರಾಮಾಣ್ಯಾ-ಶಂಕೆಯ ನಿರಾಕರಣೆಗೋಸ್ಕರ ಎಂದರ್ಥ.

## ಸುಧಾಪರಿಮಳಸಾರ

ಇದುವರೆಗಿನ ಪ್ರತಿಪಾದನೆಯಿಂದ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ಶ್ರುತಿಯಿಂದಲೂ ಪ್ರಾಮಾಣ್ಯವನ್ನು ಸಾಧಿಸುವ ಆಪ್ತವಾಕ್ಯತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವ ಎಂಬ ಮೂರು ಹೇತುಗಳಿಂದಲೂ ಈ ಬ್ರಹ್ಮ-ಸೂತ್ರವೇ ಅತ್ಯುತ್ತಮ ಪ್ರಮಾಣ. ಇದರಷ್ಟು ಹಿರಿಯ ಪ್ರಮಾಣ ಮತ್ತೊಂದು ಇಲ್ಲ ಎಂದು ಉಪಸಂಹಾರ ಮಾಡುತ್ತಿದ್ದಾರೆ – "ಅತಃ...." ಎಂಬ ಶ್ಲೋಕಭಾಗದಿಂದ.

"ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ।" ಅತಃ = ಮೂರು ಮಹಾಪ್ರಮಾಣಗಳಿಂದ ಪ್ರಾಮಾಣ್ಯವು ಸಿದ್ಧವಾದುದರಿಂದ ಹಾಗೂ ಶ್ರುತಿಯಿಂದ ಏತಾದೃಶಂ = ಈ ಬ್ರಹ್ಮಸೂತ್ರಕ್ಕೆ ಸದೃಶವಾದದ್ದು, ಕಿಂಚಿತ್ = ಯಾವುದೂ, ಪ್ರಮಾಣತಮಮ್ = ಅತಿಶಯವಾದ ಪ್ರಮಾಣವು, ನ ಇಷ್ಯತೇ = ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿಲ್ಲ.

ಬ್ರಹ್ಮಸೂತ್ರದಂತಹ ಪ್ರಮಾಣತಮವಾದ ಗ್ರಂಥ ಬೇರೊಂದು ಇಲ್ಲ. ಆದುದರಿಂದಲೇ ಉಳಿದ ಗ್ರಂಥವನ್ನು ಬಿಟ್ಟು ಇದರ ವ್ಯಾಖ್ಯಾನವನ್ನೇ ಮಾಡುತ್ತಿರುವುದು ಯೋಗ್ಯವಾಗಿದೆ ಎಂದು ಅಭಿಪ್ರಾಯ. 'ಭಾರತಂ ಸರ್ವಶಾಸ್ತ್ರೇಷು' ಎಂಬ ಪ್ರಮಾಣದಲ್ಲಿ ಭಾರತವೇ ಸರ್ವಶಾಸ್ತ್ರಗಳಲ್ಲಿ ಉತ್ತಮವಾದದ್ದು ಎಂದು ಹೇಳಿರುವಾಗ ಬ್ರಹ್ಮಸೂತ್ರವೇ ಅತಿ ಉತ್ತಮ ಎಂದದ್ದು ಹೇಗೆ?

ಹೌದು, ನಿರ್ಣೇಯಶಾಸ್ತ್ರಗಳಲ್ಲಿ ಭಾರತವೇ ಅತ್ಯುತ್ತಮ. ನಿರ್ಣಾಯಕಶಾಸ್ತ್ರಗಳಲ್ಲಿ ಬ್ರಹ್ಮಸೂತ್ರವೇ ಅತ್ಯು-ತ್ತಮ. ಆದುದರಿಂದ ಯಾವ ವಿರೋಧವೂ ಇಲ್ಲ.

ಈ ಬ್ರಹ್ಮಸೂತ್ರವು ಆರಂಭಣೀಯ (ಪ್ರೇಕ್ಷಾವಂತರಿಂದ ಉಪಾದೇಯ) ಎಂಬುದನ್ನು ಸಮರ್ಥಿಸಲು ಇದುವರೆಗೆ ಅನುತ್ತಮಪ್ರಾಮಾಣ್ಯವನ್ನು ಸಾಧಿಸಿದಿರಿ. ಆದರೆ "ಅಥಾತೋ ಬ್ರಹ್ಮಜಿಜ್ಞಾಸಾ" ಎಂದು ಮೊದಲ

ಸೂತ್ರದಲ್ಲಿಯೇ "ಅತಃ"ಎಂಬ ಪದದಿಂದಲೇ ಬ್ರಹ್ಮಸೂತ್ರದ ಆರಂಭಣೀಯತೆಯನ್ನು ಸೂತ್ರಕಾರರೇ ಸಮರ್ಥಿಸಿರುವರು. ಅದರ ವ್ಯಾಖ್ಯಾನದಿಂದಲೇ ಎಲ್ಲವೂ ಸಿದ್ಧವಾಗುವಾಗ ಇಲ್ಲೇಕೆ ಆರಂಭಣೀಯತೆಯ ಸಮರ್ಥನೆಗಾಗಿ ಪ್ರಾಮಾಣ್ಯದ ಪ್ರತಿಪಾದನೆ? ಪ್ರಥಮಸೂತ್ರದಲ್ಲಿ ಆರಂಭಣೀಯತೆಯನ್ನು ಹೇಳಿರುವುದರಿಂದ ಮುಂದಿನ ಸೂತ್ರಗಳಲ್ಲಿ ಪ್ರವೃತ್ತಿ ಆಗಬಹುದಾದರೂ ಮೊದಲ ಸೂತ್ರದಲ್ಲಿಯೇ ಪ್ರವೃತ್ತಿ ಹೇಗೆ? ಆದಕ್ಕಾಗಿ (ಭಾಷ್ಯದಲ್ಲಿ)ಸಮರ್ಥಿಸಲಾಗಿದೆ ಎಂದು ಹೇಳುವುದಾದರೆ ಪ್ರಥಮಭಾಷ್ಯದಲ್ಲಿಯೇ ಹೇಗೆ ಪ್ರವೃತ್ತಿ, ಎಂಬೀ ಆಕ್ಷೇಪ ಇದ್ದೇ ಇದೆ. ಆದರಲ್ಲಿ ಆರಂಭಣೀಯತೆಯ ಸಂದೇಹದಿಂದಲೇ ಮೊದಲು ಪ್ರವೃತ್ತಿಯಾಗುವುದು ಬಳಿಕ ಪ್ರಮಾಣಗಳಿಂದ ನಿರ್ಣಯವಾಗುವುದು ಎನ್ನುವುದಾದರೆ ಪ್ರಥಮಸೂತ್ರದಲ್ಲಿಯೂ ಹೀಗೆಯೇ ಸಂದೇಹದಿಂದ ಪ್ರವೃತ್ತಿಯಾಗಿ ಮುಂದೆ ಸೂತ್ರಕಾರರ ಉಪಪಾದನೆಯಿಂದ ನಿರ್ಣಯವಾಗುತ್ತಿರಲು, ಅದರ ಸಮರ್ಥನೆಗಾಗಿ ಇಲ್ಲಿ ಪ್ರಾಮಾಣ್ಯದ ಪ್ರತಿಪಾದನೆ ವ್ಯರ್ಥ ಎಂಬ ಆಕ್ಷೇಪಕ್ಕೆ ಉತ್ತರ ಸಿಕ್ಕಂತಾಗಿಲ್ಲ

ವಿಷಯ, ಪ್ರಯೋಜನ, ಅಧಿಕಾರಿ ಸಂಬಂಧಸಂದೇಹನಿಮಿತ್ತವಾದ ಆರಂಭಣೀಯತ್ವಸಂದೇಹವನ್ನು ಸೂತ್ರದಲ್ಲಿ ಪರಿಹರಿಸಲಾಗಿದೆ. ವಿಷಯಪ್ರಯೋಜನಾದಿಗಳನ್ನು ಸಮರ್ಥಿಸಿದ ಮಾತ್ರಕ್ಕೆ ಆರಂಭಣೀಯತ್ವ ಸಿದ್ಧವಾಗುವುದಿಲ್ಲ. ಬೌದ್ಧಾದಿಗ್ರಂಥಗಳಲ್ಲೂ ಆ ಗ್ರಂಥಕಾರರು ವಿಷಯಾದಿಗಳನ್ನು ಸಮರ್ಥನೆ ಮಾಡುತ್ತಾರೆ. ಆದರೆ ಅದು ಆರಂಭಣೀಯವೇ? ವಿಷಯಾದಿಗಳನ್ನು ಸಮರ್ಥನೆ ಮಾಡಿದ ಮೇಲೂ ಆರಂಭಣೀಯತ್ವವನ್ನು ಸಮರ್ಥಿಸಲಾಗದಿದ್ದರ ವಿಷಯಾದಿಗಳನ್ನು ಸೂತ್ರದಲ್ಲಿ ತಿಳಿಸಿದ್ದಾದರೂ ಏಕೆ? ಎಂಬೀ ಆಕ್ಷೇಪ ಸರಿಯಲ್ಲ. ಮೊದಲು ಪ್ರಾಮಾಣ್ಯಸಿದ್ಧವಾಗಬೇಕು. ಅದಾದ ಮೇಲೆ ಕಾಗೆಯ ಹಲ್ಲನ್ನು ವಿಮರ್ಶಿಸಲು ಹೊರಟ ಗ್ರಂಥದಂತೆ ಈ ಗ್ರಂಥ ಅನಾರಂಭಣೀಯವಲ್ಲ; ಅಲ್ಲಿ ವಿಷಯಾದಿಗಳು ಇಲ್ಲದಿರುವುದರಿಂದ ಅದು ಅನಾರಂಭಣೀಯ, ಇಲ್ಲಿ ವಿಷಯಾದಿಗಳಿರುವುದರಿಂದ ಇದು ಆರಂಭಣೀಯವೇ ಎಂದು ಉಪಪಾದನೆ ಮಾಡುವುದಕ್ಕಾಗಿ ಸೂತ್ರಕಾರರು ಅತಃ ಶಬ್ದದಿಂದ ವಿಷಯಾದಿಗಳನ್ನು ಉಪಪಾದನೆ ಮಾಡಿರುವುದು ಉಪಯೋಗಕ್ಕೆ ಬರುತ್ತದೆ. ಆದುದರಿಂದ ವಿಷಯಾದಿಗಳ ಪ್ರತಿಪಾದನೆ ಸಾರ್ಥಕ. ಹೀಗೆ ವಿಷಯಾದಿಗಳ ಪ್ರತಿಪಾದನೆಯಿಂದ ಸೂತ್ರದಿಂದ ಅರ್ಥಾತ್ ಸಿದ್ಧವಾದ ಪ್ರಾಮಾಣ್ಯವೂ ಸೂತ್ರದ ಅರ್ಥವೇ. ಅದರಿಂದಲೇ ಶಿಷ್ಯರಿಗೆ ಪ್ರಾಮಾಣ್ಯಸಂಶಯನಿವೃತ್ತಿಗಾಗಿ ಭಾಷ್ಯಕಾರರು ಸೂತ್ರದಿಂದ ಆಕ್ಷೇಪಸಿದ್ಧವಾದ ಪ್ರಾಮಾಣ್ಯವನ್ನೇ ಹೇಳಿರುವರು.

## ನೆನೆಪಿಡಿ

* 'ಪರಮಾಖ್ಯವಿದ್ಯಾ' ಎಂಬ ಶ್ಲೋಕದಿಂದ ಪ್ರಾರಂಭಮಾಡಿ 'ಏಕಧಾऽನ್ಯತ್ರ ಸರ್ವಶಃ' ಎಂಬುದರ ತನಕ ಸಮರ್ಥಿಸಿದ್ದರ ಉಪಸಂಹಾರವನ್ನು ಅತಃ ನೈತಾದೃಶಂ ಎಂಬ ವಾಕ್ಯದಿಂದ ಮಾಡುತ್ತಿದ್ದಾರೆ.

* 'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ' ಎಂಬಲ್ಲಿ ಇಷ್ಯತೇ ಎಂಬ ಕ್ರಿಯಾಪದದ ಜೊತೆ ಮಯಾ ಎಂಬುದನ್ನು ವಿವಕ್ಷಿಸಿದರೆ ಅನುಪಯುಕ್ತವಾಗುತ್ತದೆ. 'ಸರ್ವೈಃ' ಎಂಬುದು ಬಾಧಿತವಾಗಿದೆ. ಆದ್ದರಿಂದ 'ಪ್ರಾಮಾಣಿಕೈಃ' ಎಂಬುದನ್ನು ಶೇಷಪೂರಣ ಮಾಡ-ಬೇಕು.

* ನಿರ್ಣೇಯಗ್ರಂಥಗಳಲ್ಲಿ ಮಹಾಭಾರತವು ಶ್ರೇಷ್ಠವಾಗಿದೆ. ನಿರ್ಣಾಯಕ ಗ್ರಂಥಗಳಲ್ಲಿ ಬ್ರಹ್ಮಸೂತ್ರವು ಶ್ರೇಷ್ಠವಾಗಿದೆ.

* ಪ್ರಥಮಸೂತ್ರದ ವ್ಯಾಖ್ಯಾನದಿಂದಲೇ ಶಾಸ್ತ್ರಾರಂಭಣೀಯತ್ವವು ಸಿದ್ಧವಾಗುವಾಗ ಪ್ರಥಮಭಾಷ್ಯದಿಂದ ಆರಂಭಣೀಯತ್ವವನ್ನು ಸಮರ್ಥನೆ ಮಾಡಿದ್ದೇಕೆ?

* ಭಾಷ್ಯದ ಪ್ರಾಮಾಣ್ಯವು ಸೂತ್ರಪ್ರಾಮಾಣ್ಯದ ಅಧೀನವಾಗಿರುವಾಗ ಭಾಷ್ಯಾಧ್ಯ-ಯನದಲ್ಲಿ ಪ್ರವೃತ್ತಿಮಾಡಲು ಹೇಗೆ ಸಾಧ್ಯವಾಗುತ್ತದೆ?

* ಕಾಕದಂತಪರೀಕ್ಷಾಗ್ರಂಥದಲ್ಲಿ ಪ್ರಾಮಾಣ್ಯವಿದೆ ಆದರೆ ಪ್ರಯೋಜನಾದಿಗಳು ಇರು-ವುದಿಲ್ಲ. ಇದರಂತೆ ಬ್ರಹ್ಮಸೂತ್ರವೂ ಕೂಡ ಏಕಾಗಬಾರದು?

* ಸೂತ್ರಕಾರರಿಗೆ ವಿಷಯಾದಿಗಳನ್ನು ಸಮರ್ಥನೆ ಮಾಡುವ ಮೂಲಕ ಪ್ರಾಮಾಣ್ಯದ ಸಮರ್ಥನೆಯೂ ಕೂಡ ಉದ್ದೇಶವೇ ಆಗಿದೆ. ಪ್ರಥಮಸೂತ್ರದಿಂದ ಅರ್ಥಾತ್ ಆಕ್ಷಿಪ್ತವಾ-ಗಿರುವ ಬ್ರಹ್ಮಸೂತ್ರಪ್ರಾಮಾಣ್ಯವನ್ನು ಪ್ರಥಮಭಾಷ್ಯವು ಸಮರ್ಥಿಸುತ್ತಿದೆ. ಆದ್ದರಿಂದ ಇದು ಉತ್ಸೂತ್ರಿತವಲ್ಲ.

* * * *

## ಅನುವ್ಯಾಖ್ಯಾನ

**ಸ್ವಯಂ ಕೃತಾऽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ।**

ನಾವು ಸ್ವತಃ ಬ್ರಹ್ಮಸೂತ್ರಕ್ಕೆ ಭಾಷ್ಯರೂಪವಾದ ವ್ಯಾಖ್ಯಾನವನ್ನು ಮಾಡಿದ್ದೇವೆ. ಆದರೂ ಕೂಡ ಆ ಬ್ರಹ್ಮಸೂತ್ರದ ಅರ್ಥವನ್ನು ಮತ್ತಷ್ಟು ಸ್ಪಷ್ಟಮಾಡಬೇಕೆಂಬ ಉದ್ದೇಶದಿಂದ ಪುನಃ ವ್ಯಾಖ್ಯಾನವನ್ನು ಮಾಡುತ್ತಿದ್ದೇವೆ.

**ಶ್ರೀಮನ್ನ್ಯಾಯಸುಧಾ– 'ತಥಾऽಪಿ ನೇದಂ ವ್ಯಾಖ್ಯಾತವ್ಯಂ ವ್ಯಾಖ್ಯಾತತ್ವಾತ್' ಇತ್ಯತ್ರ 'ಅನ್ವಪಿ ಚ' ಇತಿ ಯತ್ ಪ್ರಯೋಜನಾಂತರಮಸ್ತೀತಿ ಸೂಚಿತಂ ತದ್ವಿವ-ರಣಾರ್ಥಮಾಹ – ಸ್ವಯಮಿತಿ ॥**

'ಆದರೂ ಕೂಡ ಬ್ರಹ್ಮಸೂತ್ರವನ್ನು ವ್ಯಾಖ್ಯಾನ ಮಾಡುವುದು ಅನುಪಯುಕ್ತ. ಏಕೆಂದರೆ, ಭಾಷ್ಯರೂಪದಿಂದ ತಾವು ವ್ಯಾಖ್ಯಾನ ಮಾಡಿದ್ದಾಗಿದೆ' ಈ ಆಕ್ಷೇಪವನ್ನು ಪರಿಹಾರ ಮಾಡಲು 'ಅನ್ವಪಿ ಚ' ಎಂಬ ಎರಡನೆಯ ಪದ್ಯದಿಂದ ಯಾವ ಪ್ರಯೋ-ಜನವಿದೆ ಎಂಬುದಾಗಿ ಸೂಚನೆ ಮಾಡಲಾಯಿತೋ ಅದರ ವಿವರಣೆಗಾಗಿ ''ಸ್ವಯಂ ಕೃತಾऽಪಿ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**ಶ್ರೀಮನ್ನ್ಯಾಯಸುಧಾ – ಯದ್ಯಪಿ ತೇಷಾಂ ಬ್ರಹ್ಮಸೂತ್ರಾಣಾಂ ವ್ಯಾಖ್ಯಾ ಸ್ವಯಂ ಮಯ್ಯೈವ ಭಾಷ್ಯೇ ಕೃತಾ, ತಥಾऽಪಿ ಪುನರತ್ರ ಸ್ಪಷ್ಟತ್ವೈವ ಅರ್ಥಃ ಪ್ರಯೋಜನಂ ಯಸ್ಯ ಸ್ಪಷ್ಟಾರ್ಥತಃ ತಸ್ಮೈ ಸ್ಪಷ್ಟತಾರ್ಥತಃ । ಭಾಷ್ಯೇ ಅಸ್ಪಷ್ಟೀಕೃತಮರ್ಥಂ ಸ್ಪಷ್ಟೀಕರ್ತುಂ ಕ್ರಿಯತೇ ॥**

ವಾಸ್ತವಿಕವಾಗಿ ತದ್ವ್ಯಾಖ್ಯಾ = ಆ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನವು, ಸ್ವಯಂ = ನನ್ನಿಂದಲೇ, ಬ್ರಹ್ಮಸೂತ್ರಭಾಷ್ಯದಲ್ಲಿ ಮಾಡಲ್ಪಟ್ಟಿದೆ. ಅಪಿ = ಆದರೂ ಕೂಡ, ಪುನಃ = ಇಲ್ಲಿ, ಸ್ಪಷ್ಟಾರ್ಥತಃ = ಸೂತ್ರಾರ್ಥವು ಮತ್ತಷ್ಟು ಸ್ಪಷ್ಟವಾಗುತ್ತದೆಂಬ ಪ್ರಯೋಜನದಿಂದ, (ಸ್ಪಷ್ಟತ್ವೈವ ಅರ್ಥಃ = ಸ್ಪಷ್ಟತಾರ್ಥಃ, ತಸ್ಮೈ ಸ್ಪಷ್ಟತಾರ್ಥತಃ; ಸ್ಪಷ್ಟತ್ವವೇ ಪ್ರಯೋಜನವಾಗಿ ಉಳ್ಳದ್ದು ಸ್ಪಷ್ಟಾರ್ಥ ಎನಿಸುತ್ತದೆ; ಈ ಪ್ರಯೋಜನಕ್ಕೋಸ್ಕರ ಎಂದರ್ಥ). ಭಾಷ್ಯದಲ್ಲಿ ಯಾವ ಅರ್ಥವು ಅಸ್ಪಷ್ಟವಾಗಿದೆಯೋ ಅದರ ಸ್ಪಷ್ಟೀಕರಣಕ್ಕಾಗಿ ಪುನಃ ವ್ಯಾಖ್ಯಾನವನ್ನು ಮಾಡುತ್ತಿದ್ದೇವೆ.

**ಶ್ರೀಮನ್ನ್ಯಾಯಸುಧಾ – ಸ್ಪಷ್ಟೀಕರಣಂ ಚಾನೇಕವಿಧಮ್ । ಕ್ವಚಿದನುಕ್ತಾಂಶ-ಸ್ಯೋಕ್ತಿಃ । ಕ್ವಾಪ್ಯತಿಸಂಕ್ಷಿಪ್ತಸ್ಯ ವಿಸ್ತರಣಮ್ । ಕ್ವಚಿದತಿವಿಸ್ತೃತತಯಾ ಬುದ್ಧ್ಯನಾ-**

**ರೂಢಸ್ಯ ಸಂಕ್ಷೇಪಃ । ಕ್ವಾಪಿ ವಿಕ್ಷಿಪ್ತಸ್ಯ ಏಕೀಕರಣಮ್ । ಕುತ್ರಾಪ್ಯುಕ್ತಸ್ಯೋಪಪಾದನಮ್ । ಕ್ವಚಿದಪವ್ಯಾಖ್ಯಾನನಿರಾಸೇನ ದೃಢೀಕರಣಮಿತ್ಯಾದಿ ತತ್ರ ತತ್ರ ದ್ರಷ್ಟವ್ಯಮ್ ॥**

ಸ್ಪಷ್ಟೀಕರಣವು ಅನೇಕವಿಧವಾಗಿದೆ.

(೧) ಕೆಲವೆಡೆ ಅನುಕ್ತವಾದ ಅಂಶವನ್ನು ಹೇಳುವಿಕೆ.

(೨) ಅತ್ಯಂತ ಸಂಕ್ಷಿಪ್ತವಾದದ್ದನ್ನು ವಿಸ್ತಾರ ಮಾಡುವಿಕೆ.

(೩) ಬಹಳ ವಿಸ್ತಾರವಾದ್ದರಿಂದ ಬುದ್ಧಿಯಲ್ಲಿ ಅನಾರೂಢವಾದ ಅಂಶವನ್ನು ಸಂಕ್ಷೇಪವಾಗಿ ತಿಳಿಸುವಿಕೆ.

(೪) ವಿಕ್ಷಿಪ್ತವಾಗಿ ಹೇಳಿದ್ದನ್ನು ಒಂದೇ ಕಡೆ ಕ್ರೋಢೀಕರಿಸಿ ನಿರೂಪಣೆ ಮಾಡುವಿಕೆ.

(೫) ಬೇರೆ ಯಾವುದೋ ಸಂದರ್ಭದಲ್ಲಿ ಹೇಳಿದ್ದನ್ನು ಉಪಪಾದನೆ ಮಾಡುವಿಕೆ.

(೬) ಅಪವ್ಯಾಖ್ಯಾನವನ್ನು ನಿರಾಕರಣೆ ಮಾಡಿ ಸ್ವವ್ಯಾಖ್ಯಾನವನ್ನು ಸಮರ್ಥಿಸುವಿಕೆ.

**ಶ್ರೀಮನ್ನ್ಯಾಯಸುಧಾ – ನನ್ವೇಕತ್ರೈವ ಸರ್ವಂ ವಕ್ತವ್ಯಂ ವಕ್ತವ್ಯಂ, ಕಿಂ ಪ್ರಸ್ಥಾನಭೇದೇನ । ಮೈವಮ್ । ಯತಃ ಸಂಕ್ಷೇಪವಿಸ್ತರಾಭ್ಯಾಮುಕ್ತಂ ಶ್ರೋತ್ರೄಣಾಂ ಸುಗ್ರಹಂ ಸುಪ್ರಯೋಜನಂ ಚ ಭವತಿ । ಯಥೋಕ್ತಮ್ –**

**'ಸಂಕ್ಷೇಪವಿಸ್ತರಾಭ್ಯಾಂ ಚ (ತು) ಕಥಯಂತಿ ಮನೀಷಿಣಃ ।**
**ಬಹುವಾರಸ್ಮೃತೇಸ್ತಸ್ಯ ಫಲಬಾಹುಲ್ಯಕಾರಣಾತ್ ॥' ಇತಿ ॥**

ಒಂದೇ ಕಡೆಯಲ್ಲಿ ಹೇಳಬೇಕಾದ್ದೆಲ್ಲವನ್ನೂ ಹೇಳಬೇಕು. ಹೀಗಿರುವಾಗ ಪ್ರಸ್ಥಾನಭೇದವನ್ನೇಕೆ ಅನುಸರಿಸುತ್ತಿದ್ದೀರಿ? ಈ ಪ್ರಶ್ನೆ ಅಯುಕ್ತವಾಗಿದೆ. ಏಕೆಂದರೆ ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ತಿಳಿಸಲ್ಪಡುವ ವಿಷಯಗಳು ಶ್ರೋತೃಗಳಿಗೆ ಸುಲಭವಾಗಿ ತಿಳಿಯುತ್ತದೆ. ಆದಕ್ಕಾಗಿ ಪ್ರಸ್ಥಾನಭೇದವನ್ನು ಅನುಸರಿಸಲಾಗಿದೆ.

'ಸಂಕ್ಷೇಪವಿಸ್ತರಾಭ್ಯಾಂ ಚ (ತು) ಕಥಯಂತಿ ಮನೀಷಿಣಃ ।
ಬಹುವಾರಸ್ಮೃತೇಸ್ತಸ್ಯ ಫಲಬಾಹುಲ್ಯಕಾರಣಾತ್ ॥'

ಜ್ಞಾನಿಜನರು ಒಂದು ವಿಷಯವನ್ನು ಸಂಕ್ಷೇಪವಾಗಿ ಹೇಳುತ್ತಾರೆ; ಅದನ್ನು ವಿಸ್ತಾರವಾಗಿಯೂ ಹೇಳುತ್ತಾರೆ. ಹೀಗೆ ಹೇಳುವುದರಿಂದ ಅನೇಕಬಾರಿ ವಿಷಯವು ಮನನವಾಗುವುದರಿಂದ ಫಲಬಾಹುಲ್ಯವು ಉಂಟಾಗುತ್ತದೆ.

**ಶ್ರೀಮನ್ನ್ಯಾಯಸುಧಾ – ತತ್ರ ಭಾಷ್ಯಾದ್ಯಪದ್ಯಾರ್ಥಃ ಅತ್ರ ಶ್ಲೋಕತ್ರಯೇಣ ವಿವೃತಃ । ತಥಾ ಹಿ – ಸರ್ವಗುಣೋದೀರ್ಣತೋಕ್ತ್ಯಾ ಪ್ರಾಪ್ತಾ ಗುಣಗುಣಿಭೇದಶಂಕಾ 'ನಿಖಿಲ' ಇತ್ಯಾದಿನಾ ನಿರಾಕೃತಾ ।**

ಸ್ಪಷ್ಟೀಕರಿಸಬೇಕಾದ ಅನೇಕ ವಿಷಯಗಳಲ್ಲಿ ಭಾಷ್ಯದ ಮೊದಲನೆಯ ಪದ್ಯದ ಅರ್ಥವು ಕೂಡ ಒಂದಾಗಿದೆ. ಅನುವ್ಯಾಖ್ಯಾನದಲ್ಲಿರುವ ಪ್ರಾರಂಭದ ಮೂರು ಶ್ಲೋಕಗಳು ಬ್ರಹ್ಮಸೂತ್ರಭಾಷ್ಯದ ಮೊದಲನೆಯ ಪದ್ಯದ ಅರ್ಥವನ್ನು ವಿವರಿಸುತ್ತಿವೆ. ಅದು ಹೀಗೆ – 'ಗುಣೈಃ ಸರ್ವೈರುದೀರ್ಣಂ' ಎಂಬ ವಿಶೇಷಣದಿಂದ ಭಾಷ್ಯದಲ್ಲಿ ಸರ್ವಗುಣಪರಿಪೂರ್ಣತ್ವವನ್ನು ಹೇಳಿದ್ದಾರೆ. ಇದನ್ನು ಕೇಳಿದಾಗ ಶ್ರೀಹರಿಯ ಜ್ಞಾನಾನಂದಾದಿಗುಣಗಳಿಗೆ ಪರಸ್ಪರಭೇದವಿದೆಯೆಂಬ ಸಂಶಯವು ಉಂಟಾಗುತ್ತದೆ. ಇದು 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ಪರಿಹಾರವಾಗುತ್ತದೆ.

**ಶ್ರೀಮನ್ನ್ಯಾಯಸುಧಾ – 'ಜ್ಞೇಯತ್ವಗಮ್ಯತ್ವಯೋರಿತರಸಾಧಾರಣ್ಯಾತ್ ಕಥಂ ವಿಶೇಷಣತ್ವಮ್?' ಇತ್ಯಾಶಂಕಾ 'ಆಪ್ಯತಮಮ್' ಇತ್ಯನೇನ ನಿರಾಕೃತಾ । ಅಪಿಶಬ್ದೋ ವಿಶೇಷಣಾಂತರಸಮುಚ್ಚಯಾರ್ಥಃ, ತದ್ವಿವರಣಮ್ – 'ಅಸ್ಯ' ಇತ್ಯಾದಿ ।**

'ಜ್ಞೇಯತ್ವ ಮತ್ತು ಗಮ್ಯತ್ವ' ಮೊದಲಾದ ಧರ್ಮಗಳು ಬೇರೆ ಕಡೆಯೂ ಇರುತ್ತವೆ. ಹೀಗಿರುವಾಗ ಇವು ನಾರಾಯಣನಲ್ಲಿ ಮಾತ್ರವಿರುವ ವ್ಯಾವರ್ತಕವಿಶೇಷಣಗಳೆಂದು ಹೇಗೆ ಹೇಳುತ್ತೀರಿ. ಈ ಆಕ್ಷೇಪವನ್ನು ಆಪ್ಯತಮಂ ಎಂಬ ವಿಶೇಷಣದಿಂದ ಪರಿಹರಿಸಲಾಗಿದೆ.

ಭಾಷ್ಯದಲ್ಲಿರುವ 'ಅಪಿ' ಶಬ್ದವು ಬೇರೆ ವಿಶೇಷಣಗಳನ್ನು ಸಮುಚ್ಚಯ ಮಾಡುತ್ತಿದೆ. ಈ ಅಪಿಶಬ್ದದ ವಿವರಣೆಗಾಗಿ 'ಅಸ್ಯೋದ್ಭವಾದಿದಂ' ಎಂದು ಹೇಳಿರುತ್ತಾರೆ.

**ಶ್ರೀಮನ್ನ್ಯಾಯಸುಧಾ – 'ಶಾಸ್ತ್ರಪ್ರಭವಮ್' ಇತ್ಯಾದಿಭಿರ್ಬಹುಭಿಃ ಪ್ರಕಾರೈಃ ಯದ್ಗುರುತ್ವೋಪಪಾದನಂ ತೇನ 'ಗುರೂಂಶ್ಚ' ಇತಿ ಬಹುವಚನಾಂತಂ ಪದಂ ವಿವೃತಮ್ ।**

'ಶಾಸ್ತ್ರಪ್ರಭವಂ' ಮೊದಲಾದ ವಿಶೇಷಣಗಳಿಂದ ಅನೇಕಪ್ರಕಾರಗಳುಳ್ಳ ಗುರುತ್ವವನ್ನು ಉಪಪಾದನೆ ಮಾಡಿರುತ್ತಾರೆ. ಇದರಿಂದ 'ಗುರೂನ್' ಎಂಬ ಬಹುವಚನಾಂತವಾದ ಪದವನ್ನು ವಿವರಣೆ ಮಾಡಿದಂತಾಯಿತು.

**ಶ್ರೀಮನ್ನ್ಯಾಯಸುಧಾ – ಗುರುದೇವತಯೋಃ ಭೇದೇ 'ಅಪಿ'ಪದೇನಾರುಚಿಃ ಸೂಚಿತಾ । ತದ್ವಿವೃತಿಃ – 'ತಮೇವ' ಇತಿ । 'ಸಂಪ್ರ'ಶಬ್ದಾಭ್ಯಾಂ 'ನತ್ವಾ' ಇತಿ ವಿಶೇಷಿತಮ್ ।**

'ಭಾಷ್ಯಕಾರರಿಗೆ ಗುರುಗಳೇ ಬೇರೆ, ದೇವತೆಯೇ ಬೇರೆ' ಹೀಗೆ ತಿಳಿಯಬಾರದು ಎಂಬುದನ್ನು 'ಅಪಿ'ಶಬ್ದವು ಸೂಚನೆ ಮಾಡುತ್ತಿದೆ. ಗುರುದೇವತೆಗಳ ಭೇದದಲ್ಲಿ ಅರುಚಿಯನ್ನು ತಿಳಿಸುತ್ತಿದೆ. ಇದರ ಅರ್ಥವನ್ನು 'ತಮೇವ' ಎಂಬ ಪದದಿಂದ ಮಾಡಲಾಗಿದೆ. 'ಸನ್ನಮಾಮಿ' ಎಂಬಲ್ಲಿ ಮತ್ತು 'ಪ್ರಣಮ್ಯ' ಎಂಬಲ್ಲಿ ಪ್ರಯುಕ್ತವಾಗಿರುವ 'ಸಮ್' ಮತ್ತು 'ಪ್ರ' ಎಂಬ ಉಪಸರ್ಗಗಳು 'ನತ್ವಾ' ಎಂಬ ಪದದ ಅರ್ಥವನ್ನು ವಿವರಿಸುತ್ತಿವೆ.

**ಶ್ರೀಮನ್ನ್ಯಾಯಸುಧಾ – ನಿರುಪಪದಸೂತ್ರಗ್ರಹಣೇನ ಯದ್ ಬ್ರಹ್ಮಸೂತ್ರಾಣಾಂ ಸರ್ವೋತ್ತಮಪ್ರಾಮಾಣ್ಯಂ ಸೂಚಿತಮ್, ತದುಪಪಾದನಮ್ – ಪರಮಾಖ್ಯಾ ಇತಿ ॥**

ಉಪಪದವಿಲ್ಲದ ಸೂತ್ರಶಬ್ದವನ್ನು ಪ್ರಯೋಗಮಾಡಿರುವುದರಿಂದ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮವಾದ ಪ್ರಾಮಾಣ್ಯವಿದೆ ಎಂಬುದಾಗಿ ಸೂಚನೆ ಮಾಡಿದಂತಾಯಿತು. ಅದರ ಉಪಪಾದನೆಗಾಗಿ 'ಪರಮಾಖ್ಯವಿದ್ಯಾ' ಎಂದು ಹೇಳಿರುತ್ತಾರೆ.

**ಶ್ರೀಮನ್ನ್ಯಾಯಸುಧಾ – ಯದ್ 'ದ್ವಾಪರೇ' ಇತ್ಯಾದಿಭಾಷ್ಯಂ ತದಸಂಗತಮ್ । ಸೂತ್ರಾರ್ಥವಚನಂ ಪ್ರತಿಜ್ಞಾಯ ತದುತ್ಪತ್ತಿಕ್ರಮಕಥನಸ್ಯ ಉಪಯೋಗಾ-ದರ್ಶನಾತ್ ।**

'ದ್ವಾಪರೇ' ಇತ್ಯಾದಿಯಾಗಿ ಹೊರಟಿರುವ ಭಾಷ್ಯವು ಅಸಂಗತವಾಗಿದೆ. ಏಕೆಂದರೆ, ಸೂತ್ರಾರ್ಥವನ್ನು ಹೇಳುತ್ತೇವೆಂದು ಪ್ರತಿಜ್ಞೆ ಮಾಡಿ ಸೂತ್ರಗಳ ಉತ್ಪತ್ತಿಕ್ರಮವನ್ನು ಹೇಳುವುದು ಅಸಂಗತವಾಗುತ್ತದೆ.

**ಶ್ರೀಮನ್ನ್ಯಾಯಸುಧಾ – ಮೈವಮ್ । ಯಸ್ಮಾದ್ ಆಪ್ತಿಮೂಲತ್ವಾತ್ ಇತ್ಯು-ಕ್ತ್ಯಾऽಪಿ ಬ್ರಹ್ಮಸೂತ್ರಾಣಾಂ ಸರ್ವೋತ್ತಮಂ ಪ್ರಾಮಾಣ್ಯಂ ಸಮರ್ಥಯಿತುಮ್ ಏತದಿತಿ ದರ್ಶಯತಿ 'ಗುರುರ್ಗುರೂಣಾಮ್' ಇತ್ಯಾದಿನಾ ಇತಿ ॥**

ಹೀಗೆ ಆಶಂಕಿಸಬಾರದು. ಏಕೆಂದರೆ ಆಪ್ತಿಮೂಲತ್ವ ಮೊದಲಾದ ಯುಕ್ತಿಗಳಿಂದ ಬ್ರಹ್ಮಸೂತ್ರಗಳ ಸರ್ವೋತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡಲು 'ದ್ವಾಪರೇ' ಇತ್ಯಾದಿ ಭಾಷ್ಯವು ಹೊರಟಿರುತ್ತದೆ. ಈ ವಿಷಯವನ್ನು 'ಗುರುಃ ಗುರೂಣಾಮ್' ಎಂಬ ಪದ್ಯವು ವ್ಯಾಖ್ಯಾನಮಾಡುತ್ತಿದೆ. ಈ ಕ್ರಮದಲ್ಲಿ ಭಾಷ್ಯದ ಅರ್ಥವನ್ನು ಅನುವ್ಯಾಖ್ಯಾನವು ಸ್ಪಷ್ಟೀಕರಿಸುತ್ತಿದೆ ಎಂದು ತಿಳಿಯತಕ್ಕದ್ದು.

## 'ಚ' ಶಬ್ದದ ಸ್ವಾರಸ್ಯ

ಪರಿಮಳ – ಸೂಚಿತಮಿತಿ ॥ 'ಅನ್ವಪಿ ಚಾಹಮೇವ' ಇತ್ಯತ್ರಸ್ಥಚಶಬ್ದೇನೇತಿ ಭಾವಃ ।

'ಸೂಚಿತಮ್' – 'ಅನ್ವಪಿ ಚಾಹಮೇವ' ಎಂಬಲ್ಲಿರುವ ಚಶಬ್ದದಿಂದ ಮತ್ತೊಂದು ಪ್ರಯೋಜನವಿದೆ ಎಂಬುದು ಸೂಚಿತವಾಗಿದೆ ಎಂದರ್ಥ.

## ಭಾಷ್ಯದ ಮಂಗಳಶ್ಲೋಕದ ವ್ಯಾಖ್ಯಾನ

ಪರಿಮಳ – ಅನುಕ್ತಾಂಶಸ್ಯೇತಿ ॥ ಸಿದ್ಧಾರ್ಥೇ ವ್ಯುತ್ಪತ್ತ್ಯಾದೇಃ । ಅತಿಸಂಕ್ಷಿಪ್ತಸ್ಯೇತಿ ॥ ವ್ಯಕ್ತಮೇತದನುಪದಂ ತತ್ರ ಭಾಷ್ಯಾದ್ಯಪದ್ಯಾರ್ಥ ಇತ್ಯಾದೌ । ಸಂಕ್ಷೇಪ ಇತಿ ॥ 'ಏತದ್ಭಾವಾಭಿದಂ ಲಿಂಗಮ್' ಇತ್ಯಾದಿ ವಿಷಯಮಾಲಾಯಾಃ ಪೂರ್ವೋತ್ತರಪಕ್ಷಯುಕ್ತಿ-ಮಾಲಾದೇಶ್ಚ ಕರಣಾದಿತಿ ಭಾವಃ । ಏಕೀಕರಣಮಿತಿ ॥ ಆನಂದಮಯನಯಾದೌ । ಕುತ್ರಾಪೀತಿ ॥ ಅಂತರಾದಿನಯೇಷು ಅಭ್ಯಧಿಕಾಶಂಕಾದಿನಾ ಉಪಪಾದನಮ್ । ಅಪವ್ಯಾಖ್ಯಾನನಿರಾಸಃ ತತ್ರ ತತ್ರ ವ್ಯಕ್ತ ಏವ । ಇತ್ಯಾದಿ ಇತ್ಯಾದಿಪದೇನ ಕ್ವಚಿದ್ ಬಾಧಕೋದ್ಧಾರಾದಿರ್ಗ್ರಾಹ್ಯಃ ।

'ಅನುಕ್ತಾಂಶಸ್ಯ' – ಸಿದ್ಧಾರ್ಥದಲ್ಲಿ ಶಬ್ದಗಳ ವ್ಯುತ್ಪತ್ತ್ಯಾದಿಗಳು ಅನುಕ್ತಾಂಶಗಳಾಗಿವೆ.

'ಅತಿಸಂಕ್ಷಿಪ್ತಸ್ಯ' – ಭಾಷ್ಯದ ಮೊದಲನೆಯ ಪದ್ಯದ ಅರ್ಥವನ್ನು ಅನುವ್ಯಾಖ್ಯಾನದ ಪ್ರಾರಂಭದ ಮೂರು ಶ್ಲೋಕಗಳು ವಿವರಿಸುತ್ತಿವೆ. ಇದು ಅತ್ಯಂತಸಂಕ್ಷಿಪ್ತವಾದದ್ದನ್ನು ವಿಸ್ತಾರ-ವಾಗಿ ನಿರೂಪಣೆ ಮಾಡುತ್ತಿದೆ ಎಂಬುದಕ್ಕೆ ಉದಾಹರಣೆಯಾಗಿದೆ. ಇದನ್ನು ಸದ್ಯದಲ್ಲೇ ತೋರಿಸುತ್ತೇವೆ.

'ಸಂಕ್ಷೇಪಃ' – 'ಏತದ್ಭಾವಾಭಿಧಂ ಲಿಂಗಮ್' ಮುಂತಾದ ಪದ್ಯಗಳಲ್ಲಿ ಅತ್ಯಂತವಿಸ್ತಾರ-ವಾದ ಭಾಷ್ಯದಲ್ಲಿ ಹೇಳಿದ ವಿಷಯವನ್ನು ಸಂಕ್ಷೇಪವಾಗಿ ನಿರೂಪಣೆ ಮಾಡಲಾಗಿದೆ. ಮತ್ತು ಪೂರ್ವಪಕ್ಷಯುಕ್ತಿ, ಸಿದ್ಧಾಂತಯುಕ್ತಿಗಳ ಮಾಲೆಗಳನ್ನು ಸಂಕ್ಷೇಪಮಾಡಿ ಹೇಳಲಾಗಿದೆ.

'ಏಕೀಕರಣಮ್' – ಆನಂದಮಯಾಧಿಕರಣವೇ ಮೊದಲಾದ ಅಧಿಕರಣಗಳಲ್ಲಿ ವಿಕ್ಷಿಪ್ತ-ವಾದದ್ದನ್ನು ಏಕೀಕರಣ ಮಾಡಿ ಸಂಗ್ರಹಿಸಲಾಗಿದೆ.

ಉಪಪದವಿಲ್ಲದ ಸೂತ್ರಶಬ್ದವನ್ನು ಪ್ರಯೋಗಮಾಡಿರುವುದರಿಂದ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮವಾದ ಪ್ರಾಮಾಣ್ಯವಿದೆ ಎಂಬುದಾಗಿ ಸೂಚನೆ ಮಾಡಿದಂತಾಯಿತು. ಅದರ ಉಪಪಾದನೆಗಾಗಿ 'ಪರಮಾಖ್ಯವಿದ್ಯಾ' ಎಂದು ಹೇಳಿರುತ್ತಾರೆ.

**ಶ್ರೀಮನ್ನ್ಯಾಯಸುಧಾ – ಯದ್ 'ದ್ವಾಪರೇ' ಇತ್ಯಾದಿಭಾಷ್ಯಂ ತದಸಂಗತಮ್ । ಸೂತ್ರಾರ್ಥವಚನಂ ಪ್ರತಿಜ್ಞಾಯ ತದುತ್ಪತ್ತಿಕ್ರಮಕಥನಸ್ಯ ಉಪಯೋಗಾ-ದರ್ಶನಾತ್ ।**

'ದ್ವಾಪರೇ' ಇತ್ಯಾದಿಯಾಗಿ ಹೊರಟಿರುವ ಭಾಷ್ಯವು ಅಸಂಗತವಾಗಿದೆ. ಏಕೆಂದರೆ, ಸೂತ್ರಾರ್ಥವನ್ನು ಹೇಳುತ್ತೇವೆಂದು ಪ್ರತಿಜ್ಞೆ ಮಾಡಿ ಸೂತ್ರಗಳ ಉತ್ಪತ್ತಿಕ್ರಮವನ್ನು ಹೇಳುವುದು ಅಸಂಗತವಾಗುತ್ತದೆ.

**ಶ್ರೀಮನ್ನ್ಯಾಯಸುಧಾ – ಮೈವಮ್ । ಯಸ್ಮಾದ್ ಆಪ್ತಿಮೂಲತ್ವಾತ್ ಇತ್ಯ-ಕ್ಯಾऽಪಿ ಬ್ರಹ್ಮಸೂತ್ರಾಣಾಂ ಸರ್ವೋತ್ತಮಂ ಪ್ರಾಮಾಣ್ಯಂ ಸಮರ್ಥಯಿತುಮ್ ಏತದಿತಿ ದರ್ಶಯತಿ 'ಗುರುರ್ಗುರೂಣಾಮ್' ಇತ್ಯಾದಿನಾ ಇತಿ ॥**

ಹೀಗೆ ಆಶಂಕಿಸಬಾರದು. ಏಕೆಂದರೆ ಆಪ್ತಿಮೂಲತ್ವ ಮೊದಲಾದ ಯುಕ್ತಿಗಳಿಂದ ಬ್ರಹ್ಮಸೂತ್ರಗಳ ಸರ್ವೋತ್ತಮಪ್ರಾಮಾಣ್ಯವನ್ನು ಸಮರ್ಥನೆ ಮಾಡಲು 'ದ್ವಾಪರೇ' ಇತ್ಯಾದಿ ಭಾಷ್ಯವು ಹೊರಟಿರುತ್ತದೆ. ಈ ವಿಷಯವನ್ನು 'ಗುರುಃ ಗುರೂಣಾಮ್' ಎಂಬ ಪದ್ಯವು ವ್ಯಾಖ್ಯಾನಮಾಡುತ್ತಿದೆ. ಈ ಕ್ರಮದಲ್ಲಿ ಭಾಷ್ಯದ ಅರ್ಥವನ್ನು ಅನುವ್ಯಾಖ್ಯಾನವು ಸ್ಪಷ್ಟೀಕರಿಸುತ್ತಿದೆ ಎಂದು ತಿಳಿಯತಕ್ಕದ್ದು.

## 'ಚ' ಶಬ್ದದ ಸ್ವಾರಸ್ಯ

ಪರಿಮಳ – ಸೂಚಿತಮಿತಿ ॥ 'ಅನ್ವಪಿ ಚಾಹಮೇವ' ಇತ್ಯತ್ರಸ್ಥಚಶಬ್ದೇನೇತಿ ಭಾವಃ ।

'ಸೂಚಿತಮ್' – 'ಅನ್ವಪಿ ಚಾಹಮೇವ' ಎಂಬಲ್ಲಿರುವ ಚಶಬ್ದದಿಂದ ಮತ್ತೊಂದು ಪ್ರಯೋಜನವಿದೆ ಎಂಬುದು ಸೂಚಿತವಾಗಿದೆ ಎಂದರ್ಥ.

## ಭಾಷ್ಯದ ಮಂಗಳಶ್ಲೋಕದ ವ್ಯಾಖ್ಯಾನ

ಪರಿಮಳ – ಅನುಕ್ತಾಂಶಸ್ಯೇತಿ ॥ ಸಿದ್ಧಾರ್ಥೇ ವ್ಯುತ್ಪತ್ತ್ಯಾದೇಃ । ಅತಿಸಂಕ್ಷಿಪ್ತಸ್ಯೇತಿ ॥ ವ್ಯಕ್ತಮೇತದನುಪದಂ ತತ್ರ ಭಾಷ್ಯಾದ್ಯಪದ್ಯಾರ್ಥ ಇತ್ಯಾದೌ । ಸಂಕ್ಷೇಪ ಇತಿ ॥ 'ಏತದ್ಭಾವಾಭಿದಂ ಲಿಂಗಮ್' ಇತ್ಯಾದಿ ವಿಷಯಮಾಲಾಯಾಃ ಪೂರ್ವೋತ್ತರಪಕ್ಷಯುಕ್ತಿ-ಮಾಲಾದೇಶ್ಚ ಕರಣಾದಿತಿ ಭಾವಃ । ಏಕೀಕರಣಮಿತಿ ॥ ಆನಂದಮಯನಯಾದೌ । ಕುತ್ರಾಪೀತಿ ॥ ಅಂತರಾದಿನಯೇಷು ಅಭ್ಯಧಿಕಾಶಂಕಾದಿನಾ ಉಪಪಾದನಮ್ । ಅಪವ್ಯಾಖ್ಯಾನನಿರಾಸಃ ತತ್ರ ತತ್ರ ವ್ಯಕ್ತ ಏವ । ಇತ್ಯಾದಿ ಇತ್ಯಾದಿಪದೇನ ಕ್ವಚಿದ್ ಬಾಧಕೋದ್ಧಾರಾದಿರ್ಗ್ರಾಹ್ಯಃ।

'ಅನುಕ್ತಾಂಶಸ್ಯ' – ಸಿದ್ಧಾರ್ಥದಲ್ಲಿ ಶಬ್ದಗಳ ವ್ಯುತ್ಪತ್ತ್ಯಾದಿಗಳು ಅನುಕ್ತಾಂಶಗಳಾಗಿವೆ.

'ಅತಿಸಂಕ್ಷಿಪ್ತಸ್ಯ' – ಭಾಷ್ಯದ ಮೊದಲನೆಯ ಪದ್ಯದ ಅರ್ಥವನ್ನು ಅನುವ್ಯಾಖ್ಯಾನದ ಪ್ರಾರಂಭದ ಮೂರು ಶ್ಲೋಕಗಳು ವಿವರಿಸುತ್ತಿವೆ. ಇದು ಅತ್ಯಂತಸಂಕ್ಷಿಪ್ತವಾದದ್ದನ್ನು ವಿಸ್ತಾರ-ವಾಗಿ ನಿರೂಪಣೆ ಮಾಡುತ್ತಿದೆ ಎಂಬುದಕ್ಕೆ ಉದಾಹರಣೆಯಾಗಿದೆ. ಇದನ್ನು ಸದ್ಯದಲ್ಲೇ ತೋರಿಸುತ್ತೇವೆ.

'ಸಂಕ್ಷೇಪಃ' – 'ಏತದ್ಭಾವಾಭಿಧಂ ಲಿಂಗಮ್' ಮುಂತಾದ ಪದ್ಯಗಳಲ್ಲಿ ಅತ್ಯಂತವಿಸ್ತಾರ-ವಾದ ಭಾಷ್ಯದಲ್ಲಿ ಹೇಳಿದ ವಿಷಯವನ್ನು ಸಂಕ್ಷೇಪವಾಗಿ ನಿರೂಪಣೆ ಮಾಡಲಾಗಿದೆ. ಮತ್ತು ಪೂರ್ವಪಕ್ಷಯುಕ್ತಿ, ಸಿದ್ಧಾಂತಯುಕ್ತಿಗಳ ಮಾಲೆಗಳನ್ನು ಸಂಕ್ಷೇಪಮಾಡಿ ಹೇಳಲಾಗಿದೆ.

'ಏಕೀಕರಣಮ್' – ಆನಂದಮಯಾಧಿಕರಣವೇ ಮೊದಲಾದ ಅಧಿಕರಣಗಳಲ್ಲಿ ವಿಕ್ಷಿಪ್ತ-ವಾದದ್ದನ್ನು ಏಕೀಕರಣ ಮಾಡಿ ಸಂಗ್ರಹಿಸಲಾಗಿದೆ.

'ಕುತ್ರಾಪಿ' – ಅಂತರಾಧಿಕರಣದಲ್ಲಿ ಹೆಚ್ಚಿನ ಆಶಂಕೆಯನ್ನು ತೋರಿಸಿ ಹೇಳಿದ್ದನ್ನೇ ಉಪಪಾದನೆ ಮಾಡಲಾಗಿದೆ. ಈ ಅಧಿಕರಣದಲ್ಲಿ ಅಪವ್ಯಾಖ್ಯಾನದ ನಿರಾಸವೂ ಕೂಡ ಸ್ಪಷ್ಟವಾಗಿಯೇ ತಿಳಿಯುತ್ತದೆ. 'ಇತ್ಯಾದಿ' – ಇಲ್ಲಿರುವ ಆದಿಪದದಿಂದ ಬಾಧಕೋದ್ಧಾರ ಮೊದಲಾದವುಗಳನ್ನು ಸಂಗ್ರಹ ಮಾಡಬೇಕು.

ಪರಿಮಳ– ಯಥೋಕ್ತಮಿತಿ ॥ ಪ್ರಥಮಸ್ಕಂಧತಾತ್ಪರ್ಯೇ ।

'ಯಥೋಕ್ತಂ' – ಪ್ರಥಮಸ್ಕಂಧತಾತ್ಪರ್ಯದಲ್ಲಿ ಹೇಳಿರುತ್ತಾರೆ.

## ಅತಿಸಂಕ್ಷೇಪದ ವಿವರಣೆ

ಪರಿಮಳ– 'ಅತಿಸಂಕ್ಷಿಪ್ತಸ್ಯ ವಿಸ್ತರಣಮ್' ಇತ್ಯೇತದ್ ವ್ಯನಕ್ತಿ – ತತ್ರೇತಿ ॥ 'ನಿಖಿಲ'- ಇತ್ಯಾದಿನಾ ನಿರಾಕೃತಾ ಇತಿ ॥ 'ದೇಹಸ್ಯ ಗುಣಾತ್ಮಕತ್ವೋಕ್ತ್ಯಾ ದೇಹದೇಹಿನೋರಭೇದಸ್ಯ ಪ್ರಮಿತತ್ವಾದ್ ಗುಣಾಭೇದ ಏವೋಕ್ತೋ ಭವತಿ' ಇತಿ ಭಾವಃ । ಇತರೇತಿ ॥ ಕರ್ಮ-ದೇವತಾಸಾಧಾರಣ್ಯಾತ್ ಇತ್ಯರ್ಥಃ । ಅಪಿಶಬ್ದಸ್ಯ ಅರುಚಿಸೂಚಕತ್ವವತ್ ಅನುಕ್ತ-ಸಮುಚ್ಚಯರೂಪಾರ್ಥಾಂತರಮಪ್ಯುಪೇತ್ಯ ಆಹ – ಅಪಿಶಬ್ದ ಇತಿ ॥ ಸಂಪ್ರೇತಿ ॥ ಆದ್ಯ-ದ್ವಿತೀಯಶ್ಲೋಕಸ್ಥಸಂಪ್ರಶಬ್ದಾಭ್ಯಾಂ ಯಥಾಕ್ರಮಂ ದೇವತಾನತಿರ್ಗುರುನತಿಶ್ಚ ವಿಶೇಷಿತಾ ಇತ್ಯರ್ಥಃ । 'ದ್ವಾಪರೇ ಇತ್ಯಾದಿಭಾಷ್ಯವಿವೃತಿಪರಂ ಗುರುರ್ಗುರೂಣಾಮ್ ಇತ್ಯಾದಿ' ಇತ್ಯಾಹ – ದ್ವಾಪರ ಇತಿ ॥

'ಅತಿಸಂಕ್ಷಿಪ್ತಸ್ಯ' – ಅತ್ಯಂತ ಸಂಕ್ಷಿಪ್ತವಾದದ್ದರ ವಿಸ್ತಾರವಾದ ನಿರೂಪಣೆಯನ್ನು 'ತತ್ರ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ.

'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ಪರಮಾತ್ಮನ ದೇಹವು ಗುಣಸ್ವರೂಪವಾಗಿದೆ ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ದೇಹ ಮತ್ತು ದೇಹಿಗಳಿಗೆ ಅಭೇದವು ಪ್ರಮಿತ-ವಾಗಿರುವುದರಿಂದ ಗುಣಾಭೇದವನ್ನೇ ನಾರಾಯಣನಲ್ಲಿ ಹೇಳಿದಂತಾಗುತ್ತದೆ ಎಂದಭಿಪ್ರಾಯ.

'ಇತರ' – ಕರ್ಮ ಹಾಗೂ ದೇವತೆಗಳಲ್ಲಿ ಸಾಧಾರಣವಾಗಿರುವುದರಿಂದ ಎಂದರ್ಥ. 'ಅಪಿ' ಶಬ್ದವು ಅರುಚಿಯನ್ನು ಹೇಗೆ ಸೂಚನೆ ಮಾಡುತ್ತದೋ ಅದರಂತೆ ಅನುಕ್ತವಾದದ್ದನ್ನೂ ಕೂಡ ಸಮುಚ್ಚಯ ಮಾಡುತ್ತಿದೆ. ಈ ಅಭಿಪ್ರಾಯದಿಂದ ''ಅಪಿಶಬ್ದಃ'' ಇತ್ಯಾದಿ ವಾಕ್ಯವು ಹೊರಟಿದೆ.

'ಸಂಪ್ರಶಬ್ದಾಭ್ಯಾಂ' ಮೊದಲನೆಯ ಶ್ಲೋಕದಲ್ಲಿ 'ಸನ್ನಮಾಮಿ' ಎಂಬಲ್ಲಿ ಸಂ ಎಂಬ ಉಪಸರ್ಗವಿದೆ. ಎರಡನೆಯ ಶ್ಲೋಕದಲ್ಲಿ 'ಪ್ರಣಮ್ಯ' ಎಂಬಲ್ಲಿ ಪ್ರ ಎಂಬ ಉಪಸರ್ಗವಿದೆ. ಇವೆರಡರಿಂದ ಕ್ರಮವಾಗಿ ದೇವತೆಯ ನಮನ ಹಾಗೂ ಗುರುಗಳ ನಮನವನ್ನು ವಿವರಿಸಿ-ದಂತಾಗುತ್ತದೆ. 'ದ್ವಾಪರೇ' ಇತ್ಯಾದಿ ಭಾಷ್ಯವನ್ನು 'ಗುರುರ್ಗುರೂಣಾಮ್' ಎಂಬ ಶ್ಲೋಕವು ವಿವರಣೆ ಮಾಡುತ್ತಿದೆ ಎಂಬುದಾಗಿ 'ದ್ವಾಪರೇ' ಇತ್ಯಾದಿ ವಾಕ್ಯವು ಹೇಳುತ್ತಿದೆ.

## ಮಾಡಿದ್ದನ್ನೇ ಮಾಡಬಹುದೇ?

ವಾಕ್ಯಾರ್ಥಚಂದ್ರಿಕಾ – ಕೃತಸ್ಯ ಕರಣಾಯೋಗಾತ್ 'ಯದ್ಯಪಿ, ತಥಾಽಪಿ, ಪುನಃ' ಇತ್ಯರ್ಥಕತ್ವಮ್ 'ಅಪಿ'ಶಬ್ದಸ್ಯ ದರ್ಶಯನ್ ವಾಕ್ಯಂ ಯೋಜಯತಿ – ಯದ್ಯಪೀತಿ ॥

ಮಾಡಿದ್ದನ್ನು ಪುನಃ ಮಾಡಲು ಸಾಧ್ಯವಿಲ್ಲ. ಆದ್ದರಿಂದ 'ಯದ್ಯಪಿ, ತಥಾಪಿ, ಪುನಃ' ಎಂಬರ್ಥ -ವನ್ನು ಒಪ್ಪಿ ಅಪಿಶಬ್ದಕ್ಕೆ ವ್ಯಾಖ್ಯಾನಮಾಡಲು ವಾಕ್ಯಯೋಜನೆಯನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ವಿವರಣೆ – 'ಕೃತಾಪಿ ಕ್ರಿಯತೇ' ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಮಾಡಿದ್ದರೂ ಕೂಡ ಪುನಃ ಮಾಡುತ್ತೇನೆ ಎಂಬುದು ಇದರ ಅರ್ಥ. ಒಮ್ಮೆ ಮಾಡಿದ್ದನ್ನು ಪುನಃ ಮಾಡಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅಪಿ'ಶಬ್ದದಿಂದಲೇ ಉತ್ತರವನ್ನು ತಿಳಿಯಬೇಕು ಅಪಿಶಬ್ದಕ್ಕೆ 'ಯದ್ಯಪಿ, ತಥಾಪಿ, ಪುನಃ' ಎಂಬ ಮೂರುಅರ್ಥಗಳಿವೆ. ಈ ಮೂರೂ ಅರ್ಥಗಳನ್ನು ಕೂಡ ಇಲ್ಲಿ ವಿವಕ್ಷಿಸಬೇಕು. ವಾಸ್ತವಿಕವಾಗಿ ಸ್ವತಃ ನಾವೇ ಸೂತ್ರಾರ್ಥವನ್ನು ಭಾಷ್ಯದಲ್ಲಿ ಹೇಳಿದ್ದೇವೆ. ಆದರೂ ಕೂಡ ಪುನಃ ಸ್ಪಷ್ಟತೆಗೋಸ್ಕರ ಅದೇ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದೇವೆ ಎಂಬರ್ಥವನ್ನು ಅನುವ್ಯಾಖ್ಯಾನದ ವಾಕ್ಯಕ್ಕೆ ಯೋಜನೆಯನ್ನು ತಿಳಿಯಬೇಕು.

## ಅಸಂಗತಿಪರಿಹಾರವನ್ನೂ ಕೂಡ ಆದಿಪದದಿಂದ ವಿವಕ್ಷಿಸಬೇಕು

ವಾಕ್ಯಾರ್ಥಚಂದ್ರಿಕಾ – ನನು ಸರ್ವತ್ರಾನುವ್ಯಾಖ್ಯಾನೇ ಸಂಕ್ಷಿಪ್ಯ ಭಾಷ್ಯೋಕ್ತವಿಸ್ತರಣಾದರ್ಶನಾದಯುಕ್ತಮೇತತ್ ಇತ್ಯತ ಆಹ – ಸ್ಪಷ್ಟೀಕರಣಂ ಚೇತಿ ॥ ಇತ್ಯಾದಿ ತತ್ರ ತತ್ರೇತಿ ॥ 'ಆದಿ'-ಪದೇನಾಸಂಗತಿಪರಿಹಾರಾದಿಕಂ ಸಂಗೃಹ್ಯತೇ । 'ಅತಃ'ಶಬ್ದಾರ್ಥತಯಾ ಬಂಧಸತ್ಯತ್ವೋಕ್ತಿಪ್ರಭೃತ್ಯನುಪದಂ ವಕ್ಷ್ಯಮಾಣಸ್ಯ 'ಉದ್ಭವಾದಿದಂ, ಶಾಸ್ತ್ರಪ್ರಭವಮ್' ಇತ್ಯಾದಿ,

'ಏವಮೇವಾವಿರೋಧೇನ ಪ್ರಾರಬ್ಧಸ್ಯೈವ ಕರ್ಮಣಃ।
ಜ್ಞಾನಂ ದೃಷ್ಟಫಲಂ ಪ್ರೋಕ್ತಂ ಮುಕ್ತಿಶ್ಚೈವ ಲಭ್ಯತೇ'

ಅತೋ ಜಗದ್ವ್ಯಾಪೃತಿಮಂತ ಏವೇತ್ಯಾದಿ, 'ವೈರಾಗ್ಯತೋ ಭಕ್ತದಾರ್ಢ್ಯಂ, ಯುಕ್ತಿತೋ ಜ್ಞಾತವೇದಾರ್ಥಃ' ಇತ್ಯಾದಿ, 'ಪರಮಾಖ್ಯವಿದ್ಯಾ' ಇತ್ಯಾದಿ, 'ಆತ್ಮೇತಿ ನಾಮ ಕಥಿತಮ್' ಇತ್ಯಾರಭ್ಯ 'ತಸ್ಮಾದ್ಯಥೋಕ್ತಮಾರ್ಗೇಣ' ಇತ್ಯಾದಿ, 'ಗುರುರ್ಗುರೂಣಾಮ್' ಇತ್ಯಾದಿ ಚ ಕ್ರಮೇಣ ತತ್ರ ತತ್ರ ದ್ರಷ್ಟವ್ಯಮಿತ್ಯರ್ಥಃ ॥

ಅನುವ್ಯಾಖ್ಯಾನದಲ್ಲಿ ಎಲ್ಲೆಡೆಯೂ ಭಾಷ್ಯದಲ್ಲಿ ಸಂಕ್ಷೇಪವಾಗಿ ಹೇಳಿದ್ದರ ವಿವರಣೆ ಕಾಣಸುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ ''ಸ್ಪಷ್ಟೀಕರಣಂ ಚ'' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

'ಇತ್ಯಾದಿ ತತ್ರ ತತ್ರ'' ಎಂಬಲ್ಲಿರುವ ಆದಿಪದದಿಂದ ಅಸಂಗತಿಯ ಪರಿಹಾರಾದಿಗಳನ್ನು ಸಂಗ್ರಹ ಮಾಡಬೇಕು.

ಅನೇಕಬಗೆಯ ಸ್ಪಷ್ಟೀಕರಣಗಳಿಗೆ ಉದಾಹರಣೆಯನ್ನು ಹೀಗೆ ತಿಳಿಯತಕ್ಕದ್ದು. ಭಾಷ್ಯದಲ್ಲಿ ಅನುಕ್ತವಾದದ್ದನ್ನು ಅನುವ್ಯಾಖ್ಯಾನದಲ್ಲಿ 'ಅತಃ' ಎಂಬ ಶಬ್ದಕ್ಕೆ ಬಂಧಸತ್ಯತ್ವವಿರುವುದರಿಂದ ಎಂಬುದಾಗಿ ಸದ್ಯದಲ್ಲಿಯೇ ಸಮರ್ಥಿಸುತ್ತಾರೆ. ಅತಿಸಂಕ್ಷಿಪ್ತವಾದದ್ದರ ವಿಸ್ತಾರಕ್ಕೆ ಉದಾಹರಣೆ – 'ಅಪಿ' ಶಬ್ದಕ್ಕೆ 'ಅಸ್ಯೋದ್ಭವಾದಿದಂ ಶಾಸ್ತ್ರಪ್ರಭವಂ' ಎಂಬುದಾಗಿ ವ್ಯಾಖ್ಯಾನಮಾಡಲಾಗಿದೆ. ಅತ್ಯಂತ ವಿಸ್ತಾರವಾದದ್ದನ್ನು ಸಂಕ್ಷೇಪ ಮಾಡುವಿಕೆಗೆ ಉದಾಹರಣೆ –

'ಏವಮೇವಾವಿರೋಧೇನ ಪ್ರಾರಬ್ಧಸ್ಯೈವ ಕರ್ಮಣಃ।
ಜ್ಞಾನಂ ದೃಷ್ಟಫಲಂ ಪ್ರೋಕ್ತಂ ಮುಕ್ತಿಶ್ಚೈವ ಲಭ್ಯತೇ ॥'

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸಂಕ್ಷೇಪ ಮಾಡಿ ಹೇಳಿದ್ದಾರೆ.

ಭಾಷ್ಯದಲ್ಲಿ ವಿಕ್ಷಿಪ್ತವಾದದ್ದನ್ನು ಏಕೀಕರಣಮಾಡಿದ್ದಾರೆಂಬುದಕ್ಕೆ ಉದಾಹರಣೆ – 'ವೈರಾಗ್ಯತೋ ಭಕ್ತಿದಾರ್ಢ್ಯಂ, ಯುಕ್ತಿತೋ ಜ್ಞಾತವೇದಾರ್ಥಃ' ಎಂಬುದು. ಉಕ್ತಸ್ಯ ಉಪಪಾದನೆಗೆ 'ಪರಮಾಖ್ಯ-ವಿದ್ಯಾ' ಎಂಬುದು ಉದಾಹರಣೆಯಾಗಿದೆ. ಅಪವ್ಯಾಖ್ಯಾನನಿರಾಸೇನ ದೃಢೀಕರಣಕ್ಕೆ – 'ಆತ್ಮೇತಿ ನಾಮ ಕಥಿತಮ್' ಎಂದಾರಂಭಿಸಿ 'ತಸ್ಮಾದ್ಯಥೋಕ್ತಮಾರ್ಗೇಣ' ಎಂಬುದರ ತನಕ ಹೇಳಿದ್ದು ಉದಾಹರಣೆ-ಯಾಗಿದೆ. ಅಸಂಗತಿಪರಿಹಾರಕ್ಕೆ 'ಗುರುರ್ಗುರೂಣಾಮ್' ಇತ್ಯಾದಿ ಅನುವ್ಯಾಖ್ಯಾನವು ಉದಾಹರಣೆ-ಯಾಗಿದೆ. ಹೀಗೆ ಅನೇಕಬಗೆಯ ಸ್ಪಷ್ಟೀಕರಣಗಳನ್ನು ಕ್ರಮವಾಗಿ ತಿಳಿಯತಕ್ಕದ್ದು.

ಯಾದುಪತ್ಯ – ಅಸ್ತೀತಿ ಸೂಚಿತಮಿತಿ ॥ 'ಅನ್ವಪಿ ಚಾಹಮೇವ ಇತ್ಯತ್ರ ಚಶಬ್ದೇನ' ಇತಿ ಶೇಷಃ ॥

'ಅಸ್ತೀತಿ ಸೂಚಿತಮ್' ॥ 'ಅನ್ವಪಿ ಚಾಹಮೇವ' ಎಂಬಲ್ಲಿ ಚಶಬ್ದದಿಂದ ಪ್ರಯೋಜ-ನಾಂತರವು ಸೂಚಿಸಲ್ಪಟ್ಟಿದೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

## ಅನುವ್ಯಾಖ್ಯಾನವು ಭಾಷ್ಯದ ಸ್ಪಷ್ಟಾರ್ಥತೆಗಾಗಿ ಹೊರಟಿದೆ.

ಯಾದುಪತ್ಯ – ಅನುಕ್ತಾಂಶಸ್ಯ ಇತಿ ॥ ಯಥಾ ಪ್ರಥಮಾಧಿಕರಣೇ ಭಾಷ್ಯಾನುಕ್ತಾನಾಮ್ ಅತಃಶಬ್ದಾರ್ಥಾನಾಮುಕ್ತಿರಿತ್ಯಾದಿ । ಅತಿಸಂಕ್ಷಿಪ್ತಸ್ಯೇತಿ ॥ ಏತದುದಾಹರಣಂ ತು – 'ಅಪಿಶಬ್ದೋ ವಿಶೇಷಣಾಂತರಸಮುಚ್ಚಯಾರ್ಥಃ । ತದ್ವಿವರಣಮಸ್ಯೇತ್ಯಾದಿ' ಇತಿ ವಕ್ಷ್ಯಮಾಣಮ್ । ತಥಾ ಮಾಂತ್ರವರ್ಣಿಕಸಮಾಖ್ಯಾಯಾ ಭಾಷ್ಯೇ ಸಂಕ್ಷೇಪೇಣೋದಿತಾಯಾಃ 'ತತ್ರ ಸತ್ಯತ್ವಂ, ಸೃಷ್ಟ್ಯನ್ನ-ಪ್ರಾಣಯೋರಪಿ' ಇತ್ಯಾದಿನಾಽತ್ರ ವಿವರಣಮಿತ್ಯಾದಿಕಂ ಜ್ಞೇಯಮ್ । ಸಂಕ್ಷೇಪ ಇತಿ ॥ ಯಥಾ ಪ್ರಥಮೇಽಧ್ಯಾಯೇ ತೃತೀಯಪಾದಾರ್ಥಸ್ಯ, ದ್ವಿತೀಯೇ ಚತುರ್ಥಪಾದಾರ್ಥಸ್ಯ, ತೃತೀಯೇ ಪ್ರಥಮಪಾದಾರ್ಥಸ್ಯ, ಚತುರ್ಥೇ ತೃತೀಯಪಾದಾರ್ಥಸ್ಯ ಪೂರ್ವಪಕ್ಷಸಿದ್ಧಾಂತನ್ಯಾಯೋಕ್ತ್ಯಾದಿ-ಮಾತ್ರೇಣ 'ಸಂಕ್ಷೇಪಃ' ಇತ್ಯಾದಿ ॥ ವಿಕ್ಷಿಪ್ತಸ್ಯೇತಿ ॥ ಯಥಾ ಚತುರ್ಥೇ ಶೇಷಮಾರ್ಗಗರುಡ-ಮಾರ್ಗಸ್ಯ ವಾ ಭಾಷ್ಯೇ ವಿಕ್ಷಿಪ್ತತಯೋಕ್ತಸ್ಯಾತ್ರ 'ಸೋಮಸ್ತು ವಾರೀಶಯುತಃ' ಇತ್ಯಾದಿನೈಕೀ-ಕರಣಮ್ ಇತ್ಯಾದಿ । 'ಉಕ್ತಸ್ಯೋಪಪಾದನಮ್' ಇತ್ಯಸ್ಯ 'ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ ತತ್ಪ್ರಸಾದತಃ' ಇತ್ಯಾದ್ಯಭ್ಯಧಿಕಶಂಕಾಪ್ರದರ್ಶನಾತ್ ಇತ್ಯಾದಿನೋಪಪಾದನಮುದಾ-ಹರಣಂ ಜ್ಞೇಯಮ್ । ಅಪವ್ಯಾಖ್ಯಾನನಿರಾಸೇನೇತಿ ॥ ಯಥಾ 'ಬಂಧಮಿಥ್ಯಾತ್ವಂ ನೈವಮುಕ್ತಿರ-ಪೇಕ್ಷತೇ' ಇತ್ಯಾದಿ । 'ಇತ್ಯಾದಿ' ಇತ್ಯತ್ರ ಆದಿಪದೇನ ದ್ವಿತೀಯೇ ಪ್ರಮಾಣಲಕ್ಷಣಾದೇರುಕ್ತಿಃ ಅನು-

ಕ್ರಾಂಶೇತ್ಯುಕ್ತ್ಯೋಪಪಾದನಯೋಃ ಸೂತ್ರಾರ್ಥಮಾತ್ರವಿಷಯತ್ವಾನ್ನ ತಾಭ್ಯಾಮಿದಂ ಗತಾರ್ಥ-ಮಿತ್ಯವಧೇಯಮ್ ॥

'ಅನುಕ್ತಾಂಶಸ್ಯ ಉಕ್ತಿಃ' – ಪ್ರಥಮಸೂತ್ರದಲ್ಲಿ ಅತಃ ಎಂಬ ಶಬ್ದದ ಅರ್ಥವನ್ನು ಭಾಷ್ಯದಲ್ಲಿ ಹೇಳಿರುವುದಿಲ್ಲ. ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಇದು ಭಾಷ್ಯದಲ್ಲಿ ಹೇಳದೇ ಇರುವುದನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆಂಬುದಕ್ಕೆ ಉದಾಹರಣೆ.

'ಅತಿಸಂಕ್ಷಿಪ್ತಸ್ಯ ವಿಸ್ತರಣಮ್' – ಭಾಷ್ಯದಲ್ಲಿ ಯಾವುದನ್ನು ಅತ್ಯಂತ ಸಂಕ್ಷೇಪವಾಗಿ (ಹೇಳಿ-ದ್ದಾರೋ) ಅದನ್ನು ಅನುವ್ಯಾಖ್ಯಾನದಲ್ಲಿ ವಿವರಿಸುತ್ತಾರೆ. ಗುರೂಂಶ್ಚಾಪಿ ಎಂಬಲ್ಲಿರುವ ಅಪಿಶಬ್ದದಿಂದ ವಿಶೇಷಣಾಂತರವನ್ನು ಸಮುಚ್ಚಯ ಮಾಡಬೇಕು ಎಂದಷ್ಟೇ ಭಾಷ್ಯದಲ್ಲಿ ಸೂಚನೆ ಮಾಡಿದರು. ಅದರ ವಿವರಣೆಯನ್ನೇ 'ಅಸ್ಯೋದ್ಭವಾದಿದಂ' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಮಾಡಿರುತ್ತಾರೆ. ನಾರಾಯಣನಲ್ಲಿ ತಿಳಿಯಬೇಕಾದ ಉದ್ಭವಾದಿದತ್ವ ಮೊದಲಾದ ಗುಣಗಳನ್ನು ಕೂಡ ವಿವಕ್ಷಿಸಬೇಕು. ಇದರಂತೆ ಮಾಂತ್ರವರ್ಣಿಕೆಯ ಸಮಾಖ್ಯೆಯನ್ನು ಭಾಷ್ಯದಲ್ಲಿ ಸಂಕ್ಷೇಪವಾಗಿ ಹೇಳಿದ್ದಾರೆ. ಅನು-ವ್ಯಾಖ್ಯಾನದಲ್ಲಿ ಅತ್ಯಂತ ವಿಸ್ತಾರವಾಗಿ ನಿರೂಪಣೆ ಮಾಡಿದ್ದಾರೆ. 'ತತ್ರ ಸತ್ಯತ್ವಂ ಸೃಷ್ಟ್ಯನ್ನ-ಪ್ರಾಣಯೋರಪಿ' ಇತ್ಯಾದಿಯಾಗಿ ಸತ್ಯತ್ವದ ವಿವರಣೆಗಾಗಿಯೇ ಅನ್ನಮಯಪ್ರಕರಣವು ಹೊರಟದೆ ಇತ್ಯಾದಿಯಾಗಿ ನಿರೂಪಣೆ ಮಾಡುತ್ತಾರೆ.

''ಸಂಕ್ಷೇಪಃ'' – ಅತ್ಯಂತ ವಿಸ್ತಾರವಾಗಿ ಹೇಳಿದ್ದನ್ನು ಅನುವ್ಯಾಖ್ಯಾನದಲ್ಲಿ ಬುದ್ಧಿಯ ಆರೂಢ-ಕ್ಯೋಸ್ಕರ ಸಂಕ್ಷೇಪಮಾಡಿ ಹೇಳುತ್ತಾರೆ. ಉದಾಹರಣೆ – ಪ್ರಥಮಾಧ್ಯಾಯದ ತೃತೀಯಪಾದದ ಅರ್ಥವನ್ನು ದ್ವಿತೀಯಾಧ್ಯಾಯದ ಚತುರ್ಥಪಾದದ ಅರ್ಥವನ್ನು ತೃತೀಯಾಧ್ಯಾಯದ ಪ್ರಥಮಪಾದದ ಅರ್ಥವನ್ನು ಚತುರ್ಥಾಧ್ಯಾಯದ ದ್ವಿತೀಯಪಾದದ ಅರ್ಥವನ್ನು ಅನುವ್ಯಾಖ್ಯಾನದಲ್ಲಿ ಕೇವಲ ಪೂರ್ವಪಕ್ಷನ್ಯಾಯ ಸಿದ್ಧಾಂತನ್ಯಾಯಗಳನ್ನು ಹೇಳುವ ಮೂಲಕ ಸಂಕ್ಷೇಪ ಮಾಡಿದ್ದಾರೆ.

'ವಿಕ್ಷಿಪ್ತಸ್ಯ' – ಭಾಷ್ಯದಲ್ಲಿ ವಿಕ್ಷೇಪವಾಗಿ ಹೇಳಿದ್ದನ್ನು ಅನುವ್ಯಾಖ್ಯಾನದಲ್ಲಿ ಏಕೀಕರಣ ಮಾಡಿದ್ದಾರೆ. ಉದಾಹರಣೆ – ಶೇಷಮಾರ್ಗ ಗರುಡಮಾರ್ಗದ ಬಗ್ಗೆ ಭಾಷ್ಯದಲ್ಲಿ ಅಲ್ಲಲ್ಲಿ ಉದಾಹರಣೆ ಹೇಳುವ ಮೂಲಕ ಸಮರ್ಥಿಸಿದ್ದಾರೆ. ಅದನ್ನು ಅನುವ್ಯಾಖ್ಯಾನದಲ್ಲಿ 'ಸೋಮಸ್ತು ವಾರೀಶಯುತಃ' ಇತ್ಯಾದಿಯಾಗಿ ಏಕೀಕರಣ ಮಾಡಿದ್ದಾರೆ.

'ಉಕ್ತಸ್ಯ ಉಪಪಾದನಮ್' – ಭಾಷ್ಯದಲ್ಲಿ ಆಕಾಶಾದ್ಯಧಿಕರಣದಲ್ಲಿ ಅಭ್ಯಧಿಕಾಶಂಕೆಯನ್ನು ತೋರಿಸಿರುವುದಿಲ್ಲ. ಆದರೆ ಅನುವ್ಯಾಖ್ಯಾನದಲ್ಲಿ 'ಚೇಷ್ಟಾ ಹಿ ಚೇತನಾನಾಂ ಸಾ ಭವೇತ್ ತತ್ತ್ವಾದತಃ' ಇತ್ಯಾದಿವಾಕ್ಯದಿಂದ ಅಭ್ಯಧಿಕಾಶಂಕೆಯನ್ನು ತೋರಿಸಿದ್ದಾರೆ. ಆದ್ದರಿಂದ ಭಾಷ್ಯದಲ್ಲಿ ಹೇಳಿದ್ದರ ಉಪಪಾದನೆಯನ್ನು ಅನುವ್ಯಾಖ್ಯಾನದಲ್ಲಿ ಮಾಡಿದಂತಾಯಿತು.

'ಅಪವ್ಯಾಖ್ಯಾನನಿರಾಸೇನ' – ಮೊದಲನೆಯ ಅಧಿಕರಣದಲ್ಲೇ 'ಬಂಧಮಿಥ್ಯಾತ್ವಂ ನೈವಮುಕ್ತಿರಪೇಕ್ಷತೇ' ಇತ್ಯಾದಿಯಾಗಿ ಅಪವ್ಯಾಖ್ಯಾನವನ್ನು ನಿರಾಕರಣೆ ಮಾಡುವ ಮೂಲಕ ಸ್ವವ್ಯಾಖ್ಯಾನವನ್ನು ದೃಢೀಕರಣ ಮಾಡಿದ್ದಾರೆ.

ಟೀಕೆಯಲ್ಲಿ 'ಇತ್ಯಾದಿ' ಎಂದಿದ್ದಾರೆ. ಇಲ್ಲಿರುವ 'ಆದಿ'ಪದದಿಂದ ಎರಡನೆಯ ಅಧ್ಯಾಯದಲ್ಲಿ ಪ್ರಮಾಣದ ಲಕ್ಷಣದ ಹೇಳುವಿಕೆ ಮೊದಲಾದವುಗಳನ್ನು ವಿವಕ್ಷಿಸಬೇಕು. ಈ ಪ್ರಮಾಣಲಕ್ಷಣಾದಿಗಳ ಉಕ್ತಿಯು ಅನುಕ್ತಾಂಶೋಕ್ತಿಯಲ್ಲಿ ಅಥವಾ ಉಕ್ತಸ್ಯೋಪಪಾದನೆಯಲ್ಲಿ ಸೇರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಹಿಂದೆ ಹೇಳಿದ ಉದಾಹರಣೆಯು ಕೇವಲ ಸೂತ್ರಾರ್ಥವಿಷಯಕವಾಗಿದೆ. ಈ ಪ್ರಮಾಣ-ಲಕ್ಷಣಾದಿಗಳ ಉಕ್ತಿಯು ಸೂತ್ರಾರ್ಥವಿಷಯಕವಲ್ಲ. ಭಾಷ್ಯಾರ್ಥವಿಷಯಕವಾಗಿವೆ. ಆದ್ದರಿಂದ ಅನುಕ್ತಾಂಶೋಕ್ತಿಯಿಂದ ಅಥವಾ ಉಕ್ತಸ್ಯೋಪಪಾದನದಿಂದ ಗತಾರ್ಥತಾದೋಷವು ಬರುವುದಿಲ್ಲ.

## ಸುಧಾಪರಿಮಳಸಾರ

ಅನುವ್ಯಾಖ್ಯಾನದಲ್ಲಿ ಹೇಳಿದ 'ಸ್ವಯಂ ಕೃತಾಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟಾರ್ಥತಃ' ಎಂಬುದರ ವಿವರಣೆಯನ್ನು ಈ ಭಾಗದಲ್ಲಿ ಮಾಡಲಾಗಿದೆ.

ಕೆಲವೆಡೆ ಭಾಷ್ಯದಲ್ಲಿ ಅತಿಸಂಕ್ಷೇಪಗೊಳಿಸಿರುವ ವಿಷಯವನ್ನು ಇಲ್ಲಿ ವಿವರಿಸಲಾಗಿದೆ. ಉದಾಹರಣೆ : ಭಾಷ್ಯದ ಮಂಗಲಪದ್ಯದಲ್ಲಿ ತುಂಬಾ ಸಂಕ್ಷೇಪವಾಗಿರುವ ವಿಷಯಗಳನ್ನು ಅನುವ್ಯಾಖ್ಯಾನದ ಮಂಗಲಪದ್ಯದಲ್ಲಿ ವಿವರಿಸಲಾಗಿದೆ. ಇದನ್ನು ಇಲ್ಲಿಯೇ ಮುಂದೆ ನೋಡಬಹುದು.

ಕೆಲವು ಕಡೆ ಭಾಷ್ಯದಲ್ಲಿ ಅತಿವಿಸ್ತೃತವಾಗಿ ಹೇಳಿದುದರಿಂದ ಬುದ್ಧಿಗೆ ಹತ್ತದಂತಿರುವ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಲಾಗಿದೆ. ಉದಾಹರಣೆ: ಕೆಲವು ಪಾದದ ವಿಷಯಗಳನ್ನು ಯುಕ್ತಿಗಳನ್ನು ಸಂಗ್ರಹವಾಗಿ ಹೇಳಲಾಗಿದೆ.

ಕೆಲವೊಮ್ಮೆ ಭಾಷ್ಯದಲ್ಲಿ ಅಲ್ಲಲ್ಲಿ ಬಿಡಿಬಿಡಿಯಾಗಿ ಹೇಳಿರುವುದನ್ನು ಇಲ್ಲಿ ಒಂದು ಕಡೆ ಕ್ರೋಡೀಕರಿಸಿ ಹೇಳಲಾಗಿದೆ. ಉದಾಹರಣೆ : ನಾಲ್ಕನೇ ಅಧ್ಯಾಯದ ಭಾಷ್ಯದಲ್ಲಿ ವಿಕ್ಷಿಪ್ತವಾಗಿ ಹೇಳಿದ ಗರುಡಶೇಷಮಾರ್ಗಾದಿ-

ಗಳನ್ನು ಇಲ್ಲಿ ಒಂದೆಡೆ ಸಂಕಲನ ಮಾಡಲಾಗಿದೆ. ಕೆಲವು ಕಡೆ ಭಾಷ್ಯದಲ್ಲಿ ಹೇಳಿದ ವಿಷಯದ ಮೇಲೆ ಹೆಚ್ಚಿನ ಶಂಕಾ ಮಾಡಿ ಉತ್ತರಿಸಿ ಭಾಷ್ಯದ ಅಭಿಪ್ರಾಯವನ್ನು ಸಮರ್ಥಿಸಲಾಗಿದೆ.

ಕೆಲವೆಡೆ ಅಪವ್ಯಾಖ್ಯಾನದ ನಿರಾಕರಣೆ ಮಾಡಿ ಭಾಷ್ಯದಲ್ಲಿ ತಿಳಿಸಿದ ವ್ಯಾಖ್ಯಾನವನ್ನು ದೃಢೀಕರಿಸಲಾಗಿದೆ. ಮುಂದಿನ ಗ್ರಂಥಭಾಗದಲ್ಲಿ ಅಲ್ಲಲ್ಲಿ ಅಪವ್ಯಾಖ್ಯಾನನಿರಾಕರಣೆ ಕಾಣಬಹುದು. ಆದಿಪದದಿಂದ ಕೆಲವೆಡೆ ಬರುವ ಬಾಧಕಗಳನ್ನು ಪರಿಹಾರ ಮಾಡಲಾಗಿದೆ ಎಂಬ ಅಂಶವನ್ನು ಗ್ರಹಣ ಮಾಡಬೇಕು.

'ಹೇಳಬೇಕಾದ ಎಲ್ಲಾ ವಿಷಯವನ್ನು ಒಂದೇ ಕಡೆ ಹೇಳುವುದನ್ನು ಬಿಟ್ಟು ಬೇರೆ ಬೇರೆ ಗ್ರಂಥಗಳೇಕೆ? ಎಂಬೀ ಆಕ್ಷೇಪ ಸರಿಯಲ್ಲ. ಯಾಕೆಂದರೆ ಮೊದಲು ಸಂಕ್ಷೇಪವಾಗಿ ಹೇಳಿ ಅನಂತರ ವಿವರಿಸಿ ಹೇಳಿದರೆ ಶ್ರೋತೃಗಳಿಗೆ ಚೆನ್ನಾಗಿ ತಿಳಿಯುವುದು. ಆದರಿಂದ ಪ್ರಯೋಜನವೂ ಇದೆ. ಭಾಗವತ ಪ್ರಥಮಸ್ಕಂಧತಾತ್ಪರ್ಯದಲ್ಲಿ ಹೀಗೆ ತಿಳಿಸಲಾಗಿದೆ—ಅನೇಕಬಾರಿ ಸ್ಮರಣೆಯಿಂದ ಬಹಳ ಫಲವಿರುವುದರಿಂದ ಜ್ಞಾನಿಗಳು ಪ್ರಮೇಯವನ್ನು ಮೊದಲು ಸಂಕ್ಷೇಪವಾಗಿ ಹೇಳಿ ಮತ್ತೆ ವಿಸ್ತಾರವಾಗಿ ಹೇಳುವರು.'

ಭಾಷ್ಯದ ಮೊದಲ ಮಂಗಲಪದ್ಯದಲ್ಲಿ ಸಂಕ್ಷೇಪವಾಗಿ ಹೇಳಿದ ಪ್ರಮೇಯವನ್ನು ಇಲ್ಲಿ ಮೊದಲ ಮೂರು ಶ್ಲೋಕಗಳಲ್ಲಿ ವಿವರಿಸಲಾಗಿದೆ—ಭಾಷ್ಯದ ಆದ್ಯಪದ್ಯದಲ್ಲಿ ಗುಣೈಃ ಸರ್ವೈಃ ಉದೀರ್ಣಂ ಎಂಬ ಪದಗಳಿಂದ ಭಗವಂತನು ಸಕಲಗುಣಪೂರ್ಣನು ಎಂದು ಹೇಳಲಾಗಿದೆ.ಭಗವಂತನು ಗುಣಗಳಿಂದ ಪೂರ್ಣ ಎಂದಾಗ ಗುಣ ಬೇರೆ, ಗುಣವುಳ್ಳ ಭಗವಂತ ಬೇರೆಯೇ ಎಂಬ ರೀತಿಯ ಭೇದದ ಶಂಕೆ ಬರುತ್ತದೆ. ಅದನ್ನು ಈ ಗ್ರಂಥದ ಮೊದಲ ಪದ್ಯದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬ ಪದದಿಂದ ಕೇವಲ ನಿರವಧಿಕವಾದ ಅಖಿಲಗುಣಗಳೇ ಶರೀರವಾಗಿವುಳ್ಳವನು ಎಂದು ಗುಣಗುಣಿಗಳ ಅಭೇದವನ್ನು ತಿಳಿಸುವ ಮೂಲಕ ಪರಿಹರಿಸಲಾಗಿದೆ. ಭಗವಂತನಿಗಿಂತ ಇತರರಾದ ದೇವತೆಗಳು ಮತ್ತು ಕರ್ಮಗಳೂ ಜ್ಞೇಯ ಮತ್ತು ಗಮ್ಯ ಆಗಿರುವಾಗ ಜ್ಞೇಯಂ, ಗಮ್ಯಂ ಎಂದು ಭಗವಂತನಿಗೆ ವಿಶೇಷವಾಗಿ ವಿಶೇಷಣ ಕೊಟ್ಟಿರುವುದು ಯಾಕೆಂಬ ಶಂಕೆಗೆ 'ಆಪ್ತತಮಮ್' ಎಂಬ ಪದದಿಂದ ಉತ್ತರಿಸಲಾಗಿದೆ. ಇತರ ದೇವತೆಗಳು ಕರ್ಮಾದಿಗಳು ವೇದಾದಿ ಏಕದೇಶದಿಂದ ಮಾತ್ರ ಪ್ರತಿಪಾದ್ಯ.

ಭಗವಂತನು ಸಕಲಸದಾಗಮಪ್ರತಿಪಾದ್ಯ. ಶ್ವೇತದ್ವೀಪಾದಿಸ್ಥರೂಪವಿಶೇಷಗಳ ಆಪ್ತಿರೂಪವಾದ ಮೋಕ್ಷ ಭಗವಂತನ ವಿಷಯದಲ್ಲಿಯೂ ಕೂಡುವುದು. ಆದುದರಿಂದ ಶ್ರೀಹರಿಯೇ ಜ್ಞೇಯ ಹಾಗೂ ಗಮ್ಯ.

ಭಾಷ್ಯದಲ್ಲಿ "ಗುರೂಂಶ್ಚಾಪಿ" ಎಂಬಲ್ಲಿರುವ ಅಪಿಶಬ್ದವು ಆ ಪದ್ಯದಲ್ಲಿ ಹೇಳದಿರುವ ಬೇರೆ ವಿಶೇ-ಷಣಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕೆಂದು ತಿಳಿಸುವುದು "ಅಸ್ಮೋದ್ಭವಾದಿದಂ", "ಅಶೇಷವಿಶೇಷತೋऽಪಿ ವಂದ್ಯಂ". "ಸದಾ ಮಮ ಪ್ರಿಯತಮಂ" ಎಂಬೀ ವಿಶೇಷಣಗಳು ಭಾಷ್ಯದ ಅಪಿಶಬ್ದದಿಂದ ಸೂಚಿಸಲ್ಪಟ್ಟವುಗಳು.

'ತಮೇವ ಶಾಸ್ತ್ರಪ್ರಭವಂ' ಎಂಬ ಪದ್ಯದಲ್ಲಿ ಈ ಬ್ರಹ್ಮಮೀಮಾಂಸಾಶಾಸ್ತ್ರಸಂಪ್ರದಾಯಪ್ರವರ್ತಕ-ನಾದುದರಿಂದ ನಾರಾಯಣನು ಗುರು. ಜಗತ್ತಿಗೆ ಈ ಶಾಸ್ತ್ರವನ್ನು ಉಪದೇಶಿಸುವ ಬ್ರಹ್ಮಾದಿಗಳಿಗೆ ಈ ಶಾಸ್ತ್ರವನ್ನು ಉಪದೇಶಿಸಿದವನಾದುದರಿಂದಲೂ ನಾರಾಯಣನು ಗುರು. ಶ್ರೀಮದ್ವರಿಗೆ ಸಾಕ್ಷಾತ್ ಆಗಿ ಸಕಲಶಾಸ್ತ್ರವನ್ನು ಉಪದೇಶಿಸಿರುವವನಾದುದರಿಂದಲೂ ನಾರಾಯಣನು ವಿಶೇಷವಾಗಿ ಗುರು ಎಂದು ನಾನಾಬಗೆಯ ಗುರುತ್ವವನ್ನು ನಾರಾಯಣನಲ್ಲಿ ಗುರುತಿಸಲಾಗಿದೆ. ಹೀಗೆ ಗುರುಗಳಾಗಿರುವ ಬಗೆಯ ಅನೇಕತೆಯನ್ನು ಭಾಷ್ಯದ ಪದ್ಯದಲ್ಲಿರುವ 'ಗುರೂನ್' ಎಂಬ ಬಹುವಚನಪದವು ತಿಳಿಸುತ್ತದೆ. ಭಾಷ್ಯದಲ್ಲಿ ''ಗುರೂಂಶ್ಚಾಪಿ'' ಗುರುಗಳೂ ಆಗಿರುವ ನಾರಾಯಣನನ್ನು ಎಂದು ಹೇಳುವ ಮೂಲಕ ಅಪಿಶಬ್ದದಿಂದ ಶ್ರೀಮದ್ವರಿಗೆ ಗುರುಗಳು ಬೇರೆಯಲ್ಲ, ದೇವತೆ ಬೇರೆಯಲ್ಲ ಎಂದು ಸೂಚಿಸಲಾಗಿದೆ; ಗುರುದೇವತಾಭೇದದ ವಿಷಯದಲ್ಲಿ ತನ್ನ ಅರುಚಿಯನ್ನು ಅಪಿಶಬ್ದದಿಂದ ಆಚಾರ್ಯರು ಸೂಚಿಸಿರುವರು. ಆ ಅಭಿಪ್ರಾಯವನ್ನೇ 'ತಮೇವ' ಎಂಬೀ ಪದ್ಯದಲ್ಲಿ 'ನಾನಾರೀತಿಯಿಂದ ಗುರುವಾದ ಆ 'ನಾರಾಯಣನನ್ನೇ ನಮಸ್ಕರಿಸಿ' ಎಂದು ಹೇಳುವ ಮೂಲಕ ಇಲ್ಲಿ ಆಚಾರ್ಯರು ವಿವರಿಸಿರುವರು.

ಭಾಷ್ಯದಲ್ಲಿ 'ನತ್ವಾ' (ನಮಸ್ಕರಿಸಿ) ಎಂದು ಸಾಮಾನ್ಯವಾಗಿ ಹೇಳಿರುವುದನ್ನೇ ಇಲ್ಲಿ ಮೊದಲ ಪದ್ಯದಲ್ಲಿ 'ಸನ್ನಮಾಮಿ' ಎಂದು, ಎರಡನೇ ಪದ್ಯದಲ್ಲಿ 'ಪ್ರಣಮ್ಯ' ಎಂದು ಸಮ್, ಪ್ರ ಎಂಬ ಪದಗಳ ಮೂಲಕ (ಸಮಿತಿ ಭಕ್ತ್ಯಾದ್ಯುಪೇತತ್ವಲಕ್ಷಣೇನ ಪ್ರಕರ್ಷೇಣ ನತ್ವಾ) ಭಕ್ತ್ಯಾದಿಪೂರ್ವಕ ನಮಿಸಿ ಎಂದು ವಿವರಿಸಲಾಗಿದೆ. ಕೇವಲ ನಮಸ್ಕಾರದಿಂದ ಅಭೀಷ್ಟಸಿದ್ಧಿಯಾಗುವುದಿಲ್ಲವಷ್ಟೆ. ಭಾಷ್ಯದಲ್ಲಿ 'ಸೂತ್ರಾರ್ಥ ಉಚ್ಯತೇ' ಎಂಬಲ್ಲಿ ಸೂತ್ರಶಬ್ದಕ್ಕೆ ಯಾವುದೇ ವಿಶೇಷಣವಾಚಕವಾದ ಉಪಪದವನ್ನು ಬಳಸದೆ 'ಸೂತ್ರಾರ್ಥವು ಹೇಳಲ್ಪಡುತ್ತದೆ.' ಎಂದು ಹೇಳುವ ಮೂಲಕ ನಿರುಪಪದ ಸೂತ್ರಪದವಾಚ್ಯವಾದ ಬ್ರಹ್ಮಮೀಮಾಂಸಾವೇ ಸರ್ವೋತ್ತಮಪ್ರಮಾಣ ಎಂದು ಸೂಚಿಸಲ್ಪಟ್ಟಿದೆ. ಸೂತ್ರಗಳ ಸರ್ವೋತ್ತಮಪ್ರಾಮಾಣ್ಯವನ್ನೇ 'ಪರಮಾಖ್ಯವಿದ್ಯಾವ್ಯಾಖ್ಯಾಂ' ಎನ್ನುವ ಮೂಲಕ ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಸಿಕೊಡುವುದರಿಂದ ಬ್ರಹ್ಮಸೂತ್ರವು ಸರ್ವೋತ್ತಮಪ್ರಮಾಣ ಎಂದು ವಿವರಿಸಲಾಗಿದೆ.

ಭಾಷ್ಯದಲ್ಲಿ 'ದ್ವಾಪರೇ ಸರ್ವತ್ರ.....' ಎಂಬ ಆರಂಭದ ಗ್ರಂಥಭಾಗದಲ್ಲಿ ಬ್ರಹ್ಮಸೂತ್ರರಚನೆಯ ಹಿನ್ನೆಲೆಯನ್ನು ತಿಳಿಸಲಾಗಿದೆ. ಆದರ 'ಸೂತ್ರಾರ್ಥವನ್ನು ಹೇಳುತ್ತೇನೆಂದು ಪ್ರತಿಜ್ಞೆ ಮಾಡಿ ಸೂತ್ರರಚನೆಯ ಹಿನ್ನೆಲೆಯನ್ನು ಹೇಳುವುದು ಉಪಯುಕ್ತವಾಗುವುದಿಲ್ಲ? ಈ ಆಕ್ಷೇಪ ಸರಿಯಲ್ಲ. ಆಪ್ತಮೂಲತ್ವ, ಶ್ರುತಿ-ಯುಕ್ತಿಮೂಲತ್ವ ಮೊದಲಾದ ಯುಕ್ತಿಗಳಿಂದಲೂ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮ ಪ್ರಾಮಾಣ್ಯವನ್ನು ಸಮರ್ಥಿಸಲು 'ದ್ವಾಪರೇ.....' ಎಂದು ಸೂತ್ರಗತಿಯ ಹಿನ್ನೆಲೆಯನ್ನು ವಿವರಿಸಲಾಗಿದೆ. ಈ ಅಭಿಪ್ರಾಯವನ್ನು ಇಲ್ಲಿ 'ಗುರುರ್ಗುರೂಣಾಂ ..... । ಎಂಬಿವೇ ಮೊದಲಾದ ಪದ್ಯಗಳಿಂದ ತಿಳಿಸಲಾಗಿದೆ.

## ನೆನಪಿಡಿ

* ಒಮ್ಮೆ ಸೂತ್ರಕ್ಕೆ ಭಾಷ್ಯರೂಪದಿಂದ ವ್ಯಾಖ್ಯಾನ ಮಾಡಿದ್ದಾಗಿದೆ. ಪುನಃ ಅದೇ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವೇಕೆ?

* ಭಾಷ್ಯದಲ್ಲಿ ಇನ್ನೂ ಹತ್ತಾರುಬಗೆಯಲ್ಲಿ ಸ್ಪಷ್ಟೀಕರಣವು ಬೇಕಾಗಿದೆ. ಅದಕ್ಕಾಗಿ ಅನುವ್ಯಾಖ್ಯಾನವೆಂಬ ಮತ್ತೊಂದು ವ್ಯಾಖ್ಯಾನವು ಅತ್ಯಂತ ಅನಿವಾರ್ಯ.

* ಈ ಅನುವ್ಯಾಖ್ಯಾನದಲ್ಲಿ ಒಟ್ಟು 7ಬಗೆಯ ಸ್ಪಷ್ಟೀಕರಣಗಳಿವೆ. (1) ಹೇಳದೇ ಇರುವುದನ್ನು ಹೇಳುವಿಕೆ (2) ಅತಿಸಂಕ್ಷಿಪ್ತವಾದದ್ದರ ವಿಸ್ತಾರ (3) ಅತಿವಿಸ್ತಾರದ ಸಂಕ್ಷೇಪ (4) ವಿಕ್ಷಿಪ್ತದ ಏಕೀಕರಣ (5) ಹೇಳಿದ್ದನ್ನೇ ಸಮರ್ಥಿಸುವಿಕೆ (6) ಅಪವ್ಯಾಖ್ಯಾನ ನಿರಾಸದಿಂದ ದೃಢೀಕರಣ (7) ಅಸಂಗತಿ ಪರಿಹಾರ ಎಂದು. ಇವುಗಳ ಸ್ಪಷ್ಟೀಕರಣಕ್ಕಾಗಿ ಅನುವ್ಯಾಖ್ಯಾನ ಹೊರಟಿದೆ.

* ಒಮ್ಮೆ ಸಂಕ್ಷೇಪವಾಗಿ ಹೇಳಬೇಕು; ಪುನಃ ವಿಸ್ತಾರ ಮಾಡಬೇಕು. ಆಗಲೇ ಶ್ರೋತೃಗಳಿಗೆ ಅನುಕೂಲವಾಗುತ್ತದೆ. ಅದಕ್ಕಾಗಿ ಭಾಷ್ಯ ಹಾಗೂ ಅನುವ್ಯಾಖ್ಯಾನಗಳನ್ನು ಒಟ್ಟಿಗೇ ಸೇರಿಸಿಲ್ಲ.

## ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆ ಏಕಿಲ್ಲ?

**ಶ್ರೀಮನ್ನ್ಯಾಯಸುಧಾ – ತಥಾಽಪಿ ನೇದಂ ಶಾಸ್ತ್ರಂ ವ್ಯಾಕರ್ತವ್ಯಂ ಮಂಗಲಾಚರಣರಹಿತತ್ವಾತ್ । ಮಂಗಲಾಚರಣಪುರಃಸರಾಣಿ ಖಲು ಕರ್ಮಾಣಿ ನಿರಂತರಾಯಂ ಪರಿಸಮಾಪ್ಯಂತೇ ಪ್ರಚೀಯಂತೇ ಚ । ನ ಚ ಅಕೃತಮಂಗಲಾಚರಣಾನಾಮಪಿ ಕಾರ್ಯಪರಿಸಮಾಪ್ತ್ಯಾದಿದರ್ಶನಾತ್, ಕೃತಮಂಗಲಾಚರಣಾನಾಮಪಿ ತದಭಾವೋಪಲಂಭಾನ್ನ ತದ್ಧೇತುತ್ವಮಸ್ಯ ಇತಿ ಸಾಂಪ್ರತಮ್ । ತಥಾ ಸತಿ ಕಾರೀರ್ಯಾದೇರಪಿ ವೃಷ್ಟ್ಯಾದಿಹೇತುತ್ವಾಭಾವಾಪತ್ತೇಃ ।**

ಆದರೂ ಕೂಡ ಈ ಶಾಸ್ತ್ರವು ವ್ಯಾಖ್ಯಾನಕ್ಕೆ ಅರ್ಹವಾಗಿರುವುದಿಲ್ಲ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆಯೇ ಇರುವುದಿಲ್ಲ. ಯಾವ

ಕರ್ಮಗಳು ಮಂಗಲಾಚರಣೆಯಿಂದ ಕೂಡಿರುತ್ತವೋ ಅವುಗಳು ಮಾತ್ರ ವಿಘ್ನಗಳಿಲ್ಲದೇ ಪರಿಸಮಾಪ್ತಿಯನ್ನು ಹೊಂದಲು ಸಾಧ್ಯವಾಗುತ್ತವೆ. ಪ್ರಸಿದ್ಧಿಯನ್ನೂ ಕೂಡ ಹೊಂದಲು ಅರ್ಹವಾಗುತ್ತವೆ.

ಪ್ರಶ್ನೆ – ಕೆಲವೆಡೆ ಮಂಗಲಾಚರಣೆ ಇರುವುದಿಲ್ಲ; ಆದರೂ ಕೂಡ ಕಾರ್ಯವು ಪರಿಸಮಾಪ್ತಿಯನ್ನು ಹೊಂದಿರುವುದು ಕಂಡಿದೆ. ಮತ್ತು ಇನ್ನು ಕೆಲವೆಡೆ ಮಂಗಲಾಚರಣೆ ಇರುತ್ತದೆ. ಆದರೆ ಕಾರ್ಯವು ಪರಿಸಮಾಪ್ತಿಯೇ ಆಗಿರುವುದಿಲ್ಲ. ಆದ್ದರಿಂದ ಕಾರ್ಯದ ಪರಿಸಮಾಪ್ತಿಯನ್ನು ಕುರಿತು ಮಂಗಲಾಚರಣೆಯು ಕಾರಣವಾಗಿದೆ ಎಂದು ಹೇಳುವುದು ಯುಕ್ತವಲ್ಲ?

ಉತ್ತರ – ಈ ಪ್ರಶ್ನೆಯು ತಪ್ಪು; ಏಕೆಂದರೆ ಹೀಗೆ ಹೇಳಿದರೆ ಕಾರೀರಿಯಾಗ ಮಾಡು-ವುದರಿಂದ ಮಳೆ ಬರುತ್ತದೆಂದು ಶ್ರುತಿ ಹೇಳುತ್ತಿದೆ. ಕಾರೀರಿಯಾಗಕ್ಕೆ ವೃಷ್ಟಿಕಾರಣತ್ವವು ಕೂಡ ಇಲ್ಲದೇ ಇರಬೇಕಾಗುತ್ತದೆ.

## 'ತತ್ರ ತಾರಾಥಮೂಲತ್ವಂ' ಎಂಬ ಅನುವ್ಯಾಖ್ಯಾನಕ್ಕೆ ಅವತಾರಿಕೆ

ಪರಿಮಳ – 'ತತ್ರ' ಇತ್ಯಾದಿಮೂಲಮವತಾರಯತಿ – ತಥಾऽಪಿ ಇತ್ಯಾದಿನಾ ॥ 'ಪ್ರಾಮಾಣ್ಯೇ ಸತ್ಯಪಿ' ಇತ್ಯರ್ಥಃ । ಮಂಗಲಾಚರಣೇತಿ ॥ 'ಮಂಗಲಾಚರಣಪೂರ್ವ-ಮಕೃತತ್ವಾತ್' ಇತ್ಯರ್ಥಃ । ಹೇತೋರಪ್ರಯೋಜಕತ್ವಮಾಶಂಕ್ಯ, ಸಮಾಪ್ತಪ್ರಚಯ-ಭಂಗೋ ವಿಪಕ್ಷೇ ಬಾಧಕ ಇತಿ ಭಾವೇನ ತಯೋರ್ಮಂಗಲಹೇತುಕತ್ವಮಾಹ – ಮಂಗಲಾಚರಣಪುರಸ್ಸರಾಣೇತಿ ॥ ನಿರಂತರಾಯಂ = 'ನಿರ್ವಿಘ್ನಂ ಯಥಾ ಭವತಿ ತಥಾ' ಇತ್ಯರ್ಥಃ। ಪ್ರಚೀಯಂತೇ = 'ಅವಿಚ್ಛಿನ್ನಪಾರಂಪರ್ಯರೂಪಸಂಪ್ರದಾಯವಂತಿ ಭವಂತಿ' ಇತ್ಯರ್ಥಃ । ಮಂಗಲಸ್ಯ ಹೇತುತ್ವಾಸಿದ್ಧಿಮಾಶಂಕ್ಯ ನಿರಾಹ – ನಚೇತಿ ॥ ಅಕೃತ-ಮಂಗಲಾಚರಣಾನಾಂ ಕೃತಮಂಗಲಾಚರಣಾನಾಂ ಚೇತಿ ಚ, ಬಹುವ್ರೀಹಿಃ। 'ಪುರುಷಾ-ಣಾಮ್' ಇತ್ಯರ್ಥಃ। ಕಾರ್ಯೇತಿ ॥ 'ಭೋಜನಪಚನಾದಿಕಾರ್ಯಪರಿಸಮಾಪ್ತಿಪ್ರಚಯ-

## ನೆನೆಪಿಡಿ

* ಒಮ್ಮೆ ಸೂತ್ರಕ್ಕೆ ಭಾಷ್ಯರೂಪದಿಂದ ವ್ಯಾಖ್ಯಾನ ಮಾಡಿದ್ದಾಗಿದೆ. ಪುನಃ ಅದೇ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವೇಕೆ?

* ಭಾಷ್ಯದಲ್ಲಿ ಇನ್ನೂ ಹತ್ತಾರುಬಗೆಯಲ್ಲಿ ಸ್ಪಷ್ಟೀಕರಣವು ಬೇಕಾಗಿದೆ. ಅದಕ್ಕಾಗಿ ಅನುವ್ಯಾಖ್ಯಾನವೆಂಬ ಮತ್ತೊಂದು ವ್ಯಾಖ್ಯಾನವು ಅತ್ಯಂತ ಅನಿವಾರ್ಯ.

* ಈ ಅನುವ್ಯಾಖ್ಯಾನದಲ್ಲಿ ಒಟ್ಟು 7ಬಗೆಯ ಸ್ಪಷ್ಟೀಕರಣಗಳಿವೆ. (1) ಹೇಳದೇ ಇರುವುದನ್ನು ಹೇಳುವಿಕೆ (2) ಅತಿಸಂಕ್ಷಿಪ್ತವಾದದ್ದರ ವಿಸ್ತಾರ (3) ಅತಿವಿಸ್ತಾರದ ಸಂಕ್ಷೇಪ (4) ವಿಕ್ಷಿಪ್ತದ ಏಕೀಕರಣ (5) ಹೇಳಿದ್ದನ್ನೇ ಸಮರ್ಥಿಸುವಿಕೆ (6) ಅಪವ್ಯಾಖ್ಯಾನ ನಿರಾಸದಿಂದ ದೃಢೀಕರಣ (7) ಅಸಂಗತಿ ಪರಿಹಾರ ಎಂದು. ಇವುಗಳ ಸ್ಪಷ್ಟೀಕರಣಕ್ಕಾಗಿ ಅನುವ್ಯಾಖ್ಯಾನ ಹೊರಟಿದೆ.

* ಒಮ್ಮೆ ಸಂಕ್ಷೇಪವಾಗಿ ಹೇಳಬೇಕು; ಪುನಃ ವಿಸ್ತಾರ ಮಾಡಬೇಕು. ಆಗಲೇ ಶ್ರೋತೃಗಳಿಗೆ ಅನುಕೂಲವಾಗುತ್ತದೆ. ಅದಕ್ಕಾಗಿ ಭಾಷ್ಯ ಹಾಗೂ ಅನುವ್ಯಾಖ್ಯಾನಗಳನ್ನು ಒಟ್ಟಿಗೇ ಸೇರಿಸಿಲ್ಲ.

## ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆ ಏಕಿಲ್ಲ?

**ಶ್ರೀಮನ್ನ್ಯಾಯಸುಧಾ – ತಥಾಽಪಿ ನೇದಂ ಶಾಸ್ತ್ರಂ ವ್ಯಾಕರ್ತವ್ಯಂ ಮಂಗಲಾಚರಣರಹಿತತ್ವಾತ್ । ಮಂಗಲಾಚರಣಪುರಃಸರಾಣಿ ಖಲು ಕರ್ಮಾಣಿ ನಿರಂತರಾಯಂ ಪರಿಸಮಾಪ್ಯಂತೇ ಪ್ರಚೀಯಂತೇ ಚ । ನ ಚ ಅಕೃತಮಂಗಲಾಚರಣಾನಾಮಪಿ ಕಾರ್ಯಪರಿಸಮಾಪ್ತ್ಯಾದಿದರ್ಶನಾತ್, ಕೃತಮಂಗಲಾಚರಣಾನಾಮಪಿ ತದಭಾವೋಪಲಂಭಾನ್ನ ತದ್ಧೇತುತ್ವಮಸ್ಯ ಇತಿ ಸಾಂಪ್ರತಮ್ । ತಥಾ ಸತಿ ಕಾರೀರ್ಯಾದೇರಪಿ ವೃಷ್ಟ್ಯಾದಿಹೇತುತ್ವಾಭಾವಾಪತ್ತೇಃ ।**

ಆದರೂ ಕೂಡ ಈ ಶಾಸ್ತ್ರವು ವ್ಯಾಖ್ಯಾನಕ್ಕೆ ಅರ್ಹವಾಗಿರುವುದಿಲ್ಲ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆಯೇ ಇರುವುದಿಲ್ಲ. ಯಾವ

ಕರ್ಮಗಳು ಮಂಗಲಾಚರಣೆಯಿಂದ ಕೂಡಿರುತ್ತವೋ ಅವುಗಳು ಮಾತ್ರ ವಿಘ್ನಗಳಿಲ್ಲದೇ ಪರಿಸಮಾಪ್ತಿಯನ್ನು ಹೊಂದಲು ಸಾಧ್ಯವಾಗುತ್ತವೆ. ಪ್ರಸಿದ್ಧಿಯನ್ನೂ ಕೂಡ ಹೊಂದಲು ಅರ್ಹವಾಗುತ್ತವೆ.

ಪ್ರಶ್ನೆ – ಕೆಲವೆಡೆ ಮಂಗಲಾಚರಣೆ ಇರುವುದಿಲ್ಲ; ಆದರೂ ಕೂಡ ಕಾರ್ಯವು ಪರಿಸಮಾಪ್ತಿಯನ್ನು ಹೊಂದಿರುವುದು ಕಂಡಿದೆ. ಮತ್ತು ಇನ್ನು ಕೆಲವೆಡೆ ಮಂಗಲಾಚರಣೆ ಇರುತ್ತದೆ. ಆದರೆ ಕಾರ್ಯವು ಪರಿಸಮಾಪ್ತಿಯೇ ಆಗಿರುವುದಿಲ್ಲ. ಆದ್ದರಿಂದ ಕಾರ್ಯದ ಪರಿಸಮಾಪ್ತಿಯನ್ನು ಕುರಿತು ಮಂಗಲಾಚರಣೆಯು ಕಾರಣವಾಗಿದೆ ಎಂದು ಹೇಳುವುದು ಯುಕ್ತವಲ್ಲ?

ಉತ್ತರ – ಈ ಪ್ರಶ್ನೆಯು ತಪ್ಪು; ಏಕೆಂದರೆ ಹೀಗೆ ಹೇಳಿದರೆ ಕಾರೀರಿಯಾಗ ಮಾಡುವುದರಿಂದ ಮಳೆ ಬರುತ್ತದೆಂದು ಶ್ರುತಿ ಹೇಳುತ್ತಿದೆ. ಕಾರೀರಿಯಾಗಕ್ಕೆ ವೃಷ್ಟಿಕಾರಣತ್ವವು ಕೂಡ ಇಲ್ಲದೇ ಇರಬೇಕಾಗುತ್ತದೆ.

## 'ತತ್ರ ತಾರಾಥಮೂಲತ್ವಂ' ಎಂಬ ಅನುವ್ಯಾಖ್ಯಾನಕ್ಕೆ ಅವತಾರಿಕೆ

ಪರಿಮಳ – 'ತತ್ರ' ಇತ್ಯಾದಿಮೂಲಮವತಾರಯತಿ – ತಥಾऽಪಿ ಇತ್ಯಾದಿನಾ ॥ 'ಪ್ರಾಮಾಣ್ಯೇ ಸತ್ಯಪಿ' ಇತ್ಯರ್ಥಃ । ಮಂಗಲಾಚರಣೇತಿ ॥ 'ಮಂಗಲಾಚರಣಪೂರ್ವಮಕೃತತ್ವಾತ್' ಇತ್ಯರ್ಥಃ । ಹೇತೋರಪ್ರಯೋಜಕತ್ವಮಾಶಂಕ್ಯ, ಸಮಾಪ್ತಪ್ರಚಯಭಂಗೋ ವಿಪಕ್ಷೇ ಬಾಧಕ ಇತಿ ಭಾವೇನ ತಯೋರ್ಮಂಗಲಹೇತುಕತ್ವಮಾಹ – ಮಂಗಲಾಚರಣಪುರಸ್ಸರಾಣೀತಿ ॥ ನಿರಂತರಾಯಂ = 'ನಿರ್ವಿಘ್ನಂ ಯಥಾ ಭವತಿ ತಥಾ' ಇತ್ಯರ್ಥಃ। ಪ್ರಚೀಯಂತೇ = 'ಅವಿಚ್ಛಿನ್ನಪಾರಂಪರ್ಯರೂಪಸಂಪ್ರದಾಯವಂತಿ ಭವಂತಿ' ಇತ್ಯರ್ಥಃ । ಮಂಗಲಸ್ಯ ಹೇತುತ್ವಾಸಿದ್ಧಿಮಾಶಂಕ್ಯ ನಿರಾಹ – ನಚೇತಿ ॥ ಅಕೃತಮಂಗಲಾಚರಣಾನಾಂ ಕೃತಮಂಗಲಾಚರಣಾನಾಂ ಚೇತಿ ಚ, ಬಹುವ್ರೀಹಿಃ। 'ಪುರುಷಾಣಾಮ್' ಇತ್ಯರ್ಥಃ। ಕಾರ್ಯೇತಿ ॥ 'ಭೋಜನಪಚನಾದಿಕಾರ್ಯಪರಿಸಮಾಪ್ತಿಪ್ರಚಯ-

ದರ್ಶನಾತ್' ಇತ್ಯರ್ಥಃ । ಪರಮುಖೇನ ಸಮಾಧಿಂ ವಾಚಯಿತುಂ ಪ್ರತಿಬಂದೀಮಾಹ – ತಥಾ ಸತೀತಿ ॥ 'ವ್ಯತಿರೇಕಾದಿವ್ಯಭಿಚಾರೇಣ ಅಹೇತುತ್ವೇ ಸತಿ' ಇತ್ಯರ್ಥಃ । ಕಾರೀರೀ ನಾಮ 'ಶುಷ್ಯತ್ಸಸ್ಯ(ಸಂಜೀವನ)ವೃದ್ಧಿಕಾಮಃ ಕಾರೀರ್ಯಾ ಯಜೇತ' ಇತ್ಯುಕ್ತೇಷ್ಟಿವಿಶೇಷಃ। 'ಆದಿ'ಪದೇನ ಚ ಪುತ್ರೇಷ್ಟ್ಯಾದಿಃ। ತತ್ರಾಪಿ ಉಕ್ತವ್ಯಭಿಚಾರದ್ವಯದರ್ಶನಾದಿತಿ ಭಾವಃ।

'ತತ್ರ ತಾರಾಥಮೂಲತ್ವಂ' ಇತ್ಯಾದಿ ಅನುವ್ಯಾಖ್ಯಾನಕ್ಕೆ ''ತಥಾಪಿ'' ಇತ್ಯಾದಿಗ್ರಂಥದಿಂದ ಅವತಾರಿಕೆಯನ್ನು ನೀಡುತ್ತಿದ್ದಾರೆ. 'ಪ್ರಾಮಾಣ್ಯವಿದ್ದರೂ ಕೂಡ' ಎಂದು ಇದರ ಅರ್ಥ.

'ಮಂಗಲಾಚರಣರಹಿತತ್ವಾತ್'' – 'ಮಂಗಲಾಚರಣೆಯನ್ನು ಮಾಡುವ ಮೂಲಕ ರಚಿತ-ವಾಗಿರುವುದಿಲ್ಲವಾದ್ದರಿಂದ' ಎಂದರ್ಥ.

ಈ ಹೇತುವಿಗೆ ವ್ಯಾಖ್ಯೇಯತ್ವವೆಂಬ ಸಾಧ್ಯದಿಂದ ಅಪ್ರಯೋಜಕತ್ವವನ್ನು ಆಶಂಕಿಸಿ ಈ ಗ್ರಂಥದ ಪರಿಸಮಾಪ್ತಿ ಹಾಗೂ ಪ್ರಚಯಗಳು ಇಲ್ಲದಂತಾಗಲಿ. ಹೀಗೆ ವಿಪಕ್ಷದಲ್ಲಿ ಬಾಧಕವಿದೆ ಎಂಬ ಅಭಿಪ್ರಾಯದಿಂದ ಪ್ರಚಯ ಮತ್ತು ಪರಿಸಮಾಪ್ತಿಗಳಿಗೆ ಮಂಗಲಾಚರಣೆಯು ಕಾರಣ-ವಾಗಿದೆ ಎಂಬುದನ್ನು ''ಮಂಗಲಾಚರಣಪುರಃಸರಾಣಿ'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

'ನಿರಂತರಾಯಂ' – 'ವಿಘ್ನವು ಯಾವುದರಿಂದ ಪರಿಹಾರವಾಗುತ್ತದೋ ಅದರಿಂದ' ಎಂದರ್ಥ. 'ಪ್ರಚೀಯಂತೇ' – ಅವಿಚ್ಛಿನ್ನವಾದ ಪರಂಪರೆಯೆಂಬ ಸಂಪ್ರದಾಯವುಳ್ಳವುಗಳಾ-ಗುತ್ತವೆ ಎಂದರ್ಥ.

'ಮಂಗಲಾಚರಣೆಯು ಸಮಾಪ್ತಿಗೆ ಕಾರಣವೇ ಆಗಿರುವುದಿಲ್ಲ' ಎಂಬುದನ್ನು ಆಶಂಕಿಸಿ ''ನ ಚ'' ಇತ್ಯಾದಿವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಅಕೃತಮಂಗಲಾಚರಣಾನಾಂ' ಎಂಬಲ್ಲಿ ಮತ್ತು 'ಕೃತಮಂಗಲಾಚರಣಾನಾಂ' ಎಂಬಲ್ಲಿಯೂ ಬಹುವ್ರೀಹಿಸಮಾಸವನ್ನು ತಿಳಿಯಬೇಕು. ಆದ್ದರಿಂದ ಪುರುಷರಿಗೆ ಎಂಬರ್ಥವು ದೊರೆಯುತ್ತದೆ.

'ಕಾರ್ಯಪರಿಸಮಾಪ್ತ್ಯಾದಿದರ್ಶನಾತ್'' – ಮಂಗಲಾಚರಣೆಯು ಇಲ್ಲದಿದ್ದರೂ ಕೂಡ ಭೋಜನ, ಪಚನ ಮೊದಲಾದ ಕಾರ್ಯಗಳ ಪರಿಸಮಾಪ್ತಿಯಾಗುವುದು ಕಂಡಿದೆ; ಕೀರ್ತಿ

ದೊರಕುವುದು ಕೂಡ ಕಂಡಿದೆ. ಪ್ರತಿವಾದಿಯ ಮುಖದಿಂದಲೇ ಸಮಾಧಾನವನ್ನು ಹೇಳಿಸುವುದಕ್ಕಾಗಿ ಪ್ರತಿಬಂದೀಯನ್ನು ''ತಥಾ ಸತಿ'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

''ತಥಾ ಸತಿ'' – ಅನ್ವಯವ್ಯಭಿಚಾರ ವ್ಯತಿರೇಕವ್ಯಭಿಚಾರಗಳು ಇರುವುದರಿಂದ ಕಾರೀರಿಯಾಗಕ್ಕೆ ಕಾರಣತ್ವವಿಲ್ಲವೆಂದು ಹೇಳುವುದಾದರೆ ಎಂದರ್ಥ.

'ಶುಷ್ಕತ್ಸಸ್ಯ(ಸಂಜೀವನ)ವೃದ್ಧಿಕಾಮಃ ಕಾರೀರ್ಯಾ ಯಜೇತ' 'ಅನಾವೃಷ್ಟಿಯಿಂದ ಒಣಗಿದ ಸಸ್ಯಗಳಿಗೆ ಚಿಗುರಬೇಕೆಂದು ಬಯಸಿದವನು ಕಾರೀರಿಯಾಗವನ್ನು ಮಾಡಬೇಕು' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಇಷ್ಟಿವಿಶೇಷವೇ ಕಾರೀರಿ ಎಂದು ಕರೆಸಿಕೊಳ್ಳುತ್ತದೆ. 'ಆದಿ'ಪದದಿಂದ ಪುತ್ರಕಾಮೇಷ್ಟಿ ಮೊದಲಾದವುಗಳನ್ನು ಸಂಗ್ರಹಿಸಬೇಕು. ಅಲ್ಲಿಯೂ ಕೂಡ ಅನ್ವಯವ್ಯಭಿಚಾರ, ವ್ಯತಿರೇಕವ್ಯಭಿಚಾರಗಳು ಕಾಣಿಸುತ್ತವೆ ಎಂದಭಿಪ್ರಾಯ.

ವಿವರಣೆ – 'ಬ್ರಹ್ಮಮೀಮಾಂಸಾಶಾಸ್ತ್ರಂ ನ ವ್ಯಾಖ್ಯಾತವ್ಯಂ ಮಂಗಲಾಚರಣರಹಿತತ್ವಾತ್' ಎಂಬ ಅನುಮಾನದಲ್ಲಿ ಮಂಗಲಾಚರಣರಾಹಿತ್ಯವೆಂಬ ಹೇತುವಿರಲಿ; ವ್ಯಾಖ್ಯೇಯತ್ವವೇ ಇರಲಿ ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ಸಮಾಪ್ತಿಪ್ರಚಯಭಂಗವೆಂಬ ವಿಪಕ್ಷದಲ್ಲಿ ಬಾಧಕತರ್ಕವಿದೆ ಎಂಬುದಾಗಿ ಪರಿಮಳಕಾರರು ಹೇಳಿದ್ದಾರೆ. ಇದಕ್ಕೆ ಎರಡು ರೀತಿಯಲ್ಲಿ ಅರ್ಥವನ್ನು ತಿಳಿಯಬಹುದು.

(೧) ಒಂದು ವೇಳೆ ಮಂಗಲಾಚರಣಯಿಂದ ಶೂನ್ಯವಾದ ಬ್ರಹ್ಮಸೂತ್ರವನ್ನು ವ್ಯಾಖ್ಯಾನ ಮಾಡುವುದಾದರೆ ವ್ಯಾಖ್ಯಾನಕ್ಕೆ ಸಮಾಪ್ತಿ ಹಾಗೂ ಪ್ರಚಯಗಳು ಇಲ್ಲದೇ ಇರಬೇಕಾದೀತು. ಏಕೆಂದರೆ ವ್ಯಾಖ್ಯೇಯಗ್ರಂಥನಿಷ್ಠವಾದ ಮಂಗಲಾಚರಣೆಯು ವ್ಯಾಖ್ಯಾನನಿಷ್ಠವಾದ ಗ್ರಂಥದ ಸಮಾಪ್ತಿಗೂ ಕೂಡ ಕಾರಣವಾಗಿರುತ್ತದೆ.

(೨) ಅಥವಾ ಭಂಗಶಬ್ದಕ್ಕೆ ಅಭಾವ ಎಂದರ್ಥ. ಸಮಾಪ್ತಿ ಹಾಗೂ ಪ್ರಚಯಗಳು ಇಲ್ಲದೇ ಇರಬೇಕಾದೀತು? ಬ್ರಹ್ಮಸೂತ್ರಗಳಿಗೆ ಮಂಗಲಾಚರಣೆ ಇರುವುದಿಲ್ಲ. ಆದರೂ ಕೂಡ ವ್ಯಾಖ್ಯಾನವನ್ನು ಮಾಡುತ್ತೇವೆಂದು ಹೇಳಿದರೆ ಆ ಬ್ರಹ್ಮಸೂತ್ರಗಳಿಗೆ ಸಮಾಪ್ತಿಯು ಹಾಗೂ ಪ್ರಚಯ- ಗಳು ಇಲ್ಲದೇ ಹೋಗಬೇಕಾದೀತು. ಆದರೆ ಸಮಾಪ್ತಿಯಾಗಿರುವುದು ಪ್ರಚಯವಿರುವುದು ಕಾಣಸು- ತ್ತಿದೆ. ಸಮಾಪ್ತಿಪ್ರಚಯಗಳು ಇರುವುದರಿಂದ ಮಂಗಲಾಚರಣೆ ಇರಲೇಬೇಕು.

## ಮಂಗಲಾಚರಣೆ ಏಕೆ?

ವಾಕ್ಯಾರ್ಥಚಂದ್ರಿಕಾ – 'ತತ್ರ ತಾರಾಥಮೂಲತ್ವಮ್' ಇತ್ಯನುವ್ಯಾಖ್ಯಾನೇ, ತಾರಾಥ-ಯೋರ್ಮಾಂಗಲಿಕತ್ವೇನ ಏತತ್ಸೂತ್ರನಿವೇಶಿತಯೋಃ ಸರ್ವಶಾಸ್ತ್ರಾಂಗತಾಯಾಃ ಕಥಯಿಷ್ಯ-ಮಾಣತ್ವಾತ್ ಮಂಗಲಸ್ಯೈವ ಅಕರ್ತವ್ಯತ್ವೇಽನಿವೇಶನೀಯತ್ವೇ ವಾ ಮಾಂಗಲಿಕತ್ವೇನ ನಿವೇಶಸ್ಯ ಕಥಯಿತುಮ್ ಅಶಕ್ಯತಯಾ, ತಯೋರ್ಮಾಂಗಲಿಕತ್ವೇನ ನಿವೇಶಂ ವಕ್ತುಮ್, ಮಂಗಲಸ್ಯ ಕರ್ತವ್ಯತ್ವಂ ನಿವೇಶನೀಯತ್ವಂ ಚ ಶಂಕಾಮುಖೇನ ಉಪಪಾದಯತಿ – ತಥಾಽಪೀತಿ ॥

'ತತ್ರ ತಾರಾಥಮೂಲತ್ವಮ್' ಎಂಬ ಅನುವ್ಯಾಖ್ಯಾನಪದ್ಯವು ಮುಂದೆ ಪ್ರಸಕ್ತವಾಗುತ್ತದೆ. ತಾರ ಮತ್ತು ಅಥಶಬ್ದಗಳು ಮಾಂಗಲಿಕತ್ವೇನ ಸೂತ್ರಕಾರರು ನಿವೇಶ ಮಾಡಿದ್ದಾರೆ. ಇವೆರಡೂ ಸರ್ವಶಾಸ್ತ್ರಗಳ ಅಂಗವಾಗಿವೆ ಎಂಬುದನ್ನು ಉಪಪಾದನೆ ಮಾಡುವವರಿದ್ದಾರೆ. ಆದರೆ ಗ್ರಂಥಪ್ರಾರಂಭದಲ್ಲಿ ಮಂಗಲಾ-ಚರಣೆಯನ್ನು ಮಾಡುವ ಅವಶ್ಯಕತೆಯೇ ಇರುವುದಿಲ್ಲ. ಮಂಗಲವನ್ನು ಮಾಡಿದರೂ ಕೂಡ ಗ್ರಂಥಾ-ರಂಭದಲ್ಲಿ ಅದನ್ನು ಉಲ್ಲೇಖ ಮಾಡಬೇಕಾಗಿಲ್ಲ. ಆದ್ದರಿಂದ ಮಾಂಗಳಿಕವಾದ ತಾರ ಮತ್ತು ಅಥಶಬ್ದ-ಗಳ ನಿವೇಶವು ಅನಾವಶ್ಯಕವಾಗಿದೆ. ಹೀಗೆ ಆಕ್ಷೇಪವು ಬಂದರೆ 'ತಾರ ಮತ್ತು ಅಥ'ಶಬ್ದಗಳು ಮಾಂಗಳಿಕವಾಗಿವೆ. ಇವುಗಳ ನಿವೇಶವು ಗ್ರಂಥಾರಂಭದಲ್ಲಿ ಅತ್ಯಂತ ಆವಶ್ಯಕವಾಗಿವೆ. ಮಂಗಲಾ-ಚರಣೆಯನ್ನು ಅವಶ್ಯವಾಗಿ ಗ್ರಂಥಾರಂಭದಲ್ಲಿ ಮಾಡಬೇಕು. ಮತ್ತು ಅದರ ಉಲ್ಲೇಖವನ್ನು ಕೂಡ ಮಾಡಬೇಕು ಎಂಬುದರ ಉಪಪಾದನೆಯನ್ನು ಮಾಡುವುದಕ್ಕಾಗಿ ''ತಥಾಪಿ'' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

## ಮಂಗಲ ಮತ್ತು ಪರಿಸಮಾಪ್ತಿಗೆ ಕಾರ್ಯಕಾರಣಭಾವವಿದೆ.

ವಾಕ್ಯಾರ್ಥಚಂದ್ರಿಕಾ – 'ಮಂಗಲಾಚರಣರಹಿತಸ್ಯಾಪಿ ಅಸ್ತು ವ್ಯಾಕರ್ತವ್ಯತ್ವಮ್' ಇತ್ಯ-ಪ್ರಯೋಜಕತ್ವಶಂಕಾಯಾಂ, ಮಂಗಲಾಚರಣಾಭಾವೇ ಅಂತರಾಯಪ್ರಸಂಗೇನ, ತತ್ಸಾಧ್ಯ-ನಿರಂತರಾಯ ಸಮಾಪ್ತಿಪ್ರಚಯಾಭಾವೇನ ಅಸಮಾಪ್ತಸ್ಯ ಸ್ವರೂಪಾಭಾವೇನ, ವೀರ್ಯ-ವತ್ತ್ವಾಯುಷ್ಮತ್ಪುರುಷಕತ್ವಪ್ರಚಯಾದಿಹೀನಸ್ಯ ಚ ಶಿಷ್ಯಾನುಪಾದೇಯತ್ವೇನ ಅವ್ಯಾಕರ್ತವ್ಯತ್ವಾತ್ । ವ್ಯಾಕರ್ತವ್ಯತಾಽಂಗೀಕಾರೇ ಸಮಾಪ್ತಿಪ್ರಚಯೌ ಸ್ಯಾತಾಂ, ತೌ ಚ ಕಾರಣಾಭಾವಾದನುಪಪನ್ನೌ ಇತಿ ವಿಪಕ್ಷಬಾಧಕಂ ಸೂಚಯನ್ ಮಂಗಲಸಮಾಪ್ತ್ಯಾದೇಃ ಕಾರ್ಯಕಾರಣಭಾವಂ ಪ್ರಸಿದ್ಧ್ಯಾ ದರ್ಶಯತಿ – ಮಂಗಲೇತಿ ॥

ಮಂಗಲಾಚರಣೆ ಇಲ್ಲದಿದ್ದರೂ ಕೂಡ ವ್ಯಾಖ್ಯಾನವನ್ನು ಮಾಡಬಹುದು ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ಮಂಗಲಾಚರಣೆ ಇಲ್ಲದಿದ್ದರೆ ವಿಘ್ನಗಳು ಎದುರಾಗುತ್ತವೆ. ಆಗ ಮಂಗಲಾಚರಣೆಯಿಂದ ಪ್ರಾಪ್ತವಾಗುವ ವಿಘ್ನವಿಲ್ಲದ ಸಮಾಪ್ತಿಯು ಮತ್ತು ಪ್ರಚಯವು ಉಂಟಾಗು-ವುದಿಲ್ಲ. ಯಾವ ಗ್ರಂಥವು ಸಮಾಪ್ತಿಯಾಗಿರುವುದಿಲ್ಲವೋ ಅದಕ್ಕೆ ಸ್ವರೂಪವೇ ಇಲ್ಲದಂತಾಗುತ್ತದೆ. ಮತ್ತು ವೀರ್ಯವತ್ವ, ಆಯುಷ್ಮತ್ಪುರುಷಕತ್ವ, ಪ್ರಚಯ ಮೊದಲಾದವುಗಳಿಲ್ಲದ ಗ್ರಂಥವು ಶಿಷ್ಟರಿಂದ ಅನುಪಾದೇಯವಾಗುತ್ತದೆ. ಆದ್ದರಿಂದ ವ್ಯಾಖ್ಯಾನ ಮಾಡಲು ಅರ್ಹವಾಗುವುದಿಲ್ಲ. ವ್ಯಾಖ್ಯಾನಮಾಡಲು ಅರ್ಹವಾಗಿದೆ ಎಂಬುದಾಗಿ ಅಂಗೀಕಾರ ಮಾಡಿದರೆ ಸಮಾಪ್ತಿ ಮತ್ತು ಪ್ರಚಯ-ಗಳು ಇರುತ್ತವೆ. ಇವುಗಳು ಕಾರಣವಿಲ್ಲದ್ದರಿಂದ ಅನುಪಪನ್ನವಾಗುತ್ತವೆಂದು ವಿಪಕ್ಷದಲ್ಲಿ ಬಾಧಕವಿದೆ. ಇದನ್ನು ಸೂಚನೆ ಮಾಡುವ ಮೂಲಕ ಮಂಗಲ ಮತ್ತು ಪರಿಸಮಾಪ್ತಿಗಳಿಗೆ ಕಾರ್ಯಕಾರಣಭಾವವನ್ನು "ಮಂಗಲ" ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ವಿಶೇಷವಿಚಾರ – ಯಾದವಾರ್ಯರಿಗಿಂತ ವಿಲಕ್ಷಣವಾದ ವ್ಯಾಖ್ಯಾನವನ್ನು ವಾಕ್ಯಾರ್ಥಚಂದ್ರಿಕಾ-ಕಾರರು ಮಾಡಿದ್ದಾರೆ. ಯಾದವಾರ್ಯರು ಪ್ರಚಯಶಬ್ದಕ್ಕೆ ವ್ಯಾಖ್ಯಾನ ಎಂಬರ್ಥವನ್ನು ಅಂಗೀಕಾರ ಮಾಡಿ ಮಂಗಲಾಚರಣೆಯು ವ್ಯಾಖ್ಯಾನಕ್ಕೆ ಮುಖ್ಯಕಾರಣವಾಗಿದೆ. ಪರಿಸಮಾಪ್ತಿಯನ್ನು ಕೇವಲ ದೃಷ್ಟಾಂತಕ್ಕೋಸ್ಕರ ಹೇಳಿದ್ದಾರೆಂದು ವ್ಯಾಖ್ಯಾನ ಮಾಡಿದರು. ಆದರೆ ವಾಕ್ಯಾರ್ಥಚಂದ್ರಿಕಾಕಾರರು ಬೇರೆ ರೀತಿಯಾಗಿಯೇ ಹೇಳುತ್ತಿದ್ದಾರೆ. ಗ್ರಂಥಕ್ಕೆ ಮಂಗಲಾಚರಣೆಯು ಇಲ್ಲದೇ ಇದ್ದರೆ ವಿಘ್ನಗಳು ಉಂಟಾ-ಗುತ್ತವೆ. ವಿಘ್ನಗಳಿದ್ದರೆ ಪರಿಸಮಾಪ್ತಿಯಾಗುವುದಿಲ್ಲ. ಪರಿಸಮಾಪ್ತಿಯಾಗದಿದ್ದರೆ ಆ ಗ್ರಂಥದ ಸ್ವರೂಪವೇ ನಿರ್ಧಾರವಾಗುವುದಿಲ್ಲ. ಮತ್ತು ಮಂಗಲಾಚರಣೆ ಇಲ್ಲದೇ ಇದ್ದರೆ ವೀರ್ಯವತ್ವ ಆಯುಷ್ಮತ್ ಪುರುಷಕತ್ವ, ಪ್ರಚಯ ಇವುಗಳು ಇಲ್ಲದೇ ಇರಬೇಕಾಗುತ್ತವೆ. ಆಗ ಅನುಪಾದೇಯತ್ವವು ಪ್ರಾಪ್ತವಾಗುವುದರಿಂದ ವ್ಯಾಕರ್ತವ್ಯತ್ವವು ಇಲ್ಲದೇ ಇರಬೇಕಾಗುತ್ತದೆ. ನೀವು ಮಂಗಲಾಚರಣೆ ಇಲ್ಲದಿ-ದ್ದರೂ ಕೂಡ ವ್ಯಾಕರ್ತವ್ಯತ್ವವೇ ಇರಲಿ ಎಂದು ಆಶಂಕಿಸುವುದಾದರೆ ಮೊದಲು ಬ್ರಹ್ಮಸೂತ್ರಗಳಿಗೆ ಸ್ವರೂಪವನ್ನು ಒಪ್ಪಬೇಕು. ಪ್ರಚಯಾದಿಗಳನ್ನು ಕೂಡ ಒಪ್ಪಬೇಕು. ಕಾರಣವನ್ನು ಒಪ್ಪದೇ ಕಾರ್ಯ-ವನ್ನಷ್ಟೇ ಒಪ್ಪುವುದು ಅಸಾಧುವಾಗುತ್ತದೆ.

* * * * *

## ಅನ್ವಯವ್ಯತಿರೇಕಗಳಿಂದ ಕಾರ್ಯಕಾರಣಭಾವ ತಿಳಿಯುವುದಲ್ಲ

ವಾಕ್ಯಾರ್ಥಚಂದ್ರಿಕಾ – ಉಪಲಕ್ಷಣಂ ಚೈತತ್ । ಮಂಗಲಾಭಾವೇ ವಿಘ್ನೋಪಸಂಸೃಷ್ಟತಯಾ ವಾಕ್ಯಾರ್ಥೇಽಪ್ರತಿಪತ್ತ್ಯನ್ಯಥಾಪ್ರತಿಪತ್ತ್ಯಾಪತ್ತ್ಯಾ ಶಿಷ್ಟಾಚಾರಪರಿಪಾಲನಹೀನತಯಾ ಅನಾಪ್ತಪ್ರಣೀತತ್ವಪ್ರಸಂಗಾತ್ ಚ ಅವ್ಯಾಕರ್ತವ್ಯತ್ವೇನ ಹೇತೋಃ ಪ್ರತಿಬಂಧಸಿದ್ಧಿರಿತಿ ದ್ರಷ್ಟವ್ಯಮ್ । 'ಅನ್ವಯವ್ಯತಿರೇಕಾಭ್ಯಾಂ ಕಾರ್ಯಕಾರಣಭಾವಗ್ರಹೋಽನಯೋಃ' ಇತಿ ಭ್ರಾಂತ್ಯಾ ತತ್ರ ವ್ಯಭಿಚಾರಂ ಶಂಕತೇ – ನ ಚೇತಿ ॥ ಸಾಂಪ್ರತಂ = ಯುಕ್ತಮ್ । ಪ್ರತಿಬಂದೀಮುಖೇನ ಸಮಾಧಾತುಂ ಗೂಢಾಭಿಸಂಧಿರುತ್ತರಮಾಹ – ತಥಾ ಸತೀತಿ ॥

ಉಪಲಕ್ಷಣಯಾ ಇದನ್ನು ವಿವಕ್ಷಿಸಬೇಕು. ಮಂಗಲವು ಇಲ್ಲದಿದ್ದರೆ ವಿಘ್ನವು ಉಂಟಾಗುತ್ತದೆ. ವಾಕ್ಯದ ಅರ್ಥವು ತಿಳಿಯುವುದಿಲ್ಲ. ಅಥವಾ ವಿಪರೀತವಾಗಿ ತಿಳಿಯುತ್ತದೆ. ಗ್ರಂಥವು ಶಿಷ್ಟಾಚಾರದ ಪರಿಪಾಲನೆಯಿಂದ ರಹಿತವಾದಾಗ ಅನಾಪ್ತಪ್ರಣೀತವಾಗುತ್ತದೆ. ಈ ಆಶಂಕೆಯು ಬಂದರೆ ವ್ಯಾಖ್ಯಾನಮಾಡಲು ಸಾಧ್ಯವಾಗುವುದಿಲ್ಲ. ಹೀಗೆ ಹೇತುವಿಗೆ ಪ್ರತಿಬಂಧವಿದೆ ಎಂದು ತಿಳಿಯಬೇಕು. ಅನ್ವಯ ಮತ್ತು ವ್ಯತಿರೇಕಗಳಿಂದ ಕಾರ್ಯಕಾರಣಭಾವಗ್ರಹವು ಉಂಟಾಗುತ್ತದೆ. ಈ ಭ್ರಾಂತಿಯಿಂದ ವ್ಯಭಿಚಾರವನ್ನು "ನಚ" ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ. 'ಸಾಂಪ್ರತಂ' ಎಂಬ ಪದಕ್ಕೆ ಯುಕ್ತ ಎಂದರ್ಥ. ಪ್ರತಿಬಂದೀಮುಖದಿಂದ ಸಮಾಧಾನವನ್ನು ಹೇಳಲು ಗೂಢಾಭಿಸಂಧಿಯ ಉತ್ತರವನ್ನು 'ತಥಾ ಸತಿ'; ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಮಂಗಲ ಮತ್ತು ಪರಿಸಮಾಪ್ತಿಗಳಿಗೆ ಕಾರ್ಯಕಾರಣಭಾವವು ಅನ್ವಯವ್ಯತಿರೇಕದಿಂದ ಸಿದ್ಧವಾಗುತ್ತದೆ ಎಂಬ ಭ್ರಾಂತಿ ಬರುತ್ತದೆ. ಆದರೆ ಅನ್ವಯವ್ಯತಿರೇಕಗಳಿಂದ ಇದು ಸಿದ್ಧವಾಗುವುದಲ್ಲ. ಪ್ರಮಾಣದಿಂದಲೇ ಸಿದ್ಧವಾಗುತ್ತದೆಂಬುದನ್ನು ತಿಳಿಯಬೇಕು.

## ಮಂಗಲಾಚರಣೆಯಿಲ್ಲದ ಗ್ರಂಥಕ್ಕೆ ಏಕೆ ವ್ಯಾಖ್ಯಾನ ಮಾಡಬಾರದು?

ಯಾದುಪತ್ಯ – ನನು ಮಂಗಲಾಚರಣಸ್ಯ ಶಾಸ್ತ್ರಪರಿಸಮಾಪ್ತಿಹೇತುತ್ವೇಽಪಿ ನ ತದ್-ವ್ಯಾಖ್ಯಾನಕರಣೇಽಪಿ ಹೇತುತಾ ಯೇನ ತದಭಾವೇನ ತದಭಾವಸಾಧನಂ ಸಂಗತಂ ಸ್ಯಾತ್ ಇತ್ಯಪ್ರಯೋಜಕತಾಽತ್ರ ಇತ್ಯಾಹ – ಮಂಗಲಾಚರಣಪುರಃಸರಾಣೀತಿ ॥ ವ್ಯತಿರೇಕಸ್ಯಾಪಿ ಉಪಲಕ್ಷಣಮೇತತ್ । ತಥಾ ಚ ಅನೇನಾನ್ವಯವ್ಯತಿರೇಕೌ ಪ್ರದರ್ಶಿತೌ ಇತಿ ಜ್ಞಾತವ್ಯಮ್ ।

ಮಂಗಲಾಚರಣೆಯು ಶಾಸ್ತ್ರಪರಿಸಮಾಪ್ತಿಗೆ ಕಾರಣವಾಗಿದೆ. ಆದರೂ ಕೂಡ ಶಾಸ್ತ್ರದ ವ್ಯಾಖ್ಯಾನಮಾಡಲು ಹೇತುವಾಗಿರುವುದಿಲ್ಲ. ಹಾಗೇನಾದರೂ ಹೇತುವಾಗಿದ್ದಲ್ಲಿ ಮಂಗಲಾಚರಣೆ-

ಯಿಲ್ಲದ್ದರಿಂದ ವ್ಯಾಖ್ಯಾನವನ್ನು ಮಾಡಬಾರದೆಂಬುದು ಸಂಗತವಾಗುತ್ತಿತ್ತು. ಹೀಗೆ ಅಪ್ರಯೋಜಕಾ-ಶಂಕೆಯನ್ನು "ಮಂಗಲಾಚರಣಪುರಸ್ಸರಾಣಿ" ಎಂಬುದರಿಂದ ಆಕ್ಷೇಪಿಸುತ್ತಿದ್ದಾರೆ. ಗ್ರಂಥದಲ್ಲಿ ಅನ್ವಯ-ವ್ಯಾಪ್ತಿಯನ್ನಷ್ಟೇ ಹೇಳಿದ್ದಾರೆ. ವ್ಯತಿರೇಕವ್ಯಾಪ್ತಿಯನ್ನೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದ ಅನ್ವಯವ್ಯತಿರೇಕಿಗಳನ್ನು ತೋರಿಸಿದಂತೆ ಆಯಿತು.

ವಿವರಣೆ – ಮಂಗಲಾಚರಣೆಯು ಶಾಸ್ತ್ರದ ಪರಿಸಮಾಪ್ತಿಗೆ ಕಾರಣವಾಗಿದೆ. ಮತ್ತು ಪ್ರಚಯಕ್ಕೆ ಕಾರಣವಾಗಿದೆ. ಆದರೆ ವ್ಯಾಖ್ಯಾನಕ್ಕೆ ಕಾರಣವಾಗಿರುವುದಿಲ್ಲ. ಯಾವ ಗ್ರಂಥದಲ್ಲಿ ಮಂಗಲಾಚರಣೆ ಇರುತ್ತದೋ ಅದಕ್ಕೆ ಮಾತ್ರ ವ್ಯಾಖ್ಯಾನ ಮಾಡಬೇಕು. ಯಾವ ಗ್ರಂಥದಲ್ಲಿ ಮಂಗಲಾಚರಣೆ ಇರು-ವುದಿಲ್ಲವೋ ಆ ಗ್ರಂಥಕ್ಕೆ ವ್ಯಾಖ್ಯಾನ ಮಾಡಬಾರದೆಂಬ ನಿಯಮ ಇರುವುದಿಲ್ಲ. ವ್ಯಾಖ್ಯಾನಕ್ಕೆ ಮಂಗಲಾಚರಣೆಯು ಕಾರಣವಾಗುತ್ತದೆಂದು ಹೇಳುವುದು ವ್ಯಧಿಕರಣವೂ ಆಗಿದೆ.

'ಮಂಗಲಾಚರಣೆ ಇದ್ದರೆ ಪರಿಸಮಾಪ್ತಿ ಹಾಗೂ ಪ್ರಚಯಗಳು ಇರುತ್ತವೆ' ಎಂಬುದು ಅನ್ವಯ-ವ್ಯಾಪ್ತಿ. 'ಮಂಗಲಾಚರಣೆ ಇಲ್ಲದಿದ್ದರೆ ಪರಿಸಮಾಪ್ತಿ ಮತ್ತು ಪ್ರಚಯಗಳು ಇರುವುದಿಲ್ಲ' ಎಂಬುದು ವ್ಯತಿರೇಕವ್ಯಾಪ್ತಿ.

## ವ್ಯಾಖ್ಯೇಯನಿಷ್ಠವಾದ ಮಂಗಲಾಚರಣೆಯು ವ್ಯಾಖ್ಯಾನಕ್ಕೆ ಕಾರಣ

ಯಾದುಪತ್ಯ – ಅಯಮಭಿಸಂಧಿಃ – ಶಾಸ್ತ್ರೇ ಹ್ಯನುಷ್ಠಿತಂ ಮಂಗಲಾಚರಣಂ ಶಾಸ್ತ್ರ-ಸಮಾಪ್ತಿಮಿವ ಪ್ರಚಯರೂಪಂ ತದ್ವ್ಯಾಖ್ಯಾನಮಪಿ ಸಂಪಾದಯತಿ । ಅನ್ಯಥಾ ಮಂಗಲಾಚರಣ-ರಹಿತಶಾಸ್ತ್ರವ್ಯಾಖ್ಯಾನೇ ಪ್ರವರ್ತಮಾನಸ್ಯ ವಿಘ್ನೋಪಸಂಸೃಷ್ಟತಯಾ ಶಾಸ್ತ್ರಾರ್ಥಾಪ್ರತಿಪತ್ತಿ-ವಿಪ್ರತಿಪತ್ತ್ಯಾದಿಪ್ರಾಪ್ತ್ಯಾ, ಶಿಷ್ಟಾಚಾರಪರಿಪಾಲನಹೀನತಯಾಽನಾಪ್ತಪ್ರಣೀತತ್ವಶಂಕಯಾ ಚ ವ್ಯಾಖ್ಯಾನಸ್ಯ ಕರ್ತುಮಶಕ್ಯತ್ವಾತ್ । ಅತ ಏವಾಹುಃ 'ಮಂಗಲಾಚರಣಪುರಃಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ' ಇತಿ । ತಥಾ ಚ ವ್ಯಾಖ್ಯೇಯೇ ಮಂಗಲಾಚರಣಸ್ಯ ತತ್ಪ್ರಚಯರೂಪ-ವ್ಯಾಖ್ಯಾನಂ ಪ್ರತ್ಯಪಿ ಹೇತುತಯಾ, ಕಾರಣಾಭಾವೇ ಚ ಕಾರ್ಯಸ್ಯ ಶಂಕಿತುಮಶಕ್ಯತ್ವಾತ್ ನ ಅಪ್ರಯೋಜಕತಾ ಇತಿ ॥

ಒಟ್ಟು ಅಭಿಪ್ರಾಯ – ಶಾಸ್ತ್ರದಲ್ಲಿ ಅನುಷ್ಠಾನ ಮಾಡಲ್ಪಟ್ಟ ಮಂಗಲಾಚರಣೆಯು ಶಾಸ್ತ್ರದ ಪರಿ-ಸಮಾಪ್ತಿಗೆ ಹೇಗೆ ಕಾರಣವಾಗಿದೆಯೋ ಅದರಂತೆ ಪ್ರಚಯರೂಪವಾದ ವ್ಯಾಖ್ಯಾನಕ್ಕೂ ಕೂಡ

ಕಾರಣವಾಗಿದೆ. ಹೀಗೆ ಒಪ್ಪದಿದ್ದರೆ ಮಂಗಲಾಚರಣೆ ಇಲ್ಲದ ಶಾಸ್ತ್ರಕ್ಕೆ ವ್ಯಾಖ್ಯಾನ ಮಾಡಲು ಯಾರು ಪ್ರವೃತ್ತಿಮಾಡುತ್ತಾನೋ ಅವನಿಗೆ ಅನೇಕ ವಿಘ್ನಗಳು ಎದುರಾಗುತ್ತವೆ. ಆಗ ಶಾಸ್ತ್ರದ ಅರ್ಥವೇ ತಿಳಿಯುವುದಿಲ್ಲ. ಅಥವಾ ವಿರುದ್ಧವಾಗಿ ಶಾಸ್ತ್ರದ ಅರ್ಥವು ತಿಳಿಯುತ್ತದೆ. ಇದರಿಂದಾಗಿ ಶಿಷ್ಟಾಚಾರಪರಿಪಾಲನಾಹೀನವಾಗುತ್ತದೆ. ಮತ್ತು ಅನಾಪ್ತನಿಂದ ಪ್ರಣೀತವಾಗಿದೆಯೆಂಬ ಶಂಕೆಯು ಬರುತ್ತದೆ. ಹೀಗೆ ವ್ಯಾಖ್ಯಾನವನ್ನು ಮಾಡುವುದೇ ಅಸಾಧ್ಯವಾಗುತ್ತದೆ. ಆದ್ದರಿಂದಲೇ 'ಮಂಗಲಾಚರಣಪುರಸ್ಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ' ಮಂಗಲಾಚರಣೆ ಪುರಸ್ಸರವಾದ ಶಾಸ್ತ್ರಗಳಷ್ಟೇ ವ್ಯಾಖ್ಯಾನರೂಪವಾದ ವೀರ್ಯವುಳ್ಳವುಗಳಾಗುತ್ತವೆ ಎನ್ನುತ್ತಾರೆ. ಹೀಗೆ ವ್ಯಾಖ್ಯೇಯಗ್ರಂಥದಲ್ಲಿ ಮಾಡಲ್ಪಟ್ಟ ಮಂಗಲಾಚರಣೆಯು ತತ್ಪ್ರಚಯರೂಪವಾದ ವ್ಯಾಖ್ಯಾನವನ್ನು ಕುರಿತು ಕಾರಣವಾಗುತ್ತದೆ. ಕಾರಣವಿಲ್ಲದಿದ್ದರೂ ಕೂಡ ಕಾರ್ಯವು ಆಗಲಿ ಎಂಬುದಾಗಿ ಆಶಂಕಿಸಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಯೋಜಕಾಶಂಕೆಗೆ ಅವಕಾಶವಿಲ್ಲ.

ವಿವರಣೆ – ಯಾವುದೇ ಒಂದು ಗ್ರಂಥವು ಪ್ರಚಯವನ್ನು ಹೊಂದುತ್ತದೆ ಎಂಬುದಕ್ಕೆ ವ್ಯಾಖ್ಯಾನಪರಂಪರೆಯನ್ನು ಹೊಂದುತ್ತದೆ ಎಂದೇ ಅರ್ಥ. ಆದ್ದರಿಂದ ಮಂಗಲಾಚರಣೆಯು ಪ್ರಚಯಕ್ಕೆ ಕಾರಣವಾಗಿದೆ ಎಂದರೆ ಅದರ ವ್ಯಾಖ್ಯಾನಕ್ಕೂ ಕೂಡ ಕಾರಣವಾಗಿದೆ ಎಂದೇ ಹೇಳಿದಂತಾಗುತ್ತದೆ. ಯಾವ ಗ್ರಂಥಕ್ಕೆ ಮಂಗಲಾಚರಣೆ ಇರುವುದಿಲ್ಲವೋ ಅದಕ್ಕೆ ವ್ಯಾಖ್ಯಾನವನ್ನು ಮಾಡಬಾರದೆಂದು ಹೇಳಿದಂತಾಗುತ್ತದೆ. ಟೀಕೆಯಲ್ಲಿ ಮಂಗಲಾಚರಣೆಯು ಪರಿಸಮಾಪ್ತಿಗೆ ಹಾಗೂ ಪ್ರಚಯಕ್ಕೆ ಕಾರಣವಾಗಿದೆ ಎಂಬುದನ್ನು ಅನ್ವಯವ್ಯತಿರೇಕಗಳಿಂದ ಉಪಪಾದನೆ ಮಾಡಿದ್ದಾರೆ. ಇದರಲ್ಲಿ ಪ್ರಚಯವೇ ಮುಖ್ಯವಾಗಿದೆ. ಪರಿಸಮಾಪ್ತಿಯನ್ನು ಕೇವಲ ದೃಷ್ಟಾಂತಕ್ಕೋಸ್ಕರ ಹೇಳಿದ್ದಾರೆ.

ವ್ಯಾಖ್ಯೇಯಗ್ರಂಥದಲ್ಲಿ ಮಂಗಲಾಚರಣೆ ಇಲ್ಲದಿದ್ದರೆ ವ್ಯಾಖ್ಯಾನಮಾಡಲು ಸಾಧ್ಯವೇ ಆಗುವುದಿಲ್ಲ. ಏಕೆಂದರೆ ಮಂಗಲಾಚರಣೆ ಇಲ್ಲದ್ದರಿಂದ ಆ ಶಾಸ್ತ್ರದ ಅರ್ಥವೇ ತಿಳಿಯುವುದಿಲ್ಲ. ಅಥವಾ ವಿರುದ್ಧವಾದ ಅರ್ಥ ತಿಳಿಯುತ್ತದೆ.

ಮತ್ತು ಶಿಷ್ಟಾಚಾರವನ್ನು ಗ್ರಂಥವು ಪರಿಪಾಲನೆ ಮಾಡದ ಕಾರಣ ಅನಾಪ್ತರು ರಚಿಸಿರಬಹುದೋ ಏನೋ ಎಂಬ ಶಂಕೆಯು ಬರುತ್ತದೆ. ಆದ್ದರಿಂದ ವ್ಯಾಖ್ಯಾನಮಾಡಲು ಪ್ರವೃತ್ತಿ ಮಾಡುವುದೇ ಕಷ್ಟವಾಗುತ್ತದೆ. ಆದ್ದರಿಂದ ಮಂಗಲಾಚರಣಪುರಸ್ಸರವಾದ ಶಾಸ್ತ್ರಗಳೇ ವ್ಯಾಖ್ಯಾನ ಮಾಡಲು ಅರ್ಹವಾಗುತ್ತವೆ.

## ಶಿಷ್ಯಶಿಕ್ಷಣೆಗೋಸ್ಕರ ವೇದವ್ಯಾಸರು ಮಂಗಲಾಚರಣೆ ಮಾಡಬೇಕಿತ್ತು

ಯಾದುಪತ್ಯ – ಅತ್ರ 'ಸಮಾಪ್ಯಂತೇ' ಇತ್ಯೇತತ್ ಪ್ರಸಂಗದೃಷ್ಟಾಂತತಯಾ ಮಂಗಲಸ್ಯ ಸಮಾಪ್ತಿಂ ಪ್ರತ್ಯಪಿ ಹೇತುತಾಮುಪಪಾದಯಿತುಮಿತಿ ಜ್ಞಾತವ್ಯಮ್ । 'ಪ್ರಚಯ'ಶಬ್ದಸ್ಯ ಪ್ರಸಿದ್ಧಿಮಾತ್ರಪರತ್ವೇಽಪಿ ಶಾಸ್ತ್ರಪ್ರಚಯೋ ವ್ಯಾಖ್ಯಾನರೂಪ ಏವ ಇತಿ ನ ಕೋಽಪಿ ದೋಷ ಇತಿ ಧ್ಯೇಯಮ್ ।

ಕೇಚಿತ್ತು "ಸೂತ್ರಕೃತೋ ವಿಘ್ನಾದ್ಯಸಂಭವೇಽಪಿ ಶಿಷ್ಟಾಚಾರಪರಿಪಾಲನಾರ್ಥಂ ಶಿಷ್ಯಶಿಕ್ಷಾರ್ಥಂ ವಾ ಮಂಗಲಾಚರಣಂ ಕರ್ತವ್ಯಮ್ । ಅನ್ಯಥಾ ಮೋಕ್ಷಫಲಕಮಹಾಶಾಸ್ತ್ರೇ ಶಿಷ್ಟಾಚಾರಮುಲ್ಲಂಘ್ಯ ಭಗವಾನ್ ಪ್ರವೃತ್ತಃ ಇತ್ಯನ್ಯೇಽಪಿ ಏವಮೇವ ಪ್ರವರ್ತೇರನ್ । ತತಶ್ಚ ವಿಘ್ನಾದಿಮತ್ತ್ವಂ ಚ ಪ್ರಸಜ್ಯೇತ । ಕುತೋ ಮಂಗಲಾಚರಣಾಭಾವೇ ವಿಘ್ನಾದಿಪ್ರಸಕ್ತಿರಿತ್ಯತ ಆಹ – ಮಂಗಲೇತಿ ॥ ಅನೇನ ಅನ್ವಯವ್ಯತಿರೇಕಾವುಕ್ತೌ" ಇತ್ಯಾಹುಃ ।

ಗ್ರಂಥದಲ್ಲಿ "ಸಮಾಪ್ಯಂತೇ" ಎಂಬುದನ್ನು ಪ್ರಸಕ್ತಿ ಇರುವುದರಿಂದ ಕೇವಲ ದೃಷ್ಟಾಂತಕ್ಕೋಸ್ಕರ ಹೇಳಿದ್ದಾರೆ. ಮಂಗಲವು ಸಮಾಪ್ತಿಗೂ ಕೂಡ ಕಾರಣವಾಗಿದೆ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ 'ಸಮಾಪ್ಯಂತೇ' ಎಂದು ಹೇಳಿದ್ದಾರೆ ಎಂದು ತಿಳಿಯಬೇಕು. ಪ್ರಚಯಶಬ್ದಕ್ಕೆ ಪ್ರಸಿದ್ಧಿ ಎಂದರ್ಥ. ಆದರೂ ಕೂಡ ಶಾಸ್ತ್ರಪ್ರಚಯ ಎಂದರೆ ಶಾಸ್ತ್ರದ ವ್ಯಾಖ್ಯಾನ ಎಂದೇ ಅರ್ಥ.

ಕೆಲವರು ಹೀಗೆ ವ್ಯಾಖ್ಯಾನ ಮಾಡುತ್ತಾರೆ –

ಸೂತ್ರಕಾರರಿಗೆ ಸ್ವತಃ ವಿಘ್ನಗಳು ಇರುವುದಿಲ್ಲ. ಆದರೆ ಶಿಷ್ಟಾಚಾರದ ಪರಿಪಾಲನೆಗೋಸ್ಕರ ಮತ್ತು ಶಿಷ್ಯಶಿಕ್ಷಣೆಗೋಸ್ಕರ ಮಂಗಲವನ್ನು ಆಚರಣೆ ಮಾಡಲೇಬೇಕು. ಇಲ್ಲದಿದ್ದರೆ ಮೋಕ್ಷಫಲಕವಾದ ಈ ಮಹಾಶಾಸ್ತ್ರದಲ್ಲಿ ಸೂತ್ರಕಾರರು ಶಿಷ್ಟಾಚಾರವನ್ನು ಉಲ್ಲಂಘನೆ ಮಾಡಿದರೆ ಅವರನ್ನು ನೋಡಿ ಅವರ ಶಿಷ್ಯರೂ ಕೂಡ 'ಭಗವಾನ್ ವೇದವ್ಯಾಸದೇವರೇ ಮಂಗಲಾಚರಣೆ ಮಾಡದೇ ಇರುವುದರಿಂದ ನಾವೂ ಕೂಡ ಮಂಗಲಾಚರಣೆ ಮಾಡಬೇಕಾಗಿಲ್ಲ' ಎಂದು ತಿಳಿಯುತ್ತಾರೆ. ಆಗ ಮಂಗಲಾಚರಣೆ ಮಾಡದ ಗ್ರಂಥಗಳಲ್ಲಿ ವಿಘ್ನಾದಿಗಳು ಬಂದೇ ಬರುತ್ತವೆ. ಮಂಗಲಾಚರಣೆ ಮಾಡದಿದ್ದರೆ ವಿಘ್ನಾದಿಗಳು ಏಕೆ ಬರುತ್ತವೆ? ಎಂಬ ಪ್ರಶ್ನೆಗೆ "ಮಂಗಲಾಚರಣಪುರಸ್ಸರಾಣಿ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಇದರಿಂದ ಅನ್ವಯವ್ಯತಿರೇಕವ್ಯಾಪ್ತಿಗಳನ್ನು ಹೇಳಿದಂತಾಗುತ್ತದೆ- ಎಂದು.

## ಸುಧಾಪರಿಮಳಸಾರ

ಹಿಂದೆ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿ, ಅವುಗಳ ವ್ಯಾಖ್ಯೇಯತ್ವವನ್ನು ಸಾಧನೆ ಮಾಡಿದ್ದಾರೆ. ಹೀಗಿದ್ದರೂ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ಮಾಡುವುದು ಸರಿ ಅಲ್ಲ. ಏಕೆಂದರೆ ಸೂತ್ರಗ್ರಂಥದ ಆದಿಯಲ್ಲಿ ವ್ಯಾಸರು ಮಂಗಲಾಚರಣೆಯನ್ನೇ ಮಾಡಿಲ್ಲ. ಯಾವ ಗ್ರಂಥದ ಆರಂಭದಲ್ಲಿ ಮಂಗಲವಿರುತ್ತದೆಯೋ ಆ ಗ್ರಂಥ ನಿರ್ವಿಘ್ನವಾಗಿ ಮುಗಿಯುತ್ತದೆ. ಮತ್ತು ಓದುಗರ ಪರಂಪರೆ ನಾಶವಿಲ್ಲದಂತೆ ನಿರಂತರ ಮುಂದುವರೆಯುತ್ತದೆ. ಹೀಗಾಗಿ ವ್ಯಾಖ್ಯಾನಕ್ಕೆ ಅರ್ಹವಾದ ಗ್ರಂಥ ಮಂಗಲದಿಂದ ಕೂಡಿರಲೇಬೇಕು. ಸೂತ್ರಗ್ರಂಥಕ್ಕೆ ಆದಿಯಲ್ಲಿ ಮಂಗಲವೇ ಇಲ್ಲ. ಆದುದರಿಂದ ಇದು ವ್ಯಾಖ್ಯಾನಾರ್ಹವಲ್ಲ ಎಂದು ಆಕ್ಷೇಪ.

ಕೆಲವೆಡೆ ಮಂಗಲ ಮಾಡದಿದ್ದರೂ ಕಾರ್ಯ ಮುಗಿಯುತ್ತದೆ. ಇನ್ನೊಂದೆಡೆ ಮಂಗಲವಿದ್ದರೂ ಕಾರ್ಯ ಮುಗಿಯುವುದಿಲ್ಲ. ಹೀಗಾಗಿ ಸಮಾಪ್ತಿಯನ್ನು ಕುರಿತು ಮಂಗಲವನ್ನು ಕಾರಣ ಎಂದು ಹೇಗೆ ಹೇಳೋಣ?

ಈ ಆಕ್ಷೇಪಕ್ಕೆ ಉತ್ತರ—ಕಾರೀರೀಯಾಗವೂ ಕೂಡ ಮಳೆಯನ್ನು ಕುರಿತು ಕಾರಣ ಎಂದು ತೀರ್ಮಾನವಾಗದೇ ಹೋಗಬೇಕಾದೀತು ಎಂದು.

## ನೆನೆಪಿಡಿ

* ಮಂಗಲಾಚರಣೆಯು ವ್ಯಾಖ್ಯಾನಮಾಡಲು ಕಾರಣವಾಗುತ್ತದೆ. ಇದಕ್ಕೆ ಪರಿಸಮಾಪ್ತಿಯು ಉದಾಹರಣೆಯಾಗಿದೆ.

* 'ಮಂಗಲಾಚರಣಪುರಸ್ಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ' ಇಲ್ಲಿ ವೀರ್ಯವಂತಿ ಎಂಬುದಕ್ಕೆ ವ್ಯಾಖ್ಯಾನಪರಂಪರೆಯನ್ನು ಹೊಂದುತ್ತದೆ ಎಂದರ್ಥ. ವ್ಯಾಖ್ಯಾನಪರಂಪರೆಗೋಸ್ಕರ ಮಂಗಲಾಚರಣೆ ಮಾಡಬೇಕು.

* ಮಂಗಲಾಚರಣೆ ಮಾಡಿರುವ ಗ್ರಂಥಕ್ಕೆ ಪ್ರಚಯವು ದೊರಕುತ್ತದೆ ಎಂಬಲ್ಲಿ ಪ್ರಚಯಶಬ್ದಕ್ಕೆ ಕೇವಲ ಪ್ರಸಿದ್ಧಿ ಎಂದರ್ಥವಲ್ಲ; ವ್ಯಾಖ್ಯಾನಪರಂಪರೆ ಎಂದರ್ಥ.

* ಸೂತ್ರಕಾರರು ಮಂಗಲಾಚರಣೆಯನ್ನು ಮಾಡದೇ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿರುವುದರಿಂದ ಇದು ವ್ಯಾಖ್ಯಾನಕ್ಕೆ ಯೋಗ್ಯವಲ್ಲ ಎಂದಾಕ್ಷೇಪ.

* 'ತತ್ರ ತಾರಾಥಮೂಲತ್ವಂ' ಇತ್ಯಾದಿಯಾಗಿ ಮುಂದೆ ತಾರ ಮತ್ತು ಅಥಶಬ್ದಗಳು ಮಾಂಗಳಿಕವಾಗಿವೆಯೆಂದು ವ್ಯಾಖ್ಯಾನಮಾಡುತ್ತಾರೆ. ಆದರಿಂದ ಪರಿಹಾರವಾಗುವ ಆಶಂಕೆಯನ್ನು ಇಲ್ಲಿ ತೋರಿಸುತ್ತಿದ್ದಾರೆ.

## ಒಂದು ಕಾರ್ಯಕ್ಕೆ ಅನೇಕ ಕಾರಣಗಳಿರುತ್ತವೆ

**ಶ್ರೀಮನ್ನ್ಯಾಯಸುಧಾ– ಸ್ಯಾದೇತದೇವಮ್ ಯದಿ ಕಾರೀರ್ಯಾದೇಃ ವೃಷ್ಟ್ಯಾದಿ -ಹೇತುತ್ವಂ ನಿಷ್ಪ್ರಮಾಣಕಂ ಸ್ಯಾತ್ । ನ ಚೈವಮ್ । ಶ್ರುತಿನಿಶ್ಚಿತೇ ತು ಸಾಧ್ಯ-ಸಾಧನಭಾವೇ ತದಭಾವೇಽಪಿ ಭಾವೋಽನೇಕಕಾರಣಕತ್ವಸ್ಯ ಕಲ್ಪಕೋ ಭವತಿ । ದರ್ಶಪೂರ್ಣಮಾಸಾಭ್ಯಾಮಿವ ತ್ರೈವರ್ಣಿಕಪರಿಚರ್ಯಾದಿನಾಽಪಿ ಸ್ವರ್ಗ-ಪ್ರಾಪ್ತೇಃ । ಭಾವೇಽಪ್ಯಭಾವಸ್ತು ಕರ್ತೃಕರಣಾದಿವೈಗುಣ್ಯನಿಮಿತ್ತೋ ಭವತಿ । ನ ಹಿ ಸಾಮಗ್ರೀವೈಕಲ್ಯೇನ ಸಾಧ್ಯಂ ವ್ಯಭಿಚರನ್ ಹೇತುರಹೇತುಃ ಸ್ಯಾತ್ । ಕರ್ತ್ರಾದಿಸಾದ್ಗುಣ್ಯೇ ವಾ ಪ್ರಬಲಪ್ರತಿಬಂಧಕಸದ್ಭಾವಃ ಕಲ್ಪ್ಯತೇ । ನ ಹಿ ಪ್ರತಿಬದ್ಧಂ ಕಾರ್ಯಮಜನಯತ್ ಕಾರಣಮಕಾರಣಂ ಭವತಿ । ವಹ್ನೇರಪಿ ಸ್ಫೋಟಂ ಪ್ರತ್ಯಕಾರಣತ್ವಪ್ರಸಂಗಾತ್ ।**

ನೀವು ಹೇಳಿದ್ದು ಯುಕ್ತವಾಗುತ್ತಿತ್ತು. ಒಂದು ವೇಳೆ ಕಾರೀರಿ ಮೊದಲಾದ ಯಾಗ-ಗಳು ಮಳೆ ಮೊದಲಾದವುಗಳನ್ನು ಕುರಿತು ಹೇತುಗಳಾಗಿವೆ ಎಂಬುದು ಅಪ್ರಾಮಾಣಿಕ-ವಾಗಿದ್ದರೆ; ಆದರೆ ಹಾಗಿಲ್ಲ. ಕಾರೀರ್ಯಾದಿ ಯಾಗಗಳು ಮಳೆ ಮೊದಲಾದವುಗಳನ್ನು ಕುರಿತು ಕಾರಣವಾಗಿವೆ ಎಂಬ ವಿಷಯದಲ್ಲಿ ಶ್ರುತ್ಯಾದಿಪ್ರಮಾಣಗಳಿವೆ. ಮತ್ತು ಶ್ರುತಿ-ಯಿಂದ ನಿಶ್ಚಿತವಾದ ಕಾರ್ಯಕಾರಣಭಾವವಿದ್ದಲ್ಲಿ ಒಂದು ಕಾರಣವಿಲ್ಲದಿದ್ದರೂ ಕಾರ್ಯವಾಗುವುದು ಅನೇಕ ಕಾರಣಗಳಿವೆ ಎಂಬುದಕ್ಕೆ ಕಲ್ಪಕವಾಗುತ್ತಿತ್ತು. ದರ್ಶ-ಪೂರ್ಣಮಾಸ ಯಾಗಗಳನ್ನು ಆಚರಣೆ ಮಾಡಿದರೆ ಸ್ವರ್ಗವೆಂಬ ಪ್ರಯೋಜನವು ಹೇಗಿದೆಯೋ ಅದರಂತೆ ಶೂದ್ರರಿಗೆ ತ್ರೈವರ್ಣಿಕರ ಸೇವೆಯಿಂದಲೂ ಕೂಡ ಸ್ವರ್ಗವು ಪ್ರಾಪ್ತವಾಗುತ್ತದೆ. ಕಾರಣವಿದ್ದರೂ ಕೂಡ ಕಾರ್ಯವು ಎಲ್ಲಿ ಆಗುವುದಿಲ್ಲವೋ ಅಂಥಲ್ಲಿ ಕರ್ತೃಕರಣಾದಿಗಳಲ್ಲಿರುವ ವೈಗುಣ್ಯವೇ ನಿಮಿತ್ತವಾಗಿರುತ್ತದೆ. ಸಾಮಗ್ರಿಗಳಿಂದ ರಹಿತವಾದ ಹೇತುವು ಸಾಧ್ಯವನ್ನು ಬಿಟ್ಟು ಇರುವುದರಿಂದ ಕಾರಣವಲ್ಲವೆಂದು ಹೇಳಲಾಗದು.

ಕರ್ತೃಕರಣಾದಿಗಳಲ್ಲಿ ಯಾವುದೇ ವೈಗುಣ್ಯವಿಲ್ಲದೇ ಸಕಲಸಾಧನಸಾಮಗ್ರಿಗಳಿದ್ದರೂ ಕೂಡ ಕಾರ್ಯವು ಆಗದಿದ್ದರೆ ಪ್ರಬಲವಾದ ಪ್ರತಿಬಂಧಕವಿದೆಯೆಂದು ಕಲ್ಪನೆ ಮಾಡಬೇಕು. ಯಾವುದೇ ಒಂದು ಕಾರಣವು ಮತ್ತೊಂದರಿಂದ ಪ್ರತಿಬದ್ಧವಾಗಿ ಕಾರ್ಯವನ್ನು ಹುಟ್ಟಿಸ-ದಿದ್ದರೆ ಅದನ್ನು ಕಾರಣವಲ್ಲವೆಂದು ಹೇಳಬಾರದು. ಹಾಗೆ ಹೇಳಿದರೆ ಸ್ಫೋಟವನ್ನು ಕುರಿತು ಅಗ್ನಿಯು ಕಾರಣವಾಗಿಲ್ಲ ಎಂದು ಹೇಳಬೇಕಾಗುತ್ತದೆ.

## ಕಾರೀರಿ ಯಾಗಕ್ಕೆ ವೃಷ್ಟಿಕಾರಣತ್ವವು ಅಪ್ರಾಮಾಣಿಕವಲ್ಲ

ಪರಿಮಳ– ತತ್ರ ಪರೇಣೈವ ಸಮಾಧಿಂ ವಾಚಯಿತ್ವಾ, ಸಮಂ ಮಂಗಲಾಚರಣೇಽಪಿ ಇತ್ಯಾಹ – ಸ್ಯಾದೇತದಿತ್ಯಾದಿನಾ ॥ ಏವಂ ವ್ಯಭಿಚಾರಾದಿನಾ ಕಾರೀರ್ಯಾದೇರಹೇತುತ್ವಂ ಸ್ಯಾತ್ । ಯದಿ ಹೇತುತ್ವಂ ನಿಷ್ಪ್ರಮಾಣಕಂ ಸ್ಯಾತ್ ಇತಿ ಯೋಜನಾ । ಶ್ರುತ್ಯುಕ್ತಸಾಧನಾ-ಭಾವೇಽಪಿ ಸಾಧ್ಯಸತ್ತ್ವಮನೇಕಕಾರಣಕತ್ವಕಲ್ಪಕಮ್ ಇತ್ಯೇತತ್ ದೃಷ್ಟಾಂತೇನ ವ್ಯನಕ್ತಿ – ದರ್ಶೇತಿ ॥

ಪರನಿಂದಲೇ ಸಮಾಧಾನವನ್ನು ಹೇಳಿಸುವ ಮೂಲಕ ಮಂಗಲಾಚರಣೆಯಲ್ಲೂ ಕೂಡ ಆ ಸಮಾಧಾನವು ಸಮಾನವಾಗಿದೆ ಎಂಬುದಾಗಿ 'ಸ್ಯಾದೇತದೇವಂ' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

'ಸ್ಯಾದೇತದೇವಂ' ಎಂಬಲ್ಲಿ 'ಏವಂ ವ್ಯಭಿಚಾರಾದಿನಾ ಕಾರೀರ್ಯಾದೇರಹೇತುತ್ವಂ ಸ್ಯಾತ್ । ಯದಿ ಹೇತುತ್ವಂ ನಿಷ್ಪ್ರಮಾಣಕಂ ಸ್ಯಾತ್' ವ್ಯಭಿಚಾರಾದಿಗಳಿರುವುದರಿಂದ ಕಾರೀ-ರ್ಯಾದಿಗಳಿಗೆ ಅಹೇತುತ್ವವು ಪ್ರಾಪ್ತವಾಗುತ್ತಿತ್ತು; ಒಂದು ವೇಳೆ ಕಾರೀರ್ಯಾದಿಗಳಿಗೆ ಇರುವ ಹೇತುತ್ವವು ನಿಷ್ಪ್ರಾಮಾಣಿಕವಾಗಿದ್ದರೆ ಎಂದಾಗಿದ್ದರೆ. ಹೀಗೆ ವಾಕ್ಯಯೋಜನೆಯನ್ನು ತಿಳಿಯ-ಬೇಕು.

'ಶ್ರುತಿಯಲ್ಲಿ ಹೇಳಿದ ಸಾಧನೆಯು ಇಲ್ಲದಿದ್ದರೂ ಕೂಡ ಸಾಧ್ಯವು ಇರುವುದಾದರೆ ಅಂತಹ ಸಾಧ್ಯಕ್ಕೆ ಅನೇಕ ಕಾರಣಗಳು ಇರುತ್ತವೆಂಬುದನ್ನು ಕಲ್ಪನೆ ಮಾಡಬೇಕು' ಈ

ವಿಷಯದಲ್ಲಿ ದೃಷ್ಟಾಂತವನ್ನು "ದರ್ಶಪೂರ್ಣಮಾಸಾಭ್ಯಾಮಿವ" ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

## ವೃಷ್ಟ್ಯಾದಿಗಳಿಗೆ ಬೇರೆ ಕಾರಣಗಳು ಕೂಡ ಇರುತ್ತವೆ

ಪರಿಮಳ– ದರ್ಶೋ ನಾಮ ಅಮಾವಾಸ್ಯಾಯಾಂ ಕ್ರಿಯಮಾಣಮಾಗ್ನೇಯಯಾಗದಧಿಯಾಗಪಯೋಯಾಗರೂಪೇಷ್ಟಿತ್ರಯರೂಪಕರ್ಮವಿಶೇಷಃ । ಪೂರ್ಣಮಾಸಸ್ತು ಪೌರ್ಣಮಾಸ್ಯಾಂ ಕ್ರಿಯಮಾಣಾಮಾಗ್ನೇಯೋಪಾಂಶ್ವಗ್ನೀಷೋಮೀಯಾಖ್ಯೇಷ್ಟಿತ್ರಯಾಖ್ಯಂ ಕರ್ಮ । ತಾಭ್ಯಾಂ ದರ್ಶತ್ರಿಕಪೂರ್ಣಮಾಸತ್ರಿಕಾಭ್ಯಾಂ ಯಥಾ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಇತಿ ಶ್ರುತಿಬಲಾತ್ ಸ್ವರ್ಗಪ್ರಾಪ್ತಿಃ ತಥಾ –

'ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ।
ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ॥'

ಇತ್ಯಷ್ಟಾದಶೇ ಗೀತಾಯಾಮುಕ್ತದಿಶಾ ತ್ರೈವರ್ಣಿಕಪರಿಚರ್ಯಾತೀರ್ಥಸ್ನಾನದಾನಾದಿನಾಽಪಿ ತ್ರೈವರ್ಣಿಕೇತರಸ್ಯ ಸ್ವರ್ಗಪ್ರಾಪ್ತಿರ್ಯಥಾ ತಥೈವ ಕಾರಣಾಂತರೇಣಾಽಪಿ ವೃಷ್ಟ್ಯಾದಿಸಂಭವಾದಿತಿ ಭಾವಃ । ಅನ್ವಯವ್ಯಭಿಚಾರಂ ನಿರಾಹ – ಭಾವೇಽಪೀತಿ ॥ ಸಾಧನಸ್ಯ ಭಾವೇಽಪಿ ಸಾಧ್ಯಸ್ಯ ಅಭಾವ ಇತ್ಯರ್ಥಃ ।

ಇಲ್ಲಿ ದರ್ಶ ಎಂದರೆ ಹೀಗರ್ಥ – ಅಮಾವಾಸ್ಯೆಯ ದಿವಸ ಮಾಡಬೇಕಾದ ಆಗ್ನೇಯಯಾಗ, ದಧಿಯಾಗ ಹಾಗೂ ಪಯೋಯಾಗಗಳೆಂಬ ಮೂರು ಇಷ್ಟಿಗಳ ಕರ್ಮವಿಶೇಷ ಎಂದರ್ಥ. ಪೌರ್ಣಮಾಸ ಎಂದರೆ ಹೀಗರ್ಥ – ಹುಣ್ಣಿಮೆಯಲ್ಲಿ ಮಾಡಲ್ಪಡಬೇಕಾದ ಆಗ್ನೇಯಯಾಗ, ಉಪಾಂಶುಯಾಗ, ಅಗ್ನಿಷೋಮೀಯ ಯಾಗ. ಈ ಮೂರು ಇಷ್ಟಿಗಳನ್ನು ಮಾಡುವ ಕರ್ಮ ಎಂದರ್ಥ. ಈ ತ್ರಿಕದ್ವಯಗಳಿಂದ (ದರ್ಶದ ಮೂರು ಯಾಗ ಹಾಗೂ ಪೂರ್ಣಮಾಸದ ಮೂರು ಯಾಗಗಳಿಂದ) 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ಶ್ರುತಿಯು ಹೇಳುವಂತೆ ಸ್ವರ್ಗವು ಪ್ರಾಪ್ತವಾಗುತ್ತದೆ. ಆದರಂತೆ –

'ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ।
ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ॥'

ತ್ರೈವರ್ಣಿಕರ ಸೇವಾರೂಪವಾದ ಕರ್ಮವು ಶೂದ್ರನ ಸ್ವಭಾವದಿಂದ ಬಂದಿರಬೇಕು. ತಮ್ಮ ತಮ್ಮ ಕರ್ಮದಲ್ಲಿ ನಿರತನಾದವನಿಗೆ ಸಿದ್ಧಿಯು ಉಂಟಾಗುತ್ತದೆ. ಹೀಗೆ ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಇದರಂತೆ ತ್ರೈವರ್ಣಿಕರ ಸೇವೆ, ತೀರ್ಥಸ್ನಾನ, ದಾನ ಮೊದಲಾದವುಗಳಿಂದ ತ್ರೈವರ್ಣಿಕರಲ್ಲಿ ಸೇರಲ್ಪಡದ ಶೂದ್ರನಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ. ಇದರಂತೆ ಬೇರೆ ಬೇರೆ ಅಧಿಕಾರಿಗಳಿಗೆ ಬೇರೆ ಬೇರೆ ಕಾರಣಗಳಿಂದ ಸ್ವರ್ಗವು ಪ್ರಾಪ್ತವಾಗುತ್ತದೆ. ಇದರ ಉದಾಹರಣೆಯಂತೆ ಬೇರೆ ಕಾರಣಗಳಿಂದಲೂ ಕೂಡ ವೃಷ್ಟ್ಯಾದಿಗಳು ಆಗಬಹುದು.

''ಭಾವೇಽಪಿ'' ಎಂಬ ವಾಕ್ಯದಿಂದ ಅನ್ವಯವ್ಯಭಿಚಾರವನ್ನು ಪರಿಹರಿಸಿದ್ದಾರೆ. ಸಾಧನವಿದ್ದರೂ ಕೂಡ ಸಾಧ್ಯವು ಇಲ್ಲದಿದ್ದರೆ ಎಂಬುದು ಈ ವಾಕ್ಯದ ಅರ್ಥ.

## ವ್ಯಭಿಚಾರವು ಅನ್ಯಥಾಸಿದ್ಧವಾದರೆ ಬಾಧಕವಾಗುವುದಿಲ್ಲ

ವಾಕ್ಯಾರ್ಥಚಂದ್ರಿಕಾ – 'ಶ್ರುತಿಸಿದ್ಧೇ ಕಾರ್ಯಕಾರಣಭಾವೇ ವ್ಯಭಿಚಾರಶಂಕಾ ನೋನ್ಮಿಷತಿ' ಇತ್ಯೇತತ್ಸಹೇತುಕಮುಪಪಾದಯಿತುಂ ಪ್ರತಿಬಂದೀಮೋಚನವ್ಯಾಜೇನ ಶಂಕಾಮುತ್ಥಾಪಯತಿ – ಸ್ಯಾದೇತದೇವಮಿತಿ ॥ ನಿಷ್ಪ್ರಮಾಣಕಂ ಸ್ಯಾದಿತಿ ॥ 'ಶ್ರುತಿಂ ವಿಹಾಯ ಅನ್ವಯವ್ಯತಿರೇಕಮಾತ್ರಕಲ್ಪ್ಯಂ ಸ್ಯಾತ್' ಇತ್ಯರ್ಥಃ। 'ಶ್ರುತಿಸಿದ್ಧತ್ವೇಽಪಿ ಕಾರ್ಯಕಾರಣಭಾವೇ ಕುತೋ ನ ವ್ಯಭಿಚಾರಶಂಕಾ' ಇತ್ಯತಃ ಅನ್ಯಥಾಸಿದ್ಧತ್ವಾತ್ ತತ್ರ ವ್ಯಭಿಚಾರಸ್ಯ ಅನ್ಯಥಾಸಿದ್ಧಾನ್ವಯವ್ಯತಿರೇಕಯೋಃ ಹೇತುಹೇತುಮದ್ಭಾವಪ್ರಯೋಜಕತ್ವಾಭಾವಸ್ಯೇವ ಅನ್ಯಥಾಸಿದ್ಧವ್ಯಭಿಚಾರಸ್ಯ ತದ್ಬಾಧಕಾಭಾವಾತ್ ಉತ್ಪನ್ನಾ ಅಪಿ ಸಾಽಪ್ರಯೋಜಿಕಾ ಇತ್ಯಾಹ – ಶ್ರುತೀತ್ಯಾದಿನಾ ॥

ಶ್ರುತಿಸಿದ್ಧವಾದ ಕಾರ್ಯಕಾರಣಭಾವದಲ್ಲಿ ವ್ಯಭಿಚಾರಶಂಕೆಯೇ ಹುಟ್ಟುವುದಿಲ್ಲ ಎಂಬುದನ್ನು ಕಾರಣಪುರಸ್ಸರವಾಗಿ ಉಪಪಾದನೆ ಮಾಡಲು ಪ್ರತಿಬಂದೀಮೋಚನ ನೆಪದಿಂದ ಆಶಂಕೆಯನ್ನು ''ಸ್ಯಾದೇತದೇವಂ'' ಇತ್ಯಾದಿಯಾಗಿ ಮಾಡುತ್ತಿದ್ದಾರೆ.

"ನಿಷ್ಪ್ರಮಾಣಕಂ ಸ್ಯಾತ್" – ಶ್ರುತಿಯನ್ನು ಬಿಟ್ಟು ಅನ್ವಯವ್ಯತಿರೇಕದಿಂದಷ್ಟೇ ಕಲ್ಪನೆ ಮಾಡ-ಬೇಕಾದೀತು ಎಂದರ್ಥ. ಶ್ರುತಿಸಿದ್ಧವಾದರೂ ಕಾರ್ಯಕಾರಣಭಾವದಲ್ಲಿ ಏಕೆ ವ್ಯಭಿಚಾರಶಂಕೆಯನ್ನು ಮಾಡಬಾರದು? ಎಂದರೆ, ವ್ಯಭಿಚಾರವು ಅನ್ಯಥಾಸಿದ್ಧವಾಗಿರುತ್ತದೆ. ಹೇಗೆ ಅನ್ಯಥಾಸಿದ್ಧವಾದ ಅನ್ವಯವ್ಯತಿರೇಕಗಳಿಗೆ ಇರುವ ಹೇತುಹೇತುಮದ್ಭಾವವು ಪ್ರಯೋಜಕವಾಗುವುದಿಲ್ಲವೋ ಅದರಂತೆ ಅನ್ಯಥಾಸಿದ್ಧವಾದ ವ್ಯಭಿಚಾರವೂ ಹೇತುಹೇತುಮದ್ಭಾವಗಳಿಗೆ ಬಾಧಕವಾಗುವುದಿಲ್ಲ. ವ್ಯಭಿಚಾರಶಂಕೆ ಹುಟ್ಟಿದರೂ ಕೂಡ ಅಪ್ರಯೋಜಕವಾಗುತ್ತದೆ.

ವಿವರಣೆ – ಶ್ರುತಿಸಿದ್ಧವಾದ ಕಾರ್ಯಕಾರಣಭಾವವಿಷಯದಲ್ಲಿ ವ್ಯಭಿಚಾರಶಂಕೆಯೇ ಹುಟ್ಟು-ವುದಿಲ್ಲ ಎಂಬುದನ್ನು ಹೇತುಪುರಸ್ಸರವಾಗಿ ಉಪಪಾದನೆ ಮಾಡುತ್ತಿದ್ದಾರೆ. ಅದಕ್ಕಾಗಿ ಪೂರ್ವವಾದಿಯು ಪ್ರತಿಬಂದೀಮೋಚನವನ್ನು ಮಾಡುತ್ತಾನೆ. ಅದು ನಮಗೂ ಕೂಡ ಸಮಾನವಾಗಿದೆ ಎಂದು ತಿಳಿಸಲು 'ಸ್ಯಾದೇತದೇವಂ' ಎಂಬ ಗ್ರಂಥವು ಹೊರಟಿದೆ.

'ನಿಷ್ಪ್ರಾಮಾಣಕಂ ಸ್ಯಾತ್' – ಶ್ರುತಿಯನ್ನು ಸ್ವಲ್ಪವೂ ಕೂಡ ಉಪಜೀವನ ಮಾಡದೇ ಕೇವಲ ಅನ್ವಯವ್ಯತಿರೇಕಗಳಿಂದ ಕಾರೀರಿಯಾಗಕ್ಕೂ ವೃಷ್ಟಿಗೂ ಕಾರ್ಯಕಾರಣಭಾವವನ್ನು ಹೇಳಿದ್ದರೆ ವ್ಯಭಿ-ಚಾರ ಬರುತ್ತಿತ್ತು. ಆದರೆ ನಾವು ಶ್ರುತಿಯಿಂದ ಕಾರ್ಯಕಾರಣಭಾವವನ್ನು ಹೇಳುತ್ತಿದ್ದೇವೆ. ಶ್ರುತಿಸಿದ್ಧ-ವಾದಾಗ ಅನ್ವಯವ್ಯಭಿಚಾರವು ಪ್ರಾಪ್ತವಾದರೆ ಪ್ರತಿಬಂಧಕವನ್ನು ಕಲ್ಪನೆ ಮಾಡಬೇಕು. ವ್ಯತಿರೇಕ-ವ್ಯಭಿಚಾರವು ಬಂದರೆ ಅನೇಕಕಾರಣಗಳಿವೆ ಎಂಬುದಾಗಿ ಕಲ್ಪನೆ ಮಾಡಬೇಕು.

ಹೀಗೆ ಶ್ರುತಿಸಿದ್ಧವಾಗಿದೆಯೆಂದು ಹೇಳಿದರೂ ಕೂಡ ಕಾರ್ಯಕಾರಣಭಾವಗಳಲ್ಲಿ ವ್ಯಭಿಚಾರ-ಶಂಕೆಯನ್ನು ಏಕೆ ಮಾಡಬಾರದು? ಎಂದರೆ –

ವ್ಯಭಿಚಾರವು ಅನ್ಯಥಾಸಿದ್ಧವಾಗುತ್ತದೆ. ಅನ್ವಯವ್ಯತಿರೇಕವು ಅನ್ಯಥಾಸಿದ್ಧವಾದಾಗ ಹೇಗೆ ಬಾಧಕ-ವಾಗುವುದಿಲ್ಲವೋ? ಅದರಂತೆ ಅನ್ಯಥಾಸಿದ್ಧವಾದ ವ್ಯಭಿಚಾರವು ಬಾಧಕವೂ ಕೂಡ ಆಗುವುದಿಲ್ಲ. ಅನ್ವಯವ್ಯತಿರೇಕವು ಕಾರ್ಯಕಾರಣಭಾವಕ್ಕೆ ಸಾಧಕವಾಗಿದೆ. ಇದರಿಂದ ಬರುವ ವ್ಯಭಿಚಾರವು ಕಾರ್ಯಕಾರಣಭಾವಕ್ಕೆ ಬಾಧಕವಾಗಿದೆ. ಈ ಅನ್ವಯವ್ಯತಿರೇಕವು ಅನನ್ಯಥಾಸಿದ್ಧವಾಗಿರಬೇಕು. ಅದರಂತೆ ವ್ಯಭಿಚಾರವೂ ಕೂಡ ಅನನ್ಯಥಾಸಿದ್ಧವಾಗಿದ್ದರೆ ಮಾತ್ರ ಬಾಧಕವಾಗುತ್ತದೆ. ಅನ್ಯಥಾಸಿದ್ಧ-ವಾದರೆ ಬಾಧಕವು ಕೂಡ ಆಗುವುದಿಲ್ಲ. ಆದ್ದರಿಂದ ಅನ್ಯಥಾಸಿದ್ಧವಾದ ಅನ್ವಯವ್ಯತಿರೇಕಗಳಿಗೆ ಹೇತುಹೇತುಮದ್ಭಾವವು ಹೇಗೆ ಯುಕ್ತವಾಗುವುದಿಲ್ಲವೋ ಅದರಂತೆ ಅನ್ಯಥಾಸಿದ್ಧವಾದ ವ್ಯಭಿಚಾರವೂ

ಕೂಡ ಬಾಧಕವಾಗುವುದಿಲ್ಲ. ಒಂದು ವೇಳೆ ವ್ಯಭಿಚಾರವು ಬಂದರೂ ಕೂಡ ಅದು ಅಪ್ರಯೋಜಕ-ವಾಗುತ್ತದೆ. ಇದನ್ನು "ಶ್ರುತಿನಿಶ್ಚಿತೇ" ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಯಾದುಪತ್ಯ – ಸ್ವರ್ಗಪ್ರಾಪ್ತೇರಿತಿ ॥ 'ಶೂದ್ರಸ್ಯ' ಇತಿ ಶೇಷಃ । 'ಪರಿಸಮಾಪ್ತ್ಯಾದಿ' ಇತ್ಯತ್ರ ಆದಿಪದೇನ ಪ್ರಚಯಾದಿಪರಿಗ್ರಹಃ । ಏವಮಗ್ರೇಽಪಿ ॥

"ಸ್ವರ್ಗಪ್ರಾಪ್ತೇಃ" ಎಂಬಲ್ಲಿ 'ಶೂದ್ರಸ್ಯ' ಎಂಬುದನ್ನು ಶೇಷಪೂರಣೆ ಮಾಡಿಕೊಳ್ಳಬೇಕು. "ಪರಿಸಮಾಪ್ತ್ಯಾದಿ" ಎಂಬಲ್ಲಿರುವ ಆದಿ ಪದದಿಂದ ಪ್ರಚಯಾದಿಗಳನ್ನು ವಿವಕ್ಷಿಸಬೇಕು. ಮುಂದೂ ಕೂಡ ಇದರಂತೆ ತಿಳಿಯಬೇಕು.

## ಸುಧಾಪರಿಮಳಸಾರ

ಈ ಮೊದಲು ಕಾರ್ಯಕಾರಣಭಾವಕ್ಕೆ ಯಾವುದೇ ಪ್ರಮಾಣವಿಲ್ಲದೇ ಕಲ್ಪನೆ ಮಾಡುವ ಸಂದರ್ಭವಿದ್ದಾಗ ಕಾರ್ಯಕಾರಣಭಾವನಿಶ್ಚಯವನ್ನು ಕುರಿತು ಅನ್ವಯವ್ಯತಿರೇಕಸಹಚಾರಜ್ಞಾನಗಳನ್ನು ಕಾರಣ ಎಂದು ಹೇಳಬೇಕು. ಆಗ ವ್ಯಭಿಚಾರವಿದ್ದರೆ ಕಾರ್ಯಕಾರಣಭಾವ ತೀರ್ಮಾನ ಆಗದೇ ಹೋದೀತು. ಆದರೆ ಕಾರೀರೀಯಾಗವು ವೃಷ್ಟಿಗೆ ಕಾರಣ ಎಂದು ಶ್ರುತಿಸಿದ್ಧವಾಗಿರುವ ಪ್ರಯುಕ್ತ ಯಾಗವಿಲ್ಲದೇ ಮಳೆ ಬಂದರೆ ನಾವು ವ್ಯಭಿಚಾರ ಇದೆ ಎಂದು ಕಾರ್ಯಕಾರಣಭಾವವನ್ನೇ ತ್ಯಜಿಸಬಾರದು. ಹಾಗಾದ ಪಕ್ಷದಲ್ಲಿ ವೇದವನ್ನು ಅಪ್ರಮಾಣವೆಂದು ಹೇಳಿದಂತಾಗುತ್ತದೆ. ಹೊರತಾಗಿ ಮಳೆಗೆ ಅನೇಕ ಕಾರಣಗಳಿವೆ. ಅದರಲ್ಲಿ ಕಾರೀರೀಯಾಗವೂ ಒಂದು. ಅದನ್ನು ಶ್ರುತಿ ಹೇಳುತ್ತಿದೆ. ಯಾಗ ಮಾಡದಿದ್ದರೂ ಬೇರೆ ಕಾರಣದಿಂದ ಮಳೆ ಬಂದಿದೆ ಎಂದು ತೀರ್ಮಾನಿಸಬೇಕು.

ಇದಕ್ಕೊಂದು ಉದಾಹರಣೆ– ದರ್ಶಪೂರ್ಣಮಾಸಯಾಗದಿಂದ ಸ್ವರ್ಗಪ್ರಾಪ್ತಿ ಎಂದು ಶ್ರುತಿ ಹೇಳುತ್ತಿದೆ. ಆದರೆ ಶೂದ್ರಾದಿಗಳಿಗೆ ಯಾಗಾಧಿಕಾರವಿಲ್ಲ. ಅವರಿಗೆ ಸ್ವರ್ಗವಿದೆ. ಯಾಗವಿಲ್ಲದಿದ್ದರೂ ಸ್ವರ್ಗರೂಪ ಕಾರ್ಯವಿರುವುದರಿಂದ ವ್ಯಭಿಚಾರ ಎಂದು ಹೇಳುವಂತಿಲ್ಲ. ಅವರಿಗೆ ತ್ರೈವರ್ಣಿಕರ ಸೇವೆಯಿಂದ ಸ್ವರ್ಗ ಎಂದು ಸ್ಮೃತಿ ಹೇಳುವಂತೆ, ಸ್ವರ್ಗಕ್ಕೆ ಯಾಗವೂ ಕಾರಣ. ಸೇವೆಯೂ ಕಾರಣ. ಶ್ರುತಿ ಒಂದನ್ನು ಹೇಳಿದೆ. ಅಂದ ಮಾತ್ರಕ್ಕೆ ಶ್ರುತಿಪ್ರಾಮಾಣ್ಯಕ್ಕೇನೂ ಚ್ಯುತಿ ಇಲ್ಲ. ಅದರಂತೆಯೇ ಕಾರೀರೀಯಾಗವನ್ನು ಮಾಡಿದರೂ ಮಳೆ ಬರದಿದ್ದಾಗ ಕರ್ತೃವಿನ ಅಥವಾ ಉಳಿದ ಸಾಮಗ್ರಿಗಳ ವೈಗುಣ್ಯದಿಂದ ಕಾರ್ಯ ಆಗಲಿಲ್ಲ ಎಂದು ತಿಳಿಯಬೇಕು. ಹೇತು ಸಾಧ್ಯ–ಸಾಧಕ ಹೌದು. ಅಂದ ಮಾತ್ರಕ್ಕೆ ಬೇರೆ ಸಾಮಗ್ರೀ ಇಲ್ಲದಿದ್ದಾಗ ಅದು ಸಾಧ್ಯಸಾಧಕವಾಗದು, ಎಂಬ ಕಾರಣದಿಂದ ಅದನ್ನು ಅಹೇತು ಎಂದು ಕರೆಯುವಂತಿಲ್ಲ.

## ನೆನೆಪಿಡಿ

* ಕಾರ್ಯಕಾರಣಭಾವವು ಶ್ರುತಿಸಿದ್ಧವಾದಾಗ ಅನ್ವಯವ್ಯಭಿಚಾರವು ಬಂದರೆ ಅನೇಕಕಾರಣಗಳಿವೆ ಎಂಬುದನ್ನು ಕಲ್ಪನೆ ಮಾಡಬೇಕು.

* ಕಾರ್ಯಕಾರಣಭಾವವು ಶ್ರುತಿಸಿದ್ಧವಾದಾಗ ವ್ಯತಿರೇಕವ್ಯಭಿಚಾರವು ಬಂದರೆ ಪ್ರತಿಬಂಧಕವಿದೆ ಎಂದು ಕಲ್ಪನೆ ಮಾಡಬೇಕು.

* ಕಾರ್ಯಕಾರಣಭಾವವು ಕೇವಲ ಅನ್ವಯವ್ಯತಿರೇಕಗಳಿಂದ ತಿಳಿಯಲು ಸಾಧ್ಯವೇ ಇಲ್ಲ. ಶ್ರುತಿಪ್ರಮಾಣವೂ ಅತ್ಯಂತ ಅನಿವಾರ್ಯ.

* ಅನನ್ಯಥಾಸಿದ್ಧವಾದ ಅನ್ವಯವ್ಯತಿರೇಕವು ಮಾತ್ರ ಕಾರ್ಯಕಾರಣಭಾವಕ್ಕೆ ಪ್ರಯೋಜಕವಾಗುತ್ತದೆ. ಅದರಂತೆ ಅನನ್ಯಥಾಸಿದ್ಧವಾದ ವ್ಯಭಿಚಾರವಷ್ಟೇ ಕಾರ್ಯಕಾರಣಭಾವಗಳಿಗೆ ಬಾಧಕವಾಗುತ್ತದೆ.

## ಮಂಗಲಾಚರಣೆಗೆ ಪರಿಸಮಾಪ್ತ್ಯಾದಿಹೇತುತ್ವಸಮರ್ಥನೆ

**ಶ್ರೀಮನ್ನ್ಯಾಯಸುಧಾ– ನ ಚೈವಂ ಸಾಮಗ್ರೀವೈಗುಣ್ಯಶಂಕಯಾ ಪ್ರತಿಬಂಧಕಶಂಕಯಾ ವಾ ಅಸ್ಯಾನನುಷ್ಠಾನಮ್ । ಔತ್ಸರ್ಗಿಕೀ ಖಲು ಪ್ರಾಣಭೃತಾಂ ಪ್ರವೃತ್ತಿಃ ನಿವೃತ್ತಿಸ್ತು ಅಪವಾದಾತ್ । ಅನ್ಯಥೈವಂವಿಧಾಯಾಃ ಶಂಕಾಯಾಃ ಸರ್ವತ್ರ ಸೌಲಭ್ಯೇನ ಸಕಲಪ್ರವೃತ್ತಿವಿಲಯಾಪಾತಾದಿತಿ ॥**

**ಸಮಮೇತತ್ಸಕಲಂ ಪ್ರಕೃತೇಽಪಿ । ಮಂಗಲಾಚರಣಸ್ಯ ನಿರ್ವಿಘ್ನಪರಿಸಮಾಪ್ತ್ಯಾದಿಹೇತುತ್ವಸ್ಯಾಪಿ ಅವಿಗೀತಶಿಷ್ಟಾಚಾರಾನುಮಿತಶ್ರುತಿಸಿದ್ಧತ್ವಾತ್ ।**

ಹಾಗಾದರೆ ಸಾಮಗ್ರಿಗಳು ಅಪೂರ್ಣವಾಗಿವೆ ಎಂಬ ಸಂಶಯ ಬರುತ್ತದೆ. ಅಥವಾ ಪ್ರತಿಬಂಧಕವಿದೆ ಎಂಬ ಸಂಶಯ ಬರುತ್ತದೆ. ಈ ಸಂಶಯದಿಂದಾಗಿ ಕಾರೀರಿಯಾಗವನ್ನು ಮಾಡುವುದಕ್ಕೆ ಪ್ರವೃತ್ತಿ ಉಂಟಾಗುವುದಿಲ್ಲ. ಏಕೆಂದರೆ, ಪ್ರಾಣವುಳ್ಳವರ ಪ್ರವೃತ್ತಿಗಳೆಲ್ಲವೂ

ಸ್ವಾಭಾವಿಕವಾಗಿರುತ್ತದೆ. ಅಪವಾದನಿಮಿತ್ತದಿಂದ ನಿವೃತ್ತಿಯಾಗುತ್ತದೆ. ಹೀಗೆ ಒಪ್ಪದಿದ್ದರೆ ಈ ಬಗೆಯ ಸಂಶಯಗಳು ಪ್ರತಿಯೊಂದು ವಿಷಯಗಳಲ್ಲಿಯೂ ಸುಲಭವಾಗಿ ಹುಟ್ಟುವುದರಿಂದ ಎಲ್ಲರ ಪ್ರವೃತ್ತಿಗಳಿಗೆ ವಿಲೋಪವಾಗುವ ಪ್ರಸಂಗ ಬರುತ್ತದೆ.

ಹೀಗೆ ಹೇಳುವುದೆಲ್ಲವೂ ಮಂಗಲಾಚರಣೆಯ ವಿಷಯದಲ್ಲೂ ಕೂಡ ಸಮಾನವಾಗಿದೆ. ಏಕೆಂದರೆ ಮಂಗಲಾಚರಣೆಯು ನಿರ್ವಿಘ್ನವಾದ ಪರಿಸಮಾಪ್ತಿಗೆ ಕಾರಣವಾಗಿದೆ. ಈ ವಿಷಯದಲ್ಲಿ ಅವಿಗೀತಶಿಷ್ಟಾಚಾರಪರಂಪರೆಯಿಂದ ಅನುಮಿತವಾದ ಶ್ರುತಿಪ್ರಮಾಣವಿದೆ.

## ಮಂಗಲಾಚರಣೆ ಮಾಡಬೇಕೆನ್ನಲು ಅನುಮಿತಶ್ರುತಿಪ್ರಮಾಣವಿದೆ

ಪರಿಮಳ – ಅಸ್ಯೇತಿ ॥ 'ಕಾರೀರ್ಯಾದಿಶ್ರೌತಸಾಧನಸ್ಯ' ಇತ್ಯರ್ಥಃ । ಔತ್ಸರ್ಗಿಕೀ = ಸ್ವಾಭಾವಿಕೀ ॥

ನನು 'ಸಮಮ್' ಇತ್ಯಯುಕ್ತಮ್ । 'ಸಮಾಪ್ತಿಕಾಮೋ ಮಂಗಲಮಾಚರೇತ' ಇತಿ ಸ್ಪಷ್ಟಶ್ರುತೇರಭಾವಾತ್ ಇತ್ಯತ ಆಹ – ಮಂಗಲೇತಿ ॥ ''ಕರ್ಮಾದೌ ಶಿಷ್ಟೈಃ ಕ್ರಿಯಮಾಣೋ ಮಂಗಲಾಚಾರಃ ತತ್ಕರ್ಮಸಮಾಪ್ತ್ಯಾದಿಹೇತುತ್ವಪ್ರಮಾಪೂರ್ವಕಃ ತತ್ಕಾಮನಯೈವ ಶಿಷ್ಟೈರನುಷ್ಠೀಯಮಾನತ್ವಾತ್ ತೃಪ್ತಿಕಾಮನಯಾ ಅನುಷ್ಠೀಯಮಾನಭೋಜನವತ್ । ತದ್ಧೇತುತ್ವಪ್ರಮಾ ಚ ಶ್ರೌತೀ ಭವಿತುಮರ್ಹತಿ ಪ್ರತ್ಯಕ್ಷಾನುಮಾನಗಮ್ಯತ್ವೇ ಸತಿ ಜನ್ಯಪ್ರಮಾತ್ವಾತ್ ಯದೇವಂ ತದೇವಂ ಯಥಾ ಸಮ್ಮತಮ್'' ಇತ್ಯೇವಂರೂಪೇಣ ಅನುಮಿತಶ್ರುತಿಸಿದ್ಧತ್ವಾತ್ ಇತ್ಯರ್ಥಃ।

'ಅಸ್ಯ' – ಕಾರೀರಿ ಮೊದಲಾದ ಶ್ರುತಿಸಿದ್ಧವಾದ ಯಾಗಗಳಿಗೆ ಎಂದರ್ಥ.

''ಔತ್ಸರ್ಗಿಕೀ'' – ಸ್ವಾಭಾವಿಕವಾದದ್ದು.

ಕಾರೀರಿಯಾಗದ ಬಗ್ಗೆ ಹೇಳಿದ್ದನ್ನು ಮಂಗಲಾಚರಣೆಯ ವಿಷಯದಲ್ಲೂ ಕೂಡ ಸಮಾನವೆಂದು ಹೇಳುವುದು ಅಯುಕ್ತವಾಗುತ್ತದೆ. ಏಕೆಂದರೆ, 'ಸಮಾಪ್ತಿಕಾಮೋ ಮಂಗಲಮಾಚರೇತ' ಎಂಬುದಾಗಿ ಸ್ಪಷ್ಟವಾದ ಶ್ರುತಿಪ್ರಮಾಣವು ಇರುವುದಿಲ್ಲ? ಈ ಆಕ್ಷೇಪವನ್ನು ''ಮಂಗಲಾಚರಣಸ್ಯ'' ಎಂಬುದರಿಂದ ಪರಿಹಾರ ಮಾಡುತ್ತಿದ್ದಾರೆ. ಕರ್ಮಾದಿವಿಷಯದಲ್ಲಿ ಶಿಷ್ಟರು ಆಚರಿಸುವ ಮಂಗಲಾಚರಣೆಯು ಆ ಕರ್ಮದ ಪರಿಸಮಾಪ್ತಿ ಎಂಬ ಯಥಾರ್ಥಜ್ಞಾನಪೂರ್ವಕವಾಗಿರುತ್ತದೆ. ಏಕೆಂದರೆ, ಸಮಾಪ್ತಿಯಾಗಬೇಕೆಂಬ ಇಚ್ಛೆಯಿಂದಲೇ ಶಿಷ್ಟರು ಮಂಗಲಾಚರಣೆಯನ್ನು ಮಾಡುತ್ತಾರೆ. ತೃಪ್ತಿಕಾಮನೆಯಿಂದ ಮಾಡುವ ಭೋಜನವು ಈ ವಿಷಯದಲ್ಲಿ ದೃಷ್ಟಾಂತವಾಗಿದೆ. ಮತ್ತು ಮಂಗಲಾಚರಣೆಯು ಸಮಾಪ್ತಿಸಾಧನವೆಂಬ ಯಥಾರ್ಥಜ್ಞಾನವು ಶ್ರುತಿಸಿದ್ಧವಾಗಿರುತ್ತದೆ. ಏಕೆಂದರೆ ಈ ಯಥಾರ್ಥಜ್ಞಾನವು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಹುಟ್ಟಿರುವುದಿಲ್ಲ. ಯಾವುದು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಹುಟ್ಟದೇ ಜನ್ಯವಾಗಿರುತ್ತದೋ ಅದು ಅನುಮಿತವಾದ ಶ್ರುತಿಯಿಂದ ಸಿದ್ಧವಾಗಿರುತ್ತದೆ.

ವಿವರಣೆ – ಕಾರೀರ್ಯಾದಿ ಯಾಗಗಳ ವೃಷ್ಟಿಕಾರಣತ್ವವು ಶ್ರುತಿಸಮ್ಮತವಾಗಿರುವುದರಿಂದ ವ್ಯಭಿಚಾರದೋಷವಿಲ್ಲವೆಂದು ಪೂರ್ವವಾದಿಯು ಹೇಳುತ್ತಾನೆ. ಹಾಗಾದರೆ ಮಂಗಲಾಚರಣೆಗೆ ಸಮಾಪ್ತಿಕಾರಣತ್ವವೂ ಕೂಡ ಶ್ರುತಿಸಮ್ಮತವಾಗಿರುವುದರಿಂದ ವ್ಯಭಿಚಾರದೋಷವಿಲ್ಲವೆಂದು ಉಪಸಂಹಾರ ಮಾಡುತ್ತಿದ್ದಾರೆ. ಪರಿಸಮಾಪ್ತಿಗೆ ಮಂಗಲವು ಕಾರಣವೆಂದು ಸ್ಪಷ್ಟಶ್ರುತಿಯೇ ಕೇಳಿಸುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ ಶಿಷ್ಟಾಚಾರದಿಂದ ಶ್ರುತಿಯನ್ನು ಅನುಮಾನ ಮಾಡಬೇಕೆಂದು ಉತ್ತರಿಸುತ್ತಿದ್ದಾರೆ. ಅನುಮಾನಸ್ವರೂಪ ಹೀಗಿದೆ. 'ಕರ್ಮಾದೌ ಶಿಷ್ಟೈಃ ಕ್ರಿಯಮಾಣೋ ಮಂಗಲಾಚಾರಃ, ತತ್ಕರ್ಮಸಮಾಪ್ತ್ಯಾದಿಹೇತುತ್ವಪ್ರಮಾಪೂರ್ವಕಃ, ತತ್ಕಾಮನಯೈವ ಶಿಷ್ಟೈರನುಷ್ಠೀಯಮಾನತ್ವಾತ್ ತೃಪ್ತಿಕಾಮನಯಾ ಅನುಷ್ಠೀಯಮಾನಭೋಜನವತ್', ಈ ಅನುಮಾನದಿಂದ ಶಿಷ್ಟರು ಮಾಡುವ ಮಂಗಲಾಚರಣೆಯು ಯಥಾರ್ಥಜ್ಞಾನಪೂರ್ವಕವಾಗಿದೆ ಎಂದು ತಿಳಿಯುತ್ತದೆ. ಅನಂತರ 'ತದ್ಧೇತುತ್ವಪ್ರಮಾ ಚ ಶ್ರೌತೀ ಭವಿತುಮರ್ಹತಿ ಪ್ರತ್ಯಕ್ಷಾನುಮಾನಗಮ್ಯತ್ವೇ ಸತಿ ಜನ್ಯಪ್ರಮಾತ್ವಾತ್ ಯದೇವಂ ತದೇವಂ ಯಥಾ ಸಮ್ಮತಮ್' ಎಂಬ ಅನುಮಾನದಿಂದ ಶ್ರುತಿಯನ್ನು ಅನುಮಾನಮಾಡಬೇಕೆಂದು ತಿಳಿಯುತ್ತದೆ.

* * * *

## ವೈಗುಣ್ಯಶಂಕೆ ಹಾಗೂ ಪ್ರತಿಬಂಧಶಂಕೆಗಳಿದ್ದರೆ ಪ್ರವೃತ್ತಿ ಹೇಗೆ?

ವಾಕ್ಯಾರ್ಥಚಂದ್ರಿಕಾ – ನನು ತರ್ಹಿ ಯತ್ನಯುಕ್ತಾ ವ್ಯಭಿಚಾರಸ್ಯ ಅನ್ಯಥಾಸಿದ್ಧಿಃ ತಚ್ಛಂಕಾ-ಪ್ರತಿಬದ್ಧಃ ಶ್ರುತಿನಿಶ್ಚಿತೋಽಪಿ ಹೇತುಹೇತುಮದ್ಭಾವಃ, ಫಲಾರ್ಥಿನೋ ಹೇತೌ ನ ಪ್ರವೃತ್ತಿ-ಪ್ರಯೋಜಕ ಇತ್ಯಾಶಂಕತೇ – ನ ಚೈವಮಿತಿ ॥

ತರ್ಹಿ ಮಂಗಲೇಽಪಿ ಅಯಂ ಪ್ರವೃತ್ತಿಪ್ರಯೋಜಕೋ ಹೇತುಹೇತುಮದ್ಭಾವನಿಶ್ಚಯಾದಿ-ಪ್ರಕಾರಃ ಸಮಃ। ಇಯಾಂಸ್ತು ವಿಶೇಷಃ – ಕಾರೀರ್ಯಾದೌ ಪ್ರತ್ಯಕ್ಷಶ್ರುತಿಃ ಮಂಗಲೇ ತು ಅನುಮಿತಾ ಇತಿ ಸ್ವಾಭಿಪ್ರಾಯಮಾವಿಷ್ಕುರ್ವನ್ ಪ್ರತಿಬಂದೀಮುಪಪಾದಯತಿ – ಸಮಮಿತಿ ॥

ಹಾಗಾದರೆ ಯತ್ನಯುಕ್ತವಾಗಿ ವ್ಯಭಿಚಾರಕ್ಕೆ ಅನ್ಯಥಾಸಿದ್ಧಿಯು ಬರುತ್ತದೋ ತತ್‌ಶಂಕಾಪ್ರತಿ-ಬದ್ಧವಾಗಿ ಶ್ರುತಿನಿಶ್ಚಿತವಾದರೂ ಕೂಡ ಹೇತುಹೇತುಮದ್ಭಾವವು ಫಲಾರ್ಥಿಗೆ ಹೇತುವಿನಲ್ಲಿ ಪ್ರವೃತ್ತಿ-ಪ್ರಯೋಜಕವಾಗುವುದಿಲ್ಲ ಎಂಬುದಾಗಿ ''ನ ಚೈವಂ'' ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

ಹಾಗಾದರೆ ಮಂಗಲದಲ್ಲೂ ಕೂಡ ಈ ಪ್ರವೃತ್ತಿಪ್ರಯೋಜಕವಾದ ಹೇತುಹೇತುಮದ್ಭಾವ-ನಿಶ್ಚಯಾದಿ ಪ್ರಕಾರವು ಸಮಾನವಾಗಿದೆ. ಇಷ್ಟು ಮಾತ್ರ ವ್ಯತ್ಯಾಸ. ಕಾರೀರ್ಯಾದಿಗಳಲ್ಲಿ ಪ್ರತ್ಯಕ್ಷಶ್ರುತಿ-ಯಿದೆ; ಮಂಗಲದಲ್ಲಿ ಅನುಮಿತಶ್ರುತಿ ಇದೆ. ಈ ಅಭಿಪ್ರಾಯವನ್ನು ಆವಿಷ್ಕಾರ ಮಾಡುವ ಮೂಲಕ ''ಸಮಮ್'' ಇತ್ಯಾದಿಯಾಗಿ ಪ್ರತಿಬಂದೀಯನ್ನು ಉಪಪಾದನೆ ಮಾಡುತ್ತಿದ್ದಾರೆ.

ವಿವರಣೆ – ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳು ದೋಷವೇ ಅಲ್ಲ. ವ್ಯಭಿ-ಚಾರವು ಅನ್ಯಥಾಸಿದ್ಧವಾಗುತ್ತದೆಂದು ಹೇಳಲಾಯಿತು. ಆದರೆ ವ್ಯಭಿಚಾರಕ್ಕೆ ಅನ್ಯಥಾಸಿದ್ಧಿಯು ಯತ್ನಯುಕ್ತವಾಗಿ ಪ್ರಾಪ್ತವಾಗಿದೆಯೋ ಅದರ ಶಂಕೆಯಿಂದ ಪ್ರವೃತ್ತಿ ಆಗದೇ ಇರಬೇಕಾದೀತು! ಉದಾಹರಣೆ – ಅನ್ವಯವ್ಯಭಿಚಾರವು ಪ್ರತಿಬಂಧಕಪ್ರಯುಕ್ತವಾಗಿದೆ. ಕಾರೀರಿಯಾಗವನ್ನು ಮಾಡಿ-ದರೂ ವೃಷ್ಟಿ ಆಗದೇ ಇದ್ದರೆ ಕರ್ತೃವೈಗುಣ್ಯದಿಂದ ಅಥವಾ ಪ್ರತಿಬಂಧಕ ಇರುವುದರಿಂದ ಉತ್ತರಿಸ-ಬೇಕು. ಈ ಅನ್ವಯವ್ಯಭಿಚಾರಕ್ಕೆ ವೈಗುಣ್ಯ ಅಥವಾ ಪ್ರತಿಬಂಧಕವನ್ನು ಕಾರಣವನ್ನಾಗಿ ಹೇಳಬೇಕು. ಅನ್ಯಥಾಸಿದ್ಧಿಗೆ ಯಾವುದು ಕಾರಣವೆಂದರೆ ವೈಗುಣ್ಯ ಅಥವಾ ಪ್ರತಿಬಂಧಕವೆಂದು ಹೇಳಿದಂತಾಗುತ್ತದೆ. ಈ ವೈಗುಣ್ಯಶಂಕೆಯಿಂದ ಮತ್ತು ಪ್ರತಿಬಂಧಕದ ಶಂಕೆಯಿಂದ ಪ್ರವೃತ್ತಿಯೇ ಉಂಟಾಗುವುದಿಲ್ಲ. ಏಕೆಂದರೆ ಕಾರೀರಿಯಾಗ ಮಾಡುವುದಾದರೆ ವೈಗುಣ್ಯ ಬರಬಹುದು ಅಥವಾ ಪ್ರತಿಬಂಧಕ ಬರ-ಬಹುದೆಂಬ ಶಂಕೆಯು ಪ್ರವೃತ್ತಿ ಮಾಡುವವನಿಗೆ ಉಂಟಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ವೃಷ್ಟಿಯು ಫಲವಾಗಿದೆ; ಅದನ್ನು ಬಯಸುವವನು ಕಾರೀರಿ-ಯಾಗದಲ್ಲಿ ಪ್ರವೃತ್ತಿ ಮಾಡುತ್ತಾನೆ. ಈ ಪ್ರವೃತ್ತಿಗೆ ಹೇತುಹೇತುಮದ್ಭಾವವೇ ಪ್ರಯೋಜಕವಾಗಿದೆ. ಇದು ಶ್ರುತಿನಿಶ್ಚಿತವಾಗಿದೆ. ಈ ಹೇತುಹೇತುಮದ್ಭಾವದ ನಿಶ್ಚಯವೂ ಆಗಿರುತ್ತದೆ. ಆದರೂ ಕೂಡ ವೃಷ್ಟಿಯೆಂಬ ಫಲಾರ್ಥಿಗೆ ಹೇತುವಿನಲ್ಲಿ ಪ್ರವೃತ್ತಿಯೇ ಕೂಡುವುದಿಲ್ಲ. ಏಕೆಂದರೆ ಇಲ್ಲಿ ವ್ಯಭಿಚಾರಶಂಕೆಯು ಪ್ರವೃತ್ತಿ ಮಾಡುವವನಿಗೆ ಬಂದಿರುವುದಿಲ್ಲ. ಆದರೆ ವ್ಯಭಿಚಾರಕ್ಕೆ ಅನ್ಯಥಾಸಿದ್ಧಿಶಂಕೆಯು ಯತ್ರಯುಕ್ತವಾಗಿ ಬಂದಿದೆಯೋ ಅದರಲ್ಲಿ ಸಂಶಯವು ಉಂಟಾಗಿದೆ. ಅಂದರೆ ವೈಗುಣ್ಯಾದಿಗಳಲ್ಲಿ ಶಂಕೆಯು ಬರುತ್ತಿದೆ ಎಂಬುದಾಗಿ ಆಶಂಕೆಯನ್ನು "ನ ಚೈವಂ" ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

## ಅನುಮಾನದಲ್ಲಿ ದಳಕೃತ್ಯವಿಚಾರ

ಯಾದುಪತ್ಯ – ಅವಿಗೀತಶಿಷ್ಟಾಚಾರೇತಿ ॥ ಶ್ರುತ್ಯನುಮಾಪಕಂ ಚ – 'ಮಂಗಲಂ ಶ್ರುತಿ-ಪ್ರಮಾಪಿತಾಭೀಷ್ಟಪರಿಸಮಾಪ್ತ್ಯಾದಿಹೇತುತಾಕಂ, ತದುದ್ದೇಶ್ಯಕಾವಿಗೀತಶಿಷ್ಟಾಚಾರವಿಷಯತ್ವಾತ್ ಯತ್ ಯತ್ ಯದುದ್ದೇಶಕಾವಿಗೀತಶಿಷ್ಟಾಚಾರವಿಷಯಃ, ತತ್ ತದ್ಧೇತುತಯಾ ಶ್ರುತಿ-ಪ್ರಮಾಪಿತಮ್, ಯಥಾ ಸ್ವರ್ಗೋದ್ದೇಶಕಂ ದರ್ಶಾದಿಃ' ಇತಿ ಸಾಮಾನ್ಯವ್ಯಾಪ್ತಿಮೂಲಕಂ ದ್ರಷ್ಟವ್ಯಮ್ । ನನು ವೇದನಿಷಿದ್ಧಾಚಾರಸ್ಯ ಅಶಿಷ್ಟಾಚಾರತ್ವೇನ ಅಗಮ್ಯಗಮನಾದೌ ಶಿಷ್ಟಪದೇನೈವ ವ್ಯಭಿಚಾರವಾರಣೇ ಅವಿಗೀತಪದಂ ವ್ಯರ್ಥಮಿತಿ ಚೇನ್ನ, ವೇದಪ್ರಾಮಾಣ್ಯಾನಭ್ಯುಪಗಮಾ-ಸಂಭಾವಿತಾಚಾರಸ್ಯೈವ ಅತ್ರ ಶಿಷ್ಟಾಚಾರಪದೇನ ವಿವಕ್ಷಿತತ್ವಾತ್ । ತಸ್ಯ ಚ ರಾತ್ರಿಶ್ರಾದ್ಧಾದೌ ವ್ಯಭಿಚಾರವಾರಣಾಯ 'ಅವಿಗೀತ'ಪದಮ್ । ಅವಿಗೀತಾಚಾರತ್ವಮಾತ್ರಸ್ಯ ಚ ಭೋಜನಾದೌ ವ್ಯಭಿಚಾರಪರಿಹಾರಾಯ 'ಶಿಷ್ಟ'ಪದಮ್ । ಭೋಜನಾದೇಶ್ಚ ವೇದಪ್ರಾಮಾಣ್ಯಾನಭ್ಯುಪಗಂತರಿ ಬೌದ್ಧೇಽಪಿ ಸತ್ತ್ವೇನ ಉಕ್ತರೂಪಶಿಷ್ಟಾಚಾರಪರತ್ವಾಭಾವಾನ್ನ ವ್ಯಭಿಚಾರ ಇತಿ।

'ಅವಿಗೀತಶಿಷ್ಟಾಚಾರ' – ಶ್ರುತ್ಯನುಮಾಪಕವಾದದ್ದು ಹೀಗಿದೆ – 'ಮಂಗಲವು ಶ್ರುತಿಪ್ರಮಾಪಿತ-ವಾದ ಅಭೀಷ್ಟವಾದ ಪರಿಸಮಾಪ್ತ್ಯಾದಿಗಳಿಗೆ ಕಾರಣವಾಗಿದೆ. ಏಕೆಂದರೆ, ಪರಿಸಮಾಪ್ತಿಯ ಉದ್ದೇಶ-ದಿಂದ ಅವಿಗೀತಶಿಷ್ಟಾಚಾರಕ್ಕೆ ವಿಷಯವಾಗಿದೆ. ಯಾವುದು ಯಾವುದರ ಉದ್ದೇಶದಿಂದ ಅವಿಗೀತವಾದ ಶಿಷ್ಟಾಚಾರಕ್ಕೆ ವಿಷಯವಾಗಿದೆಯೋ ಅದು ಅದಕ್ಕೆ ಕಾರಣವೆಂದು ಶ್ರುತಿಸಿದ್ಧವಾಗಿರುತ್ತದೆ. ಸ್ವರ್ಗೋ-ದ್ದೇಶಕವಾದ ದರ್ಶಾದಿಗಳೇ ಈ ವಿಷಯದಲ್ಲಿ ಉದಾಹರಣೆಯಾಗಿವೆ. ಹೀಗೆ ಸಾಮಾನ್ಯವ್ಯಾಪ್ತಿಯ ಮೂಲವಾಗಿ ಪರಿಸಮಾಪ್ತಿಗೆ ಮಂಗಲವು ಕಾರಣವಾಗಿದೆ ಎಂಬ ಶ್ರುತಿಪ್ರಮಾಣವನ್ನು ತಿಳಿಯಬೇಕು.

ವೇದನಿಷಿದ್ಧವಾದ ಆಚಾರವು ಅಶಿಷ್ಟಾಚಾರ ಎನಿಸುವುದರಿಂದ ಅಗಮ್ಯಾಗಮನಾದಿಗಳಲ್ಲಿ ಶಿಷ್ಟಪದದಿಂದಲೇ ವ್ಯಭಿಚಾರವು ಪರಿಹಾರವಾಗುತ್ತದೆ. ಆದ್ದರಿಂದ ಅವಿಗೀತ ಎಂಬ ಪದವು ವ್ಯರ್ಥ-ವಲ್ಲವೇ? ಈ ಪ್ರಶ್ನೆಯು ತಪ್ಪು. ಶಿಷ್ಟಾಚಾರ ಎಂದರೆ ವೇದಪ್ರಾಮಾಣ್ಯಾನಭ್ಯುಪಗಮಾಸಂಭಾವಿತ ಆಚಾರ ಎಂದರ್ಥ. ಇದು ಅಗಮ್ಯಾಗಮನದಲ್ಲಿ ಇಲ್ಲದೇ ಇರಬಹುದು. ಆದರೆ ರಾತ್ರಿಶ್ರಾದ್ಧಾದಿಗಳಲ್ಲಿ ಇರುತ್ತದೆ ಅಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಅವಿಗೀತಪದವನ್ನು ನೀಡಲೇ ಬೇಕು. ಅವಿಗೀತಆಚಾರತ್ವ-ಮಾತ್ರವು ಭೋಜನಾದಿಗಳಲ್ಲಿ ಇರುವುದರಿಂದ ಪುನಃ ವ್ಯಭಿಚಾರವು ಬರುತ್ತದೆ. ಶಿಷ್ಟಪದವನ್ನು ವಿಶೇಷಣವನ್ನಾಗಿ ನೀಡಬೇಕು. ವೇದಪ್ರಾಮಾಣ್ಯವನ್ನು ಒಪ್ಪದ ಬೌದ್ಧಾದಿಗಳೂ ಕೂಡ ಭೋಜನಾದಿ-ಗಳನ್ನು ಮಾಡುವುದರಿಂದ ಹಿಂದೆ ಹೇಳಿದಂತೆ ಶಿಷ್ಟಾಚಾರಪರತ್ವವು ಇರುವುದಿಲ್ಲ. ಆದ್ದರಿಂದ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ.

ವಿವರಣೆ – ಸಮಾಪ್ತಿಯನ್ನು ಕುರಿತು ಮಂಗಲವು ಕಾರಣವಾಗಿದೆ ಎಂಬ ವಿಷಯದಲ್ಲಿ ಅನ್ವಯ-ವ್ಯತಿರೇಕಗಳಷ್ಟೇ ಅಲ್ಲ. ಶ್ರುತಿಪ್ರಮಾಣವೂ ಕೂಡ ಇರುತ್ತದೆಂದು ಹೇಳಲಾಯಿತು. 'ಸಮಾಪ್ತಿಕಾಮೋ ಮಂಗಲಮಾಚರೇತ' ಎಂಬ ಶ್ರುತಿಯು ಕಾಣಿಸುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ ಅನುಮಾನಪ್ರಮಾಣದಿಂದ ಇಂಥ ಶ್ರುತಿಯನ್ನು ಸಾಧಿಸಬೇಕೆಂದು ಉತ್ತರಿಸುತ್ತಿದ್ದಾರೆ. ಆ ಅನುಮಾನಪ್ರಮಾಣವು ಹೀಗಿದೆ – 'ಮಂಗಲಂ ಶ್ರುತಿಪ್ರಮಾಪಿತಾಭೀಷ್ಟಪರಿಸಮಾಪ್ತ್ಯಾದಿಹೇತುತಾಕಂ, ತದುದ್ದೇಶ್ಯಕಾವಿಗೀತಶಿಷ್ಟಾಚಾರ-ವಿಷಯತ್ವಾತ್ ಯತ್ ಯದುದ್ದೇಶಕಾವಿಗೀತಶಿಷ್ಟಾಚಾರವಿಷಯಃ, ತತ್ ತದ್ಧೇತುತಯಾ ಶ್ರುತಿ-ಪ್ರಮಾಪಿತಮ್, ಯಥಾ ಸ್ವರ್ಗೋದ್ದೇಶಕಂ ದರ್ಶಾದಿಃ'

ಈ ಅನುಮಾನದಲ್ಲಿ ಅವಿಗೀತಪದಕ್ಕೆ ವಿಪ್ರತಿಪತ್ತಿ ಇಲ್ಲದ್ದು ಎಂದರ್ಥ. ಈ ವಿಶೇಷಣವನ್ನು ನೀಡುವ ಆವಶ್ಯಕತೆಯೇನು? ಕೇವಲ ಶಿಷ್ಟಪದಪ್ರಯೋಗದಿಂದಲೇ ಅವಿಗೀತಪದಾರ್ಥದಿಂದ ದೊರೆ-ಯುವ ಲಾಭವು ದೊರೆಯುತ್ತದೆ. ಏಕೆಂದರೆ, ವೇದವಿರುದ್ಧವಾದ ಆಚಾರವನ್ನು ಯಾರು ಮಾಡು-ತ್ತಾರೋ ಅವರು ಅಶಿಷ್ಟರೇ ಆಗಿರುತ್ತಾರೆ. ಅಗಮ್ಯಾಗಮನಾದಿಗಳಲ್ಲಿ ತೊಡಗುವವರನ್ನು ಶಿಷ್ಟಪದ-ದಿಂದಲೇ ವ್ಯಾವೃತ್ತಿ ಮಾಡಬಹುದು. ಆದ್ದರಿಂದ ಅವಿಗೀತಪದವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ರಾತ್ರಿಶ್ರಾದ್ಧಾದಿಗಳಲ್ಲಿ ವ್ಯಭಿಚಾರಪರಿಹಾರ ಮಾಡುವುದಕ್ಕಾಗಿ ಅವಿಗೀತಪದವು ಸಾರ್ಥಕವೆಂದು ಉತ್ತರಿಸುತ್ತಿದ್ದಾರೆ. ಯಾವ ವಾದಿಗಳು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೋ ಅವರೂ ಕೂಡ ರಾತ್ರಿಶ್ರಾದ್ಧವನ್ನು, ಏಕಾದಶೀಶ್ರಾದ್ಧವನ್ನು ಆಚರಿಸುತ್ತಾರೆ. ಅಂಥಲ್ಲಿ ವೇದಪ್ರಾಮಾಣ್ಯಾನಭ್ಯುಪಗಮಾ-ಸಂಭಾವಿತ ಆಚಾರವು ಇರುವುದರಿಂದ ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕಾಗಿ ಅವಿಗೀತ-

ಪದವನ್ನು ನೀಡಲೇ ಬೇಕು. ರಾತ್ರಿಶ್ರಾದ್ಧಾದಿಗಳಲ್ಲಿ ವಿಪ್ರತಿಪತ್ತಿಯೇ ಇರುವುದರಿಂದ ಅವಿಗೀತ-ಪದದಿಂದ ತಿಳಿಯುವ ಅವಿಪ್ರತಿಪತ್ತಿಯು ಇರುವುದಿಲ್ಲ. ಆದ್ದರಿಂದ ಅವಿಗೀತ ಎಂಬ ವಿಶೇಷಣವನ್ನು ನೀಡಲೇಬೇಕು.

ಹಾಗಾದರೆ ಅವಿಗೀತಾಚಾರತ್ವ ಎಂದಷ್ಟೇ ಹೇಳಿದರೆ ಸಾಕು. ಶಿಷ್ಟಪದವೇಕೆ? ಎಂಬ ಪ್ರಶ್ನೆಗೆ "ಭೋಜನಾದಿಗಳಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡುವುದಕ್ಕಾಗಿ ಶಿಷ್ಟಪದವನ್ನು ಕೂಡ ನೀಡಲೇ-ಬೇಕು. ಬೌದ್ಧಾದಿಗಳು ವೇದಪ್ರಾಮಾಣ್ಯವನ್ನು ಅಂಗೀಕಾರ ಮಾಡುವುದಿಲ್ಲ. ಆದರೆ ಭೋಜನಾದಿ-ಗಳನ್ನು ಮಾಡುತ್ತಾರೆ. ಇದು ಅವಿಗೀತವಾದ ಆಚಾರವೇ ಆಗಿದೆ. ಹಾಗಾಗಿ ಶಿಷ್ಟಪದವನ್ನು ನೀಡಲೇ-ಬೇಕು. ಬೌದ್ಧಾದಿಗಳು ಶಿಷ್ಟರಲ್ಲದ ಕಾರಣ ವ್ಯಭಿಚಾರವು ಬರುವುದಿಲ್ಲ.

## ಸುಧಾಪರಿಮಳಸಾರ

ಕರ್ತೃವಿನಲ್ಲಿ ಯಾವುದೇ ದೋಷವಿಲ್ಲ. ಕರಣಾದಿಗಳಲ್ಲಿಯೂ ದೋಷವಿಲ್ಲ ಎಂದು ನಿಶ್ಚಯವಿದ್ದರೂ ಯಾಗ ಮಾಡಿದಾಗ ಫಲ ಸಿಗದಿದ್ದರೆ ಆಗ ಪ್ರಬಲಪ್ರತಿಬಂಧಕವಿದೆ ಎಂದು ಭಾವಿಸಬೇಕು. ಏಕೆಂದರೆ ಪ್ರತಿಬಂಧಕ-ವಿದ್ದಾಗ ಕಾರ್ಯಜನಕವಾಗಲಿಲ್ಲ ಎಂಬ ಕಾರಣದಿಂದ ಕಾರಣವನ್ನು ಕಾರಣವೇ ಅಲ್ಲ ಎಂದು ಹೇಳಲಾಗದು. ಒಂದು ವೇಳೆ ಹಾಗೆ ಹೇಳುವುದಾದರೆ ಬೆಂಕಿಯು ಸ್ಫೋಟವನ್ನು ಕುರಿತು ಕಾರಣವಲ್ಲ ಎಂದೇ ಹೇಳಬೇಕಾದೀತು. ಪ್ರತಿಬಂಧಕವಿದ್ದರೆ ಬೆಂಕಿಯೂ ಸ್ಫೋಟಕ್ಕೆ ಕಾರಣವಾಗದು ತಾನೇ?

ಹಾಗಾದರೆ ಮಳೆ ಬರಲು ಯಾಗ ಮಾಡಬೇಕೆಂದು ಶ್ರುತಿ ಹೇಳುತ್ತಿದ್ದರೂ ಕರ್ತ್ರಾದಿವೈಗುಣ್ಯ ಶಂಕೆಯಿಂದ, ಅಥವಾ ಪ್ರತಿಬಂಧಕಶಂಕೆಯಿಂದ ಯಾಗವನ್ನು ಯಾರೂ ಮಾಡದೇ ಇರುವ ಪ್ರಸಂಗ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಎಲ್ಲ ಮನುಷ್ಯರು ಸಹಜವಾಗಿ ಪ್ರವೃತ್ತಿ ಮಾಡುತ್ತಾರೆ. ಆದರೆ ನಿವೃತ್ತಿ ಮಾತ್ರ ಅಪವಾದದಿಂದ. ಅಷ್ಟೇ ಅಲ್ಲದೇ ಇಂತಹ ಶಂಕೆ ಎಲ್ಲಾ ಕಾರ್ಯದಲ್ಲಿಯೂ ಬರಬಹುದು. ಆದುದರಿಂದ ಯಾವ ಕಾರ್ಯದಲ್ಲಿಯೂ ಯಾರ ಪ್ರವೃತ್ತಿಯೂ ಆಗದೇ ಇರಬೇಕಾದೀತು.

## ಪಾಕ್ಷಿಕೋಽಪಿ ದೋಷಃ ಪರಿಹರ್ತವ್ಯಃ

**ಶ್ರೀಮನ್ನ್ಯಾಯಸುಧಾ – ನ ತಾವತ್ ಪ್ರೇಕ್ಷಾವತ್‌ಪ್ರವೃತ್ತಿರ್ವಿಫಲಾ ಸಂಭಾವಿನೀ । ನಾಪಿ ಪ್ರಯೋಜನಾಂತರಾರ್ಥಾ । ದೃಷ್ಟಪರಿತ್ಯಾಗಾದೃಷ್ಟಕಲ್ಪನಾಪ್ರಸಂಗಾತ್ ।**

ಪ್ರೇಕ್ಷಾವಂತರ ಪ್ರವೃತ್ತಿಯು ಯಾವುದೇ ಪ್ರಯೋಜನವಿಲ್ಲದೇ ಇರಲು ಸಾಧ್ಯವೇ ಇಲ್ಲ. ಮತ್ತು ಮಂಗಲಾಚರಣೆಯ ಪ್ರವೃತ್ತಿಗೆ ಬೇರೆ ಪ್ರಯೋಜನದ ಉದ್ದೇಶವಿರಲೂ ಕೂಡ ಸಾಧ್ಯವಿಲ್ಲ. ಬೇರೆ ಪ್ರಯೋಜನವನ್ನು ಕಲ್ಪನೆ ಮಾಡಿದರೆ ದೃಷ್ಟಪರಿತ್ಯಾಗ, ಅದೃಷ್ಟ-ಕಲ್ಪನೆ ಎಂಬೆರೆಡು ದೋಷಗಳು ಬರುತ್ತವೆ.

**ಕಾರ್ಯಮಾರಿಪ್ಸುಃ ಖಲು ತತ್ಸಮಾಪ್ತ್ಯಾದಿಕಂ ಕಾಮಯತ ಇತ್ಯನುಭವಸಿದ್ಧಮ್ । ನ ಚ ಫಲಾಂತರಾನುಸಂಧಾನೇ ಪ್ರಮಾಣಮಸ್ತಿ ।**

'ಯಾರು ಕಾರ್ಯವನ್ನು ಮಾಡಬೇಕೆಂದು ಅಪೇಕ್ಷಿಸುತ್ತಾನೋ ಅವನು ಆ ಕಾರ್ಯದ ಪರಿಸಮಾಪ್ತಿಯಾಗಬೇಕು ಎಂಬ ಅಪೇಕ್ಷೆಯನ್ನು ಹೊಂದಿಯೇ ಇರುತ್ತಾನೆ' ಎಂಬುದು ಅನುಭವಸಿದ್ಧವಾಗಿದೆ. ಪರಿಸಮಾಪ್ತಿಯೆಂಬ ಪ್ರಯೋಜನವನ್ನು ಬಿಟ್ಟು ಮತ್ತೊಂದು ಪ್ರಯೋಜನವಿದೆ ಎನ್ನಲು ಪ್ರಮಾಣವೂ ಕೂಡ ಇರುವುದಿಲ್ಲ.

**ನ ಚೈತೇಷಾಮಿಯಂ ಸಾಧ್ಯಸಾಧನಭಾವಪ್ರತೀತಿರ್ಭ್ರಾಂತಿಃ । ತಥಾ ಸತ್ಯವಿಗಾ-ನಾನುಪಪತ್ತೇಃ ।**

ಜ್ಞಾನಿಜನರಿಗೆ 'ಮಂಗಲವು ಸಮಾಪ್ತಿಫಲಕವಾಗಿದೆ' ಎಂಬ ಪ್ರತೀತಿಯು ಇರುತ್ತದೆ. ಇದು ಭ್ರಮೆಯಲ್ಲ. ಹಾಗೇನಾದರೂ ಭ್ರಮೆಯಾಗಿದ್ದಲ್ಲಿ ಮಂಗಲವು ಸಮಾಪ್ತಿಫಲಕ-ವೆಂಬುದು ಸಕಲಸಮ್ಮತವಾಗಿದೆ ಎಂಬುದೇ ಅನುಪಪನ್ನವಾಗುತ್ತದೆ.

**ನ ಚ ಪ್ರತ್ಯಕ್ಷಾದೇರತ್ರ ಅವಕಾಶ ಇತಿ, ಶ್ರುತಿರೇವ ಶಿಷ್ಟಾಚಾರಮೂಲಂ ಕಲ್ಪ್ಯತೇ ।**

ಮಂಗಲವು ಸಮಾಪ್ತಿಗೆ ಕಾರಣವಾಗಿದೆ ಎಂಬ ಜ್ಞಾನವು ಪ್ರತ್ಯಕ್ಷಾದಿಗಳಿಂದ ತಿಳಿಯಲು ಸಾಧ್ಯವಿಲ್ಲ; ಏಕೆಂದರೆ, ಪ್ರತ್ಯಕ್ಷಪ್ರಮಾಣಕ್ಕೆ ಇಲ್ಲಿ ಅವಕಾಶವಿಲ್ಲ. ಶಿಷ್ಟಾಚಾರದಲ್ಲಿ ಶ್ರುತಿಯೇ ಮೂಲಪ್ರಮಾಣವೆಂದು ಕಲ್ಪನೆ ಮಾಡಬೇಕು.

**ನ ಚ ವಿಘ್ನಹೇತುಸದ್ಭಾವಾನಿಶ್ಚಯಾದಿದಮನುಷ್ಠೇಯಮ್ ತತ್ಸಂದೇಹೇಽಪಿ ಅನುಷ್ಠಾನಸ್ಯ 'ಪಾಕ್ಷಿಕೋಽಪಿ ದೋಷಃ ಪರಿಹರ್ತವ್ಯಃ' ಇತಿ ನ್ಯಾಯಪ್ರಾಪ್ತ-ತ್ವಾತ್ ।**

ಪರಿಸಮಾಪ್ತಿಗೆ ಯಾವ ವಿಘ್ನವು ಉಂಟಾಗುತ್ತದೋ ಆ ವಿಘ್ನಕ್ಕೆ ಕಾರಣವಾದ ದುರಿತಗಳು ಇರುತ್ತವೆಂಬ ವಿಷಯದಲ್ಲಿ ನಿಶ್ಚಯವು ಇರುವುದಿಲ್ಲ. ಆದ್ದರಿಂದ ಮಂಗಲಾ-ಚರಣೆಯನ್ನು ಮಾಡಬಾರದೆಂಬುದೂ ಕೂಡ ಯುಕ್ತವಾಗುವುದಿಲ್ಲ. ಏಕೆಂದರೆ ವಿಘ್ನಗಳಿವೆ ಎಂಬ ನಿಶ್ಚಯವಿಲ್ಲದೇ ಸಂದೇಹವಿದ್ದರೂ ಕೂಡ 'ವಿಘ್ನಗಳಿದ್ದರೆ ಪರಿಹಾರವಾಗಲಿ' ಎಂಬ ಯುಕ್ತಿಯಿಂದ ಮಂಗಲಾಚರಣವನ್ನು ಮಾಡಬೇಕೆಂಬುದು 'ಪಾಕ್ಷಿಕೋಽಪಿ ದೋಷಃ ಪರಿಹರ್ತವ್ಯಃ' ಎಂಬ ನ್ಯಾಯದಿಂದ ಪ್ರಾಪ್ತವಾಗಿದೆ.

**ನ ಚ 'ಭಗವತಃ ಸೂತ್ರಕಾರಸ್ಯ ವಿಘ್ನಾ ಏವ ನ ಸಂತೀತಿ, ತತ್ಪರಿಹಾರಾರ್ಥಾನ-ನುಷ್ಠಾನಂ ನ ದೋಷಾಯ' ಇತಿ ಯುಕ್ತಮ್ । ಶಿಷ್ಯಾರ್ಥಮಪಿ ಕರ್ತವ್ಯತ್ವಾತ್ । ಯತೋ ಮಂಗಲಾಚರಣಪುರಃಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ, ಆಯುಷ್ಮತ್ಪುರುಷಕಾಣಿ ಚ । ಅನ್ಯಥಾ ಭಾರತಾದಾವಪಿ ನ ಕುರ್ಯಾತ್ ।**

ಸೂತ್ರಕಾರರಾದ ಷಡ್ಗುಣೈಶ್ವರ್ಯಸಂಪನ್ನರಾದ ಬಾದರಾಯಣರಿಗೆ ವಿಘ್ನಗಳು ಸರ್ವಥಾ ಇರುವುದಿಲ್ಲ. ಆದ್ದರಿಂದ ವಿಘ್ನಗಳ ಪರಿಹಾರಕ್ಕಾಗಿ ಮಂಗಲಾಚರಣವನ್ನು ಅವರು ಮಾಡದೇ ಇರುವುದು ಸರ್ವಥಾ ದೋಷವಾಗುವುದಿಲ್ಲ. ಆದರೆ ಶಿಷ್ಯರ ಶ್ರೇಯಸ್ಸಿಗಾಗಿ ಮಂಗಲಾಚರಣೆಯನ್ನು ಮಾಡಬೇಕು. ಏಕೆಂದರೆ ಮಂಗಲಾಚರಣ-ಪೂರ್ವಕವಾದ ಶಾಸ್ತ್ರಗಳು ಸತ್ವಯುತವಾಗುತ್ತವೆ. ಆಯುಷ್ಯವರ್ಧಕವಾಗುತ್ತವೆ. ಹೀಗೊ-ಪ್ಪದಿದ್ದರೆ ಮಹಾಭಾರತಾದಿಗಳಲ್ಲೂ ಕೂಡ ಮಂಗಲಾಚರಣೆಯನ್ನು ಬಾದರಾಯಣರು ಮಾಡದೇ ಇರಬೇಕಾಗಿತ್ತು.

**ಏತೇನ 'ಸೂತ್ರಕೃತಾ ಕೃತಮೇವ ಮಂಗಲಮ್ । ಕಿಂ ನಾಮ ಗ್ರಂಥಾದೌ ನ ನಿವೇಶಿತಮ್' ಇತ್ಯಪಿ ನಿರಸ್ತಮ್ ।**

ಹೀಗೆ ಹೇಳಿದ್ದರಿಂದ ಸೂತ್ರಕಾರರು ಸರ್ವಥಾ ಮಂಗಲಾಚರಣೆಯನ್ನು ಮಾಡಿರುತ್ತಾರೆ. ಆದರೆ ಗ್ರಂಥದಲ್ಲಿ ಅದನ್ನು ಸೇರಿಸಿರುವುದಿಲ್ಲ. ಹೀಗೆ ಹೇಳುವುದನ್ನು ನಿರಾಕರಣೆ ಮಾಡಿದಂತಾಯಿತು.

**ಗ್ರಂಥೇ ನಿವೇಶನಸ್ಯಾಪಿ ಶಿಷ್ಟಾಚಾರಪ್ರಾಪ್ತತ್ವಾತ್, ಶಿಷ್ಯಾರ್ಥತ್ವಾಚ್ಚ । ಅತ ಏವ 'ಅನ್ಯತ್ ಕಿಮಪಿ ವಿಘ್ನವಿಘಾತಾದ್ಯರ್ಥಮನುಷ್ಠಿತಂ ಸೂತ್ರಕಾರೇಣ' ಇತಿ ನಿರಸ್ತಮ್ ।**

ಏಕೆಂದರೆ, ಮಾಡಿರುವ ಮಂಗಲಾಚರಣೆಯನ್ನು ಗ್ರಂಥಪ್ರಾರಂಭದಲ್ಲಿ ಉಲ್ಲೇಖ ಮಾಡುವುದೂ ಕೂಡ ಶಿಷ್ಟಾಚಾರಪರಂಪರೆಯಿಂದ ಆಗತವಾಗಿದೆ. ಮತ್ತು ಶಿಷ್ಯರ ಹಿತಕ್ಕೋಸ್ಕರ ಅದನ್ನು ಸೇರಿಸುವುದೂ ಕೂಡ ಅಗತ್ಯವಾಗಿದೆ. ಆದ್ದರಿಂದಲೇ 'ವಿಘ್ನವಿನಾಶವೇ ಮೊದಲಾದ ಮತ್ತೇನಾದರೂ ಪ್ರಯೋಜನಕ್ಕೋಸ್ಕರ ಸೂತ್ರಕಾರರು ಮಂಗಲವನ್ನು ಆಚರಿಸಿದ್ದಾರೆ ಎಂಬುದನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು.

## ಅನುಮಾನದಲ್ಲಿ ದಳಕೃತ್ಯವಿಚಾರ

ಪರಿಮಳ – ಆದ್ಯಹೇತುಪ್ರಯೋಗೇ ಫಲಕಾಮನಾರೂಪವಿಶೇಷಣಾಸಿದ್ಧಿಂ ನಿರಾಹ – ನ ತಾವದಿತಿ ॥ 'ತತ್ಕಾಮನಯಾ' ಇತ್ಯಸ್ಯ ಅಸಿದ್ಧಿಂ ನಿರಾಹ – ನಾಪೀತಿ ॥ ದೃಷ್ಟತ್ಯಾಗಾದೃಷ್ಟಕಲ್ಪನೇ ಕ್ರಮೇಣ ವ್ಯನಕ್ತಿ – ಕಾರ್ಯಮಿತಿ ॥ ಆರಿಪ್ಸುಃ = ಆರಬ್ಧಕಾಮಃ । ಹೇತೋರಪ್ರಯೋಜಕತ್ವಂ ನಿರಾಹ – ನ ಚೈತೇಷಾಮಿತಿ ॥ ದ್ವಿತೀಯಪ್ರಯೋಗೇ ವಿಶೇಷಣಾಸಿದ್ಧಿಂ ನಿರಾಹ – ನ ಚೇತಿ ॥

ಮೊದಲನೆಯ ಅನುಮಾನದ ಹೇತುವಿನ ಫಲಕಾಮನಾ ಎಂಬ ವಿಶೇಷಣವು ಅಸಿದ್ಧ-ವಾಗಿದೆಯೆಂಬ ಆಶಂಕೆಯನ್ನು "ನ ತಾವತ್" ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಸಮಾಪ್ತಿಕಾಮನೆಯಿಂದ ಮಂಗಲಾಚರಣೆಯನ್ನು ಮಾಡುವುದು' ಎಂಬ ಹೇತುವು ಅಸಿದ್ಧ-ವಾಗಿಲ್ಲ ಎಂಬುದನ್ನು "ನಾಪಿ" ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ. ದೃಷ್ಟಪರಿತ್ಯಾಗ, ಅದೃಷ್ಟ-ಕಲ್ಪನೆಗಳನ್ನು ಕ್ರಮವಾಗಿ "ಕಾರ್ಯಪರಿಸಮಾಪ್ತುಃ" ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ.

"ಆರಿಪ್ಸುಃ" – ಆರಂಭವನ್ನು ಮಾಡಲು ಇಚ್ಛಿಸುವುದು ಎಂದರ್ಥ. ಹೇತುವಿಗೆ ಅಪ್ರಯೋಜಕತ್ವವನ್ನು "ನಚ ಏತೇಷಾಂ" ಎಂಬುದರಿಂದ ಪರಿಹಾರ ಮಾಡುತ್ತಿದ್ದಾರೆ. ಎರಡನೆಯ ಅನುಮಾನಪ್ರಯೋಗದಲ್ಲಿ ವಿಶೇಷಣಾಸಿದ್ಧಿಯನ್ನು "ನಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

ವಿವರಣೆ – "ಕರ್ಮಾದೌ ಶಿಷ್ಟೈಃ ಕ್ರಿಯಮಾಣೋ ಮಂಗಲಾಚಾರಃ ತತ್ಕರ್ಮಸಮಾಪ್ತ್ಯಾದಿ-ಹೇತುತ್ವಪ್ರಮಾಪೂರ್ವಕಃ ತತ್ಕಾಮನಯೈವ ಶಿಷ್ಟೈರನುಷ್ಠೀಯಮಾನತ್ವಾತ್' ಈ ಅನುಮಾನದಲ್ಲಿ 'ಫಲಕಾಮನಯಾ' ಎಂಬ ವಿಶೇಷಣಾಸಿದ್ಧಿಯನ್ನು 'ನ ತಾವತ್' ಎಂಬುದರಿಂದ ಪರಿಹರಿಸುತ್ತಿದ್ದಾರೆ. ಶಿಷ್ಟರಿಗೆ ಸಮಾಪ್ತಿಕಾಮನೆ ಇರುತ್ತದೆಂದು ಹೇಗೆ ನಿಶ್ಚಯಿಸುತ್ತೀರಿ ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. ಪ್ರೇಕ್ಷಾವಂತರ ಪ್ರವೃತ್ತಿಯು ನಿಷ್ಪ್ರಯೋಜನವಾಗಿರಲು ಸಾಧ್ಯವೇ ಇಲ್ಲ. ಆ ಪ್ರಯೋಜನವೂ ಕೂಡ ಬೇರೆಯಾಗಿರಲು ಸಾಧ್ಯವಿಲ್ಲ. ಮೊದಲು ಶಿಷ್ಟರಿಗೆ ಫಲಕಾಮನೆ ಇರುತ್ತದೆಂಬುದು ಸಿದ್ಧವಾಗಬೇಕು. ಅನಂತರ ಫಲವಿಶೇಷಕಾಮನೆ ಇರುತ್ತದೆಂಬುದು ಸಿದ್ಧವಾಗಬೇಕು. ಇವೆರಡಕ್ಕೂ ಕೂಡ ಉತ್ತರಿಸು-ತ್ತಿದ್ದಾರೆ.

## ಸೂತ್ರಕಾರರೇಕೆ ಮಂಗಲಾಚರಣೆ ಮಾಡಬೇಕು?

ಪರಿಮಳ – ನನ್ವಸ್ತು ಮಂಗಲಾಚಾರಸ್ಯಾವಿಘ್ನಪರಿಸಮಾಪ್ತ್ಯಾದಿಹೇತುತ್ವಮ್ । ತಥಾಪಿ ನಾಸ್ಯ ಕರ್ತವ್ಯತ್ವಮ್ । ವಿಘ್ನಸಂದೇಹೇನ ವಾ ಸೂತ್ರಕೃತೋ ನಿರ್ವಿಘ್ನತ್ವಾದೇವ ವಾ ಅನನುಷ್ಠಾನಸ್ಯ, ಅನುಷ್ಠಾನೇಽಪಿ ವಾ ಫಲಾಭಾವೇನ ಗ್ರಂಥೇ ನಿವೇಶನಾಭಾವಸ್ಯ ವಾ ಸಂಭವೇನ ಮಂಗಲಾಚಾರರಹಿತತ್ವಾತ್ ಇತ್ಯಸ್ಯ ಅನ್ಯಥೋಪಪತ್ತೇರಸಿದ್ಧತ್ವಾತ್ ಇತ್ಯತಃ ಕ್ರಮೇಣ ತ್ರಯಮಪಿ ನಿರಾಹ – ನ ಚೇತ್ಯಾದಿನಾ ॥

ಮಂಗಲಾಚರಣೆಯು ನಿರ್ವಿಘ್ನವಾದ ಪರಿಸಮಾಪ್ತಿಗೆ ಕಾರಣವಾಗಿದೆಯೆಂದು ಒಪ್ಪೋಣ. ಆದರೂ ಕೂಡ ಈ ಮಂಗಲಾಚರಣೆಯನ್ನು ಮಾಡುವ ಅವಶ್ಯಕತೆಯು ಸೂತ್ರಕಾರರಿಗೆ ಸರ್ವಥಾ ಇರುವುದಿಲ್ಲ. ಏಕೆಂದರೆ, ಸೂತ್ರಕಾರರಿಗೆ ವಿಘ್ನಗಳಿವೆಯೋ ಇಲ್ಲವೋ ಎಂಬ ಸಂದೇಹವೇ ಇರುವುದಿಲ್ಲ. ಮತ್ತು ವಿಘ್ನಗಳು ಇರುವುದೂ ಇಲ್ಲ. ಈ ಎರಡು ಕಾರಣಗಳಿಂದ ಸೂತ್ರಕಾರರು ಮಂಗಲವನ್ನು ಅನುಷ್ಠಾನ ಮಾಡಬೇಕಾಗಿಲ್ಲ. ಮತ್ತು ಮಂಗಲಾನುಷ್ಠಾನವನ್ನು ಮಾಡಿದರೂ ಕೂಡ ಅವರಿಗೆ ಯಾವುದೇ ಫಲವಿಲ್ಲದ ಕಾರಣ ಗ್ರಂಥದಲ್ಲಿ ಅದನ್ನು ಉಲ್ಲೇಖ ಮಾಡಬೇಕಾಗಿಲ್ಲ. ಆದ್ದರಿಂದ ಮಂಗಲಾಚರಣರಹಿತವಾಗಿರುವುದೆಂಬ ಹೇತುವು ಅನ್ಯಥಾ-ಸಿದ್ಧವಾಗಿದೆ. ಮತ್ತು ಅಸಿದ್ಧವಾಗಿದೆ. ಈ ಮೂರೂ ಬಗೆಯ ಸಂಶಯಗಳನ್ನು ಕ್ರಮವಾಗಿ ''ನ ಚ'' ಇತ್ಯಾದಿ ವಾಕ್ಯಗಳಿಂದ ನಿರಾಕರಣೆ ಮಾಡುತ್ತಿದ್ದಾರೆ.

## ಮಹಾಭಾರತ ಹಾಗೂ ಭಾಗವತದಲ್ಲಿ ಮಂಗಲಾಚರಣೆ

ಪರಿಮಳ – ಭಾರತಾದಾವಿತಿ ॥

'ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥' ಇತ್ಯಾದಿ ಭಾರತೇ;

'ಜನ್ಮಾದ್ಯಸ್ಯ ಯತೋಽನ್ವಯಾತ್' ಇತ್ಯಾದಿ ಭಾಗವತಾದೌ ಚ ನ ಕುರ್ಯಾತ್ ಇತ್ಯರ್ಥಃ ।

'ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥'

"ರಮಾಬ್ರಹ್ಮಾದಿದೇವತೆಗಳಿಗೆ ಗುರು, ಜಗತ್ತಿಗೆ ಮುಖ್ಯಸ್ವಾಮಿ, ಭಕ್ತವತ್ಸಲ, ಎಲ್ಲಾ ಸಜ್ಜನರಿಂದ ನಮಸ್ಕೃತ, ಸತ್ವರಜಸ್ತಮೋಗುಣಗಳಿಂದ ರಹಿತ, ಜನನರಹಿತ, ಸರ್ವಗುಣ-ಪರಿಪೂರ್ಣ, ಆದಿಸೃಷ್ಟಿಕರ್ತಾ, ಸರ್ವಶಕ್ತ, ಸಂಸಾರಮೋಚಕ, ಮುಕ್ತರಾದ ತತ್ವಾಭಿಮಾನಿ-ದೇವತೆಗಳಿಂದಲೂ ವಂದ್ಯನಾದ ನಾರಾಯಣನನ್ನು ನಮಸ್ಕರಿಸುತ್ತೇನೆ".

ಹೀಗೆ ಸೂತ್ರಕಾರರು ಮಹಾಭಾರತದ ಪ್ರಾರಂಭದಲ್ಲಿ ಮಂಗಲಾಚರಣೆಯನ್ನು ಮಾಡಿ-ದ್ದಾರೆ. ಭಾಗವತದ ಪ್ರಾರಂಭದಲ್ಲಿ 'ಜನ್ಮಾದ್ಯಸ್ಯ ಯತೋನ್ವಯಾದಿತರತಃ' ಎಂಬುದಾಗಿ ಮಂಗಲಾಚರಣೆಯನ್ನು ಮಾಡಿದ್ದಾರೆ ಎಂದರ್ಥ.

ಪರಿಮಳ – ಏತೇನೇತಿ ॥ 'ಶಿಷ್ಯಾರ್ಥಮಪಿ ಗ್ರಂಥೇ ನಿವೇಶನಸ್ಯ ಕರ್ತವ್ಯತ್ವಕಥನೇನ' ಇತ್ಯರ್ಥಃ । ಅತ ಏವೇತಿ ॥ 'ಆವಶ್ಯಕಸ್ಯ ಗ್ರಂಥೇ ನಿವೇಶನಸ್ಯಾಭಾವಾದೇವ' ಇತ್ಯರ್ಥಃ । ಅನ್ಯದಿತಿ ॥ 'ಧ್ಯಾನಾದಿಕಮ್' ಇತ್ಯರ್ಥಃ ।

"ಏತೇನ"– ಶಿಷ್ಯರಿಗೋಸ್ಕರ ಮಂಗಲಾಚರಣೆಯು ಆವಶ್ಯಕರ್ತವ್ಯವಾಗಿದೆಯೆಂದು ಹೇಳಿದ್ದರಿಂದ.

"ಅತ ಏವ" – ಆವಶ್ಯಕವಾದ ಮಂಗಲದ ನಿವೇಶನವು ಗ್ರಂಥದಲ್ಲಿ ಇಲ್ಲದೇ ಇರುವು-ದರಿಂದ. "ಅನ್ಯತ್" – ಮಂಗಲವನ್ನುಂಟುಮಾಡುವ ಧ್ಯಾನ ಮೊದಲಾದವುಗಳು ಎಂದರ್ಥ.

## ಮಂಗಲಕ್ಕೆ ನಿರ್ವಿಘ್ನಪರಿಸಮಾಪ್ತಿಯೇ ಪ್ರಯೋಜನವೆಂದು ಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ನನು ತರ್ಹಿ 'ಮಂಗಲಂ ಶ್ರುತಿಬೋಧಿತಾವಿಘ್ನಸಮಾಪ್ತ್ಯಾದ್ಯು-ಪಾಯತಾಕಮ್ ಅವಿಗೀತಶಿಷ್ಟಾಚಾರವಿಷಯತ್ವಾತ್' ಇತಿ ವಿವಕ್ಷಿತಾನುಮಾನೇ ಅಪ್ರಯೋಜ-ಕತ್ವಮ್ ಇತ್ಯತೋ ಅವಿಗೀತಶಿಷ್ಟಾಚಾರವಿಷಯತ್ವೇಽಪಿ ಮಂಗಲಸ್ಯ ಶ್ರುತಿಬೋಧಿತಾವಿಘ್ನ-ಸಮಾಪ್ತ್ಯಾದ್ಯುಪಾಯತಾಕತ್ವಾಭಾವೇ ಮಂಗಲವಿಷಯಕಶಿಷ್ಟಪ್ರವೃತ್ತೇರ್ವೈಫಲ್ಯಂ ವಾ ಫಲಾಂತ-ರಾನುಸಂಧಾನಪೂರ್ವಕಂ ವಾ ಅವಿಘ್ನಸಮಾಪ್ತಿಸಾಧನತ್ವಭ್ರಾಂತಿಪೂರ್ವಕತ್ವಂ ವಾ ಪ್ರಮಾಣಾಂತ-ರಬೋಧಿತಾವಿಘ್ನಸಮಾಪ್ತ್ಯಾದ್ಯುಪಾಯತಾಕತ್ವಂ ವಾ ವಕ್ತವ್ಯಮ್ । ಪ್ರಕಾರಾಂತರಾಭಾವಾತ್ ।

'ಮಂಗಲಂ ಶ್ರುತಿಬೋಧಿತಾವಿಘ್ನಸಮಾಪ್ತ್ಯಾದ್ಯುಪಾಯತಾಕಮ್ ಅವಿಗೀತಶಿಷ್ಟಾಚಾರವಿಷಯತ್ವಾತ್' 'ಅವಿಗೀತಶಿಷ್ಟಾಚಾರಕ್ಕೆ ವಿಷಯವಾಗಿರುವುದರಿಂದ ಮಂಗಲವು ಶ್ರುತಿಬೋಧಿತವಾದ ನಿರ್ವಿಘ್ನಪರಿಸಮಾಪ್ತಿಯೆಂಬ ಪ್ರಯೋಜನವುಳ್ಳದ್ದಾಗಿದೆ'. ವಿವಕ್ಷಿತವಾದ ಈ ಅನುಮಾನದಲ್ಲಿ ಇಷ್ಟು ಕಾರಣಗಳಿಂದ ಅಪ್ರಯೋಜಕತ್ವಾಶಂಕೆಯು ಬರುತ್ತದೆ. (೧) ಅವಿಗೀತಶಿಷ್ಟಾಚಾರಕ್ಕೆ ಮಂಗಲವು ವಿಷಯವಾಗಿದ್ದರೂ ಕೂಡ ಶ್ರುತಿಬೋಧಿತವಾದ ನಿರ್ವಿಘ್ನಪರಿಸಮಾಪ್ತಿಯೆಂಬ ಪ್ರಯೋಜನವನ್ನು ಹೊಂದಬೇಕಾಗಿಲ್ಲ. (೨) ಮಂಗಲವಿಷಯಕವಾದ ಶಿಷ್ಟರ ಪ್ರವೃತ್ತಿಯು ಸಾರ್ಥಕವಾಗಬೇಕಾಗಿಲ್ಲ. (೩) ಮಂಗಲಕ್ಕೆ ಸಮಾಪ್ತಿಯೇ ಪ್ರಯೋಜನವಾಗಲಿ ಎಂಬ ಅನುಸಂಧಾನವು ಶಿಷ್ಟರಿಗೆ ಇರಬೇಕಾಗಿಲ್ಲ. ಬೇರೆ ಫಲದ ಅನುಸಂಧಾನವೂ ಕೂಡ ಇರಬಹುದು. (೪) ಮಂಗಲಕ್ಕೆ ನಿರ್ವಿಘ್ನಪರಿಸಮಾಪ್ತಿಯೆಂಬ ಪ್ರಯೋಜನವಿದೆಯೆಂಬುದು ಭ್ರಾಂತಿಯಾಗಿರುತ್ತದೆ. (೫) ಮಂಗಲಕ್ಕೆ ನಿರ್ವಿಘ್ನಪರಿಸಮಾಪ್ತಿಯೆಂಬ ಪ್ರಯೋಜನವು ಶ್ರುತಿಯಿಂದ ತಿಳಿಯದೇ ಬೇರೆ ಪ್ರಮಾಣದಿಂದ ತಿಳಿದಿರುತ್ತದೆ. ಇಷ್ಟುಬಗೆಯಲ್ಲಿ ಅಪ್ರಯೋಜಕತ್ವವನ್ನು ಹೇಳಬಹುದು.

ಸಮಾಧಾನ – ನೀವು ಮೇಲೆ ಹೇಳಿದ ಐದು ಪ್ರಕಾರಗಳಲ್ಲಿ ಮಾತ್ರ ಅಪ್ರಯೋಜಕತ್ವವನ್ನು ಆಶಂಕಿಸಬಹುದು. ಬೇರೆ ಪ್ರಕಾರಗಳು ಸರ್ವಥಾ ಇರುವುದಿಲ್ಲ. ಆದರೆ ಈ ಎಲ್ಲಾ ಪ್ರಕಾರಗಳಲ್ಲಿ ವಿಪಕ್ಷದಲ್ಲಿ ಹೇತೂಚ್ಛಿತ್ತಿರೂಪವಾದ ಬಾಧಕವು ಇರುತ್ತದೆ. ಆದ್ದರಿಂದ ಅಪ್ರಯೋಜಕತ್ವಾಶಂಕೆಯನ್ನು ಮಾಡಲು ಸಾಧ್ಯವಿಲ್ಲ.

## ಅಪ್ರಯೋಜಕತ್ವಾಶಂಕೆಗಳ ಪರಿಹಾರ

ವಾಕ್ಯಾರ್ಥಚಂದ್ರಿಕಾ – ತತ್ರ ಚ ವೈಫಲ್ಯೇ ಶಿಷ್ಟಾಚಾರತ್ವರೂಪಹೇತೂಚ್ಛೇದಾಪತ್ತ್ಯಾ, ಫಲಾಂತರಾನುಸಂಧಾನಪೂರ್ವಕತ್ವೇ ಚ ದೃಷ್ಟಾದೃಷ್ಟಪರಿತ್ಯಾಗಕಲ್ಪನಾಪ್ರಸಂಗಾತ್ । ಭ್ರಾಂತಿಪೂರ್ವಕತ್ವೇ ಚಾವಿಗೀತಶಿಷ್ಟಾಚಾರತ್ವರೂಪಹೇತೂಚ್ಛೇದಾಪತ್ತ್ಯಾ ಪ್ರತ್ಯಕ್ಷಸ್ಯ ಸ್ವತಃಸಾಧ್ಯಸಾಧನಭಾವಾಗೋಚರತ್ವಾತ್ ।

ವೈಫಲ್ಯವನ್ನು ಹೇಳಿದರೆ ಶಿಷ್ಟಾಚಾರತ್ವರೂಪವಾದ ಹೇತುವಿಗೆ ಭಂಗವಾಗಬೇಕಾಗುತ್ತದೆ. ಫಲಾಂತರಾನುಸಂಧಾನಪೂರ್ವಕವೆಂದು ಹೇಳಿದರೆ ದೃಷ್ಟಪರಿತ್ಯಾಗ ಅದೃಷ್ಟಕಲ್ಪನೆಯು ಪ್ರಾಪ್ತವಾಗುತ್ತದೆ. ಭ್ರಾಂತಿಪೂರ್ವಕವೆಂದರೆ ಅವಿಗೀತಶಿಷ್ಟಾಚಾರತ್ವವೆಂಬ ಹೇತೂಚ್ಛೇದವು ಪ್ರಾಪ್ತವಾಗುತ್ತದೆ. ಏಕೆಂದರೆ ಪ್ರತ್ಯಕ್ಷಕ್ಕೆ ಸ್ವತಃ ಸಾಧ್ಯಸಾಧನಭಾವವು ಇರುವುದಿಲ್ಲ.

ವಿವರಣೆ – ಮೊದಲನೆಯ ಅಪ್ರಯೋಜಕತ್ವಾಶಂಕೆಗೆ ಹೇತೂಚ್ಛಿತ್ತಿರೂಪವಾದ ಬಾಧಕವಿದೆ. ಮಂಗಲವಿಷಯಕವಾದ ಶಿಷ್ಟರ ಪ್ರವೃತ್ತಿಯು ವಿಫಲವಾಗಿದೆಯೆಂದು ಹೇಳಿದರೆ ಮಂಗಲಕ್ಕೆ ಶಿಷ್ಟಾಚಾರ-ವಿಷಯತ್ವವೇ ಕೂಡದೇ ಇರಬೇಕಾದೀತು. ಯಾವುದೇ ಶಿಷ್ಟರು ವ್ಯರ್ಥಕಾರ್ಯಗಳಲ್ಲಿ ಪ್ರವೃತ್ತಿಯನ್ನು ಸುತರಾಂ ಮಾಡುವುದಿಲ್ಲ. ಆದ್ದರಿಂದ ಹೇತುವೇ ಭಂಗವಾಗುತ್ತದೆ. ಎರಡನೆಯ ಫಲಾಂತರಾನು-ಸಂಧಾನಪೂರ್ವಕವಾಗಿದೆ ಎಂಬ ಅಪ್ರಯೋಜಕತ್ವಾಶಂಕೆಯು ಕೂಡ ಅಯುಕ್ತವಾಗಿದೆ. ಮಂಗಲಕ್ಕೆ ಸಮಾಪ್ತಿಯೇ ಪ್ರಯೋಜನವಾಗಲಿ ಎಂಬ ಅನುಸಂಧಾನವು ಇರುವುದಿಲ್ಲ. ಬೇರೆ ಫಲದ ಅನು-ಸಂಧಾನವಿರುತ್ತದೆಂದು ಹೇಳಿದರೆ ದೃಷ್ಟಪರಿತ್ಯಾಗ ಹಾಗೂ ಅದೃಷ್ಟಕಲ್ಪನೆ ಎಂಬ ದೋಷಗಳು ಬರುತ್ತವೆ. ಮಂಗಲಕ್ಕೆ ದೃಷ್ಟವಾದ ಸಮಾಪ್ತಿಯನ್ನೇ ಪ್ರಯೋಜನವೆಂದು ಹೇಳಲು ಬರುವಾಗ ಅದೃಷ್ಟವಾದ ಮತ್ತೊಂದು ಫಲವನ್ನು ಕಾರಣವನ್ನಾಗಿ ಹೇಳುವುದು ಅನ್ಯಾಯವಾಗುತ್ತದೆ.

ಯಾದುಪತ್ಯದಲ್ಲಿ ಎರಡನೆಯ ಈ ಅಪ್ರಯೋಜಕತ್ವಾಶಂಕೆಗೂ ಕೂಡ ಹೇತೂಚ್ಛಿತ್ತಿರೂಪವಾದ ಬಾಧಕವನ್ನೇ ಹೇಳಿರುತ್ತಾರೆ. ಏಕೆಂದರೆ, ಹೇತುವಿನಲ್ಲಿ ತದುದ್ದೇಶ್ಯಕತ್ವವೆಂಬ ವಿಶೇಷಣವನ್ನು ಅವರು ನೀಡಿದ್ದರು. ಶಿಷ್ಟರಿಗೆ ಸಮಾಪ್ತಿಯೇ ಪ್ರಯೋಜನವಾಗಲಿ ಎಂಬ ಉದ್ದೇಶವು ಇರುತ್ತದಾದ್ದರಿಂದ ಹೇತೂಚ್ಛಿತ್ತಿರೂಪವಾದ ಬಾಧಕವು ಬರುತ್ತದೆ. ಆದರೆ ವಾಕ್ಯಾರ್ಥಚಂದ್ರಿಕಾಕಾರರು ಹೇತುವಿನಲ್ಲಿ ತದುದ್ದೇಶ್ಯಕತ್ವವೆಂಬ ವಿಶೇಷಣವನ್ನು ಹೇಳಿರುವುದಿಲ್ಲ. ಆದ್ದರಿಂದ ದೃಷ್ಟಪರಿತ್ಯಾಗ ಅದೃಷ್ಟಕಲ್ಪನೆ ಎಂಬ ಬಾಧಕವನ್ನು ಹೇಳಿದ್ದಾರೆ. ಅಪ್ರಯೋಜಕತ್ವಾಶಂಕೆಗೆ ಹೇತೂಚ್ಛಿತ್ತಿರೂಪವಾದ ಬಾಧಕವನ್ನೇ ಹೇಳ-ಬೇಕಾಗಿಲ್ಲ ಎಂಬುದನ್ನು ಇದರಿಂದ ತಿಳಿಸಿದ್ದಾರೆ.

ಮಂಗಲವು ಸಮಾಪ್ತಿಫಲಕವಾಗಿದೆಯೆಂಬ ಶಿಷ್ಟರಿಗೆ ಇರುವ ಜ್ಞಾನವು ಭ್ರಾಂತಿಯೆಂದು ಹೇಳಿ ಅಪ್ರಯೋಜಕತ್ವವನ್ನು ಆಪಾದನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ, ಎಲ್ಲಾ ಶಿಷ್ಟರ ಪರಂಪರೆಯಲ್ಲಿ ಅವಿಪ್ರತಿಪನ್ನವಾಗಿ ಇಂಥ ಭ್ರಾಂತಿ ಬರಲು ಸಾಧ್ಯವೇ ಇಲ್ಲ. ಎಲ್ಲರಿಗೂ ಒಂದೇ ರೀತಿಯಾಗಿ ಭ್ರಾಂತಿ ಬಂದಿದೆ ಎಂದು ನಿಯಮನಮಾಡುವುದೇ ತಪ್ಪು. ಆದ್ದರಿಂದ ಅವಿಗೀತಶಿಷ್ಟಾಚಾರತ್ವವೆಂಬ ಹೇತೂ-ಚ್ಛಿತ್ತಿರೂಪವಾದ ಬಾಧಕವು ಬರುತ್ತದೆ.

ಮಂಗಲವು ಸಮಾಪ್ತಿಫಲಕವೆಂಬುದು ಶ್ರುತಿಯಿಂದ ತಿಳಿದಿಲ್ಲ. ಮತ್ತೊಂದು ಪ್ರಮಾಣದಿಂದ ತಿಳಿದಿದೆ ಎಂಬ ಅಪ್ರಯೋಜಕತ್ವಾಶಂಕೆಯೂ ಕೂಡ ಅಯುಕ್ತವಾಗಿದೆ. ಏಕೆಂದರೆ, ಪ್ರತ್ಯಕ್ಷವು ಸ್ವತಃ ಸಾಧ್ಯಸಾಧನಭಾವಗೋಚರವೇ ಅಲ್ಲ. ಆದ್ದರಿಂದ ಪ್ರತ್ಯಕ್ಷದಿಂದ ಸಮಾಪ್ತಿಪ್ರಯೋಜನವನ್ನು ತಿಳಿಯಲು ಸಾಧ್ಯವಿಲ್ಲ.

## ಶ್ರುತಿಬೋಧಿತವಾದ ನಿರ್ವಿಘ್ನಪರಿಸಮಾಪ್ತಿ ಎಂಬ ಪ್ರಯೋಜನವು ಸಿದ್ಧವಾಯಿತು.

ವಾಕ್ಯಾರ್ಥಚಂದ್ರಿಕಾ – ಅನ್ವಯವ್ಯತಿರೇಕಯೋಶ್ಚ ವ್ಯಭಿಚಾರೇಣ ತತ್ಸಹಕಾರಾಭಾವಾತ್ ತತ ಏವಾನುಮಾನಸ್ಯಾಪಿ ಪ್ರವೃತ್ತ್ಯನುಪಪತ್ತೇಃ, ಅತಿಪ್ರಸಂಗಪರಾಹತೇಶ್ಚಾಸ್ಯಾರ್ಥಸ್ಯ ಅಲೌಕಿಕತ್ವಾಚ್ಚ; ಪೌರುಷೇಯವಾಕ್ಯಸ್ಯಾಪಿ ಮೂಲಾಂತರಸಾಪೇಕ್ಷತ್ವಾತ್, ಶ್ರುತಿಮೂಲಕತ್ವಾಭಾವೇ ಪ್ರೇಕ್ಷಾವತ್ಪ್ರವೃತ್ತೇಃ ನಿರ್ಮೂಲತ್ವಾಪತ್ತಿರೂಪವಿಪಕ್ಷಬಾಧಕಸತ್ತ್ವಾತ್, ಶ್ರುತಿಬೋಧಿತಾವಿಘ್ನಸಮಾಪ್ತ್ಯಾದ್ಯುಪಾಯತಾಕತ್ವಸಿದ್ಧಿರಿತಿ ನ ಅಪ್ರಯೋಜಕತ್ವಮ್ ಇತ್ಯಾಶಯೇನ ಆಹ – ನ ತಾವದಿತಿ ॥

ಅನ್ವಯವ್ಯತಿರೇಕಗಳು ವ್ಯಭಿಚಾರಗ್ರಸ್ತವಾಗಿರುವುದರಿಂದ ಅವುಗಳ ಸಹಕಾರವನ್ನು ಪ್ರತ್ಯಕ್ಷಕ್ಕೆ ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಅನುಮಾನವೂ ಕೂಡ ಸಾಧ್ಯಸಾಧನಭಾವಗೋಚರದಲ್ಲಿ ಪ್ರಮಾಣವಾಗುವುದಿಲ್ಲ. ಅತಿಪ್ರಸಂಗದಿಂದಲೂ ಕೂಡ ಪರಾಹತವಾಗುತ್ತದೆ. ಈ ಅರ್ಥವು ಅಲೌಕಿಕವೂ ಕೂಡ ಆಗುತ್ತದೆ. ಪೌರುಷೇಯವಾಕ್ಯವು ಮತ್ತೊಂದು ಮೂಲಪ್ರಮಾಣವನ್ನು ಅಪೇಕ್ಷಿಸುತ್ತದೆ. ಶ್ರುತಿಮೂಲಕವೂ ಅಲ್ಲ ಎಂದು ಹೇಳಿದರೆ ಪ್ರೇಕ್ಷಾವತ್‌ಪ್ರವೃತ್ತಿಯು ನಿರ್ಮೂಲವಾಗಬೇಕಾಗುತ್ತಾದ್ದರಿಂದ ವಿಪಕ್ಷದಲ್ಲಿ ಬಾಧಕತರ್ಕವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಬೋಧಿತವಾದ ನಿರ್ವಿಘ್ನಪರಿಸಮಾಪ್ತ್ಯಾದ್ಯುಪಾಯಕತ್ವವು ಹೇತುವಿನಿಂದ ಸಾಧಿತವಾಗುತ್ತದೆ. ಅಪ್ರಯೋಜಕತ್ವಾಶಂಕೆಯನ್ನು ಹೇಳಲು ಸರ್ವಥಾ ಸಾಧ್ಯವಿಲ್ಲ. ಈ ವಿಷಯವನ್ನು "ನ ತಾವತ್" ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ವಿವರಣೆ – ಪ್ರತ್ಯಕ್ಷವು ಸ್ವತಃ ಕಾರ್ಯಕಾರಣಭಾವಗ್ರಾಹಿಯು ಆಗುವುದಿಲ್ಲ. ಆದರೆ ಕಾರ್ಯಕಾರಣಭಾವವನ್ನು ಸಂಪಾದನೆ ಮಾಡುವ ಅನ್ವಯವ್ಯತಿರೇಕಗಳಿಂದ ಪ್ರತ್ಯಕ್ಷವು ಸ್ವತಃ ಕಾರ್ಯಕಾರಣಭಾವಗ್ರಾಹಕವು ಆಗಬಹುದು. ಅನ್ವಯವ್ಯತಿರೇಕಗಳಿಗೆ ಪರಸ್ಪರ ವ್ಯಭಿಚಾರವಿದೆ. ಮಂಗಲಾಚರಣೆ ಮಾಡಿದರೂ ಕೂಡ ಕೆಲವೆಡೆ ಸಮಾಪ್ತಿಯು ಕಂಡಿಲ್ಲವಾದ್ದರಿಂದ ಅನ್ವಯವ್ಯಭಿಚಾರವಿದೆ. ಮಂಗಲಾಚರಣೆ ಮಾಡದೇ ಇದ್ದರೂ ಕೂಡ ಸಮಾಪ್ತಿಯಾಗಿರುವುದರಿಂದ ವ್ಯತಿರೇಕವ್ಯಭಿಚಾರವು ಬರುತ್ತದೆ. ಆದ್ದರಿಂದ ಕಾರ್ಯಕಾರಣಭಾವವು ಸಿದ್ಧವಾದ ಮೇಲಷ್ಟೇ ಅನೇಕಹೇತುತಾಕತ್ವ ಮೊದಲಾದವುಗಳನ್ನು ಹೇಳಬಹುದು. ಹೀಗೆ ಅನ್ವಯವ್ಯತಿರೇಕಸಧ್ರೀಚೀನವಾಗಿ ಪ್ರತ್ಯಕ್ಷವನ್ನು ಸಾಧ್ಯಸಾಧನಭಾವಗ್ರಾಹಕವಾಗಿ ಹೇಳಲು ಸಾಧ್ಯವಿಲ್ಲ. ಇಂಥ ಪ್ರತ್ಯಕ್ಷವೇ ಅಯುಕ್ತವಾದಾಗ ಇದನ್ನು ಅನುಸರಿಸಿ ಹೊರಟಿರುವ ಅನುಮಾನವು ಸುತರಾಂ ಪ್ರವೃತ್ತಿಮಾಡಲು ಸಾಧ್ಯವಿಲ್ಲ. ಕೇವಲ ಅನುಮಾನವನ್ನೇ ಆಶ್ರಯಿಸಿ ಅನು-

ಮಾನವನ್ನು ಮಾಡಿದರೆ ಅತಿಪ್ರಸಂಗವು ಪ್ರಾಪ್ತವಾಗುತ್ತದೆ. ಮತ್ತು ಈ ಅರ್ಥವು ಅಲೌಕಿಕವಾದ್ದರಿಂದಲೂ ಅನುಮಾನಕ್ಕೆ ಅವಕಾಶವಿಲ್ಲ. ಇನ್ನು ಪೌರುಷೇಯವಾಕ್ಯದಿಂದ ಸಾಧ್ಯಸಾಧನಭಾವವು ತಿಳಿಯುತ್ತದೆಂದು ಹೇಳಿದರೆ ಇದೂ ಕೂಡ ಪ್ರಮಾಣಾಂತರಸಾಪೇಕ್ಷಿತವಾಗುತ್ತದೆ. ಒಟ್ಟು ಶ್ರುತಿಮೂಲಕತ್ವವು ಇಲ್ಲದೇ ಇದ್ದರೆ ಪ್ರೇಕ್ಷಾವತ್ ಪ್ರವೃತ್ತಿಯು ನಿರ್ಮೂಲವಾಗಬೇಕಾಗುತ್ತದೆ. ಆದ್ದರಿಂದ ಪ್ರೇಕ್ಷಾವಂತರು ಪ್ರವೃತ್ತಿಯನ್ನೇ ಮಾಡದೇ ಇರಬೇಕಾಗುತ್ತದೆ. ಪ್ರವೃತ್ತಿ ಮಾಡುತ್ತಿರುವುದರಿಂದ ಪರಿಶೇಷಾತ್ ಶ್ರುತಿಬೋಧಿತವೆಂದೇ ಹೇಳಬೇಕು. ಆದ್ದರಿಂದ ಪ್ರೇಕ್ಷಾವಂತರು ನಿರ್ವಿಘ್ನವಾಗಿ ಪರಿಸಮಾಪ್ತಿಹೊಂದಲಿ ಎಂಬ ಉದ್ದೇಶವನ್ನು ಹೊಂದಿರುವುದರಿಂದ ಮಂಗಲಾಚರಣೆಯು ಶ್ರುತಿಬೋಧಿತವಾದ ನಿರ್ವಿಘ್ನಪರಿಸಮಾಪ್ತಿಯೆಂಬ ಪ್ರಯೋಜನವುಳ್ಳದ್ದೆಂದು ಸಿದ್ಧವಾಯಿತು.

## ಮಂಗಲಾಚರಣೆಯ ಪ್ರವೃತ್ತಿಗೆ ವಿಘ್ನಸಂದೇಹವಿದ್ದರೂ ಸಾಕು

ವಾಕ್ಯಾರ್ಥಚಂದ್ರಿಕಾ – ದೃಷ್ಟಪರಿತ್ಯಾಗಮುಪಪಾದಯತಿ – ಕಾರ್ಯಮಿತಿ ॥ ಅದೃಷ್ಟಕಲ್ಪನಾಮ್ ಉಪಪಾದಯತಿ – ನ ಚ ಫಲಾಂತರೇತಿ ॥ ನನು ತರ್ಹಿ ಸಮಾಪ್ತಿವಿಶೇಷಣತಯಾ ವಿಘ್ನಾಭಾವಸ್ಯ ಮಂಗಲಪ್ರವೃತ್ತ್ಯುದ್ದೇಶ್ಯತಾಪತ್ತ್ಯಾ, ನಾಶಾರ್ಥಿಪ್ರವೃತ್ತೌ ನಾಶ್ಯನಿಶ್ಚಯವತೋಽಧಿಕಾರಸ್ಯ ಚ ಪ್ರಾಯಶ್ಚಿತ್ತಾದಿಸ್ಥಲೇ ಕ್ಲೃಪ್ತತಯಾ, ವಿಘ್ನನಿಶ್ಚಯಾಭಾವೇನ ಅಧಿಕಾರಾಭಾವಾತ್ 'ಅಧಿಕಾರಿಶೂನ್ಯತ್ವಾನ್ನ ಮಂಗಲಂ ಶ್ರುತಿಬೋಧಿತಾಭೀಷ್ಟೋಪಾಯತಾಕಮ್' ಇತ್ಯುಕ್ತಾನುಮಾನೇ ಪ್ರತಿಪಕ್ಷಂ ಶಂಕತೇ – ನ ಚ ವಿಘ್ನೇತಿ ॥ ನ್ಯಾಯಪ್ರಾಪ್ತವಿಘ್ನಸಂದೇಹವಚ್ಛಿಷ್ಟಾನುಷ್ಠಾನಬಲೇನ ವಿಘ್ನಜ್ಞಾನವತ ಏವ ತತ್ರಾಧಿಕಾರಕಲ್ಪನಾತ್ ಹೇತುಃ ಅಪ್ರಸಿದ್ಧ ಇತ್ಯಾಹ – ತತ್ಸಂದೇಹೇಽಪೀತಿ ॥

ದೃಷ್ಟಪರಿತ್ಯಾಗದೋಷವನ್ನು "ಕಾರ್ಯಂ" ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ. ಅದೃಷ್ಟಕಲ್ಪನಾದೋಷವನ್ನು "ನ ಚ ಫಲಾಂತರ" ಇತ್ಯಾದಿಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ವಿಘ್ನಾಭಾವವು ಮಂಗಲಪ್ರವೃತ್ತಿಗೆ ನೇರವಾಗಿ ಉದ್ದೇಶವಾಗದಿರಬಹುದು. ಆದರೆ ಸಮಾಪ್ತಿಯಲ್ಲಿ ವಿಶೇಷಣವಾಗುವ ಮೂಲಕ ಉದ್ದಿಷ್ಟವಾಗಿದೆ. ಹಾಗಾಗಿ ಯಾರು ನಾಶಕ್ಕಾಗಿ ಪ್ರವೃತ್ತಿಯನ್ನು ಮಾಡುತ್ತಾನೋ ಅವನಿಗೆ ನಾಶದಲ್ಲಿ ನಿಶ್ಚಯವಿರಬೇಕು. ಅಂಥವನೇ ಅಧಿಕಾರಿ ಆಗುತ್ತಾನೆ. ಪ್ರಾಯಶ್ಚಿತ್ತಾದಿ ಸ್ಥಳದಲ್ಲಿ ಇದು ಸಿದ್ಧವಾಗಿದೆ. ಆದರೆ ಇಲ್ಲಿ ವಿಘ್ನನಿಶ್ಚಯವೇ ಇಲ್ಲದ್ದರಿಂದ ಅಧಿಕಾರಿಯೇ ಇರುವುದಿಲ್ಲ. ಅಧಿಕಾರಿ ಇಲ್ಲದ್ದರಿಂದ ಮಂಗಲವು ಶ್ರುತಿಬೋಧಿತವಾದ ಅಭೀಷ್ಟಪ್ರಯೋಜನವುಳ್ಳ-

ದ್ದೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಮೇಲಿನ ಅನುಮಾನಕ್ಕೆ ಸತ್ಪ್ರತಿಪಕ್ಷದೋಷವನ್ನು "ನ ಚ ವಿಘ್ನ" ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ನ್ಯಾಯಪ್ರಾಪ್ತವಾದ ವಿಘ್ನಸಂದೇಹವುಳ್ಳ ಶಿಷ್ಟರ ಅನುಷ್ಠಾನ-ಬಲದಿಂದ ವಿಘ್ನಜ್ಞಾನವುಳ್ಳವನೇ ಅಧಿಕಾರಿಯೆಂದು ಸಿದ್ಧವಾಗುತ್ತದೆ. ಆದ್ದರಿಂದ ಸತ್ಪ್ರತಿಪಕ್ಷಾನುಮಾನ-ದಲ್ಲಿರುವ ಹೇತುವು ಅಪ್ರಸಿದ್ಧವಾಗಿದೆ ಎಂಬುದನ್ನು "ತತ್ಸಂದೇಹೇಪಿ" ಇತ್ಯಾದಿ ಗ್ರಂಥದಿಂದ ಹೇಳು-ತ್ತಿದ್ದಾರೆ.

ವಿವರಣೆ – 'ಮಂಗಲಂ ಶ್ರುತಿಬೋಧಿತಾವಿಘ್ನಸಮಾಪ್ತ್ಯಾದ್ಯುಪಾಯತಾಕಮ್ ಅವಿಗೀತಶಿಷ್ಟಾಚಾರ-ವಿಷಯತ್ವಾತ್' ಎಂಬ ಅನುಮಾನಕ್ಕೆ ಸತ್ಪ್ರತಿಪಕ್ಷದೋಷವನ್ನು ಪೂರ್ವವಾದಿಯು ಆಕ್ಷೇಪ ಮಾಡುತ್ತಾನೆ. ಅವನು ಪ್ರಯೋಗಿಸುವ ಸತ್ಪ್ರತಿಪಕ್ಷಾನುಮಾನವು ಹೀಗಿದೆ – 'ಮಂಗಲಂ ನ ಶ್ರುತಿಬೋಧಿತಾಭೀಷ್ಟೋ-ಪಾಯತಾಕಂ ಅಧಿಕಾರಿಶೂನ್ಯತ್ವಾತ್' ಎಂದು. ಮಂಗಲಾಚರಣೆಯು ಏಕೆ ಅಧಿಕಾರಿಶೂನ್ಯವಾಗಿದೆ ಎಂದರೆ ಯಾರೇ ಒಬ್ಬ ಮಂಗಲಾಚರಣೆಯಲ್ಲಿ ಪ್ರವೃತ್ತಿ ಮಾಡಬೇಕೆಂದರೆ ಅವನಿಗೆ ವಿಘ್ನವಿದೆ ಎಂಬ ನಿಶ್ಚಯವಿರಬೇಕು. ವಾಸ್ತವಿಕವಾಗಿ ಮಂಗಲಾಚರಣೆ ಮಾಡುವವನಿಗೆ ಗ್ರಂಥಪರಿಸಮಾಪ್ತಿಯಾಗ-ಬೇಕೆಂಬ ಉದ್ದೇಶವೇ ಇರುತ್ತದೆ. ಆದರೆ ಆ ಗ್ರಂಥಪರಿಸಮಾಪ್ತಿಯು ಯಾವುದೇ ವಿಘ್ನ ಬಾರದಂತೆ ಆಗಬೇಕೆಂಬ ಉದ್ದೇಶವನ್ನು ಹೊಂದಿರುವುದರಿಂದ ಆ ಗ್ರಂಥಪರಿಸಮಾಪ್ತಿಯಲ್ಲಿ ವಿಘ್ನಾಭಾವವು ವಿಶೇಷಣವಾಗಿದೆ. ಆದ್ದರಿಂದ ಸಮಾಪ್ತಿಯಲ್ಲಿ ವಿಶೇಷಣವಾದ ವಿಘ್ನಾಭಾವವು ಮಂಗಲಪ್ರವೃತ್ತಿಯ ಉದ್ದೇಶ್ಯವಾಗುತ್ತದೆ. ಆದರೆ ಗ್ರಂಥದ ಮಂಗಲವನ್ನು ಆಚರಿಸುವವನಿಗೆ ವಿಘ್ನ ಇದ್ದೇ ಇರುತ್ತದೆಂಬ ನಿಶ್ಚಯವಿರುವುದಿಲ್ಲ. ನಿಶ್ಚಯವಿದ್ದರೆ ಮಾತ್ರ ಅದರ ನಿವಾರಣೆಗಾಗಿ ಮಂಗಲಾಚರಣೆಯನ್ನು ಮಾಡಲು ಅಧಿಕಾರಿಯಾಗುತ್ತಾನೆ. ಪಾಪವು ಇದ್ದೇ ಇದೆ ಎಂಬ ನಿಶ್ಚಯಜ್ಞಾನವಿರುವವನಿಗೆ ಮಾತ್ರ ಪ್ರಾಯಶ್ಚಿತ್ತ-ಮಾಡಬೇಕೆಂಬ ಬುದ್ಧಿಯು ಹೇಗೆ ಬರುತ್ತದೋ ಅದರಂತೆ ವಿಘ್ನವು ಇದ್ದೇ ಇರುತ್ತದೆ ಎಂಬ ನಿಶ್ಚಯ-ವಿದ್ದರೆ ಮಾತ್ರ ಮಂಗಲಾಚರಣೆಯನ್ನು ಮಾಡಲು ಪ್ರವೃತ್ತಿ ಮಾಡುತ್ತಾನೆ. ಆದರೆ ಯಾವುದೇ ಗ್ರಂಥದ ಪ್ರಾರಂಭದಲ್ಲಿ ಇಂಥ ವಿಘ್ನದ ನಿಶ್ಚಯವಿಲ್ಲದಿರುವ ಕಾರಣ ಮಂಗಲಾಚರಣೆಗೆ ಅಧಿಕಾರಿಯೇ ಇರುವು-ದಿಲ್ಲ. ಹೀಗೆ ಅಧಿಕಾರಿಶೂನ್ಯತ್ವವೆಂಬ ಹೇತುವು ಮಂಗಲದಲ್ಲಿ ಸಿದ್ಧವಾಗುತ್ತದೆ. ಇಂಥ ಹೇತುವಿನಿಂದ ಶ್ರುತಿಬೋಧಿತವಾದ ಅಭೀಷ್ಟಪ್ರಯೋಜನವು ಮಂಗಲಾಚರಣೆಗೆ ಇರುವುದಿಲ್ಲವೆಂಬ ಸತ್ಪ್ರತಿಪಕ್ಷಾನು-ಮಾನವನ್ನು ಪ್ರಯೋಗಿಸುತ್ತೇನೆಂದು ಆಕ್ಷೇಪಿಸುತ್ತಾನೆ.

'ನ್ಯಾಯಪ್ರಾಪ್ತವಿಘ್ನಸಂದೇಹವತ್ ಶಿಷ್ಟಾನುಷ್ಠಾನಬಲೇನ' ಇಲ್ಲಿರುವ ನ್ಯಾಯಪ್ರಾಪ್ತ ಎಂಬ ವಿಶೇಷಣಕ್ಕೆ ಅನುಷ್ಠಾನದಲ್ಲಿ ಅನ್ವಯವನ್ನು ತಿಳಿಯಬೇಕು. 'ಪಾಕ್ಷಿಕೋಽಪಿ ದೋಷಃ ಪರಿಹರ್ತವ್ಯಃ'

ಎಂಬುದೇ ವಿವಕ್ಷಿಸಬೇಕಾದ ನ್ಯಾಯವಾಗಿದೆ. ಈ ನ್ಯಾಯದ ಆಧಾರದಿಂದ ಮನು ಮೊದಲಾದ ಶಿಷ್ಟರು ವಿಘ್ನಸಂದೇಹದಿಂದ ಮಂಗಲಾನುಷ್ಠಾನವನ್ನು ಮಾಡಿದ್ದು ಕಂಡಿದೆ. ಮನು ಮೊದಲಾದವರಿಗೆ ವಿಘ್ನದ ನಿಶ್ಚಯವು ಇರುವುದಿಲ್ಲ. ವಿಘ್ನಸಂದೇಹದಿಂದಲೇ ಮಂಗಲಾಚರಣೆಯನ್ನು ಮಾಡಿದ್ದಾರೆ. ಇದರಿಂದ ವಿಘ್ನನಿಶ್ಚಯವು ಮಂಗಲಾಚರಣೆಯ ಪ್ರವೃತ್ತಿಗೆ ಕಾರಣವಲ್ಲ. ವಿಘ್ನಜ್ಞಾನವು ಮಂಗಲಾಚರಣೆಯ ಅನುಷ್ಠಾನಕ್ಕೆ ಕಾರಣವೆಂದು ತಿಳಿಯುತ್ತದೆ. ಆ ವಿಘ್ನಜ್ಞಾನವು ವಿಘ್ನನಿಶ್ಚಯದಲ್ಲಿ ಇರುವಂತೆ ವಿಘ್ನ-ಸಂದೇಹದಲ್ಲೂ ಸಾಧಾರಣವಾಗಿದೆ. ಆದ್ದರಿಂದ ಸತ್ಪ್ರತಿಪಕ್ಷಾನುಮಾನದಲ್ಲಿ ನಿರಧಿಕಾರಿಕತ್ವವೆಂಬ ಹೇತುವು ಅಪ್ರಸಿದ್ಧವಾಗುತ್ತದೆ. ಏಕೆಂದರೆ ವಿಘ್ನಜ್ಞಾನವುಳ್ಳವನೇ ಅಧಿಕಾರಿಯಾಗುತ್ತಾನೆ. ಈ ಅಭಿ-ಪ್ರಾಯದಿಂದ ''ತತ್ಸಂದೇಹೇಽಪಿ'' ಇತ್ಯಾದಿ ವಾಕ್ಯವು ಹೊರಟಿದೆ.

## ಸಮಾಪ್ತಿಯನ್ನು ಕಾರಣವೆನ್ನುವುದು ಬೇಡವೆಂದು ಆಕ್ಷೇಪ

ವಾಕ್ಯಾರ್ಥಚಂದ್ರಿಕಾ – ನನ್ವೇವಮಪಿ 'ಅವಿಘ್ನಸಮಾಪ್ತ್ಯಾದಿಹೇತುತ್ವಸ್ಯ' ಇತ್ಯಯುಕ್ತಮ್ । ತಾವತಾ ವಿಘ್ನಧ್ವಂಸಸ್ಯ ಫಲತ್ವೋಪಪತ್ತಾವಪಿ, ಸಮಾಪ್ತೇರ್ಮಂಗಲಫಲತ್ವಾನುಪಪತ್ತೇಃ । ಯದ್ಯಪಿ ಶ್ರುತಿನಿಶ್ಚಿತೇ ಸಾಧ್ಯಸಾಧನಭಾವೇ, 'ಮಂಗಲಾಭಾವೇ ಅಪಿ ಸಮಾಪ್ತಿಭಾವೋ, ಮದ್ರೀತ್ಯಾಽ-ನೇಕಕಾರಣಾನಾಮೇಕಶಕ್ತಿಮತ್ತ್ವಕಲ್ಪಕೋ ವಾ, ತ್ವದ್ರೀತ್ಯಾ ಸಮಾಪ್ತಿಗತಜಾತಿವಿಶೇಷನಿಮಿತ್ತೋ ವಾ' ಇತಿ ನ ವ್ಯತಿರೇಕವ್ಯಭಿಚಾರಃ; ಅನ್ಯಥಾ ಗಂಗಾಸ್ನಾನಾದಿನಾಽಪಿ ವಿಘ್ನಧ್ವಂಸಭಾವೇನ ತಸ್ಯಾಪಿ ಮಂಗಲವ್ಯಭಿಚಾರಃ ಪ್ರಸಜ್ಯೇತ, 'ಮಂಗಲಭಾವೇಽಪಿ ಸಮಾಪ್ತ್ಯಭಾವಸ್ತು ಸಾಮಗ್ರೀವೈಕಲ್ಯಸ್ಯ ವಾ, ಪ್ರತಿಬಂಧಕಸದ್ಭಾವಸ್ಯ ವಾ, ಕಲ್ಪಕೋ ಭವಿಷ್ಯತಿ' ಇತಿ ನಾನ್ವಯವ್ಯಭಿಚಾರೋಽಪಿ, ಇತಿ ಸಮಾಪ್ತಿಂ ಪ್ರತ್ಯುಭಯತೋ ವ್ಯಭಿಚಾರಾಭಾವಸ್ತುಲ್ಯಃ, ತಥಾಽಪಿ ವಿಘ್ನಧ್ವಂಸವಿಶಿಷ್ಟಸಮಾಪ್ತೇಃ ಫಲತ್ವೇ ವಿಶೇಷಣೀಭೂತವಿಘ್ನಧ್ವಂಸಫಲತ್ವಸ್ಯಾವಶ್ಯಕತ್ವಾತ್ ಲಾಘವಾಚ್ಚ, ವಿಘ್ನಸಂಶಯೇ ತನ್ನಿಶ್ಚಯೇ ವಾ ಶಿಷ್ಟಾನಾಂ ಮಂಗಲಾಚರಣಾದ್ ವಿಘ್ನಾಭಾವಸ್ಯಾವಶ್ಯಂ ಕಾಮನಾವಿಷಯತ್ವೇನೋಪಸ್ಥಿತತಯಾ ಪೂರ್ವಾನುಪಸ್ಥಿತಾಪೂರ್ವಪ್ರತಿಬಂಧೀಗ್ರಹಣಾಸಂಭವಾಚ್ಚ, 'ಸಮಾಪ್ಯತಾಮ್' ಇತಿ ಕಾಮನಾ-ಸ್ಥಲೇ ವಿಘ್ನಧ್ವಂಸಸ್ಯ ಬುದ್ಧಿಸ್ಥತ್ವಾಚ್ಚ, ತಸ್ಯೈವ ಫಲತ್ವಸಂಭವೇ, ಸಮಾಪ್ತೇರಪಿ ಫಲತ್ವೇ, ಕಲ್ಪನಾ-ಗೌರವಂ ಸ್ಯಾದೇವ ।

ಆಕ್ಷೇಪ – ನಿರ್ವಿಘ್ನಪರಿಸಮಾಪ್ತಿಯು ಮಂಗಲದ ಪ್ರಯೋಜನವಾಗಿದೆ ಎಂದು ಸಮರ್ಥಿಸ-ಲಾಯಿತು. ಇದು ಅಯುಕ್ತವಾಗಿದೆ. ವಿಘ್ನಧ್ವಂಸವನ್ನೇ ಮಂಗಲದ ಫಲವೆಂದು ಹೇಳುವುದರಿಂದ ಎಲ್ಲಾ

ಉದ್ದೇಶವೂ ಸಿದ್ಧವಾಗುತ್ತಿರುವಾಗ ಸಮಾಪ್ತಿಯನ್ನು ಮಂಗಲದ ಫಲವೆಂದು ಹೇಳುವುದು ಅನುಪಪನ್ನ-ವಾಗಿದೆ.

ವಾಸ್ತವಿಕವಾಗಿ ಇಲ್ಲೊಂದು ಅವಾಂತರಶಂಕೆ ಮಾಡಬಹುದು – ಶ್ರುತಿಯಿಂದ ಸಮಾಪ್ತಿ ಹಾಗೂ ಮಂಗಲಗಳಿಗೆ ಸಾಧ್ಯಸಾಧನಭಾವವು ನಿಶ್ಚಯವಾಗಿರುತ್ತದೆ. ಆದ್ದರಿಂದ ಮಂಗಲವಿಲ್ಲದಿದ್ದರೂ ಕೂಡ ಸಮಾಪ್ತಿಯು ಕಾಣಿಸುತ್ತಿದೆ ಎಂಬುದಾಗಿ ವ್ಯತಿರೇಕವ್ಯಭಿಚಾರದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ನಮ್ಮ ಪ್ರಕಾರ ಸಮಾಪ್ತಿಗೆ ಅನೇಕಕಾರಣಗಳಿವೆ. ಅವುಗಳಲ್ಲಿ ಏಕಶಕ್ತಿಮತ್ವವು ಅನುಗತ-ವಾಗಿದೆ. ಅಥವಾ ನಿಮ್ಮ ಪ್ರಕಾರ ಸಮಾಪ್ತಿಯಲ್ಲಿರುವ ಜಾತಿವಿಶೇಷವು ನಿಮಿತ್ತವಾಗಿದೆ. ಹಾಗಾಗಿ ವ್ಯತಿರೇಕವ್ಯಭಿಚಾರಕ್ಕೆ ಅವಕಾಶವಿಲ್ಲ. ಹೀಗೊಪ್ಪದಿದ್ದರೆ ವಿಘ್ನಧ್ವಂಸವನ್ನೂ ಕೂಡ ಮಂಗಲದ ಪ್ರಯೋಜನವೆಂದು ಸಮರ್ಥಿಸಲಾಗದು. ಏಕೆಂದರೆ ಗಂಗಾಸ್ನಾನಾದಿಗಳಿಂದಲೂ ಕೂಡ ವಿಘ್ನಧ್ವಂಸ-ವಾಗುತ್ತದೆ. ಆದ್ದರಿಂದ ವ್ಯಭಿಚಾರದೋಷವು ನಿಮಗೂ ತಪ್ಪಿದ್ದಲ್ಲ. ಹಾಗಾಗಿ ವಿಘ್ನಧ್ವಂಸಕ್ಕೆ ಅನೇಕ-ಕಾರಣಗಳಿವೆಯೆಂದೇ ಒಪ್ಪಬೇಕು.

ಅನ್ವಯವ್ಯಭಿಚಾರಕ್ಕೂ ಕೂಡ ಅವಕಾಶವಿಲ್ಲ. ಕೆಲವು ಗ್ರಂಥಗಳಲ್ಲಿ ಮಂಗಲವಿದ್ದರೂ ಕೂಡ ಸಮಾಪ್ತಿ ಕಾಣಿಸುತ್ತಿಲ್ಲವಾದ್ದರಿಂದ ಅನ್ವಯವ್ಯಭಿಚಾರವನ್ನು ಹೇಳಬೇಕು. ಆದರೆ ಸಾಮಗ್ರೀವೈಕಲ್ಯದಿಂದ ಅಥವಾ ಪ್ರತಿಬಂಧಕಸದ್ಭಾವದಿಂದ ಸಮಾಪ್ತಿಯಾಗಿಲ್ಲವೆಂದು ಹೇಳಲು ಸಾಧ್ಯವಿದೆ. ಆದ್ದರಿಂದ ಅನ್ವಯವ್ಯಭಿಚಾರಕ್ಕೆ ಅವಕಾಶವಿಲ್ಲ. ಹೀಗೆ ಸಮಾಪ್ತಿಯನ್ನು ಕುರಿತು ಮಂಗಲವು ಕಾರಣವೆಂದು ಹೇಳಿ-ದರೆ ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳು ಬರುವುದಿಲ್ಲ.

ಈ ಅವಾಂತರಾಶಂಕೆಯು ಅಯುಕ್ತವಾಗಿದೆ. ಏಕೆಂದರೆ ನೀವು ವಿಘ್ನಧ್ವಂಸವಿಶಿಷ್ಟವಾದ ಸಮಾಪ್ತಿಯೇ ಮಂಗಲದ ಪ್ರಯೋಜನವೆಂದು ಹೇಳುತ್ತಿದ್ದೀರಿ. ಇಲ್ಲಿ ವಿಶೇಷಣೀಭೂತವಾದ ವಿಘ್ನ-ಧ್ವಂಸವನ್ನೇ ಫಲವೆಂದು ಹೇಳಲು ಬರುವಾಗ ಸಮಾಪ್ತಿಯನ್ನೂ ಕೂಡ ಫಲವೆಂದು ಹೇಳಬೇಕಾಗಿಲ್ಲ. ವಿಶೇಷಣೀಭೂತವಾದ ವಿಘ್ನಧ್ವಂಸವನ್ನಷ್ಟೇ ಫಲವೆಂದು ಹೇಳಿದಾಗ ಲಾಘವವೂ ಕೂಡ ಇರುತ್ತದೆ. ಮತ್ತು ವಿಘ್ನಸಂಶಯದಿಂದ ಅಥವಾ ವಿಘ್ನದ ನಿಶ್ಚಯದಿಂದ ಮಂಗಲಾಚರಣೆಯನ್ನು ಮಾಡಲು ಶಿಷ್ಟರು ಪ್ರವೃತ್ತಿಮಾಡುತ್ತಾರೆ. ಆದ್ದರಿಂದ ವಿಘ್ನಾಭಾವವೇ ಶಿಷ್ಟರ ಕಾಮನೆಗೆ ವಿಷಯತ್ವೇನ ಉಪಸ್ಥಿತವಾಗುತ್ತದೆ. ಮೊದಲು ಅನುಪಸ್ಥಿತವಾದ ಅಪೂರ್ವಪ್ರತಿಬಂದಿಯನ್ನು ಇಲ್ಲಿ ಉದಾಹರಿಸಲು ಸಾಧ್ಯವಿಲ್ಲ. 'ಸಮಾಪ್ಯತಾಂ' ಎಂಬ ಕಾಮನಾಸ್ಥಳದಲ್ಲೂ ಕೂಡ ವಿಘ್ನಧ್ವಂಸವೇ ಬುದ್ಧಿಯಲ್ಲಿ ಉಪಸ್ಥಿತವಾಗಿರುತ್ತದೆ. ಇಂಥ ವಿಘ್ನಧ್ವಂಸವನ್ನೇ ಫಲವನ್ನಾಗಿ ಹೇಳಲು ಬರುವಾಗ ಸಮಾಪ್ತಿಯನ್ನೂ ಕೂಡ ಫಲವೆಂದು ಒಪ್ಪಿದರೆ ಕಲ್ಪನಾಗೌರವದೋಷವು ಪ್ರಾಪ್ತವಾಗುತ್ತದೆ.

ವಿವರಣೆ –

ಆಕ್ಷೇಪ – ನಿರ್ವಿಘ್ನಪರಿಸಮಾಪ್ತಿಯೇ ಮಂಗಲದ ಪ್ರಯೋಜನವೆಂದು ಹೇಳುತ್ತಿದ್ದೀರಿ. ಇದು ಅಯುಕ್ತವಾಗಿದೆ. ಕೇವಲ ವಿಘ್ನಧ್ವಂಸವೇ ಪ್ರಯೋಜನವೆಂದು ಹೇಳಿದರೂ ಸಾಕು. ಮಂಗಲಕ್ಕೆ ಸಮಾಪ್ತಿಯು ಪ್ರಯೋಜನವೆಂದು ಹೇಳುವುದು ಅನುಪಪನ್ನವಾಗಿದೆ.

ವಿಘ್ನಧ್ವಂಸವನ್ನು ಕುರಿತು ಮಂಗಲವು ಕಾರಣವಾದಂತೆ ಸಮಾಪ್ತಿಯನ್ನು ಕುರಿತು ಮಂಗಲವು ಕಾರಣವೆಂದು ಹೇಳಬಹುದು. 'ಯತ್ರ ಮಂಗಲಾಚರಣಂ ತತ್ರ ಸಮಾಪ್ತಿಃ' 'ಯತ್ರ ಮಂಗಲಾ-ಚರಣಾಭಾವಃ ತತ್ರ ಸಮಾಪ್ತ್ಯಭಾವಃ' ಹೀಗೆ ಅನ್ವಯವ್ಯತಿರೇಕವ್ಯಾಪ್ತಿಗಳು ಇರುವುದರಿಂದ ಸಮಾಪ್ತಿ-ಯನ್ನು ಕುರಿತು ಮಂಗಲವು ಕಾರಣವಾಗುತ್ತದೆ. ವಾಸ್ತವಿಕವಾಗಿ ಇಲ್ಲಿ ಹೀಗೆ ಪ್ರಶ್ನೆ ಬರುತ್ತದೆ – 'ಮಂಗಲಾಚರಣೆ ಮಾಡಿದಾಗಲೂ ಸಮಾಪ್ತಿ ಕಂಡಿಲ್ಲ; ಮಂಗಲಾಚರಣೆ ಮಾಡದಿದ್ದಾಗಲೂ ಕೂಡ ಸಮಾಪ್ತಿಯು ಆಗಿದೆ' ಎಂಬುದಾಗಿ ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳು ಬರುತ್ತದೆ. ಆದರೆ ಸಮಾಪ್ತಿಗೆ ಮಂಗಲವೊಂದೇ ಕಾರಣವಲ್ಲ. ಅನೇಕ ಕಾರಣಗಳು ಇರುತ್ತವೆ. ಒಂದೇ ಅಗ್ನಿಗೆ ತೃಣ ಅರಣಿ ಮಣಿ ಮೊದಲಾದ ಅನೇಕ ಕಾರಣಗಳು ಇದ್ದಾಗ ತತ್ತಜ್ಜನ್ಯವಾದ ಅಗ್ನಿಗೆ ಆಯಾ ಪದಾರ್ಥಗಳು ಹೇಗೆ ಕಾರಣವಾಗುತ್ತವೋ ಅದರಂತೆ ಅನೇಕ ಕಾರಣವಿರುವ ಸ್ಥಳದಲ್ಲಿ ವ್ಯತಿರೇಕವ್ಯಭಿಚಾರವು ದೋಷವೇ ಆಗುವುದಿಲ್ಲ ಎಂದು ಇದರಿಂದ ಸಿದ್ಧವಾಗುತ್ತದೆ. ಅದರಂತೆ ಇಲ್ಲೂ ಕೂಡ ಒಂದೇ ಸಮಾಪ್ತಿಗೆ ಅನೇಕಕಾರಣಗಳಿರುವುದರಿಂದ ಕೇವಲ ಮಂಗಲಾಚರಣೆಯಿರುವುದಿಲ್ಲ ಎಂಬ ಕಾರಣ-ದಿಂದ ವ್ಯತಿರೇಕವ್ಯಭಿಚಾರವನ್ನು ಹೇಳಲು ಸಾಧ್ಯವಿಲ್ಲ. ಈ ಎಲ್ಲಾ ಕಾರಣಗಳಲ್ಲಿ ಏಕಶಕ್ತಿಮತ್ವ ಎಂಬ ಅನುಗಮವನ್ನು ಹೇಳಬಹುದು. ಇನ್ನು ಮಂಗಲಮಾಡಿದ್ದರೂ ಕೂಡ ಸಮಾಪ್ತಿಯು ಕಾಣಸುತ್ತಿಲ್ಲ-ವಾದ್ದರಿಂದ ಅನ್ವಯವ್ಯಭಿಚಾರವು ಬರುತ್ತದಲ್ಲವೇ ಎಂಬ ಮತ್ತೊಂದು ಪ್ರಶ್ನೆಯು ಬರುತ್ತದೆ. ಇದೂ ಕೂಡ ಸರಿಯಲ್ಲ. ಏಕೆಂದರೆ ಸಾಮಗ್ರಿವೈಕಲ್ಯದಿಂದ ಅಥವಾ ಪ್ರತಿಬಂಧಕಸದ್ಭಾವದಿಂದ ಸಮಾಪ್ತಿಯು ಆಗಿರುವುದಿಲ್ಲವೆಂದು ಉಪಪಾದನೆ ಮಾಡುತ್ತೇವೆ. ಆದ್ದರಿಂದ ಸಮಾಪ್ತಿಯನ್ನು ಕುರಿತು ಮಂಗಲಾ-ಚರಣೆಯು ಕಾರಣವಾಗಿದೆ ಎಂಬ ಪಕ್ಷದಲ್ಲಿ ಬರುವ ಎರಡು ಬಗೆಯ ವ್ಯಭಿಚಾರದೋಷಗಳನ್ನು ಗ್ರಂಥದಲ್ಲಿಯೇ ಪರಿಹಾರ ಮಾಡಿದ್ದಾರೆ. ಆದ್ದರಿಂದ ಧಾರಾಳವಾಗಿ ಸಮಾಪ್ತಿಯನ್ನು ಕುರಿತು ಮಂಗಲಾಚರಣೆಯು ಕಾರಣವಾಗಿದೆ ಎಂದು ಹೇಳಬಹುದು. ಇದನ್ನೇಕೆ ಆಕ್ಷೇಪ ಮಾಡಬೇಕು? ಎಂಬುದು ಅವಾಂತರ ಆಶಂಕೆ.

ಸಾಧ್ಯಸಾಧನಭಾವವು ಶ್ರುತಿನಿಶ್ಚಿತವಾದ ಮೇಲೆ ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರ-ಗಳನ್ನು ಮೇಲೆ ಹೇಳಿದ ಕ್ರಮದಲ್ಲಿ ಪರಿಹರಿಸಲು ಸಾಧ್ಯವಾಗುತ್ತದೆ. ಹೀಗೊಪ್ಪದಿದ್ದರೆ ವಿಘ್ನಪರಿಹಾರಕ್ಕೆ ಮಂಗಲಾಚರಣೆಯೇ ಕಾರಣವಾಗಬೇಕಾಗಿಲ್ಲ. ಗಂಗಾಸ್ನಾನಾದಿಗಳಿಂದಲೂ ವಿಘ್ನಪರಿಹಾರವಾಗುತ್ತದೆ. ಆದ್ದರಿಂದ ವಿಘ್ನಧ್ವಂಸವನ್ನು ಕುರಿತು ಮಂಗಲಾಚರಣೆಯು ಕಾರಣವೆಂದು ಹೇಳಿದರೆ ಅನ್ವಯ-ವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳು ಬಂದೇ ಬರುತ್ತವೆ.

ಈ ಅವಾಂತರಾಶಂಕೆಗೆ ಉತ್ತರ ಹೀಗಿದೆ. ಹೌದು. ಸಮಾಪ್ತಿಯನ್ನು ಕುರಿತು ಮಂಗಲವು ಕಾರಣವೆಂದು ಹೇಳಿದಾಗ ಬರುವ ದೋಷವು ವಿಘ್ನಧ್ವಂಸವನ್ನು ಕುರಿತು ಕಾರಣವೆಂದು ಹೇಳಿದಾಗಲೂ ಕೂಡ ಬಂದೇ ಬರುತ್ತದೆ. ಆದರೂ ಕೂಡ ನೀವು ವಿಘ್ನಧ್ವಂಸವಿಶಿಷ್ಟವಾದ ಸಮಾಪ್ತಿಯು ಮಂಗಲಾ-ಚರಣೆಯ ಫಲವೆಂದು ಹೇಳುತ್ತಿದ್ದೀರಿ. ಇದು ಸರಿಯಲ್ಲ ಎಂಬುದಷ್ಟೇ ನಮ್ಮ ಆಕ್ಷೇಪದ ಅಭಿಪ್ರಾಯ. ಏಕೆಂದರೆ 'ವಿಶೇಷ್ಯಂ ನಾಭಿಧಾ ಗಚ್ಛೇತ್, ಕ್ಷೀಣಶಕ್ತಿರ್ವಿಶೇಷಣೇ' ಎಂಬ ನ್ಯಾಯವು ಪ್ರಸಿದ್ಧವಾಗಿದೆ. ಈ ನ್ಯಾಯವನ್ನು ಅನುಸರಿಸಿ ಜಾತಿವಿಶಿಷ್ಟವ್ಯಕ್ತಿಯಲ್ಲಿ ಶಕ್ತಿಯನ್ನು ಅಂಗೀಕಾರ ಮಾಡುವುದಕ್ಕಿಂತ ವಿಶೇಷಣೀಭೂತವಾದ ಜಾತಿಯಲ್ಲಷ್ಟೇ ಶಕ್ತಿಯನ್ನು ಒಪ್ಪಿದರೆ ಸಾಕು ಎಂಬುದಾಗಿ ತಾರ್ಕಿಕರು ಹೇಳುತ್ತಾರೆ. ಅದೇ ಪ್ರಕಾರ ವಿಘ್ನಧ್ವಂಸವಿಶಿಷ್ಟವಾದ ಸಮಾಪ್ತಿಯು ಫಲವೆಂದು ಹೇಳುವುದಕ್ಕಿಂತ ವಿಶೇಷಣೀಭೂತವಾದ ವಿಘ್ನಧ್ವಂಸವಷ್ಟೇ ಫಲವೆಂದು ಹೇಳುವುದರಲ್ಲಿ ಲಾಘವವಿದೆ.

'ವಿಘ್ನಸಂಶಯೇ ತನ್ನಿಶ್ಚಯೇ ವಾ' ಎಂಬ ವಾಕ್ಯಾರ್ಥಚಂದ್ರಿಕೆಯಲ್ಲಿರುವ ವಾಕ್ಯಕ್ಕೆ ವಾಕ್ಯಾರ್ಥ-ರತ್ನಮಾಲಾ ವ್ಯಾಖ್ಯಾನದ ಪ್ರಕಾರ ಹೀಗೆ ಅರ್ಥವನ್ನು ತಿಳಿಯಬೇಕು – ಮಂಗಲಾಚರಣೆಗೆ ವಿಘ್ನ-ಧ್ವಂಸವು ಫಲವೆಂದು ಹೇಳಬೇಕಾದರೆ ಮೊದಲು ಅದರ ಉಪಸ್ಥಿತಿಯು ಇರಬೇಕು. ಅಧಿಕಾರಿಗಳ ಕಾಮನೆಗೆ ವಿಷಯವಾದದ್ದೇ ಫಲ ಎನಿಸುತ್ತದೆ. ಜ್ಯೋತಿಷ್ಟೋಮಯಾಗ ಮಾಡುವವನಿಗೆ ಸ್ವರ್ಗವನ್ನು ಫಲವೆಂದು ಹೇಳಬಹುದೇ ಹೊರತು, ಅಪೂರ್ವವನ್ನು ಫಲವೆಂದು ಹೇಳಲಾಗದು. ಏಕೆಂದರೆ ಅಪೂರ್ವವು ಪೂರ್ವದಲ್ಲಿ ಉಪಸ್ಥಿತವಾಗಿರುವುದಿಲ್ಲ. ಅದರಂತೆ ವಿಘ್ನಧ್ವಂಸವು ಇಲ್ಲಿ ಉಪಸ್ಥಿತವೇ ಆಗಿರುವುದಿಲ್ಲ. ಹೀಗಿರುವಾಗ ಇದನ್ನು ಫಲವೆಂದು ಹೇಗೆ ಹೇಳುತ್ತೀರಿ? ವಿಘ್ನಧ್ವಂಸವಿಶಿಷ್ಟವಾದ ಸಮಾಪ್ತಿಯು ಫಲವೆಂದು ಹೇಳುವುದಕ್ಕಿಂತ ವಿಶೇಷಣೀಭೂತವಾದ ವಿಘ್ನಧ್ವಂಸವಷ್ಟೇ ಫಲವೆಂದು ಹೇಳೋಣ. ಸಮಾಪ್ತಿಯು ಫಲವೆಂದು ಹೇಳುವ ಅವಶ್ಯಕತೆ ಇಲ್ಲ. ಇಲ್ಲಿ ಗೌರವ ಬರುತ್ತದೆಂದು ಅವಾಂತರಾಶಂಕೆಯನ್ನು ಮಾಡಲಾಯಿತು. ಹಾಗಾದರೆ ಅಪೂರ್ವದ್ವಾರಾ ಸ್ವರ್ಗವನ್ನು ಫಲವೆಂದು ಹೇಳುವುದು ಬೇಡ. ಅಪೂರ್ವವನ್ನು ಒಪ್ಪದೇ ಇದ್ದರೆ ಸ್ವರ್ಗವನ್ನು ಯಾಗಫಲವೆಂದು ಹೇಳಲು

ಸಾಧ್ಯವೇ ಆಗುವುದಿಲ್ಲ. ಏಕೆಂದರೆ ಕ್ಷಣಿಕವಾದ ಯಾಗದಿಂದ ಕಾಲಾಂತರಭಾವಿಯಾದ ಸ್ವರ್ಗವು ಹೇಗೆ ದೊರಕುತ್ತದೆ? ಎಂಬ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಉತ್ತರಿಸಲು ಮಧ್ಯದಲ್ಲಿ ಅಪೂರ್ವವನ್ನು ಒಪ್ಪಲೇ ಬೇಕು. ಹಾಗಾದರೆ ಯಾಗಕ್ಕೆ ಅಪೂರ್ವವನ್ನೇ ಫಲವೆಂದು ಹೇಳಿದರೆ ಸಾಕು. ಸ್ವರ್ಗವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ. ಹೀಗೆ ಅಪೂರ್ವಪ್ರತಿಬಂಧೀಯನ್ನು ಹೇಳಬಹುದಲ್ಲವೇ?

ಅಪೂರ್ವಪ್ರತಿಬಂಧೀಯನ್ನು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಅಪೂರ್ವವು ಪೂರ್ವದಲ್ಲಿ ಉಪಸ್ಥಿತವೇ ಆಗಿರುವುದಿಲ್ಲ. ವಿಘ್ನಧ್ವಂಸವಾದರೋ ಶಿಷ್ಟರ ಕಾಮನಾವಿಷಯತ್ವೇನ ಪೂರ್ವದಲ್ಲೇ ಉಪಸ್ಥಿತವಾಗಿದೆ.

'ಸಮಾಪ್ಯತಾಮ್' ಎಂಬುದಾಗಿಯೇ ಶಿಷ್ಟರಿಗೆ ಕಾಮನೆ ಇರುತ್ತದೆ. ಆದ್ದರಿಂದ ಸಮಾಪ್ತಿಯಷ್ಟೇ ಉಪಸ್ಥಿತವಾಗಿರುವುದರಿಂದ ಸಮಾಪ್ತಿಯನ್ನು ಫಲವೆಂದು ಹೇಳಬಹುದಲ್ಲವೇ?

ಈ ಪ್ರಶ್ನೆಯು ಕೂಡ ತಪ್ಪು. ಯಾರಿಗೆ ಸಮಾಪ್ತಿಯಾಗಲಿ ಎಂಬ ಕಾಮನೆ ಇರುತ್ತದೋ ಅವನಿಗೆ ವಿಘ್ನಧ್ವಂಸವೂ ಕೂಡ ಬುದ್ಧಿಸ್ಥವಾಗಿರುತ್ತದೆ. ವಿಘ್ನಧ್ವಂಸವಾಗದೇ ಸಮಾಪ್ತಿಯಾಗಲು ಸಾಧ್ಯವೇ ಇಲ್ಲ. ಆ ವಿಘ್ನಧ್ವಂಸವನ್ನೇ ಮಂಗಲದ ಫಲವನ್ನಾಗಿ ಹೇಳಲು ಬರುವಾಗ ಸಮಾಪ್ತಿಯನ್ನೂ ಕೂಡ ಫಲವೆಂದು ಕಲ್ಪನೆ ಮಾಡಿದರೆ ಕಲ್ಪನಾಗೌರವದೋಷವು ಪ್ರಾಪ್ತವಾಗುತ್ತದೆ.

## ಮಂಗಲಂ ಅನ್ಯಥಾಪಿ ಸಮಾಪ್ತಿಃ ಸಂಭವತಿ

ವಾಕ್ಯಾರ್ಥಚಂದ್ರಿಕಾ – ಕಿಂಚ ವಿಘ್ನಧ್ವಂಸಸ್ಯ ಸಮಾಪ್ತಿಪೂರ್ವವೃತ್ತಿತ್ವಗ್ರಹಾನಂತರಂ ಮಂಗಲಸ್ಯ ತತ್ಪೂರ್ವವೃತ್ತಿತ್ವಗ್ರಹಾತ್ ಕುಲಾಲಪಿತೃವತ್ ತಸ್ಯಾನ್ಯಥಾಸಿದ್ಧತ್ವಮ್ । ಅಪಿ ಚ ಪ್ರಮತ್ತಾನುಷ್ಠಿತಸಮಾಪ್ತೌ ಮಂಗಲಂ ವಿನೈವ ವಿಘ್ನಸಂಸರ್ಗಾಭಾವೋ ಹೇತುಃ, ತಥಾ ಚ ತತ್ರ ಕ್ಲೃಪ್ತಪೂರ್ವವರ್ತಿನ ಏವಾನ್ಯತ್ರಾಪಿ ಸಮಾಪ್ತಿಸಂಭವೇ ತತ್ಸಹಭೂತಮಂಗಲಸ್ಯ ಅನ್ಯಥಾಸಿದ್ಧಿರೇವ ಇತಿ ನ ಸಮಾಪ್ತೇರಪಿ ಫಲತ್ವಂ ಯುಕ್ತಮ್ ಇತಿ ಚೇತ್,

ವಿಘ್ನಧ್ವಂಸಕ್ಕೆ ಸಮಾಪ್ತಿಪೂರ್ವವೃತ್ತಿತ್ವದ ಜ್ಞಾನವು ಬಂದ ಮೇಲೆ ಮಂಗಲಕ್ಕೆ ತತ್ಪೂರ್ವ-ವೃತ್ತಿತ್ವದ ಜ್ಞಾನವು ಬರುತ್ತದೆ. ಆದ್ದರಿಂದ ಕುಲಾಲಪಿತೃವಂತೆ ಮಂಗಲವು ಸಮಾಪ್ತಿಯನ್ನು ಕುರಿತು ಅನ್ಯಥಾಸಿದ್ಧವಾಗುತ್ತದೆ. ಮತ್ತು ಪ್ರಮತ್ತನು ಅನುಷ್ಠಾನ ಮಾಡಿದ ಸಮಾಪ್ತಿಯಲ್ಲಿ ಮಂಗಲವಿಲ್ಲದೇ ವಿಘ್ನಸಂಸರ್ಗಾಭಾವವೇ ಹೇತುವಾಗಿರುವುದು ಕಂಡಿದೆ. ಈ ಉದಾಹರಣೆಯಿಂದ ಕ್ಲೃಪ್ತಪೂರ್ವ-

ವೃತ್ತಿಯಾದ ವಿಘ್ನಸಂಸರ್ಗಾಭಾವವನ್ನೇ ಸಮಾಪ್ತಿಗೆ ಕಾರಣವೆಂದು ಹೇಳಲು ಬರುತ್ತಿರುವಾಗ ತತ್ಸಹಭೂತವಾದ ಮಂಗಲವು ಅನ್ಯಥಾಸಿದ್ಧವೇ ಆಗಿದೆ. ಆದ್ದರಿಂದ ಮಂಗಲದ ಫಲವು ಸಮಾಪ್ತಿ-ಯಾಗಿದೆ ಎಂದು ಹೇಳುವುದು ಯುಕ್ತವಲ್ಲ. ಇಷ್ಟು ಆಕ್ಷೇಪ.

ವಿವರಣೆ – ವಿಘ್ನಧ್ವಂಸವಿಶಿಷ್ಟವಾದ ಸಮಾಪ್ತಿಯು ಮಂಗಲದ ಫಲವೆಂದು ಹೇಳುವುದು ಬೇಡ. ವಿಘ್ನಧ್ವಂಸವನ್ನಷ್ಟೇ ಫಲವೆಂದು ಹೇಳಿದರೆ ಸಾಕು. ವಿಶೇಷಣವಾದ ವಿಘ್ನಧ್ವಂಸವನ್ನೇ ಫಲವೆಂದು ಹೇಳುವುದರಲ್ಲಿ ಲಾಘವವಿದೆ. ವಿಘ್ನಧ್ವಂಸವೇ ಮಂಗಲದ ಫಲವೆನ್ನಲು ಮತ್ತೊಂದು ಯುಕ್ತಿ ಹೀಗಿದೆ – ಘಟಕ್ಕೆ ಕುಲಾಲನೇ ಕಾರಣವೆಂದು ಹೇಳುವಾಗ ಕುಲಾಲಪಿತೃವು ಅನ್ಯಥಾಸಿದ್ಧ ಎನಿಸುತ್ತಾನೆ. ಅದರಂತೆ ವಿಘ್ನಧ್ವಂಸವನ್ನು ಹುಟ್ಟಿಸುವುದರಿಂದಲೇ ಮಂಗಲವು ಚರಿತಾರ್ಥವಾಗುತ್ತಿರುವಾಗ ಸಮಾಪ್ತಿಯು ಅನ್ಯಥಾಸಿದ್ಧವಾಗುತ್ತದೆ.

ಮತ್ತೊಂದು ಯುಕ್ತಿ ಹೀಗಿದೆ – ಪ್ರಮತ್ತನಾದವನು ಪ್ರಾರಂಭಿಸಿದ ಕಾರ್ಯವನ್ನು ಸಮಾಪ್ತಿ-ಗೊಳಿಸುತ್ತಾನೆ. ಅಂಥಲ್ಲಿ ಮಂಗಲವು ಇರುವುದಿಲ್ಲ. ವಿಘ್ನಗಳು ಇಲ್ಲದ ಕಾರಣ ಸಮಾಪ್ತಿಯು ಆಗಿರುತ್ತದೆ. ವಿಘ್ನಗಳಿಲ್ಲದ ಕಾರಣ ವಿಘ್ನಸಂಸರ್ಗಾಭಾವವು ಸಮಾಪ್ತಿಗೆ ಹೇತುವಾಗಿದೆ. ಕ್ಲೃಪ್ತಪೂರ್ವ-ವೃತ್ತಿಯಾದದ್ದು ವಿಘ್ನಸಂಸರ್ಗಾಭಾವವೇ ಆಗಿದೆ. ಹೀಗೆ ಎಲ್ಲೆಡೆಯೂ ಸಮಾಪ್ತಿಯನ್ನು ಕುರಿತು ವಿಘ್ನಸಂಸರ್ಗಾಭಾವವೇ ಕಾರಣವಾಗಿದೆ. ಅದರ ಜೊತೆಯಿರುವ ಮಂಗಲವು ಅನ್ಯಥಾಸಿದ್ಧವಾಗಿದೆ. ಉದಾ – ಘಟಕ್ಕೆ ದಂಡವು ಕಾರಣವಾಗಿದೆ. ಆ ದಂಡದಲ್ಲಿರುವ ಶುಕ್ಲವರ್ಣವು ಅನ್ಯಥಾಸಿದ್ಧವಾಗಿದೆ. ಆದ್ದರಿಂದ ಹೀಗೆ ಹೇಳಬೇಕು. ಮಂಗಲದಿಂದ ವಿಘ್ನಾಭಾವವು ಉಂಟಾಗುತ್ತದೆ. ಆ ವಿಘ್ನಾಭಾವದಿಂದ ಸಮಾಪ್ತಿಯು ಉಂಟಾಗುತ್ತದೆ. ಮಂಗಲದಿಂದ ನೇರವಾಗಿ ಸಮಾಪ್ತಿಯು ಉಂಟಾಗುವುದಿಲ್ಲ.

## ಮಂಗಳವು ಸಮಾಪ್ತಿಗೆ ಕಾರಣವೆಂದು ಸಮಾಧಾನ

ವಾಕ್ಯಾರ್ಥಚಂದ್ರಿಕಾ – ಮೈವಮ್ । ತಥಾ ಸತಿ ಕಾರೀರ್ಯಾದೇರಪ್ಯವಗ್ರಹಧ್ವಂಸವಿಶಿಷ್ಟ-ವೃಷ್ಟಿಫಲಕತ್ವೇ ವಿಶೇಷಣೀಭೂತಾವಗ್ರಹಧ್ವಂಸಫಲಸ್ಯಾವಶ್ಯಕತ್ವಾತ್ ಲಾಘವಾತ್ ಚಾವಗ್ರಹನಿಶ್ಚಯ ಏವ ತದನುಷ್ಠಾನೇನ ಅವಗ್ರಹಧ್ವಂಸಸ್ಯ ಕಾಮನಾವಿಷಯತ್ವೇನಾವಶ್ಯಮುಪಸ್ಥಿತತ್ವಾತ್ । 'ವೃಷ್ಟಿ-ರ್ಭೂಯಾತ್' ಇತಿ ಕಾಮನಾಯಾಪಿ ಅವಗ್ರಹಧ್ವಂಸಸ್ಯ ಬುದ್ಧಿಸ್ಥತ್ವಾತ್ ಅವಗ್ರಹಧ್ವಂಸಸ್ಯ ವೃಷ್ಟಿ-ಪೂರ್ವವೃತ್ತಿತ್ವಗ್ರಹಾನಂತರಂ ಕಾರೀರ್ಯಾದೇಸ್ತತ್ಪೂರ್ವವೃತ್ತಿತ್ವಗ್ರಹಾತ್ ಕುಲಾಲಪಿತೃವತ್ ತಸ್ಯ ಅನ್ಯಥಾಸಿದ್ಧತ್ವಾತ್, ಸ್ವತ ಏವ ಜಾಯಮಾನವೃಷ್ಟೌ ಅವಗ್ರಹಸಂಸರ್ಗಾಭಾವಸ್ಯ ಹೇತುತಯಾ ತತ್ರ

ಕ್ಲೃಪ್ತನಿಯತಪೂರ್ವವರ್ತಿನ ಏವ ಅನ್ಯತ್ರಾಪಿ ವೃಷ್ಟ್ಯುಪಪತ್ತೌ ತಸ್ಯ ಅನ್ಯಥಾಸಿದ್ಧತ್ವಾಚ್ಚ, ಕಾರೀರ್ಯಾದೇರಪಿ ಅವಗ್ರಹಧ್ವಂಸವಿಶಿಷ್ಟವೃಷ್ಟಿಫಲಕತ್ವಂ ನ ಸ್ಯಾತ್ ।

ಈ ಆಕ್ಷೇಪವು ತಪ್ಪು. ಒಂದು ವೇಳೆ ಮಂಗಲಕ್ಕೆ ವಿಘ್ನಧ್ವಂಸವೇ ಫಲವೆಂದು ಹೇಳುವುದಾದರೆ ಕಾರೀರ್ಯಾದಿ ಯಾಗಗಳಿಗೂ ಕೂಡ ಅವಗ್ರಹಧ್ವಂಸವೇ ಫಲವೆಂದು ಹೇಳಬೇಕಾಗುತ್ತದೆ. ಅವಗ್ರಹ ಎಂದರೆ ವೃಷ್ಟಿಪ್ರತಿಬಂಧಕವಾದ ಪಾಪವಿಶೇಷ ಎಂದರ್ಥ. ಇಂಥ ಅವಗ್ರಹವು ಧ್ವಂಸವಾದರೆ ವೃಷ್ಟಿಯು ಉಂಟಾಗುತ್ತದೆ. ಅವಗ್ರಹಧ್ವಂಸವಿಶಿಷ್ಟವಾದ ವೃಷ್ಟಿಯನ್ನು ಕುರಿತು ಕಾರೀರಿಯಾಗವು ಕಾರಣವೆಂದು ಹೇಳಬೇಕು. ಹೀಗೆ ವಿಶೇಷಣೀಭೂತವಾದ ಅವಗ್ರಹಧ್ವಂಸವೇ ಕಾರೀರಿಯಾಗಕ್ಕೆ ಫಲವೆಂದು ಹೇಳಲು ಬರುತ್ತಿರುವಾಗ ವಿಶೇಷಣವಿಶಿಷ್ಟವಾದ ವೃಷ್ಟಿಯನ್ನು ಫಲವೆಂದು ಹೇಳಿದರೆ ಗೌರವವು ಬರುತ್ತದೆ. ಮತ್ತು ಯಾರಿಗೆ ಅವಗ್ರಹವಿದೆ ಎಂಬ ನಿಶ್ಚಯಬುದ್ಧಿಯು ಇರುತ್ತದೋ ಅಂಥವನೇ ಕಾರೀರಿಯಾಗವನ್ನು ಅನು-ಷ್ಠಾನ ಮಾಡುತ್ತಾನೆ. ಅವಗ್ರಹಧ್ವಂಸವು ಕಾಮನೆಗೆ ವಿಷಯವಾಗಿರುತ್ತದೆ. ಆದ್ದರಿಂದಲೇ ಯಾಗವನ್ನು ಅನುಷ್ಠಾನ ಮಾಡುವವನ ಬುದ್ಧಿಯಲ್ಲಿ ಉಪಸ್ಥಿತವಾಗಿದೆ. ಉಪಸ್ಥಿತವಾದ ಈ ಅವಗ್ರಹಧ್ವಂಸವನ್ನೇ ಫಲವೆಂದು ಹೇಳಬೇಕು.

'ವೃಷ್ಟಿರ್ಭೂಯಾತ್' ಎಂಬ ಕಾಮನೆಯಿಂದ ಕಾರೀರಿಯಾಗವನ್ನು ಮಾಡಿದರೂ ಕೂಡ ಅವ-ಗ್ರಹಧ್ವಂಸವೇ ಬುದ್ಧಿಸ್ಥವಾಗಿರುತ್ತದೆ. ಈ ಅವಗ್ರಹಧ್ವಂಸವು ವೃಷ್ಟಿಗಿಂತಲೂ ಪೂರ್ವವೃತ್ತಿಯಾಗಿರುತ್ತದೆ. ಈ ಅವಗ್ರಹಧ್ವಂಸದ ಜ್ಞಾನದ ಅನಂತರ ವೃಷ್ಟಿಯ ಜ್ಞಾನವು ಉಂಟಾಗುತ್ತದೆ. ಆದ್ದರಿಂದ ಕಾರೀರ್ಯಾದಿ ಯಾಗಗಳಿಗೆ ಅವಗ್ರಹಧ್ವಂಸವನ್ನೇ ಫಲವೆಂದು ಹೇಳಲು ಬರುವಾಗ ತದನಂತರಭಾವಿಯಾದ ವೃಷ್ಟ್ಯಾದಿಗಳನ್ನು ಫಲವೆಂದು ಹೇಳುವುದು ಅನ್ಯಥಾಸಿದ್ಧವಾಗುತ್ತದೆ. ಮತ್ತು ಎಲ್ಲಿ ಕಾರೀರಿಯಾಗವನ್ನೇ ಆಚರಣೆ ಮಾಡದೇ ಸಹಜವಾಗಿಯೇ ಮಳೆ ಬರುತ್ತದೋ ಅಲ್ಲಿ ಅವಗ್ರಹಸಂಸರ್ಗಾಭಾವವೇ ವೃಷ್ಟಿಗೆ ಕಾರಣವೆಂಬುದು ಸಿದ್ಧವಾಗುತ್ತದೆ. ಕ್ಲೃಪ್ತನಿಯತಪೂರ್ವವೃತ್ತಿಯಾದ ಅವಗ್ರಹಸಂಸರ್ಗಾಭಾವಕ್ಕೆ ಕಾರಣತ್ವವು ಸಿದ್ಧವಾಗುವುದರಿಂದ ಬೇರೆ ಕಡೆಯೂ ಕೂಡ ಅವಗ್ರಹಾಭಾವವೇ ಕಾರಣವಾಗುತ್ತದೆಂದು ಹೇಳಬೇಕು. ಆದ್ದರಿಂದ ಕಾರೀರೀಯಾಗಕ್ಕೆ ಅವಗ್ರಹಧ್ವಂಸವೇ ಫಲವೆಂದು ಹೇಳಿ, ವೃಷ್ಟಿಯನ್ನು ಅನ್ಯಥಾಸಿದ್ಧವೆಂದು ಹೇಳಬೇಕು. ಅವಗ್ರಹಧ್ವಂಸವಿಶಿಷ್ಟವಾದ ವೃಷ್ಟಿಫಲಕತ್ವವು ಕಾರೀರಿಯಾಗಕ್ಕೆ ಸಿದ್ಧ-ವಾಗದೇ ಇರಬೇಕಾದೀತು.

* * * * *

## ಶ್ರುತವಾದ ಸಾಧ್ಯಸಾಧನಭಾವವನ್ನು ಪರಿತ್ಯಾಗ ಮಾಡಬಾರದು

ವಾಕ್ಯಾರ್ಥಚಂದ್ರಿಕಾ – ನ ಚ ಕಾರೀರ್ಯಾದಿತಃ ಅವಗ್ರಹನಿವೃತ್ತಿಮಾತ್ರಂ, ವೃಷ್ಟಿಸ್ತು ಸ್ವಕಾರಣಾದೇವ ಇತಿ ಇಷ್ಟಾಪತ್ತಿರಿತಿ ವಾಚ್ಯಮ್ । 'ಸುಖಂ ಮೇ ಭೂಯಾತ್' ಇತ್ಯವಿಶೇಷೇಣ ಕಾಮನಾಯಾ ಅಭಾವೇನ, 'ಸ್ರಕ್‌ಚಂದನಾದಿವಿಶಿಷ್ಟಸುಖಂ ಸ್ಯಾತ್' ಇತ್ಯೇವ ಕಾಮನಾಯಾ ದರ್ಶನೇನ ಆವಶ್ಯಕತ್ವಾಲ್ಲಾಘವಾದುಪಸ್ಥಿತತ್ವಾತ್ ಸ್ರಕ್‌ಚಂದನಾದಿಕಮೇವ ಯಾಗಾದಿಸಾಧ್ಯಮ್, ಸ್ವರ್ಗಪದಬೋಧ್ಯಂ ಸುಖಂ ಸ್ವಕಾರಣಾತ್ ಸ್ರಕ್‌ಚಂದನಾದೇಃ ಇತ್ಯಾಪಾತೇನ ಯಾಗಸ್ವರ್ಗಯೋಃ ಶ್ರುತಃ ಅಪಿ ಸಾಧ್ಯಸಾಧನಭಾವಃ ಪರಿತ್ಯಜ್ಯೇತ । 'ಕಾರ್ಯಾನ್ವಿತೇ ವ್ಯುತ್ಪತ್ತಿಬಲಲಬ್ಧಸಿದ್ಧಾನ್ವಿತವ್ಯುತ್ಪತ್ತೇಃ ಪಶ್ಚಾದುಪಸ್ಥಿತಾಯಾ ಅಪಿ ಲಾಘವೇನ, ಗುರುಭೂತಕಾರ್ಯಾನ್ವಿತವ್ಯುತ್ಪತ್ತೇಸ್ತ್ಯಾಗವತ್ ಪಶ್ಚಾದುಪಸ್ಥಿತಾಪೂರ್ವಸ್ಯಾಪಿ ಲಾಘವಬಲೇನ ಯಾಗಾದಿಫಲತ್ವಂ ಕಲ್ಪ್ಯೇತ ಇತ್ಯಾದ್ಯನೇಕಾತಿಪ್ರಸಂಗಾಪಾತೇನ ಶ್ರುತಸಾಧ್ಯಸಾಧನಭಾವಪರಿತ್ಯಾಗಸ್ಯ ಅನಿಷ್ಟತ್ವಾತ್ । ತದಿದಮುಕ್ತಮ್ – 'ಕಾರೀರ್ಯಾದೇರಪಿ ವೃಷ್ಟ್ಯಾದಿಹೇತುತ್ವಾಭಾವಾಪತ್ತೇರಿತಿ ॥

ಕಾರೀರ್ಯಾದಿಗಳಿಂದ ಅವಗ್ರಹನಿವೃತ್ತಿಯಷ್ಟೇ ಆಗುತ್ತದೆ. ವೃಷ್ಟಿಯು ಸ್ವಕಾರಣದಿಂದಲೇ ಉಂಟಾಗುತ್ತದೆಂಬುದು ನಮಗೆ ಇಷ್ಟಾಪತ್ತಿ ಎಂದು ಹೇಳಬಾರದು. ಹಾಗಾದಲ್ಲಿ 'ಸುಖಂ ಮೇ ಭೂಯಾತ್' ಎಂಬುದಾಗಿ ಯಾವುದೇ ವಿಶೇಷಣವಿಲ್ಲದೇ ಕಾಮನೆಯೇ ಹುಟ್ಟುವುದಿಲ್ಲ. ಸ್ರಕ್ ಚಂದನಾದಿವಿಶಿಷ್ಟವಾದ ಸುಖವು ನನಗೆ ಆಗಲಿ ಎಂದೇ ಎಲ್ಲರಿಗೂ ಕಾಮನೆಯು ಇರುತ್ತದೆ. ಆದ್ದರಿಂದ ಆವಶ್ಯಕವಾದ ಕಾರಣ ಲಾಘವವಿರುವುದರಿಂದ ಸ್ರಕ್‌ಚಂದನಾದಿಗಳೇ ಯಾಗಾದಿಸಾಧ್ಯವೆಂದು ಹೇಳಬೇಕಾಗುತ್ತದೆ. ಸ್ವರ್ಗಪದಬೋಧ್ಯವಾದ ಸುಖವು ಯಾಗಾದಿ ಸಾಧ್ಯವಲ್ಲವೆಂದು ಹೇಳಬೇಕಾಗುತ್ತದೆ. ಆಗ ಯಾಗ ಮತ್ತು ಸ್ವರ್ಗಗಳಿಗೆ ಶ್ರುತವಾದ ಸಾಧ್ಯಸಾಧನಭಾವವನ್ನು ಪರಿತ್ಯಾಗ ಮಾಡಬೇಕಾಗುತ್ತದೆ.

'ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯನ್ನು ಒಪ್ಪುವುದಕ್ಕಿಂತ ಪಶ್ಚಾದುಪಸ್ಥಿತವಾದ ಸಿದ್ಧಾನ್ವಿತದಲ್ಲಿ ವ್ಯುತ್ಪತ್ತಿಯನ್ನು ಒಪ್ಪುವುದು ಲಘುಭೂತವಾಗಿದೆ. ಲಘುಭೂತವಾದ ಸಿದ್ಧಾನ್ವಿತದಲ್ಲಿ ವ್ಯುತ್ಪತ್ತಿಯನ್ನು ತಿಳಿದ ಮೇಲೆ ಗುರುಭೂತವಾದ ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯನ್ನು ಪರಿತ್ಯಾಗ ಮಾಡುತ್ತೇವೆ. ಅದರಂತೆ ಯಾಗದಿಂದ ಮೊದಲು ಅಪೂರ್ವವು ಉತ್ಪನ್ನವಾಗುತ್ತದೆ. ಅಪೂರ್ವದಿಂದ ಸ್ವರ್ಗವು ಸಾಧ್ಯವಾಗುತ್ತದೆ. ಪಶ್ಚಾದುಪಸ್ಥಿತವಾದ ಅಪೂರ್ವವೂ ಕೂಡ ಲಘುಭೂತವಾಗಿರುವುದರಿಂದ ಯಾಗಾದಿಫಲವೆಂದು ಕಲ್ಪನೆ ಮಾಡಬೇಕಾದೀತು. ಸ್ವರ್ಗವು ಅಪೂರ್ವದ ಫಲವೆಂದು ಹೇಳಬೇಕಾದೀತು. ಹೀಗೆ ಅನೇಕ ಅತಿ-

ಪ್ರಸಂಗಗಳೂ ಪ್ರಾಪ್ತವಾಗುತ್ತವೆ. ಆದ್ದರಿಂದ ಶ್ರುತವಾದ ಸಾಧ್ಯಸಾಧನಭಾವವನ್ನು ಪರಿತ್ಯಾಗ ಮಾಡ-ಬೇಕೆಂದು ಅನಿಷ್ಟವಾಗಿದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ "ಕಾರೀರ್ಯಾದೇರಪಿ ವೃಷ್ಟ್ಯಾದಿ-ಹೇತುತ್ವಾಭಾವಾಪತ್ತೇಃ' ಎಂದು ಹೇಳಿರುತ್ತಾರೆ.

## ಪ್ರತಿಬಂದಿಯ ವಿಮೋಚನ

ವಾಕ್ಯಾರ್ಥಚಂದ್ರಿಕಾ – ಯದಿ ಚ ಕಾರೀರ್ಯಾದೇಃ ವೃಷ್ಟ್ಯಾದಿಕಂ ಪ್ರತಿ ಸಾಧನತ್ವಸ್ಯ ಶ್ರುತಿಸಿದ್ಧತ್ವಾತ್, ಶ್ರುತಿಸಿದ್ಧೇ ಚ ಸಾಧ್ಯಸಾಧನಭಾವೇ ನ ಲಾಘವಗೌರವಚಿಂತಾ; ಶ್ರುತ್ಯಾ ಚ ಅವಗ್ರಹಧ್ವಂಸವಿಶಿಷ್ಟವೃಷ್ಟಿಂ ಪ್ರತಿ ಸಾಧನತ್ವಗ್ರಹಣೈಕಪೂರ್ವವೃತ್ತಿತ್ವಗ್ರಹಾನಂತರಮನ್ಯಪೂರ್ವ-ವೃತ್ತಿತ್ವಗ್ರಹಾಭಾವಾತ್ ನಾನ್ಯಥಾಸಿದ್ಧಿಶ್ಚ ಶ್ರುತಿಸಿದ್ಧತ್ವಾದೇವ ಚ ನ ಅನ್ಯತ್ರ ಕ್ಲೃಪ್ತಪೂರ್ವವರ್ತಿನ ಏವ ಇತ್ಯಾದೇರಪಿ ಪ್ರಸರಃ ಇತಿ ಕಾರೀರ್ಯಾದೇಃ ವೃಷ್ಟ್ಯಾದಿಹೇತುತ್ವಮುಪಪನ್ನಮಿತಿ ಮನ್ಯಸೇ ತರ್ಹಿ ಮಂಗಲೇಽಪಿ ಏತತ್ಸರ್ವಂ ಸಮಮಿತಿ ಯುಕ್ತಂ ಮಂಗಲಸ್ಯಾಪಿ ಸಮಾಪ್ತಿಹೇತುತ್ವಮಿತಿ । ತದೇತ-ದಾಹ – ಸಮಮೇತತ್ ಸಕಲಂ ಪ್ರಕೃತೇಽಪಿ ಇತಿ ॥

'ಅವಗ್ರಹಧ್ವಂಸವು ಮಾತ್ರ ಕಾರೀರಿಯಾಗದ ಫಲವಾಗಿದೆ; ವೃಷ್ಟಿಯು ಫಲವಾಗಿರುವುದಿಲ್ಲ' ಎಂದು ಹೇಳಬಾರದು. ಏಕೆಂದರೆ, ವೃಷ್ಟಿಫಲವು ಶ್ರುತಿಸಿದ್ಧವಾಗಿದೆ. ಶ್ರುತಿಸಿದ್ಧವಾದದ್ದನ್ನು ಪರಿತ್ಯಾಗ ಮಾಡಬಾರದು. ಶ್ರುತಿಸಿದ್ಧವಾದ ಸಾಧ್ಯಸಾಧನಭಾವದಲ್ಲಿ ಲಾಘವಗೌರವಚಿಂತನೆಯನ್ನು ಕೂಡ ಮಾಡಬಾರದು. ಮತ್ತು ಕುಲಾಲಪಿತೃವಿನ ಜೊತೆ ಕುಲಾಲನು ಘಟವನ್ನು ನಿರ್ಮಾಣ ಮಾಡಿದರೆ ಕುಲಾಲಪಿತೃವು ಅನ್ಯಥಾಸಿದ್ಧ ಎನಿಸುವುದಿಲ್ಲ. ಅದರಂತೆ ಅವಗ್ರಹಧ್ವಂಸವಿಶಿಷ್ಟವಾದ ವೃಷ್ಟಿಯು ಕಾರೀರಿಯಾಗದ ಫಲವೆಂದು ಶ್ರುತಿಯು ಹೇಳಿದ ಮೇಲೆ ಕೇವಲ ಅವಗ್ರಹಧ್ವಂಸವನ್ನೇ ಫಲವೆಂದು ಹೇಳಬಾರದು. ಏಕಪೂರ್ವವೃತ್ತಿತ್ವಗ್ರಹಣದ ಅನಂತರ ಅನ್ಯಪೂರ್ವವೃತ್ತಿತ್ವದ ಗ್ರಹಣವಾದರೆ ಮಾತ್ರ ಅನ್ಯಥಾಸಿದ್ಧಿಯನ್ನು ಆಶಂಕಿಸಲು ಸಾಧ್ಯ . ಆದರೆ ವಿಶಿಷ್ಟಗ್ರಹಣಸಂದರ್ಭದಲ್ಲಿ ವೃಷ್ಟಿಗೆ ಅನ್ಯಥಾಸಿದ್ಧಿ-ಯನ್ನು ಹೇಳಲು ಸಾಧ್ಯವಿಲ್ಲ.

ಮತ್ತು ಅವಗ್ರಹಧ್ವಂಸವನ್ನು ಕಾಮನೆ ಮಾಡಿಯೇ ವೃಷ್ಟಿಯನ್ನು ಕಾಮನೆ ಮಾಡಬೇಕು. ಕಾಮನಾವಿಷಯತ್ವೇನ ಅವಗ್ರಹಧ್ವಂಸವೇ ಉಪಸ್ಥಿತವಾಗುತ್ತದೆ ಎಂಬ ಯುಕ್ತಿಯು ಕೂಡ ಅಯುಕ್ತ-ವಾಗಿದೆ. ಏಕೆಂದರೆ ಶ್ರುತಿಸಿದ್ಧವಾಗಿದೆ ಎಂಬ ಕಾರಣದಿಂದಲೇ ಎಲ್ಲ ಯುಕ್ತಿಗಳೂ ನಿರಸ್ತವಾಗುತ್ತವೆ. ಆದ್ದರಿಂದ ಅನ್ಯತ್ರ ಕ್ಲೃಪ್ತಪೂರ್ವವರ್ತಿನ ಏವ ಕಾರ್ಯಸಂಭವೇ ತತ್ಪೂರ್ವಂ ಅನ್ಯಥಾಸಿದ್ಧಮ್' ಎಂಬ

ಯುಕ್ತಿಗೆ ಇಲ್ಲಿ ಅವಕಾಶವಿಲ್ಲ. ಹಾಗಾಗಿ ಕಾರೀರಿಯಾಗಕ್ಕೆ ವೃಷ್ಟ್ಯಾದಿ ಹೇತುತ್ವವು ಉಪಪನ್ನವಾಗುತ್ತದೆ. ಹೀಗೆ ನೀನು ಹೇಳಲೇ ಬೇಕು. ಹಾಗಾದರೆ ಮಂಗಲವಿಷಯದಲ್ಲೂ ಕೂಡ ಈ ಎಲ್ಲ ಯುಕ್ತಿಗಳು ಸಮಾನವಾಗಿದೆ. ಆದ್ದರಿಂದ ಮಂಗಲಕ್ಕೂ ಕೂಡ ಸಮಾಪ್ತಿಹೇತುತ್ವವು ಯುಕ್ತವಾಗುತ್ತದೆ. ಇಷ್ಟು ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ಸಮಮೇತತ್ ಪ್ರಕೃತೇಽಪಿ' ಎಂಬ ಗ್ರಂಥವು ಹೊರಟಿದೆ.

## ಸೂತ್ರಕಾರರೇಕೆ ಮಂಗಲಾಚರಣೆ ಮಾಡಬೇಕು.

ವಾಕ್ಯಾರ್ಥಚಂದ್ರಿಕಾ – ನನು ತಥಾಽಪಿ ಮಂಗಲಾಚರಣಾಭಾವೇಽಪಿ, ಸೂತ್ರಕಾರಸ್ಯ ಸ್ವತ ಏವ ವಿಘ್ನಾಭಾವಸಿದ್ಧೇಃ ಫಲವಿಘಾತಾಭಾವಾತ್ ತದ್ರಾಹಿತ್ಯಂ ನ ವ್ಯಾಕರ್ತವ್ಯತ್ವಾಭಾವೇ ಪ್ರಯೋಜಕಮ್ ಇತ್ಯಪ್ರಯೋಜಕತ್ವಂ ಶಂಕತೇ – ನ ಚೇತಿ ॥ ಭಗವತ್ತ್ವಾತ್ ನಿರಂತರಾಯ-ಸಮಾಪ್ತಿರೂಪಫಲವಿಘಾತಾಭಾವೇಽಪಿ, ಮಂಗಲಾಭಾವೇ ಪ್ರಚಯರೂಪಫಲವಿಘಾತಃ ಸ್ಯಾದೇವ, ಇತ್ಯಾಹ – ಶಿಷ್ಯೇತಿ ॥ ತದೇವೋಪಪಾದಯತಿ – ಯತ ಇತಿ ॥ ನನು ಚ ಪ್ರಚಯಸ್ಯಾಸ್ಯ ಫಲಂ, ತಥಾತ್ವೇ ವಾ ಸೂತ್ರಕಾರಸ್ಯ ಭಗವತ್ತ್ವಾದೇವ ತದಿಚ್ಛಾಮಾತ್ರೇಣ ಮಂಗಲಾಭಾವೇಽಪಿ ಪ್ರಚಯಸಿದ್ಧಿರಿತ್ಯತ ಆಹ – ಅನ್ಯಥೇತಿ ॥

ಆದರೂ ಕೂಡ ಸೂತ್ರಕಾರರು ಮಂಗಲಾಚರಣೆಯನ್ನು ಮಾಡಬೇಕಾಗಿಲ್ಲ. ಏಕೆಂದರೆ ಅವರಿಗೆ ವಿಘ್ನವೇ ಇರುವುದಿಲ್ಲ. ಮಂಗಲಾಚರಣೆ ಮಾಡದಿದ್ದರೆ ಫಲವಿಘಾತವಾಗುತ್ತದೆಂಬ ಭಯವೂ ಇಲ್ಲ. ಮಂಗಲಾಚರಣೆಯ ಇಲ್ಲದಿರುವಿಕೆಯು ವ್ಯಾಖ್ಯಾನ ಮಾಡದಿರಲು ಪ್ರಯೋಜಕವೂ ಅಲ್ಲ. ಹೀಗೆ ''ನ ಚ'' ಎಂಬ ವಾಕ್ಯದಿಂದ ಅಪ್ರಯೋಜಕತ್ವವನ್ನು ಆಶಂಕಿಸುತ್ತಿದ್ದಾರೆ.

ಹೌದು, ಸೂತ್ರಕಾರರು ಷಡ್ಗುಣೈಶ್ವರ್ಯಸಂಪನ್ನರಾಗಿರುವುದರಿಂದಲೇ ವಿಘ್ನವಿಲ್ಲದ ಸಮಾಪ್ತಿ-ಯೆಂಬ ಫಲವಿಘಾತವು ಅವರಿಗಾಗುವುದಿಲ್ಲ. ಆದರೆ ಯಾವ ಗ್ರಂಥದಲ್ಲಿ ಮಂಗಲಾಚರಣೆಯು ಇರುತ್ತದೋ ಆ ಗ್ರಂಥದ ಅಧ್ಯಯನದಿಂದ ಶಿಷ್ಯರಿಗೆ ಆಯುಷ್ಯವು ಅಭಿವೃದ್ಧಿಯಾಗುತ್ತದೆ, ಎಲ್ಲ ರೀತಿ-ಯಲ್ಲಿ ಮಂಗಲಪ್ರದವಾಗುತ್ತದೆ. ಈಗ ಬಾದರಾಯಣರು ಗ್ರಂಥಾರಂಭದಲ್ಲಿ ಮಂಗಲಾಚರಣೆಯನ್ನು ಮಾಡದೇ ಇದ್ದರೆ ಇಂಥ ಗ್ರಂಥದಿಂದ ಪ್ರಚಯರೂಪವಾದ ಫಲವಿಘಾತವು ಉಂಟಾಗುತ್ತದಲ್ಲವೇ? ಈ ಪ್ರಶ್ನೆಗೆ ''ಶಿಷ್ಯ'' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಆದರ ಉಪಪಾದನೆಗಾಗಿ ''ಯತಃ'' ಎಂದು ಹೇಳಿದ್ದಾರೆ.

ಪ್ರಚಯವು ಮಂಗಲಾಚರಣೆಯ ಫಲವೇ ಅಲ್ಲ. ಹಾಗೇನಾದರೂ ಪ್ರಚಯವನ್ನು ಫಲವೆಂದು ಹೇಳಿದರೆ ಭಗವತ್ವವು ಸೂತ್ರಕಾರರಲ್ಲಿ ಇರುವುದರಿಂದ ಇಚ್ಛೆ ಮಾಡುವ ಮಾತ್ರದಿಂದಲೇ ಅವರ ಗ್ರಂಥಾಧ್ಯಯನದಿಂದ ಶಿಷ್ಯರಿಗೆ ಆಯುಷ್ಯಾದಿಗಳು ಅಭಿವೃದ್ಧವಾಗುತ್ತವೆ. ಪ್ರಚಯವು ಸಿದ್ಧವಾಗುತ್ತದೆ. ಆದ್ದರಿಂದ ಬಾದರಾಯಣರು ಮಂಗಲವನ್ನು ಆಚರಿಸಬೇಕಾಗಿಲ್ಲ. ಈ ಪ್ರಶ್ನೆಗೆ "ಅನ್ಯಥಾ" ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

## ಮಂಗಲಾಚರಣೆಯು ಉಲ್ಲೇಖಿತವಲ್ಲವಾದ್ದರಿಂದ ಆಚರಿಸಲ್ಪಟ್ಟಿಲ್ಲವೆಂದು ಪೂರ್ವಪಕ್ಷ

ವಾಕ್ಯಾರ್ಥಚಂದ್ರಿಕಾ – ಅತ್ರ 'ಮಂಗಲಾಚರಣರಹಿತತ್ವಾತ್' ಇತಿ ಮಂಗಲಾಚರಣಸ್ಯ ಅಕೃತತ್ವಂ ಹೇತುತಯಾಽಭಿಪ್ರೇತಮ್ ಅನಿವೇಶಿತತ್ವಂ ವಾ । ಆದ್ಯೇ ಅಸಿದ್ಧಿಃ, ದ್ವಿತೀಯೇ ತು ಅಪ್ರಯೋಜಕತಾ ಇತ್ಯಾಶಂಕಾಯಾಮ್ ಅಕೃತತ್ವಂ ತದುಪಪಾದಕತಯಾಽನಿವೇಶಿತತ್ವಂ ಚಾಭಿಪ್ರೇತಮ್ । ನ ಚಾಸಿದ್ಧಿಃ, ಅನಿವೇಶನಸ್ಯ ತತ್ಸಾಧಕತ್ವಾತ್ । ನ ಚಾಪ್ರಯೋಜಕತಾ । ಪೂರ್ವನ್ಯಾಯೇನ ತತ್ಪರಿಹಾರಾದಿತ್ಯಾಶಯೇನಾಹ – ಏತೇನೇತಿ ॥ ಪ್ರಕಾರಾಂತರೇಣ ಅಪ್ರಯೋಜಕತಾಶಂಕಾಮತಿದೇಶೇನ ದೂಷಯತಿ – ಅತ ಏವೇತಿ ॥

'ಮಂಗಲಾಚರಣರಹಿತತ್ವಾತ್' ಎಂಬುದಾಗಿ ಮಂಗಲಾಚರಣೆಯನ್ನು ಮಾಡಿರುವುದಿಲ್ಲ ಎಂಬರ್ಥವನ್ನು ವಿವಕ್ಷಿಸಿ ಹೇತುವನ್ನಾಗಿ ಮಾಡುತ್ತೀರೋ, ಅಥವಾ ಮಂಗಲಾಚರಣೆಯನ್ನು ಮಾಡಿದ್ದರೂ ಕೂಡ ಗ್ರಂಥದಲ್ಲಿ ಅದನ್ನು ಉಲ್ಲೇಖ ಮಾಡಿರುವುದಿಲ್ಲ ಎಂಬ ಅಭಿಪ್ರಾಯವನ್ನು ಹೊಂದಿದ್ದೀರೋ? ಮೊದಲನೆಯ ಪಕ್ಷದಲ್ಲಿ ಅಸಿದ್ಧಿದೋಷವು ಬರುತ್ತದೆ. ಏಕೆಂದರೆ, ಮಂಗಲಾಚರಣೆಯನ್ನು ಸೂತ್ರಕಾರರು ಮಾಡಿರುತ್ತಾರೆ. ಎರಡನೆಯ ಪಕ್ಷದಲ್ಲಿ ಅಪ್ರಯೋಜಕತ್ವಾಶಂಕೆಯು ಬರುತ್ತದೆ. ಹೀಗೆ ಪ್ರಶ್ನಿಸಿದರೆ ಮಂಗಲಾಚರಣೆಯನ್ನು ಸೂತ್ರಕಾರರು ಮಾಡಿರುವುದೇ ಇಲ್ಲ. ಇದನ್ನು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಗ್ರಂಥಾರಂಭದಲ್ಲಿ ಅದನ್ನು ಉಲ್ಲೇಖ ಮಾಡಿರುವುದಿಲ್ಲ ಎಂಬುದೇ ಉಪಪಾದಕವಾಗಿದೆ. ಹೀಗೆ ಮಂಗಲಾಚರಣೆಯನ್ನು ಮಾಡಿರುವುದಿಲ್ಲ ಎಂಬ ಹೇತುವು ಅಸಿದ್ಧವಾಗಿದೆ ಎಂದು ಪ್ರಶ್ನಿಸಬಾರದು. ಉಲ್ಲೇಖ ಮಾಡದಿರುವಿಕೆಯೂ ಮಂಗಲಾಚರಣೆಯನ್ನು ಮಾಡಿರುವುದಿಲ್ಲ ಎಂಬುದಕ್ಕೆ ಸಾಧಕವಾಗಿದೆ. ಅನಿವೇಶನವೆಂಬ ಹೇತುವು ಅಪ್ರಯೋಜಕವೆಂದು ಹೇಳಬಾರದು. ಹಿಂದೆ ಹೇಳಿದ ನ್ಯಾಯದಂತೆ ಅದನ್ನು ಪರಿಹಾರಮಾಡಬಹುದು. ಈ ಅಭಿಪ್ರಾಯದಿಂದ "ಏತೇನ" ಇತ್ಯಾದಿ ಗ್ರಂಥವು

ಹೊರಟಿದೆ. ಮತ್ತೊಂದು ಪ್ರಕಾರದಿಂದ ಅಪ್ರಯೋಜಕತ್ವಾಶಂಕೆಯನ್ನು ಅತಿದೇಶ ಮಾಡುವ ಮೂಲಕ "ಅತ ಏವ" ಎಂಬುದಾಗಿ ದೂಷಣೆ ಮಾಡುತ್ತಿದ್ದಾರೆ.

ವಿವರಣೆ – "ಬ್ರಹ್ಮಸೂತ್ರಾಣಿ ನ ವ್ಯಾಖ್ಯೇಯಾನಿ ಮಂಗಲಾಚರಣರಹಿತತ್ವಾತ್" ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದಾಗ ಸಿದ್ಧಾಂತಿಗಳು ಹೀಗೆ ಪ್ರಶ್ನಿಸುತ್ತಾರೆ. ಮಂಗಲಾಚರಣ-ರಹಿತತ್ವಾತ್ ಎಂಬುದಕ್ಕೆ ಅಕೃತಮಂಗಲಾಚರಣತ್ವಾತ್ ಎಂದರ್ಥವೋ ಅಥವಾ ಮಂಗಲಾಚರಣಸ್ಯ ಅನಿವೇಶಿತತ್ವಾತ್ ಎಂದರ್ಥವೋ. ಮೊದಲನೆಯ ಪಕ್ಷದಲ್ಲಿ ಸೂತ್ರಕಾರರು ಮಂಗಲಾಚರಣೆಯನ್ನು ಮಾಡಿರುತ್ತಾರೆಂದೇ ಅರ್ಥ. ಎರಡನೆಯ ಪಕ್ಷದಲ್ಲಿ ಮಾಡಿದ ಮಂಗಲಾಚರಣೆಯನ್ನು ಗ್ರಂಥದಲ್ಲಿ ಉಲ್ಲೇಖ ಮಾಡದಿದ್ದರೂ ಕೂಡ ಆ ಗ್ರಂಥವು ವ್ಯಾಖ್ಯಾನಕ್ಕೆ ಅರ್ಹವೇ ಆಗುತ್ತದೆ. ಆದ್ದರಿಂದ ಅಪ್ರಯೋಜಕತ್ವಾಶಂಕೆಯು ಬರುತ್ತದೆ.

ಈ ಪ್ರಶ್ನೆಗೆ ಪೂರ್ವಪಕ್ಷಿಗಳ ಉತ್ತರವು ಹೀಗಿದೆ – 'ಬ್ರಹ್ಮಸೂತ್ರಾಣಿ ನ ವ್ಯಾಖ್ಯೇಯಾನಿ ಮಂಗಲಾಚರಣಸ್ಯ ಅಕೃತತ್ವಾತ್' ಎಂಬುದೇ ನಮ್ಮ ಅಭಿಪ್ರಾಯ. ಈ ಅನುಮಾನದಲ್ಲಿ ಹೇತ್ವ-ಸಿದ್ಧಿಯನ್ನು ಆಕ್ಷೇಪ ಮಾಡಿದರೆ ಅನಿವೇಶನವೆಂಬ ಹೇತುವಿನಿಂದ ಅಕೃತಮಂಗಲಾಚರಣೆಯನ್ನು ಸಾಧಿಸುತ್ತೇವೆ. ಅದು ಹೀಗೆ 'ಬ್ರಹ್ಮಸೂತ್ರಮ್ ಅಕೃತಮಂಗಲಾಚರಣಂ ಗ್ರಂಥಾದೌ ಅನಿವೇಶಾತ್' ಎಂದು. ಈ ಎರಡನೆಯ ಅನುಮಾನದಲ್ಲಿ ಅಪ್ರಯೋಜಕತ್ವವನ್ನು ಆಶಂಕಿಸಬಾರದು. ಏಕೆಂದರೆ ಮಂಗಲವನ್ನು ಗ್ರಂಥಾರಂಭದಲ್ಲಿ ಮಾಡುವುದು ಎಷ್ಟು ಮುಖ್ಯವೋ ಅದರಂತೆ ಮಾಡಿದ ಮಂಗಲವನ್ನು ನಿವೇಶ-ಮಾಡುವುದೂ ಅಷ್ಟೇ ಮುಖ್ಯ ಎಂಬುದೇ ಪೂರ್ವನ್ಯಾಯ. ಆದ್ದರಿಂದ 'ಬ್ರಹ್ಮಸೂತ್ರಾಣಿ ನ ವ್ಯಾಖ್ಯೇಯಾನಿ ಅಕೃತಮಂಗಲಾಚರಣತ್ವಾತ್' ಎಂಬ ಅನುಮಾನದಿಂದ ಮಂಗಲಾಚರಣೆ ಮಾಡಿಲ್ಲ-ವೆಂದು ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಾರೆ. ಇದನ್ನು ಈಗ ನಿರಾಕರಣೆ ಮಾಡಿದಂತಾಗಿದೆ.

## ಅಪ್ರಯೋಜಕಾಶಂಕೆಗೆ ಹೇತೂಚ್ಛಿತ್ತಿರೂಪವಾದ ಬಾಧಕವಿದೆ

ಯಾದುಪತ್ಯ – ನನೂಕ್ತಹೇತೋಃ ಸಾಧ್ಯಂ ವಿನಾಽಪಿ ಫಲಾಭಾವೇನ ವಾ, ಸಮಾಪ್ತೀ-ತರಫಲಕತ್ವೇನ ವಾ, ತತ್ಫಲಕತ್ವಪ್ರತೀತೇಃ ಭ್ರಾಂತಿತ್ವೇನ ವಾ, ಪ್ರತ್ಯಕ್ಷಾದಿಮಾನಾಂತರಜನ್ಯತ್ವೇನ ವಾ ಉಪಪತ್ತೇಃ ಅಪ್ರಯೋಜಕತಾ ಇತ್ಯಾಶಂಕಾಯಾಮ್ ಉಕ್ತಹೇತೂಚ್ಛಿತ್ತಿರೇವಾತ್ರ ಬಾಧಿಕಾ, ಇತ್ಯಭಿಪ್ರೇತ್ಯಾಹ – ನ ತಾವತ್ ಪ್ರೇಕ್ಷಾವತ್‌ಪ್ರವೃತ್ತಿರಿತ್ಯಾದಿನಾ ॥

'ನಿರ್ವಿಘ್ನಪರಿಸಮಾಪ್ತ್ಯುದ್ದೇಶಕಅವಿಗೀತಶಿಷ್ಟಾಚಾರವಿಷಯತ್ವಮಸ್ತು ; ಶ್ರುತಿಪ್ರಮಾಪಿತ-ನಿರ್ವಿಘ್ನಪರಿಸಮಾಪ್ತ್ಯಾದಿಹೇತುತಾಕಂ ಮಾಸ್ತು' ಎಂಬುದಾಗಿ ಅಪ್ರಯೋಜಕಾಶಂಕೆಯು ಬರುತ್ತದೆ. ಏಕೆಂದರೆ ಮಂಗಲವು ನಿಷ್ಫಲವಾಗಿರಬಹುದು. ಅಥವಾ ಸಮಾಪ್ತಿ ಬಿಟ್ಟು ಬೇರೆ ಫಲ ಉಳ್ಳದ್ದಾಗಿರ-ಬಹುದು. ಅಥವಾ ಸಮಾಪ್ತಿ ಎಂಬ ಫಲವಿದೆ ಎಂಬ ಪ್ರತೀತಿಯು ಭ್ರಾಂತಿಯಾಗಿರಬಹುದು. ಅಥವಾ ಪ್ರತ್ಯಕ್ಷಾದಿಮಾನಾಂತರಜನ್ಯವಾಗಿರಬಹುದು. ಆದ್ದರಿಂದ ಶ್ರುತಿಪ್ರಮಾಪಿತತದ್ಧೇತುತಾಕ ಎಂಬ ಸಾಧ್ಯವು ಸಿದ್ಧವಾಗುವುದಿಲ್ಲ. ಈ ಅಪ್ರಯೋಜಕಾಶಂಕೆಗೆ ಹೇತೂಚ್ಛಿತ್ತಿರೂಪವಾದ ಬಾಧಕವಿದೆ ಎಂಬುದನ್ನು "ನ ತಾವತ್ ಪ್ರೇಕ್ಷಾವತ್ಪ್ರವೃತ್ತಿಃ" ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ.

## ಸಾಧ್ಯಸಾಧನಭಾವವಿಷಯದಲ್ಲಿ ಪ್ರತ್ಯಕ್ಷಕ್ಕೆ ಅವಕಾಶವಿಲ್ಲ

ಯಾದುಪತ್ಯ – ಪ್ರಾರಿಪ್ಸಿತಪರಿಸಮಾಪ್ತ್ಯಾದಿಕಾಮನಯಾ ಮಂಗಲೇ ಶಿಷ್ಟಾನಾಂ ಯಾ ಪ್ರವೃತ್ತಿಃ ಸಾ ಇತ್ಯರ್ಥಃ । ದೃಷ್ಟಪರಿತ್ಯಾಗಮುಪಪಾದಯತಿ – ಕಾರ್ಯಮಾರಿಪ್ಸುರಿತಿ ॥ ಅದೃಷ್ಟ-ಕಲ್ಪನಾಮ್ ಉಪಪಾದಯತಿ – ನ ಚ ಫಲಾಂತರೇತಿ ॥ ನ ಚ ಪ್ರತ್ಯಕ್ಷಾದೇರಿತಿ ॥ ಸಾಧ್ಯಸಾಧನ-ಭಾವಸ್ಯಾತೀಂದ್ರಿಯತ್ವಾನ್ನ ಪ್ರತ್ಯಕ್ಷಸ್ಯ ಅಂಧಪರಂಪರಾಶಂಕಾವರುದ್ಧತ್ವಾನ್ನ ಅನುಮಾನಸ್ಯ ಅತ್ರಾ-ವಕಾಶ ಇತಿ ಭಾವಃ ॥

"ಪ್ರೇಕ್ಷಾವತ್ಪ್ರವೃತ್ತಿಃ" – ಪ್ರಾರಿಪ್ಸಿತವಾದ ಪರಿಸಮಾಪ್ತ್ಯಾದಿಕಾಮನೆಯಿಂದ ಮಂಗಲಾ-ಚರಣೆಯಲ್ಲಿ ಯಾವ ಶಿಷ್ಟರು ಪ್ರವೃತ್ತಿ ಮಾಡುತ್ತಾರೋ ಅದನ್ನು ವಿವಕ್ಷಿಸಬೇಕು. ದೃಷ್ಟಪರಿತ್ಯಾಗ-ದೋಷದ ಉಪಪಾದನೆಗಾಗಿ 'ಕಾರ್ಯಂ ಆರಿಪ್ಸು:" ಇತ್ಯಾದಿಯಾಗಿ ಹೇಳಿದ್ದಾರೆ. ಅದೃಷ್ಟಕಲ್ಪನೆಯನ್ನು ಉಪಪಾದನೆಮಾಡಲು "ನ ಚ ಫಲಾಂತರಾನುಸಂಧಾನೇ" ಎಂಬ ವಾಕ್ಯವು ಹೊರಟಿದೆ.

"ನ ಚ ಪ್ರತ್ಯಕ್ಷಾದೇಃ" – ಸಾಧ್ಯಸಾಧನಭಾವವು ಅತೀಂದ್ರಿಯವಾಗಿದೆ. ಆದ್ದರಿಂದ ಪ್ರತ್ಯಕ್ಷವು ಅಂಧಪರಂಪರಾಶಂಕೆಯಿಂದ ಅವರುದ್ಧವಾಗಿದೆ. ಹಾಗಾಗಿ ಅನುಮಾನಕ್ಕೆ ಇಲ್ಲಿ ಅವಕಾಶವಿಲ್ಲ ಎಂದಭಿ-ಪ್ರಾಯ.

## ಶಿಷ್ಯರ ಆಯುಷ್ಯದ ಅಭಿವೃದ್ಧಿಗೋಸ್ಕರ ಮಂಗಲಾಚರಣೆ ಮಾಡಿದ್ದಾರೆ.

ಯಾದುಪತ್ಯ – ನನು ನಾಶಾರ್ಥಿಪ್ರವೃತ್ತೌ ನಾಶ್ಯನಿಶ್ಚಯವಾನಧಿಕಾರೀ ದೃಷ್ಟ:, ಯಥಾ ಪಾಪನಿಶ್ಚಯವಾನ್ ಪ್ರಾಯಶ್ಚಿತ್ತೇ । ಅತ್ರ ಚ ನಾಶ್ಯಾನಾಂ ವಿಘ್ನಹೇತೂನಾಂ ಪ್ರಥಮತೋಽ-

ನಿಶ್ಚಯಾದನಧಿಕಾರಿಕಂ ಮಂಗಲಂ, ನಾನುಷ್ಠೇಯಮ್' ಇತಿ ಸತ್ಪ್ರತಿಪಕ್ಷಮಾಶಂಕ್ಯ, ಆಹ – ನ ಚ ವಿಘ್ನಹೇತುಸದ್ಭಾವೇತಿ ॥ ತತ್ಸಂದೇಹೇऽಪೀತಿ ॥ ತಥಾ ಚ 'ವಿಘ್ನಜ್ಞಾನವಾನೇವ ಅತ್ರ ಅಧಿಕಾರೀ' ಇತಿ ಪ್ರತಿಪಕ್ಷಾನುಮಾನೇ ಸ್ವರೂಪಾಸಿದ್ಧಿರಿತಿ ಭಾವಃ । ಶಿಷ್ಯಾರ್ಥಮಪೀತಿ ॥ ಅಧ್ಯೇತೃಣಾಮಾಯು-ರಾದಿಪ್ರತಿಬಂಧಕವಿಘ್ನಘಾತಾರ್ಥಮಿತ್ಯರ್ಥಃ । ಅತ ಏವಾಹ – ಆಯುಷ್ಮತ್ ಪುರುಷಕಾಣಿ ಚೇತಿ ॥ ಏವಮಗ್ರೇऽಪೀತಿ ।

ವಿಘ್ನನಾಶಕ್ಕೋಸ್ಕರ ಯಾರು ಪ್ರವೃತ್ತಿಯನ್ನು ಮಾಡುತ್ತಾನೋ ಅವನಿಗೆ ನಾಶ್ಯವಾದ ವಿಘ್ನ-ನಿಶ್ಚಯವು ಇರಬೇಕು. ಅಂಥವನೇ ಅಧಿಕಾರಿಯಾಗುವುದು ಕಂಡಿದೆ. ಪಾಪದ ನಿಶ್ಚಯ ಇದ್ದವನು ಮಾತ್ರ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಪ್ರವೃತ್ತನಾಗುತ್ತಾನೆ. ಆದರೆ ನಾಶ್ಯವಾದ ವಿಘ್ನಹೇತುಗಳು ಇಲ್ಲಿ ನಿಶ್ಚಯವೇ ಆಗಿಲ್ಲ. ಆದ್ದರಿಂದ ಮಂಗಲಾಚರಣೆಗೆ ಅಧಿಕಾರಿಯೇ ಇಲ್ಲವೆಂದಾಯಿತು. ಆದ್ದರಿಂದ 'ಮಂಗಲಂ ನಾನುಷ್ಠೇಯಂ ನಿರಧಿಕಾರಿಕತ್ವಾತ್' ಎಂಬ ಸತ್ಪ್ರತಿಪಕ್ಷಾನುಮಾನವನ್ನು ಹೇಳಿದಂತಾಯಿತು. ಈ ಆಶಂಕೆ-ಯನ್ನು ''ನಚ ವಿಘ್ನಹೇತುಸದ್ಭಾವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

''ತತ್ಸಂದೇಹೇऽಪಿ'' – ಸತ್ಪ್ರತಿಪಕ್ಷಾನುಮಾನದಲ್ಲಿ ನಿರಧಿಕಾರಿಕತ್ವವೆಂಬ ಹೇತುವೇ ಅಸಿದ್ಧ-ವಾಗಿದೆ. ಏಕೆಂದರೆ ವಿಘ್ನಜ್ಞಾನವುಳ್ಳವನೇ ಅಧಿಕಾರಿಯಾಗಿದ್ದಾನೆ. ವೇದವ್ಯಾಸದೇವರಿಗೆ ವಿಘ್ನವೇ ಇರುವುದಿಲ್ಲ. ಎಂದರೆ ಅಧ್ಯೇತೃಗಳಿಗೆ ಆಯುಷ್ಯವೇ ಮೊದಲಾದ ಪ್ರತಿಬಂಧಕವಾದ ವಿಘ್ನ ಪರಿಹಾರ-ಕ್ಕೋಸ್ಕರ ಮಂಗಲಾಚರಣೆಯನ್ನು ವೇದವ್ಯಾಸದೇವರು ಮಾಡಿರುತ್ತಾರೆ. ಆದ್ದರಿಂದಲೇ ''ಆಯುಷ್ಮತ್ ಪುರುಷಕಾಣಿ'' ಎಂದು ಹೇಳಿದ್ದಾರೆ.

ಯಾದುಪತ್ಯ – ಶಿಷ್ಯಾರ್ಥತ್ವಾಚ್ಚೇತಿ ॥ 'ಶಿಷ್ಯಶಿಕ್ಷಾರ್ಥತ್ವಾಚ್ಚ' ಇತ್ಯರ್ಥಃ । ಅತ ಏವೇತಿ ॥ 'ಗ್ರಂಥಾದೌ ನಿವೇಶನಸ್ಯ ಅವಶ್ಯಕತ್ವಾದೇವ' ಇತ್ಯರ್ಥಃ । ಅನ್ಯತ್ ಕಿಮಪಿ ಇತಿ ॥ 'ಗಂಗಾ-ಸ್ನಾನಾದಿಕಮ್' ಇತ್ಯರ್ಥಃ ।

''ಶಿಷ್ಯಾರ್ಥತ್ವಾಚ್ಚ'' – ಶಿಷ್ಯರ ಶಿಕ್ಷಣೆಗೋಸ್ಕರ ಗ್ರಂಥಾರಂಭದಲ್ಲಿ ಮಂಗಲಾಚರಣೆಯನ್ನು ನಿವೇಶನೆ ಮಾಡಿದ್ದಾರೆ. ''ಅತ ಏವ'' – ಗ್ರಂಥಪ್ರಾರಂಭದಲ್ಲಿ ಮಂಗಲಾಚರಣೆಯ ನಿವೇಶನವು ಆವಶ್ಯಕವಾಗಿದ್ದರಿಂದಲೇ. ''ಅನ್ಯತ್ ಕಿಮಪಿ'' – ಗಂಗಾಸ್ನಾನಾದಿಗಳು ಎಂದರ್ಥ.

* * * *

# ಸುಧಾಪರಿಮಳಸಾರ

ಮಂಗಲ ಮತ್ತು ಸಮಾಪ್ತಿಯ ಕಾರ್ಯಕಾರಣಭಾವವಿಚಾರದಲ್ಲಿ ವ್ಯಭಿಚಾರಶಂಕೆ ಮಾಡಿದಾಗಲೂ ಕಾರೀರೀಯಾಗ. ಮಳೆಗಳಿಗೆ ಯಾವ ರೀತಿ ಕಾರ್ಯಕಾರಣಭಾವವನ್ನು ಒಪ್ಪುತ್ತೇವೆಯೋ ಅದೇ ರೀತಿ ಪ್ರಕೃತ-ದಲ್ಲಿಯೂ ಕೂಡ ಎಂದು ಉತ್ತರ ಕೊಡುವುದಕ್ಕಾಗಿ, ಆಕ್ಷೇಪಕ್ಕೆ ಉತ್ತರವನ್ನು ಆಕ್ಷೇಪಕಾರರಿಂದಲೇ ಹೊರಡಿಸು-ವುದಕ್ಕಾಗಿ ಕಾರೀರೀಯಾಗದ ಪ್ರಸ್ತಾವವನ್ನು ಮಾಡಿದ್ದು. ಪ್ರಕೃತದಲ್ಲಿ ಮಂಗಲವು ಸಮಾಪ್ತಿಯನ್ನು ಕುರಿತು ಕಾರಣ ಎಂದು ಸ್ಪಷ್ಟ ಶ್ರುತಿ ಇಲ್ಲದಿದ್ದರೂ ಅನಾದಿಪರಂಪರೆಯಿಂದ ಬಂದ ಶಿಷ್ಟಾಚಾರದಿಂದ 'ಒಂದು ಶ್ರುತಿ ಇದೆ' ಎಂದು ಅನುಮಾನ ಮಾಡುತ್ತೇವೆ.

ಆ ಅನುಮಿತವಾದ ಶ್ರುತಿಯಿಂದ ಕಾರ್ಯಕಾರಣಭಾವ ನಿಶ್ಚಯ ಆದ ಮೇಲೆ ಕೆಲವೆಡೆ ಮಂಗಲವಿದ್ದರೂ ಸಮಾಪ್ತಿ ಆಗದಿದ್ದರೆ, ವಿಘ್ನಬಾಹುಲ್ಯವನ್ನೋ, ಕರ್ತೃವಿನ ಲೋಪದೋಷವನ್ನೋ ಕಲ್ಪಿಸುತ್ತೇವೆ. ಮಂಗಲ-ವಿಲ್ಲದಿದ್ದರೂ ಸಮಾಪ್ತಿ ಆದರೆ ಸಮಾಪ್ತಿಗೆ ಅನೇಕ ಕಾರಣಗಳಿರಬಹುದು. ಜನ್ಮಾಂತರದಲ್ಲಿ ಮಾಡಿದ ಪುಣ್ಯ-ವಿಶೇಷದಿಂದ ಇಲ್ಲಿ ಸಮಾಪ್ತಿ ಆಗಿದೆ ಎಂದೇ ತೀರ್ಮಾನಿಸುತ್ತೇವೆ. ಆದುದರಿಂದ ಮಂಗಲಸಮಾಪ್ತಿಗಳಿಗೆ ಕಾರ್ಯ-ಕಾರಣಭಾವ ಸಿದ್ಧವಾಗುತ್ತದೆ. 'ಕರ್ಮಾದೌ ಶಿಷ್ಟೈರನುಷ್ಠೀಯಮಾನಃ ಮಂಗಲಾಚಾರಃ ತತ್ಕರ್ಮಸಮಾಪ್ತ್ಯಾದಿ-ಹೇತುತ್ವಪ್ರಮಾಪೂರ್ವಕಃ, ತತ್ಕಾಮನಯೈವ ಶಿಷ್ಟೈರನುಷ್ಠೀಯಮಾನತ್ವಾತ್, ತೃಪ್ತಿಕಾಮನಯಾऽನುಷ್ಠೀಯ-ಮಾನಭೋಜನವತ್, ತದ್ಧೇತುತ್ವಪ್ರಮಾ ಚ ಶ್ರೌತೀ ಭವಿತುಮರ್ಹತಿ ಪ್ರತ್ಯಕ್ಷಾನುಮಾನಾಜನ್ಯತ್ವೇ ಸತಿ ಜನ್ಯ-ಪ್ರಮಾತ್ವಾತ್ ಸಮ್ಮತವತ್' ಎಂಬ ಎರಡು ಅನುಮಾನಗಳಿಂದ ಮಂಗಲಸಮಾಪ್ತಿಗಳಿಗೆ ಕಾರ್ಯಕಾರಣ-ಬೋಧಕವಾದ ಶ್ರುತಿಯನ್ನು ಅನುಮಾನ ಮಾಡಬೇಕು. ಮೊದಲನೇ ಅನುಮಾನದಲ್ಲಿ ಸಮಾಪ್ತಿರೂಪ ಫಲ-ಕಾಮನೆಯಿಂದ ಎಲ್ಲರೂ ಆಚರಿಸುತ್ತಾರೆ' ಎನ್ನುವುದು ಹೇತು. ಫಲಕಾಮನೆಯೇ ಇಲ್ಲ ಎಂದು ವಿಶೇಷಣಾಸಿದ್ಧಿಶಂಕೆ ಮಾಡಲು ಬರುವುದಿಲ್ಲ. ಏಕೆಂದರೆ ಬುದ್ಧಿವಂತರು ವ್ಯರ್ಥಕೆಲಸದಲ್ಲಿ ಪ್ರವೃತ್ತಿ ಮಾಡಲಾರರು.

ವಿಘ್ನಗಳಿವೆ ಎಂಬ ನಿಶ್ಚಯವಿದ್ದರೆ ಅದರ ಪರಿಹಾರಕ್ಕೆ ಮಂಗಲಾಚರಣೆ ಮಾಡುವುದು ಯುಕ್ತವಾಗುತ್ತದೆ. ಆದರೆ ಅಂತಹ ನಿಶ್ಚಯವಿಲ್ಲದಿರುವುದರಿಂದ ಮಂಗಲಾಚರಣೆ ಮಾಡುವುದು ವ್ಯರ್ಥ ಎಂಬ ಶಂಕೆ ಸರಿಯಲ್ಲ. ಏಕೆಂದರೆ "ಪಾಕ್ಷಿಕೋऽಪಿ ದೋಷಃ ಪರಿಹರ್ತವ್ಯಃ" ಎಂದು ನಿಯಮ. ದೋಷದ ಸಂದೇಹವೂ ಕೂಡ ಕಾರ್ಯವಿಘಾತಕವೇ. ಆದುದರಿಂದ ಸಂದೇಹ ಬಂದರೂ ಕೂಡ ಅದನ್ನು ಪರಿಹಾರ ಮಾಡಲೇಬೇಕು. ಹೀಗಾಗಿ ಪ್ರಕೃತ ವಿಘ್ನದ ಸಂದೇಹ ಬಂದರೂ ಪರಿಹಾರಕ್ಕಾಗಿ ಮಂಗಲ ಮಾಡಲೇಬೇಕಿತ್ತು.

ಹಾಗೆಯೇ ಮತ್ತೊಂದು ಆಕ್ಷೇಪ—ಸೂತ್ರಕಾರರಲ್ಲಿ ದೋಷಗಳಿಲ್ಲ ಎಂದೇ ಎಲ್ಲರಿಗೂ ತೀರ್ಮಾನ-ವಾಗಿದೆ. ಸಂದೇಹವಿದ್ದಿದ್ದರೆ ಮಂಗಲ ಬೇಕಿತ್ತು. ವಿಘ್ನವಿಲ್ಲ ಎಂದು ತೀರ್ಮಾನವಾದ ಪ್ರಯುಕ್ತ ಸೂತ್ರದ ಆದಿಯಲ್ಲಿ

ಮಂಗಲವಿಲ್ಲದಿದ್ದರೂ ಯಾವುದೇ ನ್ಯೂನತೆ ಬರಲಾರದು ಎಂದು. ಇದು ಕೂಡ ಸರಿಯಲ್ಲ. ಏಕೆಂದರೆ ಶಿಷ್ಯರಿಗಾಗಿಯಾದರೂ ಮಂಗಲಾಚರಣೆ ಮಾಡಲೇಬೇಕು. ಮಂಗಲಾಚರಣಪುರಸ್ಸರವಾದ ಗ್ರಂಥಕ್ಕೆ ಒಂದು ವಿಶಿಷ್ಟಶಕ್ತಿ ಇದೆ. ಅದನ್ನು ಓದುವ ಶಿಷ್ಯರು ಆಯುಷ್ಯವಂತರಾಗುತ್ತಾರೆ ಎಂದು ಮಹಾಭಾಷ್ಯದ ಮಾತಿದೆ. ಹೀಗಾಗಿ ಗ್ರಂಥಕ್ಕೆ ಒಂದು ಶಕ್ತಿ ತಂದುಕೊಡಲು,

ಶಿಷ್ಯರಿಗೆ ಆಯುಷ್ಯಾಭಿವೃದ್ಧಿಗಾಗಿ ಈ ಗ್ರಂಥದಲ್ಲಿಯೂ ಮಂಗಲ ಮಾಡಲೇಬೇಕಿತ್ತು. ಇಲ್ಲದಿದ್ದರೆ ಮಹಾಭಾರತ, ಭಾಗವತ ಮುಂತಾದ ಗ್ರಂಥಗಳಲ್ಲಿಯೂ ಮಂಗಲವಿಲ್ಲದಿರಬೇಕಿತ್ತು. ಅವುಗಳನ್ನು ರಚಿಸಿದ ವ್ಯಾಸರು ಮೊದಲಿಗೆ 'ನಾರಾಯಣಂ ಸುರಗುರುಂ' 'ಜನ್ಮಾದ್ಯಸ್ಯ ಯತಃ' ಎಂಬಿತ್ಯಾದಿ ಮಂಗಲ ಮಾಡಿದ್ದಾರೆ. ವಿಘ್ನವೇ ಇಲ್ಲದ ವ್ಯಾಸರು ಅಲ್ಲಿಯಾದರೂ ಏಕೆ ಮಂಗಲ ಮಾಡಬೇಕಿತ್ತು. ಆದುದರಿಂದ ವಿಘ್ನವಿಲ್ಲದಿದ್ದರೂ ಗ್ರಂಥದ ವೀರ್ಯವತ್ತ್ವಗಾಗಿ ಶಿಷ್ಯರ ಅನುಗ್ರಹಕ್ಕಾಗಿ ಮಂಗಲ ಮಾಡಲೇಬೇಕು ಎಂದು.

ಮಂಗಲಾಚರಣೆ ಸೂತ್ರದ ಆದಿಯಲ್ಲಿ ಇಲ್ಲ ಎಂಬ ವಿಷಯದಲ್ಲಿ ಮತ್ತೊಂದು ಶಂಕೆಗೂ ಅವಕಾಶವಿದೆ – 'ಸೂತ್ರಕಾರರು ಮಂಗಲ ಮಾಡಿದ್ದಾರೆ. ಆದರೆ ಗ್ರಂಥದಲ್ಲಿ ಬರೆದಿಟ್ಟಿಲ್ಲ. ಆದುದರಿಂದ ಮಂಗಲ ಮಾಡಿಲ್ಲ ಎಂಬ ಶಂಕೆ ಸರಿಯಲ್ಲ' ಎಂದು ಆದರೆ ಹಿಂದೆ ವಿವರಿಸಿದಂತೆ ಮಾಡಿದ ಮಂಗಲವನ್ನು ಗ್ರಂಥದಲ್ಲಿ ಬರೆದಿಡಬೇಕೆಂಬುದೂ ಕೂಡ ಶಿಷ್ಟಾಚಾರ. ಮತ್ತು ಶಿಷ್ಯರ ಶಿಕ್ಷಣಕ್ಕೆ ಅದು ಆವಶ್ಯಕ. ಹೀಗಿರುವಾಗ ಕೇವಲ ಮಂಗಲವನ್ನು ಮಾಡಿ ಗ್ರಂಥದಲ್ಲಿ ಸೇರಿಸದೇ ಬಿಟ್ಟರೆ ಅದು ಸರಿಯಾಗಲಾರದು.

ಇನ್ನೊಂದು ಆಕ್ಷೇಪ—ವಿಘ್ನಪರಿಹಾರಕ್ಕಾಗಿ ಮಂಗಲಾಚರಣೆ. ಆದರೆ ವಿಘ್ನಪರಿಹಾರ ಆಗಲು ಗಂಗಾಸ್ನಾನ ಮುಂತಾದ ಬೇರೇನನ್ನಾದರೂ ಮಾಡಿರಬಹುದಲ್ಲವೇ? ಎಂದು. ಇದೂ ಸಮಂಜಸವೆನಿಸದು. ಬೇರೆ ಕೆಲಸ ನಿರ್ವಿಘ್ನ ನೆರವೇರಲು ಬೇರೆ ಮಾರ್ಗಗಳಿದ್ದರೂ ಗ್ರಂಥದ ಸಮಾಪ್ತಿಗೆ ಮಂಗಲಾಚರಣೆಯೇ ಬೇಕು ಎಂದು ಶಿಷ್ಟಸಂಪ್ರದಾಯ. ಅದಕ್ಕನುಗುಣವಾಗಿ ಸೂತ್ರಕಾರರು ಮಂಗಲ ಮಾಡಬೇಕಿತ್ತು. ಮಾಡಿದ ಮಂಗಲವನ್ನು ಗ್ರಂಥದಲ್ಲಿ ಸೇರಿಸಬೇಕಿತ್ತು. ಆದರೆ ಮಂಗಲ ಕಾಣುತ್ತಿಲ್ಲ. ಆದುದರಿಂದ ಈ ಗ್ರಂಥ ವ್ಯಾಖ್ಯೇಯವಲ್ಲ.

## ನೆನೆಪಿಡಿ

* ಮಂಗಲಕ್ಕೆ ಫಲವೇ ಇಲ್ಲ. ಸಮಾಪ್ತಿ ಬಿಟ್ಟು ಬೇರೆ ಫಲವೇ ಇರಲಿ. ಸಮಾಪ್ತಿಯು ಫಲವಾಗಿದೆ ಎಂಬುದು ಭ್ರಾಂತಿಯಾಗಲಿ. ಈ ಎಲ್ಲಾ ಆಕ್ಷೇಪಗಳಿಗೆ ಇಲ್ಲಿ ಉತ್ತರಿಸಲಾಗಿದೆ.

* ಸೂತ್ರಕಾರರಿಗೆ ವಿಘ್ನಸಂದೇಹವು ಇರುವುದಿಲ್ಲ. ವಿಘ್ನಪರಿಹಾರಕ್ಕೆ ಮಂಗಲಾ-ಚರಣೆಯನ್ನು ಮಾಡುವ ಅವಶ್ಯಕತೆ ಇಲ್ಲ. ಹಾಗೇನಾದರೂ ಮಂಗಲಾನುಷ್ಠಾನವನ್ನು

ಮಾಡಿದರೆ ಅದಕ್ಕೆ ಫಲವೂ ಕೂಡ ಇರುವುದಿಲ್ಲ. ಮತ್ತು ಗ್ರಂಥದಲ್ಲಿ ಇದನ್ನು ನಿವೇಶ ಮಾಡುವ ಅವಶ್ಯಕತೆಯೂ ಇರುವುದಿಲ್ಲ.

* ಯಾವುದೇ ಶಿಷ್ಟಾಚಾರಕ್ಕೆ ಶ್ರುತಿಯೇ ಮೂಲವಾಗಿರುತ್ತದೆ. ಮಂಗಲವನ್ನು ಆಚರಿಸುವಿಕೆ ಎಂಬುದೂ ಕೂಡ ಶಿಷ್ಟಾಚಾರಕ್ಕೆ ವಿಷಯವಾಗಿರುವುದರಿಂದ ಸಮಾಪ್ತಿಗೋಸ್ಕರ ಮಂಗಲಾಚರಣೆ ಮಾಡಬೇಕೆಂಬ ಶ್ರುತಿಯೇ ಇದಕ್ಕೆ ಮೂಲವಾಗಿರುತ್ತದೆ.

* 'ಪಾಕ್ಷಿಕೋऽಪಿ ದೋಷಃ ಪರಿಹರ್ತವ್ಯಃ' ಎಂಬ ನ್ಯಾಯದಂತೆ ದೋಷ-ಸಂದೇಹವಿದ್ದರೂ ಕೂಡ ಅದನ್ನು ಪರಿಹಾರ ಮಾಡಿಕೊಳ್ಳಬೇಕು.

* 'ಮಂಗಲಂ ನಾನುಷ್ಠೇಯಂ ನಿರಧಿಕಾರಿಕತ್ವಾತ್' ಎಂಬುದು 'ಮಂಗಲಂ ಸಮಾಪ್ತಿ-ಫಲಕಂ ಶಿಷ್ಟಾಚಾರವಿಷಯತ್ವಾತ್' ಎಂಬ ಅನುಮಾನಕ್ಕೆ ಸತ್ಪ್ರತಿಪಕ್ಷವಾಗಿದೆ.

* ವಿಘ್ನಾಭಾವವಿಶಿಷ್ಟವಾದ ಸಮಾಪ್ತಿಯನ್ನು ಮಂಗಲದ ಪ್ರಯೋಜನವೆಂದು ಹೇಳಿ-ದರೆ ಗೌರವ ಬರುತ್ತದೆ. ವಿಘ್ನಧ್ವಂಸವನ್ನೇ ಫಲವೆಂದು ಹೇಳಿದರೆ ಲಾಘವವಿದೆ.

* ವ್ಯತಿರೇಕವ್ಯಭಿಚಾರವನ್ನು ಅನೇಕಕಾರಣಗಳಿವೆಯೆಂದು ಪರಿಹರಿಸಬಹುದು. ಅನ್ವಯವ್ಯಭಿಚಾರವನ್ನು ಪ್ರತಿಬಂಧಕವಿದೆಯೆಂದು ಪರಿಹರಿಸಬಹುದು.

* ಮಂಗಲಕ್ಕೂ ಸಮಾಪ್ತಿಗೂ ಸಾಧ್ಯಸಾಧನಭಾವವು ಶ್ರುತಿಸಿದ್ಧವಾಗಿರುವುದರಿಂದ ಲಾಘವ ಗೌರವಚಿಂತನೆಯನ್ನು ಅನ್ಯಥಾಸಿದ್ಧಿ ಆಶಂಕೆಯನ್ನು ಮಾಡಬಾರದು.

* ಸೂತ್ರಕಾರರಿಗೆ ಮಂಗಲದಿಂದ ಯಾವುದೇ ಪ್ರಯೋಜನವಿಲ್ಲದಿದ್ದರೂ ಶಿಷ್ಯರಿಗೆ ಮಂಗಲವಾಗಬೇಕೆಂಬ ಬಯಕೆಯಿಂದ ತಾವು ಮಾಡಿದ ಗ್ರಂಥದ ಅಧ್ಯಯನದಿಂದ ಶಿಷ್ಯರಿಗೆ ಆಯುಷ್ಯವು ಅಭಿವೃದ್ಧಿಯಾಗಬೇಕೆಂಬ ಉದ್ದೇಶದಿಂದ ಮಂಗಲಾಚರಣೆಯನ್ನು ಮಾಡಿದ್ದಾರೆ.

## ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮಂಗಲಾಚರಣೆ

**ಶ್ರೀಮನ್ನ್ಯಾಯಸುಧಾ – ಅತ್ರೋಚ್ಯತೇ । ಕರ್ತವ್ಯಮೇವ ಕಾರ್ಯಾರಂಭೇ ಮಂಗಲಾಚರಣಮ್ । ಕೃತಂ ಚ ಭಗವತಾ ಸೂತ್ರಕಾರೇಣ । ನಿವೇಶಿತಂ ಚ ಗ್ರಂಥಾದೌ । ಯದಯಮ್ ಓಂಕಾರಾಥಶಬ್ದೌ ಆದಿತಃ ಕೃತವಾನ್ । ತಯೋಃ ಮಾಂಗಲಿಕತ್ವಾತ್ । ಯಥೋಕ್ತಮ್ –**

**ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।**
**ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥ – ಇತಿ ।**

ಇಲ್ಲಿಯ ತನಕ ಮಾಡಿದ ಪೂರ್ವಪಕ್ಷಕ್ಕೆ ಉತ್ತರ ಹೀಗಿದೆ – ಯಾವುದೇ ಕಾರ್ಯದ ಪ್ರಾರಂಭದಲ್ಲಿ ಮಂಗಲವನ್ನು ಆಚರಣೆ ಮಾಡಲೇಬೇಕು. ಭಗವಾನ್ ಸೂತ್ರಕಾರರು ಕೂಡ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆಯನ್ನು ಮಾಡಿರುತ್ತಾರೆ. ಅಷ್ಟೇ ಅಲ್ಲದೇ ಅದರ ಉಲ್ಲೇಖವನ್ನೂ ಕೂಡ ಮಾಡಿರುತ್ತಾರೆ. ಬ್ರಹ್ಮಮೀಮಾಂಸಾ-ಶಾಸ್ತ್ರದ ಪ್ರಾರಂಭವು ಓಂಕಾರ ಮತ್ತು ಅಥಶಬ್ದಗಳಿಂದ ಪ್ರಾರಂಭವಾಗುತ್ತದೆ. ಈ ಎರಡೂ ಶಬ್ದಗಳು ಮಾಂಗಳಿಕವಾಗಿವೆ. ಇದನ್ನೇ ಹೀಗೆ ಹೇಳುತ್ತಾರೆ – 'ಓಂಕಾರ ಮತ್ತು ಅಥ-ಶಬ್ದಗಳೆರಡೂ ಬ್ರಹ್ಮದೇವರ ಕಂಠದಿಂದ ಮೊದಲು ಹೊರಹೊಮ್ಮಿದವು. ಮೊದಲು ಹೊರಬಂದಿದ್ದರಿಂದಲೇ ಇವೆರಡೂ ಮಂಗಲವಾಚಕಶಬ್ದಗಳಾಗಿವೆ'.

**ಪರಿಮಳ – ಮಾಂಗಲಿಕತ್ವಾತ್ = ಮಂಗಲಪ್ರಯೋಜನಕತ್ವಾತ್ । 'ತತ್ಪ್ರಯೋಜನೇ ಠಕ್' ಇತಿ ಠಕ್ ಪ್ರತ್ಯಯಃ ।**

ಮಂಗಲವೆಂಬ ಫಲವನ್ನು ಉಂಟುಮಾಡುವುದನ್ನು ಮಾಂಗಲಿಕ ಎನ್ನುತ್ತಾರೆ. 'ತತ್ಪ್ರ-ಯೋಜನೇ ಠಕ್' ಎಂಬ ಸೂತ್ರದ ಪ್ರಕಾರ ಅದರ ಪ್ರಯೋಜನ ಎಂಬರ್ಥದಲ್ಲಿ ಠಕ್-ಪ್ರತ್ಯಯವು ಬಂದಿರುತ್ತದೆ.

ವಿವರಣೆ – 'ಇಂದ್ರಮಹಃ ಯೋಜನಂ ಅಸ್ಯ ಐಂದ್ರಮಹಿಕಮ್' ಎಂಬಂತೆ ಓಂ ಮತ್ತು ಅಥ ಶಬ್ದಗಳ ಪ್ರಯೋಜನವು ಮಂಗಲವಾಗಿದೆ ಎಂಬರ್ಥದಲ್ಲಿ ಮಾಂಗಳಿಕಶಬ್ದವು ನಿಷ್ಪನ್ನವಾಗಿದೆ. ಮಂಗಲವೇ ಫಲವಾಗಿ ಉಳ್ಳದ್ದು ಎಂಬುದು ಇದರ ಅರ್ಥ. ಫಲ ಮತ್ತು ಕಾರಣಗಳಲ್ಲಿ ಪ್ರಯೋಜನ-ಶಬ್ದವನ್ನು ಪ್ರಯೋಗಿಸುತ್ತಾರೆ.

* * * * *

## ಹೇತುದ್ವಯಗಳಿಗೆ ಅಸಿದ್ಧಿದೋಷ

ವಾಕ್ಯಾರ್ಥಚಂದ್ರಿಕಾ– ಪೂರ್ವವಾದ್ಯುಕ್ತಂ ಮಂಗಲಾಚರಣತನ್ನಿವೇಶಯೋಃ ಕರ್ತವ್ಯ-ತೋಪಪಾದನಪ್ರಕಾರಂ ಸರ್ವಮಂಗೀಕೃತ್ಯ ಅಕೃತತ್ವಾನಿವೇಶಿತತ್ವರೂಪಪರಾಭಿಪ್ರೇತಹೇತೋ-ರಸಿದ್ಧಿಮಾಹ – ಕರ್ತವ್ಯಮೇವೇತ್ಯಾದಿನಾ ॥ ಮಾಂಗಲಿಕತ್ವಾದಿತಿ ॥ ಮಂಗಲಂ ಪ್ರಯೋಜನಮ್ ಅನಯೋರಿತಿ ಪ್ರಯೋಜನಮಿತಿ ಠಕ್ । (ಪ್ರಯೋಜನಮ್ । ತದಸ್ಯೇತ್ಯೇವ । ಇಂದ್ರಮಹಃ ಪ್ರಯೋಜನಮಸ್ಯ ಐಂದ್ರಮಹಿಕಮ್ । ಪ್ರಯೋಜನಂ ಫಲಂ ಕಾರಣಂ ಚ ।)

ಪೂರ್ವಪಕ್ಷಿ ಹೇಳಿದ ಮಂಗಲಾಚರಣೆ ಹಾಗೂ ಮಂಗಲಾಚರಣೆಯ ನಿವೇಶನವು ಗ್ರಂಥಾ-ರಂಭದಲ್ಲಿ ಕರ್ತವ್ಯವೇ ಆಗಿದೆ. ಈ ಎಲ್ಲಾ ಅಂಶಗಳನ್ನು ಅಂಗೀಕಾರ ಮಾಡಿ ಸೂತ್ರಕಾರರು ಮಂಗಲಾ-ಚರಣೆಯನ್ನು ಮಾಡಿರುವುದಿಲ್ಲ. ಹಾಗೂ ಗ್ರಂಥಾರಂಭದಲ್ಲಿ ಅದನ್ನು ಉಲ್ಲೇಖ ಮಾಡಿರುವುದಿಲ್ಲ ಎಂಬೆರಡು ಹೇತುಗಳಿಗೆ ಮಾತ್ರ ಅಸಿದ್ಧಿದೋಷವನ್ನು "ಕರ್ತವ್ಯಮೇವ" ಇತ್ಯಾದಿ ಗ್ರಂಥದಿಂದ ಹೇಳು-ತ್ತಿದ್ದಾರೆ. 'ಮಾಂಗಲಿಕತ್ವಾತ್' – ಮಂಗಲವೇ ಪ್ರಯೋಜನವಾಗಿ ಉಳ್ಳ ಓಂ ಮತ್ತು ಅಥಶಬ್ದಗಳೆರಡು ಎಂದರ್ಥ. ಈ ಅರ್ಥದಲ್ಲಿಯೇ ಠಕ್ ಪ್ರತ್ಯಯವು ಬಂದಿದೆ.

ಯಾದುಪತ್ಯ – ಮಾಂಗಲಿಕತ್ವಾದಿತಿ ॥ 'ಮಂಗಲಂ ಪ್ರಯೋಜನಯೋಃ' ಇತ್ಯರ್ಥೇ ಠಕ್ ಪ್ರತ್ಯಯಃ । ತಥಾ ಚ ಶ್ರುತ್ಯಾ ಮಂಗಲಪ್ರಯೋಜನಕತ್ವಾದಿತ್ಯರ್ಥಃ ।

'ಮಾಂಗಲಿಕತ್ವಾತ್' – ಮಂಗಲಂ ಪ್ರಯೋಜನಂ ಅನಯೋಃ - ಮಂಗಲವೇ ಪ್ರಯೋಜನ-ವಾಗಿ ಉಳ್ಳದ್ದು ಎಂಬರ್ಥದಲ್ಲಿ ಠಕ್‌ಪ್ರತ್ಯಯವು ಬಂದಿದೆ. ಆದ್ದರಿಂದ ಶ್ರುತಿಯಿಂದ ಮಂಗಲ-ಪ್ರಯೋಜನವುಳ್ಳದ್ದರಿಂದ ಎಂಬರ್ಥವು ತಿಳಿಯುತ್ತದೆ.

## ಸುಧಾಪರಿಮಳಸಾರ

ಎಲ್ಲಾ ಕಾರ್ಯದ ಆರಂಭದಲ್ಲಿ ಮಂಗಲ ಮಾಡಬೇಕೆಂದು ನಮ್ಮ ಅಭಿಪ್ರಾಯವೂ ಆಗಿದೆ. ಮಾಡಿದ ಮಂಗಲವನ್ನು ಗ್ರಂಥದ ಆದಿಯಲ್ಲಿ ನಿವೇಶನವನ್ನೂ ಮಾಡಬೇಕು. ಇದನ್ನೂ ಒಪ್ಪುತ್ತೇವೆ. ಇದಕ್ಕನುಗುಣವಾಗಿ ಸೂತ್ರಕಾರರು ಮಂಗಲವನ್ನು ಮಾಡಿದ್ದಾರೆ. ಗ್ರಂಥದಲ್ಲಿ ನಿವೇಶನವನ್ನೂ ಮಾಡಿದ್ದಾರೆ. ಸೂತ್ರದ ಆರಂಭದ ಎರಡು ಪದಗಳು 'ಓಂ' ಮತ್ತು 'ಅಥ'ಶಬ್ದಗಳು. ಈ ಎರಡು ಪದಗಳಿಗೆ ಮಂಗಲವೇ ಪ್ರಯೋಜನ. ಆದುದರಿಂದ ಮಾಂಗಲಿಕವಾದ ಈ ಎರಡು ಶಬ್ದಗಳನ್ನು ಸೂತ್ರದ ಆದಿಯಲ್ಲಿ ಪ್ರಯೋಗ ಮಾಡಿರುವುದರಿಂದ 'ಸೂತ್ರಕಾರರು

**ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।**
**ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥ – ಇತಿ ।**

ಇಲ್ಲಿಯ ತನಕ ಮಾಡಿದ ಪೂರ್ವಪಕ್ಷಕ್ಕೆ ಉತ್ತರ ಹೀಗಿದೆ – ಯಾವುದೇ ಕಾರ್ಯದ ಪ್ರಾರಂಭದಲ್ಲಿ ಮಂಗಲವನ್ನು ಆಚರಣೆ ಮಾಡಲೇಬೇಕು. ಭಗವಾನ್ ಸೂತ್ರಕಾರರು ಕೂಡ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಮಂಗಲಾಚರಣೆಯನ್ನು ಮಾಡಿರುತ್ತಾರೆ. ಅಷ್ಟೇ ಅಲ್ಲದೇ ಅದರ ಉಲ್ಲೇಖವನ್ನೂ ಕೂಡ ಮಾಡಿರುತ್ತಾರೆ. ಬ್ರಹ್ಮಮೀಮಾಂಸಾ-ಶಾಸ್ತ್ರದ ಪ್ರಾರಂಭವು ಓಂಕಾರ ಮತ್ತು ಅಥಶಬ್ದಗಳಿಂದ ಪ್ರಾರಂಭವಾಗುತ್ತದೆ. ಈ ಎರಡೂ ಶಬ್ದಗಳು ಮಾಂಗಳಿಕವಾಗಿವೆ. ಇದನ್ನೇ ಹೀಗೆ ಹೇಳುತ್ತಾರೆ – 'ಓಂಕಾರ ಮತ್ತು ಅಥ-ಶಬ್ದಗಳೆರಡೂ ಬ್ರಹ್ಮದೇವರ ಕಂಠದಿಂದ ಮೊದಲು ಹೊರಹೊಮ್ಮಿದವು. ಮೊದಲು ಹೊರಬಂದಿದ್ದರಿಂದಲೇ ಇವೆರಡೂ ಮಂಗಲವಾಚಕಶಬ್ದಗಳಾಗಿವೆ'.

ಪರಿಮಳ – ಮಾಂಗಲಿಕತ್ವಾತ್ = ಮಂಗಲಪ್ರಯೋಜನಕತ್ವಾತ್ । 'ತತ್ಪ್ರಯೋಜನೇ ಠಕ್' ಇತಿ ಠಕ್ ಪ್ರತ್ಯಯಃ ।

ಮಂಗಲವೆಂಬ ಫಲವನ್ನು ಉಂಟುಮಾಡುವುದನ್ನು ಮಾಂಗಲಿಕ ಎನ್ನುತ್ತಾರೆ. 'ತತ್ಪ್ರ-ಯೋಜನೇ ಠಕ್' ಎಂಬ ಸೂತ್ರದ ಪ್ರಕಾರ ಅದರ ಪ್ರಯೋಜನ ಎಂಬರ್ಥದಲ್ಲಿ ಠಕ್-ಪ್ರತ್ಯಯವು ಬಂದಿರುತ್ತದೆ.

ವಿವರಣೆ – 'ಇಂದ್ರಮಹಃ ಯೋಜನಂ ಅಸ್ಯ ಐಂದ್ರಮಹಿಕಮ್' ಎಂಬಂತೆ ಓಂ ಮತ್ತು ಅಥ ಶಬ್ದಗಳ ಪ್ರಯೋಜನವು ಮಂಗಲವಾಗಿದೆ ಎಂಬರ್ಥದಲ್ಲಿ ಮಾಂಗಳಿಕಶಬ್ದವು ನಿಷ್ಪನ್ನವಾಗಿದೆ. ಮಂಗಲವೇ ಫಲವಾಗಿ ಉಳ್ಳದ್ದು ಎಂಬುದು ಇದರ ಅರ್ಥ. ಫಲ ಮತ್ತು ಕಾರಣಗಳಲ್ಲಿ ಪ್ರಯೋಜನ-ಶಬ್ದವನ್ನು ಪ್ರಯೋಗಿಸುತ್ತಾರೆ.

* * * * *

## ಹೇತುದ್ವಯಗಳಿಗೆ ಅಸಿದ್ಧಿದೋಷ

ವಾಕ್ಯಾರ್ಥಚಂದ್ರಿಕಾ– ಪೂರ್ವವಾದ್ಯುಕ್ತಂ ಮಂಗಲಾಚರಣತನ್ನಿವೇಶಯೋಃ ಕರ್ತವ್ಯತೋಪಪಾದನಪ್ರಕಾರಂ ಸರ್ವಮಂಗೀಕೃತ್ಯ ಅಕೃತತ್ವಾನಿವೇಶಿತತ್ವರೂಪಪರಾಭಿಪ್ರೇತಹೇತೋರಸಿದ್ಧಿಮಾಹ – ಕರ್ತವ್ಯಮೇವೇತ್ಯಾದಿನಾ ॥ ಮಾಂಗಲಿಕತ್ವಾದಿತಿ ॥ ಮಂಗಲಂ ಪ್ರಯೋಜನಮ್ ಅನಯೋರಿತಿ ಪ್ರಯೋಜನಮಿತಿ ಠಕ್ । (ಪ್ರಯೋಜನಮ್ । ತದಸ್ಯೇತ್ಯೇವ । ಇಂದ್ರಮಹಃ ಪ್ರಯೋಜನಮಸ್ಯ ಐಂದ್ರಮಹಿಕಮ್ । ಪ್ರಯೋಜನಂ ಫಲಂ ಕಾರಣಂ ಚ ।)

ಪೂರ್ವಪಕ್ಷಿ ಹೇಳಿದ ಮಂಗಲಾಚರಣೆ ಹಾಗೂ ಮಂಗಲಾಚರಣೆಯ ನಿವೇಶನವು ಗ್ರಂಥಾರಂಭದಲ್ಲಿ ಕರ್ತವ್ಯವೇ ಆಗಿದೆ. ಈ ಎಲ್ಲಾ ಅಂಶಗಳನ್ನು ಅಂಗೀಕಾರ ಮಾಡಿ ಸೂತ್ರಕಾರರು ಮಂಗಲಾಚರಣೆಯನ್ನು ಮಾಡಿರುವುದಿಲ್ಲ. ಹಾಗೂ ಗ್ರಂಥಾರಂಭದಲ್ಲಿ ಅದನ್ನು ಉಲ್ಲೇಖ ಮಾಡಿರುವುದಿಲ್ಲ ಎಂಬೆರಡು ಹೇತುಗಳಿಗೆ ಮಾತ್ರ ಅಸಿದ್ಧಿದೋಷವನ್ನು "ಕರ್ತವ್ಯಮೇವ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ಮಾಂಗಲಿಕತ್ವಾತ್' – ಮಂಗಲವೇ ಪ್ರಯೋಜನವಾಗಿ ಉಳ್ಳ ಓಂ ಮತ್ತು ಅಥಶಬ್ದಗಳೆರಡು ಎಂದರ್ಥ. ಈ ಅರ್ಥದಲ್ಲಿಯೇ ಠಕ್ ಪ್ರತ್ಯಯವು ಬಂದಿದೆ.

ಯಾದುಪತ್ಯ – ಮಾಂಗಲಿಕತ್ವಾದಿತಿ ॥ 'ಮಂಗಲಂ ಪ್ರಯೋಜನಯೋಃ' ಇತ್ಯರ್ಥೇ ಠಕ್ ಪ್ರತ್ಯಯಃ । ತಥಾ ಚ ಶ್ರುತ್ಯಾ ಮಂಗಲಪ್ರಯೋಜನಕತ್ವಾದಿತ್ಯರ್ಥಃ ।

'ಮಾಂಗಲಿಕತ್ವಾತ್' – ಮಂಗಲಂ ಪ್ರಯೋಜನಂ ಅನಯೋಃ - ಮಂಗಲವೇ ಪ್ರಯೋಜನವಾಗಿ ಉಳ್ಳದ್ದು ಎಂಬರ್ಥದಲ್ಲಿ ಠಕ್‌ಪ್ರತ್ಯಯವು ಬಂದಿದೆ. ಆದ್ದರಿಂದ ಶ್ರುತಿಯಿಂದ ಮಂಗಲಪ್ರಯೋಜನವುಳ್ಳದ್ದರಿಂದ ಎಂಬರ್ಥವು ತಿಳಿಯುತ್ತದೆ.

## ಸುಧಾಪರಿಮಳಸಾರ

ಎಲ್ಲಾ ಕಾರ್ಯದ ಆರಂಭದಲ್ಲಿ ಮಂಗಲ ಮಾಡಬೇಕೆಂದು ನಮ್ಮ ಅಭಿಪ್ರಾಯವೂ ಆಗಿದೆ. ಮಾಡಿದ ಮಂಗಲವನ್ನು ಗ್ರಂಥದ ಆದಿಯಲ್ಲಿ ನಿವೇಶನವನ್ನೂ ಮಾಡಬೇಕು. ಇದನ್ನೂ ಒಪ್ಪುತ್ತೇವೆ. ಇದಕ್ಕನುಗುಣವಾಗಿ ಸೂತ್ರಕಾರರು ಮಂಗಲವನ್ನು ಮಾಡಿದ್ದಾರೆ. ಗ್ರಂಥದಲ್ಲಿ ನಿವೇಶನವನ್ನೂ ಮಾಡಿದ್ದಾರೆ. ಸೂತ್ರದ ಆರಂಭದ ಎರಡು ಪದಗಳು 'ಓಂ' ಮತ್ತು 'ಅಥ'ಶಬ್ದಗಳು. ಈ ಎರಡು ಪದಗಳಿಗೆ ಮಂಗಲವೇ ಪ್ರಯೋಜನ. ಆದುದರಿಂದ ಮಾಂಗಲಿಕವಾದ ಈ ಎರಡು ಶಬ್ದಗಳನ್ನು ಸೂತ್ರದ ಆದಿಯಲ್ಲಿ ಪ್ರಯೋಗ ಮಾಡಿರುವುದರಿಂದ 'ಸೂತ್ರಕಾರರು

ಮಂಗಲ ಮಾಡಿಲ್ಲ.ಆದುದರಿಂದ ಈ ಗ್ರಂಥವು ವ್ಯಾಖ್ಯೇಯವಲ್ಲ' ಎಂಬ ಆಕ್ಷೇಪ ಸರಿಯಲ್ಲ. ಈ ವಿಷಯವನ್ನು ಸ್ಮೃತಿಯೂ ಸ್ಪಷ್ಟಪಡಿಸುತ್ತಿದೆ. "ಓಂಕಾರ ಮತ್ತು ಅಥಶಬ್ದಗಳು ಸೃಷ್ಟಿಯ ಆದಿಯಲ್ಲಿ ಬ್ರಹ್ಮನ ಕಂಠದಿಂದ ಹೊರಹೊಮ್ಮಿವೆ. ಆದುದರಿಂದ ಈ ಶಬ್ದಗಳು ಮಾಂಗಲಿಕ ಎಂದು.

## ನೆನೆಪಿಡಿ

* ಓಂ ಮತ್ತು ಅಥಶಬ್ದಗಳೆರಡೂ ಮಂಗಲಪ್ರದವಾಗಿವೆ. ಈ ಶಬ್ದಗಳ ಪ್ರಯೋಗ-ದಿಂದಲೇ ಸೂತ್ರಕಾರರು ಮಂಗಲಾಚರಣೆಯನ್ನು ಮಾಡಿರುತ್ತಾರೆ.

* ಮಂಗಲವೇ ಪ್ರಯೋಜನವಾಗಿ ಉಳ್ಳದ್ದು ಎಂಬರ್ಥದಲ್ಲಿ ಠಕ್‌ಪ್ರತ್ಯಯವು ಬಂದು ಮಾಂಗಳಿಕ ಎಂಬ ಪದವು ನಿಷ್ಪನ್ನವಾಗಿದೆ.

## ಅನುವ್ಯಾಖ್ಯಾನ

**ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।**
**ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥**

ಓಂಕಾರ ಮತ್ತು ಅಥಶಬ್ದಗಳನ್ನು ಕ್ರಮವಾಗಿ ಸರ್ವಶಾಸ್ತ್ರಗಳ ಪ್ರಾರಂಭದಲ್ಲಿ ನಿಯಮೇನ ಪ್ರಯೋಗಿಸುತ್ತಾರೆ. ಮತ್ತು ಪ್ರತಿಯೊಂದು ಸೂತ್ರಗಳಲ್ಲಿ ಓಂ-ಕಾರವು ಅನುಗತವಾಗುವುದರಿಂದ ಪ್ರತ್ಯೇಕವಾಗಿ (ಸೂತ್ರದಲ್ಲಿ ಸೇರಿಸದೇ) ಓಂಕಾರವನ್ನು ಉಚ್ಚರಿಸುತ್ತಾರೆ.

## 'ಓಂ' ಮತ್ತು 'ಅಥ' ಶಬ್ದಗಳನ್ನೇ ಪ್ರಯೋಗಿಸಲು ಕಾರಣವೇನು? ಕ್ರಮವಾಗಿಯೇ ಉಚ್ಚರಿಸಲು ಕಾರಣವೇನು?

**ಶ್ರೀಮನ್ನ್ಯಾಯಸುಧಾ– ನನ್ವೇತದನುಪಪನ್ನಮ್ । ತಥಾ ಸತ್ಯೇತಯೋರ್ವಿಘ್ನ-ವಿಘಾತಾದಿಹೇತುತ್ವೇನ ಸಮಸ್ತಶಾಸ್ತ್ರಾಂಗತಯಾ ಪ್ರಥಮಸೂತ್ರಾವಯವತ್ವಾ-**

ಭಾವಪ್ರಸಂಗಾತ್ । ತಥಾತ್ವೇ ಚ ಪ್ರಥಮಸೂತ್ರಂ ನ್ಯೂನಮಾಪದ್ಯೇತ । ಅಧಿ-ಕಾರ್ಯಾದಿ ಪ್ರತಿಪಾದಕಸ್ಯ ಅನ್ಯಸ್ಯಾಭಾವಾತ್ । ತತ್ಪ್ರತಿಪಾದನಸ್ಯ ಚಾವಶ್ಯ-ಕತ್ವಾತ್ । ಅನ್ಯಥಾ ಅಧಿಕಾರಿವಿಷಯವೈಧುರ್ಯೇಣ ಶಾಸ್ತ್ರಸ್ಯ ಅನಾರಂಭ-ಣೀಯತ್ವಶಂಕಾ ನ ನಿರಾಕೃತಾ ಸ್ಯಾತ್ ಇತ್ಯನರ್ಥಕಂ ಸೂತ್ರಮಾಪದ್ಯೇತೇತ್ಯತ ಆಹ – ತತ್ರೇತಿ ॥

'ತರಂತಿ ಅನೇನ ಅನಿಷ್ಟನಿಚಯಮ್' ಇತ್ಯೋಂಕಾರಃ ತಾರಃ । ತಾರಶ್ಚಾಥಶ್ಚ ತಯೋಃ ಮೂಲತ್ವಂ ಕ್ರಮೇಣ ಆದಿತ್ವಮ್ । ಆದೌ ಪ್ರಯುಕ್ತೌ ಓಂಕಾರಾ-ಥಶಬ್ದಾವಿತಿ ಯಾವತ್ । ತತ್ರ ಪ್ರಥಮಸೂತ್ರೇ ಅವಯವತಯಾ, ಸರ್ವಶಾಸ್ತ್ರಸ್ಯ ಚಾಂಗತಯಾ ಚೇಷ್ಯತೇ ಅಂಗೀಕ್ರಿಯತೇ, 'ಸೂತ್ರಕೃತಾ' ಇತಿ ಶೇಷಃ ॥

ಏತದುಕ್ತಂ ಭವತಿ – ಪ್ರಥಮಸೂತ್ರೇ ಅಧಿಕಾರ್ಯಾದಿಪ್ರತಿಪಾದನಾಯ ಉಪಾತ್ತೌ ಓಂಕಾರಾಥಶಬ್ದೌ, ಶಂಖವೀಣಾವೇಣುಧ್ವನಿವತ್ ಶ್ರುತಿತೋ ಮಾಂಗಲಿಕತ್ವಾತ್ ಕೃತ್ಸ್ನಶಾಸ್ತ್ರಸ್ಯಾನಂತರಾಯಪರಿಸಮಾಪ್ತ್ಯಾದಿಕಂ ಕುರ್ವಾತೇ । ಅನ್ಯಾರ್ಥಾನೀಯಮಾನಪೂರ್ಣಕಲಶದರ್ಶನವದಿತಿ । 'ತಾರಾಥೌ' ಇತ್ಯೇವತಾ ಪೂರ್ಣೇ ಯನ್ಮೂಲತ್ವಮ್ ಇತ್ಯಾಹ ತತ್ ಸೂತ್ರಕಾರಾಂಗೀಕಾರಲಿಂಗ-ಸೂಚನಮ್ । ಯತ್ವರ್ಯಾಯಾಂತರಂ ವಿಹಾಯ, ಅನಯೋರೇವ ಕ್ರಮಾಂ-ತರಂ ವಿಹಾಯ, ಆದಾವೇವ ಉಪಾದಾನಂ, ತೇನ ಜಾನೀಮೋ, ಜ್ಞಾಪಕತಯಾ ಆದಿಸೂತ್ರಸ್ಯ, ಕಾರಕತಯಾ ಸಮಸ್ತಶಾಸ್ತ್ರಸ್ಯ ಚ, ಉಪಯೋಗಿತ್ವೇನ ಏತೌ ಸೂತ್ರಕೃತಾ ವಿವಕ್ಷಿತೌ ಇತಿ । ನ ಚೈತದ್ ಯಾದೃಚ್ಛಿಕಮ್ । ಸಕಲಸೂತ್ರಕಾರೈ-ರೇವಮೇವ ಪ್ರಯುಕ್ತತ್ವಾತ್ । ನ ಚಾನೇಕೇಷಾಂ ಪ್ರೇಕ್ಷಾವತಾಂ ಯದೃ-ಚ್ಛಯೈಕವಿಧಾ ಪ್ರವೃತ್ತಿರುಪಲಬ್ಧೇತಿ । ಅನೇನ 'ಅಥಶಬ್ದೋ ಮಂಗಲಾರ್ಥಃ'

**ಇತ್ಯಾದಿಭಾಷ್ಯಂ ವಿವೃತಂ ಭವತಿ ॥**

ಆಕ್ಷೇಪ – ಓಂಕಾರ ಮತ್ತು ಅಥಶಬ್ದಗಳು ಮಾಂಗಲಿಕವಾಗಿವೆ ಎಂದು ಹೇಳಿದ್ದು ಅಯುಕ್ತ. ಹಾಗಾದಲ್ಲಿ ಓಂಕಾರ ಮತ್ತು ಅಥಶಬ್ದಗಳು ವಿಘ್ನವನ್ನು ಪರಿಹಾರಮಾಡುವುದರಿಂದ ಸಮಸ್ತಶಾಸ್ತ್ರದ ಪರಿಸಮಾಪ್ತಿಗೆ ಕಾರಣವಾಗುತ್ತವೆ. ಆದ್ದರಿಂದ ಕೇವಲ ಪ್ರಥಮಸೂತ್ರದ ಅವಯವಗಳೆಂದು ಹೇಳಲಾಗುವುದಿಲ್ಲ. ಯಾವಾಗ ಈ ಎರಡು ಶಬ್ದಗಳು ಪ್ರಥಮಸೂತ್ರದ ಅವಯವಗಳಾಗುವುದಿಲ್ಲವೋ ಆಗ ಪ್ರಥಮಸೂತ್ರದಲ್ಲಿ ನ್ಯೂನತೆಯು ಉಂಟಾಗುತ್ತದೆ. ಏಕೆಂದರೆ, ಅಧಿಕಾರ್ಯಾದಿಗಳನ್ನು ಪ್ರತಿಪಾದನೆ ಮಾಡುವ ಬೇರೆ ಯಾವುದೇ ಪದಗಳು ಇರುವುದಿಲ್ಲ. ಅಧಿಕಾರ್ಯಾದಿಗಳ ಪ್ರತಿಪಾದನೆಯು ಅತ್ಯಾವಶ್ಯಕವೇ ಆಗಿದೆ. ಇಲ್ಲದಿದ್ದರೆ ಅಧಿಕಾರಿವಿಷಯಾದಿಗಳಿಲ್ಲದ ಕಾರಣ ಶಾಸ್ತ್ರವು ಅನಾರಂಭಣೀಯವಾಗಬೇಕಾಗುತ್ತದೆ. ಈ ಆಶಂಕೆಯು ನಿರಾಕೃತವಾಗದೇ ಉಳಿಯುವುದರಿಂದ ಸೂತ್ರವು ವ್ಯರ್ಥವಾಗಬೇಕಾಗುತ್ತದೆ?

ಸಮಾಧಾನ – ಮೇಲಿನ ಆಕ್ಷೇಪಕ್ಕೆ ಉತ್ತರವನ್ನು ಹೇಳುವುದಕ್ಕಾಗಿ ''ತತ್ರ ತಾರಾಥಮೂಲತ್ವಂ'' ಇತ್ಯಾದಿ ಅನುವ್ಯಾಖ್ಯಾನಶ್ಲೋಕವು ಹೊರಟಿದೆ.

ಯಾವುದರಿಂದ ಅನಿಷ್ಟವನ್ನು ದಾಟುತ್ತಾರೋ ಅದೇ ಓಂಕಾರವಾಗಿದೆ. ಅದನ್ನು 'ತರಂತಿ ಅನೇನ ಇತಿ' ಎಂಬ ನಿಷ್ಪತ್ತಿಯನ್ನು ಒಪ್ಪಿ, 'ತಾರ' ಎಂದು ಕರೆಯಲಾಗಿದೆ. ತಾರ ಮತ್ತು ಅಥಶಬ್ದಗಳೆರಡೂ ಸೂತ್ರದ ಮೂಲವಾಗಿವೆ. ಅರ್ಥಾತ್ ಕ್ರಮವಾಗಿ ಮೊದಲು ಉಲ್ಲೇಖಿಸಲ್ಪಟ್ಟಿವೆ ಎಂದರ್ಥ. ಸೂತ್ರದ ಪ್ರಾರಂಭದಲ್ಲಿ ಮೊದಲು ಓಂಕಾರವನ್ನು ಅನಂತರ ಅಥಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು. ತತ್ರ = ಪ್ರಥಮಸೂತ್ರದಲ್ಲಿ ಅವಯವತ್ವೇನ ಸರ್ವಶಾಸ್ತ್ರದ ಅಂಗತ್ವೇನ ಓಂಕಾರ ಮತ್ತು ಅಥಶಬ್ದಗಳನ್ನು ಪ್ರಯೋಗಿಸಬೇಕೆಂಬುದು, ಇಷ್ಯತೇ = ಅಂಗೀಕರಿಸಲ್ಪಡುತ್ತದೆ. 'ಸೂತ್ರಕಾರರಿಂದ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಒಟ್ಟು ಅಭಿಪ್ರಾಯ – ಪ್ರಥಮಸೂತ್ರದಲ್ಲಿ ಅಧಿಕಾರಿ ಮೊದಲಾದವುಗಳನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಓಂಕಾರ ಮತ್ತು ಅಥ ಶಬ್ದಗಳನ್ನು ಪ್ರಯೋಗಿಸಿದ್ದಾರೆ. ಈ ಎರಡು ಶಬ್ದಗಳು ಕೇಳುವುದರಿಂದಲೇ ಮಂಗಳವನ್ನುಂಟು ಮಾಡುತ್ತವೆ. ಯಾವರೀತಿಯಾಗಿ ಶಂಖ, ವೀಣೆ, ಮತ್ತು ಕೊಳಲುಗಳ ಧ್ವನಿಗಳು ಕೇಳುವುದರಿಂದಲೇ ಮಂಗಳವಾಗುತ್ತದೋ ಅದರಂತೆ ಈ ಎರಡು ಶಬ್ದಗಳೂ ಕೂಡ ಮಂಗಳಕರವಾಗಿವೆ. ಆದ್ದರಿಂದಲೇ ಸಮಸ್ತಶಾಸ್ತ್ರದ ನಿರ್ವಿಘ್ನಪರಿಸಮಾಪ್ತಿ ಮೊದಲಾದವುಗಳನ್ನು ಉಂಟು ಮಾಡುತ್ತವೆ. ಮತ್ತೊಬ್ಬರ ಪ್ರಯೋಜನಕ್ಕಾಗಿ ಪೂರ್ಣಕುಂಭವನ್ನು ತರಲ್ಪಡುವಾಗ ಅದನ್ನು ನೋಡುವವರಿಗೂ ಹೇಗೆ ಮಂಗಳವಾಗುತ್ತದೋ ಅದರಂತೆ ತಿಳಿಯಬೇಕು.

'ತಾರಾಥೌ' ಎಂದಷ್ಟೇ ಅನುವ್ಯಾಖ್ಯಾನದಲ್ಲಿ ಹೇಳಿದ್ದರೆ ಸಾಕಾಗುತ್ತಿತ್ತು. ಪ್ರಥಮಸೂತ್ರದಲ್ಲಿ ಓಂಕಾರ ಮತ್ತು ಅಥಶಬ್ದಗಳು ಘಟಕವಾಗಿವೆ ಎಂಬರ್ಥವು ತಿಳಿಯವುದರಿಂದ ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವಗಳಾಗಿವೆ. ಹಾಗೂ ಸರ್ವಶಾಸ್ತ್ರಗಳ ಅಂಗಗಳಾಗಿವೆ ಎಂಬಭಿಪ್ರಾಯವು 'ತಾರಾಥೌ' ಎಂದು ಹೇಳುವುದರಿಂದಲೂ ತಿಳಿಯುತ್ತದೆ. ಹಾಗಿದ್ದರೂ ''ತಾರಾಥಮೂಲತ್ವಮ್'' - 'ಓಂಕಾರ ಮತ್ತು ಅಥಶಬ್ದಗಳು ಆದಿಯಲ್ಲಿವೆ' ಎಂದೇಕೆ ಹೇಳಿದ್ದಾರೆ. ಎಂದರೆ 'ಸೂತ್ರಕಾರರು ಹಾಗೆ ಒಪ್ಪಿದ್ದಾರೆ' ಎಂಬ ಯುಕ್ತಿಯನ್ನು ತಿಳಿಸುವುದೇ ಇದರ ಪ್ರಯೋಜನವಾಗಿದೆ. 'ಓಂ' 'ಅಥ' ಈ ಎರಡು ಶಬ್ದಗಳ ಪರ್ಯಾಯಪದಗಳನ್ನು ಸೂತ್ರಕಾರರು ಪ್ರಯೋಗಿಸಿರುವುದಿಲ್ಲ. ಮತ್ತು ಇವೆರಡರ ಕ್ರಮದಲ್ಲಿಯೂ ಬದಲಾವಣೆಯನ್ನು ಮಾಡಿರುವುದಿಲ್ಲ. ಓಂಕಾರ ಮತ್ತು ಅಥಶಬ್ದವನ್ನೇ ಮೊದಲು ಪ್ರಯೋಗಿಸಿದ್ದಾರೆ. ಮತ್ತು ಕ್ರಮವಾಗಿಯೇ ಉಚ್ಚರಿಸಿದ್ದಾರೆ. ಇದರಿಂದ ಏನು ತಿಳಿಯುತ್ತದೆಂದರೆ ಪ್ರಥಮಸೂತ್ರದಲ್ಲಿ ಈ ಎರಡು ಶಬ್ದಗಳು ಅಧಿಕಾರ್ಯಾದಿಗಳನ್ನು ತಿಳಿಸುತ್ತವೆ ಜೊತೆಯಲ್ಲಿ ಪರಿಸಮಾಪ್ತಿಗೆ ಕಾರಣವಾಗಿ ಮಂಗಳಕಾರಕಗಳು ಕೂಡ ಆಗಿವೆ. ಈ ಅಭಿಪ್ರಾಯವನ್ನು ಸೂತ್ರಕಾರರ ಈ ಪದಪ್ರಯೋಗಗಳಿಂದ ತಿಳಿಯಬೇಕು. ಹೀಗೆ ಪ್ರಯೋಗಿಸಿರುವುದು ಆಕಸ್ಮಿಕವಲ್ಲ. ಏಕೆಂದರೆ ಪ್ರತಿಯೊಬ್ಬರೂ ಕೂಡ ಸೂತ್ರಗಳ ಪ್ರಾರಂಭದಲ್ಲಿ ಓಂ ಮತ್ತು ಅಥಶಬ್ದಗಳನ್ನು ಪ್ರಯೋಗಿಸಿಯೇ ಇದ್ದಾರೆ.

"ತತ್ರ ತಾರಾಥಮೂಲತ್ವಮ್" ಎಂಬ ಪೂರ್ವಾರ್ಧದಿಂದ 'ಅಥಶಬ್ದಃ ಮಂಗಲಾರ್ಥಃ' ಇತ್ಯಾದಿ ಭಾಷ್ಯವನ್ನು ವಿವರಿಸಿದ್ದಾರೆ. (ಅನುವ್ಯಾಖ್ಯಾನವು ಬ್ರಹ್ಮಸೂತ್ರಭಾಷ್ಯದ ವಿವರಣರೂಪವೆಂಬುದನ್ನು ದೃಷ್ಟಾಂತಪುರಸ್ಸರವಾಗಿ ಇಲ್ಲಿ ತೋರಿಸಿದ್ದಾರೆ).

## ಬ್ರಹ್ಮಶಬ್ದ ಹಾಗೂ ಓಂಕಾರಗಳೆರಡೂ ವಿಷಯಸಮರ್ಪಕಗಳು

ಪರಿಮಳ – ಅಧಿಕಾರ್ಯಾದಿಪ್ರತಿಪಾದಕಸ್ಯಾನ್ಯಸ್ಯ ಇತ್ಯತ್ರ ಆದಿಪದೇನ ವಿಚಾರಶಾಸ್ತ್ರಾನುಗ್ರಾಹ್ಯವಿಷಯಬೋಧಕವೇದರೂಪಪ್ರಮಾಣಪ್ರತಿಪಾದಕಸ್ಯ ಅನ್ಯಸ್ಯಾಭಾವಾದಿತಿ ಗ್ರಾಹ್ಯಮ್ । ಓಂಕಾರಸ್ಯ ತದರ್ಪಕತ್ವೇನಾಗ್ರೇ ವ್ಯಾಖ್ಯಾನಾತ್ ತಸ್ಯ ವಿಷಯಾರ್ಪಕಪದತ್ವೇಽಪಿ ಇಹ ನ ತದರ್ಥಗ್ರಹಣಮ್ । ತಥಾತ್ವೇ ಬ್ರಹ್ಮಪದಸ್ಯಾಪಿ ವಿಷಯಾರ್ಪಕಸ್ಯಾತ್ರ ಭಾವೇನಾನ್ಯಸ್ಯ ಅಭಾವಾದಿತ್ಯಯೋಗಾತ್ । 'ಅಧಿಕಾರಿವಿಷಯ' ಇತ್ಯುತ್ತರವಾಕ್ಯಸ್ಥವಿಷಯಪದೇನ ವಿಷಯಸಮರ್ಪಕವೇದರೂಪಪ್ರಮಾಣಂ ಗ್ರಾಹ್ಯಮ್ । ಓಂಕಾರಪ್ರಯೋಗಲಬ್ಧಸ್ಯ ವ್ಯಾಹೃತಿಗಾಯತ್ರೀಪುರುಷಸೂಕ್ತದ್ವಾರಾ ತದ್ವ್ಯಾಖ್ಯಾನಭೂತಸಕಲವೇದರೂಪಪ್ರಮಾಣಸ್ಯಾಭಾವೇ ಬ್ರಹ್ಮಪದಮಾತ್ರಸ್ಯ ಅವಿಚಾರ್ಯತ್ವೇನ ಅನುಗ್ರಾಹ್ಯಪ್ರಮಾಣಾಭಾವಾಭಿಪ್ರಾಯೇಣ 'ವಿಷಯವೈಧುರ್ಯೇಣ' ಇತ್ಯೇವೋಕ್ತಮ್ । ಬ್ರಹ್ಮಪದೇನ ವಿಷಯಲಾಭೇಽಪಿ ಉಪರ್ಯೋಂಕಾರಸ್ಯ ವಿಷಯಾರ್ಪಕತ್ವೇನಾಪಿ ವ್ಯಾಖ್ಯಾನಂ ತು ಚಂದ್ರಿಕೋಕ್ತದಿಶಾ ಅತ್ರಾಪಿ 'ನಾರಾಯಣಪದೋದಿತಃ' ಇತ್ಯತ್ರ ವಕ್ಷ್ಯಮಾಣದಿಶಾ ಚ ಯುಕ್ತ್ಯಂತರಸೂಚನಾಯ ಇತಿ ಧ್ಯೇಯಮ್ ।

'ಅಧಿಕಾರ್ಯಾದಿಪ್ರತಿಪಾದಕಸ್ಯ' – ಎಂಬಲ್ಲಿರುವ ಆದಿಪದದಿಂದ ಬ್ರಹ್ಮಮೀಮಾಂಸಾಶಾಸ್ತ್ರದ ಸಹಾಯವನ್ನು ಪಡೆಯುವ ವಿಷಯವನ್ನು ಪ್ರತಿಪಾದನೆ ಮಾಡುವ ವೇದ ಎಂಬ ಪ್ರಮಾಣವನ್ನು ವಿವಕ್ಷಿಸಿ ಅಂಥ ವೇದರೂಪಪ್ರಮಾಣಪ್ರತಿಪಾದಕವಾದ ಮತ್ತೊಂದು ಶಾಸ್ತ್ರವಿಲ್ಲ ಎಂಬರ್ಥವನ್ನು ತಿಳಿಯಬೇಕು. ಏಕೆಂದರೆ ಓಂಕಾರವು ಬ್ರಹ್ಮಮೀಮಾಂಸಾಶಾಸ್ತ್ರದಿಂದ ಅನುಗ್ರಾಹ್ಯವಾದ ಪ್ರಮಾಣವನ್ನು ಪ್ರತಿಪಾದಿಸುತ್ತದೆ ಎಂಬುದಾಗಿ ಮುಂದೆ ಓಂಕಾರಕ್ಕೆ ವ್ಯಾಖ್ಯಾನ-

ಮಾಡುವ ಸಂದರ್ಭದಲ್ಲಿ ಹೇಳುತ್ತಾರೆ. ಆದ್ದರಿಂದ ಓಂಕಾರವು ವಿಷಯಸಮರ್ಪಕವಾಗಿದ್ದರೂ ಕೂಡ ಪ್ರಕೃತ ಅದರ ಅರ್ಥವನ್ನು ಇಲ್ಲಿ ವಿವಕ್ಷಿಸಬಾರದು. ಹಾಗೇನಾದರೂ ವಿವಕ್ಷಿಸಿದರೆ ಬ್ರಹ್ಮಪದವೂ ಕೂಡ ವಿಷಯಸಮರ್ಪಕವಾಗಿರುವುದರಿಂದ ವಿಷಯಸಮರ್ಪಕವಾದ ಮತ್ತೊಂದು ಪದವಿಲ್ಲ' ಎಂಬ ವಚನವು ವಿರುದ್ಧವಾಗುತ್ತದೆ. ಏಕೆಂದರೆ ವಿಷಯಸಮರ್ಪಕ-ವಾದ ಬ್ರಹ್ಮಪದವು ಪ್ರಥಮಸೂತ್ರದಲ್ಲಿ ಇದ್ದೇ ಇರುತ್ತದೆ. ಇದೇ ರೀತಿಯಲ್ಲಿ 'ಅಧಿಕಾರಿ-ವಿಷಯವೈಧುರ್ಯೇಣ' ಎಂಬ ವಾಕ್ಯದಲ್ಲಿರುವ ವಿಷಯ ಎಂಬ ಪದಕ್ಕೆ ವಿಷಯವನ್ನು ಪ್ರತಿಪಾದನೆ ಮಾಡುವ ವೇದವೆಂಬ ಪ್ರಮಾಣ ಎಂಬರ್ಥವನ್ನು ಹೇಳಬೇಕು. ಓಂಕಾರದ ಪ್ರಯೋಗದಿಂದ ಇದನ್ನು ಸೂಚಿಸಿದಂತಾಗಿದೆ – ವ್ಯಾಹೃತಿ, ಗಾಯತ್ರೀ, ಪುರುಷಸೂಕ್ತದ ಮೂಲಕ ತನ್ನ ವ್ಯಾಖ್ಯಾನರೂಪವಾದ ಸಕಲವೇದವೆಂಬ ಮೀಮಾಂಸಾನುಗ್ರಾಹ್ಯ ಪ್ರಮಾಣ-ವನ್ನು ಸೂಚಿಸುತ್ತದೆ. ಕೇವಲ ಬ್ರಹ್ಮಪದದ ಬಗ್ಗೆ ವಿಚಾರ ಮಾಡುವುದು ಸಾಧ್ಯವಾಗುವುದಿಲ್ಲ. ವೇದಾರ್ಥವಿಚಾರವನ್ನೇ ಮಾಡಬೇಕು. ಒಂದು ವೇಳೆ ವೇದಸೂಚಕವಾದ ಓಂಕಾರವು ಇಲ್ಲದಿದ್ದರೆ ಅನುಗ್ರಾಹ್ಯಪ್ರಮಾಣವೇ ಇಲ್ಲದಂತಾಗುತ್ತದೆ. ಈ ಅಭಿಪ್ರಾಯದಿಂದ 'ವಿಷಯ-ವೈಧುರ್ಯೇಣ' ಎಂದಷ್ಟೇ ಹೇಳಿದ್ದಾರೆ. ಬ್ರಹ್ಮಪದದಿಂದ ವಿಷಯದ ಲಾಭವಾದರೂ ಕೂಡ 'ಮುಂದೆ ಓಂಕಾರವು ವಿಷಯಸಮರ್ಪಕವೂ ಆಗುತ್ತದೆ' ಎಂಬ ವ್ಯಾಖ್ಯಾನವನ್ನು ಚಂದ್ರಿಕೆಯಲ್ಲಿ ಹೇಳಿದಂತೆ ತಿಳಿಯಬೇಕು. ಮತ್ತು ಇಲ್ಲೂ ಸಹ 'ನಾರಾಯಣಪದೋದಿತಃ' ಎಂಬಲ್ಲಿ ಮುಂದೆ ಹೇಳುವಂತೆ ಮತ್ತೊಂದು ಯುಕ್ತಿಯ ಸೂಚನೆಗೋಸ್ಕರವೂ ಕೂಡ ಹೇಳಿದ್ದಾರೆಂದು ತಿಳಿಯ-ಬೇಕು.

ವಿವರಣೆ – "ಅಧಿಕಾರ್ಯಾದಿಪ್ರತಿಪಾದಕಸ್ಯ" ಎಂಬಲ್ಲಿ ಆದಿಪದದಿಂದ ವಿಷಯವನ್ನಷ್ಟೇ ವಿವಕ್ಷಿಸಬಾರದು. ಏಕೆಂದರೆ ವಿಷಯವನ್ನು ಪ್ರತಿಪಾದನೆ ಮಾಡುವ ಬ್ರಹ್ಮಪದವು ಇರುವುದರಿಂದ ಅನ್ಯಸ್ಯ ಅಭಾವಾತ್ ಎಂಬುದು ವ್ಯಾಹತವಾಗುತ್ತದೆ. ಆದ್ದರಿಂದ ವಿಚಾರಶಾಸ್ತ್ರಕ್ಕೆ ಅನುಗ್ರಾಹ್ಯವಾದ ಬ್ರಹ್ಮರೂಪವಿಷಯಕ್ಕೆ ಬೋಧಕವಾದ ವೇದರೂಪಪ್ರಮಾಣಪ್ರತಿಪಾದಕವಾದ ಮತ್ತೊಂದು ಪದವು ಇರುವುದಿಲ್ಲ ಎಂಬರ್ಥವನ್ನೇ ವಿವಕ್ಷಿಸಬೇಕು. ವಾಸ್ತವಿಕವಾಗಿ ಗುಣಪೂರ್ಣವಾಚಕವಾದ ಓಂಕಾರವು ವಿಷಯಸಮರ್ಪಕವಾಗಿದೆ ಎಂಬುದನ್ನು ನಾವು ಅಂಗೀಕರಿಸಿದ್ದೇವೆ. ಆದರೆ ಇಲ್ಲಿ ಅದನ್ನು ವಿವಕ್ಷಿಸ-ಬಾರದು. ಇದರಂತೆ 'ಅಧಿಕಾರಿವಿಷಯವೈಧುರ್ಯೇಣ' ಎಂಬ ಮುಂದಿನ ವಾಕ್ಯದಲ್ಲೂ ಕೂಡ ವಿಷಯಪದದಿಂದ ವಿಷಯಸಮರ್ಪಕವಾದ ವೇದರೂಪಪ್ರಮಾಣ ಎಂಬರ್ಥವನ್ನೇ ಹೇಳಬೇಕು.

"ತತ್ರ ತಾರಾಥಮೂಲತ್ವಮ್" ಎಂಬ ಪೂರ್ವಾರ್ಧದಿಂದ 'ಅಥಶಬ್ದಃ ಮಂಗಲಾರ್ಥಃ' ಇತ್ಯಾದಿ ಭಾಷ್ಯವನ್ನು ವಿವರಿಸಿದ್ದಾರೆ. (ಅನುವ್ಯಾಖ್ಯಾನವು ಬ್ರಹ್ಮಸೂತ್ರಭಾಷ್ಯದ ವಿವರಣರೂಪವೆಂಬುದನ್ನು ದೃಷ್ಟಾಂತಪುರಸ್ಸರವಾಗಿ ಇಲ್ಲಿ ತೋರಿಸಿದ್ದಾರೆ).

## ಬ್ರಹ್ಮಶಬ್ದ ಹಾಗೂ ಓಂಕಾರಗಳೆರಡೂ ವಿಷಯಸಮರ್ಪಕಗಳು

ಪರಿಮಳ – ಅಧಿಕಾರ್ಯಾದಿಪ್ರತಿಪಾದಕಸ್ಯಾನ್ಯಸ್ಯ ಇತ್ಯತ್ರ ಆದಿಪದೇನ ವಿಚಾರಶಾಸ್ತ್ರಾನುಗ್ರಾಹ್ಯವಿಷಯಬೋಧಕವೇದರೂಪಪ್ರಮಾಣಪ್ರತಿಪಾದಕಸ್ಯ ಅನ್ಯಸ್ಯಾಭಾವಾದಿತಿ ಗ್ರಾಹ್ಯಮ್ । ಓಂಕಾರಸ್ಯ ತದರ್ಪಕತ್ವೇನಾಗ್ರೇ ವ್ಯಾಖ್ಯಾನಾತ್ ತಸ್ಯ ವಿಷಯಾರ್ಪಕಪದತ್ವೇಽಪಿ ಇಹ ನ ತದರ್ಥಗ್ರಹಣಮ್ । ತಥಾತ್ವೇ ಬ್ರಹ್ಮಪದಸ್ಯಾಪಿ ವಿಷಯಾರ್ಪಕಸ್ಯಾತ್ರ ಭಾವೇನಾನ್ಯಸ್ಯ ಅಭಾವಾದಿತ್ಯಯೋಗಾತ್ । 'ಅಧಿಕಾರಿವಿಷಯ' ಇತ್ಯುತ್ತರವಾಕ್ಯಸ್ಥವಿಷಯಪದೇನ ವಿಷಯಸಮರ್ಪಕವೇದರೂಪಪ್ರಮಾಣಂ ಗ್ರಾಹ್ಯಮ್ । ಓಂಕಾರಪ್ರಯೋಗಲಬ್ಧಸ್ಯ ವ್ಯಾಹೃತಿಗಾಯತ್ರೀಪುರುಷಸೂಕ್ತದ್ವಾರಾ ತದ್ವ್ಯಾಖ್ಯಾನಭೂತಸಕಲವೇದರೂಪಪ್ರಮಾಣಸ್ಯಾಭಾವೇ ಬ್ರಹ್ಮಪದಮಾತ್ರಸ್ಯ ಅವಿಚಾರ್ಯತ್ವೇನ ಅನುಗ್ರಾಹ್ಯಪ್ರಮಾಣಾಭಾವಾಭಿಪ್ರಾಯೇಣ 'ವಿಷಯವೈಧುರ್ಯೇಣ' ಇತ್ಯೇವೋಕ್ತಮ್ । ಬ್ರಹ್ಮಪದೇನ ವಿಷಯಲಾಭೇಽಪಿ ಉಪಯೋರ್ಗಂಕಾರಸ್ಯ ವಿಷಯಾರ್ಪಕತ್ವೇನಾಪಿ ವ್ಯಾಖ್ಯಾನಂ ತು ಚಂದ್ರಿಕೋಕ್ತದಿಶಾ ಅತ್ರಾಪಿ 'ನಾರಾಯಣಪದೋದಿತಃ' ಇತ್ಯತ್ರ ವಕ್ಷ್ಯಮಾಣದಿಶಾ ಚ ಯುಕ್ತ್ಯಂತರಸೂಚನಾಯ ಇತಿ ಧ್ಯೇಯಮ್ ।

'ಅಧಿಕಾರ್ಯಾದಿಪ್ರತಿಪಾದಕಸ್ಯ' – ಎಂಬಲ್ಲಿರುವ ಆದಿಪದದಿಂದ ಬ್ರಹ್ಮಮೀಮಾಂಸಾಶಾಸ್ತ್ರದ ಸಹಾಯವನ್ನು ಪಡೆಯುವ ವಿಷಯವನ್ನು ಪ್ರತಿಪಾದನೆ ಮಾಡುವ ವೇದ ಎಂಬ ಪ್ರಮಾಣವನ್ನು ವಿವಕ್ಷಿಸಿ ಅಂಥ ವೇದರೂಪಪ್ರಮಾಣಪ್ರತಿಪಾದಕವಾದ ಮತ್ತೊಂದು ಶಾಸ್ತ್ರವಿಲ್ಲ ಎಂಬರ್ಥವನ್ನು ತಿಳಿಯಬೇಕು. ಏಕೆಂದರೆ ಓಂಕಾರವು ಬ್ರಹ್ಮಮೀಮಾಂಸಾಶಾಸ್ತ್ರದಿಂದ ಅನುಗ್ರಾಹ್ಯವಾದ ಪ್ರಮಾಣವನ್ನು ಪ್ರತಿಪಾದಿಸುತ್ತದೆ ಎಂಬುದಾಗಿ ಮುಂದೆ ಓಂಕಾರಕ್ಕೆ ವ್ಯಾಖ್ಯಾನ-

ಮಾಡುವ ಸಂದರ್ಭದಲ್ಲಿ ಹೇಳುತ್ತಾರೆ. ಆದ್ದರಿಂದ ಓಂಕಾರವು ವಿಷಯಸಮರ್ಪಕವಾಗಿದ್ದರೂ ಕೂಡ ಪ್ರಕೃತ ಅದರ ಅರ್ಥವನ್ನು ಇಲ್ಲಿ ವಿವಕ್ಷಿಸಬಾರದು. ಹಾಗೇನಾದರೂ ವಿವಕ್ಷಿಸಿದರೆ ಬ್ರಹ್ಮಪದವೂ ಕೂಡ ವಿಷಯಸಮರ್ಪಕವಾಗಿರುವುದರಿಂದ ವಿಷಯಸಮರ್ಪಕವಾದ ಮತ್ತೊಂದು ಪದವಿಲ್ಲ' ಎಂಬ ವಚನವು ವಿರುದ್ಧವಾಗುತ್ತದೆ. ಏಕೆಂದರೆ ವಿಷಯಸಮರ್ಪಕ-ವಾದ ಬ್ರಹ್ಮಪದವು ಪ್ರಥಮಸೂತ್ರದಲ್ಲಿ ಇದ್ದೇ ಇರುತ್ತದೆ. ಇದೇ ರೀತಿಯಲ್ಲಿ 'ಅಧಿಕಾರಿ-ವಿಷಯವೈಧುರ್ಯೇಣ' ಎಂಬ ವಾಕ್ಯದಲ್ಲಿರುವ ವಿಷಯ ಎಂಬ ಪದಕ್ಕೆ ವಿಷಯವನ್ನು ಪ್ರತಿಪಾದನೆ ಮಾಡುವ ವೇದವೆಂಬ ಪ್ರಮಾಣ ಎಂಬರ್ಥವನ್ನು ಹೇಳಬೇಕು. ಓಂಕಾರದ ಪ್ರಯೋಗದಿಂದ ಇದನ್ನು ಸೂಚಿಸಿದಂತಾಗಿದೆ – ವ್ಯಾಹೃತಿ, ಗಾಯತ್ರೀ, ಪುರುಷಸೂಕ್ತದ ಮೂಲಕ ತನ್ನ ವ್ಯಾಖ್ಯಾನರೂಪವಾದ ಸಕಲವೇದವೆಂಬ ಮೀಮಾಂಸಾನುಗ್ರಾಹ್ಯ ಪ್ರಮಾಣ-ವನ್ನು ಸೂಚಿಸುತ್ತದೆ. ಕೇವಲ ಬ್ರಹ್ಮಪದದ ಬಗ್ಗೆ ವಿಚಾರ ಮಾಡುವುದು ಸಾಧ್ಯವಾಗುವುದಿಲ್ಲ. ವೇದಾರ್ಥವಿಚಾರವನ್ನೇ ಮಾಡಬೇಕು. ಒಂದು ವೇಳೆ ವೇದಸೂಚಕವಾದ ಓಂಕಾರವು ಇಲ್ಲದಿದ್ದರೆ ಅನುಗ್ರಾಹ್ಯಪ್ರಮಾಣವೇ ಇಲ್ಲದಂತಾಗುತ್ತದೆ. ಈ ಅಭಿಪ್ರಾಯದಿಂದ 'ವಿಷಯ-ವೈಧುರ್ಯೇಣ' ಎಂದಷ್ಟೇ ಹೇಳಿದ್ದಾರೆ. ಬ್ರಹ್ಮಪದದಿಂದ ವಿಷಯದ ಲಾಭವಾದರೂ ಕೂಡ 'ಮುಂದೆ ಓಂಕಾರವು ವಿಷಯಸಮರ್ಪಕವೂ ಆಗುತ್ತದೆ' ಎಂಬ ವ್ಯಾಖ್ಯಾನವನ್ನು ಚಂದ್ರಿಕೆಯಲ್ಲಿ ಹೇಳಿದಂತೆ ತಿಳಿಯಬೇಕು. ಮತ್ತು ಇಲ್ಲೂ ಸಹ 'ನಾರಾಯಣಪದೋದಿತಃ' ಎಂಬಲ್ಲಿ ಮುಂದೆ ಹೇಳುವಂತೆ ಮತ್ತೊಂದು ಯುಕ್ತಿಯ ಸೂಚನೆಗೋಸ್ಕರವೂ ಕೂಡ ಹೇಳಿದ್ದಾರೆಂದು ತಿಳಿಯ-ಬೇಕು.

ವಿವರಣೆ – ''ಅಧಿಕಾರ್ಯಾದಿಪ್ರತಿಪಾದಕಸ್ಯ'' ಎಂಬಲ್ಲಿ ಆದಿಪದದಿಂದ ವಿಷಯವನ್ನಷ್ಟೇ ವಿವಕ್ಷಿಸಬಾರದು. ಏಕೆಂದರೆ ವಿಷಯವನ್ನು ಪ್ರತಿಪಾದನೆ ಮಾಡುವ ಬ್ರಹ್ಮಪದವು ಇರುವುದರಿಂದ ಅನ್ಯಸ್ಯ ಅಭಾವಾತ್ ಎಂಬುದು ವ್ಯಾಹತವಾಗುತ್ತದೆ. ಆದ್ದರಿಂದ ವಿಚಾರಶಾಸ್ತ್ರಕ್ಕೆ ಅನುಗ್ರಾಹ್ಯವಾದ ಬ್ರಹ್ಮರೂಪವಿಷಯಕ್ಕೆ ಬೋಧಕವಾದ ವೇದರೂಪಪ್ರಮಾಣಪ್ರತಿಪಾದಕವಾದ ಮತ್ತೊಂದು ಪದವು ಇರುವುದಿಲ್ಲ ಎಂಬರ್ಥವನ್ನೇ ವಿವಕ್ಷಿಸಬೇಕು. ವಾಸ್ತವಿಕವಾಗಿ ಗುಣಪೂರ್ಣವಾಚಕವಾದ ಓಂಕಾರವು ವಿಷಯಸಮರ್ಪಕವಾಗಿದೆ ಎಂಬುದನ್ನು ನಾವು ಅಂಗೀಕರಿಸಿದ್ದೇವೆ. ಆದರೆ ಇಲ್ಲಿ ಅದನ್ನು ವಿವಕ್ಷಿಸ-ಬಾರದು. ಇದರಂತೆ 'ಅಧಿಕಾರಿವಿಷಯವೈಧುರ್ಯೇಣ' ಎಂಬ ಮುಂದಿನ ವಾಕ್ಯದಲ್ಲೂ ಕೂಡ ವಿಷಯಪದದಿಂದ ವಿಷಯಸಮರ್ಪಕವಾದ ವೇದರೂಪಪ್ರಮಾಣ ಎಂಬರ್ಥವನ್ನೇ ಹೇಳಬೇಕು.

ಹಾಗಾದರೆ "ಅಧಿಕಾರಿವಿಷಯಬೋಧಕಪ್ರಮಾಣವೈಧುರ್ಯೇಣ" ಎಂಬುದಾಗಿಯೇ ಟೀಕೆಯಲ್ಲಿ ಹೇಳಬೇಕಿತ್ತು. ಕೇವಲ ವಿಷಯವೈಧುರ್ಯೇಣ ಎಂದೇಕೆ ಹೇಳಿದರು? ಎಂದರೆ ವಿಷಯಬೋಧಕವಾದ ವಿಚಾರಶಾಸ್ತ್ರಕ್ಕೆ ಅನುಗ್ರಾಹ್ಯಕವಾದ ಪ್ರಮಾಣವು ಇಲ್ಲದೇ ಇದ್ದರೆ ವಿಷಯವಿಲ್ಲ ಎನ್ನುವುದರಲ್ಲೇ ಪರ್ಯವಸಾನವಾಗುತ್ತದೆ. ಏಕೆಂದರೆ ಬ್ರಹ್ಮಪದದಿಂದ ವಿಷಯವನ್ನು ಹೇಳಿದರೂ ಕೂಡ ಅದನ್ನು ವೇದವು ಪ್ರತಿಪಾದನೆ ಮಾಡದೇ ಇದ್ದರೆ ವಿಷಯಸಿದ್ಧವಾಗಲಿಲ್ಲ ಎಂದೇ ಅರ್ಥ. ಅದಕ್ಕೋಸ್ಕರ ವಿಷಯಬೋಧಕಪ್ರಮಾಣವೈಧುರ್ಯವು ವಿಷಯವೈಧುರ್ಯದಲ್ಲೇ ಪರ್ಯವಸಾನವಾಗುತ್ತದೆ ಎಂಬ ದೃಷ್ಟಿಯಿಂದ ವಿಷಯವೈಧುರ್ಯೇಣ ಎಂದೇ ಹೇಳಿರುತ್ತಾರೆ. ಹಾಗಾದರೆ ಮುಂದಿನ ಓಂಕಾರವ್ಯಾಖ್ಯಾನವೇಕೆ? ಓಂಕಾರದ ಪ್ರಯೋಗದಿಂದ ವ್ಯಾಹೃತಿಗಾಯತ್ರೀಪುರುಷಸೂಕ್ತಗಳ ಮೂಲಕ ಸಕಲವೇದವೆಂಬ ಪ್ರಮಾಣವು ಬ್ರಹ್ಮನ ವಿಷಯದಲ್ಲಿ ಇರುತ್ತದೆಂದು ಹೇಳಿದರೆ ಸಾಕು. 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿಯಾಗಿ ಓಂಕಾರವು ಗುಣಪೂರ್ಣತ್ವವು ಹೇಳುತ್ತದೆ. ಆದ್ದರಿಂದ ಬ್ರಹ್ಮನು ಜೀವಭಿನ್ನನಾಗಿದ್ದಾನೆ ಇತ್ಯಾದಿಯಾಗಿ ಮುಂದೆ ವ್ಯಾಖ್ಯಾನ ಮಾಡುವುದು ಅನಾವಶ್ಯಕ. ಏಕೆಂದರೆ ಈ ವಿಷಯವು ಬ್ರಹ್ಮಪದದಿಂದಲೇ ತಿಳಿಯುತ್ತದೆ. ಬ್ರಹ್ಮಶಬ್ದದಿಂದ ತಿಳಿಯುವ ವಿಷಯವನ್ನು ಪುನಃ ಓಂಕಾರಾರ್ಥವಾಗಿ ಹೇಳುವ ಅನಿವಾರ್ಯತೆ ಏನು? ಎಂಬ ಪ್ರಶ್ನೆಗೆ ಉತ್ತರವನ್ನು ಚಂದ್ರಿಕಾದಲ್ಲಿ ಉತ್ತರಿಸಿದ್ದಾರೆ. ಮತ್ತು 'ನಾರಾಯಣಪದೋದಿತಃ' ಎಂಬ ಅನುವ್ಯಾಖ್ಯಾನದಲ್ಲೂ ಮುಂದೆ ಉತ್ತರಿಸಿದ್ದಾರೆ. 'ಜೀವಾತಿರಿಕ್ತನಾದ ಬ್ರಹ್ಮನು ಇರುವುದಿಲ್ಲ. ಜೀವನಾದರೂ ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಜಿಜ್ಞಾಸೆಗೆ ವಿಷಯವೇ ಇರುವುದಿಲ್ಲ. ಜಿಜ್ಞಾಸೆಯು ಕರ್ತವ್ಯವಲ್ಲ' ಎಂಬ ಪೂರ್ವಪಕ್ಷಕ್ಕೆ ಜಿಜ್ಞಾಸೆಗೆ ಬ್ರಹ್ಮನು ವಿಷಯನಾಗಿದ್ದಾನೆ. ಇವನು ಜೀವನಿಗಿಂತ ಭಿನ್ನನಾಗಿದ್ದಾನೆ. ಏಕೆಂದರೆ ಬ್ರಹ್ಮಪದವನ್ನು ಜಿಜ್ಞಾಸ್ಯನಲ್ಲೇ ಮಾಡಿದ್ದಾರೆ. ಇದರಿಂದ ಗುಣಪೂರ್ಣನಾಗಿದ್ದಾನೆಂಬ ಅರ್ಥವೂ ತಿಳಿಯುತ್ತದೆ. ಅಲ್ಪಗುಣವುಳ್ಳ ಜೀವನಿಗಿಂತ ಭಿನ್ನನಾದ ಕಾರಣ ಜಿಜ್ಞಾಸೆಗೆ ವಿಷಯನಾಗುತ್ತಾನೆ ಎಂಬುದಾಗಿ ವಿಷಯತ್ವಸಿದ್ಧವಾಗುತ್ತದೆಂದು ಮುಂದೆ ಹೇಳುತ್ತಾರೆ. ಓಂಕಾರಪ್ರಯೋಗವು ಇದೇ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಸೂಚಿಸುತ್ತದೆ. 'ಉದ್ಗೀಥಮುಪಾಸೀತ' ಇತ್ಯಾದಿಯಾಗಿ ಓಂಕಾರಪ್ರತಿಪಾದ್ಯನನ್ನು ಜಿಜ್ಞಾಸೆ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಈ ಓಂಕಾರವೂ ಕೂಡ ಗುಣಪೂರ್ಣನಾಗಿರುವವನನ್ನೇ ಹೇಳುತ್ತಿದೆ. ಆದ್ದರಿಂದ ಬ್ರಹ್ಮಪದದಂತೆ ಓಂಕಾರಪ್ರತಿಪಾದ್ಯತ್ವ, ನಾರಾಯಣಪದೋದಿತತ್ವ ಮೊದಲಾದವುಗಳೂ ಕೂಡ ಜಿಜ್ಞಾಸ್ಯತ್ವಕ್ಕೆ ಸಾಧಕವಾಗಲು ಬೇರೆ ಬೇರೆ ಯುಕ್ತಿಗಳಾಗಿವೆ. ಇದನ್ನು ತಿಳಿಸುವುದಕ್ಕಾಗಿ ಮುಂದೆ 'ಓತತ್ವವಾಚೀ' ಇತ್ಯಾದಿಯಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

## ಪ್ಲವನ ತರಣಾರ್ಥಗಳಲ್ಲಿರುವ ತೃಧಾತುವು ಎರಡು ಬಗೆಯಲ್ಲಿವೆ

ಪರಿಮಳ – ತರಂತ್ಯನೇನೇತಿ ॥ 'ತೄ ಪ್ಲವನತರಣಯೋಃ' ಇತಿ ಧಾತೋಃ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಇತಿ ಕರಣೇ ಘಞ್‌ಪ್ರತ್ಯಯೇ 'ಅಚೋ ಞ್ಣಿತಿ' ಇತಿ ವೃದ್ಧೌ ರೂಪಮ್ । ಯದ್ಯಪಿ ತೄ ಪ್ಲವನತರಣಯೋರಿತ್ಯಸ್ಯ ಧಾತೋರ್ದೀರ್ಘಋವರ್ಣಾಂತತ್ವೇನ 'ಋದೋರಪ್' ಇತಿ ಸೂತ್ರೇಣಾಪ್ಪ್ರತ್ಯಯೇ ತರ ಇತ್ಯೇವ ಭಾವ್ಯಮ್ । ಅಪ್ಪ್ರತ್ಯಯಸ್ಯ ಘಞಪವಾದತ್ವಾತ್ । ತಥಾಪಿ ತೃ ಪ್ಲವನತರಣಯೋರಿತಿ ಹ್ರಸ್ವಋವರ್ಣಾಂತಾದ್ ಧಾತ್ವಂತರಾದ್ ಘಞ್‌ಪ್ರತ್ಯಯೇ ತಾರ ಇತಿ ರೂಪಂ ಧ್ಯೇಯಮ್ । ಅನ್ಯಥಾ ಸಾಂಪರಾಯೇ ತರ್ತವ್ಯಾಭಾವಾದಿತಿ ಪ್ರಯೋಗೋಽಸಾಧುಃ ಸ್ಯಾದಿತಿ ಭಾವಃ।

'ತರಂತ್ಯನೇನ' – ತಾರಶಬ್ದದ ನಿರ್ವಚನವನ್ನು ಹೀಗೆ ತಿಳಿಯಬೇಕು. ತೄ ಧಾತುವಿಗೆ ಪ್ಲವನ ಮತ್ತು ತರಣ ಎಂಬೆರೆಡು ಅರ್ಥಗಳು ಇರುತ್ತವೆ. ತೃಧಾತುವಿನ ಮುಂದೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಿಂದ ಕರಣಾರ್ಥದಲ್ಲಿ ಘಞ್‌ಪ್ರತ್ಯಯವು ಬರುತ್ತದೆ. ಇಲ್ಲಿರುವ ಞಕಾರವು ಇತ್‌ಸಂಜ್ಞೆಯನ್ನು ಹೊಂದಿದೆ. ಆದ್ದರಿಂದ ಅಚೋ ಞ್ಣಿತಿ ಎಂಬ ಸೂತ್ರದಿಂದ ಞ್ ಮತ್ತು ಣ್ ಅಕ್ಷರಗಳು ಇತ್‌ಸಂಜ್ಞೆಯನ್ನು ಹೊಂದಿದ ಪ್ರತ್ಯಯಗಳಿದ್ದರೆ ಸ್ವರಾಂತವಾದ ಅಂಗಕ್ಕೆ ವೃದ್ಧಿಯು ಬರುತ್ತದೆ. ಆದಿ ವೃದ್ಧಿಯು ಬಂದರೆ ತಾರ ಎಂಬ ರೂಪವು ನಿಷ್ಪನ್ನವಾಗುತ್ತದೆ.

ವಾಸ್ತವಿಕವಾಗಿ 'ತೄ ಪ್ಲವನತರಣಯೋಃ' ಎಂಬ ದೀರ್ಘಾಂತವಾದ ಧಾತುವೂ ಇದೆ. ಈ ದೀರ್ಘ ಋವರ್ಣಾಂತವಾದ ಧಾತುವಿಗೆ ಕರ್ತೃಭಿನ್ನವಾದ ಕಾರಕಾರ್ಥಗಳಲ್ಲಿ 'ಋದೋ ರಪ್' ಎಂಬ ಸೂತ್ರದ ಪ್ರಕಾರ ಅಪ್ ಪ್ರತ್ಯಯವು ಬರುತ್ತದೆ. ಘಞ್ ಪ್ರತ್ಯಯವು ಬರುವುದಿಲ್ಲ. ಏಕೆಂದರೆ, ಘಞ್ ಪ್ರತ್ಯಯಕ್ಕೆ ಅಪವಾದವಾಗಿಯೇ ಅಪ್ ಪ್ರತ್ಯಯವು ಬಂದಿದೆ. ಮತ್ತು 'ಋದೋ ರಪ್' ಎಂಬ ಸೂತ್ರವು ದೀರ್ಘ ಋಕಾರಾಂತವಾದ ಧಾತುವಿಗೆ ಅಪ್ ಪ್ರತ್ಯಯವನ್ನು ಹೇಳುತ್ತಿದೆ. ಹಾಗಾಗಿ 'ಅಚೋ ಞ್ಣಿತಿ' ಎಂಬ ಸೂತ್ರಕ್ಕೆ ಇಲ್ಲಿ ಪ್ರಸಕ್ತಿಯೇ ಇಲ್ಲ. ತರ ಎಂದಷ್ಟೇ ರೂಪವಾಗುತ್ತದೆ.

ಆದರೂ ಕೂಡ ಇದೇ ಪ್ಲವನ ಮತ್ತು ತರಣಾರ್ಥಗಳಲ್ಲೇ ಹ್ರಸ್ವ ಋಕಾರಾಂತವಾದ ತೃಧಾತುವೂ ಇದೆ. ಇದರ ಮುಂದೆ ಘಞ್ ಪ್ರತ್ಯಯವೇ ಬರುತ್ತದೆ. 'ಋದೋ ರಪ್' ಎಂಬ ಸೂತ್ರದಿಂದ ಅಪ್ ಪ್ರತ್ಯಯವು ಬರುವುದಿಲ್ಲ. ಏಕೆಂದರೆ 'ಋದೋ ರಪ್' ಎಂಬ ಸೂತ್ರವು ದೀರ್ಘ ಋಕಾರಾಂತವಾದ ಧಾತುವಿಗೆ ಮಾತ್ರ ಅಪ್ ಪ್ರತ್ಯಯವನ್ನು ಹೇಳುತ್ತದೆ. ಹ್ರಸ್ವ ಋಕಾರಾಂತವಾದ ಧಾತುವಿಗೆ ಅಪ್‌ಪ್ರತ್ಯಯವನ್ನು ಹೇಳುವುದಿಲ್ಲ. ಆದ್ದರಿಂದ ತೃಧಾತುವಿನ ಮುಂದೆ ಕರಣಾರ್ಥದಲ್ಲಿ ಘಞ್ ಪ್ರತ್ಯಯವು ಬಂದು ಅಚೋ ಞ್ಣಿತಿ ಎಂಬ ಸೂತ್ರದ ಪ್ರಕಾರ ಆದಿವೃದ್ಧಿಯು ಪ್ರಾಪ್ತವಾಗಿ ''ತಾರ'' ಎಂಬ ರೂಪವು ನಿಷ್ಪನ್ನವಾಗುತ್ತದೆಂದು ತಿಳಿಯ-ಬೇಕು.

ಹ್ರಸ್ವ ಋಕಾರಾಂತವಾದ 'ತೃ' ಎಂಬ ಧಾತುವನ್ನು ಅಂಗೀಕಾರ ಮಾಡದೇ ಇದ್ದರೆ 'ಸಾಂಪರಾಯೇ ತರ್ತವ್ಯಾಭಾವಾತ್' ಎಂಬ ಪ್ರಯೋಗವು ಅಸಾಧುವಾಗಬೇಕಾದೀತು. ಏಕೆಂದರೆ ದೀರ್ಘ ಋಕಾರಾಂತವಾದ ತೄಧಾತುವಿನ ಮುಂದೆ ಅಪ್‌ಪ್ರತ್ಯಯವು ಬಾರದೇ ಆದಿವೃದ್ಧಿಯು ಪ್ರಾಪ್ತವಾಗುವುದಿಲ್ಲ. ಆಗ ತರ್ತ ಎಂಬ ರೂಪವು ನಿಷ್ಪನ್ನವಾಗದೇ 'ಋಹ-ಲೋರ್ಣ್ಯತ್' ಎಂಬ ಸೂತ್ರದಿಂದ ಣ್ಯತ್ ಪ್ರತ್ಯಯವು ಬಂದು ತಾರ್ಯ ಎಂದು ಆಗಬೇಕಾ-ದೀತು.

## ತಾರಶಬ್ದಕ್ಕೆ ಮೂರು ಬಗೆಯ ನಿರ್ವಚನಗಳು

ಪರಿಮಳ – ಯದ್ವಾ ತೄ ಪ್ಲವನತರಣಯೋರಿತ್ಯಸ್ಯೈವ 'ಋದೋರಬಿತಿ' ಅಪ್ಪ್ರತ್ಯಯೇ ತರ ಇತಿ ರೂಪಮ್ । ತಸ್ಯ 'ಪ್ರಜ್ಞಾದಿಭ್ಯಶ್ಚ' ಇತಿ ಸ್ವಾರ್ಥಿಕೇಽಣ್‌ಪ್ರತ್ಯಯೇ ತಾರ ಇತಿ ಸಿದ್ಧ್ಯತಿ । ಅಥವಾ ತೄ ಧಾತೋರ್ಣ್ಯಂತಸ್ಯ 'ಏರಚ್' ಇತಿ ಅಚ್‌ಪ್ರತ್ಯಯೇ ಸತಿ ತಾರ ಇತಿ ರೂಪಮ್ । ತಾರಯತಿ ಪುರುಷಾನ್ ಅನಿಷ್ಟನಿಚಯಮ್ ಇತಿ ವ್ಯುತ್ಪತ್ತಿದರ್ಶನೇ ಕಾರ್ಯೇ ಸ್ವಣ್ವಾರ್ಥತ್ವಾಯ ಕರಣತ್ವವ್ಯಕ್ತೀಕರಣೇನ ತರಂತ್ಯನೇನ ಇತ್ಯರ್ಥಕಥನಮಾತ್ರಮೇತದಿತಿ ಜ್ಞೇಯಮ್ । ಅತ ಏವ 'ಆಸಮಂತಾತ್ ಗಮಯತಿ ಧರ್ಮಾಧರ್ಮೌ ಪರಂ ಪದಮ್' ಇತ್ಯುಪಾಸನಾಪಾದೀಯಾನುವ್ಯಾಖ್ಯಾನಸುಧಾದೌ ಕರಣೇ ಕರ್ತೃತ್ವೋಪಚಾರೇಣ

'ಗಮಯತಿ' ಇತ್ಯುಕ್ತಿಃ । ಗಮೇಃ ಕರಣಾರ್ಥ ಏವ ಅಪ್‌ಪ್ರತ್ಯಯವಿಧಾನಾತ್ ಇತ್ಯಾದಿನಾ ತತ್ರ ತತ್ರ ವ್ಯುತ್ಪತ್ತಿಪ್ರಕಾರಾಪೇಕ್ಷಯಾ ಅನ್ಯಥಾಪ್ಯರ್ಥಕಥನಂ ದೃಶ್ಯತೇ । ತಥಾ ಚಾಥರ್ವ- ಶಿರಸಿ ಶ್ರುತಿಃ 'ಅಥ ಕಸ್ಮಾದುಚ್ಯತೇ ತಾರಂ ಯಸ್ಮಾದುಚ್ಚಾರ್ಯಮಾಣ ಏವ ಗರ್ಭಜನ್ಮ- ವ್ಯಾಧಿಜರಾಮರಣಸಂಸಾರಮಹಾಭಯಾತ್ ತಾರಯತಿ' ಇತ್ಯಾದಿ । 'ತತ್ರ' ಇತ್ಯನು- ವಾದಃ, 'ಪ್ರಥಮಸೂತ್ರೇ' ಇತಿ ವ್ಯಾಖ್ಯಾ ।

ಅಥವಾ ದೀರ್ಘ ಋಕಾರಾಂತವಾದ ತೄ ಧಾತುವಿನ ಮುಂದೆ 'ಋದೋೞ ರಪ್' ಎಂಬ ಸೂತ್ರದಿಂದ ಅಪ್ ಪ್ರತ್ಯಯವು ಬಂದು ತರ ಎಂಬ ರೂಪವೇ ನಿಷ್ಪನ್ನವಾಗಿದೆ. ಅನಂತರ 'ಪ್ರಜ್ಞಾದಿಭ್ಯಶ್ಚ' ಎಂಬ ಸೂತ್ರದ ಪ್ರಕಾರ ಸ್ವಾರ್ಥದಲ್ಲಿ ಅಣ್ ಪ್ರತ್ಯಯವು ಬಂದು ತಾರ ಎಂಬ ರೂಪವು ನಿಷ್ಪನ್ನವಾಗಿದೆ. (ಪ್ರಜ್ಞಃ ಏವಃ ಪ್ರಾಜ್ಞಃ ಎಂಬಂತೆ ತರಃ ಏವ ತಾರಃ ಎಂದು ತಿಳಿಯಬೇಕು).

ಅಥವಾ ದೀರ್ಘ ಋಕಾರಾಂತವಾದ ತೄಧಾತುವನ್ನು ವಿವಕ್ಷಿಸಿದಾಗ ಏರಚ್ ಎಂಬ ಸೂತ್ರದಿಂದ ಅಚ್ ಪ್ರತ್ಯಯವು ಬಂದು ತಾರಯತಿ ತಾರಃ ಎಂಬ ರೂಪವು ನಿಷ್ಪನ್ನವಾಗಿದೆ. ಪುರುಷರನ್ನು ಅನಿಷ್ಟಸಮೂಹದಿಂದ ದಾಟಿಸುವ ಕಾರಣ 'ತಾರ' ಎಂದು ಕರೆಸಿಕೊಳ್ಳುತ್ತದೆ. ಇಷ್ಟೇ ಹೇಳಿದ್ದರೂ ಕೂಡ ಸಾಕಾಗುತ್ತಿತ್ತು. ಆದರೂ ಕೂಡ ತಾರಶಬ್ದದ ಅರ್ಥವು ಸ್ಪಷ್ಟವಾಗಿ ತಿಳಿಯಬೇಕೆಂಬ ಉದ್ದೇಶದಿಂದ 'ತರಂತಿ ಅನೇನ ಇತಿ ತಾರಃ' ಎಂಬುದಾಗಿ ಕರಣಾರ್ಥದಲ್ಲಿ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ ಎಂದು ತಿಳಿಯಬೇಕು. ಆದ್ದರಿಂದಲೇ ಉಪಾಸನಾಪಾದದ ಅನುವ್ಯಾಖ್ಯಾನಸುಧೆಯಲ್ಲಿ ಹೀಗೆ ಹೇಳಿದ್ದಾರೆ. 'ಆ ಸಮಂತಾತ್ ಗಮಯತಿ ಧರ್ಮಾಧರ್ಮೌ ಪರಂ ಪದಮ್' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯ- ಸುಧೆಯಲ್ಲಿ ಕರಣದಲ್ಲಿ ಔಪಚಾರಿಕವಾದ ಕರ್ತೃತ್ವವನ್ನು ವಿವಕ್ಷಿಸಿ ಗಮಯತಿ ಎಂದು ಪ್ರಯೋ- ಗಿಸಿದ್ದಾರೆ. ಗಮ್ ಧಾತುವಿನ ಮುಂದೆ ಕರಣಾರ್ಥದಲ್ಲಿ ಅಚ್‌ಪ್ರತ್ಯಯವನ್ನು ವಿಧಿಸಲಾಗಿದೆ. ಹೀಗೆ ಅಲ್ಲಲ್ಲಿ ತೋರಿಸಿದ ವ್ಯುತ್ಪತ್ತಿಯ ಪ್ರಕಾರಗಳನ್ನು ಅನುಸರಿಸಿ ಬೇರೆ ರೀತಿಯಲ್ಲಿಯೂ ಕೂಡ ಅರ್ಥವನ್ನು ಹೇಳಿರುವುದು ಕಾಣಿಸುತ್ತಿದೆ. ಅದು ಹೀಗೆ – ಆಥರ್ವಣಶ್ರುತಿ ಹೀಗಿದೆ – 'ಅಥ ಕಸ್ಮಾದುಚ್ಯತೇ ತಾರಂ ಯಸ್ಮಾದುಚ್ಚಾರ್ಯಮಾಣ ಏವ ಗರ್ಭಜನ್ಮವ್ಯಾಧಿಜರಾಮರಣ-

ಸಂಸಾರಮಹಾಭಯಾತ್ ತಾರಯತಿ' ಈ ವಾಕ್ಯದಲ್ಲಿ 'ತಾರಯತೀತಿ ತಾರಂ' ಎಂಬ ವ್ಯುತ್ಪತ್ತಿ-ಯಿಂದ ಸಂಸಾರಮಹಾಭಯವನ್ನು ಪರಿಹರಿಸುವುದರಿಂದಲೇ ತಾರ ಎಂದು ಕರೆಸಿಕೊಳ್ಳುತ್ತ-ದೆಂದು ನಿಷ್ಪತ್ತಿಯನ್ನು ತೋರಿಸಲಾಗಿದೆ. ತತ್ರ ಎಂಬುದು ಅನುವಾದ; ಪ್ರಥಮಸೂತ್ರದಲ್ಲಿ ಎಂಬುದು ಅದರ ವ್ಯಾಖ್ಯಾನ.

ವಿವರಣೆ – ತಾರಶಬ್ದದ ನಿಷ್ಪತ್ತಿಯನ್ನು ಒಟ್ಟು ಮೂರು ಬಗೆಯಲ್ಲಿ ಸಮರ್ಥಿಸಿದ್ದಾರೆ. (೧) ಹ್ರಸ್ವಾಂತವಾದ ತೃಧಾತುವಿಗೆ ಕರಣಾರ್ಥದಲ್ಲಿ ಘಞ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಈ ಪಕ್ಷದಲ್ಲಿ ವ್ಯುತ್ಪತ್ತಿಹಾಗೂ ಅರ್ಥಕಥನಗಳು ಒಂದೇ ರೀತಿಯಲ್ಲಿರುತ್ತವೆ. (೨) ತೄ ಎಂಬ ದೀರ್ಘಾಂತವಾದ ಧಾತುವಿನಿಂದ ನಿಷ್ಪನ್ನವಾಗಿದೆ ಎಂಬ ಪಕ್ಷವನ್ನು ವಿವಕ್ಷಿಸಿದಾಗ ಅಚ್‌ಪ್ರತ್ಯಯವು ಪ್ರಾಪ್ತವಾಗಿ ಸ್ವಾರ್ಥೇ ಅಣ್ ಪ್ರತ್ಯಯವನ್ನು ವಿವಕ್ಷಿಸಿ ವ್ಯುತ್ಪತ್ತಿಯನ್ನು ಸಮರ್ಥಿಸಲಾಗಿದೆ. (೩) ಅಥವಾ ದೀರ್ಘಾಂತವಾದ ಧಾತುವಿಗೆ ಣಿಚ್ ಪ್ರತ್ಯಯವನ್ನು ವಿವಕ್ಷಿಸಿ ಅದರ ನಂತರ ಅಚ್ ಪ್ರತ್ಯಯವನ್ನು ಹೇಳಿ ನಿಷ್ಪತ್ತಿಯನ್ನು ಹೇಳಲಾಗಿದೆ. ಈ ಮೂರನೆಯ ಪಕ್ಷದಲ್ಲಿ ಕರ್ತ್ರ್ಯವ್ಯುತ್ಪತ್ತಿಯನ್ನು ತೋರಿಸಬೇಕಿತ್ತು . ಕರಣವ್ಯುತ್ಪತ್ತಿಯನ್ನು ಏಕೆ ತೋರಿಸಿದರು? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಕೇವಲ ಅರ್ಥಕಥನ ಎಂದು ಉತ್ತರಿಸಲಾಗಿದೆ. ವ್ಯುತ್ಪತ್ತಿಯು ಒಂದು ಬಗೆಯಲ್ಲಿದ್ದು ಬೇರೆ ಅರ್ಥವನ್ನು ಹೇಳುವುದಕ್ಕೆ ಪ್ರಮಾಣವನ್ನು ಆಥರ್ವಶ್ರುತಿ-ಯಿಂದ ಉಲ್ಲೇಖಿಸಿದ್ದಾರೆ.

## ಓಂಕಾರಕ್ಕೆ ಶಾಸ್ತ್ರಾಂಗತ್ವಸಮರ್ಥನೆ

ಪರಿಮಳ – ಅವಯವತಯಾ ಇತಿ ॥ 'ಅನ್ವಯಪ್ರತಿಯೋಗಿಸಮರ್ಪಕತಯಾ' ಇತ್ಯರ್ಥಃ। ಬ್ರಹ್ಮಪದಾರ್ಥಸ್ಯ ವಿಶೇಷಣೀಭೂತಂ ಯದ್ಗುಣಪೂರ್ಣತ್ವರೂಪಮ್ ಓತತ್ವಂ ತದರ್ಥಕತ್ವಾತ್ ತಸ್ಯ ಇತಿ ಭಾವಃ। ಯದ್ವಾ ಜಿಜ್ಞಾಸಾಯಾಂ ಕರ್ಮಕಾರಕಾರ್ಪಕತಯೇತಿ ಭಾವಃ। ಅಂಗತಯೇತಿ ॥ 'ಅವಿಘ್ನಪರಿಸಮಾಪ್ತಿಪ್ರಚಯಕಾರಕತ್ವೇನ' ಇತ್ಯರ್ಥಃ। ತಾವತಾ ನನ್ವೇತದನುಪಪನ್ನಮಿತಿ ಕೃತಚೋದ್ಯಸ್ಯ ಕಿಮುತ್ತರಮ್? ಇತ್ಯತ ಆಹ – ಏತದುಕ್ತಮಿತಿ ॥ ಜ್ಞಾಪಕತಯೇತಿ ॥ ಅಧಿಕಾರ್ಯಾದಿಬೋಧಕತಯಾ ಆದ್ಯಸೂತ್ರಸ್ಯ ಉಪಯೋಗಿತ್ವೇನ ನಿರಂತರಾಯಪರಿಸಮಾಪ್ತ್ಯಾದಿಜನಕತಯಾ ಶಾಸ್ತ್ರಸ್ಯೋಪಯೋಗಿತ್ವೇನ ಇತ್ಯರ್ಥಃ।

"ಅವಯವತಯಾ"– ಅನ್ವಯವನ್ನು ಹೊಂದಬೇಕಾದ ಪ್ರತಿಯೋಗಿಭೂತವಾದ ಅರ್ಥವನ್ನು ಹೇಳುವ ಮೂಲಕ ಎಂದರ್ಥ. ಬ್ರಹ್ಮಪದಕ್ಕೆ ಗುಣಪೂರ್ಣನೆಂದರ್ಥ. ಇದರಲ್ಲಿ ಸೇರಿರುವ ಗುಣಪೂರ್ಣತ್ವವು ವಿಶೇಷಣವಾಗಿದೆ. ಈ ಅರ್ಥವನ್ನು ಓಂಕಾರವು ಹೇಳುತ್ತದೆಂದು ಅಭಿಪ್ರಾಯ.

ಅಥವಾ ಓಂಕಾರವು ಜಿಜ್ಞಾಸೆಗೆ ಯಾವುದು ಕರ್ಮವೋ ಅಂಥ ಬ್ರಹ್ಮನೆಂಬ ವಿಷಯವನ್ನೇ ತಿಳಿಸುತ್ತದೆ. ಆದ್ದರಿಂದ ಸೂತ್ರದ ಅವಯವವಾಗಿದೆ ಎಂದಭಿಪ್ರಾಯ.

"ಅಂಗತಯಾ" – ನಿರ್ವಿಘ್ನಪರಿಸಮಾಪ್ತಿ ಹಾಗೂ ಪ್ರಚಯಗಳನ್ನು ಉಂಟುಮಾಡು-ವುದರಿಂದ ಅಂಗವಾಗಿದೆ. ಇಷ್ಟು ಹೇಳಿದ ಮಾತ್ರಕ್ಕೆ 'ನನ್ವೇತದನುಪಪನ್ನಮ್' ಇತ್ಯಾದಿಯಾಗಿ ಮಾಡಿದ ಆಕ್ಷೇಪಕ್ಕೆ ಏನು ಉತ್ತರವನ್ನು ನೀಡಿದಂತಾಯಿತು? ಎಂಬ ಪ್ರಶ್ನೆಗೆ "ಏತದುಕ್ತಂ ಭವತಿ" ಇತ್ಯಾದಿಗ್ರಂಥದಿಂದ ಉತ್ತರಿಸಿದ್ದಾರೆ.

"ಜ್ಞಾಪಕತಯಾ" – 'ಅಧಿಕಾರಿ ಮೊದಲಾದ ವಿಷಯಗಳನ್ನು ತಿಳಿಸುವುದರಿಂದ ಮೊದ-ಲನೆಯ ಸೂತ್ರಕ್ಕೆ ಉಪಯೋಗಿಯಾಗಿದೆ ಆದ್ದರಿಂದ' ಎಂದರ್ಥ. "ಕಾರಕತಯಾ" ಎಂದರೆ ನಿರ್ವಿಘ್ನಪರಿಸಮಾಪ್ತಿ ಮೊದಲಾದವುಗಳನ್ನು ಉಂಟುಮಾಡುವುದರಿಂದ ಶಾಸ್ತ್ರಕ್ಕೆ ಉಪ-ಯೋಗಿಯಾಗಿರುವುದರಿಂದ ಎಂದರ್ಥ.

ವಿವರಣೆ – ಬ್ರಹ್ಮಶಬ್ದವು ವಿಷಯಸಮರ್ಪಕವಾದಾಗ ಅದಕ್ಕೆ ವಿಶೇಷಣಭೂತವಾದ ಗುಣ-ಪೂರ್ಣತ್ವವನ್ನು ಓಂಕಾರವು ತಿಳಿಸುತ್ತದೆ. ಅಥವಾ ಓಂಕಾರವು ಬ್ರಹ್ಮನೆಂಬ ವಿಷಯವನ್ನು ಹೇಳು-ತ್ತದೆಂದು ವಿವಕ್ಷಿಸಿದಾಗ ಬ್ರಹ್ಮಶಬ್ದವು ತದ್‌ವಿಶೇಷಣಭೂತವಾದ ಗುಣಪೂರ್ಣತ್ವವನ್ನು ಹೇಳುತ್ತದೆ. ಆದ್ದರಿಂದ ಓಂಕಾರವು ಸೂತ್ರದ ಅವಯವವಾಗಿದೆ ಎಂದು ತಿಳಿಯಬೇಕು.

'ಸರ್ವಶಾಸ್ತ್ರಸ್ಯ ಅಂಗತಯಾ' ಎಂಬುದಕ್ಕೆ ಸರ್ವಂ ಚ ತತ್ ಶಾಸ್ತ್ರಂ ಚ ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿ ಸಮಸ್ತಶಾಸ್ತ್ರದ ನಿರ್ವಿಘ್ನಪರಿಸಮಾಪ್ತಿಗೆ ಕಾರಣವಾಗಿರುವುದರಿಂದ ಶಾಸ್ತ್ರಾಂಗವಾಗಿದೆ ಎಂದು ತಿಳಿಸಿದ್ದಾರೆ.

## ಸರ್ವಶಾಸ್ತ್ರಗಳ ಪ್ರಾರಂಭದಲ್ಲಿ ಓಂಕಾರವು ವಿಹಿತ

ಪರಿಮಳ – ಅನ್ಯಥಾಸಿದ್ಧಿಂ ನಿರಾಹ – ನ ಚೈತದಿತಿ ॥ ತಾರಾಥಮೂಲತ್ವಮ್ ಇತ್ಯರ್ಥಃ। ಸಕಲೇತಿ ॥ 'ಅಥಾತೋ ಧರ್ಮಜಿಜ್ಞಾಸಾ' 'ಅಥಾತೋ ದೈವೀಮೀಮಾಂಸಾ' 'ಅಥಾತೋ ದರ್ಶಪೂರ್ಣಮಾಸೌ ವ್ಯಾಖ್ಯಾಸ್ಯಾಮಃ' ಇತ್ಯಾದಿ ಕರ್ಮತಂತ್ರದೇವತಂತ್ರ-ಕಲ್ಪಸೂತ್ರಕಾರಾದಿಭಿರಿತ್ಯರ್ಥಃ। ನ ಚ ತತ್ರ ಓಂಕಾರೋ ನ ಶ್ರೂಯತೇ ಇತಿ ವಾಚ್ಯಮ್। 'ಪ್ರವತ್ಯನೋಂಕೃತಂ ಬ್ರಹ್ಮ' ಇತಿ ವಕ್ಷ್ಯಮಾಣದಿಶಾ ತತ್ರಾಪಿ ತಸ್ಯಾವರ್ಜನೀಯತಯಾ ಪ್ರಾಪ್ತತ್ವಾತ್। ತದ್ಭಾಷ್ಯಕಾರಾದಿಭಿಃ ತಸ್ಯಾವ್ಯಾಖ್ಯಾನಂ ತ್ವನುಪಯೋಗಾದಜ್ಞಾನಾದ್ವಾ। ಅಥ ಶಬ್ದಮೂಲತ್ವಸ್ಯ ಸರ್ವತ್ರ ಪ್ರತ್ಯಕ್ಷತ್ವೇನ ತದಭಿಪ್ರಾಯಾದ್ ವಾ "ಸಕಲ" ಇತ್ಯುಕ್ತಿಃ। ಏತೇನ 'ಸರ್ವಶಾಸ್ತ್ರಸ್ಯ' ಇತ್ಯೇತತ್ 'ಸರ್ವೇಷಾಂ ಶಾಸ್ತ್ರಂ ಸರ್ವಶಾಸ್ತ್ರಂ ತಸ್ಯ' ಇತಿ ಪ್ರಕಾರಾಂತರೇಣ ವ್ಯಾಖ್ಯಾನಂ ಧ್ಯೇಯಮ್। ಅನೇನೇತಿ ॥ ತತ್ರ ತಾರೇತ್ಯರ್ಥೇನ ಇತ್ಯರ್ಥಃ।

ಹೇತುವು ಅನ್ಯಥಾಸಿದ್ಧವಾಗಿದೆ ಎಂಬ ಆಶಂಕೆಯನ್ನು "ನ ಚೈತತ್" ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಎಲ್ಲಾ ಸೂತ್ರಗ್ರಂಥಗಳ ಪ್ರಾರಂಭದಲ್ಲಿ ಓಂಕಾರ ಮತ್ತು ಅಥಶಬ್ದಗಳ ಪ್ರಯೋಗವು ಆಕಸ್ಮಿಕವಲ್ಲದ್ದರಿಂದ ಅನ್ಯಥಾಸಿದ್ಧಿಯನ್ನು ಹೇಳಬಾರದು ಎಂದಭಿಪ್ರಾಯ.

"ಸಕಲಸೂತ್ರಕಾರೈಃ" – ಅಥಾತೋ ಧರ್ಮಜಿಜ್ಞಾಸಾ' 'ಅಥಾತೋ ದೈವೀಮೀಮಾಂಸಾ' 'ಅಥಾತೋ ದರ್ಶಪೂರ್ಣಮಾಸೌ ವ್ಯಾಖ್ಯಾಸ್ಯಾಮಃ' ಇತ್ಯಾದಿಯಾಗಿ ಕರ್ಮಮೀಮಾಂಸಾ, ದೈವೀಮೀಮಾಂಸಾ, ಕಲ್ಪಸೂತ್ರಗಳನ್ನು ರಚಿಸಿದ ಸೂತ್ರಕಾರರುಗಳಿಂದ ಪ್ರಾರಂಭದಲ್ಲಿ ಓಂಕಾರ ಮತ್ತು ಅಥಶಬ್ದಗಳನ್ನು ನಿಯಮೇನ ಪ್ರಯೋಗಿಸಿದ್ದಾರೆ ಎಂದರ್ಥ.

ಇತರ ಸೂತ್ರಗ್ರಂಥಗಳ ಪ್ರಾರಂಭದಲ್ಲಿ ಓಂಕಾರವು ಕಾಣಿಸುತ್ತಿಲ್ಲವೆಂದು ಪ್ರಶ್ನಿಸಬಾರದು. 'ಪ್ರವತ್ಯನೋಂಕೃತಂ ಬ್ರಹ್ಮ' ಇತ್ಯಾದಿಯಾಗಿ ಮುಂದೆ ಹೇಳುವ ಪ್ರಮಾಣದ ಪ್ರಕಾರ ಆ ಗ್ರಂಥಗಳ ಪ್ರಾರಂಭದಲ್ಲೂ ಕೂಡ ನಿಯಮೇನ ಓಂಕಾರವು ಇದ್ದೇ ಇರುತ್ತದೆ. ಆದರೆ ಆಯಾ

ಸೂತ್ರಗ್ರಂಥಗಳಿಗೆ ವ್ಯಾಖ್ಯಾನ ಮಾಡಿರುವವರು ಅದನ್ನು ಬಿಟ್ಟಿದ್ದಾರೆ. ಆ ಓಂಕಾರವನ್ನು ವ್ಯಾಖ್ಯಾನ ಮಾಡುವುದರಿಂದ ಪ್ರಯೋಜನವಿಲ್ಲವೆಂದು ಅವರಿಗೆ ಅನಿಸಿರಬಹುದು. ಅಥವಾ ಅವರಿಗೆ ಓಂಕಾರದ ಬಗ್ಗೆ ಜ್ಞಾನವೇ ಇಲ್ಲದಿರಬಹುದು. ಆದ್ದರಿಂದ ವ್ಯಾಖ್ಯಾನಕಾರರು ಓಂಕಾರವನ್ನು ವ್ಯಾಖ್ಯಾನವನ್ನು ಮಾಡಿರುವುದಿಲ್ಲ ಎಂಬ ಕಾರಣದಿಂದ ಆಯಾ ಸೂತ್ರಗ್ರಂಥಗಳ ಪ್ರಾರಂಭದಲ್ಲಿ ಓಂಕಾರವೇ ಇರುವುದಿಲ್ಲವೆಂದು ಸರ್ವಥಾ ತಿಳಿಯಬಾರದು.

''ಅಥ'' – ಈ ಶಬ್ದವು ಸೂತ್ರದ ಪ್ರಾರಂಭದಲ್ಲಿದೆ ಎಂಬುದು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಅಥಶಬ್ದದ ದೃಷ್ಟಿಯಿಂದ ''ಸಕಲಸೂತ್ರಕಾರೈಃ'' ಎಂಬುದಾಗಿ ಸಕಲಪದವನ್ನು ಪ್ರಯೋಗಿಸಿದ್ದಾರೆಂದೂ ಕೂಡ ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ಸರ್ವಶಾಸ್ತ್ರಸ್ಯ' ಎಂಬ ಪದಕ್ಕೆ 'ಸರ್ವೇಷಾಂ ಶಾಸ್ತ್ರಂ ಸರ್ವಶಾಸ್ತ್ರಂ, ತಸ್ಯ ಸರ್ವಶಾಸ್ತ್ರಸ್ಯ' ಸಕಲಶಾಸ್ತ್ರಕ್ಕೆ ಎಂಬುದಾಗಿ ಮತ್ತೊಂದು ಪ್ರಕಾರದಿಂದ ವ್ಯಾಖ್ಯಾನಮಾಡಿದ್ದಾರೆಂದು ತಿಳಿಸಿದಂತಾಯಿತು. ''ಅನೇನ'' – ತತ್ರ ತಾರಾಥಮೂಲತ್ವಂ ಎಂಬ ಶ್ಲೋಕದಿಂದ ಎಂದರ್ಥ.

## 'ತತ್ರ ತಾರಾಥಮೂಲತ್ವಂ' ಎಂಬ ಅರ್ಧಶ್ಲೋಕದಿಂದ ಪರಿಹಾರವಾಗುವ ಅನುಪಪತ್ತಿಗಳು

ವಾಕ್ಯಾರ್ಥಚಂದ್ರಿಕಾ – ಏವಂ 'ತತ್ರ ತಾರಾಥ' ಇತಿ ವಾಕ್ಯೇ 'ಸರ್ವಶಾಸ್ತ್ರಸ್ಯ' ಇತ್ಯಂಶಪ್ರತಿಪಾದನೀಯಸರ್ವಶಾಸ್ತ್ರಾಂಗತ್ವಪ್ರಯೋಜಕಂ ತಾರಾಥಯೋಃ ಮಾಂಗಲಿಕತ್ವೇನ ನಿವೇಶನಮುಪಪಾದ್ಯ ತಯೋಃ ಸರ್ವಶಾಸ್ತ್ರಾಂಗತ್ವೇಽನುಪಪತ್ತಿಃ ತತ್ರೈವ ವಾಕ್ಯೇ 'ತತ್ರ ಚ' ಇತ್ಯಂಶೇನೈವ ಪರಿಹ್ರಿಯತೇ ಇತ್ಯಭಿಪ್ರಾಯೇಣ ತಾಮನುಪಪತ್ತಿಮಾಶಂಕತೇ – ನನ್ವಿತಿ ॥ 'ಅಧಿಕಾರ್ಯಾದಿ' ಇತಿ 'ಆದಿ'ಶಬ್ದೇನ ವಿಷಯಗ್ರಹಣಮ್ ।

ಇಲ್ಲಿಯ ತನಕ ''ತತ್ರ ತಾರಾಥಮೂಲತ್ವಂ'' ಎಂಬ ವಾಕ್ಯದಲ್ಲಿ ''ಸರ್ವಶಾಸ್ತ್ರಸ್ಯ'' ಎಂಬ ಅಂಶದಿಂದ ಪ್ರತಿಪಾದಿಸಲ್ಪಟ್ಟ ಸರ್ವಶಾಸ್ತ್ರಾಂಗತ್ವವೆಂಬ ಪ್ರಯೋಜಕತ್ವವು ತಾರ ಮತ್ತು ಅಥಶಬ್ದಗಳಿಗೆ ಇರುತ್ತದೆ. ಆದ್ದರಿಂದ ಈ ಎರಡು ಶಬ್ದಗಳು ಮಾಂಗಲಿಕಗಳಾಗಿರುವ ಕಾರಣ ಶಾಸ್ತ್ರಪ್ರಾರಂಭದಲ್ಲಿ ಉಲ್ಲೇಖ ಮಾಡಿದ್ದು ಅತ್ಯಂತ ಸಾರ್ಥಕವಾಗಿದೆ ಎಂಬ ವಿಚಾರವನ್ನು ಉಪಪಾದನೆ ಮಾಡಿದ್ದಾಯಿತು. ಈಗ 'ಈ ಎರಡು ಶಬ್ದಗಳು ಸಮಸ್ತಶಾಸ್ತ್ರಕ್ಕೆ ಅಂಗಗಳಾಗಲಿ ಪ್ರಥಮಸೂತ್ರದ ಅವಯವಗಳಾಗದೇ

ಇರಬೇಕಾದೀತು' ಎಂಬ ಅನುಪಪತ್ತಿಯನ್ನು ಇದೇ ವಾಕ್ಯದಲ್ಲಿರುವ ''ತತ್ರ ಚ'' ಎಂಬ ಅಂಶದಿಂದ ಪರಿಹಾರ ಮಾಡುತ್ತಿದ್ದಾರೆ. ಈ ಅಭಿಪ್ರಾಯದಿಂದ ''ನನು'' ಇತ್ಯಾದಿ ವಾಕ್ಯವು ಇಲ್ಲಿ ಬರುವ ಅನುಪಪತ್ತಿಯನ್ನು ಆಶಂಕಿಸುತ್ತಿದೆ. ''ಅಧಿಕಾರ್ಯಾದಿ'' ಎಂಬಲ್ಲಿರುವ ಆದಿಶಬ್ದದಿಂದ ವಿಷಯವನ್ನು ಸ್ವೀಕರಿಸಬೇಕು.

## ಬ್ರಹ್ಮಶಬ್ದ ಹಾಗೂ ಓಂಕಾರಗಳೆರಡೂ ವಿಷಯಸಮರ್ಪಕವಾದರೂ ಸಾರ್ಥಕವಾಗಿವೆ

ವಾಕ್ಯಾರ್ಥಚಂದ್ರಿಕಾ – ಅನ್ಯಸ್ಯ ಅಭಾವಾದಿತಿ ॥ ಯದ್ಯಪಿ ಓಂಕಾರಸ್ಯ ಸಮಗ್ರಶಾಸ್ತ್ರಾಂಗತ್ವೇऽಪಿ ಬ್ರಹ್ಮಶಬ್ದಸ್ಯ ವಿಷಯಪ್ರತಿಪಾದಕಸ್ಯ ಸತ್ವಾತ್ ನಾನ್ಯಸ್ಯಾಭಾವಃ, ತಥಾऽಪಿ ನ ಕೇವಲಂ ಜಿಜ್ಞಾಸ್ಯೇ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಇತ್ಯಾದೌ ಬ್ರಹ್ಮಪದಶ್ರವಣಾತ್ ತಸ್ಯ ಚ ಜೀವಾದ್ ಭಿನ್ನತ್ವೇನ ಜಿಜ್ಞಾಸ್ಯತಾ, ಕಿಂತು, 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಇತ್ಯಾದೌ ಜೀವೇಷ್ವಸಂಭಾವಿತಗುಣಪೂರ್ತಿವಾಚಕೋಂಕಾರಾದಿಶ್ರವಣಾದಪೀತಿ ಯುಕ್ತ್ಯಂತರಸೂಚಕೇನ ಬ್ರಹ್ಮಶಬ್ದಸಮಕಕ್ಷತಯೋಂಕಾರಸ್ಯ ವಿಷಯೋಪಪಾದಕತಯಾ ಕಥಯಿಷ್ಯಮಾಣತ್ವಾತ್, 'ಪ್ರತ್ಯಕ್ಷಾದೇರಸಂಭವಾತ್, ವೇದಸ್ಯ ಚೇಶ್ವರವಿಷಯತ್ವಾಭಾವಾದನುಗ್ರಾಹ್ಯಾಪ್ರಮಾಣಾಭಾವಃ' ಇತ್ಯಾಶಂಕಾಪರಿಹಾರಕವಿಷಯಶಾಸ್ತ್ರಸಂಬಂಧೋಪಪಾದನಸ್ಯ ಓಂಕಾರಮಾತ್ರಸಾಧ್ಯತಾಯಾ ವಕ್ಷ್ಯಮಾಣತ್ವಾಚ್ಚ, ತಥೋಕ್ತಮಿತಿ ಧ್ಯೇಯಮ್ ।

ಓಂಕಾರವು ಸಮಗ್ರಶಾಸ್ತ್ರಕ್ಕೆ ಅಂಗವಾಗಿದೆ ಎಂದು ಅಂಗೀಕರಿಸೋಣ. ಆದರೆ ಬ್ರಹ್ಮಶಬ್ದವು ವಿಷಯಪ್ರತಿಪಾದಕವಾಗಿರುತ್ತದೆ. ಹೀಗಿರುವಾಗ ಮತ್ತೊಂದು ವಿಷಯಸಮರ್ಪಕಪದವಿಲ್ಲವೆಂದು ಗ್ರಂಥದಲ್ಲಿ ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ – ಕೇವಲ ಜಿಜ್ಞಾಸ್ಯನಲ್ಲಿ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬಲ್ಲಿ ಬ್ರಹ್ಮಪದವು ಶ್ರುತವಾಗಿರುವುದರಿಂದ ಜೀವನಿಗಿಂತ ಭಿನ್ನನಾದ ಬ್ರಹ್ಮನ ಜಿಜ್ಞಾಸೆ ಮಾಡಬೇಕೆಂದಷ್ಟೇ ಸಿದ್ಧವಾಗುವುದಲ್ಲ. ಕಿಂತು 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಇತ್ಯಾದಿ ಸ್ಥಳದಲ್ಲಿ ಜೀವನಲ್ಲಿ ಅಸಂಭಾವಿತವಾದ ಗುಣಪೂರ್ಣತ್ವವಾಚಕವಾದ ಓಂಕಾರಾದಿಶಬ್ದಗಳು ಶ್ರುತವಾಗಿರುವುದರಿಂದಲೂ ಕೂಡ ಎಂಬ ಮತ್ತೊಂದು ಯುಕ್ತಿಯನ್ನು ಸೂಚನೆ ಮಾಡುವುದಕ್ಕಾಗಿ ಹಾಗೆ ಹೇಳಿದ್ದಾರೆ. ಬ್ರಹ್ಮಶಬ್ದಕ್ಕೆ ಸಮಕಕ್ಷೆಯಿಂದ ಓಂಕಾರವು ವಿಷಯೋಪಪಾದಕವಾಗಿದೆಯೆಂಬುದನ್ನು ಮುಂದೆ ಹೇಳುತ್ತಾರೆ. ಬ್ರಹ್ಮಮೀಮಾಂಸಾದಿಶಾಸ್ತ್ರಕ್ಕೆ ಪ್ರತ್ಯಕ್ಷಾದಿಗಳು ಅನುಗ್ರಾಹ್ಯ ಪ್ರಮಾಣಗಳಾ-

ಗಿರುವುದಿಲ್ಲ. ವೇದವು ಈಶ್ವರವಿಷಯಕವಲ್ಲದ್ದರಿಂದ ಅನುಗ್ರಾಹ್ಯ ಪ್ರಮಾಣವಾಗುವುದಿಲ್ಲ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅನುಗ್ರಾಹ್ಯವಾದ ಪ್ರಮಾಣವೇ ಇಲ್ಲದಂತಾಗುತ್ತದೆ. ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ವಿಷಯ, ಶಾಸ್ತ್ರಸಂಬಂಧ ಇವುಗಳನ್ನು ಉಪಪಾದನೆ ಮಾಡಲು ಓಂಕಾರಕ್ಕೆ ಮಾತ್ರ ಸಾಧ್ಯವಾಗುತ್ತದೆ. ಇದನ್ನು ಮುಂದೆ ಹೇಳುವವರಿದ್ದಾರೆಂದು ತಿಳಿಯಬೇಕು.

ವಿವರಣೆ – ಬ್ರಹ್ಮಶಬ್ದವು ಹೇಗೆ ಜೀವಬ್ರಹ್ಮಭೇದಕವಾದ ಗುಣಪೂರ್ಣತ್ವವನ್ನು ಹೇಳುತ್ತದೋ ಅದರಂತೆ ಓಂಕಾರವೂ ಕೂಡ ಜೀವಬ್ರಹ್ಮಭೇದಕವಾದ ಗುಣಪೂರ್ಣತ್ವವನ್ನೇ ಹೇಳುತ್ತದೆ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅನುಗ್ರಾಹ್ಯಪ್ರಮಾಣತ್ವವನ್ನು ಸಮರ್ಥನೆ ಮಾಡಲು ಓಂಕಾರವೇ ಬೇಕು. ವೇದವು ಈಶ್ವರಪರವಾಗಿದೆ ಎಂಬ ಸಮರ್ಥನೆಗೆ ಓಂಕಾರವೇ ಬೇಕು. ಇದು ಬ್ರಹ್ಮಶಬ್ದದಿಂದ ಸಿದ್ಧವಾಗುವುದಿಲ್ಲ.

## 'ಕ್ರಮೇಣ ಆದಿತ್ವಂ' ಎಂಬುದಕ್ಕೆ ಎರಡುಬಗೆಯ ಪೀಠಿಕೆ

ವಾಕ್ಯಾರ್ಥಚಂದ್ರಿಕಾ – ಅಥಶಬ್ದಪ್ರಾಯಪಠಿತತಾರಶಬ್ದಸ್ಯ ತಾರಶಬ್ದಾರ್ಥಕತ್ವೇ, ತಸ್ಯ ಚ ಸೂತ್ರಾದಾವಪ್ಯಭಾವ ಇತ್ಯತೋ ಯೋಗ್ಯತಾಬಲಾತ್ ತಾರಶಬ್ದೇನ ಯೋಗೇನ ತತ್ಪರ್ಯಾ-ಯೋಂಕಾರಗ್ರಹಣಮ್ ಇತ್ಯಭಿಪ್ರೇತ್ಯ ಪ್ರಕೃತೋಪಯೋಗಿತಯಾ ತದ್ಯೋಗಂ ದರ್ಶಯತಿ – ತರಂತೀತಿ ॥ (ತೄ ಪ್ಲವನತರಣಯೋರಿತ್ಯಸ್ಮಾತ್ ಅಕರ್ತರಿ ಚ ಕಾರಕೇ ಸಂಜ್ಞಾಯಾಮಿತಿ ಕರಣೇ ಘಞ್, ಅಚೋ ಞ್ಣಿತೀತಿ ಋಕಾರಸ್ಯಾಕಾರರೂಪವೃದ್ಧೌ ತಸ್ಯ ಉರಣ್‌ರಪರ ಇತಿ ರಪರತ್ವೇ ಚ, ತಾರಶಬ್ದೋ ನಿಷ್ಪನ್ನಃ) । ಉಭಯೋಃ ಆದಿತ್ವಸ್ಯೈಕತ್ರಾಸಂಭವಾದಾಹ – ಕ್ರಮೇಣೇತಿ ॥ ಯದ್ವಾ ಮೂಲತ್ವಂ ನಾತ್ರಾದಿತ್ವಮಾತ್ರಮಪಿ ತು ಕ್ರಮೇಣಾದಿತ್ವಂ ವಿವಕ್ಷಿತಂ ವಿವಕ್ಷಾಪ್ರಯೋಜನಂ ಚೋತ್ತರತ್ರ ಪ್ರದರ್ಶಯಿಷ್ಯಾಮ ಇತ್ಯಭಿಪ್ರೇತ್ಯಾಹ – ಕ್ರಮೇಣೇತಿ ॥ ಅತ್ರಾದಿತ್ವಮ್ ಆದೌ ಪ್ರಯುಕ್ತತ್ವಾತ್ । ತಸ್ಯ ಚ ಅವಯವತ್ವಾಂಗತ್ವಾಭ್ಯಾಂ ಪ್ರಥಮಸೂತ್ರಶಾಸ್ತ್ರಾಭ್ಯಾಂ ನಾನ್ವಯಃ ಸಂಭವತೀತ್ಯತಃ, ತಾತ್ಪರ್ಯಮಾಹ – ಆದಾವಿತಿ ॥ ತಾರಾಥಯೋಃ ಸೂತ್ರಶಾಸ್ತ್ರಾಭ್ಯಾಮೇಕ-ಪ್ರಕಾರೇಣ ಸಂಬಂಧಭ್ರಾಂತಿಂ ನಿವಾರಯಿತುಂ ವಿವಕ್ಷಿತಶೇಷಾಧ್ಯಾಹಾರೇಣ ವಾಕ್ಯಾರ್ಥಮಾಹ – ತತ್ರೇತಿ ॥ ಸೂತ್ರಕೃದ್ ವಿವಕ್ಷಾಂ ದರ್ಶಯಿತುಂ ತದ್ವೈವ ಶೇಷಂ ಪೂರಯತಿ – ಸೂತ್ರೇತಿ ॥

ಅಥಶಬ್ದದ ಜೊತೆ ತಾರ ಶಬ್ದವು ಪ್ರಾಯಃಪಠಿತವಾಗಿದೆ. ಈ ಶಬ್ದಕ್ಕೆ ತಾರ ಎಂದರ್ಥವನ್ನು ವಿವಕ್ಷಿಸಿದರೆ ಸೂತ್ರದ ಪ್ರಾರಂಭದಲ್ಲಿ ತಾರ ಎಂಬ ಶಬ್ದ ಪ್ರಯೋಗವು ಕಾಣಸುತ್ತಿಲ್ಲ. ಅದು ಕೂಡು-

ವುದೂ ಇಲ್ಲ. ಆದ್ದರಿಂದ ಅನ್ವಯಯೋಗ್ಯತೆಯ ಸಾಮರ್ಥ್ಯದಿಂದ ತಾರಶಬ್ದಕ್ಕೆ ಓಂಕಾರ ಎಂದರ್ಥ. ಇದು ಯೋಗವೃತ್ತಿಯಿಂದ ಲಭ್ಯವಾದ ಅರ್ಥವಾಗಿದೆ. ಈ ಓಂಕಾರವು ಪ್ರಕೃತಸೂತ್ರದಲ್ಲಿ ಉಪ-ಯೋಗಿಯಾಗುತ್ತದೆ. ಈ ದೃಷ್ಟಿಯಿಂದ ತಾರಶಬ್ದದ ಯೋಗಾರ್ಥವನ್ನು 'ತರಂತಿ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ತಾರ ಅಥ ಶಬ್ದಗಳೆರಡೂ ಒಂದೇ ಸ್ಥಳದಲ್ಲಿ ಪ್ರಯೋಗಿಸುವುದು ಅಸಂಭಾವಿತವಲ್ಲವೇ? ಎಂಬ ಪ್ರಶ್ನೆಗೆ ಕ್ರಮೇಣ ಎಂಬುದರಿಂದ ಉತ್ತರಿಸಿದ್ದಾರೆ. ಮೊದಲು ಓಂಕಾರವನ್ನು ಉಚ್ಚರಿಸಿ ಅನಂತರ ಅಥಶಬ್ದವನ್ನು ಉಚ್ಚರಿಸಿದ್ದಾರೆ.

ಅಥವಾ ''ಕ್ರಮೇಣ ಆದಿತ್ವಂ'' ಎಂಬುದಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆಯನ್ನು ತಿಳಿಯಬಹುದು. 'ಮೂಲತ್ವ' ಎಂದರೆ ಮೊದಲಿರುತ್ತದೆ ಎಂದಷ್ಟೇ ಅರ್ಥವಲ್ಲ. ಕ್ರಮವಾಗಿ ಮೊದಲು ಇರುತ್ತವೆ ಎಂದರ್ಥ. ಹೀಗೆ ವಿವಕ್ಷಿಸಲು ಏನು ಪ್ರಯೋಜನ ಎಂಬುದನ್ನು ಮುಂದೆ ತೋರಿಸುತ್ತಾರೆ. ಈ ಅಭಿಪ್ರಾಯದಿಂದ ''ಕ್ರಮೇಣ'' ಎಂಬ ವಾಕ್ಯವು ಹೊರಟಿದೆ. ''ಆದಿತ್ವಂ'' ಎಂಬುದಕ್ಕೆ ಆದೌ ಪ್ರಯುಕ್ತತ್ವ ಎಂದರ್ಥ. ಈ ಅರ್ಥವನ್ನು ವಿವಕ್ಷಿಸಿದರೆ ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವವೆಂದು ಸಮಸ್ತಶಾಸ್ತ್ರದ ಅಂಗವೆಂದು ಅನ್ವಯಜ್ಞಾನ ಬರುವುದಿಲ್ಲ. ಆದ್ದರಿಂದ 'ಆದೌ ಪ್ರಯುಕ್ತತ್ವ' ಎಂಬುದರ ತಾತ್ಪರ್ಯವನ್ನು ''ಆದೌ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ತಾರ ಮತ್ತು ಅಥಶಬ್ದಗಳಿಗೆ ಸೂತ್ರ ಹಾಗೂ ಶಾಸ್ತ್ರದ ಜೊತೆ ಏಕಪ್ರಕಾರದಿಂದ ಸಂಬಂಧ-ವಿದೆಯೆಂಬ ಭ್ರಾಂತಿ ಬರುತ್ತದೆ. ಇದನ್ನು ಪರಿಹರಿಸಲು ಸೂತ್ರದ ಜೊತೆ ಅವಯವತ್ವೇನ ಶಾಸ್ತ್ರದ ಜೊತೆ ಅಂಗತ್ವೇನ ಅನ್ವಯವನ್ನು ಹೊಂದುತ್ತದೆ ಎಂಬುದಾಗಿ ಅಧ್ಯಾಹಾರ ಮಾಡಿಕೊಂಡು ವಾಕ್ಯಾರ್ಥವನ್ನು ''ತತ್ರ'' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ. ''ಇಷ್ಯತೇ'' ಎಂದರೆ ಯಾರಿಂದ ಅಂಗೀಕರಿಸ-ಲ್ಪಟ್ಟಿದೆ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿ ಸೂತ್ರಕರ್ತ್ರಾ ಎಂಬುದಾಗಿ ಶೇಷಪೂರಣೆ ಮಾಡಿಕೊಳ್ಳಬೇಕು. ಸೂತ್ರಕಾರರಿಂದ ಅಂಗೀಕರಿಸಲ್ಪಟ್ಟಿದೆ ಎಂಬರ್ಥ ಹೇಳಿದಂತಾಗುತ್ತದೆ.

## ಏತದುಕ್ತಂ ಭವತಿ ಎಂಬುದಕ್ಕೆ ಎರಡು ಪೀಠಿಕೆ

ವಾಕ್ಯಾರ್ಥಚಂದ್ರಿಕಾ – ನನು ಯದಿ ವಿಘ್ನವಿಘಾತಾದಿಹೇತುತ್ವೇನ ಶಾಸ್ತ್ರಾಂಗತ್ವಂ, ತರ್ಹ್ಯಸ್ಯ ತದುಪಯುಕ್ತಾರ್ಥಪ್ರತಿಪಾದಕತ್ವೇನಾಧಿಕಾರ್ಯಾದಿಪ್ರತಿಪಾದಕತ್ವಾಭಾವಾನ್ನ ಪ್ರಥಮ-

ಸೂತ್ರಾವಯವತಾ । ಯದಿ ಚ ಕಿಂಚಿದರ್ಥಪ್ರತಿಪಾದಕತ್ವೇನ ನಾಸ್ಯ ಶಾಸ್ತ್ರಾಂಗತಾ, ಕಿಂತು ಶ್ರವಣಮಾತ್ರೇಣ ವಿಘ್ನವಿಘಾತಾದಿಸಂಪಾದಕತಾ, ತಥಾ ಚಾಧಿಕಾರ್ಯಾದಿಪ್ರತಿಪಾದಕತ್ವಾತ್ ಯುಕ್ತಾಽವಯವತಾ ಇತಿ ಮತಮ್; ತರ್ಹಿ ಶ್ರವಣಮಾತ್ರಸ್ಯ ತದ್ಧೇತುತಾಯಾ ಅದರ್ಶನಾತ್ ಅನ್ಯಾರ್ಥಪ್ರಯುಕ್ತಸ್ಯ ಪ್ರಯೋಜನಾಂತರಾರ್ಥತಾಯಾ ಅದರ್ಶನಾಚ್ಚ ಶಾಸ್ತ್ರಾಂಗತ್ವಂ ಪರಿತ್ಯಕ್ತಂ ಸ್ಯಾದಿತ್ಯತೋಽಭಿಪ್ರಾಯಮಾಹ – ಏತದುಕ್ತಂ ಭವತೀತಿ ॥ ಯದ್ವಾ, ನನು ಕಥಮನೇನೋಕ್ತಶಂಕಾಪರಿಹಾರ ಇತ್ಯತೋ ವಿಘ್ನವಿಘಾತಾದಿಹೇತುತ್ವೋಕ್ತ್ಯಾ ನ ಪ್ರಥಮಸೂತ್ರಾವಯವತ್ವತ್ಯಾಗೋಽಪಿ ತ್ವಧಿಕಾರ್ಯಾದಿಪ್ರತಿಪಾದಕತ್ವೇನ ಪ್ರಥಮಸೂತ್ರೋಪಾತ್ತಾಭ್ಯಾಮೇವ ತಾಭ್ಯಾಂ ಪ್ರಯೋಜನಾಂತರಸ್ಯಾಪಿ ಸಿದ್ಧಿಃ ಇತ್ಯೇವಾಭಿಪ್ರೇತಮ್ ಇತ್ಯೇತತ್ ಸಹೇತುಕಂ ದೃಷ್ಟಾಂತಪೂರ್ವಂ ವಿವೃಣೋತಿ – ಏತದುಕ್ತಂ ಭವತೀತಿ ॥

ಒಂದು ವೇಳೆ ಓಂಕಾರ ಮತ್ತು ಅಥಶಬ್ದಗಳು ವಿಘ್ನವಿಘಾತಾದಿಗಳಿಗೆ ಕಾರಣವಾಗಿರುವುದರಿಂದ ಸಮಸ್ತಶಾಸ್ತ್ರದ ಅಂಗಗಳಾಗುವುದಾದರೆ ಶಾಸ್ತ್ರಾಧ್ಯಯನಕ್ಕೆ ಉಪಯುಕ್ತವಾದ ಅರ್ಥಪ್ರತಿಪಾದಕತ್ವೇನ ಅಧಿಕಾರ್ಯಾದಿಪ್ರತಿಪಾದಕತ್ವವು ಕೂಡುವುದಿಲ್ಲ. ಆದ್ದರಿಂದ ಪ್ರಥಮಸೂತ್ರದ ಅವಯವತ್ವವೂ ಕೂಡ ಅಯುಕ್ತವಾಗುತ್ತದೆ. ಒಂದು ವೇಳೆ ಕಿಂಚಿದರ್ಥಪ್ರತಿಪಾದಕವಾಗುವುದರಿಂದ ಈ ಎರಡು ಶಬ್ದಗಳು ಶಾಸ್ತ್ರಾಂಗಗಳಲ್ಲ ಶ್ರವಣಮಾತ್ರದಿಂದ ವಿಘ್ನವಿಘಾತಾದಿ ಸಂಪಾದಕಗಳಾಗಿವೆ ಎಂದು ಹೇಳುತ್ತೇವೆ. ಈ ಪಕ್ಷದಲ್ಲಿ ಅಧಿಕಾರ್ಯಾದಿಪ್ರತಿಪಾದಕತ್ವವು ಓಂಕಾರ ಮತ್ತು ಅಥಶಬ್ದಗಳಿಗಿರುವುದರಿಂದ ಸೂತ್ರದ ಅವಯವತ್ವವು ಯುಕ್ತವಾಗುತ್ತದೆ. ಹೀಗೆ ಹೇಳುವುದೂ ಕೂಡ ಸರಿಯಲ್ಲ. ಏಕೆಂದರೆ ಶ್ರವಣಮಾತ್ರದಿಂದ ವಿಘ್ನಗಳು ಪರಿಹಾರವಾದದ್ದು ಎಲ್ಲೂ ಕೂಡ ಕಂಡಿಲ್ಲ. ಮತ್ತು ಯಾವುದರ ಉಪಯೋಗಕ್ಕಾಗಿ ಪ್ರಯುಕ್ತವಾಗಿರುತ್ತದೋ ಅದಕ್ಕೆ ಮತ್ತೊಂದು ಪ್ರಯೋಜನವಿರುವುದು ಕೂಡ ಕಂಡಿರುವುದಿಲ್ಲ? ಈ ಎರಡು ಕಾರಣಗಳಿಂದ ಓಂಕಾರಕ್ಕೆ ಶಾಸ್ತ್ರಾಂಗತ್ವವನ್ನು ಪರಿತ್ಯಾಗ ಮಾಡಬೇಕಾದೀತು? ಎಂಬ ಪ್ರಶ್ನೆಗೆ ಉತ್ತರಿಸುತ್ತಾ ತಮ್ಮ ಅಭಿಪ್ರಾಯವನ್ನು "ಏತದುಕ್ತಂ ಭವತಿ" ಎಂಬುದಾಗಿ ಸ್ಪಷ್ಟಪಡಿಸುತ್ತಿದ್ದಾರೆ.

ಅಥವಾ ಹಿಂದೆ ಮಾಡಿದ ಆಶಂಕೆಗೆ ಹೇಗೆ ಪರಿಹಾರ ಹೇಳಿದಂತಾಯಿತು ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಓಂಕಾರ ಮತ್ತು ಅಥಶಬ್ದಗಳು ವಿಘ್ನವಿಘಾತಕ್ಕೆ ಹೇತುಗಳಾಗಿವೆ ಎಂದು ಹೇಳಿದ ಮಾತ್ರದಿಂದ ಪ್ರಥಮಸೂತ್ರದ ಅವಯವಗಳಾಗಿಲ್ಲವೆಂದು ಹೇಳಿದಂತಾಗಲಿಲ್ಲ. ಮತ್ತೇನೆಂದರೆ ಅಧಿಕಾರ್ಯಾದಿಪ್ರತಿಪಾದಕತ್ವೇನ ಪ್ರಥಮಸೂತ್ರದ ಅವಯವಗಳಾಗಿದ್ದುಕೊಂಡೇ

ಮತ್ತೊಂದು ಪ್ರಯೋಜನವನ್ನು ಕೂಡ ಹೊಂದಿವೆ ಎಂದಷ್ಟೇ ಅಭಿಪ್ರಾಯ. ಇದನ್ನು ಕಾರಣಪುರಸ್ಸರ-ವಾಗಿ ದೃಷ್ಟಾಂತದಿಂದ ವಿವರಿಸಲು ''ಏತದುಕ್ತಂ ಭವತಿ'' ಇತ್ಯಾದಿಗ್ರಂಥವು ಹೊರಟಿದೆ.

## 'ಓಂ, ಅಥ' ಎಂದೇ ಏಕೆ? ಹೀಗೆಯೇ ಏಕೆ?

ವಾಕ್ಯಾರ್ಥಚಂದ್ರಿಕಾ – ಅಧಿಕಾರ್ಯಾದಿಪ್ರತಿಪಾದಕತ್ವೇನಾನಯೋಃ ಸೂತ್ರಾವಯವತ್ವೇ ಸಿದ್ಧೇಽಪಿ ಏತತ್ ಪರ್ಯಾಯಾಭ್ಯಾಮನಯೋರಪಿ ಕ್ರಮಾಂತರೇಣೋಪಾದಾನೇನ ಬ್ರಹ್ಮಶಬ್ದವತ್ ಮಧ್ಯೇ ಗ್ರಹಣೇನಾಪ್ಯಧಿಕಾರ್ಯಾದಿಲಾಭಾತ್ ಅನಯೋರೇವ ಅನೇನ ಕ್ರಮೇಣೈವ ಆದಾವೇವ ಉಪಾದಾನಂ ಸಮಸ್ತಶಾಸ್ತ್ರಾಂಗತ್ವಸ್ಯ ಜ್ಞಾಪಕಮಿತ್ಯಾಹ – ಯದಿತಿ ॥ 'ಜ್ಞಾಪಕತಯಾಽದಿಸೂತ್ರಸ್ಯ' ಇತಿ ದೃಷ್ಟಾಂತತಯೋಪಾತ್ತಮ್ । ಯದ್ವಾ ಸ್ಪಷ್ಟಂ ಜ್ಞಾಪಕತಯಾ ಆದಿಸೂತ್ರಾಂಗತ್ವಸ್ಯ ಪೂರ್ವವಾದಿನಾಽಪಿ ಅಂಗೀಕಾರ್ಯತ್ವಾತ್ ತತ್ರ ಸೂತ್ರಕಾರಾಂಗೀಕಾರಲಿಂಗಸೂಚನಸ್ಯ ಅಕರ್ತವ್ಯತ್ವಾದಿತಿ ಭಾವಃ।

ಅಧಿಕಾರ್ಯಾದಿಪ್ರತಿಪಾದಕತ್ವೇನ ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವಗಳಾಗಿವೆ ಎಂದು ಸಿದ್ಧವಾಗುತ್ತದೆ. ಆದರೂ ಕೂಡ ಈ ಎರಡು ಶಬ್ದಗಳ ಪರ್ಯಾಯ-ಪದಗಳನ್ನು ಉಲ್ಲೇಖ ಮಾಡದೇ ಈ ಎರಡು ಶಬ್ದಗಳಲ್ಲೂ ಬೇರೆ ಕ್ರಮವನ್ನು ಅನುಸರಿಸದೇ ಮೊದಲು ಓಂಕಾರ ಅನಂತರ ಅಥಶಬ್ದವೆಂಬ ಕ್ರಮವನ್ನು ಅನುಸರಿಸಿದ್ದರಿಂದ ಬ್ರಹ್ಮಶಬ್ದದಂತೆ ಓಂಕಾರವೂ ಕೂಡ ಅಧಿಕಾರ್ಯಾದಿಸೂಚಕವಾಗಿದೆಯೆಂದು ತಿಳಿಯುತ್ತದೆ. ಇದರಿಂದ ಕ್ರಮವಾಗಿ ಮೊದಲೇ ಈ ಎರಡು ಶಬ್ದಗಳನ್ನು ಉಲ್ಲೇಖ ಮಾಡಿರುವುದು ಸಮಸ್ತಶಾಸ್ತ್ರಾಂಗತ್ವಕ್ಕೆ ಜ್ಞಾಪಕವಾಗಿದೆ. ಇದನ್ನು ''ಯತ್'' ಇತ್ಯಾದಿಗ್ರಂಥವು ವಿವರಿಸುತ್ತಿದೆ. ''ಜ್ಞಾಪಕತಯಾ ಆದಿಸೂತ್ರಸ್ಯ'' ಎಂಬುದು ಕೇವಲ ದೃಷ್ಟಾಂತ-ಕ್ಕೋಸ್ಕರ ಹೇಳಿರುತ್ತಾರೆ. ಅಥವಾ ಈ ಎರಡು ಶಬ್ದಗಳು ಆದಿಸೂತ್ರಕ್ಕೆ ಅಂಗವಾಗಿದೆ ಎಂಬುದಕ್ಕೆ ಸ್ಪಷ್ಟವಾದ ಜ್ಞಾಪಕಗಳಿರುವುದರಿಂದ ಪೂರ್ವಪಕ್ಷಿಯು ಕೂಡ ಇದನ್ನು ಅಂಗೀಕರಿಸಬೇಕು. ಈ ವಿಷಯದಲ್ಲಿ ಸೂತ್ರಕಾರರಿಂದ ಅಂಗೀಕರಿಸಲ್ಪಟ್ಟಿದೆ ಎಂಬ ಲಿಂಗವು ಇರುತ್ತದೆಂದು ತಿಳಿಯಬೇಕು.

ವಿವರಣೆ – ಒಂದು ವೇಳೆ ಓಂ ಮತ್ತು ಅಥಶಬ್ದಗಳು ಕೇವಲ ಪ್ರಥಮಸೂತ್ರದ ಅವಯವಗಳೆಂದಷ್ಟೇ ವಿವಕ್ಷಿಸಿದರೆ ಓಂ ಅಥ ಎಂದು ಹೇಳುವ ಬದಲು ಪರ್ಯಾಯವಾದ ಬೇರೆ ಶಬ್ದಗಳನ್ನು ಹೇಳಬಹುದಿತ್ತು. ಅಥವಾ ಓಂ, ಅಥ ಎಂದು ಹೇಳುವ ಬದಲು ಅಥ ಓಂ ಎಂದು ಹೇಳಬಹುದಿತ್ತು. ಅಥವಾ ಕೊನೆಯಲ್ಲಿ ಹೇಳಬಹುದಿತ್ತು. ಬೇರೆ ಶಬ್ದಗಳನ್ನು ಪ್ರಯೋಗಿಸದೇ ಓಂ

ಮತ್ತು ಅಥಶಬ್ದಗಳನ್ನೇ ಪ್ರಯೋಗಿಸಿದ್ದಾರೆ. ಮೊದಲು ಓಂಕಾರವನ್ನು ಹೇಳಿ ಅನಂತರ ಅಥಶಬ್ದವನ್ನು ಹೇಳಿರುವುದರಿಂದ ಕ್ರಮವನ್ನು ಅನುಸರಿಸಿದ್ದಾರೆ. ಮತ್ತು ಆರಂಭದಲ್ಲಿಯೇ ಹೇಳಿದ್ದಾರೆ. ಇದರಿಂದ ಮಾಂಗಲಿಕತ್ವವು ಸಿದ್ಧವಾಗುತ್ತದೆ. ಇದರಿಂದ ಓಂ ಮತ್ತು ಅಥಶಬ್ದಗಳು ಸಮಸ್ತಶಾಸ್ತ್ರದ ಅಂಗಗಳಾಗಿವೆ ಎಂದು ಸಿದ್ಧವಾಗುತ್ತದೆ.

ಪೂರ್ವಪಕ್ಷಿಯು ಖಂಡನೆ ಮಾಡುವುದಕ್ಕಾಗಿ 'ಆದಿಸೂತ್ರದ ಅಂಗಮಾತ್ರವಾಗಲಿ' ಎಂಬುದನ್ನು ಪ್ರತಿಬಂದಿಯಾಗಿ ಹೇಳಿರುತ್ತಾನೆ. ಆದ್ದರಿಂದ ಎರಡಕ್ಕೂ ಅಂಗೀಕಾರ್ಯತ್ವಲಿಂಗವನ್ನು ಸೂಚಿಸಬೇಕು. ಸೂತ್ರಕಾರರು ಪ್ರಥಮಸೂತ್ರದ ಅಂಗವಾಗಿದೆ ಎಂಬ ವಿಷಯದಲ್ಲೂ ಕೂಡ ಕಾರಣವನ್ನು ಹೇಳಿ, ಅಭಿಪ್ರಾಯಪಟ್ಟಿದ್ದಾರೆಂದು ತಿಳಿಯಬೇಕು.

## ''ಜ್ಞಾಪಕತಯಾ ಆದಿಸೂತ್ರಸ್ಯ'' ಎಂದು ದೃಷ್ಟಾಂತಕ್ಕೋಸ್ಕರ ಹೇಳಿದ್ದಾರೆ

ವಾಕ್ಯಾರ್ಥಚಂದ್ರಿಕಾ – 'ಮಂಗಲವಾಚಕಮಂಗಲಪದಂ ವಿಹಾಯ' ಇತ್ಯಪ್ಯತ್ರ ದ್ರಷ್ಟವ್ಯಮ್ । ಯತ್ ಪರ್ಯಾಯಾಂತರಂ ವಿಹಾಯೇತ್ಯೇತದೇವ ವಾ, ಸ್ಪಷ್ಟಮಂಗಲವಾಚಕಶಬ್ದಂ ವಿಹಾಯ ತತ್ಪ್ರಯೋಜಕಯೋರನಯೋರುಪಾದಾನಮಿತಿ ವ್ಯಾಖ್ಯೇಯಮ್ । ಅತ್ರ ಚ ಪಕ್ಷದ್ವಯೇ 'ಜ್ಞಾಪಕತಯಾ ಆದಿಸೂತ್ರಸ್ಯ' ಇತ್ಯುಪಪಾದನೀಯತಯೈವೋಪಾತ್ತಮಿತಿ ದ್ರಷ್ಟವ್ಯಮ್ । ಕಯೋ-ಶ್ಚಿಚ್ಛಬ್ದಯೋಃ ಕೇನಚಿತ್ಕ್ರಮೇಣ ಕ್ವಚಿದುಪಾದಾನಂ ಕರ್ತವ್ಯಮಿತಿ ಕ್ರಿಯತೇ, ತಥಾ ಚಾನ್ಯಥಾ-ಸಿದ್ಧಿರಿತ್ಯಾಶಂಕತೇ – ನ ಚೇತಿ ॥ ಅನೇನೇತಿ ॥ ಮಂಗಲಾರ್ಥತ್ವವ್ಯಾಖ್ಯಾನೇನ, ಮಂಗಲಾರ್ಥತ್ವೇ ಪ್ರಥಮಸೂತ್ರಾವಯವತ್ವಾನುಪಪತ್ತಿಪರಿಹಾರೇಣ ಚೇತ್ಯರ್ಥಃ । (ಮಂಗಲಾನಂತರಾರಂಭಪ್ರಶ್ನ-ಕಾರ್ತ್ಸ್ನ್ಯೇಷ್ವಥೋ ಅಥೇತ್ಯಮರಃ) ।

ಪ್ರಥಮಸೂತ್ರದ ಅವಯವಗಳು ಆಗದೇ ಇದ್ದರೆ ಮಂಗಲ ಎಂಬ ಪದವನ್ನೇ ಪ್ರಯೋಗ ಮಾಡಬಹುದಿತ್ತು. ಇದನ್ನು ಬಿಟ್ಟು ಮಂಗಲಪ್ರಯೋಜನಕವಾದ ಈ ಎರಡು ಶಬ್ದಗಳನ್ನು ಪ್ರಯೋಗ ಮಾಡಿದ್ದರಿಂದ ಪ್ರಥಮಸೂತ್ರದ ಅವಯವಗಳಾಗಿವೆ ಎಂದು ತಿಳಿಯುತ್ತದೆ. ''ಜ್ಞಾಪಕತಯಾ ಆದಿ-ಸೂತ್ರಸ್ಯ'' ಎಂಬುದನ್ನು ಮೊದಲನೆಯ ಪಕ್ಷದಲ್ಲಿ ದೃಷ್ಟಾಂತತ್ವೇನ ಸ್ವೀಕರಿಸಲಾಗಿದೆ. ಎರಡನೆಯ ಪಕ್ಷದಲ್ಲಿ ಉಪಪಾದನೆ ಮಾಡುವ ದೃಷ್ಟಿಯಿಂದ ಸ್ವೀಕರಿಸಲಾಗಿದೆ ಎಂದು ತಿಳಿಯಬೇಕು. ಎರಡು

ಶಬ್ದಗಳಿದ್ದರೆ ಯಾವುದಾದರೂ ಕ್ರಮದಿಂದ ಎಲ್ಲಿಯಾದರೂ ನಿವೇಶ ಮಾಡಿದರೆ ಸಾಕು. ಆದ್ದರಿಂದ ಅನ್ಯಥಾಸಿದ್ಧಿಯು ಬರುತ್ತದಲ್ಲವೇ? ಎಂಬ ಆಶಂಕೆಯನ್ನು "ನಚ" ಎಂಬುದರಿಂದ ಪರಿಹರಿಸಿದ್ದಾರೆ. ಅನೇನ ಎಂಬುದಕ್ಕೆ ಮಂಗಲಾರ್ಥತ್ವವಿದೆ ಎಂದು ವ್ಯಾಖ್ಯಾನ ಮಾಡಿದ್ದರಿಂದ ಮಂಗಲಾರ್ಥತ್ವವನ್ನು ಹೇಳಿದರೆ ಪ್ರಥಮಸೂತ್ರದ ಅವಯವತ್ವವೇ ಅನುಪಪನ್ನವಾಗುತ್ತದೆ ಎಂದು ಹೇಳಿದ್ದರಿಂದ ಎಂದರ್ಥ. ಇದರಿಂದ ಅನ್ಯಥಾಸಿದ್ಧಿಯನ್ನು ಪರಿಹರಿಸಿದಂತಾಯಿತು.

## ವೇದಕ್ಕೆ ಬ್ರಹ್ಮನು ವಿಷಯನಾಗಿದ್ದಾನೆಂದು ತಿಳಿಯುವುದೇ ಓಂಕಾರದಿಂದ

ಯಾದುಪತ್ಯ – ಅಧಿಕಾರ್ಯಾದಿಪ್ರತಿಪಾದಕಸ್ಯೇತಿ ॥ ಯದ್ಯಪಿ ಬ್ರಹ್ಮಶಬ್ದೋ ವಿಷಯ-ಪ್ರತಿಪಾದಕೋಽನ್ಯೋಽಸ್ತಿ ತಥಾಽಪಿ ಓಂಕಾರಸ್ಯ ಮೀಮಾಂಸಾನುಗ್ರಾಹ್ಯಪ್ರಮಾಣಪ್ರತಿಪಾದ-ನಾಯ ವೇದಸ್ಯೇಶ್ವರವಿಷಯಕತ್ವಸಮರ್ಥನಾರ್ಥತ್ವಸ್ಯ ವಕ್ಷ್ಯಮಾಣತ್ವೇನ, ತದರ್ಥಕಸ್ಯ ಅನ್ಯಸ್ಯಾ-ಭಾವಾದಿತ್ಯಭಿಪ್ರಾಯಾತ್ ॥ ವಿಷಯವೈಧುರ್ಯೇಣೇತಿ ॥ ಉಕ್ತರೀತ್ಯಾ ವೇದಸ್ಯ ಈಶ್ವರವಿಷ-ಯಕತ್ವಸಮರ್ಥಕವೈಧುರ್ಯೇಣ ಇತ್ಯರ್ಥಃ । 'ಅನಾರಂಭಣೀಯತ್ವಶಂಕಾ' ಇತ್ಯುಪಲಕ್ಷಣಮ್ । 'ಮೀಮಾಂಸಾನುಗ್ರಾಹ್ಯಪ್ರಮಾಣಾಭಾವಶಂಕಾ ಚ' ಇತ್ಯಪಿ ದ್ರಷ್ಟವ್ಯಮ್ । ಯನ್ಮೂಲತ್ವಮಿತ್ಯಾ-ಹೇತಿ ॥ ಕ್ರಮೇಣಾದಿತ್ವಮ್ ಇತ್ಯಾಹೇತ್ಯರ್ಥಃ । ಕಥಮೇವಮುಕ್ತೇಃ ಸೂತ್ರಕಾರಾಂಗೀಕಾರ-ಲಿಂಗಸೂಚಕತ್ವಮಿತ್ಯತಃ ತದ್ದರ್ಶಯತಿ – ಯತ್ತ್ವರ್ಯಾಯಾಂತರಮಿತಿ ॥ ಮಂಗಲವಾಚಿ-ಶಬ್ದಾಂತರಮಿತ್ಯರ್ಥಃ। ಕ್ರಮಾಂತರಮ್ – ಅಂತೇ ನಿವೇಶನಮ್ ।

"ಅಧಿಕಾರ್ಯಾದಿಪ್ರತಿಪಾದಕಸ್ಯ" – ವಾಸ್ತವಿಕವಾಗಿ ಬ್ರಹ್ಮಶಬ್ದವು ವಿಷಯಪ್ರತಿಪಾದಕವಾಗಿದೆ. ಹೀಗಿರುವಾಗ ಮತ್ತೊಂದು ವಿಷಯಪ್ರತಿಪಾದಕವಿಲ್ಲ ಎಂದು ಹೇಳುವುದು ಹೇಗೆ ಸರಿಯಾಗುತ್ತದೆ? ಎಂದರೆ ಓಂಕಾರಕ್ಕೆ ಮೀಮಾಂಸಾನುಗ್ರಾಹ್ಯಪ್ರಮಾಣಪ್ರತಿಪಾದನೆಗೋಸ್ಕರ ವೇದಕ್ಕೆ ಈಶ್ವರ-ವಿಷಯಕತ್ವವನ್ನು ಸಮರ್ಥನೆ ಮಾಡುವ ಪ್ರಯೋಜನವಿದೆ ಎಂಬುದಾಗಿ ಮುಂದೆ ಹೇಳುವವರಿದ್ದಾರೆ. ಏತದರ್ಥಕವಾದ ಮತ್ತೊಂದು ಪದವಿಲ್ಲ ಎಂದಷ್ಟೇ ಅಭಿಪ್ರಾಯ. "ವಿಷಯವೈಧುರ್ಯೇಣ" – ಹಿಂದೆ ಹೇಳಿದ ಪ್ರಕಾರ ವೇದಕ್ಕೆ ಈಶ್ವರವಿಷಯಕತ್ವಸಮರ್ಥಕವಾದದ್ದು ಮತ್ತೊಂದಿಲ್ಲ ಎಂದರ್ಥ. ಅನಾ-ರಂಭಣೀಯತ್ವಶಂಕೆಯನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಮೀಮಾಂಸಾನುಗ್ರಾಹ್ಯವಾದ ಪ್ರಮಾಣವೇ ಇರುವುದಿಲ್ಲ ಎಂಬ ಶಂಕೆಯನ್ನು ಕೂಡ ವಿವಕ್ಷಿಸಬೇಕು.

"ಯನ್ಮೂಲತ್ವಮಿತ್ಯಾಹ" – ಕ್ರಮೇಣ ಮೊದಲು ಹೇಳಿದ್ದಾರೆ ಎಂದರ್ಥ. ನೀವು ಹೇಳಿದ ವಿಷಯದಲ್ಲಿ ಸೂತ್ರಕಾರರು ಅಂಗೀಕರಿಸಿದ್ದಾರೆಂಬ ಲಿಂಗವು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ "ಯತ್ಪರ್ಯಾಯಾಂತರಂ" ಎಂಬುದರಿಂದ ಉತ್ತರಿಸುತ್ತಿದ್ದಾರೆ. ಮಂಗಲವಾಚಕವಾದ ಮತ್ತೊಂದು ಪರ್ಯಾಯಶಬ್ದವೆಂದರ್ಥ. "ಕ್ರಮಾಂತರ" ಎಂದರೆ ಕೊನೆಯಲ್ಲಿ ಉಲ್ಲೇಖ ಮಾಡುವಿಕೆ ಎಂದರ್ಥ.

ವಿವರಣೆ –

ಆಕ್ಷೇಪ – ಒಂದು ವೇಳೆ ಓಂಕಾರ ಮತ್ತು ಅಥಶಬ್ದಗಳೆರಡೂ ಸಮಸ್ತಶಾಸ್ತ್ರಕ್ಕೆ ಅಂಗಗಳಾಗುವುದಾದರೆ ಪ್ರಥಮಸೂತ್ರದ ಅವಯವಗಳಾಗದೇ ಇರಬೇಕಾದೀತು. ಪ್ರಥಮಸೂತ್ರದ ಅವಯವಗಳಾಗದಿದ್ದರೆ ಅಧಿಕಾರಿವಿಷಯಾದಿಗಳನ್ನು ಪ್ರತಿಪಾದನೆ ಮಾಡುವ ಬೇರೆ ಪದಗಳೇ ಇರುವುದಿಲ್ಲ. ಆಗ ಶಾಸ್ತ್ರವು ಅನಾರಂಭಣೀಯವಾಗುತ್ತದೆ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ವಾಸ್ತವಿಕವಾಗಿ ಅಧಿಕಾರಿಪ್ರತಿಪಾದಕವಾದ ಅಥಶಬ್ದವನ್ನು ಬಿಟ್ಟರೆ ಬೇರೆ ಪದವಿಲ್ಲ. ಆದರೆ ವಿಷಯಸಮರ್ಪಕವಾಗಿ ಓಂಕಾರವೇ ಇರಬೇಕಾಗಿಲ್ಲ. ವಿಷಯಸೂಚಕವಾದ ಬ್ರಹ್ಮಶಬ್ದವು ಸೂತ್ರದಲ್ಲಿದೆ. ಆದ್ದರಿಂದ ಟೀಕೆಯಲ್ಲಿ ವಿಷಯಸಮರ್ಪಕವಾದ ಮತ್ತೊಂದು ಪದವಿಲ್ಲ ಎಂದು ಹೇಗೆ ಹೇಳಿದರು?

ಸಮಾಧಾನ – ಹೌದು. ಬ್ರಹ್ಮಶಬ್ದವು ವಿಷಯಸಮರ್ಪಕವಾಗಿದೆ. ಆದರೆ ಅದನ್ನು ಸಮರ್ಥನೆ ಮಾಡಲು ಓಂಕಾರವು ಅನಿವಾರ್ಯ. ಓಂಕಾರವು ವೇದಗಳಿಗೆ ಈಶ್ವರವಿಷಯತ್ವವನ್ನು ಸಮರ್ಥನೆ ಮಾಡುತ್ತಿದೆ. ಒಂದು ವೇಳೆ ಓಂಕಾರವೇ ಇಲ್ಲದಿದ್ದರೆ ಸಮಸ್ತವೇದಕ್ಕೆ ಈಶ್ವರನು ವಿಷಯನಾಗಿದ್ದಾನೆಂಬುದೇ ಸಿದ್ಧವಾಗುವುದಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅವಶ್ಯವಾಗಿ ಅನುಗ್ರಾಹ್ಯಪ್ರಮಾಣವು ಇರಲೇಬೇಕು. ಪ್ರತ್ಯಕ್ಷ ಅನುಮಾನಗಳು ಅನುಗ್ರಾಹ್ಯಪ್ರಮಾಣಗಳಾಗಲಾರವು. ವೇದವೇ ಆಗಬೇಕು. ಆ ವೇದಗಳು ಬ್ರಹ್ಮವಿಷಯಕವಾದರೆ ಮಾತ್ರ ಅನುಗ್ರಾಹ್ಯಪ್ರಮಾಣಗಳಾಗುತ್ತವೆ. ಆ ವೇದಗಳಿಗೆ ಈಶ್ವರವಿಷಯತ್ವವು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಯು ಬಂದರೆ ಅದಕ್ಕೆ ಉತ್ತರಿಸಲು ಓಂಕಾರವನ್ನು ಹೇಳಲೇ ಬೇಕು. ಓಂಕಾರದ ವ್ಯಾಖ್ಯಾನ ವ್ಯಾಹೃತಿ, ವ್ಯಾಹೃತಿಯ ವ್ಯಾಖ್ಯಾನ ಪುರುಷಸೂಕ್ತ, ಅದರ ವ್ಯಾಖ್ಯಾನವೇ ವೇದಗಳಾಗಿವೆ. ಓಂಕಾರಕ್ಕೆ ಬ್ರಹ್ಮನು ವಿಷಯನಾದ್ದರಿಂದ ವ್ಯಾಖ್ಯಾನವಾದ ವೇದಗಳಿಗೂ ಕೂಡ ಈಶ್ವರನೇ ವಿಷಯನಾಗುತ್ತಾನೆ. ಇಲ್ಲಿ ಅನುಮಾನವನ್ನು ಹೀಗೆ ತಿಳಿಯಬೇಕು – 'ಸರ್ವೇ ವೇದಾಃ ಈಶ್ವರವಿಷಯಕಾಃ, ಈಶ್ವರವಿಷಯಕಓಂಕಾರವ್ಯಾಖ್ಯಾನರೂಪತ್ವಾತ್' ಎಂದು.

## ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವಗಳಷ್ಟೇ ಅಲ್ಲ ಸಮಸ್ತಶಾಸ್ತ್ರಕ್ಕೂ ಕೂಡ ಅಂಗಗಳಾಗಿವೆ

ಯಾದುಪತ್ಯ – ಅಯಂ ಭಾವಃ – ಯದಿ ಕಾರಕತಯಾ ಸಮಗ್ರಶಾಸ್ತ್ರಾಂಗತ್ವಮೇವ ಏತಯೋಃ ಸೂತ್ರಕಾರಸ್ಯ ವಿವಕ್ಷಿತಂ ಸ್ಯಾತ್, ತದಾ ಸ್ಪಷ್ಟಂ ಮಂಗಲವಾಚಿ 'ಮಂಗಲಮ್' ಇತ್ಯಾದಿಶಬ್ದಾಂತರಮೇವ ವಕ್ತವ್ಯಮ್, ಕಿಮನಯೋಃ ಮಂಗಲಪ್ರಯೋಜನಕಯೋರ್ವಚನೇನ; ಪರ್ಯಾಯಾಂತರಂ ವಿಹಾಯ ಚಾನಯೋರೇವ ಯದೋಪಾದಾನಂ ಕರೋತಿ ತೇನ ಜಾನೀಮೋ 'ಮಂಗಲಪ್ರಯೋಜನಾದನ್ಯದಪಿ ಅನಯೋರಸ್ತಿ ಪ್ರಯೋಜನಂ ತಜ್ಜ್ಞಾಪಕತಯಾ ಆದಿಸೂತ್ರಾಂಗತ್ವಮೇವ ಇತಿ ವಿವಕ್ಷಿತಂ ಸೂತ್ರಕಾರಸ್ಯ' ಇತಿ ॥ ಏವಂ ಯದಿ ಜ್ಞಾಪಕತಯಾ ಆದಿಸೂತ್ರಾಂಗತ್ವಮೇವ ವಿವಕ್ಷಿತಂ ಸ್ಯಾತ್ ತದಾಽಂತೇ ನಿವೇಶನಂ ಕಿಮರ್ಥಂ ನ ಕೃತಮ್, ತದ್ವಿಹಾಯ ಆದಾವೇವ ನಿವೇಶನಂ ಕರೋತಿ, ತೇನ ಜಾನೀಮಃ 'ಕಾರಕತಯಾ ಸಮಸ್ತಶಾಸ್ತ್ರಾಂಗತ್ವಮಪ್ಯಭಿಮತಂ ತಸ್ಯೇತಿ' ಇತಿ ।

ಒಟ್ಟು ಇಷ್ಟು ಅಭಿಪ್ರಾಯ – ಒಂದು ವೇಳೆ ಮಂಗಲಕಾರಕವಾಗಿ ಓಂಕಾರ ಹಾಗೂ ಅಥಶಬ್ದಗಳು ಸಮಸ್ತಶಾಸ್ತ್ರಕ್ಕೆ ಅಂಗಗಳಾಗಿವೆ ಎಂಬುದು ಸೂತ್ರಕಾರರ ಅಭಿಪ್ರಾಯವಾಗಿದ್ದಲ್ಲಿ ಮಂಗಲಾರ್ಥಕವಾದ 'ಮಂಗಲಂ' ಇತ್ಯಾದಿಯಾಗಿ ಬೇರೆ ಶಬ್ದಗಳನ್ನೇ ಪ್ರಯೋಗಿಸುತ್ತಿದ್ದರು. ನೇರವಾದ ಅರ್ಥಗಳನ್ನು ಹೇಳುವ ಆ ಶಬ್ದಗಳನ್ನು ಬಿಟ್ಟು ಮಂಗಲಪ್ರಯೋಜಕವಾದ ಈ ಓಂ ಅಥ ಶಬ್ದಗಳನ್ನು ಏಕೆ ಪ್ರಯೋಗಿಸಿರುವರು? ಬೇರೆ ಪರ್ಯಾಯಶಬ್ದಗಳನ್ನು ಬಿಟ್ಟು ಇದೇ ಶಬ್ದಗಳನ್ನು ಪ್ರಯೋಗಿಸಿದ್ದರಿಂದ ಸೂತ್ರಕಾರರು ಏನನ್ನು ತಿಳಿಸಿದ್ದಾರೆಂದರೆ ಮಂಗಲಪ್ರಯೋಜನವಷ್ಟೇ ಅಲ್ಲದೆ ಈ ಎರಡು ಶಬ್ದಗಳಿಗೆ ಬೇರೆ ಪ್ರಯೋಜನವೂ ಇರುತ್ತದೆ. ಅದೇನೆಂದರೆ ಪ್ರಥಮಸೂತ್ರದ ಅವಯವಗಳಾಗಿವೆ ಎಂಬುದು. ಈ ಅಭಿಪ್ರಾಯವು ಸೂತ್ರಕಾರರಿಗೆ ಇರುತ್ತದೆ. ಹಾಗಾದರೆ ಮೊದಲನೆಯ ಸೂತ್ರಕ್ಕೆ ಅಂಗಗಳಾಗಿವೆ ಎಂಬುದೇ ವಿವಕ್ಷಿತವಾದಲ್ಲಿ ಇದೇ ಪ್ರಥಮಸೂತ್ರದ ಕೊನೆಯಲ್ಲಿ ಈ ಎರಡು ಶಬ್ದಗಳನ್ನು ಏಕೆ ಉಲ್ಲೇಖ ಮಾಡಿಲ್ಲ? ಮೊದಲೇ ಏಕೆ ಉಲ್ಲೇಖ ಮಾಡಿದ್ದಾರೆ ಎಂದರೆ ಪರಿಸಮಾಪ್ತಿಗೆ ಕಾರಣವಾಗುವ ಮೂಲಕ ಸಮಸ್ತಶಾಸ್ತ್ರಕ್ಕೆ ಅಂಗಗಳಾಗಿವೆ ಎಂಬುದೂ ಕೂಡ ಸೂತ್ರಕಾರರಿಗೆ ಅಭಿಮತವಾಗಿದೆ ಎಂದು ತಿಳಿಯಬೇಕು.

## ಕಾರಕತಯಾ ಸಮಸ್ತಶಾಸ್ತ್ರೋಪಯೋಗಿತ್ವವನ್ನಷ್ಟೇ ಸಾಧಿಸುತ್ತಿವೆ

ಯಾದುಪತ್ಯ – ಯದ್ವಾ ಜ್ಞಾಪಕತಯಾಽಽದಿಸೂತ್ರೋಪಯೋಗಿತ್ವಂ ಪೂರ್ವಪಕ್ಷಿಣಾಽಂಗೀಕೃತಮೇವೇತಿ ನ ತತ್ರ ಸೂತ್ರಕಾರಾಂಗೀಕಾರಲಿಂಗಂ ಸೂಚನೀಯಮ್, ಕಿಂತು ಕಾರಕತಯಾ ಸಮಸ್ತಶಾಸ್ತ್ರೋಪಯೋಗಿತ್ವಮೇವ । ತತಶ್ಚ 'ಪರ್ಯಾಯಾಂತರಂ ವಿಹಾಯ' ಇತ್ಯಸ್ಯ 'ಅಧಿಕಾರ್ಯಾದಿಪ್ರತಿಪಾದಕಶಬ್ದಾಂತರಂ ವಿಹಾಯ' ಇತ್ಯರ್ಥಃ । 'ಕ್ರಮಾಂತರಮ್' ಇತ್ಯಸ್ಯ ಚ 'ಅಂತೇ ನಿವೇಶನಮ್' ಇತ್ಯರ್ಥಃ । ತೇನ ಪರ್ಯಾಯಾಂತರಪರಿತ್ಯಾಗೋಽಂತೇ ವಿಹಾಯ ಆದಾವೇವ ನಿವೇಶನಂ ಚ ಏತದ್ವಯಂ ಮಿಲಿತಂ ಸತ್ ಕಾರಕತಯಾ ಸಮಸ್ತಶಾಸ್ತ್ರಾಂಗತ್ವಂ ಸೂತ್ರಕಾರೇಣಾಂಗೀಕೃತಮ್ ಇತ್ಯಸ್ಯೈವ ಸೂಚಕಂ, ನ ತು ಜ್ಞಾಪಕತಯಾ ಆದಿಸೂತ್ರಾಂಗತ್ವಸ್ಯಾಪಿ ಸೂತ್ರಕಾರಾಂಗೀಕೃತತ್ವಸ್ಯ । 'ಜ್ಞಾಪಕತಯಾ ಸೂತ್ರಸ್ಯ' ಇತ್ಯುಕ್ತಿಸ್ತು ದೃಷ್ಟಾಂತಕಥನಾಯಾನುವಾದ ಏವ ಇತಿ ಜ್ಞಾತವ್ಯಮ್ । ಸಕಲಸೂತ್ರಕಾರ್ಯೈರೇವಮೇವೇತಿ ॥ ಅನೇನ 'ಸರ್ವಶಾಸ್ತ್ರಸ್ಯ' ಇತ್ಯೇತತ್ ಪ್ರಕಾರಾಂತರೇಣ ಯೋಜಿತಮಿತಿ ದ್ರಷ್ಟವ್ಯಮ್ ।

ಅಥವಾ ಜ್ಞಾಪಕತಯಾ ಆದಿಸೂತ್ರಾಂಗತ್ವವನ್ನು ಅಂಗೀಕರಿಸಿರುತ್ತಾನೆ. ಈ ವಿಷಯದಲ್ಲಿ ಸೂತ್ರಕಾರರ ಅಂಗೀಕಾರವೆಂಬ ಲಿಂಗವನ್ನು ಸೂಚನೆ ಮಾಡಬೇಕಾಗಿಲ್ಲ. ಕಾರಕತಯಾ ಸಮಸ್ತಶಾಸ್ತ್ರೋಪಯೋಗಿತ್ವವಿಷಯದಲ್ಲಷ್ಟೇ ಸೂತ್ರಕಾರಾಂಗೀಕಾರಲಿಂಗವನ್ನು ಸೂಚಿಸಬೇಕು. ಆದ್ದರಿಂದ 'ಬೇರೆ ಪರ್ಯಾಯಶಬ್ದಗಳನ್ನು ಪರಿತ್ಯಾಗಮಾಡಿ' ಎಂಬುದಕ್ಕೆ ಅಧಿಕಾರ್ಯಾದಿ ಪ್ರತಿಪಾದಕವಾದ ಶಬ್ದಾಂತರಗಳನ್ನು ಪ್ರತಿಪಾದನೆ ಮಾಡಿ ಎಂದಷ್ಟೇ ಅರ್ಥ. ''ಕ್ರಮಾಂತರಂ'' ಎಂಬುದಕ್ಕೆ ಕೊನೆಯಲ್ಲಿ ನಿವೇಶಮಾಡುವಿಕೆ ಎಂದರ್ಥ. ಹೀಗೆ ಹೇಳಿದ್ದರಿಂದ ಬೇರೆ ಪರ್ಯಾಯಶಬ್ದಗಳನ್ನು ಪರಿತ್ಯಾಗ ಮಾಡಿ ಕೊನೆಯಲ್ಲಿ ಉಲ್ಲೇಖ ಮಾಡದೇ ಪ್ರಾರಂಭದಲ್ಲೇ ಉಲ್ಲೇಖಮಾಡಿರುವಿಕೆ ಎಂಬೆರಡು ಹೇತುಗಳು ಮಿಲಿತವಾಗಿ ಕಾರಕತಯಾ ಸಮಸ್ತಶಾಸ್ತ್ರಕ್ಕೆ ಅಂಗಗಳಾಗಿವೆ. ಈ ವಿಷಯದಲ್ಲಿ 'ಸೂತ್ರಕಾರೇಣ ಅಂಗೀಕೃತತ್ವ' ಎಂಬ ಲಿಂಗವು ಸೂಚಕವಾಗಿದೆ ಹೊರತು ಜ್ಞಾಪಕತಯಾ ಆದಿಸೂತ್ರಾಂಗತ್ವವಿಷಯದಲ್ಲಿ ಸೂತ್ರಕಾರೇಣ ಅಂಗೀಕೃತತ್ವಲಿಂಗವಿದೆ ಎಂದು ತಿಳಿಯಬಾರದು. ಹಾಗಾದರೆ ಟೀಕೆಯಲ್ಲಿ ಜ್ಞಾಪಕತಯಾ ಸೂತ್ರಸ್ಯ'' ಎಂದೇಕೆ ಹೇಳಿದ್ದಾರೆ? ಎಂದರೆ ಕೇವಲ ದೃಷ್ಟಾಂತಕ್ಕೋಸ್ಕರ ಅನುವಾದ ಮಾಡಿದ್ದಾರೆಂದು ತಿಳಿಯಬೇಕು. ''ಸಕಲಸೂತ್ರಕಾರ್ಯೈರೇವಮೇವ'' ಹೀಗೆ ಹೇಳಿದ್ದರಿಂದ ಸರ್ವಶಾಸ್ತ್ರಸ್ಯ ಎಂಬುದಕ್ಕೆ ಮತ್ತೊಂದು ಪ್ರಕಾರದಲ್ಲಿ ಯೋಜನೆ ಮಾಡಿದ್ದಾರೆಂದು ಕೂಡ ತಿಳಿಯಬೇಕು.

# ಸುಧಾಪರಿಮಳಸಾರ

ಹಿಂದೆ ಹೇಳಿದಂತೆ ಓಂಕಾರ ಮತ್ತು ಅಥಶಬ್ದಗಳು ಮಾಂಗಲಿಕ ಎಂದು ಹೇಳುವುದಾದರೆ ಈ ಎರಡು ಶಬ್ದಗಳು ವಿಘ್ನನಾಶಕ್ಕೆ ಕಾರಣ ಎಂದು ಹೇಳುವುದರಿಂದ ಇವು ಸಮಸ್ತಸೂತ್ರಗ್ರಂಥದ ಅಂಗ ಎಂದು ಹೇಳ-ಬೇಕಾಗುತ್ತದೆ. ಹೀಗೆ ಹೇಳಿದರೆ ಇವು ಮೊದಲನೇ ಸೂತ್ರದ ಅವಯವವಾಗುವುದಿಲ್ಲ. ಓಂಕಾರಾಥಶಬ್ದಗಳು ಪ್ರಥಮಸೂತ್ರದ ಅವಯವವಾಗದಿದ್ದರೆ ಪ್ರಥಮಸೂತ್ರಕ್ಕೆ ನ್ಯೂನತೆ ಬರುತ್ತದೆ. ಏಕೆಂದರೆ ಓಂಕಾರವು ವಿಷಯ-ವನ್ನೂ, ಅಥಶಬ್ದವು ಅಧಿಕಾರವನ್ನೂ ತಿಳಿಸುತ್ತಿವೆ. ಅಧಿಕಾರ್ಯಾದಿಗಳನ್ನು ತಿಳಿಸುವ ಶಬ್ದ ಮತ್ತೊಂದು ಈ ಸೂತ್ರದಲ್ಲಿ ಇಲ್ಲ. ಆದರೆ ವಿಷಯಾದಿಗಳನ್ನು ತಿಳಿಸುವುದು ಆತ್ಯಗತ್ಯ. ಇಲ್ಲದಿದ್ದರೆ ಸೂತ್ರಗ್ರಂಥಕ್ಕೆ ವಿಷಯಾದಿಗಳು ಇಲ್ಲ ಎಂದು ಅನಾರಂಭಣೀಯ ಎಂಬ ಶಂಕೆ ಪರಿಹಾರವಾಗದು. ಈ ಶಂಕೆ ಪರಿಹಾರ ಮಾಡಲು ಅನಿವಾರ್ಯವಾಗಿ ವಿಷಯಾದಿಗಳನ್ನು ತಿಳಿಸಬೇಕು. ಅದನ್ನು ಈ ಓಂಕಾರಾಥಶಬ್ದಗಳು ತಿಳಿಸುತ್ತದೆ, ಎಂದೇ ಹೇಳಬೇಕಾದ್ದರಿಂದ ಪ್ರಥಮಸೂತ್ರದ ಅವಯವ ಆಗಲೇಬೇಕು. ಸಮಸ್ತಶಾಸ್ತ್ರಾಂಗವಾಗಿ ಪ್ರಯುಕ್ತವಾದ ಈ ಎರಡು ಶಬ್ದಗಳು ಪ್ರಥಮಸೂತ್ರಾವಯವ ಆಗಲು ಹೇಗೆ ಸಾಧ್ಯ? ಎಂಬ ಆಕ್ಷೇಪ.

ತಾರಶಬ್ದದ ನಿಷ್ಪತ್ತಿ 'ತರಂತಿ ಅನೇನ ಇತಿ ತಾರಃ' ಎಂದು. ಯಾವುದರಿಂದ ಅನಿಷ್ಟಗಳ ಸಮೂಹವನ್ನು ದಾಟಲು ಸಾಧ್ಯವೋ ಅದು ತಾರ. ಅಂದರೆ ಓಂಕಾರ. 'ತಾರಶ್ಚ ಅಥಶ್ಚ ತಾರಾಥೌ । ತಯೋಃ ಮೂಲತ್ವಂ ತಾರಾಥಮೂಲತ್ವಂ' ಎಂದು ವಿಗ್ರಹ. ಮೂಲ ಎಂದರೆ ಆದಿ ಎಂದರ್ಥ, ಎರಡೂ ಶಬ್ದಗಳೂ ಮೊದಲು ಇರುವುದು ಹೇಗೆ ಎಂದರೆ ಕ್ರಮವಾಗಿ ಎಂದರ್ಥ. ಒಟ್ಟು ತಾತ್ಪರ್ಯ ಆದಿಯಲ್ಲಿ ಪ್ರಯೋಗಿಸಿದ ತಾರ ಮತ್ತು ಅಥಶಬ್ದಗಳು ಎಂದು ಅನುವ್ಯಾಖ್ಯಾನಮೂಲದ ಅರ್ಥ. ಮೂಲದ ತತ್ರಶಬ್ದಕ್ಕೆ ಪ್ರಥಮಸೂತ್ರದಲ್ಲಿ ಎಂದರ್ಥ ಅವಯವತಯಾ ಎಂದಿಟ್ಟುಕೊಳ್ಳಬೇಕು. ಸರ್ವಶಾಸ್ತ್ರಸ್ಯ ಅಂಗತಯಾ ಎಂದಿಟ್ಟುಕೊಳ್ಳಬೇಕು. 'ಇಷ್ಯತೇ' ಯಾರಿಂದ? ಎಂಬ ಪ್ರಶ್ನೆಗೆ 'ಸೂತ್ರಕೃತಾ' ಎಂದು ಶೇಷವಿಟ್ಟುಕೊಳ್ಳಬೇಕು.

ಹಿಂದೆ ನಿರೂಪಿಸಿದಂತೆ ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದಲ್ಲಿ, ಅವಯವಗಳಾಗಿ, ಅಂದರೆ ಅಧಿಕಾರ್ಯಾದಿಪ್ರತಿಪಾದನೆ ಮಾಡಲು ಪ್ರಯುಕ್ತವಾಗಿವೆ. ಆದರೆ ಈ ಶಬ್ದಗಳನ್ನು ಕೇಳುವುದರಿಂದಲೇ ಅನೇಕ ಅನಿಷ್ಟಗಳ ಪರಿಹಾರ ಆಗುತ್ತದೆ. ಮಂಗಲವಾದ್ಯಗಳಾದ ಶಂಖ, ವೀಣೆ, ವೇಣುನಾದಗಳ ಶ್ರವಣದಿಂದ ದುರಿತಪರಿಹಾರವಾಗುವಂತೆ. ಆದುದರಿಂದ ಆದಿಯಲ್ಲಿ ಪ್ರಯುಕ್ತವಾದ ಈ ಎರಡು ಶಬ್ದಗಳನ್ನು ಕೇಳುವುದರಿಂದ ಸಮಸ್ತವಿಘ್ನಪರಿಹಾರವಾಗುವ ಪ್ರಯುಕ್ತ ಸಮಸ್ತಶಾಸ್ತ್ರದ ನಿರ್ವಿಘ್ನಪರಿಸಮಾಪ್ತಿಗೆ ಕಾರಣವೂ ಆಗುತ್ತವೆ. ಒಂದೇ ಕೆಲಸ ಎರಡು ಪ್ರಯೋಜನಗಳನ್ನು ಉಂಟುಮಾಡುವುದು ಲೋಕದಲ್ಲಿ ಕಂಡಿದೆ. ಪೂರ್ಣಕುಂಭದಲ್ಲಿ ನಿತ್ಯದ ಉಪಯೋಗಕ್ಕೆ ನೀರು ತರುತ್ತಿದ್ದರೆ, ಅದರ ದರ್ಶನದಿಂದ ಎದುರಿಗೆ ಬಂದವರ ಕೆಲಸ ಪೂರ್ಣವಾಗುತ್ತದೆ. ಅದು ಮಂಗಲ ಎಂದು ಹೇಳುತ್ತಾರೆ. ಹೀಗೆ ಪ್ರಥಮಸೂತ್ರದಲ್ಲಿ ಅಧಿಕಾರಿ-ವಿಷಯಗಳನ್ನು ತಿಳಿಸಲು ಅವಯವವಾಗಿ

ಪ್ರಯುಕ್ತವಾಗಿದ್ದರೂ ಕೂಡ, ಸಮಸ್ತಶಾಸ್ತ್ರದ ನಿರಂತರಾಯಸಮಾಪ್ತಿಗೆ ಕಾರಣವಾದ್ದರಿಂದ ಸಮಸ್ತಶಾಸ್ತ್ರಾಂಗವೂ ಆಗಿವೆ ಈ ಎರಡು ಶಬ್ದಗಳು.

ಹೀಗೆ ತಾರಾಥಶಬ್ದಗಳು ಎರಡೂ ರೀತಿಯಲ್ಲಿ ಉಪಯುಕ್ತವಾಗುತ್ತವೆ ಎಂಬ ವಿಷಯ ಸೂತ್ರಕಾರರ ಅಭಿಪ್ರಾಯವೇ ಆಗಿದೆ. ಇದಕ್ಕೆ ಗಮಕ ಏನು? ಅನ್ನುವುದನ್ನು ಸೂಚಿಸುವುದಕ್ಕಾಗಿ ಆಚಾರ್ಯರು ತಾರಾಥೌ ಎಂದು ಹೇಳುವ ಬದಲು ತಾರಾಥಮೂಲತ್ವಂ ಎಂದು ಹೇಳಿದ್ದಾರೆ. ಈ ಎರಡು ಶಬ್ದಗಳು ಹಿಂದೆ ವಿವರಿಸಿದಂತೆ ಆದಿಸೂತ್ರಕ್ಕೆ ಜ್ಞಾಪಕತಯಾ ಉಪಯೋಗಿ. ಅಂದರೆ ಅಧಿಕಾರ್ಯಾದಿಗಳನ್ನು ತಿಳಿಸುತ್ತ ಆದಿಸೂತ್ರದಲ್ಲಿ ಪ್ರಯುಕ್ತವಾದ ಬೇರೆ ಪದಾರ್ಥಗಳೊಂದಿಗೆ ಅನ್ವಯ ಹೊಂದಿ ಜ್ಞಾನವನ್ನುಂಟುಮಾಡುತ್ತದೆ. ಮತ್ತು ಸಮಸ್ತಶಾಸ್ತ್ರಕ್ಕೆ ನಿರ್ವಿಘ್ನಪರಿಸಮಾಪ್ತಿಕಾರಣವಾಗಿ ಉಪಯೋಗಿ ಆಗುತ್ತದೆ. ಅಂದರೆ ಸಮಸ್ತಶಾಸ್ತ್ರದ ಸಮಾಪ್ತಿಗೆ ಪ್ರತಿಬಂಧಕವಾದ ವಿಘ್ನಧ್ವಂಸವನ್ನು ಉಂಟುಮಾಡುತ್ತದೆ ಎಂದು ಕಂಡಿದ್ದೇವೆ. ಒಂದು ವೇಳೆ ಕೇವಲ ವಿಘ್ನಧ್ವಂಸಕ್ಕಾಗಿ ಮಾತ್ರ ಈ ಎರಡು ಶಬ್ದಗಳು ಎಂದು ಸೂತ್ರಕಾರರ ಅಭಿಪ್ರಾಯವಾಗಿದ್ದರೆ ಆಗ ಮಂಗಲವಾಚಿಯಾದ ಬೇರೆ ಶಬ್ದಗಳನ್ನು ಭದ್ರಂ, ಮಂಗಲಂ ಮುಂತಾದ ಶಬ್ದಗಳನ್ನು ಬಳಸಬಹುದಿತ್ತು. ಅದನ್ನು ಬಿಟ್ಟು ಇವೇ ಶಬ್ದಗಳನ್ನು ಅಂದರೆ ವಿಷಯ ಮತ್ತು ಅಧಿಕಾರಿಸೂಚಕಗಳಾದ ಓಂ ಮತ್ತು ಅಥಶಬ್ದಗಳನ್ನೇ ಬಳಸಿರುವುದರಿಂದ ವಿಘ್ನಧ್ವಂಸಕ್ಕೆ ಭಿನ್ನವಾದ ಮತ್ತೊಂದು ಪ್ರಯೋಜನವೂ ಇದೆ ಎಂದು ಅರ್ಥವಾಗುತ್ತದೆ. ಆದುದರಿಂದ ಇವು ಪ್ರಥಮಸೂತ್ರ ಅವಯವವೂ ಆಗಿವೆ. ಹಾಗೆಯೇ ಒಂದು ವೇಳೆ ಪ್ರಥಮಸೂತ್ರ ಅವಯವಮಾತ್ರ ಎಂದು ಸೂತ್ರಕಾರರ ಅಭಿಪ್ರಾಯ ಆಗಿದ್ದಿದ್ದರೆ, ಆಗ ಇದೇ ಕ್ರಮದಲ್ಲಿ ಅಂದರೆ ಮೊದಲಿಗೆ ಓಂ ಮತ್ತು ಅಥಶಬ್ದಗಳನ್ನು ಪ್ರಯೋಗಿಸುವ ಅಗತ್ಯ ಇರಲಿಲ್ಲ. ಮಧ್ಯೆಯೇ ಅಥವಾ ಕೊನೆಗೆ ಪ್ರಯೋಗಿಸಬಹುದಿತ್ತು. ಹಾಗೆ ಮಾಡದೇ ಮೊದಲಿಗೆ ಈ ಎರಡು ಶಬ್ದಗಳನ್ನು ಬಳಸಿರುವುದರಿಂದ ಗೊತ್ತಾಗುತ್ತದೆ ಈ ಎರಡು ಶಬ್ದಗಳಿಗೆ ವಿಷಯ-ಅಧಿಕಾರಿಗಳನ್ನು ತಿಳಿಸುವುದಷ್ಟೇ ಪ್ರಯೋಜನವಲ್ಲ ಮತ್ತೇನೋ ಇದೆ ಎಂದು. ಆದುದರಿಂದ ಸೂತ್ರಕಾರರ ಸೂತ್ರರಚನೆಯ ಕ್ರಮ ಮತ್ತು ಶಬ್ದಪ್ರಯೋಗಗಳು ಈ ಎರಡು ಶಬ್ದಗಳಿಗೆ ಪ್ರಥಮಸೂತ್ರಾವಯವತ್ವ ಮತ್ತು ಸಮಸ್ತಶಾಸ್ತ್ರಾಂಗತ್ವವಿದೆ ಎನ್ನುವುದಕ್ಕೆ ಗಮಕಗಳಾಗಿವೆ.

ಇಲ್ಲೊಂದು ಶಂಕೆ ಬರಬಹುದು. ಸೂತ್ರಕಾರರು ಓಂ ಮತ್ತು ಅಥಶಬ್ದಗಳನ್ನು ಆದಿಯಲ್ಲಿ ಪ್ರಯೋಗಮಾಡಿದ್ದಾರೆ. ಹೌದು. ಆದರೆ ಇದು ಕೇವಲ ಆಕಸ್ಮಿಕ. ಹೊರತು ಉದ್ದೇಶಪೂರ್ವಕವಾದುದಲ್ಲ ಎಂದು. ಆದರೆ ಇದು ಸರಿಯಲ್ಲ. ಎಲ್ಲಾ ಸೂತ್ರಕಾರರೂ ಧರ್ಮಸೂತ್ರ ಕಲ್ಪಸೂತ್ರ ಎಲ್ಲಾ ಸೂತ್ರಗ್ರಂಥಗಳಲ್ಲಿಯೂ ಇದೇ ಶಬ್ದವನ್ನು ಆದಿಯಲ್ಲೇ ಪ್ರಯೋಗಿಸಿದ್ದು ಕಂಡಿದೆ. ಆದುದರಿಂದ ಉದ್ದೇಶಪೂರ್ವಕವಾಗಿಯೇ ಈ ಮಹತ್ವದ ವಿಷಯವನ್ನು ಸೂಚಿಸುವುದಕ್ಕೆ ಓಂ ಅಥ ಶಬ್ದಗಳ ಪ್ರಯೋಗ ಈ ರೀತಿ ನಡೆದಿದೆ. ಒಬ್ಬರ ಪ್ರವೃತ್ತಿ ಯಾದೃಚ್ಛಿಕವಾಗಿರಬಹುದು. ಆದರೆ ಅನೇಕಪ್ರಜ್ಞಾವಂತರ ಪ್ರವೃತ್ತಿ ಆಕಸ್ಮಿಕವಾಗಲಾರದಷ್ಟೇ.

ಈ ಅನುವ್ಯಾಖ್ಯಾನದ ಭಾಗದಿಂದ "ಅಥಶಬ್ದೋ ಮಂಗಲಾರ್ಥಃ" ಎಂಬ ಭಾಷ್ಯವನ್ನು ವಿವರಿಸಿದಂತೆ ಆಯಿತು.

## ನೆನೆಪಿಡಿ

* ಓಂಕಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವಗಳಾಗಿವೆ. ಅಷ್ಟೇ ಅಲ್ಲ ಸರ್ವಶಾಸ್ತ್ರದ ಅಂಗಗಳೂ ಆಗಿವೆ.

* ಶಂಖ, ವೀಣಾ, ವೇಣುಗಳ ಧ್ವನಿಯು ಶ್ರವಣದಿಂದಲೇ ಹೇಗೆ ಮಂಗಲವನ್ನುಂಟು ಮಾಡುತ್ತವೋ ಅದರಂತೆ ಓಂ, ಅಥ ಶಬ್ದಗಳ ಶ್ರವಣ ಮಾತ್ರದಿಂದಲೇ ವಿಘ್ನಗಳೆಲ್ಲ ಪರಿಹಾರವಾಗಿ ಗ್ರಂಥಪರಿಸಮಾಪ್ತಿಯು ಉಂಟಾಗುತ್ತದೆ.

* 'ತರಂತಿ ಅನೇನ ಅನಿಷ್ಟನಿಚಯಮ್' ಎಂಬ ವ್ಯುತ್ಪತ್ತಿಯಿಂದ ವಿಘ್ನಗಳನ್ನು ಪರಿಹರಿಸುವ ಕಾರಣದಿಂದಲೇ ಓಂಕಾರಕ್ಕೆ ತಾರ ಎನ್ನುತ್ತಾರೆ.

* ಪ್ರತಿಯೊಬ್ಬ ಸೂತ್ರಕಾರರೂ ಕೂಡ ಪ್ರಾರಂಭದಲ್ಲಿ ಓಂ, ಅಥಶಬ್ದಗಳನ್ನು ನಿಯಮೇನ ಪ್ರಯೋಗಿಸುತ್ತಾರೆ. ಆದರೆ ಬೇರೆ ವ್ಯಾಖ್ಯಾನಕಾರರು ಇದರ ವೈಶಿಷ್ಟ್ಯವನ್ನು ಎತ್ತಿ ತೋರಿಸಿರುವುದಿಲ್ಲ.

* ಭೇದವೆಂಬ ಪ್ರಮೇಯಕ್ಕೆ ಗುಣಪೂರ್ಣಕತ್ವವೇ ಸಾಧಕವಾಗುತ್ತದೆ. ಆದರೆ ಜಿಜ್ಞಾಸ್ಯತ್ವೇನ ಶ್ರುತನಾದವನು ಜೀವನಿಗಿಂತ ಭಿನ್ನನಾಗಿದ್ದಾನೆ ಎಂಬ ವಿಷಯದಲ್ಲಿ ಓಂಕಾರ ಹಾಗೂ ಬ್ರಹ್ಮಶಬ್ದಗಳೆರಡೂ ಸಾಧಕಗಳಾಗುತ್ತವೆ.

* ಬ್ರಹ್ಮಶಬ್ದವು ಹೇಗೆ ವಿಷಯೋಪಪಾದಕವಾಗಿದೆಯೋ ತತ್ಸಮಾನಕಕ್ಷೆಯಲ್ಲಿ ಓಂಕಾರವೂ ಕೂಡ ವಿಷಯೋಪಪಾದಕವಾಗಿದೆ.

* ಓಂ ಮತ್ತು ಅಥಶಬ್ದಗಳು ಕಾರಕತಯಾ ಸಮಸ್ತಶಾಸ್ತ್ರಕ್ಕೆ ಅಂಗಗಳಾಗಿವೆ; ಜ್ಞಾಪಕತಯಾ ಆದಿಸೂತ್ರಕ್ಕೆ ಅಂಗಗಳಾಗಿವೆ.

* ಓಂ ಮತ್ತು ಅಥ ಈ ಎರಡೂ ಶಬ್ದಗಳು ಮಾಂಗಲಿಕಗಳಾಗಿದ್ದರೂ ಕೂಡ ಓಂ ಎಂಬ ಶಬ್ದದಲ್ಲಿ ಹೆಚ್ಚಿನ ಮಾಂಗಲಿಕತ್ವವಿದೆ. ಆದ್ದರಿಂದ ಮೊದಲು ಓಂ ಎಂದುಚ್ಚರಿಸಿ ಅನಂತರ ಅಥ ಎಂದಿದ್ದಾರೆ.

## ಅಥಶಬ್ದವು ಮಂಗಲಾರ್ಥಕವೆಂದಾಗ ವಾಚಸ್ಪತಿಮಿಶ್ರನ ಆಕ್ಷೇಪ

**ಶ್ರೀಮನ್ನ್ಯಾಯಸುಧಾ – ಅತ್ರ ಯತ್ಪರೇಷಾಂ ದೂಷಣಂ 'ಮಂಗಳಸ್ಯ ವಾಕ್ಯಾರ್ಥೇ ಸಮನ್ವಯಾಭಾವಾತ್' ಇತಿ । ತಥಾ ಹಿ । ಪದಾರ್ಥ ಏವ ಹಿ ವಾಕ್ಯಾರ್ಥೇ ಸಮನ್ವೀಯತೇ । ಸ ಚ ವಾಚ್ಯೋ ವಾ ಲಕ್ಷ್ಯೋ ವಾ । ನ ಚೇಹ ಮಂಗಲಮ್ ಅಥಶಬ್ದಸ್ಯ ವಾಚ್ಯಂ ಲಕ್ಷ್ಯಂ ವಾ । ಕಿಂತು ಮೃದಂಗಧ್ವನಿವದ್ ಅಥಶಬ್ದಸ್ಯ ಕಾರ್ಯಮ್ । ನ ಚ ಕಾರ್ಯಜ್ಞಾಪ್ಯಯೋರ್ವಾಕ್ಯಾರ್ಥೇ ಸಮನ್ವಯಃ ಶಾಬ್ದೇ ವ್ಯವಹಾರೇ ದೃಷ್ಟಃ ।**

ಈ ಸಂದರ್ಭದಲ್ಲಿ ಮಾಯಾವಾದಿಗಳು ಹೀಗೆ ದೋಷ ಹೇಳುತ್ತಾರೆ – 'ಮಂಗಲಕ್ಕೆ ವಾಕ್ಯಾರ್ಥದಲ್ಲಿ ಸಮನ್ವಯಹೊಂದಲು ಸಾಧ್ಯವಿಲ್ಲ' ಎಂದು. ಅದು ಹೀಗೆ – ವಾಕ್ಯಾರ್ಥದಲ್ಲಿ ಪದಾರ್ಥಕ್ಕೆ ಮಾತ್ರ ಅನ್ವಯವಿರುತ್ತದೆ. ಆ ಪದಾರ್ಥವು ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥವೆಂದು ಎರಡು ವಿಧ. ಪ್ರಕೃತ ಮಂಗಲ ಎಂಬುದು ಅಥಶಬ್ದದ ವಾಚ್ಯಾರ್ಥವೂ ಅಲ್ಲ; ಲಕ್ಷ್ಯಾರ್ಥವೂ ಅಲ್ಲ. ಮತ್ತೇನೆಂದರೆ ಮೃದಂಗಾದಿ ಧ್ವನಿಗಳಂತೆ ಮಾಂಗಲಿಕವಾಗಿದೆ. ಶಬ್ದದಿಂದ ಉಂಟಾಗುವ ಕಾರ್ಯವಾಗಲೀ ಅದರಿಂದ ದ್ಯೋತ್ಯವಾದ ವಸ್ತುವಾಗಲೀ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದಲು ಸಾಧ್ಯವಿಲ್ಲ. ಹೀಗೆ ಶಾಬ್ದವ್ಯವಹಾರದಲ್ಲಿ ಕಂಡು ಬರುತ್ತಿದೆ.

## ಅಥಶಬ್ದವು ಮಂಗಲಾರ್ಥಕವೆಂದಾಗ ವಿವರಣಕಾರನ ಆಕ್ಷೇಪ

**ಶ್ರೀಮನ್ನ್ಯಾಯಸುಧಾ – ಅಸ್ತು ವಾ ಮಂಗಲಸ್ಯ ಪದಾರ್ಥತ್ವಮ್ । ತಥಾಽಪಿ ನ ವಾಕ್ಯಾರ್ಥೇ ಸಮನ್ವಯಃ । ತಥಾ ಹಿ । ನ ತಾವತ್ ಮಂಗಲಂ ಬ್ರಹ್ಮಜಿಜ್ಞಾಸಾಯಾಃ ಕರ್ತೃಕರ್ಮಕರಣಭಾವೇನ ವಾಕ್ಯಾರ್ಥೇ ಅನ್ವೇತಿ । ಕರ್ತ್ರಾದ್ಯನ್ಯತಮಭಾವೇ ಪ್ರಮಾಣಾಭಾವಾತ್ । ಕಾರಕಾಂತರಾಣಾಂ ವಿದ್ಯಮಾನತ್ವಾಚ್ಚ ।**

**ನಾಪಿ ಸಾಮಾನಾಧಿಕರಣ್ಯೇನ ಅನ್ವಯಃ, ಜಿಜ್ಞಾಸಾ ಮಂಗಲಮ್ ಇತಿ ಪ್ರಶಂಸಾಪರತಯಾ ಅರ್ಥವಾದತ್ವಪ್ರಸಂಗಾತ್ ಇತಿ ।**

ಅಥವಾ ಮಂಗಲವು ಪದದ ಅರ್ಥವೆಂದೇ ಒಪ್ಪೋಣ; ಆದರೂ ವಾಕ್ಯಾರ್ಥದಲ್ಲಿ ಇದಕ್ಕೆ ಅನ್ವಯವು ಯುಕ್ತವಾಗುವುದಿಲ್ಲ. ಅದು ಹೀಗೆ – ಮಂಗಲವು ಕೇವಲ ಬ್ರಹ್ಮ-ಜಿಜ್ಞಾಸೆಗೆ ಕರ್ತೃಕರ್ಮಕರಣಭಾವದಿಂದ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದು-ವುದಿಲ್ಲ. ಮಂಗಲವು ಕರ್ತೃವಾಗಿದೆ. ಅಥವಾ ಕರ್ಮಭಾವ ಹೊಂದಿದೆ ಅಥವಾ ಕರಣ-ಭಾವ ಹೊಂದಿದೆ ಎಂದು ಹೇಳಲು ಸಾಧ್ಯವಿಲ್ಲ. ಕರ್ತ್ರಾದಿಗಳಲ್ಲಿ ಇದೂ ಕೂಡ ಒಂದಾಗಿದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ಮತ್ತು ಮಂಗಲ ಎಂಬುದು ಕರ್ತೃ-ವಾಗಿದೆ ಮತ್ತು ಬೇರೆ ಕಾರಕಗಳು ಇರುತ್ತವೆ. ಸಾಮಾನಾಧಿಕರಣ್ಯೇನ ಅನ್ವಯವನ್ನು ಹೇಳಿದರೆ 'ಜಿಜ್ಞಾಸಾ ಮಂಗಲಮ್' ಎಂದು ಹೇಳಿದಂತಾಗುತ್ತದೆ. ಇದು ಪ್ರಶಂಸೆಯನ್ನೇ ಮಾಡುತ್ತಿರುವುದರಿಂದ ಪ್ರಥಮಸೂತ್ರವು ಅರ್ಥವಾದವಾಗುತ್ತದೆ.

## ತತ್ರ ತಾರಾಥಮೂಲತ್ವಮ್ ಎಂಬ ಅನುವ್ಯಾಖ್ಯಾನದಿಂದಲೇ ಅದ್ವೈತಮತನಿರಾಕರಣೆ

**ಶ್ರೀಮನ್ನ್ಯಾಯಸುಧಾ – ತದೇತೇನಾಪಾಸ್ತಂ ಭವತಿ । ಅಸ್ಮಾಭಿರಪಿ ಆನಂತ-ರ್ಯಾಭಿಧೇಯಃ ಅಥಶಬ್ದಃ ಶ್ರುತ್ಯಾ ಮಂಗಲಪ್ರಯೋಜನ(ಕ) ಇತ್ಯಂಗೀ-ಕಾರಾತ್ ।**

'ತತ್ರ ತಾರಾಥಮೂಲತ್ವಮ್' ಎಂಬ ಅನುವ್ಯಾಖ್ಯಾನದಿಂದ ಮಾಯಾವಾದಿಗಳ ಈ ದೂಷಣವನ್ನು ನಿರಾಕರಣೆ ಮಾಡಿದಂತಾಗಿದೆ. ಅದು ಹೀಗೆ – ಅಥಶಬ್ದಕ್ಕೆ ಮಂಗಲವು ವಾಚ್ಯಾರ್ಥವಾಗಿದೆ; ಅಥವಾ ಲಕ್ಷ್ಯಾರ್ಥವಾಗಿದೆ ಎಂಬುದೇ ನಮ್ಮ ಅಭಿಪ್ರಾಯವಲ್ಲ. ಅನಂತರ ಎಂಬರ್ಥವನ್ನೇ ಅಥಶಬ್ದವು ಹೇಳುತ್ತದೆ. ಆದರೆ ಶ್ರವಣಮಾತ್ರದಿಂದ ಮಂಗಲ-

ಫಲವನ್ನು ಉಂಟುಮಾಡುತ್ತದೆಂದು ಅಂಗೀಕರಿಸುತ್ತೇವೆ. ಆದ್ದರಿಂದ ಮಾಯಾವಾದಿಗಳು ಮಾಡಿದ ಆಕ್ಷೇಪವು ನಮಗೆ ತಟ್ಟುವುದೇ ಇಲ್ಲ.

## ಕಾರ್ಯಕ್ಕೆ ಅಥವಾ ದ್ಯೋತ್ಯಕ್ಕೆ ವಾಕ್ಯಾರ್ಥದಲ್ಲಿ ಅನ್ವಯವಿಲ್ಲ

ಪರಿಮಳ – ಅತ್ರೇತಿ ॥ 'ಅಥಪದಸ್ಯ ಮಂಗಲಾರ್ಥತ್ವೇ' ಇತ್ಯರ್ಥಃ । ಪರೇಷಾಂ = ಮಾಯಿನಾಮ್ । ಪರಭಾಷ್ಯವಾಕ್ಯಮಾಹ – ಮಂಗಲಸ್ಯೇತಿ ॥ ಕಥಂ ಸಮನ್ವಯಾಭಾವಃ? ಇತ್ಯತೋ ವಾಚಸ್ಪತ್ಯುಕ್ತವ್ಯಾಖ್ಯಾನಪ್ರಕಾರಮಾಹ – ಪದಾರ್ಥ ಏವೇತಿ ॥ ಮೃದಂಗಧ್ವನಿವತ್ ಇತಿ ॥ 'ಮೃದಂಗಧ್ವನೇಃ ಯಥಾ ಮಂಗಲಂ ಫಲಂ ತಥಾಽಥಶಬ್ದಸ್ಯ ಫಲಮ್' ಇತ್ಯರ್ಥಃ । ಕಾರ್ಯಜ್ಞಾಪ್ಯಯೋರಿತಿ ॥ ಕಾರ್ಯಂ = ಫಲಮ್ । ಜ್ಞಾಪ್ಯಂ ದ್ಯೋತ್ಯಮುಚ್ಯತೇ ।

''ಅತ್ರ''– ಅಥಪದವು ಮಂಗಲಾರ್ಥಕವೆಂದು ಹೇಳುವ ಸಂದರ್ಭದಲ್ಲಿ. ''ಪರೇಷಾಂ'' – ಮಾಯಾವಾದಿಗಳ. ಶಂಕರಭಾಷ್ಯದ ವಾಕ್ಯವನ್ನು ''ಮಂಗಲಸ್ಯ'' ಎಂದು ಹೇಳಿದ್ದಾರೆ. ಮಂಗಲವು ವಾಕ್ಯಾರ್ಥದಲ್ಲಿ ಏಕೆ ಅನ್ವಯವನ್ನು ಹೊಂದುವುದಿಲ್ಲ? ಎಂಬ ಪ್ರಶ್ನೆಗೆ ವಾಚಸ್ಪತಿಮಿಶ್ರನು ಶಂಕರಭಾಷ್ಯಕ್ಕೆ ಮಾಡಿದ ವ್ಯಾಖ್ಯಾನದ ಪ್ರಕಾರವನ್ನು ''ಪದಾರ್ಥ ಏವ'' ಎಂಬುದರಿಂದ ತಿಳಿಸುತ್ತಿದ್ದಾರೆ. ''ಮೃದಂಗಧ್ವನಿವತ್'' ಮೃದಂಗದ ಧ್ವನಿಯು ಹೇಗೆ ಮಂಗಲಫಲಕವೋ ಅದರಂತೆ ಅಥಶಬ್ದವೂ ಕೂಡ ಮಂಗಲಫಲಕವಾಗಿದೆ ಎಂದರ್ಥ. ''ಕಾರ್ಯಜ್ಞಾಪ್ಯಯೋಃ'' ಕಾರ್ಯಂ ಎಂದರೆ ಫಲ; ಜ್ಞಾಪ್ಯ ಎಂದರೆ ದ್ಯೋತ್ಯ ಎಂದರ್ಥ.

ವಿವರಣೆ – ಅಥಶಬ್ದವು ಮಂಗಲದಾಯಕವಾಗಿದೆ ಎಂಬುದಾಗಿ 'ತತ್ರ ತಾರಾಥಮೂಲತ್ವಮ್' ಎಂಬ ಅನುವ್ಯಾಖ್ಯಾನ ಪದ್ಯದಿಂದ ಶ್ರೀಮದಾಚಾರ್ಯರು ತಿಳಿಸಿದ್ದಾರೆ. ಮಂಗಲಾರ್ಥಕವೆಂದರೆ ಮಂಗಲಪ್ರಯೋಜನಕವೆಂದರ್ಥ. ಈ ಅರ್ಥವನ್ನು ಗಮನಿಸದ ಅದ್ವೈತಿಯು ಇಲ್ಲಿ ಆಕ್ಷೇಪ ಮಾಡುತ್ತಾನೆ. – ಅಥ ಶಬ್ದಕ್ಕೆ ಮಂಗಲ ಎಂಬರ್ಥವನ್ನು ನೀವು ಹೇಳುತ್ತಿದ್ದೀರಿ. ಆದರೆ ಇದು ಸಾಧ್ಯವೇ ಇಲ್ಲ. ಏಕೆಂದರೆ ಮಂಗಲ ಎಂಬರ್ಥವು ಶಕ್ತಿಯಿಂದ ಲಭ್ಯವಾಗಿದೆಯೋ, ಲಕ್ಷಣಾವೃತ್ತಿಯಿಂದ ಲಭ್ಯವಾಗಿದೆಯೋ? ಮಂಗಲ ಎಂಬರ್ಥವು ಶಕ್ತಿವೃತ್ತಿಯಿಂದ ಅಥವಾ ಲಕ್ಷಣಾವೃತ್ತಿಯಿಂದ ಲಭ್ಯವಾಗಿರು-

ವುದಿಲ್ಲ. ಕೇವಲ ಮೃದಂಗಧ್ವನಿಯು ಹೇಗೆ ಮಂಗಲವನ್ನುಂಟು ಮಾಡುತ್ತದೋ ಅದೇ ರೀತಿಯಾಗಿ ಅಥಶಬ್ದವೂ ಕೂಡ ಮಂಗಲವನ್ನುಂಟುಮಾಡುತ್ತದೆಂದಷ್ಟೇ ಹೇಳಬೇಕು. ಆದ್ದರಿಂದ ಮಂಗಲ ಎಂಬರ್ಥವು ಅಥಶಬ್ದದ ಕಾರ್ಯವಾಗಿದೆ. ಕಾರ್ಯಕ್ಕಾಗಲೀ ದ್ಯೋತ್ಯಕ್ಕಾಗಲೀ ವಾಕ್ಯಾರ್ಥದಲ್ಲಿ ಸಮನ್ವಯವು ಕೂಡುವುದಿಲ್ಲ. ಆದ್ದರಿಂದ ಮಂಗಲಕ್ಕೆ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೇಗೆ ಹೇಳುತ್ತೀರಿ? ಹೀಗೆ ಭಾಮತಿಯಲ್ಲಿ ಆಕ್ಷೇಪ ಮಾಡಲಾಗಿದೆ.

## ಮಂಗಲವು ಕರ್ತೃ, ಕರ್ಮ, ಕರಣಕಾರಕವಲ್ಲ

ಪರಿಮಳ – ಪರಭಾಷ್ಯವಾಕ್ಯಸ್ಯ ವಿವರಣೋಕ್ತಮರ್ಥಮಾಹ – ಅಸ್ತು ವೇತಿ ॥ ಕಾರಕಾಂತರಾಣಾಮಿತಿ ॥ ಮುಮುಕ್ಷುರೂಪಕರ್ತೃಕಾರಕಸ್ಯ । ಬ್ರಹ್ಮರೂಪಕರ್ಮಕಾರಕಸ್ಯ । ನ್ಯಾಯಾದಿರೂಪಕರಣಕಾರಕಸ್ಯ ಚ ಭಾವಾದಿತ್ಯರ್ಥಃ । ಇತಿ ಯತ್ಪರೇಷಾಂ ದೂಷಣಮ್ ಇತಿ ಪೂರ್ವೇಣಾನ್ವಯಃ ।

ಶಂಕರಭಾಷ್ಯದ ವಾಕ್ಯಕ್ಕೆ ವಿವರಣಗ್ರಂಥದಲ್ಲಿ ಹೇಳಲ್ಪಟ್ಟ ಅರ್ಥವನ್ನು "ಅಸ್ತು ವಾ" ಎಂಬ ಗ್ರಂಥದಿಂದ ತಿಳಿಸುತ್ತಿದ್ದಾರೆ.

"ಕಾರಕಾಂತರಾಣಾಂ ವಿದ್ಯಮಾನತ್ವಾತ್" – ಮುಮುಕ್ಷುವು ಜಿಜ್ಞಾಸೆಯಲ್ಲಿ ಕರ್ತೃವಾಗಿದ್ದಾನೆ. ಬ್ರಹ್ಮನು ಕರ್ಮನಾಗಿದ್ದಾನೆ. ನ್ಯಾಯಾದಿಗಳು ಕರಣವಾಗಿವೆ. ಹೀಗೆ ಬೇರೆ ಕಾರಕಗಳು ಇರುತ್ತವೆಂದರ್ಥ. 'ಯತ್ ಪರೇಷಾಂ ದೂಷಣಮ್' ಎಂಬಲ್ಲಿ 'ಇತಿ' ಶಬ್ದವನ್ನು ಹಿಂದಕ್ಕೆ ಅನ್ವಯ ಮಾಡಬೇಕು.

ವಿವರಣೆ – ವಿವರಣಕಾರನು ಮಂಗಲವು ಪದಾರ್ಥವೆಂದಾಗ ಬೇರೆ ದೋಷವನ್ನೇ ಹೇಳಿರುತ್ತಾನೆ. ಮಂಗಲವು ಪದಾರ್ಥವೆಂದು ಒಪ್ಪಿದರೂ ವಾಕ್ಯಾರ್ಥದಲ್ಲಿ ಅನ್ವಯವು ಕೂಡುವುದಿಲ್ಲ. ಏಕೆಂದರೆ ಕರ್ತೃಕಾರಕ, ಕರ್ಮಕಾರಕ, ಕರಣಕಾರಕಭಾವವನ್ನು ಹೊಂದಿ ಮಂಗಲವು ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದಬೇಕು. ಆದರೆ ಬ್ರಹ್ಮಜಿಜ್ಞಾಸೆ ಮಾಡಲು ಮಂಗಲವು ಕರ್ತೃವಾಗಿಲ್ಲ; ಕರ್ಮವೂ ಆಗಿಲ್ಲ; ಕರಣವೂ ಆಗಿರುವುದಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯು ಕರ್ತೃವಾಗಿದ್ದಾನೆ. ಬ್ರಹ್ಮಜಿಜ್ಞಾಸೆಯಲ್ಲಿ ಬ್ರಹ್ಮನು ಕರ್ಮನಾಗಿದ್ದಾನೆ. ಬ್ರಹ್ಮಜಿಜ್ಞಾಸೆಗೆ

ನ್ಯಾಯಗಳು ಕರಣಗಳಾಗಿವೆ. ಹೀಗೆ ಬೇರೆ ಕಾರಕಗಳಿರುವಾಗ ಮಂಗಲವು ಕರ್ತ್ರಾದಿ ಕಾರಕಭಾವವನ್ನು ಹೊಂದಲು ಸಾಧ್ಯವಿಲ್ಲ. ಆದ್ದರಿಂದಲೇ ವಾಕ್ಯಾರ್ಥದಲ್ಲಿ ಅನ್ವಯವು ಕೂಡುವುದಿಲ್ಲ. ಇನ್ನು ಈ ಯಾವ ಕಾರಕಗಳಾಗದಿದ್ದರೂ ಸಾಮಾನಾಧಿಕರಣ್ಯೇನ ಪ್ರಯೋಗ ಮಾಡಿದ್ದಾರೆಂದು ಉತ್ತರಿಸಬೇಕು. ಹಾಗಾದಲ್ಲಿ ಜಿಜ್ಞಾಸಾ ಮಂಗಲಂ ಎಂದು ಹೇಳಿದಂತಾಗುತ್ತದೆ. ಆಗ ಜಿಜ್ಞಾಸೆಯನ್ನು ಪ್ರಶಂಸೆ ಮಾಡಿದಂತಾಗುತ್ತದೆ. ಯಾವುದು ಪ್ರಶಂಸಾಪರವೋ ಅದು ಅರ್ಥವಾದವಾಗುತ್ತದೆಂಬುದು ನಿಯಮಸಿದ್ಧವಾದ ವಿಚಾರ. ಆದ್ದರಿಂದ ಪ್ರಥಮಸೂತ್ರವು ಅರ್ಥವಾದವಾಗುವ ಪ್ರಸಂಗ ಬರುತ್ತದೆ. ಇಷ್ಟು ವಿವರಣಕಾರನ ಆಕ್ಷೇಪ.

## ಅಥಶಬ್ದವು ಕೇವಲ ಮಂಗಲಪ್ರಯೋಜನಕವಾಗಿದೆ

**ಪರಿಮಳ– ತದೇತೇನೇತಿ ॥ ಯದ್ ವಾಚಸ್ಪತಿನಾ ಮಂಗಲಸ್ಯಾಥಪದಾರ್ಥತ್ವಂ ನೇತ್ಯುಪೇತ್ಯ ವಾಕ್ಯಾರ್ಥೇऽನನ್ವಯವ್ಯುತ್ಪಾದನಮ್ । ಯಚ್ಚ ವಿವರಣಕೃತಾ ಪದಾರ್ಥತ್ವಮುಪೇತ್ಯ ವೈಯಧಿಕರಣ್ಯೇನ ವಾ ಸಾಮಾನಾಧಿಕರಣ್ಯೇನ ವಾ ಅನನ್ವಯವ್ಯುತ್ಪಾದನಂ ಕೃತಂ ತದುಭಯಂ ತಾರಾಥಮೂಲತ್ವಮ್ ಇತಿ ಕಥನೇನ ನಿರಸ್ತಮಿತ್ಯರ್ಥಃ । ತದ್ವ್ಯನಕ್ತಿ – ಅಸ್ಮಾಭಿರಿತಿ ॥ ಅಥಶಬ್ದೇನ ಮಂಗಲಸ್ಯಾಪ್ರತೀತೇಃ ಆನಂತರ್ಯಮುಖೇನಾಧಿಕಾರ್ಯಾದ್ಯಸೂಚನಾಪಾತಾತ್ । 'ತಸ್ಮಾನ್ಮಾಂಗಲಿಕಾವುಭೌ' ಇತಿ ಸ್ಮೃತೇಶ್ಚ ಮಂಗಲಪ್ರಯೋಜನಕತ್ವಮೇವ ನ ವಾಚಕತ್ವಮ್ ಇತಿ ಭಾವಃ। ಶ್ರುತ್ಯಾ = ಶ್ರವಣೇನ ಇತ್ಯರ್ಥಃ।**

ಈ ಎರಡೂ ಬಗೆಯ ಪರರ ದೋಷವನ್ನು 'ತತ್ರ ತಾರಾಥಮೂಲತ್ವಮ್' ಎಂಬುದರಿಂದ ನಿರಾಕರಿಸಿದ್ದಾರೆ. ''ತದೇತೇನ'' – ಮಂಗಲವು ಅಥಶಬ್ದದ ಅರ್ಥವೇ ಅಲ್ಲವೆಂದು ಅಂಗೀಕರಿಸಿ ವಾಚಸ್ಪತಿಮಿಶ್ರನು ವಾಕ್ಯಾರ್ಥದಲ್ಲಿ ಮಂಗಲಕ್ಕೆ ಅನ್ವಯವಿಲ್ಲವೆಂದು ಸಮರ್ಥಿಸಿದ್ದಾನೆ. ಇವರ ಈ ವ್ಯಾಖ್ಯಾನವು ಅನುವ್ಯಾಖ್ಯಾನದ ಶ್ಲೋಕದಿಂದ ನಿರಾಕೃತವಾಯಿತು. ಮಂಗಲವು ಅಥಶಬ್ದಾರ್ಥವಾಗಿದೆಯೆಂದು ಒಪ್ಪಿ ಭೇದಾನ್ವಯ ಅಥವಾ ಅಭೇದಾನ್ವಯ ಎರಡೂ ಕೂಡ ಕೂಡುವುದಿಲ್ಲ ಎಂದು ಹೇಳುವ ವಿವರಣಕಾರನ ವ್ಯಾಖ್ಯಾನವು 'ತತ್ರ ತಾರಾಥಮೂಲತ್ವಮ್' ಎಂಬುದರಿಂದಲೇ ನಿರಾಕೃತವಾಗಿದೆ. ಅದನ್ನೇ 'ಅಸ್ಮಾಭಿಃ' ಇತ್ಯಾದಿಯಾಗಿ ಸ್ಪಷ್ಟಪಡಿಸಿದ್ದಾರೆ. ಅಥ

ಎಂಬ ಶಬ್ದದಿಂದ ಮಂಗಲ ಎಂಬರ್ಥವು ತಿಳಿಯುವುದಿಲ್ಲ. ಆನಂತರ್ಯ ಎಂಬರ್ಥವೇ ತಿಳಿಯುತ್ತದೆ. ತನ್ಮುಖಾಂತರ ಅಧಿಕಾರ್ಯಾದಿಗಳನ್ನು ಸೂಚನೆ ಮಾಡದಿರುವ ಪ್ರಸಂಗ ಬರುತ್ತದೆ. ಮತ್ತು 'ತಸ್ಮಾನ್ಮಾಂಗಲಿಕಾವುಭೌ' ಎಂಬ ಸ್ಮೃತಿಯೂ ಇರುತ್ತದೆ. ಈ ಎರಡು ಯುಕ್ತಿಗಳನ್ನು ಅವಲಂಬಿಸಿ ಅಥಶಬ್ದವು ಮಂಗಲಪ್ರಯೋಜನಕವೆಂದೇ ಹೇಳಬೇಕು. 'ಅಥಶಬ್ದಃ ಮಂಗಲಾರ್ಥಕಃ' ಎಂಬ ವಾಕ್ಯಕ್ಕೆ ಮಂಗಲವಾಚಕವಾಗಿದೆ ಎಂದರ್ಥವಲ್ಲ.

"ಶ್ರುತ್ವಾ" – ಶ್ರವಣಮಾತ್ರದಿಂದ.

## ಕಾರಕಶಬ್ದದಿಂದ ಮಂಗಲಕ್ಕೆ ಆಕಾಂಕ್ಷೆಯೇ ಇರುವುದಿಲ್ಲ

**ವಾಕ್ಯಾರ್ಥಚಂದ್ರಿಕಾ – 'ಮಂಗಲಸ್ಯೇ'ತಿ ಪರಭಾಷ್ಯಸ್ಯ ಭಾಮತ್ಯಭಿಪ್ರೇತ್ಯಮರ್ಥಮಾಹ – ಪದಾರ್ಥ ಏವ ಹೀತಿ ॥ ವಿವರಣಾಭಿಪ್ರೇತಮರ್ಥಮಾಹ – ಅಸ್ತು ವೇತಿ ॥ 'ಕಿಮಥಶಬ್ದಸ್ಯ ವೈಯಧಿಕರಣ್ಯೇನಾನ್ವಯ ಉತ ಸಾಮಾನಾಧಿಕರಣ್ಯೇನ' ಇತಿ ವಿಕಲ್ಪಂ ಮನಸಿ ನಿಧಾಯ, ಆದ್ಯಂ ನಿರಾಚಷ್ಟೇ – ನ ತಾವದಿತಿ ॥ 'ದೇವದತ್ತಾದಿಪದಾರ್ಥಾನಾಂ ಕರ್ತ್ರಾದಿಭಾವೇನಾನ್ವಯವತ್' ತಸ್ಯಾನ್ವಯವತ್ವೇ ಪ್ರಮಾಣಾಭಾವಾದಿತ್ಯರ್ಥಃ । ಆಕಾಂಕ್ಷಾಭಾವಾಚ್ಚ ನ ಕರ್ತ್ರಾದಿರೂಪೇಣಾನ್ವಯ ಇತ್ಯಾಹ – ಕಾರಕಾಂತರಾಣಾಮಿತಿ ॥ ಕಾರಕಶಬ್ದೇನ ಮುಮುಕ್ಷುತರ್ಕಾದಯಃ ಸಂಗೃಹ್ಯಂತೇ ।**

'ಮಂಗಲಸ್ಯ' ಎಂಬ ಶಾಂಕರಭಾಷ್ಯಕ್ಕೆ ಭಾಮತಿಗೆ ಅಭಿಪ್ರೇತವಾದ ಅರ್ಥವನ್ನು 'ಪದಾರ್ಥ ಏವ ಹಿ" ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ವಿವರಣಕಾರನಿಗೆ ಅಭಿಪ್ರೇತವಾದ ಅರ್ಥವನ್ನು "ಅಸ್ತು ವಾ" ಎಂಬುದರಿಂದ ಅನುವಾದ ಮಾಡುತ್ತಿದ್ದಾರೆ. 'ಅಥ'ಶಬ್ದಕ್ಕೆ ವೈಯಧಿಕರಣ್ಯೇನ ಅನ್ವಯ ಮಾಡಬೇಕೋ, ಸಾಮಾನಾಧಿಕರಣ್ಯೇನ ಅನ್ವಯ ಮಾಡಬೇಕೋ? ಎಂಬ ವಿಕಲ್ಪವನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಪಕ್ಷವನ್ನು "ನ ತಾವತ್" ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ದೇವದತ್ತಃ ತಂಡುಲಂ ಪಚತಿ' ಎಂಬಂತೆ ಮಂಗಲಃ 'ಜಿಜ್ಞಾಸಾಂ ಕರೋತಿ' ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ದೇವದತ್ತಾದಿಗಳಿಗೆ ಕರ್ತೃತ್ವೇನ ಅನ್ವಯವಿರುವಂತೆ ಮಂಗಲಕ್ಕೆ ಕರ್ತೃತ್ವೇನ ಅನ್ವಯವಿದೆಯೆನ್ನಲು ಪ್ರಮಾಣವಿರುವುದಿಲ್ಲ. ಮತ್ತು ಕರ್ತೃ, ಕರ್ಮ, ಕರಣಕಾರಕಗಳು ಬೇರೆ ಇರುವುದರಿಂದ ಮಂಗಲಕ್ಕೆ ಕರ್ತ್ರಾದಿರೂಪದಿಂದ ಆಕಾಂಕ್ಷೆಯು ಹುಟ್ಟುವುದಿಲ್ಲ ಎಂಬುದನ್ನು "ಕಾರಕಾಂತರಾಣಾಂ" ಎಂಬುದರಿಂದ ಹೇಳುತ್ತಿದ್ದಾರೆ. ಕಾರಕಶಬ್ದದಿಂದ ಮುಮುಕ್ಷು ಕರ್ತೃಕಾರಕ, ತರ್ಕವು ಕರಣಕಾರಕ, ಬ್ರಹ್ಮನು ಕರ್ಮಕಾರಕ ಎಂದು ತಿಳಿಯಬೇಕು.

## ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದಂತೆ ಇಲ್ಲೇಕೆ ದೋಷ ಹೇಳಿರುವುದಿಲ್ಲ?

ವಾಕ್ಯಾರ್ಥಚಂದ್ರಿಕಾ – ದ್ವಿತೀಯಂ ದೂಷಯತಿ – ನಾಪೀತಿ ॥ ನ ಚಾರ್ಥವಾದತ್ವಮಾಶ್ಯೇಯಂ, ಸೂತ್ರಸ್ಯ ವಾಕ್ಯಾರ್ಥನಿರ್ಣಯಾಯ ಅಪೇಕ್ಷಿತನ್ಯಾಯಸೂಚಕತ್ವಾದಿತ್ಯರ್ಥಃ । ತದನೇನೇತಿ ॥ ಯದ್ಯಪ್ಯತ್ರ 'ಅಪದಾರ್ಥತ್ವಹೇತೌ ಸಮನ್ವಯಾಭಾವೇ ಅಪದಾರ್ಥತ್ವಸ್ಯ ಹೇತುತ್ವೇಽನ್ಯೋನ್ಯಾಶ್ರಯಃ' ಇತಿ ಭಾಮತೀಯದೂಷಣಂ, 'ಸಧೂಮೋ ಗಿರಿಃ ಸಾಗ್ನಿಕಃ' ಇತಿವತ್ 'ಈಕ್ಷತೇರ್ನಾಶಬ್ದಮ್' ಇತ್ಯತ್ರ ತ್ವತ್ಪಕ್ಷೇ 'ಅಶಬ್ದಮ್' ಇತಿವಚ್ಚ 'ಮಂಗಲತ್ವಾತ್ ಕರ್ತವ್ಯಾ' ಇತ್ಯನ್ವಯೋಪಪತ್ತೇರ್ನಾನ್ವಯದೋಷಃ ಇತಿ ವಿವರಣಮತದೂಷಣಂ ಚಂದ್ರಿಕೋಕ್ತರೀತ್ಯಾ ಸಂಭವತಿ । ತಥಾಽಪಿ ಯಥಾಶ್ರುತಭಾಷ್ಯಸ್ಯೋಪರಿ ಪ್ರಸಕ್ತದೂಷಣಸ್ಯ 'ತತ್ರ ತಾರಾ' ಇತಿ ವಿವರಣೇನ ಸ್ವಾಭಿಪ್ರೇತಮಂಗಲಾರ್ಥತ್ವೇ ದೂಷಣಾಪ್ರಸಕ್ತೇರಭಾವಲಾಭೇನ, ತಾವತೈವ ದೂಷಣಾಸಂಗತಿಸಿದ್ಧೌ ಕಿಂ ತತ್ಸಾಧುತ್ವಾಸಾಧುತ್ವಚಿಂತಯಾ ಇತಿ ಮೂಲಮೇವ ಪರಭಾಷ್ಯದೂಷಣೇ ವ್ಯಾಪಾರವತೋ ಭಾವೋಽನುಸಂಧೇಯಃ ॥

ಎರಡನೆಯ ಪಕ್ಷವನ್ನು "ನಾಪಿ" ಎಂಬುದರಿಂದ ದೂಷಿಸುತ್ತಿದ್ದಾರೆ. ಸೂತ್ರವು ವಾಕ್ಯಾರ್ಥನಿರ್ಣಯಾಪೇಕ್ಷಿತವಾದ ನ್ಯಾಯಸೂಚಕವಾಗಿರುವುದರಿಂದ ಅರ್ಥವಾದವಾಗುತ್ತದೆಂದು ತಿಳಿಯಬಾರದು.

"ತದನೇನ" – ವಾಸ್ತವಿಕವಾಗಿ ಮಂಗಲವು ಪದಾರ್ಥವಲ್ಲ ಎನ್ನಲು ಸಮನ್ವಯಾಭಾವವನ್ನು ಶಂಕರಭಾಷ್ಯದಲ್ಲಿ ಹೇಳಲಾಗಿದೆ. ಅದಕ್ಕೆ ವಿರುದ್ಧವಾಗಿ ಅಪದಾರ್ಥತ್ವವನ್ನು ಹೇತುವನ್ನಾಗಿ ಮಾಡಿದರೆ ಭಾಮತಿಕಾರನಿಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಮತ್ತು 'ಸಧೂಮೋ ಗಿರಿಃ ಸಾಗ್ನಿಕಃ' ಎಂಬಲ್ಲಿ ಸಧೂಮಃ ಎಂಬುದು ಹೇತುಗರ್ಭವಿಶೇಷಣವಾದ ಪದವಾಗಿದೆ. 'ಈಕ್ಷತೇರ್ನಾಶಬ್ದಮ್' ಎಂಬಲ್ಲೂ ಕೂಡ ಅದ್ವೈತಮತದಲ್ಲಿ ಅಶಬ್ದಂ ಎಂಬುದು ಹೇತುಗರ್ಭವಿಶೇಷಣವಾಗಿದೆ. ಅದರಂತೆ 'ಮಂಗಲಂ ಜಿಜ್ಞಾಸಾ' ಎಂದು ಹೇಳಿದಾಗ ಮಂಗಲಂ ಎಂಬ ಪದವು ಮಂಗಲತ್ವಾತ್ ಎಂಬ ಅರ್ಥದಲ್ಲಿ ಪ್ರಯುಕ್ತವಾಗುತ್ತದೆ. 'ಮಂಗಲತ್ವಾತ್ ಕರ್ತವ್ಯಾ' ಎಂದು ಅನ್ವಯವು ಉಪಪನ್ನವಾಗುತ್ತದೆ. ಅನನ್ವಯದೋಷವು ಬರುವುದಿಲ್ಲ. ಹೀಗೂ ವಿವರಣಕಾರನಿಗೆ ದೋಷವನ್ನು ಹೇಳಬಹುದು. ತಾತ್ಪರ್ಯಚಂದ್ರಿಕೆಯಲ್ಲಿ ಇವೇ ದೋಷಗಳನ್ನು ಹೇಳಿರುತ್ತಾರೆ. ಅದರಂತೆ ಗ್ರಂಥದಲ್ಲೂ ಕೂಡ ಏಕೆ ದೋಷಗಳನ್ನು ಹೇಳಿರುವುದಿಲ್ಲ?

ಹೌದು. ಆದರೂ ಈ ದೋಷಗಳನ್ನು ಹೇಳುವುದು ಇಲ್ಲಿ ಅಪ್ರಸಕ್ತವಾಗುತ್ತದೆ. 'ಅಥಶಬ್ದಃ ಮಂಗಲಾರ್ಥಕಃ' ಎಂಬ ಯಥಾಶ್ರುತವಾದ ಭಾಷ್ಯಕ್ಕೆ ಯಾವ ದೋಷವು ಪ್ರಸಕ್ತವಾಗುತ್ತದೋ ಅದು 'ತತ್ರ ತಾರಾಥಮೂಲತ್ವಮ್' ಎಂಬ ಭಾಷ್ಯದ ವಿವರಣೆಗಾಗಿ ಹೊರಟಿರುವ ಅನುವ್ಯಾಖ್ಯಾನವನ್ನು ನೋಡಿದಾಗ ಪರಿಹಾರವಾಗುತ್ತದೆ. ಮಂಗಲ ಎಂಬುದು ಅಥಶಬ್ದದ ಅರ್ಥವೇ ಆಗಿರುವುದಿಲ್ಲ. ಅರ್ಥಾತ್ ಮಂಗಲದಾಯಕವಾಗಿದೆ ಎಂದಷ್ಟೇ ಅಭಿಪ್ರಾಯ. ಹೀಗೆ ವಿವಕ್ಷಿಸಿದಾಗ ಪರರು ಹೇಳಿದ ದೋಷಗಳಿಗೆ ಪ್ರಸಕ್ತಿಯೇ ಇಲ್ಲಿ ಇರುವುದಿಲ್ಲ. ಆದ್ದರಿಂದ ಅವರು ಮಾಡಿದ ದೂಷಣವು ಅಸಂಗತವಾಗುತ್ತದೆ. ಹೀಗಿರುವಾಗ ಅದು ಸಾಧುವೋ ಅಲ್ಲವೋ ಎಂಬ ಚಿಂತೆಯೇ ಹುಟ್ಟುವುದಿಲ್ಲ. ಈ ಅಭಿಪ್ರಾಯದಿಂದ ಪರಭಾಷ್ಯದೋಷದಲ್ಲಿ ಮೂಲವಾಕ್ಯವೇ ಹೊರಟಿದೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು.

ವಿವರಣೆ – 'ಮಂಗಲಂ ಜಿಜ್ಞಾಸಾ' ಎಂಬುದಾಗಿ ಹೇಳಿದರೆ ಕೇವಲ ಅರ್ಥವಾದವಾಗುತ್ತದೆ. ಆದರೆ ಬ್ರಹ್ಮಸೂತ್ರಗಳು ವಾಕ್ಯಾರ್ಥದ ನಿರ್ಣಯಕ್ಕೆ ಅಪೇಕ್ಷಿತವಾದ ನ್ಯಾಯಗಳನ್ನು ಸೂಚಿಸಲು ಹೊರಟಿವೆ. ಇಂಥ ಸೂತ್ರಗಳಿಗೆ ಅರ್ಥವಾದತ್ವವನ್ನು ಸರ್ವಥಾ ಹೇಳಬಾರದು.

"ತದನೇನ" – ಭಾಮತಿಕಾರನಿಗೆ ಹಾಗೂ ವಿವರಣಕಾರನಿಗೆ ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದ ದೋಷಗಳನ್ನು ಹೀಗೆ ತಿಳಿಯಬೇಕು – ಭಾಮತಿಕಾರನಿಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ವಿವರಣಕಾರನಿಗೆ ಅನ್ವಯಿರುವುದಿಲ್ಲ ಎಂದೇನಿಲ್ಲ. 'ಮಂಗಲತ್ವಾತ್ ಕರ್ತವ್ಯಾ' ಎಂಬುದಾಗಿ ಹೇತುಗರ್ಭವಿಶೇಷಣವನ್ನಾಗಿ ಹೇಳಬಹುದೆಂದು ತಿಳಿಸಿದ್ದಾರೆ. 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರದಲ್ಲಿ ಅಶಬ್ದಂ ಎಂಬುದನ್ನು ಹೇತುಗರ್ಭವಿಶೇಷಣವನ್ನಾಗಿ ವಿವಕ್ಷಿಸಲಾಗಿದೆ. 'ಪ್ರಧಾನಂ ನ ಜಗತ್ಕಾರಣಮ್, ಅಶಬ್ದತ್ವಾತ್' ಎಂಬ ಅನುಮಾನವನ್ನು ಅದ್ವೈತಿಗಳು ವಿವಕ್ಷಿಸುತ್ತಾರೆ. ಅಥವಾ 'ಸ ಧೂಮಃ ಗಿರಿಃ ವಹ್ನಿಮಾನ್' ಎಂಬುದಾಗಿ ಲೌಕಿಕವ್ಯವಹಾರವಿದೆ. ಇಲ್ಲಿ ಸಧೂಮತ್ವಾತ್ ಎಂದೇ ಅರ್ಥ. ಹಾಗಾಗಿ ಹೇತುಗರ್ಭವಿಶೇಷಣವು ಅನೇಕಕಡೆ ಕಾಣಿಸುತ್ತದೆ. ಅದರಂತೆ 'ಮಂಗಲಂ ಜಿಜ್ಞಾಸಾ ಕರ್ತವ್ಯಾ' ಎಂಬುದಾಗಿ ಹೇಳಿದಾಗಲೂ 'ಮಂಗಲತ್ವಾತ್ ಕರ್ತವ್ಯಾ' ಎಂಬರ್ಥವನ್ನು ವಿವಕ್ಷಿಸಲು ಸಾಧ್ಯವಾಗುತ್ತದೆ. ಕರ್ತೃತ್ವ ಕರಣತ್ವ ಕರ್ಮತ್ವರೂಪದಿಂದ ಅನ್ವಯವು ಸಾಧ್ಯವಾಗದಿದ್ದರೂ ಕೂಡ ಹೇತುತ್ವೇನ ಅನ್ವಯವು ಸಾಧ್ಯವಾಗುತ್ತದೆ. ಈ ಎಲ್ಲ ದೋಷಗಳನ್ನು ಚಂದ್ರಿಕೆಯಲ್ಲಿ ತಿಳಿಸಿದ್ದಾರೆ.

ಹೌದು. ಆದರೂ ಕೂಡ 'ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ' ಎಂಬ

ಅನುವ್ಯಾಖ್ಯಾನವನ್ನು ನೋಡಿದಾಗ ಈ ದೋಷಗಳು ಕಾಣಿಸುವುದೇ ಇಲ್ಲ. ಮಂಗಲವು ಅಥಶಬ್ದಕ್ಕೆ ವಾಚ್ಯಾರ್ಥವೆಂದು ಈ ಶ್ಲೋಕದಲ್ಲಿ ವಿವಕ್ಷಿಸಿಯೇ ಇಲ್ಲ. ಆದ್ದರಿಂದ ಚಂದ್ರಿಕೆಯಲ್ಲಿ ಹೇಳಿದ ದೋಷಗಳನ್ನು ಇಲ್ಲಿ ವಿವಕ್ಷಿಸುವುದು ಅಪ್ರಸಕ್ತವಾಗುತ್ತದೆ. ಭಾಮತಿ ವಿವರಣಕಾರರನ್ನು ನಿರಾಕರಣೆ ಮಾಡುವ ಉದ್ದೇಶಕ್ಕಾಗಿಯೇ ಚಂದ್ರಿಕೆಯು ಹೊರಟಿರುವುದರಿಂದ ಅಲ್ಲಿ ಅದನ್ನು ಹೇಳಿದ್ದು ಸಾರ್ಥಕವಾಗಿದೆ.

## ಜ್ಞಾಪ್ಯಗ್ರಹಣವು ದೃಷ್ಟಾಂತಕ್ಕೋಸ್ಕರ

ಯಾದುಪತ್ಯ – ಅತ್ರೇತಿ ॥ 'ಯಥಾಶ್ರುತಭಾಷ್ಯೇ' ಇತ್ಯರ್ಥಃ । ವಾಚ್ಯಂ ಲಕ್ಷ್ಯಂ ವೇತಿ ॥ ವಾಕ್ಯಾರ್ಥೇಽಸಮನ್ವಯಾದಿತಿ ಭಾವಃ । ನ ಚ ಕಾರ್ಯಜ್ಞಾಪ್ಯಯೋರಿತಿ ॥ 'ಜ್ಞಾಪ್ಯಮ್' ಇಹ ಅರ್ಥಾತ್ ಜ್ಞಾಪ್ಯಮೇವ ವಿವಕ್ಷಿತಮ್ । ಏವಂ ಚ ಯಥಾ ಅರ್ಥಜ್ಞಾಪ್ಯಸ್ಯ ನ ವಾಕ್ಯಾರ್ಥೇ ಸಮನ್ವಯಃ, ತಥಾ ಕಾರ್ಯಸ್ಯಾಽಪಿ ಇತಿ ದೃಷ್ಟಾಂತಾರ್ಥಂ ಜ್ಞಾಪ್ಯಗ್ರಹಣಮಿತಿ ದ್ರಷ್ಟವ್ಯಮ್ ।

"ಅತ್ರ" – ಯಥಾಶ್ರುತಭಾಷ್ಯದಲ್ಲಿ; 'ವಾಚ್ಯಂ ಲಕ್ಷ್ಯಂ ವಾ' – ವಾಕ್ಯಾರ್ಥದಲ್ಲಿ ಸಮನ್ವಯವಾಗದ ಕಾರಣ. "ನ ಚ ಕಾರ್ಯಜ್ಞಾಪ್ಯಯೋಃ" – ಅರ್ಥಾತ್ ಜ್ಞಾಪ್ಯವನ್ನೇ ಜ್ಞಾಪ್ಯಶಬ್ದದಿಂದ ವಿವಕ್ಷಿಸಬೇಕು. ಆದ್ದರಿಂದ ಯಾವರೀತಿಯಾಗಿ ಅರ್ಥಾತ್ ಜ್ಞಾಪ್ಯವಾದದ್ದಕ್ಕೆ ವಾಕ್ಯಾರ್ಥದಲ್ಲಿ ಅನ್ವಯವಿರುವುದಿಲ್ಲವೋ ಅದರಂತೆ ಕಾರ್ಯಕ್ಕೂ ಕೂಡ ಅನ್ವಯವಿರುವುದಿಲ್ಲ. ಕೇವಲ ದೃಷ್ಟಾಂತಕ್ಕೋಸ್ಕರ ಜ್ಞಾಪ್ಯಶಬ್ದವನ್ನು ತಿಳಿಸಿದ್ದಾರೆ.

ವಿವರಣೆ – 'ಅಥ ಶಬ್ದಃ ಮಂಗಲಾರ್ಥಃ' ಎಂಬ ಭಾಷ್ಯವಾಕ್ಯವನ್ನು ಮೇಲ್ನೋಟಕ್ಕೆ ನೋಡಿದಾಗ ಮಂಗಲ ಎಂಬರ್ಥವನ್ನು ಅಥಶಬ್ದಕ್ಕೆ ಹೇಳಿದ್ದಾರೆಂಬ ಭ್ರಾಂತಿ ಬರುತ್ತದೆ. ಈ ಭ್ರಾಂತಿಯಿಂದಲೇ ಬರುವ ಅದ್ವೈತಿಗಳ ಆಕ್ಷೇಪವನ್ನು 'ಪರೇಷಾಂ ದೂಷಣಂ' ಇತ್ಯಾದಿಯಾಗಿ ತೋರಿಸಿದ್ದಾರೆ.

ಭಾಮತಿಯಲ್ಲಿ ಮಂಗಲವು ವಾಚ್ಯಾರ್ಥವೂ ಅಲ್ಲ ಲಕ್ಷ್ಯಾರ್ಥವೂ ಅಲ್ಲದ ಕಾರಣ ವಾಕ್ಯಾರ್ಥದಲ್ಲಿ ಅನ್ವಯ ಹೊಂದುವುದಿಲ್ಲ ಎಂದು ಹೇಳಲಾಗಿದೆ.

"ನ ಚ ಕಾರ್ಯಜ್ಞಾಪ್ಯಯೋಃ ವಾಕ್ಯಾರ್ಥೇ ಸಮನ್ವಯಃ ಶಾಬ್ದೇ ವ್ಯವಹಾರೇ ದೃಷ್ಟಃ" ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಈ ವಾಕ್ಯವನ್ನು ನೋಡಿದಾಗ ಕಾರ್ಯ ಹಾಗೂ ಜ್ಞಾಪ್ಯಗಳಿಗೆ ವಾಕ್ಯಾರ್ಥದಲ್ಲಿ ಅನ್ವಯವು ಕಂಡಿರುವುದಿಲ್ಲ ಎಂಬರ್ಥವಾಗುತ್ತದೆ. ಆದರೆ ಜ್ಞಾಪ್ಯಕ್ಕೆ ಇಲ್ಲಿ ಪ್ರಸಕ್ತಿಯೇ ಇರುವುದಿಲ್ಲ. ಕಾರ್ಯಕ್ಕಷ್ಟೇ ಪ್ರಸಕ್ತಿ ಇರುತ್ತದೆ. ಆದ್ದರಿಂದ ಅರ್ಥಾತ್ ಜ್ಞಾಪ್ಯವಾದದ್ದನ್ನು ದೃಷ್ಟಾಂತ-

ವಾಗಿ ನೀಡಿದ್ದಾರೆಂದು ತಿಳಿಯಬೇಕು. ಅರ್ಥಾತ್ ದ್ಯೋತ್ಯವಾದದ್ದು ವಾಕ್ಯಾರ್ಥದಲ್ಲಿ ಅನ್ವಯ ಹೊಂದುವುದಿಲ್ಲವೆಂಬುದು ಲೋಕಸಿದ್ಧವಾಗಿದೆ. ಅದರಂತೆ ಶಬ್ದದ ಪ್ರಯೋಗದಿಂದ ಅರ್ಥಾತ್ ಸಿದ್ಧವಾಗುವ ಕಾರ್ಯಕ್ಕೂ ಕೂಡ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೇಳಬಾರದು ಎಂಬುದು ಈ ವಾಕ್ಯದ ಅಭಿಪ್ರಾಯ.

## ಶಂಕರಭಾಷ್ಯಕ್ಕೆ ಭಾಮತಿಯ ವ್ಯಾಖ್ಯಾನ ಅತ್ಯಂತ ವಿರುದ್ಧ

**ಯಾದುಪತ್ಯ** – ನನು 'ಮಂಗಲಮಥಶಬ್ದಾರ್ಥೋ ನ ಭವತಿ' ಇತ್ಯತ್ರ 'ವಾಕ್ಯಾರ್ಥೇ ಸಮನ್ವಯಾಭಾವಃ' ಹೇತುತಯಾ ಉಪಾತ್ತಃ । ತತ್ರ ಚ 'ಪದಾರ್ಥ ಏವ ಹಿ ವಾಕ್ಯಾರ್ಥೇ ಸಮನ್ವೀಯತೇ' ಇತ್ಯಾದಿನಾ ಅಥಶಬ್ದಾರ್ಥತ್ವಾಭಾವಸ್ಯೈವ ಹೇತುತಯೋಕ್ತತ್ವಾದನ್ಯೋನ್ಯಾಶ್ರಯ ಇತ್ಯರುಚೇರಾಹ – ಅಸ್ತು ವೇತಿ ॥

'ಮಂಗಲಮಥಶಬ್ದಾರ್ಥೋ ನ ಭವತಿ' ಎಂಬ ವಿಷಯದಲ್ಲಿ 'ವಾಕ್ಯಾರ್ಥೇ ಸಮನ್ವಯಾಭಾವಃ' ಎಂಬುದನ್ನು ಹೇತುವನ್ನಾಗಿ ವಿವಕ್ಷಿಸಲಾಗಿದೆ. ಈ ಸಂದರ್ಭದಲ್ಲಿ 'ಪದಾರ್ಥ ಏವ ಹಿ ವಾಕ್ಯಾರ್ಥೇ ಸಮನ್ವೀಯತೇ' ಎಂದು ಹೇಳಿದರೆ ಅಥಶಬ್ದಾರ್ಥತ್ವಾಭಾವವನ್ನು ಹೇತುವನ್ನಾಗಿ ಹೇಳಿದಂತಾಯಿತು. ಆಗ ಸ್ಪಷ್ಟವಾಗಿ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಹೀಗೆ ಭಾಮತಿಪಕ್ಷದಲ್ಲಿ ಅರುಚಿ ಇರುವುದರಿಂದ 'ಅಸ್ತು ವಾ' ಎಂಬುದಾಗಿ ವಿವರಣಕಾರನ ಪಕ್ಷವನ್ನು ಅನುವಾದ ಮಾಡಿದ್ದಾರೆ.

ವಿವರಣೆ – ಭಾಮತಿಕಾರನ ಪಕ್ಷದಲ್ಲಿ ಸ್ಪಷ್ಟವಾಗಿ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದು ಹೀಗೆ – ಶಂಕರಭಾಷ್ಯದ ಪ್ರಕಾರ ಅನುಮಾನವನ್ನು ಹೀಗೆ ತೋರಿಸಿದಂತಾಯಿತು. 'ಮಂಗಲಂ ಅಥಪದಾರ್ಥೋ ನ ಭವತಿ ವಾಕ್ಯಾರ್ಥೇ ಅನ್ವಯಾಭಾವಾತ್' ಎಂದು. ಇದಕ್ಕೆ ವ್ಯಾಖ್ಯಾನ ಮಾಡುವಾಗ ಭಾಮತಿಯಲ್ಲಿ 'ಪದಾರ್ಥ ಏವ ಹಿ ವಾಕ್ಯಾರ್ಥೇ ಸಮನ್ವೀಯತೇ' ಎಂಬುದಾಗಿ ಹೇಳಲಾಗಿದೆ. ಎಲ್ಲಿ ಏವಕಾರವಿರುತ್ತದೋ ಅದು ವ್ಯಾಪಕವಾಗುತ್ತದೆ. 'ಅಗ್ನಿಮಾನೇವ ಧೂಮವಾನ್' ಎಂದು ಹೇಳಿದಾಗ ಏವಕಾರವಿರುವ ಅಗ್ನಿಯು ವ್ಯಾಪಕವಾಗುತ್ತದೆ. ಆದ್ದರಿಂದ ಇಲ್ಲಿ ಪದಾರ್ಥತ್ವವು ವ್ಯಾಪಕವಾಯಿತು. ವಾಕ್ಯಾರ್ಥಸಮನ್ವಯವು ವ್ಯಾಪ್ಯವಾಗುತ್ತದೆ. ವ್ಯಾಪಕಾಭಾವದಿಂದ ವ್ಯಾಪ್ಯಾಭಾವವನ್ನು ಸಮನ್ವಯ ಮಾಡಬೇಕು. ಪದಾರ್ಥತ್ವಾಭಾವದಿಂದ ವಾಕ್ಯಾರ್ಥೇ ಸಮನ್ವಯಾಭಾವವನ್ನು ಸಾಧನೆ ಮಾಡಬೇಕು ಎಂದಂತಾಯಿತು. ಹೀಗೆ ಭಾಮತಿಯ ಅಭಿಪ್ರಾಯವೆಂದು ಸಿದ್ಧವಾಗುತ್ತದೆ. ಆದರೆ ಶಂಕರಭಾಷ್ಯದಲ್ಲಿ ಮಂಗಲವು ಏಕೆ ಪದಾರ್ಥವಲ್ಲ? ಎಂಬುದಕ್ಕೆ ವಾಕ್ಯಾರ್ಥದಲ್ಲಿ ಅನ್ವಯವಿಲ್ಲ-

ದ್ದರಿಂದ ಎಂಬುದನ್ನು ಕಾರಣವನ್ನಾಗಿ ಹೇಳಲಾಯಿತು. ಮಂಗಲವು ವಾಕ್ಯಾರ್ಥದಲ್ಲಿ ಏಕೆ ಸಮನ್ವಯವಾಗುವುದಿಲ್ಲವೆಂದರೆ ಪದಾರ್ಥವಾಗದೇ ಇರುವುದರಿಂದ ಎಂದು ಹೇಳಿದಂತಾಯಿತು. ಎರಡೂ ಅನುಮಾನಗಳ ಸ್ವರೂಪವನ್ನು ಹೀಗೆ ತಿಳಿಯಬೇಕು – 'ಮಂಗಲಂ ಅಥಪದಾರ್ಥಃ ನ ಭವತಿ ವಾಕ್ಯಾರ್ಥೇ ಅನ್ವಯಾಭಾವಾತ್' ಎಂಬುದು ಶಂಕರಭಾಷ್ಯಕ್ಕೆ ಅಭಿಪ್ರೇತವಾದ ಅನುಮಾನವಾಗಿದೆ. 'ಮಂಗಲಂ ನ ವಾಕ್ಯರ್ಥೇ ಅನ್ವೀಯತೇ ಪದಾರ್ಥತ್ವಾಭಾವಾತ್' ಎಂಬುದು ಭಾಮತಿಕಾರ ವಿವಕ್ಷಿಸಿದ ಅನುಮಾನವಾಗಿದೆ. ಇಲ್ಲಿ ಸ್ಪಷ್ಟವಾಗಿಯೇ ಅನ್ಯೋನ್ಯಾಶ್ರಯವು ಕಾಣಿಸುತ್ತಿದೆ. ವಾಕ್ಯಾರ್ಥದಲ್ಲಿ ಅನ್ವಯ ಹೊಂದಿರುವುದಿಲ್ಲ ಎಂದು ಸಿದ್ಧವಾದರೆ ಪದಾರ್ಥವಲ್ಲವೆಂದು ಸಿದ್ಧವಾಗುತ್ತದೆ. ಮಂಗಲವು ಪದಾರ್ಥವಲ್ಲವೆಂದು ಸಿದ್ಧವಾದರೆ ವಾಕ್ಯಾರ್ಥದಲ್ಲಿ ಅನ್ವಯ ಹೊಂದುವುದಿಲ್ಲ ಎಂದು ಸಿದ್ಧವಾಗುತ್ತದೆ. ಹೀಗೆ ಶಂಕರಭಾಷ್ಯಕ್ಕೆ ವಿರುದ್ಧವಾಗಿ, ಮತ್ತು ಅನ್ಯೋನ್ಯಾಶ್ರಯದೋಷವು ಬರುವ ರೀತಿಯಲ್ಲಿ ಭಾಮತಿಯು ವ್ಯಾಖ್ಯಾನ ಮಾಡಿದೆ. ಈ ಅನ್ಯೋನ್ಯಾಶ್ರಯದೋಷವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿರುತ್ತಾರೆ.

## ವಾಕ್ಯಾರ್ಥದಲ್ಲಿ ಕಾರ್ಯಕ್ಕೆ ಅನ್ವಯವಿಲ್ಲ-ವೆಂಬುದು ನಮಗೆ ಇಷ್ಟವೇ ಆಗಿದೆ

ಯಾದುಪತ್ಯ – ಮಂಗಲಂ ಜಜ್ಞಾಸಾಯಾಂ, ಕಿಂ ಕರ್ತ್ರಾದಿಭಾವೇನ ವೈಯಧಿಕರಣ್ಯೇನಾನ್ವೇತಿ ಉತ, 'ಜಜ್ಞಾಸಾ ಮಂಗಲಮ್' ಇತಿ ಸಾಮಾನಾಧಿಕರಣ್ಯೇನೇತಿ ವಿಕಲ್ಪಂ ಮನಸಿ ನಿಧಾಯಾದ್ಯಂ ತಾವದ್ ದೂಷಯತಿ – ನ ತಾವನ್ಮಂಗಲಮಿತಿ ॥ ಕರ್ತ್ರಾದ್ಯನ್ಯತಮೇತಿ ॥ 'ಮಂಗಲಸ್ಯ' ಇತಿ ಶೇಷಃ । ಕಾರಕಾಂತರಾಣಾಮಿತಿ ॥ ಮಂಗಲಾಪೇಕ್ಷಯಾಽನ್ಯೇಷಾಮೇವ ಕರ್ತೃಕರ್ಮಕರಣರೂಪಾಣಾಂ ಕಾರಕಾಂತರಾಣಾಂ ಜಜ್ಞಾಸಾಯಾಂ ಸತ್ತ್ವಾದಿತ್ಯರ್ಥಃ । ಅಧಿಕಾರಿ-ಜೀವಸ್ಯೈವ ಕರ್ತೃತ್ವಾತ್ ಸಾಕ್ಷಾದ್ ವೇದಾನಾಮುದ್ದೇಶ್ಯಫಲಸಂಬಂಧಿತಯಾ ಚ ಬ್ರಹ್ಮಣಃ ಕರ್ಮತ್ವಾತ್, ಯುಕ್ತೀನಾಮೇವ ಕರಣತ್ವಾತ್ ಇತಿ ಭಾವಃ । ಅಸ್ಮಾಭಿರಪೀತಿ ॥ ತಥಾ ಚ ಕಾರ್ಯಸ್ಯ ವಾಕ್ಯಾರ್ಥೇ ಸಮನ್ವಯಾಭಾವೋಪಪಾದನಮ್ ಅಸ್ಮಾಕಮಿಷ್ಟಮೇವ ಇತಿ ಭಾವಃ ॥

ಜಜ್ಞಾಸೆಯಲ್ಲಿ ಮಂಗಲವು ಕರ್ತ್ರಾದಿಭಾವದಿಂದ ವೈಯಧಿಕರಣ್ಯದಿಂದ ಅನ್ವಯವನ್ನು ಹೊಂದುತ್ತದೋ ಅಥವಾ 'ಜಜ್ಞಾಸಾ ಮಂಗಲಮ್' ಎಂಬುದಾಗಿ ಸಾಮಾನಾಧಿಕರಣ್ಯೇನ ಅನ್ವಯವನ್ನು ಹೊಂದುತ್ತದೋ? ಈ ಎರಡೂ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಪಕ್ಷವನ್ನು 'ನ

ತಾವತ್ ಮಂಗಲಮ್' ಇತ್ಯಾದಿವಾಕ್ಯದಿಂದ ದೂಷಣೆ ಮಾಡುತ್ತಿದ್ದಾರೆ. 'ಕಾರ್ಯಾದ್ಯನ್ಯತಮಾ ಮಂಗಲಸ್ಯ' ಎಂಬುದನ್ನು ಶೇಷಪೂರಣೆ ಮಾಡಿಕೊಳ್ಳಬೇಕು. "ಕಾರಕಾಂತರಾಣಾಂ" – ಮಂಗಲಕ್ಕಿಂತ ಬೇರೆಯದಾದ ಕರ್ತೃಕಾರಕ ಕರ್ಮಕಾರಕ ಹಾಗೂ ಕರಣಕಾರಕಗಳು ಜಿಜ್ಞಾಸೆಯಲ್ಲಿ ಸಿದ್ಧವಾಗಿವೆ ಎಂದರ್ಥ. ಅಧಿಕಾರಿಯಾದ ಜೀವನೇ ಕರ್ತೃವಾಗಿದ್ದಾನೆ. ವೇದಗಳು ಬ್ರಹ್ಮಜ್ಞಾನವನ್ನು ನೇರವಾಗಿ ಉಂಟು ಮಾಡುತ್ತಿವೆ. ತತ್ಸಂಬಂಧಿಯಾಗಿರುವುದರಿಂದ ಬ್ರಹ್ಮನು ಕರ್ಮನಾಗಿದ್ದಾನೆ. ಯುಕ್ತಿಗಳು ಕರಣ-ವಾಗಿವೆ ಎಂದಭಿಪ್ರಾಯ.

"ಅಸ್ಮಾಭಿಃ" – ಕಾರ್ಯಕ್ಕೆ ವಾಕ್ಯಾರ್ಥದಲ್ಲಿ ಅನ್ವಯ ಇರುವುದಿಲ್ಲ ಎಂಬುದು ನಮಗೆ ಇಷ್ಟವೇ ಆಗಿದೆ ಎಂದಭಿಪ್ರಾಯ. ಅದ್ವೈತಿಗಳಿಗೆ ಆಕ್ಷೇಪವನ್ನು ಇಷ್ಟಾಪತ್ತಿಯ ಮೂಲಕ ಪರಿಹರಿಸಿದಂತಾಯಿತು.

## ಸುಧಾಪರಿಮಳಸಾರ

ಅಥಶಬ್ದವು ಮಂಗಲಾರ್ಥ ಎಂಬ ವಿಚಾರವನ್ನು ಮಾಯಾವಾದಿಗಳು ಒಪ್ಪುವುದಿಲ್ಲ. 'ಮಂಗಲಸ್ಯ ವಾಕ್ಯಾರ್ಥೇ ಸಮನ್ವಯಾಭಾವಾತ್' ಎಂದು ಅವರ ಭಾಷ್ಯದ ವಾಕ್ಯ. ವಾಕ್ಯಾರ್ಥದಲ್ಲಿ ಮಂಗಲಕ್ಕೆ ಅನ್ವಯ ಹೇಳಲು ಬರುವುದಿಲ್ಲವಾದ ಕಾರಣ ಅಥಶಬ್ದಕ್ಕೆ ಮಂಗಲಾರ್ಥತ್ವವನ್ನು ಹೇಳಬಾರದು. ಈ ಭಾಷ್ಯದ ಅಭಿಪ್ರಾಯವನ್ನು ವಾಚಸ್ಪತಿಮಿಶ್ರರು ಈ ರೀತಿ ತಿಳಿಸುತ್ತಾರೆ. ಪದಾರ್ಥಮಾತ್ರ ವಾಕ್ಯಾರ್ಥದಲ್ಲಿ ಅನ್ವಯ ಹೊಂದುತ್ತದೆ. ಆ ಪದಾರ್ಥವು ಪದದ ವಾಚ್ಯಾರ್ಥವೂ ಆಗಿರಬಹುದು; ಅಥವಾ ಲಕ್ಷ್ಯಾರ್ಥವೂ ಆಗಿರಬಹುದು. ಎರಡೂ ಅರ್ಥಗಳಿಗೆ ವಾಕ್ಯಾರ್ಥಸಮನ್ವಯವಿದೆ. ಆದರೆ ಮಂಗಲವು ಅಥಶಬ್ದದ ಲಕ್ಷ್ಯಾರ್ಥವೂ ಅಲ್ಲ. ವಾಚ್ಯಾರ್ಥವೂ ಅಲ್ಲ. ಹೊರತು ಮೃದಂಗಾದಿಧ್ವನಿಗಳಂತೆ ಅಥಶಬ್ದದಿಂದಾಗುವ ಕಾರ್ಯ. ಕಾರ್ಯಕ್ಕಾಗಲಿ ಅಥವಾ ಅರ್ಥಾದರ್ಥಕ್ಕಾಗಲಿ ವಾಕ್ಯಾರ್ಥಾನ್ವಯವನ್ನು ಶಾಬ್ದಿಕವ್ಯವಹಾರದಲ್ಲಿ ನಾವು ಕಂಡಿಲ್ಲ. ಆದುದರಿಂದ ಮಂಗಲಕ್ಕೆ ವಾಕ್ಯಾರ್ಥಾನ್ವಯ ಕೂಡಲಾರದು. ಹೀಗಾಗಿ ಅಥಶಬ್ದಃ ಮಂಗಲಾರ್ಥಃ ಎಂಬ ವಿಚಾರ ಸರಿಯಲ್ಲ ಎಂದು. ಇದೇ ವಾಕ್ಯಕ್ಕೆ ವಿವರಣಕಾರರ ಅಭಿಪ್ರಾಯ ಹೀಗಿದೆ.

ಮಂಗಲವು ವಸ್ತುತಸ್ತು ಅಥಪದದ ಅರ್ಥವಲ್ಲ. ಒಂದು ವೇಳೆ ಪದಾರ್ಥ ಎಂದಿಟ್ಟುಕೊಂಡರೂ ಸಹ ವಾಕ್ಯಾರ್ಥದಲ್ಲಿ ಅನ್ವಯವಿಲ್ಲ. ಏಕೆಂದರೆ, ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ವಾಕ್ಯದಲ್ಲಿ ಮಂಗಲಕ್ಕೆ ಅನ್ವಯವನ್ನು ಹೇಳಬೇಕು. ಜಿಜ್ಞಾಸೆಗೆ ಮಂಗಲವು ಕರ್ತೃವೋ, ಕರ್ಮವೋ, ಕರಣವೋ ಆಗಿದ್ದರೆ, ಅನ್ವಯವನ್ನು ಹೇಳಬಹುದಿತ್ತು. ಆದರೆ ಮಂಗಲವು ಕರ್ತೃವೂ ಅಲ್ಲ, ಕರ್ಮವೂ ಅಲ್ಲ, ಕರಣವೂ ಆಗಿಲ್ಲ, ಆಗಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ ಆದುದರಿಂದ, ಮಂಗಲಕ್ಕಿಂತ ಬೇರೆಯಾದ ಕರ್ತ್ರಾದಿಗಳು ಇದ್ದಾರೆ. ಬ್ರಹ್ಮನು ಕರ್ಮ. ಜಿಜ್ಞಾಸಾಧಿಕಾರಿಯು ಕರ್ತೃ, ವೇದವೇ ಕರಣ. ಹೀಗಾಗಿ ಮಂಗಲವನ್ನು ಕರ್ತ್ರಾದ್ಯನ್ಯತಮ ಎಂದು ಹೇಳಲು

ಬರುವುದಿಲ್ಲ. ಹೀಗೆ ವ್ಯಧಿಕರಣಾನ್ವಯ ಕೂಡದಿದ್ದರೂ ಸಾಮಾನಾಧಿಕರಣ್ಯೇನ ಅನ್ವಯ ಮಾಡೋಣ ಎನ್ನಲು ಬರುವುದಿಲ್ಲ. ಈ ಪಕ್ಷದಲ್ಲಿ ಜಿಜ್ಞಾಸಾ ಮಂಗಲಂ ಎಂದು ಅನ್ವಯ ಮಾಡಬೇಕು. ಹೀಗೆ ಮಾಡಿದರೆ ಇದು ಜಿಜ್ಞಾಸೆಯ ಪ್ರಶಂಸೆ ಆದೀತು. ಪ್ರಶಂಸೆ ಮಾಡಿದರೆ ಅದು ಅರ್ಥವಾದ ಎಂದು ಹೇಳಿದಂತಾಗಿ ಮೊದಲ ಸೂತ್ರವು ಜಿಜ್ಞಾಸಾವಿಧಾಯಕ ಅಲ್ಲದೇ ಹೋದೀತು ಎಂಬ ಅಭಿಪ್ರಾಯ.

ಈ ಪೂರ್ವಪಕ್ಷವೂ ಕೂಡ 'ತತ್ರ ತಾರಾಥಮೂಲತ್ವಂ' ಎಂಬ ಮೂಲದಿಂದಲೇ ನಿರಾಕೃತವಾಗುತ್ತದೆ. ನಾವೂ ಕೂಡ ಅಥಶಬ್ದಕ್ಕೆ ಅಧಿಕಾರಾನಂತರ್ಯ ಎಂಬುದು ವಾಚ್ಯಾರ್ಥ. ಮಂಗಲವು ವಾಚ್ಯವೂ ಅಲ್ಲ, ಲಕ್ಷ್ಯವೂ ಅಲ್ಲ ಹೊರತು ಶ್ರವಣಮಾತ್ರೇಣ ಮಂಗಲ ಉಂಟಾಗುತ್ತದೆ.

ಆದುದರಿಂದ ಪ್ರಥಮಸೂತ್ರದಲ್ಲಿ ಅಧಿಕಾರಾನಂತರ್ಯಕ್ಕೆ ಅನ್ವಯವೇ ಹೊರತು ಮಂಗಲಕ್ಕೆ ಅಲ್ಲ. ಸರ್ವಶಾಸ್ತ್ರದ ಪರಿಸಮಾಪ್ತಿಗೆ ಶ್ರವಣಮಾತ್ರದಿಂದ ಕಾರಣವಾಗುವ ಪ್ರಯುಕ್ತ ಸಮಸ್ತಶಾಸ್ತ್ರಾಂಗವಾಗಿದೆ.

## ನೆನೆಪಿಡಿ

* 'ಅಥಶಬ್ದಃ ಮಂಗಲಾರ್ಥಕಃ' ಎಂಬ ಭಾಷ್ಯಕ್ಕೆ ವಿವರಣರೂಪವಾದ 'ತತ್ರ ತಾರಾಥಮೂಲತ್ವಮ್' ಇತ್ಯಾದಿ ಅನುವ್ಯಾಖ್ಯಾನ ಪದ್ಯವು ಪರಭಾಷ್ಯನಿರಾಸಕವಾಗಿದೆ.

* ವಾಕ್ಯಾರ್ಥದಲ್ಲಿ ಅನ್ವಯಹೊಂದದ ಕಾರಣ ಮಂಗಲವು ಅಥಪದದ ಅರ್ಥವಾಗುವುದಿಲ್ಲ ಎಂದು ಶಂಕರಭಾಷ್ಯದಲ್ಲಿ ಹೇಳಲಾಗಿದೆ.

* ಶಂಕರಭಾಷ್ಯಕ್ಕೆ ವಿರುದ್ಧವಾಗಿ ಭಾಮತಿಯಲ್ಲಿ ಮಂಗಲವು ಅಥಪದದ ಅರ್ಥವಲ್ಲವಾದ್ದರಿಂದ ವಾಕ್ಯಾರ್ಥದಲ್ಲಿ ಅನ್ವಯ ಹೊಂದುವುದಿಲ್ಲ ವ್ಯಾಖ್ಯಾನಮಾಡಲಾಗಿದೆ.

* ವಿವರಣಕಾರನು ವ್ಯೆಯಧಿಕರಣ್ಯೇನ ಅಥವಾ ಸಾಮಾನಾಧಿಕರಣ್ಯದಿಂದ ಅನ್ವಯವು ಕೂಡುವುದಿಲ್ಲ. ಆದ್ದರಿಂದ ವಾಕ್ಯಾರ್ಥದಲ್ಲಿ ಮಂಗಲವೆಂಬ ಪದಾರ್ಥಕ್ಕೆ ಸಮನ್ವಯವು ಮಾಡಲಾಗದು ಎಂದು ವ್ಯಾಖ್ಯಾನಿಸಲಾಗಿದೆ.

* ಭಾಮತಿಯಲ್ಲಿ ಮಂಗಲವು ಪದದ ಅರ್ಥವೇ ಆಗುವುದಿಲ್ಲ ಎಂದು ವ್ಯಾಖ್ಯಾನ ಮಾಡಿದರೆ ಅದಕ್ಕೆ ವಿರುದ್ಧವಾಗಿ ವಿವರಣದಲ್ಲಿ ಮಂಗಲವು ಪದದ ಅರ್ಥವಾಗುತ್ತದೆ ಎನ್ನಲಾಗಿದೆ.

* 'ದೇವದತ್ತೇನ ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂಬಲ್ಲಿ ಬ್ರಹ್ಮಜಿಜ್ಞಾಸೆಗೆ ದೇವದತ್ತನು

ಕರ್ತೃವಾಗಿದ್ದಾನೆ. ಬ್ರಹ್ಮನು ಕರ್ಮನಾಗಿದ್ದಾನೆ. ನ್ಯಾಯಗಳು ಕರಣಗಳಾಗಿವೆ. ಮಂಗಲವು ಈ ಯಾವ ಕಾರಕಗಳೂ ಆಗಿರುವುದಿಲ್ಲ.

* ಬ್ರಹ್ಮಸೂತ್ರಗಳು ವಾಕ್ಯಾರ್ಥನಿರ್ಣಯಕ್ಕೆ ಅಪೇಕ್ಷಿತವಾದ ನ್ಯಾಯಗಳನ್ನು ಸೂಚಿಸುತ್ತವೆ. ಇಂಥಸೂತ್ರಗಳಿಗೆ ಅರ್ಥವಾದತ್ವವನ್ನು ಸರ್ವಥಾ ವಿವಕ್ಷಿಸಬಾರದು.

* ಮಂಗಲವು ಅಥಶಬ್ದದ ಅರ್ಥವೇ ಅಲ್ಲ. ಹೀಗಿರುವಾಗ ಅದ್ವೈತಿಗಳ ಆಕ್ಷೇಪವೇ ನಮಗೆ ಸಂಬಂಧಪಡುವುದಿಲ್ಲ.

* ತಾತ್ಪರ್ಯಚಂದ್ರಿಕೆಯಲ್ಲಿ ಅದ್ವೈತಿಗಳ ಈ ದೋಷಗಳಿಗೆ ಪ್ರಸಕ್ತಿಯನ್ನೊಪ್ಪಿ, ಭಾಮತಿಯನ್ನು ಹಾಗೂ ವಿವರಣವ್ಯಾಖ್ಯಾನವನ್ನು ನಿರಾಕರಣೆ ಮಾಡಲಾಗಿದೆ.

* ಅಥಶಬ್ದಕ್ಕೆ ಅಧಿಕಾರ್ಯತ್ವಾದಿಗಳನ್ನು ಸಂಪಾದನೆ ಮಾಡಿದ ಅನಂತರ ಎಂದೇ ಅರ್ಥ. ಮಂಗಲ ಎಂಬುದು ಶ್ರವಣದಿಂದ ದೊರೆಯುವ ಫಲಮಾತ್ರ .

## ಸೂತ್ರದ ಪ್ರಾರಂಭದಲ್ಲಿ ಓಂಕಾರವೇ ಇಲ್ಲವಲ್ಲ?

**ಶ್ರೀಮನ್ನ್ಯಾಯಸುಧಾ – ನನು ಅತ್ರ[1] ಸೂತ್ರಾದೌ ಓಂಕಾರ ಏವ ನ ವಿದ್ಯತೇ । ತತ್ಕಥಮುಚ್ಯತೇ 'ತಾರಾಥಮೂಲತ್ವಮ್' ಇತಿ ।**

ಆಕ್ಷೇಪ – ಸೂತ್ರದ ಪ್ರಾರಂಭದಲ್ಲಿ ಓಂಕಾರವು ಇರುವುದೇ ಇಲ್ಲ. ಹೀಗಿರುವಾಗ ತಾರಾಥಮೂಲತ್ವಮ್' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಓಂಕಾರ ಮತ್ತು ಅಥ-ಶಬ್ದಗಳೆರಡು ಸೂತ್ರದ ಪ್ರಾರಂಭದಲ್ಲಿ ಪ್ರಯೋಗಿಸಲ್ಪಟ್ಟಿವೆ ಎಂದು ಹೇಳಿದ್ದು ಹೇಗೆ ಸಮಂಜಸವಾಗುತ್ತದೆ?

[1] ನನ್ವತ್ರ ಎಂಬಲ್ಲಿ ಪ್ರಾರಂಭವಾದ ಆಕ್ಷೇಪವು ಸೂತ್ರಾದೌ ಉಪನಿಬದ್ಧಃ ಇತ್ಯನುಪಪನ್ನಮಿತಿ ಎಂಬಲ್ಲಿಯ ತನಕ ಇರುತ್ತದೆ. ಓದುಗರ ಅನುಕೂಲಕ್ಕಾಗಿ ವಿಭಾಗಗಳನ್ನು ಮಾಡಿ ಅನುವಾದ ಮಾಡಲಾಗಿದೆ.

## ಪ್ರಾರಂಭದಲ್ಲಿ ಉಚ್ಚರಿಸುವ ಓಂಕಾರವು ಸೂತ್ರಾವಯವವಲ್ಲ ಎಂದು ಆಕ್ಷೇಪ

**ಯದ್ಯಪಿ ಶಿಷ್ಟೈರಧ್ಯೇತೃಭಿಃ ಉಚ್ಚಾರ್ಯಮಾಣಃ ಅಧ್ಯಕ್ಷಸಿದ್ಧಃ ತಥಾಽಪಿ ನಾಯಂ ಸೂತ್ರಾವಯವಃ । ಲಕ್ಷಣಾಂತರಾಭಾವೇ ಸತ್ಯಸಂಹಿತತಯಾ ಸಂಪಾಠೇ ಅಖಿಲೈಃ ಪಠ್ಯಮಾನತ್ವಾತ್ । ವೇದಾಧ್ಯಯನೋಪಕ್ರಮೇ ಅಧ್ಯೇತೃಭಿರುಚ್ಚಾರ್ಯಮಾಣೋಂಕಾರವತ್ । ಅನ್ಯಥಾ ಅಥಶಬ್ದವತ್ ಸಂಹಿತತಯಾ ನಿರ್ದಿಶ್ಯೇತ ।**

ವಾಸ್ತವಿಕವಾಗಿ ಯಾವ ಶಿಷ್ಟರು ಬ್ರಹ್ಮಸೂತ್ರಗಳನ್ನು ಅಧ್ಯಯನ ಮಾಡುತ್ತಾರೋ ಅವರು ಸೂತ್ರದ ಪ್ರಾರಂಭದಲ್ಲಿ ಓಂಕಾರವನ್ನು ನಿಯಮೇನ ಉಚ್ಚಾರ ಮಾಡುತ್ತಾರೆ. ಇದು ಪ್ರತ್ಯಕ್ಷಸಿದ್ಧವಾದ ವಿಚಾರವಾಗಿದೆ. ಆದರೂ ಕೂಡ ಈ ಉಚ್ಚಾರ ಮಾಡಲ್ಪಡುವ ಓಂಕಾರವು ಸೂತ್ರದ ಅವಯವವಲ್ಲ. ಏಕೆಂದರೆ, ಪ್ರಮಾಣವಿಲ್ಲದೇ ಸಂಹಿತಾಧ್ಯಯನದಲ್ಲಿ ಸಂಧಿಯಿಲ್ಲದೇ ಓಂಕಾರವನ್ನು ಎಲ್ಲರೂ ಕೂಡ ಪಠಿಸುತ್ತಾರೆ. ಉದಾಹರಣೆ – ವೇದಾಧ್ಯಯನವನ್ನು ಪ್ರಾರಂಭ ಮಾಡುವ ಅಧ್ಯೇತೃಗಳು ಉಚ್ಚಾರ ಮಾಡುವ ಓಂಕಾರ. ಒಂದು ವೇಳೆ ಈ ಓಂಕಾರವೂ ಕೂಡ ಸೂತ್ರದ ಅವಯವವಾದರೆ ಅಥಶಬ್ದದಂತೆ ಒಟ್ಟಿಗೆ ಸೇರಿಸಿ ಉಚ್ಚರಿಸುತ್ತಿದ್ದರು.

## ಓಂಕಾರವನ್ನು ಉಚ್ಚರಿಸಬೇಕೆಂಬುದು ವಿಧಿಸಿದ್ಧವಾಗಿದೆ

**ನ ಚ ದೃಷ್ಟಾಂತಃ ಸಾಧ್ಯವಿಕಲಃ । ಅಧ್ಯಯನೋಪಕ್ರಮವಿರತಿವೈಚಿತ್ರ್ಯೇಣ ತತ್ತತ್ಸ್ಥಾನಪರಿತ್ಯಾಗೇನ ಅನ್ಯಾನ್ಯಸ್ಥಾನೇ ಅಖಿಲೈಃ ಪಠ್ಯಮಾನಸ್ಯ ವೇದವಾಕ್ಯಾನವಯವತಾಯಾಃ ಸುಪ್ರಸಿದ್ಧತ್ವಾತ್ । ಅನ್ಯಥಾ ಅಧ್ಯಯನೋಪಕ್ರಮವಿರತಿವೈಚಿತ್ರ್ಯೇಽಪಿ 'ಓಮಿತಿ ಬ್ರಹ್ಮ' ಇತ್ಯಾದಿವನ್ನಿಯತಸ್ಥಾನತಯಾ ಪಾಠಪ್ರಸಂಗಾತ್।**

**ಪಕ್ಷಸಪಕ್ಷಯೋಃ ಆದೌ ಉಚ್ಚಾರಣಂ ತು ಪ್ರಾಙ್ಮುಖತ್ವಾದಿವತ್ ಅಧ್ಯಯನ-ನಿಯಮಾಂತರ್ಗತಮಧ್ಯೇತೃಭಿರನುಷ್ಠೀಯತ ಇತ್ಯಸ್ತು।**

ಅಧ್ಯಯನದ ಪ್ರಾರಂಭದಲ್ಲಿ ಉಚ್ಚಾರ ಮಾಡಲ್ಪಡುವ ಓಂಕಾರವು ವೇದದ ಅವಯವವಾಗಿರುವುದರಿಂದ ಅನವಯವತ್ವ ಎಂಬ ಸಾಧ್ಯವು ದೃಷ್ಟಾಂತದಲ್ಲಿ ಬರುವು-ದಿಲ್ಲವಾದ್ದರಿಂದ ಸಾಧ್ಯವೈಕಲ್ಯದೋಷ ಬರುತ್ತದೆಂದು ತಿಳಿಯಬಾರದು. ಏಕೆಂದರೆ, ಅಧ್ಯಯನದ ಉಪಕ್ರಮ ಮತ್ತು ವಿರಾಮಗಳಲ್ಲಿ ಉಚ್ಚಾರಣೆಯ ಕ್ರಮದಲ್ಲಿ ವೈಚಿತ್ರ್ಯವಿದೆ. ಆಯಾ ಸ್ಥಾನಗಳನ್ನು ಬಿಟ್ಟು ಬೇರೆ ಬೇರೆ ಸ್ಥಳಗಳಲ್ಲಿ ಎಲ್ಲರಿಂದ ಉಚ್ಚಾರಮಾಡುವ ಓಂಕಾರವು ಆಯಾ ವೇದಭಾಗಗಳ ಅವಯವವಲ್ಲವೆಂದೇ ಪ್ರಸಿದ್ಧವಾಗಿರುತ್ತದೆ. ಹೀಗೊ-ಪ್ಪದಿದ್ದರೆ ಅಧ್ಯಯನದ ಉಪಕ್ರಮ ಮತ್ತು ವಿರಾಮಗಳಲ್ಲಿ ವೈಚಿತ್ರ್ಯವಿದ್ದರೂ ಕೂಡ 'ಓಂ ಇತಿ ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ ಇರುವಂತೆ ನಿಯತವಾದ ಸ್ಥಾನದಲ್ಲಿಯೇ ಓಂಕಾರವು ಇರಬೇಕಾದ ಪ್ರಸಂಗ ಬರುತ್ತದೆ.

ಸೂತ್ರದ ಅಧ್ಯಯನದ ಪ್ರಾರಂಭದಲ್ಲಿಯೂ ಕೂಡ ಓಂಕಾರವನ್ನು ಏಕೆ ಮೊದಲು ಉಚ್ಚಾರ ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ – ಸ್ವಶಾಖಾಧ್ಯಯನವನ್ನು ಪೂರ್ವಾಭಿಮುಖವಾಗಿಯೇ ಮಾಡಬೇಕು ಎಂಬ ನಿಯಮ ಹೇಗಿದೆಯೋ ಆದರಂತೆ ಪ್ರಾರಂಭದಲ್ಲಿ ಓಂಕಾರವು ಉಚ್ಚಾರ ಮಾಡಿಯೇ ಅಧ್ಯಯನ ಮಾಡಬೇಕು ಎಂಬ ನಿಯಮವಿರುತ್ತದೆ. ಅದಕ್ಕನುಸಾರಿಯಾಗಿ ಸೂತ್ರದ ಪ್ರಾರಂಭದಲ್ಲಿ ಓಂಕಾರವನ್ನು ಉಚ್ಚರಿ-ಸುತ್ತಾರೆ.

## ಎಲ್ಲಾ ಸೂತ್ರಗಳಲ್ಲಿ ಅನುಗತವಾಗಬೇಕೆಂಬ ಉದ್ದೇಶದಿಂದ ಓಂಕಾರವನ್ನು ಬಿಡಿಸಿ ಹೇಳಿದ್ದಾರೆ

**ಏವಂ ಚ 'ಅಯಮೋಂಕಾರಃ ಸೂತ್ರಕೃತಾ ಮಂಗಲಾರ್ಥತಯಾ ಸೂತ್ರಾದೌ ಉಪನಿಬದ್ಧಃ' ಇತ್ಯನುಪಪನ್ನಮಿತ್ಯತ ಆಹ – ಸರ್ವತ್ರ ಇತಿ ॥**

**ಅಖಿಲೈಃ ಸೂತ್ರಪಾಠಕೈಃ ಯತ್ ಪೃಥಗ್ ಅಸಂಹಿತತಯಾ ಓಂಕ್ರಿಯತೇ ತತ್ ಸರ್ವತ್ರ ಸೂತ್ರೇಷು ಅನುಗತತ್ವೇನ ಅಭಿಲಷಿತೇನ ನಿಮಿತ್ತೇನ ಉಪಪದ್ಯತೇ ॥**

ಆದ್ದರಿಂದ ಸೂತ್ರಕಾರರು ಈ ಓಂಕಾರವನ್ನು ಮಂಗಲಾರ್ಥಕವಾಗಿ ಸೂತ್ರದ ಪ್ರಾರಂಭದಲ್ಲಿ ಉಲ್ಲೇಖ ಮಾಡಿದ್ದಾರೆ ಎಂಬುದಾಗಿ ತಿಳಿಸುವ 'ತತ್ರ ತಾರಾಥಮೂಲತ್ವಮ್ ' ಎಂಬ ಅನುವ್ಯಾಖ್ಯಾನಪದ್ಯವು ಅನುಪಪನ್ನವಾಗುತ್ತದೆಂದು ಪೂರ್ವಪಕ್ಷ.

ಸಮಾಧಾನ – ಇಲ್ಲಿಯ ತನಕ ಮಾಡಿದ ಆಕ್ಷೇಪವು ಅಯುಕ್ತವಾಗಿದೆ ಎಂಬುದನ್ನು 'ಸರ್ವತ್ರಾನುಗತತ್ವೇನ' ಎಂಬ ಅನುವ್ಯಾಖ್ಯಾನದ ಉತ್ತರಾರ್ಧವೇ ಉತ್ತರಿಸುತ್ತಿದೆ.

ಎಲ್ಲಾ ಸೂತ್ರಪಾಠಕರಿಂದ ಸಂಧಿಯನ್ನು ಮಾಡದೇ ಪ್ರತ್ಯೇಕವಾಗಿ ಓಂಕಾರವು ಉಚ್ಚರಿಸಲ್ಪಡುತ್ತದೆ. ಈ ಓಂಕಾರವು ಮುಂದಿನ ಎಲ್ಲಾ ಸೂತ್ರಗಳಲ್ಲೂ ಅನುಗತವಾಗುತ್ತದೆ. ಇದನ್ನು ತಿಳಿಸುವ ಅಭಿಪ್ರಾಯದಿಂದ ಸೂತ್ರಕಾರರು ಸಂಧಿಯನ್ನು ಮಾಡದೇ ಬಿಡಿಸಿ ''ಓಂ'' ಎಂದು ಉಚ್ಚರಿಸಿದ್ದಾರೆ.

## ಓಂಕಾರವನ್ನು ಪ್ರತ್ಯೇಕವಾಗಿಯೇ ಉಚ್ಚರಿಸುತ್ತಾರೆ

**ಪರಿಮಳ – ಉತ್ತರಾರ್ಧಮವತಾರಯತಿ – ನನ್ವಿತ್ಯಾದಿನಾ ॥ ಅಧ್ಯೇತೃಭಿರಿತಿ ॥ 'ಬ್ರಹ್ಮಸೂತ್ರಾಣಾಮ್' ಇತಿ ಯೋಜ್ಯಮ್ । ಸೂತ್ರೇಽನ್ವಯಪ್ರತಿಯೋಗಿಸಮರ್ಪಕೋ ನೇತಿ ಸಾಧ್ಯಾರ್ಥಃ।**

ಅನುವ್ಯಾಖ್ಯಾನದ ಉತ್ತರಾರ್ಧಕ್ಕೆ ''ನನು'' ಇತ್ಯಾದಿ ಗ್ರಂಥದಿಂದ ಅವತಾರಿಕೆಯನ್ನು ನೀಡುತ್ತಿದ್ದಾರೆ. ಅಧ್ಯೇತೃಭಿಃ ಎಂಬ ಪದದ ಹಿಂದೆ ಬ್ರಹ್ಮಸೂತ್ರಾಣಾಂ ಎಂಬ ಪದವನ್ನು ಇಟ್ಟುಕೊಳ್ಳಬೇಕು. ''ನ ಸೂತ್ರಾವಯವಃ'' ಸೂತ್ರದಲ್ಲಿರುವ ಪದಗಳ ಅರ್ಥದಿಂದ ಅನ್ವಯವನ್ನು ಹೊಂದುವ ಪ್ರತಿಯೋಗಿ ಸಮರ್ಪಕವಾದ ಅರ್ಥವನ್ನು ಹೇಳುವುದಿಲ್ಲ ಎಂಬುದು ಸಾಧ್ಯದ ಅರ್ಥ.

ವಿವರಣೆ – ಅನುಮಾನಸ್ವರೂಪ ಹೀಗಿದೆ – 'ಸೂತ್ರಾದೌ ಉಚ್ಚಾರ್ಯಮಾಣಃ ಓಂಕಾರಃ ನ ಸೂತ್ರಾವಯವಃ ಲಕ್ಷಣಾಂತರಾಭಾವೇ ಸತಿ ಅಸಂಹಿತತಯಾ ಸಂಪಾಠೇ ಅಖಿಲೈಃ ಪಠ್ಯಮಾನತ್ವಾತ್' ಎಂದು. ಈ ಅನುಮಾನದಲ್ಲಿ ಸಾಧ್ಯಕ್ಕೆ 'ಸೂತ್ರೇ ಅನ್ವಯಪ್ರತಿಯೋಗಿಸಮರ್ಪಕೋ ನ ಭವತಿ ಎಂದರ್ಥ. ಪ್ರತಿಯೊಬ್ಬರೂ ಕೂಡ ಸಂಹಿತಾಪಾಠದಲ್ಲಿ ಓಂಕಾರವನ್ನು ಬಿಡಿಸಿ ಉಚ್ಚಾರ ಮಾಡುತ್ತಾರೆ. ಇದರಿಂದಲೇ ಇದು ಸೂತ್ರಾವಯವವಲ್ಲವೆಂದು ಸಿದ್ಧವಾಗುತ್ತದೆ.

## ಓಂಕಾರವು ಸೂತ್ರಾವಯವವಲ್ಲವೆಂದು ಸಾಧಿಸುವ ಅನುಮಾನದಲ್ಲಿ ದಳಕೃತ್ಯವಿಚಾರ

ಪರಿಮಳ– ಸಂಪಾಠ ಇತಿ ॥ 'ಸಂಹಿತಾಧ್ಯಯನೇ' ಇತ್ಯರ್ಥಃ । ಅಥಾದಿಪದೇ ವ್ಯಭಿಚಾರವಾರಣಾಯೋಕ್ತಮ್ – ಅಸಂಹಿತತಯೇತಿ ॥ ಅಸಂಶ್ಲಿಷ್ಟತಯಾ ಇತ್ಯರ್ಥಃ । 'ಪರಃ ಸನ್ನಿಕರ್ಷಃ ಸಂಹಿತಾ' ಇತಿ ಪಾಣಿನ್ಯುಕ್ತೇಃ । 'ಹರೀ ಇಹೋಪವಕ್ಷ್ಯತಃ' । 'ಇಂದ್ರವಾಯೂ ಇಮೇ ಸುತಾಃ' 'ಉಭೇ ಅಹನೀ ಸುದಿನೇ ವಿವಸ್ವತಃ' 'ಅಃ ಇತಿ ಬ್ರಹ್ಮ' 'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾದೌ ಹರೀ ಇಹೇತ್ಯಾದಿಶಬ್ದೇಷು ಸಾಮಾನ್ಯತಃ ಪ್ರವೃತ್ತವ್ಯಾಪ್ತೇರವ್ಯಭಿಚಾರಾಯ ಸತ್ಯಂತಮ್ । 'ಈದೂದೇದ್ ದ್ವಿವಚನಂ ಪ್ರಗೃಹ್ಯಮ್' । ವಿವೃತೌ ಅಪಿ ಸರ್ಗಃ ಸ್ಯಾತ್ । 'ವಿಶ್ಲಿಷ್ಟಾರ್ಥೇ ಚ ವಿಶಿಷ್ಟಮ್' ಇತ್ಯಾದಿ ಲಕ್ಷಣಾಂತರಾಭಾವೇ ಸತಿ ಇತ್ಯರ್ಥಃ । ಪದಾಧ್ಯಯನೇಽಸಂಹಿತತಯಾ ಪಠ್ಯಮಾನ-ಪದೇಷ್ವವ್ಯಭಿಚಾರಾಯ – ಸಂಪಾಠ ಇತಿ ॥ 'ಯ ಏವಮುಕ್ತಹೇತುಯುಕ್ತಃ ಸ ತದವ-ಯವೋ ನ' ಇತಿ ಸಾಮಾನ್ಯವ್ಯಾಪ್ತಿಮುಪೇತ್ಯಾಹ – ವೇದೇತಿ ॥ ವಿಪಕ್ಷೇ ಹೇತೂಚ್ಛಿತ್ತಿ-ರೂಪಬಾಧಕತರ್ಕಮಾಹ – ಅನ್ಯಥೇತಿ ॥ ಅನ್ಯಾನ್ಯಸ್ಥಾನ ಇತಿ ॥ ಏತೇನ 'ವಿಮತಃ ಓಂಕಾರೋ ನ ವೇದವಾಕ್ಯಾವಯವಃ ಅನ್ಯಾನ್ಯಸ್ಥಾನೇ ಪಠ್ಯಮಾನತ್ವಾತ್ ಸಾಮ್ನಿ ಸ್ತೋಭಾಕ್ಷರವತ್, ವ್ಯತಿರೇಕೇಣ ವೇದಗತಪದವತ್' ಇತಿ ಸೂಚಿತಮ್ । ವಿಪಕ್ಷೇ ಬಾಧಕಮಾಹ – ಅನ್ಯಥೇತಿ ॥

''ಸಂಪಾಠೇ'' – ಸಂಹಿತಾಧ್ಯಯನದ ಪಾಠದಲ್ಲಿ ಎಂದರ್ಥ. 'ಲಕ್ಷಣಾಂತರಾಭಾವೇ ಸತಿ ಅಸಂಹಿತತಯಾ ಸಂಪಾಠೇ ಅಖಿಲೈಃ ಪಠ್ಯಮಾನತ್ವಾತ್' ಎಂಬ ಅನುಮಾನದಲ್ಲಿ ಅಥ ಮತ್ತು ಬ್ರಹ್ಮ ಮೊದಲಾದ ಸೂತ್ರಘಟಕಪದಗಳಲ್ಲಿ ವ್ಯಭಿಚಾರವನ್ನು ಪರಿಹರಿಸಲು ''ಅಸಂಹಿತತಯಾ'' ಎಂದು ಹೇಳಿದ್ದಾರೆ. 'ಬಿಡಿಸಿ ಹೇಳದಿರುವುದರಿಂದ' ಎಂದರ್ಥ. 'ಪರಃ-ಸನ್ನಿಕರ್ಷಃ ಸಂಹಿತಾ' ಎಂಬ ಪಾಣಿನಿಸೂತ್ರದ ಪ್ರಕಾರ ಇಂಥಲ್ಲಿ ಸಂಹಿತಾಸಂಜ್ಞೆಯು ಬರುತ್ತದೆ. 'ಹರೀ ಇಹೋಪವಕ್ಷ್ಯತಃ' 'ಇಂದ್ರವಾಯೂ ಇಮೇ ಸುತಾಃ' 'ಉಭೇ ಅಹನೀ ಸುದಿನೇ ವಿವಸ್ವತಃ' 'ಅಃ ಇತಿ ಬ್ರಹ್ಮ' 'ತಮೇವೈಕಂ ಜಾನಥ ಆತ್ಮಾನಮ್' ಇವೇ ಮೊದಲಾದ ವೇದವಾಕ್ಯಗಳಲ್ಲಿರುವ ಹರಿ, ಇಂದ್ರ, ವಾಯು, ಉಭೇ, ಅಹನೀ, ಜಾನಥ ಈ ಪದಗಳು ಮುಂದಿನ ವರ್ಣಗಳ ಜೊತೆ ಸಂಧಿಯಿಲ್ಲದೇ ಪಠಿತವಾಗುತ್ತವೆ. ಆದರೆ ಅವು ಆಯಾ ವೇದವಾಕ್ಯಗಳಲ್ಲಿ ಸೇರಿಕೊಂಡಿರುತ್ತವೆ. ಹೀಗೆ ವೇದಘಟಕವಾದ ಹರಿ ಮೊದಲಾದ ಪದಗಳಲ್ಲಿ ಅನವಯವತ್ವವೆಂಬ ಸಾಧ್ಯವು ಇರುವುದಿಲ್ಲ. ಅಸಂಹಿತತಾ ಎಂಬ ವಿಶೇಷಣವನ್ನು ನೀಡಿದರೂ ಕೂಡ ವ್ಯಭಿಚಾರವು ಪರಿಹಾರವಾಗುವುದಿಲ್ಲ. ಇದನ್ನು ಪರಿಹಾರಮಾಡಲು 'ಲಕ್ಷಣಾಂತರಾ-ಭಾವೇ ಸತಿ' ಎಂಬ ವಿಶೇಷಣವನ್ನು ಹೇತುವಿನಲ್ಲಿ ನೀಡಬೇಕು.

'ಲಕ್ಷಣಾಂತರಾಭಾವೇ ಸತಿ' – ಸಂಧಿಯಾಗಬೇಕೆಂದು ತಿಳಿಸುವ ಬೇರೆ ಪ್ರಮಾಣಗಳಿಲ್ಲ-ದಿದ್ದರೆ ಎಂದರ್ಥ. 'ಈದೂದೇದ್ ದ್ವಿವಚನಂ ಪ್ರಗೃಹ್ಯ' ಎಂಬ ಸೂತ್ರದಿಂದ ಈಕಾರ, ಊಕಾರ, ಏಕಾರಾಂತವಾದ ದ್ವಿವಚನಕ್ಕೆ ಪ್ರಗೃಹ್ಯಸಂಜ್ಞೆಯು ಬರುತ್ತದೆ. ಎಲ್ಲಿ ಪ್ರಗೃಹ್ಯಸಂಜ್ಞೆಯು ಬಂದಿರುತ್ತದೋ ಅಲ್ಲಿ ಸಂಧಿಯು ಆಗುವುದಿಲ್ಲ. ಈ ಪ್ರಮಾಣಗಳಿಗನುಸಾರಿಯಾಗಿ 'ಹರಿ, ಇಂದ್ರ, ವಾಯು, ಉಭೇ' ಮೊದಲಾದ ಪದಗಳಿಗೆ ಸಂಧಿಯಿಲ್ಲದೇ ಪಾಠಪರಂಪರೆಯು ನಡೆದಿದೆ. ಆದ್ದರಿಂದ 'ಲಕ್ಷಣಾಂತರಾಭಾವೇ ಸತಿ' ಎಂಬ ಸತ್ಯಂತವು ಬರುವುದಿಲ್ಲವಾದ್ದರಿಂದ ವಿಶಿಷ್ಟಹೇತುವೂ ಕೂಡ ಪ್ರಾಪ್ತವಾಗುವುದಿಲ್ಲ. ಇದರಂತೆ 'ವಿವೃತಾವವಿಸರ್ಗಃ ಸ್ಯಾತ್' ಎಂಬ ಪ್ರಮಾಣಕ್ಕೆ ಅನುಸಾರಿಯಾಗಿ ಅಃ ಎಂಬಲ್ಲಿರುವ ವಿಸರ್ಗಕ್ಕೆ ಸಂಧಿಯನ್ನು ಮಾಡದೇ ಪಾಠ ಇರುತ್ತದೆ. ಮತ್ತು 'ವಿಶ್ಲಿಷ್ಟಾರ್ಥೇ ಚ ವಿಶಿಷ್ಟಮ್' ಎಂಬ ಪ್ರಮಾಣಕ್ಕನುಸಾರಿಯಾಗಿ 'ಆತ್ಮಾನಂ' ಎಂಬ ಪದದ ಜೊತೆಗೆ ಸಂಧಿಯಿಲ್ಲದೇ 'ಜಾನಥ' ಎಂಬ ಪದದ ಪಾಠವಿರುತ್ತದೆ. ಆದ್ದರಿಂದ 'ಲಕ್ಷಣಾಂತರಾಭಾವೇ ಸತಿ' ಎಂಬ ಸತ್ಯಂತವಚನವು ಅನ್ವಯವನ್ನು ಹೊಂದು-

ವುದಿಲ್ಲ. ಹೇತುವಿಗೆ ವ್ಯಭಿಚಾರದೋಷವು ಬರುವುದಿಲ್ಲ. ಅಧ್ಯಯನವನ್ನು ಮಾಡುವ ಸಂದರ್ಭದಲ್ಲಿ ವೇದದ ಪದಗಳನ್ನು ಸಂಧಿಮಾಡದೇ ಉಚ್ಚರಿಸುತ್ತಾರೆ. ಹಾಗಾಗಿ ಹಿಂದೆ ಹೇಳಿದ ವಿಶಿಷ್ಟಹೇತುವು ಪದಪಾಠದಲ್ಲಿ ಅಸಂಹಿತವಾಗಿ ಉಚ್ಚರಿಸಲ್ಪಡುವ ವೇದದಲ್ಲಿರುವ ಪದಗಳಲ್ಲಿಯೇ ಇರುತ್ತದೆ. ಆದರೆ ಅನವಯವತ್ವ ಎಂಬ ಸಾಧ್ಯವು ಅಲ್ಲಿ ಇಲ್ಲದಿರುವುದರಿಂದ ವ್ಯಭಿಚಾರವು ಬರುತ್ತದೆ. ಇದನ್ನು ಪರಿಹಾರ ಮಾಡುವುದಕ್ಕೆ "ಸಂಪಾಠೇ" ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಸಂಹಿತಾಧ್ಯಯನವನ್ನು ಮಾಡುವ ಸಮಯದಲ್ಲಿ ಪದಗಳನ್ನು ಅಸಂಹಿತ-ವಾಗಿ ಪಠಿಸುತ್ತಾರೆ. ಈ ವಿಶಿಷ್ಟಹೇತುವು ಪದ ಪಾಠದ ಅಸಂಹಿತಪದಗಳಲ್ಲಿ ಬರುವುದಿಲ್ಲ. ಹಾಗಾಗಿ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲ. ಹೀಗೆ ಸೂತ್ರಾವಯವವಲ್ಲ; ಅನವಯವತ್ವ ಎಂಬ ಸಾಧ್ಯವನ್ನು ಸಾಧಿಸುವ ಅನುಮಾನದಲ್ಲಿ ಹೇತುವಿನ ವಿಶೇಷಣಗಳೆಲ್ಲವೂ ಸಾರ್ಥಕ-ಗಳಾಗುತ್ತವೆ.

'ಬೇರೆ ಪ್ರಮಾಣಗಳು ಇಲ್ಲದೇ ಸಂಹಿತಾಧ್ಯಯನದಲ್ಲಿ ಅಸಂಹಿತವಾಗಿ ಪ್ರತಿಯೊಬ್ಬರಿಂದ ಯಾವುದು ಪಠಿತವಾಗುತ್ತದೋ ಅದು ಆ ವಾಕ್ಯದ ಅವಯವವಾಗಿರುವುದಿಲ್ಲ' ಎಂಬ ಸಾಮಾನ್ಯವ್ಯಾಪ್ತಿಯು ಇಲ್ಲಿ ಇರುತ್ತದೆ. ಈ ರೀತಿಯಾಗಿ ಅಂಗೀಕಾರ ಮಾಡಿ ವೇದಾಧ್ಯಯನದ ಉಪಕ್ರಮದಲ್ಲಿ ಅಸಂಹಿತವಾಗಿ ಪಠಿತವಾದ ಓಂಕಾರವು ದೃಷ್ಟಾಂತವಾಗುತ್ತದೆಂದು "ವೇದಾ-ಧ್ಯಯನೋಪಕ್ರಮ" ಎಂಬ ವಾಕ್ಯದಿಂದ ತಿಳಿಸುತ್ತಾರೆ. ಓಂಕಾರವು ಸೂತ್ರದ ಅವಯವವಾಗು-ತ್ತದೆಂಬ ವಿಪಕ್ಷವನ್ನು ಒಪ್ಪಿದರೆ ಅಥ ಮತ್ತು ಅತಃ ಎಂಬ ಶಬ್ದಗಳಂತೆ ಓಂಕಾರವೂ ಕೂಡ ಒಟ್ಟಿಗೆ ಸೇರಿಸಿ ಹೇಳಬೇಕಾಗಿತ್ತು. ಒಟ್ಟಿಗೇ ಸೇರಿಸದೇ ಅಸಂಹಿತವಾದ ನಿರ್ದೇಶವು ಓಂಕಾರಕ್ಕೆ ಇಲ್ಲದೇ ಇರಬೇಕಾದೀತು ಎಂಬ ಬಾಧಕತರ್ಕವನ್ನು "ಅನ್ಯಥಾ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

"ಅನ್ಯಾನ್ಯಸ್ಥಾನೇ" – ಹೀಗೆ ಹೇಳಿದ್ದರಿಂದ ಸೂಚಿತವಾದ ಅನುಮಾನಪ್ರಯೋಗವು ಹೀಗಿದೆ – 'ವಿಮತೋ ಓಂಕಾರೋ ನ ವೇದವಾಕ್ಯಾವಯವಃ ಅನ್ಯಾನ್ಯಸ್ಥಾನೇ ಪಠ್ಯಮಾನ-ತ್ವಾತ್ ಸಾಮ್ನಿ ಸ್ತೋಭಾಕ್ಷರವತ್, ವ್ಯತಿರೇಕೇಣ ವೇದಗತಪದವತ್' - 'ವಿವಾದಕ್ಕೆ ವಿಷಯ-ವಾದ ಓಂಕಾರವು ಬೇರೆ ಬೇರೆ ಕಡೆಗಳಲ್ಲಿ ಪಠಿತವಾಗಿರುವ ಕಾರಣ ವೇದವಾಕ್ಯದ

ಅವಯವವಲ್ಲ, ಸಾಮವೇದದಲ್ಲಿ ಪಠಿಸುವ ವ್ಯರ್ಥವಾದ ಅಕ್ಷರಗಳು ಇದಕ್ಕೆ ದೃಷ್ಟಾಂತ-ವಾಗಿದೆ. ವೇದದಲ್ಲಿರುವ ಪದಗಳು ವ್ಯತಿರೇಕದೃಷ್ಟಾಂತವಾಗಿವೆ'. ಈ ಅನುಮಾನದಲ್ಲಿ ಅನ್ಯಾನ್ಯಸ್ಥಾನದಲ್ಲಿ ಪಠಿತವಾದರೂ ಕೂಡ ಅವಯವವೇ ಆಗಲಿ ಎಂಬ ವಿಪಕ್ಷೇ ಬಾಧಕ-ತರ್ಕವನ್ನು ''ಅನ್ಯಥಾ'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಿವರಣೆ – 'ಓಂಕಾರಃ ನ ಸೂತ್ರಾವಯವಃ ಪಠ್ಯಮಾನತ್ವಾತ್' ಎಂದಷ್ಟೇ ಅನುಮಾನಪ್ರಯೋಗ-ವನ್ನು ಮಾಡಿದರೆ ಅಥ ಮತ್ತು ಅತಃ ಇತ್ಯಾದಿ ಪದಗಳೂ ಕೂಡ ಪಠ್ಯಮಾನವೇ ಆಗಿವೆ. ಆದರೆ ಅನವಯವತ್ವ ಎಂಬ ಸಾಧ್ಯವು ಅವುಗಳಲ್ಲಿ ಬರುವುದಿಲ್ಲ. ಸೂತ್ರದ ಅವಯವಗಳೇ ಆಗಿವೆ. ಆದ್ದರಿಂದ ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕಾಗಿ ಅಸಂಹಿತವಾಗಿರಬೇಕು ಎಂಬುದನ್ನು ಹೇತು-ವಿಶೇಷಣವನ್ನಾಗಿ ಹೇಳಿದ್ದಾರೆ. ಅಥ ಮತ್ತು ಅತಃ ಈ ಶಬ್ದಗಳನ್ನು ಸಂಹಿತವಾಗಿಯೇ ಪಠಿಸುತ್ತಾರೆ. ಅಸಂಶ್ಲಿಷ್ಟವಾಗಿ ಯಾವುದನ್ನು ಪಠಿಸುತ್ತಾರೋ ಅಲ್ಲಿ ಸಂಹಿತಾಸಂಜ್ಞೆಯು ಬರುತ್ತದೆ. 'ಪರಃಸನ್ನಿಕರ್ಷಃ ಸಂಹಿತಾ' ಎಂಬ ಸೂತ್ರವು ಅತ್ಯಂತ ಸನ್ನಿಕರ್ಷವಿದ್ದಾಗ ಮಾತ್ರ ಸಂಹಿತಾಸಂಜ್ಞೆಯನ್ನು ವಿಧಿಸುತ್ತದೆ.

'ಅಸಂಹಿತತಯಾ ಪಠ್ಯಮಾನತ್ವಾತ್' ಎಂದು ಹೇಳಿದರೂ ಕೂಡ ಪುನಃ ವ್ಯಭಿಚಾರ ಬರುತ್ತದೆ. 'ಹರೀ ಇವೋಪವಕ್ಷ್ಯತಃ' ಎಂಬ ಈದಂತವಾದ 'ಇಂದ್ರವಾಯೂ ಇಮೇ ಸುತಾಃ' ಎಂಬ ಓದಂತವಾದ 'ಉಭೇ ಅಹನೀ ಸುದಿನೇ' ಎಂಬ ಏದಂತವಾದ ಪ್ರಯೋಗಗಳಲ್ಲಿ 'ಅಸಂಹಿತತಯಾ ಪಠ್ಯಮಾನತ್ವ'ವೇ ಇದೆ. ಹಾಗೂ 'ಅಃ ಇತಿ ಬ್ರಹ್ಮ' ಎಂಬ ವೇದವಾಕ್ಯದಲ್ಲೇ ವಿಸರ್ಗವನ್ನು ಲೋಪ ಮಾಡದೇ ಉಚ್ಚರಿಸಲಾಗಿದೆ. 'ತಮೇವೈಕಂ ಜಾನಥ ಆತ್ಮಾನಂ' ಎಂಬಲ್ಲಿ ಜಾನಥಾತ್ಮಾನಂ ಎಂದು ಸಂಧಿಯನ್ನು ಮಾಡದೇ ಪ್ರತ್ಯೇಕವಾಗಿ ಹೇಳಲಾಗಿದೆ. ಈ ಎಲ್ಲಾ ಸ್ಥಳಗಳಲ್ಲಿ ಸಂಪಾಠದಲ್ಲೇ ಅಸಂಹಿತತಯಾ ಪಠ್ಯ-ಮಾನತ್ವ ಇರುತ್ತದೆ. ಆದರೆ ಇವುಗಳು ವಾಕ್ಯಾವಯವ ಅಲ್ಲ ಎಂದು ಹೇಳಲು ಸಾಧ್ಯವಿಲ್ಲ. ವಾಕ್ಯಾವ-ಯವಗಳೇ ಆಗಿವೆ. ಆದ್ದರಿಂದ ವ್ಯಭಿಚಾರದೋಷವು ಬರುತ್ತದಲ್ಲವೇ?

ಈ ವ್ಯಭಿಚಾರದೋಷದ ಪರಿಹಾರಕ್ಕಾಗಿ ಹೇತುವಿನಲ್ಲಿ 'ಲಕ್ಷಣಾಂತರಾಭಾವೇ ಸತಿ' ಎಂಬ ವಿಶೇಷಣವನ್ನು ನೀಡಬೇಕು. ಈಗ ಯಾವ ದೋಷಗಳಿಗೂ ಅವಕಾಶವಿಲ್ಲ. ಏಕೆಂದರೆ 'ಈದೂದೇದ್ ದ್ವಿವಚನಂ ಪ್ರಗೃಹ್ಯಮ್' ಎಂಬ ಸೂತ್ರವು ಈದಂತವಾದ, ಊದಂತವಾದ, ಏದಂತವಾದ ಶಬ್ದಗಳಿಗೆ ಮತ್ತು ದ್ವಿವಚನಾಂತವಾದ ಶಬ್ದಗಳಿಗೆ ಪ್ರಗೃಹ್ಯಸಂಜ್ಞೆಯು ಬರುತ್ತಿದೆ ಎಂದು ಹೇಳುತ್ತಿದೆ. ಅನಂತರ 'ಪ್ಲುತಃ ಪ್ರಗೃಹ್ಯಾಚಿ ನಿತ್ಯಮ್' ಎಂಬ ಮತ್ತೊಂದು ಸೂತ್ರವು ಪ್ರಗೃಹ್ಯಸಂಜ್ಞೆ ಇರುವುದಕ್ಕೆ ಪ್ರಕೃತಿ-

ಭಾವವನ್ನು ವಿಧಿಸುತ್ತದೆ. ಆದ್ದರಿಂದ ಹರೀ, ಉಭೇ, ಇಂದ್ರವಾಯೂ ಈ ಮೂರೂ ಶಬ್ದಗಳು ದ್ವಿವಚನಗಳಾಗಿರುವುದರಿಂದ ಅಸಂಹಿತತಯಾ ಪಠಿತವಾಗಿವೆ. ಸಂಧಿಯನ್ನು ಹೊಂದುವುದಿಲ್ಲ. ಈ ವಿಷಯದಲ್ಲಿ ಲಕ್ಷಣಾಂತರವೇ ಪ್ರಮಾಣವಾಗಿರುತ್ತದೆ. ಲಕ್ಷಣಶಬ್ದಕ್ಕೆ ಸೂತ್ರ ಎಂದರ್ಥ. ವಿಶೇಷವಾಗಿ ಸೂತ್ರಪ್ರಮಾಣವಿರುವುದರಿಂದ ಅಸಂಹಿತತಯಾ ಪಠ್ಯಮಾನತ್ವವು ಇಲ್ಲಿ ಇರುತ್ತದೆ. ಮತ್ತು 'ವಿವೃತಾ-ವಪಿ ಸರ್ಗಃ ಸ್ಯಾತ್' ಎಂಬುದಾಗಿ ಐತರೇಯಭಾಷ್ಯದಲ್ಲಿ ಪ್ರಮಾಣವನ್ನು ಆಚಾರ್ಯರು ಹೇಳಿರುತ್ತಾರೆ. ಎಲ್ಲಿ ವಿವೃತಿಯು ದ್ಯೋತ್ಯಮಾನವಾಗಿರುತ್ತದೋ ಅಲ್ಲಿ ವಿಸರ್ಗವನ್ನು ತಿಳಿಯಬೇಕು. ವಿವೃತಿಶಬ್ದಕ್ಕೆ ವೈಲಕ್ಷಣ್ಯ ಎಂದರ್ಥ. ಪರಮಾತ್ಮನಿಗೆ ವೈಲಕ್ಷಣ್ಯವಿರುವುದರಿಂದ ಅಃ ಎಂಬುದಾಗಿ ವಿಸರ್ಗಸಹಿತವಾಗಿ ಉಚ್ಚರಿಸಬೇಕು ಎಂಬುದಾಗಿ ಈ ಲಕ್ಷಣವು ತಿಳಿಸುತ್ತಿದೆ. ವಿವೃತಾವಪಿ ಎಂಬುದಕ್ಕೆ ವೈಲಕ್ಷಣ್ಯವಿದ್ದಲ್ಲೂ ಕೂಡ ಎಂದರ್ಥ. ಸರ್ಗಃ ಎಂಬ ಶಬ್ದಕ್ಕೆ ವಿಸರ್ಗ ಎಂದರ್ಥ. ಇದರ ಬಗ್ಗೆ ಐತರೇಯಭಾಷ್ಯವನ್ನು ನೋಡಿ ತಿಳಿಯಬೇಕು.

'ತಮೇವೈಕಂ ಜಾನಥ ಆತ್ಮಾನಮ್' ಎಂಬಲ್ಲಿ ಸಂಧಿಯನ್ನು ಮಾಡದೇ 'ಜಾನಥ ಆತ್ಮಾನಂ' ಎಂಬುದಾಗಿ ಪ್ರತ್ಯೇಕವಾಗಿ ಹೇಳಿದ್ದಾರೆ. ಈ ವಿಷಯದಲ್ಲಿ 'ವಿಶ್ಲಿಷ್ಟಾರ್ಥೇ ಚ ವಿಶಿಷ್ಟಮ್' ಎಂಬ ಋಗ್ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣವು ಇರುತ್ತದೆ. ಇದು ಮಹಾವ್ಯಾಕರಣದ ಸೂತ್ರವಾಗಿದೆ. ವಿಲಕ್ಷಣವಾದ ಅರ್ಥವನ್ನು ಹೇಳುವಾಗ ವಿಶ್ಲಿಷ್ಟವಾಗಿಯೇ ಪ್ರಯೋಗವನ್ನು ಮಾಡಬೇಕು. ಇಲ್ಲೂ ಸಹ ಪರಮಾತ್ಮನಿಗೆ ಜಗತ್ತಿನಿಂದ ವೈಲಕ್ಷಣ್ಯವನ್ನು ತಿಳಿಸುವುದಕ್ಕೋಸ್ಕರ ಬಿಡಿಸಿಯೇ (ಸಂಧಿಯನ್ನು ಮಾಡದೇ) ಪ್ರಯೋಗವನ್ನು ಮಾಡಿದ್ದಾರೆ. ಆದ್ದರಿಂದ 'ಲಕ್ಷಣಾಂತರಾಭಾವೇ ಸತಿ' ಎಂಬ ವಿಶೇಷಣವನ್ನು ಹೇತುವಿನಲ್ಲಿ ಹೇಳಿದಾಗ ಈ ಯಾವ ಸ್ಥಳಗಳಲ್ಲಿಯೂ ವ್ಯಭಿಚಾರದೋಷವು ಬರು-ವುದಿಲ್ಲ.

ಪದಪಾಠಕಾಲದಲ್ಲಿ ಪ್ರತಿಯೊಂದು ಪದಗಳನ್ನೂ ಅಸಂಹಿತವಾಗಿಯೇ ಪಠಿಸುತ್ತಾರೆ. 'ಅಗ್ನಿಂ' 'ಈಳೇ' 'ಪುರೋಹಿತಮ್' ಇತ್ಯಾದಿಯಾಗಿ. ಇವೆಲ್ಲವೂ ವಾಕ್ಯಾವಯವವೇ ಆಗಿರುವುದರಿಂದ ಪುನಃ ವ್ಯಭಿಚಾರ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ "ಸಂಪಾಠೇ" ಎಂಬುದಾಗಿ ಹೇಳಿರುತ್ತಾರೆ. ಸಂಹಿತಾಧ್ಯ-ಯನಕಾಲದಲ್ಲಿ ಮಾತ್ರ ಅಸಂಹಿತವಾಗಿ ಪಠಿತವಾಗಿರುವುದು ಹೇತುವಿನ ಅಭಿಪ್ರಾಯವಾಗಿದೆ.

ಓಂಕಾರವು ಸೂತ್ರಾವಯವ ಆಗುವುದಾದರೆ 'ಅಥಾತಃ' ಇತ್ಯಾದಿಶಬ್ದಗಳಂತೆ ಸಂಹಿತತಯಾ ಪಠ್ಯಮಾನವಾಗಬೇಕಿತ್ತು ಎಂಬುದಾಗಿ ಹೇತೂಚ್ಛಿತ್ತಿರೂಪವಾದ ಬಾಧಕತರ್ಕವನ್ನು "ಅನ್ಯಥಾ" ಇತ್ಯಾದಿಯಾಗಿ ಹೇಳುತ್ತಿದ್ದಾರೆ. ವೇದಾಧ್ಯಯನದ ಉಪಕ್ರಮದಲ್ಲಿ ಉಚ್ಚಾರ ಮಾಡುವ ಓಂಕಾರವೂ

ಕೂಡ ವೇದವಾಕ್ಯದ ಅವಯವವೇ ಆಗಿದೆ ಎಂಬುದಾಗಿ ಆಕ್ಷೇಪ ಮಾಡಿದರೆ ಮತ್ತೊಂದು ಅನುಮಾನದಿಂದ ಅದು ವೇದವಾಕ್ಯದ ಅವಯವವಲ್ಲವೆಂದು ಸಾಧಿಸುತ್ತಿದ್ದಾರೆ. 'ವಿಮತಃ ಓಂಕಾರಃ ನ ವೇದವಾಕ್ಯಾವಯವಃ ಅನ್ಯಾನ್ಯಸ್ಥಾನೇ ಪಠ್ಯಮಾನತ್ವಾತ್ ಸಾಮ್ನಿ ಸ್ತೋಭಾಕ್ಷರವತ್' ಎಂದು. ಇವತ್ತಿನ ಅಧ್ಯಯನವು ಎಲ್ಲಿಗೆ ಮುಗಿಯುತ್ತದೋ ಅಲ್ಲಿಗೆ ಓಂಕಾರವನ್ನು ಹೇಳುತ್ತೇವೆ. ಮರುದಿವಸ ಪ್ರಾರಂಭವಾಗುವ ಭಾಗದ ಮೊದಲು ಓಂಕಾರವನ್ನು ಹೇಳುತ್ತೇವೆ. ಹೀಗೆ ನಿಯತಸ್ಥಾನವಿಲ್ಲದೇ ಬೇರೆ ಬೇರೆ ಸ್ಥಳದಲ್ಲಿ ಓಂಕಾರವನ್ನು ಉಚ್ಚರಿಸುವ ಓಂಕಾರವು ಆಯಾ ವೇದವಾಕ್ಯದ ಅವಯವವಾಗಲು ಸಾಧ್ಯವಿಲ್ಲ ಎಂಬುದು ಈ ಅನುಮಾನದ ಅಭಿಪ್ರಾಯವಾಗಿದೆ.

## ಆಶ್ವಲಾಯನಸೂತ್ರದ ಉಲ್ಲೇಖದಿಂದ ಓಂಕಾರವು ಕೇವಲ ನಿಯಮಸಿದ್ಧವೆಂದು ಆಕ್ಷೇಪ

ಪರಿಮಳ– ಓಂ ಇತಿ ಬ್ರಹ್ಮೇತಿ ಇತಿ ॥ 'ಓಂ ಇತಿ ಬ್ರಹ್ಮ, ಓಂ ಇತೀದಂ ಸರ್ವಂ, ಓಂ ಇತ್ಯೇತದನುಕೃತಿ ಹ ಸ್ಮ ವಾ' ಇತ್ಯಾದಿ ತೈತ್ತಿರೀಯೋಪನಿಷದೀವ ಋಗಾದಿಶಾಖಾದಾವಪಿ ತತ್ರ ತತ್ರ ಓಂಕಾರಪಾಠಪ್ರಸಂಗಾದಿತ್ಯರ್ಥಃ।

ನನು 'ಅಯಮೋಂಕಾರಃ ಸೂತ್ರವೇದಯೋರವಯವೋ ಭವಿತುಮರ್ಹತಿ । ತದಾದೌ ಅಧ್ಯೇತೃಭಿರ್ನಿಯಮೇನ ಪಠ್ಯಮಾನತ್ವಾತ್ ಅಥಾದಿಪದವತ್' ಇತ್ಯವಯವತ್ವೇऽಪಿ ಅಸ್ತಿ ಮಾನಮ್ ಇತ್ಯತೋऽಸ್ಯ ಹೇತೋರನ್ಯಥೋಪಪತ್ತಿಂ ಸದೃಷ್ಟಾಂತಮಾಹ – ಪಕ್ಷಸಪಕ್ಷಯೋರಿತಿ ॥ 'ಅಥ ಸ್ವಾಧ್ಯಾಯವಿಧಿಃ ಪ್ರಾಗ್ ವೋದಗ್ವಾ ಗ್ರಾಮಾನ್ನಿಷ್ಕ್ರಮ್ಯ ಆಪ ಆಪ್ಲುತ್ಯ ಶುಚೌ ದೇಶೇ ಯಜ್ಞೋಪವೀತ್ಯಾಚಮ್ಯಾಕ್ಲಿನ್ನವಾಸಸಾ ದರ್ಭಾಣಾಂ ಮಹದುಪಸ್ತೀರ್ಯ ಪ್ರಾಕ್ಕೂಲಾನಾಂ ತೇಷು ಪ್ರಾಙ್ಮುಖ ಉಪವಿಶ್ಯ' ಇತ್ಯಾದ್ಯುಕ್ತ್ವಾ 'ಅಧೀಯೇತ' ಇತ್ಯಾಮ್ನಾತಾ ಆಶ್ವಲಾಯನಸೂತ್ರೇ । 'ಬ್ರಹ್ಮಯಜ್ಞೇನ ಯಕ್ಷ್ಯಮಾಣಃ' ಇತ್ಯಾದಿನಾ ತೈತ್ತಿರೀಯಾದೌ ಚೋಕ್ತದಿಶಾ ಪೂರ್ವಾಭಿಮುಖತ್ವ-ಶುಚಿದೇಶಸ್ಥತ್ವ-ಶುಚಿತ್ವಾದಿರ್ಯಥಾ ಅಧ್ಯಯನಾಂಗತ್ವೇನೋಚ್ಯತೇ ತಥಾ ಓಂಕಾರೋऽಪ್ಯಸ್ತು ನ ತು ಸೂತ್ರಾವಯವತ್ವೇನ ಇತ್ಯರ್ಥಃ । ಮಂಗಲಾರ್ಥತಯಾ ಮಂಗಲಪ್ರಯೋಜನಕತ್ವೇನ

ಇತ್ಯರ್ಥಃ ॥ 'ಅಭಿಲಷಿತೇನ' ಇತಿ ಶೇಷೋಕ್ತಿಃ । 'ಅಭಿಮತೇನ' ಇತ್ಯರ್ಥಃ । 'ಅನು-ಗತತ್ವೇನ' ಇತಿ ಹೇತೌ ತೃತೀಯಾ ಇತ್ಯುಪೇತ್ಯ ತದರ್ಥಮಾಹ – ನಿಮಿತ್ತೇನೇತಿ ॥

'ಓಂ ಇತಿ ಬ್ರಹ್ಮ', 'ಓಂ ಇತೀದಗ್ಂ ಸರ್ವಂ' 'ಓಂ ಇತ್ಯೇತದನುಕೃತಿ ಹ ಸ್ಮ ವಾ' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಓಂಕಾರದಿಂದ ಕೂಡಿರುವ ಮಂತ್ರಗಳು ಕೇಳಿಸು-ತ್ತಿವೆ. ಇಲ್ಲಿರುವ ಓಂಕಾರಗಳಿಗೆ ನಿಯತಸ್ಥಾನವಿದೆ. ಇದರಂತೆ ವೇದಾಧ್ಯಯನದ ಪ್ರಾರಂಭದಲ್ಲಿ ಉಚ್ಚರಿಸುವ ಶಬ್ದಗಳಿಗೂ ನಿಯತಸ್ಥಾನದಲ್ಲಿ ಪಠಿಸುವ ಪ್ರಸಂಗ ಬರುತ್ತದೆ ಎಂಬುದು ವಾಕ್ಯದ ಅಭಿಪ್ರಾಯ.

'ಓಂಕಾರಃ ಸೂತ್ರವೇದಯೋಃ ಅವಯವಃ ಭವಿತುಮರ್ಹತಿ ತದಾದೌ ಅಧ್ಯೇತೃಭಿ-ರ್ನಿಯಮೇನ ಪಠ್ಯಮಾನತ್ವಾತ್ ಅಥಾದಿಪದವತ್' 'ಓಂಕಾರವು' ಸೂತ್ರ ಹಾಗೂ ವೇದಗಳ ಅವಯವವಾಗಿದೆ. ಏಕೆಂದರೆ ಸೂತ್ರ ಮತ್ತು ವೇದಗಳ ಪ್ರಾರಂಭದಲ್ಲಿ ಅಧ್ಯಯನ ಮಾಡುವ-ವರಿಂದ ನಿಯಮೇನ ಓಂಕಾರವು ಪಠಿತವಾಗಿರುತ್ತದೆ, ಅಥಾತಃ ಶಬ್ದಗಳಂತೆ' ಹೀಗೆ ಅನು-ಮಾನವನ್ನು ಮಾಡಬಹುದಲ್ಲವೇ? ಎಂದರೆ ಈ ಅನುಮಾನಪ್ರಯೋಗದಲ್ಲಿರುವ ಹೇತುವು ಸಾಧ್ಯವಿಲ್ಲದಿದ್ದರೂ ಕೂಡ ಸಂಗತವಾಗುತ್ತದೆ. ಆದ್ದರಿಂದ ಹೇತುವಿಗೆ ಅನ್ಯಥಾಸಿದ್ಧಿದೋಷವು ಬರುತ್ತದೆ. ಇದನ್ನು ದೃಷ್ಟಾಂತಪುರಸ್ಸರವಾಗಿ ''ಪಕ್ಷಸಪಕ್ಷಯೋಃ'' ಎಂಬ ವಾಕ್ಯದಿಂದ ತಿಳಿಸು-ತ್ತಿದ್ದಾರೆ.

''ಅಥ ಸ್ವಾಧ್ಯಾಯವಿಧಿಃ ಪ್ರಾಗ್ ವೋದಗ್ವಾ ಗ್ರಾಮಾನ್ನಿಷ್ಕ್ರಮ್ಯ ಅಪ ಆಪ್ಲುತ್ಯ ಶುಚೌ ದೇಶೇ ಯಜ್ಞೋಪವೀತ್ಯಾಚಮ್ಯಾಕ್ಲಿನ್ನವಾಸಸಾ ದರ್ಭಾಣಾಂ ಮಹದುಪಸ್ತೀರ್ಯ ಪ್ರಾಕ್ಕೂಲಾನಾಂ ತೇಷು ಪ್ರಾಙ್ಮುಖ ಉಪವಿಶ್ಯ' (ಸ್ವಶಾಖಾಧ್ಯಯನದ ವಿಧಾನ ಹೀಗಿದೆ) 'ಪೂರ್ವದಿಕ್ಕು ಅಥವಾ ಉತ್ತರದಿಕ್ಕಿನ ಮೂಲಕ ಗ್ರಾಮದಿಂದ ಹೊರಗೆ ತೆರಳಿ, ಸ್ವಚ್ಛನೀರಿನಲ್ಲಿ ಸ್ನಾನಮಾಡಿ, ಶುಚಿಯಾದ ದೇಶದಲ್ಲಿ ಯಜ್ಞೋಪವೀತಿಯಾಗಿ ಆಚಮನ ಮಾಡಿ, ಒಣಗಿದ ಬಟ್ಟೆಯನ್ನು ಧರಿಸಿ, ವಿಸ್ತಾರವಾಗಿ ದರ್ಭೆಗಳನ್ನು ಹಾಸಿ, ಪೂರ್ವಾಭಿಮುಖವಾದ ಆ ದರ್ಭೆ-ಗಳಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಂಡು ಅಧ್ಯಯನವನ್ನು ಮಾಡಬೇಕು' ಎಂಬುದಾಗಿ ಆಶ್ವಲಾಯನಸೂತ್ರವು ವಿಧಾನ ಮಾಡುತ್ತಿದೆ. ಮತ್ತು ತೈತ್ತಿರೀಯಾದಿಗಳಲ್ಲಿ 'ಬ್ರಹ್ಮಯಜ್ಞೇನ

ಯಕ್ಷ್ಯಮಾಣಃ' ಇತ್ಯಾದಿವಾಕ್ಯಗಳಿಂದ ಅಧ್ಯಯನ, ಬ್ರಹ್ಮಯಜ್ಞಾದಿಗಳ ನಿಯಮಗಳನ್ನು ಹೇಳಿರುತ್ತಾರೆ. ಇದರ ಪ್ರಕಾರ ಪೂರ್ವಾಭಿಮುಖವಾಗಿರುವಿಕೆ, ಶುಚಿದೇಶದಲ್ಲಿರುವಿಕೆ, ಶುಚಿಯಾಗಿರುವಿಕೆ ಮೊದಲಾದವುಗಳು ಅಧ್ಯಯನಾಂಗನಿಯಮಗಳಾಗಿವೆ ಎಂದು ಹೇಳುವಂತೆ ಓಂಕಾರವೂ ಸಹ ಅಧ್ಯಯನಾಂಗದ ನಿಯಮಗಳಲ್ಲಿಯೇ ಸೇರಿರುತ್ತದೆ. ಸೂತ್ರದ ಅವಯವತ್ವೇನ ಉಚ್ಚರಿತವಾಗಿರುವುದಿಲ್ಲ. ಇಷ್ಟು ಈ ವಾಕ್ಯದ ಅಭಿಪ್ರಾಯ.

''ಮಂಗಲಾರ್ಥತಯಾ'' – ಮಂಗಲಫಲವುಳ್ಳದ್ದೆಂದು ಅರ್ಥ. 'ಅಭಿಲಷಿತೇನ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಅಭಿಮತೇನ' = ಅಭಿಮತವಾದದ್ದರಿಂದ ಎಂದರ್ಥ. 'ಅನುಗತತ್ವೇನ' ಎಂಬ ಅನುವ್ಯಾಖ್ಯಾನದಲ್ಲಿರುವ ತೃತೀಯಾವಿಭಕ್ತಿಯು ಹೇತ್ವರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ ''ನಿಮಿತ್ತೇನ'' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ.

## ಅನುವ್ಯಾಖ್ಯಾನಶ್ಲೋಕದ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಸಂಗತಿಯೇ ಕಾಣಿಸುತ್ತಿಲ್ಲವಲ್ಲ

ವಾಕ್ಯಾರ್ಥಚಂದ್ರಿಕಾ – ನನು 'ತತ್ರ ತಾರಾಥಮೂಲತ್ವಮ್' ಇತಿ ತಾರಾಥಯೋಃ ಪ್ರಥಮಸೂತ್ರಾವಯವತ್ವೇ ಸರ್ವಶಾಸ್ತ್ರಾಂಗತ್ವೇ ಚೋಕ್ತೇ ಓಂಕಾರಸ್ಯಾಸಂಹಿತತಯಾ ನಿರ್ದೇಶಗತಿಕಥನಪರೋತ್ತರವಾಕ್ಯಸಂಗತಿರ್ನ ಪ್ರತೀಯತೇ, ಇತ್ಯತಸ್ತತ್ಸಂಗಮಯಿತುಮ್ ಉಕ್ತೇಽನುಪಪತ್ತಿಂ ಶಂಕತೇ – ನನ್ವಿತಿ ॥ ಸೂತ್ರಾನುಪಾತ್ತಸ್ಯ ನ ತದೇಕದೇಶತ್ವಮಿತ್ಯರ್ಥಃ।

''ತತ್ರ ತಾರಾಥಮೂಲತ್ವಮ್'' ಎಂಬಲ್ಲಿ ತಾರ ಮತ್ತು ಅಥಶಬ್ದಗಳು ಪ್ರಥಮಸೂತ್ರದ ಅವಯವಗಳಾಗಿವೆ. ಮತ್ತು ಸಮಸ್ತ ಶಾಸ್ತ್ರದ ಅಂಗಗಳಾಗಿವೆ ಎಂಬುದಾಗಿ ಸಮರ್ಥಿಸಲಾಯಿತು. ಅನಂತರ ಉತ್ತರಾರ್ಧದಲ್ಲಿ ಓಂಕಾರವನ್ನು ಅಸಂಹಿತತಯಾ ಉಚ್ಚರಿಸಬೇಕು ಎಂಬುದಕ್ಕೆ ಗತಿಯನ್ನು ಹೇಳುತ್ತಿದ್ದಾರೆ. ಪೂರ್ವವಾಕ್ಯಕ್ಕೂ ಉತ್ತರವಾಕ್ಯಕ್ಕೂ ಯಾವುದೇ ರೀತಿಯಲ್ಲಿ ಸಂಗತಿಯೇ ಕಾಣಸುತ್ತಿಲ್ಲವಲ್ಲ?

ಉತ್ತರ – ಸಂಗತಿಯನ್ನು ತೋರಿಸುವುದಕ್ಕಾಗಿ ಪೂರ್ವಾರ್ಧದಲ್ಲಿ ಹೇಳಿದ ವಿಚಾರದಲ್ಲಿ ಅನುಪಪತ್ತಿಯನ್ನು ''ನನು'' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. ಸೂತ್ರದಲ್ಲಿ ಉಲ್ಲೇಖ ಮಾಡದೇ ಇರುವುದು ಅದರ ಏಕದೇಶವಾಗಲು ಸಾಧ್ಯವಿಲ್ಲ ಎಂದಿದರ ಅರ್ಥ.

ವಿವರಣೆ –

'ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।
ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥'

ಈ ಅನುವ್ಯಾಖ್ಯಾನಶ್ಲೋಕದ ಪೂರ್ವಾರ್ಧವು ಓಂಕಾರ ಮತ್ತು ಅಥಶಬ್ದಗಳೆರಡೂ ಪ್ರಥಮಸೂತ್ರದ ಅವಯವಗಳಾಗಿವೆ, ಸಮಸ್ತ ಶಾಸ್ತ್ರದ ಅಂಗಗಳಾಗಿವೆ ಎನ್ನುತ್ತಿದೆ. ಆದರೆ ಉತ್ತರಾರ್ಧವು ಪ್ರತ್ಯೇಕವಾಗಿ ಓಂಕಾರವನ್ನು ಉಚ್ಚರಿಸಬೇಕೆನ್ನುತ್ತಿದೆ. ಆಪಾತತಃ ಇವೆರಡಕ್ಕೆ ಸಂಗತಿಯೇ ತಿಳಿಯುವುದಿಲ್ಲ. ಆದ್ದರಿಂದ ಪೂರ್ವಾರ್ಧದಲ್ಲಿ ಪ್ರಥಮಸೂತ್ರದ ಅವಯವವೆಂದು ಹೇಳಿದ ವಿಚಾರ-ದಲ್ಲಿ ಅನುಪಪತ್ತಿಯನ್ನು "ನನು" ಇತ್ಯಾದಿಗ್ರಂಥದಿಂದ ತೋರಿಸುತ್ತಿದ್ದಾರೆ. ಈ ಅನುಪಪತ್ತಿಯ ಪರಿಹಾರಕ್ಕಾಗಿ ಉತ್ತರಾರ್ಧವು ಹೊರಟಿರುವುದರಿಂದ ಎರಡೂ ವಾಕ್ಯಗಳಿಗೆ ಸಂಗತಿ ಇರುತ್ತದೆಂದು ತಿಳಿಯಬೇಕು.

ಓಂಕಾರವನ್ನು ಸೂತ್ರದಲ್ಲಿ ಉಲ್ಲೇಖ ಮಾಡಿಯೇ ಇಲ್ಲ. ಇದು ಸೂತ್ರದ ಏಕದೇಶ ಹೇಗಾಗು-ತ್ತದೆಂಬುದು ಪ್ರಶ್ನೆಯ ಅಭಿಪ್ರಾಯ.

## ಓಂಕಾರವು ಸೂತ್ರಾವಯವವೆಂದು ಸಾಧಿಸುವ ಅನುಮಾನಸ್ವರೂಪ

ವಾಕ್ಯಾರ್ಥಚಂದ್ರಿಕಾ – ನನು ಓಂಕಾರಃ ಪ್ರಥಮಸೂತ್ರೈಕದೇಶಃ, ಸೂತ್ರೋಚ್ಚಾರಣ-ದಶಾಯಾಂ ಶಿಷ್ಯೈರಧ್ಯೇತೃಭಿರುಚ್ಚಾರ್ಯಮಾಣತ್ವಾತ್ ಅಥಶಬ್ದವತ್ । ನ ಚಾಸಿದ್ಧೋ ಹೇತುಃ । ಪ್ರಥಮಸೂತ್ರೋಚ್ಚಾರಣದಶಾಯಾಮ್ ಆದೌ ಶಿಷ್ಯಾನಾಮ್ ಓಂಕಾರೋಚ್ಚಾರಣಸ್ಯ ಸರ್ವಾ-ಧ್ಯಕ್ಷಸಿದ್ಧತ್ವಾತ್' ಇತ್ಯನುಮಾನಮೋಂಕಾರಸ್ಯ ಸೂತ್ರೈಕದೇಶತ್ವೇ ಪ್ರಮಾಣಮಾಶಂಕತೇ – ಯದ್ಯಪೀತಿ ॥

ಆಕ್ಷೇಪ – 'ಓಂಕಾರಃ ಪ್ರಥಮಸೂತ್ರೈಕದೇಶಃ, ಸೂತ್ರೋಚ್ಚಾರಣದಶಾಯಾಂ ಶಿಷ್ಯೈರಧ್ಯೇ-ತೃಭಿರುಚ್ಚಾರ್ಯಮಾಣತ್ವಾತ್ ಅಥಶಬ್ದವತ್' – 'ಸೂತ್ರೋಚ್ಚಾರಣೆಯ ಸಂದರ್ಭದಲ್ಲಿ ಅಧ್ಯಯನ ಮಾಡುವಾಗ ಪ್ರತಿಯೊಬ್ಬ ಶಿಷ್ಯರೂ ಕೂಡ ನಿಯಮೇನ ಓಂ ಎಂದು ಉಚ್ಚರಿಸುತ್ತಾರೆ. ಆದ್ದರಿಂದ ಇದು ಪ್ರಥಮಸೂತ್ರದ ಅವಯವವಾಗಿದೆ, ಅಥಶಬ್ದವೇ ಇದಕ್ಕೆ ಉದಾಹರಣೆ' ಎಂಬುದು ನಮ್ಮ ಸಿದ್ಧಾಂತದ ಅನುಮಾನವಾಗಿದೆ. ಈ ಅನುಮಾನದಲ್ಲಿ ಹೇತುವಿಗೆ ಅಸಿದ್ಧಿದೋಷವನ್ನು ಆಕ್ಷೇಪಮಾಡಬಾರದು.

ಏಕೆಂದರೆ, ಪ್ರಥಮಸೂತ್ರದ ಉಚ್ಚಾರಣೆಯ ಕಾಲದಲ್ಲಿ ಎಲ್ಲಾ ಶಿಷ್ಯರೂ ಓಂ ಎಂಬ ಉಚ್ಚಾರಣೆ ಮಾಡುತ್ತಿರುವುದು ಸಕಲರ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಹೀಗೆ ಓಂಕಾರವು ಪ್ರಥಮಸೂತ್ರದ ಅವಯವವಾಗಿದೆ ಎಂಬುದಾಗಿ ನಾವು ಸಾಧನೆ ಮಾಡಿದರೆ ಪೂರ್ವಪಕ್ಷಿಯು ಇದನ್ನು "ಯದ್ಯಪಿ" ಇತ್ಯಾದಿ ಗ್ರಂಥದಿಂದ ಆಕ್ಷೇಪ ಮಾಡುತ್ತಿದ್ದಾನೆ.

## ಪೂರ್ವಪಕ್ಷಿಯ ಅನುಮಾನದಲ್ಲಿ ಸಾಮಾನ್ಯವ್ಯಾಪ್ತಿಯ ಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ಅನುಮಾನಬಾಧೇನ ಏತನ್ನಿರಾಕರೋತಿ – ತಥಾಽಪೀತಿ ॥ ಸಾಮಾನ್ಯವ್ಯಾಪ್ತ್ಯಭಿಪ್ರಾಯೇ ಯಥಾಸ್ಥಿತಸಾಧ್ಯಹೇತೌ ವಾ ಸಂಹಿತಾನಿರ್ದಿಷ್ಟಸ್ಯಾಪಿ ಭ್ರಾಂತ್ಯಾ ಕೇನ-ಚಿದಸಂಹಿತತಯಾ ಪಠ್ಯಮಾನೇ ತದ್ವಾಕ್ಯಾವಯವೇ ಪದೇ ವ್ಯಭಿಚಾರವಾರಣಾಯ ಅವಿಗಾನ-ಸೂಚಕಮ್ – 'ಅಖಿಲೈ'ರಿತಿ ॥ ಪದದಶಾಯಾಂ ತಥಾ ಪಠ್ಯಮಾನೇ ತದ್ವಾರಣಾಯ – ಸಂಪಾಠ ಇತಿ ॥ ಅಥಶಬ್ದಾದೌ ತದ್ವಾರಣಾಯ – ಅಸಂಹಿತತಯಾ ಇತಿ ॥ 'ಸುಕೃತದುಷ್ಕೃತೇ ಏವ' ಇತ್ಯಾದೌ ತದ್ವಾರಣಾಯ – ಲಕ್ಷಣಾಂತರಭಾವೇ ಸತೀತಿ ॥ ಸಾಮಾನ್ಯವ್ಯಾಪ್ತೇರೇವ ಸಂಭವಾತ್ ತತ್ರ ದೃಷ್ಟಾಂತಮಾಹ – ವೇದೇತಿ ॥

ಅನುಮಾನಬಾಧದಿಂದ ಸಿದ್ಧಾಂತಾನುಮಾನವನ್ನು "ತಥಾಪಿ" ಇತ್ಯಾದಿಗ್ರಂಥದಿಂದ ನಿರಾ-ಕರಿಸುತ್ತಿದ್ದಾನೆ. 'ಯತ್ಪದಂ ಯಸ್ಮಿನ್ ವಾಕ್ಯೇ ಅಸಂಹಿತತಯಾ ಪಠ್ಯತೇ ತತ್ಪದಂ ತದ್ವಾಕ್ಯಸ್ಯ ಅವಯವಃ ನ ಭವತಿ' ಎಂಬುದು ಸಾಮಾನ್ಯವ್ಯಾಪ್ತಿಯಾಗಿದೆ. ಅಥವಾ ವಿಶೇಷವ್ಯಾಪ್ತಿಯನ್ನು ವಿವಕ್ಷಿಸಿದಾಗ ಸಂಹಿತ-ತಯಾ ಪಠಿಸಬೇಕಾದದ್ದನ್ನೂ ಕೂಡ ಭ್ರಾಂತಿಯಿಂದ ಒಬ್ಬ ಪುರುಷನು ಅಸಂಹಿತವಾಗಿ ಪಠಿಸುತ್ತಾನೆ. ಅಂಥ ವಾಕ್ಯದಲ್ಲಿ ವ್ಯಭಿಚಾರದೋಷವು ಬರುತ್ತದೆ. ಈ ವ್ಯಭಿಚಾರವನ್ನು ಪರಿಹರಿಸಲು 'ಅಖಿಲೈಃ' ಎಂಬುದಾಗಿ ತಿಳಿಸಿದ್ದಾರೆ. ಅಸಂಹಿತತಯಾ ಪಾಠದಲ್ಲಿ ಅವಿಗಾನವನ್ನು ಈ "ಅಖಿಲೈಃ" ಎಂಬ ಪದದಿಂದ ಸೂಚಿಸಿದ್ದಾರೆ.

ಪದಪಾಠದ ಸಂದರ್ಭದಲ್ಲಿ ಅಸಂಹಿತತಯಾ ಪಠ್ಯಮಾನವಾದ ವಾಕ್ಯದಲ್ಲಿ ವ್ಯಭಿಚಾರವನ್ನು ಪರಿಹರಿಸಲು "ಸಂಪಾಠೇ" ಎಂಬ ವಿಶೇಷಣವನ್ನು ನೀಡಲಾಗಿದೆ. ಅಥ ಶಬ್ದಾದಿಗಳಲ್ಲಿ ವ್ಯಭಿಚಾರವನ್ನು ಪರಿಹರಿಸಲು 'ಅಸಂಹಿತತಯಾ' ಎಂಬ ವಿಶೇಷಣವನ್ನು ನೀಡಲಾಗಿದೆ. 'ಸುಕೃತದುಷ್ಕೃತ ಏವೇತಿ ತು ಬಾದರಿಃ' ಎಂಬ ತೃತೀಯಾಧ್ಯಾಯದ ಪ್ರಥಮಪಾದದ ಚರಣಾಧಿಕರಣದಲ್ಲಿ ಸೂತ್ರವನ್ನು ಪಠಿಸುತ್ತಾರೆ. ಇಲ್ಲಿ ಸುಕೃತದುಷ್ಕೃತೇ ಏವ ಎಂಬುದಾಗಿ ಅಸಂಹಿತತಯಾ ಪಠಿಸಿದ್ದಾರೆ. ಇಲ್ಲಿ 'ಈದೂದೇದ್ ದ್ವಿವಚನಂ

ಪ್ರಗೃಹ್ಯಮ್' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆಯು ಬಂದು ಅನಂತರ 'ಪ್ಲುತ ಪ್ರಗೃಹ್ಯಾಚಿ ನಿತ್ಯಮ್' ಎಂಬ ಸೂತ್ರದಿಂದ ಸಂಧಿಯು ಆಗುವುದಿಲ್ಲ ಎಂಬ ನಿಷೇಧ ಇರುವುದರಿಂದ ಸುಕೃತದುಷ್ಕೃತೇ ಎಂಬುದಾಗಿ ಬಿಡಿಸಿ ಹೇಳಿದ್ದಾರೆ. ಇದನ್ನು ಪರಿಹರಿಸಲು ಲಕ್ಷಣಾಂತರಾಭಾವೇ ಸತಿ ಎಂಬ ವಿಶೇಷಣವನ್ನು ನೀಡಿದ್ದಾರೆ.

ವಿಶೇಷವ್ಯಾಪ್ತಿಯನ್ನು ವಿವಕ್ಷಿಸಿದರೆ ಅನ್ವಯದೃಷ್ಟಾಂತವು ಪ್ರಾಪ್ತವಾಗುವುದಿಲ್ಲ. ಅದಕ್ಕೋಸ್ಕರ ಸಾಮಾನ್ಯವ್ಯಾಪ್ತಿಯನ್ನು ವಿವಕ್ಷಿಸಿ ದೃಷ್ಟಾಂತವನ್ನು ''ವೇದ'' ಇತ್ಯಾದಿಯಾಗಿ ಹೇಳಿದ್ದಾರೆ.

## ಅಧ್ಯಯನ ಮಾಡುವವರಿಗೆ ಮೊದಲಿನ ಓಂಕಾರವು ಮಂತ್ರದ ಅವಯವವಲ್ಲವೆಂದು ತಿಳಿಯುತ್ತಿದೆ

ವಾಕ್ಯಾರ್ಥಚಂದ್ರಿಕಾ – ವಿಪಕ್ಷೇ ಬಾಧಕಮಾಹ – ಅನ್ಯಥೇತಿ ॥ ವೇದಾಧ್ಯಯನೋಪಕ್ರಮೇ ಅಧ್ಯೇತೃಭಿರುಚ್ಚಾರ್ಯಮಾಣತ್ವಾದೇವ ಓಂಕಾರಸ್ಯ ತದವಯವತ್ವಮಪೀತಿ ದೃಷ್ಟಾಂತಃ ಸಾಧ್ಯವಿಕಲ ಇತ್ಯಾಶಂಕತೇ – ನ ಚೇತಿ ॥ 'ಅಧ್ಯಯನ' ಇತ್ಯಾರಭ್ಯ 'ಪಠ್ಯಮಾನಸ್ಯ' ಇತ್ಯಂತಂ ಹೇತುಗರ್ಭವಿಶೇಷಣಮ್ । ತಥಾಚ ಪಠ್ಯಮಾನತಯಾ ವಾಕ್ಯಾನವಯವತಾಯಾಃ ಸುಪ್ರಸಿದ್ಧತ್ವಾದಿತ್ಯರ್ಥಃ। ಪೂರ್ವವದ್ ವಿಪಕ್ಷೇ ಹೇತೂಚ್ಛಿತ್ತಿಂ ಬಾಧಕಮಾಹ – ಅನ್ಯಥೇತಿ ॥

ವಿಪಕ್ಷದಲ್ಲಿ ಬಾಧಕತರ್ಕವನ್ನು ''ಅನ್ಯಥಾ'' ಇತ್ಯಾದಿಗ್ರಂಥದಿಂದ ಹೇಳುತ್ತಿದ್ದಾರೆ. ವೇದಾಧ್ಯಯನದ ಪ್ರಾರಂಭದಲ್ಲಿ ಅಧ್ಯಯನ ಮಾಡುವವರು ಯಾವ ಓಂಕಾರವನ್ನು ಉಚ್ಚರಿಸುತ್ತಾರೋ ಅದೂ ಕೂಡ ಆ ಸೂತ್ರದ ಅವಯವವೇ ಆಗಲಿ; ಅವಯವವಾಗುವುದಿಲ್ಲ ಎಂಬುದಾಗಿ ಹೇಗೆ ಹೇಳುತ್ತೀರಿ? ಆದ್ದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಯನ್ನು ''ನ ಚ'' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

ಅಧ್ಯಯನ ಎಂಬಲ್ಲಿಂದ ಪ್ರಾರಂಭಿಸಿ ಪಠ್ಯಮಾನ ಎಂಬಲ್ಲಿಯ ತನಕ ಹೇತುಗರ್ಭವಿಶೇಷಣವೆಂದು ತಿಳಿಯಬೇಕು. ಆದ್ದರಿಂದ ಯಾರು ಓಂಕಾರವನ್ನು ಅಧ್ಯಯನ ಪ್ರಾರಂಭದಲ್ಲಿ ಪಠಿಸುತ್ತಾರೋ ಅವರಿಗೆ ಇದು ವಾಕ್ಯದ ಅವಯವವಲ್ಲ ಎಂಬ ಜ್ಞಾನವು ಇರುತ್ತದೆ. ಈ ವಿಚಾರವು ಪ್ರಸಿದ್ಧವೇ ಆಗಿದೆ ಎಂದರ್ಥ. ಹಿಂದಿನಂತೆ ಇಲ್ಲೂ ಕೂಡ ವಿಪಕ್ಷದಲ್ಲಿ ಹೇತೂಚ್ಛಿತ್ತಿರೂಪವಾದ ಬಾಧಕವನ್ನು ''ಅನ್ಯಥಾ'' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

## ಅಖಿಲೈಃ ಎಂಬುದರಿಂದ ಲೌಕಿಕರನ್ನು ವಿವಕ್ಷಿಸಬಾರದು. ಸೂತ್ರಪಾಠಕರನ್ನು ವಿವಕ್ಷಿಸಬೇಕು.

ವಾಕ್ಯಾರ್ಥಚಂದ್ರಿಕಾ – ಸ್ವಾನುಮಾನಸ್ಯ ಸತ್ಪ್ರತಿಪಕ್ಷವತ್ತಾಂ ನಿರಾಕರ್ತುಮ್ ಅವಯವತ್ವಸಾಧಕಹೇತೋರನ್ಯಥಾಸಿದ್ಧಿಮಾಹ – ಪಕ್ಷಸಪಕ್ಷಯೋರಿತಿ ॥ ಪ್ರಾಙ್ಮುಖತ್ವಾದೇಃ ಅನವಯವತ್ವೇನ ನಿಶ್ಚಿತಸ್ಯಾಪಿ ಅಧ್ಯಯನನಿಯಮಾಂತರ್ಗತತಯಾ ಆವಶ್ಯಕತ್ವವದಸ್ಯಾಪಿ ಅಧ್ಯಯನನಿಯಮಾಂತರ್ಗತತಯಾ ಅನುಷ್ಠಾನೋಪಪತ್ತೇರನ್ಯಥಾಸಿದ್ಧಿರಿತ್ಯರ್ಥಃ। ಲೌಕಿಕವಾಕ್ಯಪ್ರಯೋಕ್ತೃಭಿರ್ನೈವೋಂಕ್ರಿಯತ ಇತ್ಯಖಿಲೈರಿತ್ಯನುಪಪನ್ನಮಿತ್ಯತ ಉಕ್ತಮ್ – ಸೂತ್ರೇತಿ ॥ 'ಅನುಗತತ್ವೇನ' ಇತಿ ಅಸಂಹಿತತಯಾ ಪಾಠೇ ನಿಮಿತ್ತಪ್ರದರ್ಶನಮಿತ್ಯಭಿಪ್ರೇತ್ಯಾಹ – ನಿಮಿತ್ತೇನೇತಿ ॥

ಪೂರ್ವಪಕ್ಷಿಯ ಅನುಮಾನಕ್ಕೆ ಸಿದ್ಧಾಂತಿಗಳಾದ ನಾವು ಹೇಳಿದ ಅನುಮಾನವು ಸತ್ಪ್ರತಿಪಕ್ಷವಾಗಿದೆ. ಇದನ್ನು ನಿರಾಕರಣೆ ಮಾಡಲು ನಾವು ಹೇಳಿದ ಅವಯವತ್ವಸಾಧಕವಾದ ಹೇತುವಿಗೆ ಅನ್ಯಥಾಸಿದ್ಧಿಯನ್ನು ''ಪಕ್ಷಸಪಕ್ಷಯೋಃ'' ಎಂಬುದರಿಂದ ಹೇಳುತ್ತಿದ್ದಾನೆ. ಪ್ರಾಙ್ಮುಖತ್ವಾದಿಗಳು ಮಂತ್ರದ ಅವಯವವಲ್ಲವೆಂಬುದು ನಿಶ್ಚಿತವಾಗಿದೆ. ಆದರೂ ಕೂಡ ಅಧ್ಯಯನ ನಿಯಮದಲ್ಲಿ ಸೇರಿರುವುದರಿಂದ ಆವಶ್ಯಕವಾಗಿದೆ. ಅದರಂತೆ ಈ ಓಂಕಾರವೂ ಕೂಡ ಅಧ್ಯಯನದ ನಿಯಮದಲ್ಲಿ ಅಂತರ್ಗತವಾಗಿರುವ ಕಾರಣ ಮೊದಲು ಉಚ್ಚಾರ ಮಾಡುವಿಕೆಯೆಂಬ ಅನುಷ್ಠಾನವು ಉಪಪನ್ನವಾಗುತ್ತದೆ. ಆದ್ದರಿಂದ ಮೊದಲು ಉಚ್ಚರಿಸುವ ಕಾರಣದಿಂದ ಪ್ರಥಮಸೂತ್ರದ ಅವಯವವಾಗಬೇಕೆಂಬುದು ಅನ್ಯಥಾಸಿದ್ಧವಾಗುತ್ತದೆ.

ಲೌಕಿಕರು ಸೂತ್ರವನ್ನು ಪಠಿಸುವಾಗ ಓಂಕಾರವನ್ನು ಹೇಳುವುದೇ ಇಲ್ಲ. ಹೀಗಿರುವಾಗ ಅಖಿಲೈಃ ಎಂದು ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ''ಸೂತ್ರಪಾಠಕೈಃ'' ಎಂದು ಹೇಳಿದ್ದಾರೆ. ಅಖಿಲಶಬ್ದದಿಂದ ಲೌಕಿಕರನ್ನು ವಿವಕ್ಷಿಸಬಾರದು. ಸೂತ್ರಪಾಠಕರನ್ನು ಮಾತ್ರ ವಿವಕ್ಷಿಸಬೇಕೆಂದು ಅಭಿಪ್ರಾಯ. ಅಸಂಹಿತತಯಾ ಉಚ್ಚಾರ ಮಾಡುವುದಕ್ಕೆ ಅನುಗತಿ ಇರುವುದೇ ನಿಮಿತ್ತವಾಗಿದೆ. ಈ ಅಭಿಪ್ರಾಯವನ್ನು ''ನಿಮಿತ್ತೇನ'' ಎಂಬುದರಿಂದ ತಿಳಿಸುತ್ತಿದ್ದಾರೆ.

## ಸ್ಥಾಪನಾನುಮಾನಕ್ಕೆ ಪೂರ್ವಪಕ್ಷಿಗಳ ಸತ್ಪ್ರತಿಪಕ್ಷಾನುಮಾನ

ಯಾದುಪತ್ಯ – ಯದ್ಯಪಿ ಶಿಷ್ಟೈರಧ್ಯೇತೃಭಿರಿತಿ ॥ ಅನೇನ 'ಓಂಕಾರಃ ಸೂತ್ರಾವಯವಃ ಶಿಷ್ಟೈರಧ್ಯೇತೃಭಿಃ ತದಾದೌ ಉಚ್ಚಾರ್ಯಮಾಣತ್ವಾತ್ ಅಥಶಬ್ದವತ್' ಇತಿ ಸ್ಥಾಪನಾನುಮಾನಶಂಕ್ಯ

ಪ್ರಗೃಹ್ಯಮ್' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆಯು ಬಂದು ಅನಂತರ 'ಪ್ಲುತ ಪ್ರಗೃಹ್ಯಾಚಿ ನಿತ್ಯಮ್' ಎಂಬ ಸೂತ್ರದಿಂದ ಸಂಧಿಯು ಆಗುವುದಿಲ್ಲ ಎಂಬ ನಿಷೇಧ ಇರುವುದರಿಂದ ಸುಕೃತದುಷ್ಕೃತೇ ಎಂಬುದಾಗಿ ಬಿಡಿಸಿ ಹೇಳಿದ್ದಾರೆ. ಇದನ್ನು ಪರಿಹರಿಸಲು ಲಕ್ಷಣಾಂತರಾಭಾವೇ ಸತಿ ಎಂಬ ವಿಶೇಷಣವನ್ನು ನೀಡಿದ್ದಾರೆ.

ವಿಶೇಷವ್ಯಾಪ್ತಿಯನ್ನು ವಿವಕ್ಷಿಸಿದರೆ ಅನ್ವಯದೃಷ್ಟಾಂತವು ಪ್ರಾಪ್ತವಾಗುವುದಿಲ್ಲ. ಅದಕ್ಕೋಸ್ಕರ ಸಾಮಾನ್ಯವ್ಯಾಪ್ತಿಯನ್ನು ವಿವಕ್ಷಿಸಿ ದೃಷ್ಟಾಂತವನ್ನು "ವೇದ" ಇತ್ಯಾದಿಯಾಗಿ ಹೇಳಿದ್ದಾರೆ.

## ಅಧ್ಯಯನ ಮಾಡುವವರಿಗೆ ಮೊದಲಿನ ಓಂಕಾರವು ಮಂತ್ರದ ಅವಯವವಲ್ಲವೆಂದು ತಿಳಿಯುತ್ತಿದೆ

ವಾಕ್ಯಾರ್ಥಚಂದ್ರಿಕಾ – ವಿಪಕ್ಷೇ ಬಾಧಕಮಾಹ – ಅನ್ಯಥೇತಿ ॥ ವೇದಾಧ್ಯಯನೋಪಕ್ರಮೇ ಅಧ್ಯೇತೃಭಿರುಚ್ಚಾರ್ಯಮಾಣತ್ವಾದೇವ ಓಂಕಾರಸ್ಯ ತದವಯವತ್ವಮಪೀತಿ ದೃಷ್ಟಾಂತಃ ಸಾಧ್ಯವಿಕಲ ಇತ್ಯಾಶಂಕತೇ – ನ ಚೇತಿ ॥ 'ಅಧ್ಯಯನ' ಇತ್ಯಾರಭ್ಯ 'ಪಠ್ಯಮಾನಸ್ಯ' ಇತ್ಯಂತಂ ಹೇತುಗರ್ಭವಿಶೇಷಣಮ್ । ತಥಾಚ ಪಠ್ಯಮಾನತಯಾ ವಾಕ್ಯಾನವಯವತಾಯಾಃ ಸುಪ್ರಸಿದ್ಧತ್ವಾದಿತ್ಯರ್ಥಃ। ಪೂರ್ವವದ್ ವಿಪಕ್ಷೇ ಹೇತೂಚ್ಛಿತ್ತಿಂ ಬಾಧಕಮಾಹ – ಅನ್ಯಥೇತಿ ॥

ವಿಪಕ್ಷದಲ್ಲಿ ಬಾಧಕತರ್ಕವನ್ನು "ಅನ್ಯಥಾ" ಇತ್ಯಾದಿಗ್ರಂಥದಿಂದ ಹೇಳುತ್ತಿದ್ದಾರೆ. ವೇದಾಧ್ಯಯನದ ಪ್ರಾರಂಭದಲ್ಲಿ ಅಧ್ಯಯನ ಮಾಡುವವರು ಯಾವ ಓಂಕಾರವನ್ನು ಉಚ್ಚರಿಸುತ್ತಾರೋ ಅದೂ ಕೂಡ ಆ ಸೂತ್ರದ ಅವಯವವೇ ಆಗಲಿ; ಅವಯವವಾಗುವುದಿಲ್ಲ ಎಂಬುದಾಗಿ ಹೇಗೆ ಹೇಳುತ್ತೀರಿ? ಆದ್ದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಯನ್ನು "ನ ಚ" ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

ಅಧ್ಯಯನ ಎಂಬಲ್ಲಿಂದ ಪ್ರಾರಂಭಿಸಿ ಪಠ್ಯಮಾನ ಎಂಬಲ್ಲಿಯ ತನಕ ಹೇತುಗರ್ಭವಿಶೇಷಣವೆಂದು ತಿಳಿಯಬೇಕು. ಆದ್ದರಿಂದ ಯಾರು ಓಂಕಾರವನ್ನು ಅಧ್ಯಯನ ಪ್ರಾರಂಭದಲ್ಲಿ ಪಠಿಸುತ್ತಾರೋ ಅವರಿಗೆ ಇದು ವಾಕ್ಯದ ಅವಯವವಲ್ಲ ಎಂಬ ಜ್ಞಾನವು ಇರುತ್ತದೆ. ಈ ವಿಚಾರವು ಪ್ರಸಿದ್ಧವೇ ಆಗಿದೆ ಎಂದರ್ಥ. ಹಿಂದಿನಂತೆ ಇಲ್ಲೂ ಕೂಡ ವಿಪಕ್ಷದಲ್ಲಿ ಹೇತೂಚ್ಛಿತ್ತಿರೂಪವಾದ ಬಾಧಕವನ್ನು "ಅನ್ಯಥಾ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

## ಅಖಿಲೈಃ ಎಂಬುದರಿಂದ ಲೌಕಿಕರನ್ನು ವಿವಕ್ಷಿಸಬಾರದು. ಸೂತ್ರಪಾಠಕರನ್ನು ವಿವಕ್ಷಿಸಬೇಕು.

ವಾಕ್ಯಾರ್ಥಚಂದ್ರಿಕಾ – ಸ್ವಾನುಮಾನಸ್ಯ ಸತ್ಪ್ರತಿಪಕ್ಷವತ್ತ್ವಾಂ ನಿರಾಕರ್ತುಮ್ ಅವಯವತ್ವಸಾಧಕಹೇತೋರನ್ಯಥಾಸಿದ್ಧಿಮಾಹ – ಪಕ್ಷಸಪಕ್ಷಯೋರಿತಿ ॥ ಪ್ರಾಙ್ಮುಖತ್ವಾದೇಃ ಅನವಯವತ್ವೇನ ನಿಶ್ಚಿತಸ್ಯಾಪಿ ಅಧ್ಯಯನನಿಯಮಾಂತರ್ಗತತಯಾ ಆವಶ್ಯಕತ್ವವದಸ್ಯಾಪಿ ಅಧ್ಯಯನನಿಯಮಾಂತರ್ಗತತಯಾ ಅನುಷ್ಠಾನೋಪಪತ್ತೇರನ್ಯಥಾಸಿದ್ಧಿರಿತ್ಯರ್ಥಃ। ಲೌಕಿಕವಾಕ್ಯಪ್ರಯೋಕ್ತೃಭಿರ್ನೈವೋಂಕ್ರಿಯತ ಇತ್ಯಖಿಲೈರಿತ್ಯನುಪಪನ್ನಮಿತ್ಯತ ಉಕ್ತಮ್ – ಸೂತ್ರೇತಿ ॥ 'ಅನುಗತತ್ವೇನ' ಇತಿ ಅಸಂಹಿತತಯಾ ಪಾಠೇ ನಿಮಿತ್ತಪ್ರದರ್ಶನಮಿತ್ಯಭಿಪ್ರೇತ್ಯಾಹ – ನಿಮಿತ್ತೇನೇತಿ ॥

ಪೂರ್ವಪಕ್ಷಿಯ ಅನುಮಾನಕ್ಕೆ ಸಿದ್ಧಾಂತಿಗಳಾದ ನಾವು ಹೇಳಿದ ಅನುಮಾನವು ಸತ್ಪ್ರತಿಪಕ್ಷವಾಗಿದೆ. ಇದನ್ನು ನಿರಾಕರಣೆ ಮಾಡಲು ನಾವು ಹೇಳಿದ ಅವಯವತ್ವಸಾಧಕವಾದ ಹೇತುವಿಗೆ ಅನ್ಯಥಾಸಿದ್ಧಿಯನ್ನು ''ಪಕ್ಷಸಪಕ್ಷಯೋಃ'' ಎಂಬುದರಿಂದ ಹೇಳುತ್ತಿದ್ದಾನೆ. ಪ್ರಾಙ್ಮುಖತ್ವಾದಿಗಳು ಮಂತ್ರದ ಅವಯವವಲ್ಲವೆಂಬುದು ನಿಶ್ಚಿತವಾಗಿದೆ. ಆದರೂ ಕೂಡ ಅಧ್ಯಯನ ನಿಯಮದಲ್ಲಿ ಸೇರಿರುವುದರಿಂದ ಆವಶ್ಯಕವಾಗಿದೆ. ಅದರಂತೆ ಈ ಓಂಕಾರವೂ ಕೂಡ ಅಧ್ಯಯನದ ನಿಯಮದಲ್ಲಿ ಅಂತರ್ಗತವಾಗಿರುವ ಕಾರಣ ಮೊದಲು ಉಚ್ಚಾರ ಮಾಡುವಿಕೆಯೆಂಬ ಅನುಷ್ಠಾನವು ಉಪಪನ್ನವಾಗುತ್ತದೆ. ಆದ್ದರಿಂದ ಮೊದಲು ಉಚ್ಚರಿಸುವ ಕಾರಣದಿಂದ ಪ್ರಥಮಸೂತ್ರದ ಅವಯವವಾಗಬೇಕೆಂಬುದು ಅನ್ಯಥಾಸಿದ್ಧವಾಗುತ್ತದೆ.

ಲೌಕಿಕರು ಸೂತ್ರವನ್ನು ಪಠಿಸುವಾಗ ಓಂಕಾರವನ್ನು ಹೇಳುವುದೇ ಇಲ್ಲ. ಹೀಗಿರುವಾಗ ಅಖಿಲೈಃ ಎಂದು ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ''ಸೂತ್ರಪಾಠಕೈಃ'' ಎಂದು ಹೇಳಿದ್ದಾರೆ. ಅಖಿಲಶಬ್ದದಿಂದ ಲೌಕಿಕರನ್ನು ವಿವಕ್ಷಿಸಬಾರದು. ಸೂತ್ರಪಾಠಕರನ್ನು ಮಾತ್ರ ವಿವಕ್ಷಿಸಬೇಕೆಂದು ಅಭಿಪ್ರಾಯ. ಅಸಂಹಿತತಯಾ ಉಚ್ಚಾರ ಮಾಡುವುದಕ್ಕೆ ಅನುಗತಿ ಇರುವುದೇ ನಿಮಿತ್ತವಾಗಿದೆ. ಈ ಅಭಿಪ್ರಾಯವನ್ನು ''ನಿಮಿತ್ತೇನ'' ಎಂಬುದರಿಂದ ತಿಳಿಸುತ್ತಿದ್ದಾರೆ.

## ಸ್ಥಾಪನಾನುಮಾನಕ್ಕೆ ಪೂರ್ವಪಕ್ಷಿಗಳ ಸತ್ಪ್ರತಿಪಕ್ಷಾನುಮಾನ

ಯಾದುಪತ್ಯ – ಯದ್ಯಪಿ ಶಿಷ್ಟೈರಧ್ಯೇತೃಭಿರಿತಿ ॥ ಅನೇನ 'ಓಂಕಾರಃ ಸೂತ್ರಾವಯವಃ ಶಿಷ್ಟೈರಧ್ಯೇತೃಭಿಃ ತದಾದೌ ಉಚ್ಚಾರ್ಯಮಾಣತ್ವಾತ್ ಅಥಶಬ್ದವತ್' ಇತಿ ಸ್ಥಾಪನಾನುಮಾನಶಂಕ

'ತಥಾಽಪಿ' ಇತ್ಯಾದಿನಾ ತಸ್ಯ ಸತ್ಪ್ರತಿಪಕ್ಷತಾ ಉಚ್ಯತೇ ಇತಿ ದ್ರಷ್ಟವ್ಯಮ್ । 'ಅಧ್ಯಕ್ಷಸಿದ್ಧಃ' ಇತಿ ಹೇತುಸಿದ್ಧ್ಯರ್ಥಮುಕ್ತಮ್ । ಲಕ್ಷಣಾಂತರಾಭಾವೇ ಸತೀತಿ ॥ ಅಸಂಹಿತಾಪ್ರಾಪಕಸೂತ್ರಾಂತರಾಭಾವೇ ಸತೀತ್ಯರ್ಥಃ । 'ಸುಧ್ಯುಪಾಸ್ಯಃ' ಇತ್ಯಾದಿವಾಕ್ಯಾವಯವೇ 'ಸುಧೀ' ಇತ್ಯಾದಿಪದೇಽಖಿಲೈಃ ಪಠ್ಯಮಾನೇ ವ್ಯಭಿಚಾರವಾರಣಾಯ – 'ಅಸಂಹಿತತಯಾ' ಇತ್ಯುಕ್ತಮ್ । 'ಕೃಷ್ಣ ಏಹಿ' ಇತಿ ವಾಕ್ಯಾವಯವೇ 'ಕೃಷ್ಣ' ಇತಿ ಪದೇ ವ್ಯಭಿಚಾರವಾರಣಾಯ – ಲಕ್ಷಣಾಂತರಾಭಾವೇ ಸತೀತಿ ॥ ತತ್ರ ಹಿ 'ಪ್ಲುತಪ್ರಗೃಹ್ಯಾ ಅಚಿ' ಇತಿ ಸೂತ್ರಮೇವ ಅಸಂಹಿತಾಪ್ರಾಪಕಮಸ್ತೀತಿ ಭಾವಃ । ಪದಪಾಠಕಾಲೇಽಪಿ ಪ್ರಾಮಾದಿಕೇಷು ಅಸಂಹಿತತಯಾ ಪಠ್ಯಮಾನಪದೇಷು ವ್ಯಭಿಚಾರವಾರಣಾಯ 'ಅಖಿಲೈಃ' ಇತ್ಯುಕ್ತಮ್ । ಸ್ಥಾಪನಾನುಮಾನಸ್ಯ ಅನ್ಯಥಾಸಿದ್ಧಿಮಪಿ ಆಹ – ಪಕ್ಷಸಪಕ್ಷಯೋರಿತಿ ॥

"ಯದ್ಯಪಿ ಶಿಷ್ಟೈರಧ್ಯೇತೃಭಿಃ" – 'ಓಂಕಾರಃ ಸೂತ್ರಾವಯವಃ ಶಿಷ್ಟೈರಧ್ಯೇತೃಭಿಃ ತದಾದೌ ಉಚ್ಚಾರ್ಯಮಾಣತ್ವಾತ್ ಅಥಶಬ್ದವತ್' ಎಂಬುದು ಸಿದ್ಧಾಂತಿಗಳಾದ ನಾವು ಸಮರ್ಥಿಸುವ ಅನುಮಾನವಾಗಿದೆ. ಈ ಅನುಮಾನವನ್ನು ಆಶಂಕಿಸಿ "ತಥಾಪಿ" ಇತ್ಯಾದಿಗ್ರಂಥದಿಂದ ಸತ್ಪ್ರತಿಪಕ್ಷಾನುಮಾನವನ್ನು ಪೂರ್ವಪಕ್ಷಕಾರನು ಆಕ್ಷೇಪಿಸುತ್ತಿದ್ದಾನೆ – 'ಓಂಕಾರಃ ನ ಸೂತ್ರಾವಯವಃ ಲಕ್ಷಣಾಂತರಾಭಾವೇ ಸತಿ ಸಂಪಾಠೇ ಅಸಂಹಿತತಯಾ ಪಠ್ಯಮಾನತ್ವಾತ್, ವೇದಾಧ್ಯಯನಾದೌ ಉಚ್ಚಾರ್ಯಮಾಣ ಓಂಕಾರವತ್' ಎಂದು.

"ಅಧ್ಯಕ್ಷಸಿದ್ಧಃ" ಎಂದು ಹೇಳಿರುವುದು ಸ್ಥಾಪನಾನುಮಾನದಲ್ಲಿ ಹೇತುಸಿದ್ಧಿಗೋಸ್ಕರ ಎಂದು ತಿಳಿಯಬೇಕು. 'ಬಿಡಿಸಿ ಹೇಳಬೇಕು' ಎಂಬ ವಿಷಯದಲ್ಲಿ ಯಾವುದೇ ಪಾಣಿನ್ಯಾದಿ ಸೂತ್ರಗಳು ಪ್ರಮಾಣವಾಗಿ ಇಲ್ಲದೇ ಇರುವಾಗ ಎಂದರ್ಥ.

'ಪಠ್ಯಮಾನತ್ವಾತ್' ಎಂದಷ್ಟೇ ಹೇಳಿದರೆ 'ಸುಧ್ಯುಪಾಸ್ಯಃ' ಎಂಬ ವಾಕ್ಯದ ಅವಯವವೆನಿಸಿದ ಸುಧೀ ಇತ್ಯಾದಿ ಪದಗಳಲ್ಲಿಯೂ ಅಖಿಲೈಃ ಪಠ್ಯಮಾನತ್ವವು ಇರುತ್ತದೆ. ಅದಕ್ಕೋಸ್ಕರ 'ಅಸಂಹಿತತಯಾ' ಎಂಬ ವಿಶೇಷಣವನ್ನು ನೀಡಬೇಕು. 'ಸುಧ್ಯುಪಾಸ್ಯಃ' ಎಂಬುದಾಗಿ ಯಣ್‌ಸಂಧಿಯನ್ನು ಮಾಡಿಯೇ ಉಚ್ಚರಿಸುವುದರಿಂದ ಸಂಹಿತತಯಾ ಪಠ್ಯಮಾನತ್ವವೇ ಇರುತ್ತದೆ. ಅಸಂಹಿತತಯಾ ಪಠ್ಯಮಾನತ್ವವು ಇರುವುದಿಲ್ಲ.

"ಲಕ್ಷಣಾಂತರಾಭಾವೇ ಸತಿ" ಎಂಬ ವಿಶೇಷಣವನ್ನು ನೀಡದಿದ್ದರೆ 'ಕೃಷ್ಣ೩ ಏಹಿ' ಎಂಬಲ್ಲಿ ಆಹ್ವಾನ ಮಾಡುವಾಗ ಪ್ಲುತಸ್ವರವನ್ನು ಹೇಳುತ್ತೇವೆ. ಎಲ್ಲಿ ಪ್ಲುತಸ್ವರವಿರುತ್ತದೋ ಅಲ್ಲಿ ಸಂಧಿ ಆಗು-

ವುದಿಲ್ಲ. ದೀರ್ಘಸ್ವರ ಇಲ್ಲದೇ ಇದ್ದಾಗ 'ಕೃಷ್ಣ ಏಹಿ' ಎಂಬುದಾಗಿ 'ವೃದ್ಧಿರೇಚ್' ಎಂಬ ಸೂತ್ರದಿಂದ ವೃದ್ಧಿ ಸಂಧಿಯು ಆಗಬೇಕು. ಆದರೆ 'ಪ್ಲುತಪ್ರಗೃಹ್ಯಾ ಅಚಿ' ಎಂಬ ಸೂತ್ರವು ಇದನ್ನು ನಿಷೇಧ ಮಾಡುತ್ತಿದೆ. ಇಲ್ಲಿ ಕೃಷ್ಣ ಎಂಬ ಪದವು ಅಸಂಹಿತತಯಾ ಪಠ್ಯಮಾನವಾಗಿದೆ. ಆದರೆ ವಾಕ್ಯದ ಅವಯವವೇ ಆಗಿದೆ. ಅದಕ್ಕೋಸ್ಕರ ಲಕ್ಷಣಾಂತರಾಭಾವೇ ಸತಿ ಎಂಬ ವಿಶೇಷಣವನ್ನು ನೀಡಬೇಕು. ಇಲ್ಲಿ 'ಪ್ಲುತಪ್ರಗೃಹ್ಯಾಚಿ ನಿತ್ಯಮ್' ಎಂಬ ಅಪವಾದ ಸೂತ್ರವು ಇರುವ ಕಾರಣ ವ್ಯಭಿಚಾರದೋಷವು ಬರುವುದಿಲ್ಲ.

ಪದಪಾಠಕಾಲದಲ್ಲಿ ಎಲ್ಲರಿಂದಲೂ ಅಸಂಹಿತತಯಾ ಪಠ್ಯಮಾನವಾದ ಪದಗಳಲ್ಲಿ ವ್ಯಭಿಚಾರದೋಷವನ್ನು ಪರಿಹರಿಸಲು 'ಸಂಪಾಠ' ಎಂಬ ವಿಶೇಷಣವನ್ನು ನೀಡಬೇಕು. 'ಸಂಹಿತಾಪಾಠ ಕಾಲದಲ್ಲಿ' ಎಂಬುದು ಇದರ ಅರ್ಥ. ಸಂಹಿತಾಪಾಠಕಾಲದಲ್ಲೂ ಕೂಡ ಪ್ರಾಮಾದಿಕವಾಗಿ ಅಸಂಹಿತವಾಗಿ ಪಠಿಸುತ್ತಾರೆ. ಇಂಥಲ್ಲಿ ವ್ಯಭಿಚಾರವನ್ನು ಪರಿಹರಿಸಲು ಅಖಿಲೈಃ ಎಂದು ಹೇಳಬೇಕು. ಪ್ರಾಮಾದಿಕವಾಗಿ ಕೆಲವರು ಹಾಗೆ ಪಠಿಸಿದರೂ ಎಲ್ಲರಿಂದಲೂ ಪಠಿತವಾಗಿರುವುದಿಲ್ಲ. ಆದ್ದರಿಂದ ವ್ಯಭಿಚಾರವು ಬರುವುದಿಲ್ಲ.

'ಶಿಷ್ಟೈಃ ಅಧ್ಯೇತೃಭಿಃ ತದಾದೌ ಉಚ್ಚಾರ್ಯಮಾಣತ್ವಾತ್' ಎಂಬ ಸ್ಥಾಪನಾನುಮಾನದಲ್ಲಿ ಅನ್ಯಥಾಸಿದ್ಧಿಯನ್ನು "ಪಕ್ಷಸಪಕ್ಷಯೋಃ" ಎಂಬ ವಾಕ್ಯದಿಂದ ಪೂರ್ವಪಕ್ಷಿಯು ಹೇಳುತ್ತಿದ್ದಾನೆ.

## ಸುಧಾಪರಿಮಳಸಾರ

'ತಾರಾಥಮೂಲತ್ವಂ' ಎಂದು ಮೂಲದಲ್ಲಿ ಓಂಕಾರ ಆದಿಯಲ್ಲಿ ಇದೆ ಎಂದು ಹೇಳಲಾಗಿದೆ. ಆದರೆ ಸೂತ್ರದ ಆದಿಯಲ್ಲಿ ಓಂಕಾರವೇ ಇಲ್ಲ. ವಸ್ತುತಸ್ತು ಸೂತ್ರವನ್ನು ಪಠಿಸುವ ಪ್ರತಿಯೊಬ್ಬ ಮಹನೀಯರೂ ಸೂತ್ರದ ಮೊದಲಿಗೆ ಓಂಕಾರವನ್ನು ಪಠಿಸುವುದು ಪ್ರತ್ಯಕ್ಷಸಿದ್ಧವಾಗಿದೆ. ಆದರೂ ಕೂಡ ಈ ಓಂಕಾರ ಸೂತ್ರಾವಯವವಾದ ಓಂಕಾರವಲ್ಲ. ಇದನ್ನು ಅನುಮಾನದಿಂದ ಹೀಗೆ ಸಾಧಿಸಬಹುದು. 'ಸೂತ್ರಾದೌ ಶ್ರೂಯಮಾಣ ಓಂಕಾರಃ ನ ಸೂತ್ರಾವಯವಃ ಲಕ್ಷಣಾಂತರಾಭಾವೇ ಸತ್ಯಸಂಹಿತತಯಾ ಅಖಿಲೈಃ ಸಂಪಾಠೇ ಪಠ್ಯಮಾನತ್ವಾತ್ । ವೇದಾಧ್ಯಯನೋಪಕ್ರಮೇ ಅಧ್ಯೇತೃಭಿರುಚ್ಚಾರ್ಯಮಾಣೋಂಕಾರವತ್' ಎಂದು. ಇದರ ಅಭಿಪ್ರಾಯ ಹೀಗಿದೆ. ವೇದದ ಅಧ್ಯಯನವನ್ನು ಆರಂಭ ಮಾಡುವಾಗ 'ಶ್ರೀಗುರುಭ್ಯೋ ನಮಃ ಹರಿಃ ಓಂ' ಎಂದು ಎಲ್ಲರೂ ಪಠಿಸುತ್ತಾರೆ. ಅಲ್ಲಿ ಪಠಿಸಿದ ಓಂಕಾರ ಮಂತ್ರದ ಅವಯವವಲ್ಲ. ಅಲ್ಲಿ ಓಂಕಾರವನ್ನು ಪ್ರತ್ಯೇಕವಾಗಿ ಅಂದರೆ ಸಂಧಿ ಮಾಡದೇ ಉಚ್ಚಾರ ಮಾಡಬೇಕು ಎಂಬುದಕ್ಕೆ ಯಾವ ಪ್ರತ್ಯೇಕ ನಿಯಮವೂ ಇಲ್ಲ. ಹಾಗಿದ್ದರೂ ಪ್ರತ್ಯೇಕವಾಗಿ ಪಾಠಮಾಡುವುದರಿಂದ ಅದು ಮಂತ್ರಾವಯವವಲ್ಲ. ಅದರಂತೇ ಸೂತ್ರದ ಆದಿಯಲ್ಲಿ ಉಚ್ಚಾರ ಮಾಡುವ ಓಂಕಾರವನ್ನೂ ಕೂಡ ಸಂಹಿತತಯಾ ಉಚ್ಚಾರ ಮಾಡುವುದಿಲ್ಲ. ಅಸಂಹಿತತಯಾ ಉಚ್ಚಾರ ಮಾಡಬೇಕು ಎನ್ನುವುದಕ್ಕೆ ವಿಶೇಷ ನಿಯಮ-

ವೇನೂ ಇಲ್ಲ. ಆದುದರಿಂದ ಈ ಓಂಕಾರವು ಸೂತ್ರಾವಯವವಲ್ಲ. ಒಂದು ವೇಳೆ ಸೂತ್ರಾವಯವವಾಗಿದ್ದಿದ್ದರೆ ಅಥಶಬ್ದದಂತೇ ಒಟ್ಟಿಗೆ ಹೇಳಬೇಕಿತ್ತು. ಆದುದರಿಂದ ಸೂತ್ರದ ಆದಿಯಲ್ಲಿ ಅವಯವವಾದ ಓಂಕಾರವೇ ಇಲ್ಲ ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ಇಲ್ಲೊಂದು ಆಕ್ಷೇಪ—ದೃಷ್ಟಾಂತದಲ್ಲಿರುವ ಓಂಕಾರವೂ ಕೂಡ ಮಂತ್ರದ ಅವಯವವೇ ಆಗಿದೆ. ಆದುದರಿಂದ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ ಎಂದು. ಆದರೆ ಇದು ಸರಿಯಲ್ಲ. ಪ್ರತಿದಿನವೂ ವೇದಾಧ್ಯಯನ ಮಾಡುವಾಗ ಪ್ರತಿದಿನವೂ ಒಂದೇ ಕಡೆ ಓಂಕಾರ ಉಚ್ಚಾರಣೆ ಮಾಡುವುದಿಲ್ಲ. ಈ ದಿನ ಬಿಟ್ಟ ಭಾಗದಿಂದ ಮುಂದೆ ಅಧ್ಯಯನ ಮಾಡುವಾಗ ಬೇರೆ ಬೇರೆ ಕಡೆಗಳಲ್ಲಿ ಓಂಕಾರ ಮಾಡುವುದಿದೆ. ಪ್ರತಿದಿನವೂ ಬೇರೆ ಬೇರೆ ಕಡೆಗಳಲ್ಲಿ ನಿಲ್ಲಿಸಿ, ಆರಂಭಿಸುವಾಗ ಪಠಿಸುವ ಓಂಕಾರ ಮಂತ್ರಾವಯವವಾಗುವುದಾದರೆ 'ಓಮಿತಿ ಬ್ರಹ್ಮ' ಮುಂತಾದ ಕಡೆ ಇರುವಂತೆ ಆಯಾಯಾ ಸ್ಥಳಗಳಲ್ಲಿ ನಿಯತವಾಗಿ ಓಂಕಾರಪಠಣ ಮಾಡಬೇಕಿತ್ತು. ಹಾಗೇ ನಿಯತಸ್ಥಳದಲ್ಲಿ ಓಂಕಾರ ಉಚ್ಚಾರಣೆ ಇಲ್ಲದ ಪ್ರಯುಕ್ತ ಇದು ಮಂತ್ರಾವಯವವಲ್ಲ. ಹಾಗಾದರೆ ಸೂತ್ರದ ಆರಂಭದಲ್ಲಿ ಮತ್ತು ವೇದಾಧ್ಯಯನದ ಆರಂಭದಲ್ಲಿ ಓಂಕಾರಪಠಣ ಏಕೆ ಎಂದರೆ ಅದು ಒಂದು ನಿಯಮ. ಯಾವ ರೀತಿ ಪೂರ್ವಕ್ಕೆ ಮುಖ ಮಾಡಿ ಅಧ್ಯಯನ ಮಾಡಬೇಕು ಮುಂತಾದವುಗಳು ಅಧ್ಯಯನನಿಯಮಾಂತರ್ಗತವೋ ಅದರಂತೆ ಆದಿಯಲ್ಲಿ ಓಂಕಾರವಿರಬೇಕು ಎಂಬುದೂ ಒಂದು ನಿಯಮ ಎಂದೂ ಹೇಳಲು ಬರುವ ಪ್ರಯುಕ್ತ ಸೂತ್ರಾದಿಯಲ್ಲಿ ಮಂಗಲಕ್ಕೋಸ್ಕರ ಓಂಕಾರವನ್ನು ಸೂತ್ರಕಾರರು ನಿಬಂಧನೆ ಮಾಡಿದ್ದಾರೆ ಎನ್ನುವುದು ಅಸಂಗತ ಎಂದು ಪೂರ್ವಪಕ್ಷ. ಈ ಆಕ್ಷೇಪಕ್ಕೆ ಉತ್ತರವನ್ನು 'ಸರ್ವತ್ರಾನುಗತತ್ವೇನ' ಎಂಬ ಅನುವ್ಯಾಖ್ಯಾನ ಮೂಲದಲ್ಲಿ ಕೊಡಲಾಗಿದೆ. ಸೂತ್ರದಲ್ಲಿ ಓಂಕಾರವನ್ನು ಪ್ರತ್ಯೇಕವಾಗಿ ಉಚ್ಚಾರ ಮಾಡುವ ಕಾರಣದಿಂದ ಅದನ್ನು ಸೂತ್ರಾವಯವವಲ್ಲ ಎಂದು ಸಾಧಿಸಲು ಬರುವುದಿಲ್ಲ. ಅದಕ್ಕೆ ಕಾರಣ ಬೇರೆಯೇ ಇದೆ. ಈ ಓಂಕಾರ ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿಯನ್ನು ಹೊಂದಲಿ ಎಂಬ ವಿಷಯವನ್ನು ಸೂಚಿಸುವುದಕ್ಕಾಗಿ. ಹೀಗೆ ಅಸಂಹಿತತಯಾ ಓಂಕಾರದ ಉಚ್ಚಾರಣೆಗೆ ಬೇರೆ ಪ್ರಯೋಜನ ಇರುವುದರಿಂದ ಅದರಿಂದ ಸೂತ್ರಾವಯವವಲ್ಲ ಎಂದು ಸಾಧನೆ ಮಾಡಲು ಬರುವುದಿಲ್ಲ.

## ನೆನಪಿಡಿ

* 'ತತ್ರ ತಾರಾಥಮೂಲತ್ವಂ' ಎಂಬ ಅನುವ್ಯಾಖ್ಯಾನದ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಸಂಗತಿಯನ್ನು ತಿಳಿಸುವುದಕ್ಕಾಗಿ ಮಧ್ಯದಲ್ಲೊಂದು ಆಕ್ಷೇಪವನ್ನು ತೋರಿಸುತ್ತಿದ್ದಾರೆ.

* ಪ್ರಥಮಸೂತ್ರದ ಪ್ರಾರಂಭದಲ್ಲಿ 'ಓಂ' ಎಂದು ಎಲ್ಲಾ ಸೂತ್ರಪಾಠಕರೂ ಉಚ್ಚರಿಸುತ್ತಾರೆ. ಅಂದ ಮಾತ್ರಕ್ಕೆ ಇದು ಸೂತ್ರದ ಅವಯವವಾಗಬೇಕಾಗಿಲ್ಲ.

* ಪ್ರತಿಯೊಬ್ಬರೂ ಓಂಕಾರವನ್ನು ಸೂತ್ರದ ಜೊತೆ ಸೇರಿಸದೇ ಪ್ರತ್ಯೇಕವಾಗಿ ಬಿಡಿಸಿ ಉಚ್ಚರಿಸುತ್ತಾರೆ. ಆದ್ದರಿಂದ ಇದು ಸೂತ್ರದ ಅವಯವವಾಗುವುದಿಲ್ಲ ಎಂಬುದು ಆಕ್ಷೇಪ.

* 'ಸ್ವಶಾಖಾಧ್ಯಯನವನ್ನು ಪೂರ್ವಾಭಿಮುಖವಾಗಿ ಮಾಡಬೇಕು' 'ದರ್ಭೆಯ ಮೇಲೆ ಕುಳಿತು ಮಾಡಬೇಕು' ಇತ್ಯಾದಿ ವಿಧಿಗಳು ಹೇಗಿವೆಯೋ ಅದರಂತೆ ಓಂಕಾರವನ್ನು ಉಚ್ಚರಿಸಿಯೇ ಶಾಸ್ತ್ರಾಧ್ಯಯನದಲ್ಲಿ ತೊಡಗಬೇಕು' ಎಂಬ ವಿಧಿಯಿದೆ. ಇದಕ್ಕನುಸಾರಿಯಾಗಿ ಮೊದಲು ಓಂಕಾರವನ್ನು ಸೂತ್ರಕಾರರು ಉಚ್ಚರಿಸಿದ್ದಾರೆ. ಅಂದಮಾತ್ರಕ್ಕೆ ಸೂತ್ರದ ಅವಯವವಾಗಬೇಕಾಗಿಲ್ಲ.

* ಓಂಕಾರಕ್ಕೆ ಎರಡು ಬಗೆಯ ಪ್ರಯೋಜನಗಳಿವೆ (1) ಅದೃಷ್ಟಪ್ರಯೋಜನಕ್ಕೋಸ್ಕರ ಉಚ್ಚರಿಸುವಿಕೆ (2) ಅನ್ವಯಪ್ರತಿಯೋಗಿಯನ್ನು ತಿಳಿಸುವಿಕೆ.

* ಅಸಂಶ್ಲಿಷ್ಟವಾಗಿ ಓಂಕಾರವನ್ನು ಉಚ್ಚರಿಸಿದ್ದರಿಂದ ಇದನ್ನು ಅವಯವವಲ್ಲವೆಂದು ತಿಳಿಯಬಾರದು. ಮುಂದಿನ ಎಲ್ಲಾ ಸೂತ್ರಗಳಲ್ಲಿ ಇದಕ್ಕೆ ಅನುಗತಿಯಿದೆ ಎಂದಷ್ಟೇ ತಿಳಿಯಬೇಕು.

* 'ಓಂಕಾರಃ ಪ್ರಥಮಸೂತ್ರಸ್ಯ ಏಕದೇಶಃ ಸೂತ್ರೋಚ್ಚಾರಣದಶಾಯಾಂ ಅಖಿಲೈಃ ಸೂತ್ರಪಾಠಕೈಃ ನಿಯಮೇನ ಉಚ್ಚಾರ್ಯಮಾಣತ್ವಾತ್' ಎಂಬ ಅನುಮಾನವು ನಿರ್ದುಷ್ಟವೆಂದು ಸಿದ್ಧವಾಯಿತು.

## 'ಪ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ'

**ಶ್ರೀಮನ್ನ್ಯಾಯಸುಧಾ – ಏತದುಕ್ತಂ ಭವತಿ । ಸರ್ವಾಣಿ ಹಿ ಸೂತ್ರಾಣಿ ಪ್ರತ್ಯೇಕಮ್ ಅನೇಕವೇದವಾಕ್ಯವಿಚಾರಪರತ್ವಾತ್ ಅವಾಂತರಬ್ರಹ್ಮವಿದ್ಯಾಃ । 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಇತಿ ಶ್ರೌತಾರ್ಥವಾದಸಾಮರ್ಥ್ಯಾತ್ ಸರ್ವಾಸ್ವಪಿ ಬ್ರಹ್ಮವಿದ್ಯಾಸು ಆದ್ಯಂತಯೋರೋಂಕಾರಸ್ಯೋಹಃ ಕರ್ತವ್ಯ ಇತಿ ಗಮ್ಯತೇ ।**

ಒಟ್ಟು ಇಷ್ಟು ಹೇಳಿದಂತಾಯಿತು. ಎಲ್ಲಾ ಸೂತ್ರಗಳೂ ಪ್ರತ್ಯೇಕವಾಗಿ ಅನೇಕ ವೇದ-

ವಾಕ್ಯಗಳ ಅರ್ಥವನ್ನು ನಿರ್ಣಯ ಮಾಡಲು ಹೊರಟಿವೆ. ಆದ್ದರಿಂದ ಇವುಗಳು ಅವಾಂತರ ಬ್ರಹ್ಮವಿದ್ಯೆ ಎಂದು ಕರೆಸಿಕೊಳ್ಳುತ್ತವೆ.

'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ'

'ಓಂಕಾರವನ್ನು ಮೊದಲು ಉಚ್ಚಾರ ಮಾಡದಿದ್ದರೆ ವೇದವು ಸೋರಿ ಹೋಗುತ್ತದೆ; ಕೊನೆಯಲ್ಲಿ ಉಚ್ಚಾರ ಮಾಡದಿದ್ದರೆ ನಾಶ ಹೊಂದುತ್ತದೆ'.

ಹೀಗೆ ಶ್ರುತಿ ಹೇಳುತ್ತಿದೆ. ಹೀಗೆ ಶ್ರೌತವಾದ ಅರ್ಥವಾದದ ಸಾಮರ್ಥ್ಯದಿಂದ ಎಲ್ಲಾ ಬ್ರಹ್ಮವಿದ್ಯೆಗಳ ಆದಿ ಮತ್ತು ಅಂತ್ಯಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕೆಂದು ತಿಳಿ-ಯುತ್ತದೆ.

## ಪ್ರಥಮಸೂತ್ರದಲ್ಲಿ ಓಂಕಾರವನ್ನು ಬಿಡಿಸಿ ಉಚ್ಚರಿಸಿದ್ದೇಕೆ?

**ಶ್ರೀಮನ್ನ್ಯಾಯಸುಧಾ – ನ ಚೋಹ್ಯಮಾನಂ ವಾಕ್ಯಾತ್ ಪೃಥಗಿತಿ ಶಕ್ಯತೇ ವಕ್ತುಮ್ । ಮಂತ್ರೇಷ್ವಪಿ ಊಹ್ಯಮಾನಸ್ಯಾಮಂತ್ರಾವಯವತ್ವಪ್ರಸಂಗಾತ್ । ತತಶ್ಚ ಪ್ರತಿಸೂತ್ರಮಾದ್ಯಂತಯೋರುಚ್ಚಾರಣೇ ಗೌರವಂ ಸ್ಯಾದಿತ್ಯಾದಾವೇವ ಓಂಕಾರಃ ಅಧಿಕೃತತ್ವೇನೋಚ್ಚಾರ್ಯತೇ । ತಸ್ಯ ಸಂಹಿತತಯಾ ನಿರ್ದೇಶೇ, ಪ್ರಥಮಸೂತ್ರಾವಯವ ಏವಾಯಂ ವಿಜ್ಞಾಯೇತ । ತನ್ಮಾ ವಿಜ್ಞಾಯೀತಿ ಶಿಷ್ಟೈಃ ಪೃಥಗೋಂಕ್ರಿಯತೇ ।**

ಊಹಿಸಲ್ಪಡುವ ಓಂಕಾರವು ಸೂತ್ರದಿಂದ ಪ್ರತ್ಯೇಕವಾಗಿದೆ ಎಂದು ಹೇಳುವುದು ತಪ್ಪಾಗುತ್ತದೆ. ಹಾಗಾದಲ್ಲಿ ಮಂತ್ರಗಳಲ್ಲಿ ಊಹಿಸಲ್ಪಡುವ ಪದಗಳೂ ಕೂಡ ಆ ಮಂತ್ರದ ಅವಯವಗಳೆಂದು ಆಗದೇ ಇರಬೇಕಾದೀತು. ಆದ್ದರಿಂದ ಊಹಿಸಲ್ಪಡುವ ಓಂಕಾರವು ಸೂತ್ರದ ಅವಯವವೆಂದೇ ಸಿದ್ಧವಾಗುತ್ತದೆ. ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ

ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವವು ಬರುತ್ತದೆ. ಆದ್ದರಿಂದ ಪ್ರಥಮ-ಸೂತ್ರದಲ್ಲಿ ಮಾತ್ರ ಅಧಿಕೃತವಾಗಿ ಉಚ್ಚರಿಸಲಾಗಿದೆ. ಪ್ರಥಮಸೂತ್ರದಲ್ಲೂ ಕೂಡ 'ಅಥಾತಃ' ಶಬ್ದಗಳಂತೆ ಒಟ್ಟಿಗೆ ಸೇರಿಸಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಕೇವಲ ಪ್ರಥಮಸೂತ್ರದ ಅವಯವವಾಗಿದೆ ಎಂಬ ಭ್ರಮೆ ಬರುತ್ತದೆ. ಈ ಭ್ರಮೆಯು ಬರಬಾರ-ದೆಂಬ ಉದ್ದೇಶದಿಂದ ಶಿಷ್ಯರು ಪ್ರಥಮಸೂತ್ರದಲ್ಲಿ ಓಂಕಾರವನ್ನು ಬಿಡಿಸಿ ಉಚ್ಚರಿಸುತ್ತಾರೆ.

## ಅಂತರಂಗಪ್ರಮಾಣವಿಲ್ಲದಿದ್ದಾಗ ಮಾತ್ರ ಬಹಿರಂಗಪ್ರಮಾಣವನ್ನು ಹುಡುಕಬೇಕು.

**ಶ್ರೀಮನ್ನ್ಯಾಯಸುಧಾ – ನ ಚ ವ್ಯಾಖ್ಯಾನತೋಽಪ್ಯಧಿಕಾರೋ ಜ್ಞಾಯತ ಇತಿ ವ್ಯರ್ಥಂ ಪೃಥಕ್ಕರಣಮಿತಿ ವಾಚ್ಯಮ್ । ಅಂತರಂಗಜ್ಞಾಪಕಾಭಾವ ಏವ ಬಹಿರಂಗಸ್ಯ ಅನ್ವೇಷಣೀಯತ್ವಾತ್ ಇತಿ । ತದನೇನಾಸಂಹಿತತಯಾ ನಿರ್ದೇಶೇ ನಿಮಿತ್ತಾಂತರಂ ವದತಾ ಹೇತೋಃ ಅನ್ಯಥಾಸಿದ್ಧಿರುಕ್ತಾ ಭವತಿ ।**

ಓಂಕಾರವನ್ನು ಸಂಧಿಮಾಡಿಯೇ ಉಚ್ಚರಿಸಬಹುದು. ವ್ಯಾಖ್ಯಾನದಿಂದ ಎಲ್ಲಾ ಸೂತ್ರಗಳಲ್ಲೂ ಅನುವೃತ್ತವಾಗುತ್ತದೆಂದು ತಿಳಿಯಲು ಸಾಧ್ಯವಾಗುತ್ತದಲ್ಲವೇ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಅಂತರಂಗಪ್ರಮಾಣವಿಲ್ಲದಿದ್ದರೆ ಮಾತ್ರ ಬಹಿರಂಗ ಪ್ರಮಾಣವನ್ನು ಹುಡುಕಬೇಕು ಎಂಬುದು ಈ ಶ್ಲೋಕದ ಅಭಿಪ್ರಾಯವಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಓಂಕಾರವನ್ನು ಸೂತ್ರದ ಆದ್ಯಂತಗಳಲ್ಲಿ ಉಚ್ಚರಿಸುವುದಕ್ಕೆ ಎಲ್ಲಾ ಸೂತ್ರ-ಗಳಲ್ಲಿ ಅನುಗತವಾಗಬೇಕೆಂಬುದು ಒಂದು ನಿಮಿತ್ತವಾಗಿದೆ. ಹೀಗೆ ಹೇಳಿದ್ದರಿಂದ 'ಲಕ್ಷಣಾಂತರಾಭಾವೇ' ಇತ್ಯಾದಿ ವಾಕ್ಯದಿಂದ ತೋರಿಸಿದ ಹೇತುವು ಅನ್ಯಥಾಸಿದ್ಧವಾಗಿದೆ ಎಂದು ಹೇಳಿದಂತಾಯಿತು.

## 'ಪ್ರವ್ಯತ್ಯನೋಂಕೃತಂ ಬ್ರಹ್ಮ' ಎಂಬ ಶ್ರುತಿವಾಕ್ಯದ ಅರ್ಥ

ಪರಿಮಳ – ನನು 'ಸೂತ್ರಾದೌ ಓಂಕಾರ ಏವ ನ' ಇತಿ ವದಂತಂ ಪ್ರತಿ ಪೃಥಗುಚ್ಚಾರಣಸ್ಯ ಗತ್ಯುಕ್ತಿರಯುಕ್ತಾ । ಅಧ್ಯೇತೃಪರಂಪರಯಾ ಉಚ್ಚಾರ್ಯಮಾಣತ್ವಸ್ಯಾಪಿ ನಿರ್ಮೂಲತ್ವೇನಾಂಧಪರಂಪರಾತ್ವಾನಿವಾರಣಾಚ್ಚೇತ್ಯತ ಆಹ – ಏತದುಕ್ತಮಿತಿ ॥ ಸಪ್ತ-ದಶಗೀತಾತಾತ್ಪರ್ಯೋಕ್ತಶ್ರುತಿಮಾಹ – ಸ್ರವತೀತಿ ॥ ಬ್ರಹ್ಮೇತಿ ಮಂತ್ರ ಉಚ್ಯತೇ । ಅನೋಂಕೃತಂ ಆದಾವೋಂಕಾರಶೂನ್ಯತಯೋಚ್ಚಾರಿತಂ ಚೇದಾಮಘಟಜಲವತ್ ಸ್ರವತಿ ಸುಕೃತಜನಕಂ ನೇತ್ಯರ್ಥಃ । ಪರಸ್ತಾದನೋಂಕೃತಂ ಚೇತ್ ವಿಶೀರ್ಯತೇ ಹಿಂಸ್ಯತೇ ಫಲ-ಜನಕಂ ನೇತ್ಯರ್ಥಃ ।

ಸೂತ್ರದ ಪ್ರಾರಂಭದಲ್ಲಿ ಯಾರು ಓಂಕಾರವನ್ನೇ ಒಪ್ಪುದಿಲ್ಲವೋ ಅಂಥವನಿಗೆ ಪ್ರತ್ಯೇಕವಾಗಿ ಉಚ್ಚಾರಣೆ ಮಾಡಬೇಕೆಂಬುದಕ್ಕೆ ಕಾರಣವನ್ನು ಗ್ರಂಥಕಾರರು ಹೇಳುತ್ತಿದ್ದಾರೆ. ಇದು ಹೇಗೆ ಯುಕ್ತವಾಗುತ್ತದೆ? ಮತ್ತು ಓಂಕಾರವು ಅಧ್ಯಯನ ಮಾಡುವವರ ಪರಂಪರೆ-ಯಿಂದ ಬಂದಿರುತ್ತದೆನ್ನಲು ಯಾವುದೇ ಪ್ರಮಾಣವಿಲ್ಲ. ಪ್ರಮಾಣವಿಲ್ಲದ ಪರಂಪರೆಯನ್ನು ಅಂಧಪರಂಪರೆಯೆಂದೇ ಹೇಳಬೇಕು. ಆದ್ದರಿಂದ ಅದು ಅಯುಕ್ತವಾಗುತ್ತದೆ. ಈ ಎರಡು ಆಕ್ಷೇಪಗಳಿಗೆ ''ಏತದುಕ್ತಂ ಭವತಿ'' ಎಂಬುದಾಗಿ ಉತ್ತರಿಸುತ್ತಿದ್ದಾರೆ.

'ಸ್ರವಸ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' – ಈ ಶ್ರುತಿವಾಕ್ಯವು ಭಗವ-ದ್ಗೀತೆಯ ಹದಿನೇಳನೆಯ ಅಧ್ಯಾಯದ ಗೀತಾತಾತ್ಪರ್ಯದಲ್ಲಿ ಉಲ್ಲೇಖಿಸಲ್ಪಟ್ಟಿದೆ. ''ಬ್ರಹ್ಮ'' ಎಂಬ ಪದಕ್ಕೆ ಮಂತ್ರ ಎಂದರ್ಥ. ಯಾವ ಮಂತ್ರದ ಪ್ರಾರಂಭದಲ್ಲಿ ಓಂಕಾರವನ್ನು ಉಚ್ಚರಿಸು-ವುದಿಲ್ಲವೋ ಆ ಮಂತ್ರವು ಹಸಿಮಣ್ಣಿನ ಗಡಿಗೆಯಲ್ಲಿ ನೀರು ಹಾಕಿದಂತೆ ಸ್ರವಿಸಿಹೋಗುತ್ತದೆ. ಯಾವುದೇ ಪುಣ್ಯವನ್ನು ನೀಡುವುದಿಲ್ಲ ಎಂದರ್ಥ. ಮಂತ್ರದ ಕೊನೆಯಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡದಿದ್ದರೆ ಆ ಮಂತ್ರವು ವಿಶರಣ ಹೊಂದುತ್ತದೆ. ನಿರ್ವೀರ್ಯವಾಗುತ್ತದೆ. ಫಲಜನಕವಾಗುವುದಿಲ್ಲ ಎಂದರ್ಥ. ಇಷ್ಟು 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬುದರ ಅರ್ಥ-ವಾಗಿದೆ.

## ವಿಧಿವಾಕ್ಯವನ್ನು ಊಹಿಸಿ ಓಂಕಾರವನ್ನು ಅಧ್ಯಾಹಾರ ಮಾಡಬೇಕು.

ಪರಿಮಳ – ಶ್ರೌತೇತಿ ॥ ಶ್ರುತ್ಯುಕ್ತನಿಂದಾರೂಪಾರ್ಥವಾದಬಲೇನ ಮಂತ್ರಸ್ಯ ಸ್ರವಣವಿಶರಣಾಭಾವಕಾಮಃ ಆದ್ಯಂತಯೋರೋಂಕುರ್ಯಾದಿತಿ ಕಲ್ಪಿತವಿಧಿವಾಕ್ಯೇನ ಸರ್ವಾಸ್ವಪಿ ಸೂತ್ರಾದಿರೂಪಬ್ರಹ್ಮವಿದ್ಯಾಸು ಆದ್ಯಂತಯೋರೋಂಕಾರಸ್ಯ ಊಹೋಽಧ್ಯಾಹಾರಃ ಕಾರ್ಯ ಇತ್ಯರ್ಥಃ। 'ಅಧ್ಯಾಹಾರಸ್ತರ್ಕ ಊಹಃ' ಇತ್ಯಮರೋಕ್ತೇಃ। ನ ತು ಮೀಮಾಂಸಕಾಭಿಮತ ಊಹಃ। ತಥೈವ ಚಂದ್ರಿಕೋಕ್ತೇಃ।

ನನು ಯದ್ಯಧ್ಯಾಹಾರ ಏವೋಹಶಬ್ದಾರ್ಥಃ ತರ್ಹಿ 'ಯದಯಮೋಂಕಾರಾಥಶಬ್ದೌ ಆದಿತಃ ಕೃತವಾನ್' ಇತ್ಯಾದಿಪೂರ್ವತನಸುಧಾವಾಕ್ಯವಿರೋಧಃ । ಪ್ರಯುಜ್ಯಮಾನಸ್ಯ ಅಧ್ಯಾಹ್ರಿಯಮಾಣತ್ವಾಯೋಗಾತ್ । ಅನ್ಯಥಾ ಅಥಾದಿಪದಸ್ಯಾಧ್ಯಾಹಾರ ಇತಿ ಸ್ಯಾದಿತಿ ಚೇತ್ ।

''ಶ್ರೌತಾರ್ಥಬಲೇನ'' – ಶ್ರುತಿಯಲ್ಲಿ ಹೇಳಿದ ನಿಂದಾರೂಪವಾದ ಅರ್ಥವಾದ ಬಲದಿಂದ ಮಂತ್ರವು ಸ್ರವಣವಾಗಬಾರದು. ವಿಶರಣವಾಗಬಾರದು ಎಂಬುದಾಗಿ ಯಾರು ಅಪೇಕ್ಷಿಸುತ್ತಾನೋ ಅವನು ಆ ಮಂತ್ರದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕು. ಹೀಗೆ ವಿಧಿವಾಕ್ಯವು ಕಲ್ಪಿತವಾಗುತ್ತದೆ. ಈ ವಿಧಿವಾಕ್ಯದ ಬಲದಿಂದ ಬ್ರಹ್ಮವಿದ್ಯೆಯೆನಿಸುವ ಎಲ್ಲಾ ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕು. ಅರ್ಥಾತ್ ಅಧ್ಯಾಹಾರ ಮಾಡಬೇಕು ಎಂಬುದು ಸಿದ್ಧವಾಗುತ್ತದೆ.

'ಅಧ್ಯಾಹಾರಸ್ತರ್ಕಃ ಊಹಃ' ಎಂಬ ಅಮರಕೋಶದಂತೆ ಊಹಶಬ್ದಕ್ಕೆ ಅಧ್ಯಾಹಾರ ಎಂಬರ್ಥವೂ ಕೂಡ ಇರುತ್ತದೆ. ಇದನ್ನು ಬಿಟ್ಟು ಮೀಮಾಂಸಕರು ಒಪ್ಪುವ ಊಹೆಯನ್ನು ಇಲ್ಲಿ ವಿವಕ್ಷಿಸಬಾರದು. ಹಾಗೆಯೇ ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿರುತ್ತಾರೆ.

ಆಕ್ಷೇಪ – ಊಹ ಶಬ್ದಕ್ಕೆ ಅಧ್ಯಾಹಾರವೆಂದೇ ಅರ್ಥ. ಹೀಗೆ ಹೇಳಿದರೆ 'ಯದಯಮೋಂಕಾರಾಥಶಬ್ದೌ ಆದಿತಃ ಕೃತವಾನ್' 'ಓಂಕಾರ ಮತ್ತು ಅಥಶಬ್ದವನ್ನು ಆದಿಯಲ್ಲಿ

ಉಚ್ಚರಿಸಿದ್ದಾರೆ' ಎಂಬ ಹಿಂದಿನ ಸುಧಾವಾಕ್ಯದಿಂದ ವಿರೋಧ ಬರುತ್ತದೆ. ಏಕೆಂದರೆ, ವಾಕ್ಯದಲ್ಲಿ ಪ್ರಯೋಗ ಮಾಡಿದ್ದರ ಅಧ್ಯಾಹಾರವು ಯುಕ್ತವಾಗುವುದಿಲ್ಲ. ವಾಕ್ಯದಲ್ಲಿ ಪ್ರಯೋಗ ಮಾಡಿದ್ದಕ್ಕೂ ಅಧ್ಯಾಹಾರವನ್ನು ಹೇಳುವುದಾದರೆ ಅಥ ಮೊದಲಾದ ಪದಗಳಿಗೂ ಕೂಡ ಅಧ್ಯಾಹಾರವನ್ನು ಹೇಳಬೇಕಾಗುತ್ತದೆ. ಇಷ್ಟು ಆಕ್ಷೇಪ.

ವಿವರಣೆ – ಸಾಮಾನ್ಯವಾಗಿ ಅರ್ಥವಾದ, ವಿಧಿಗಳು ಅವಿನಾಭೂತವಾಗಿಯೇ ಇರುತ್ತವೆ. ಕೆಲವೊಂದು ಕಡೆ ವಿಧಿವಾಕ್ಯವಿಲ್ಲದೇ ಅರ್ಥವಾದವಷ್ಟೇ ಇರುತ್ತದೆ. ಅಂಥ ಸ್ಥಳಗಳಲ್ಲಿ ಅರ್ಥವಾದದ ಬಲದಿಂದ ವಿಧಿವಾಕ್ಯವನ್ನು ಅನುಮಾನ ಮಾಡಬೇಕು. ಅರ್ಥವಾದವು ಶ್ರುತಿ, ನಿಂದಾ, ಪರಕೃತಿ, ಪುರಾಕಲ್ಪ ಎಂಬುದಾಗಿ ನಾಕು ಬಗೆಯಾಗಿದೆ. ಪ್ರಕೃತ 'ಸ್ರವತಿ, ವಿಶೀರ್ಯತೇ' ಎಂಬ ಪದಗಳಿಂದ ನಿಂದಾರೂಪವಾದ ಅರ್ಥವಾದವನ್ನು ಹೇಳಲಾಗಿದೆ. ಈ ನಿಂದಾರೂಪವಾದ ಅರ್ಥವಾದದ ಬಲದಿಂದ 'ಸ್ರವಣವಿಶರಣಾಭಾವಕಾಮಃ ಮಂತ್ರಾದೌ ಓಂಕಾರಂ ಉಚ್ಚಾರಯೇತ್' ಎಂಬ ವಿಧಿವಾಕ್ಯವನ್ನು ಊಹೆ ಮಾಡಬೇಕು.

ಊಹ ಶಬ್ದಕ್ಕೆ ಅಧ್ಯಾಹಾರ ಎಂಬರ್ಥವನ್ನೇ ವಿವಕ್ಷಿಸಬೇಕು. ಮೀಮಾಂಸಕರಿಗೆ ಅಭಿಪ್ರೇತವಾದ ಊಹೆಯನ್ನು ವಿವಕ್ಷಿಸಬಾರದೆಂಬ ವಿಚಾರವನ್ನು ತಾತ್ಪರ್ಯಚಂದ್ರಿಕಾ ನೋಡಿಯೇ ತಿಳಿದುಕೊಳ್ಳಬೇಕು.

ಹಿಂದಿನ ಸುಧಾವಾಕ್ಯದಲ್ಲಿ ಸೂತ್ರಕಾರರು ಓಂಕಾರವನ್ನು ಸ್ವತಃ ಉಲ್ಲೇಖ ಮಾಡಿದ್ದಾರೆಂದು ಹೇಳಿದ್ದಾರೆ. ಆದರೆ ಇಲ್ಲಿ ಓಂಕಾರವನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದೀರಿ. ಪೂರ್ವೋತ್ತರವಾಕ್ಯಗಳಿಗೆ ವಿರೋಧ ಬರುತ್ತದಲ್ಲವೇ?

## ಸೂತ್ರಕಾರರು ಮೊದಲ ಸೂತ್ರದಲ್ಲಿ ಓಂಕಾರವನ್ನು ಉಚ್ಚರಿಸಿಲ್ಲ

ಪರಿಮಳ – ಅತ್ರಾಹುಃ । 'ಆದಿತಃ ಕೃತವಾನ್' ಇತ್ಯಾದಿ ಪೂರ್ವತನಸುಧಾವಾಕ್ಯಾನಾಮ್ ಆದಿತಃ ದ್ವಯೋರಪಿ ಸತ್ತ್ವಾದಿತ್ಯರ್ಥಃ । ಅಥಶಬ್ದಸ್ಯಾದೌ ಕೃತತ್ವಮಸ್ತೀತಿ ವಾ ಶ್ರುತಿಪ್ರಾಪ್ತತ್ವೇನ ಸೂತ್ರಕೃದಭಿಮತತಯಾ ಕೃತಪ್ರಾಯತ್ವಾದ್ ವಾ ತದಭಿಪ್ರಾಯೇಣ ಕೃತವಾನಿತ್ಯಾದಿಕೃತನಿವೇಶಿತಾದಿಶಬ್ದಪ್ರಯೋಗಃ । ಏವಮಗ್ರೇ ಪ್ರಯುಕ್ತತ್ವಾದಿತಿಶಬ್ದಪ್ರಯೋಗೋಽಪಿ ಧ್ಯೇಯಃ ।

ಕೆಲವರು ಹೀಗೆ ಉತ್ತರಿಸುತ್ತಾರೆ. 'ಆದಿತಃ ಕೃತವಾನ್' ಇತ್ಯಾದಿ ಹಿಂದಿನ ಸುಧಾವಾಕ್ಯಗಳಿಗೆ ಓಂಕಾರ ಮತ್ತು ಅಥಶಬ್ದಗಳೆರಡೂ ಇರುತ್ತವೆ ಎಂದರ್ಥ. ಅಥಶಬ್ದವನ್ನು ಆದಿಯಲ್ಲಿ ಪ್ರಯೋಗಿಸಿದ್ದಾರೆ. ಅಥವಾ ಶ್ರುತಿಪ್ರಾಪ್ತವಾಗಿರುವುದರಿಂದ ಓಂಕಾರವು ಸೂತ್ರಕಾರರಿಗೆ ಅಭಿಮತವೂ ಆಗಿದೆ ಎಂದರ್ಥ. ಆದ್ದರಿಂದ ಓಂಕಾರವು ಪ್ರಯೋಗಮಾಡಲ್ಪಡದೇ ಇದ್ದರೂ ಕೂಡ ಕೃತಪ್ರಾಯವಾಗಿದೆ. ಈ ಅಭಿಪ್ರಾಯದಿಂದ 'ಕೃತವಾನ್, ನಿವೇಶಿತವಾನ್' ಇತ್ಯಾದಿ ಶಬ್ದಗಳನ್ನು ಟೀಕೆಯಲ್ಲಿ ಪ್ರಯೋಗಿಸಿದ್ದಾರೆ. ಅದರಂತೆ ಮುಂದಿನ 'ಪ್ರಯುಕ್ತತ್ವಾತ್' ಎಂಬ ಪದದಲ್ಲಿನ ಪ್ರಯುಕ್ತಪದಕ್ಕೂ ಕೂಡ ಹೀಗೇ ಅರ್ಥವನ್ನು ತಿಳಿಯಬೇಕು.

ವಿವರಣೆ – ಸೂತ್ರಕಾರರು 'ಅಥಾತಃ ಬ್ರಹ್ಮಜಿಜ್ಞಾಸಾ' ಎಂದಷ್ಟೇ ಹೇಳಿದ್ದಾರೆ. ಓಂಕಾರವನ್ನು ಅರ್ಥವಾದ ಬಲದಿಂದ ಊಹೆ ಮಾಡಬೇಕೆಂದು ಈಗ ಹೇಳುತ್ತಿದ್ದೀರಿ. ಆದರೆ ಹಿಂದಿನ ಸುಧಾವಾಕ್ಯದಲ್ಲಿ ಸೂತ್ರಕಾರರು ಓಂಕಾರವನ್ನು ಪ್ರಯೋಗಿಸಿದ್ದಾರೆಂದು ಹೇಳಿದ್ದೀರಿ. ಈ ವಿರೋಧವನ್ನು ಹೇಗೆ ಪರಿಹರಿಸುವುದು ಎಂಬ ಪ್ರಶ್ನೆಗೆ ಕೆಲವರು ನೀಡುವ ಉತ್ತರ ಹೀಗಿದೆ. ಸೂತ್ರಕಾರರು ಅಥಶಬ್ದವನ್ನು ಪ್ರಯೋಗಿಸಿದ್ದಾರೆ. ಛತ್ರಿನ್ಯಾಯದಿಂದ ಓಂಕಾರವನ್ನು ಪ್ರಯೋಗಿಸಿದ್ದಾರೆಂದು ಹೇಳಲಾಗಿದೆ. ವಾಸ್ತವಿಕವಾಗಿ ಹಿಂದಿನ ಸುಧಾವಾಕ್ಯಕ್ಕೆ ಓಂಕಾರವನ್ನು ಪ್ರಯೋಗಿಸಿದ್ದಾರೆಂಬುದರಲ್ಲಿ ತಾತ್ಪರ್ಯವಿರುವುದಿಲ್ಲ.

ಅಥವಾ ಓಂಕಾರವನ್ನು ಪ್ರಾರಂಭದಲ್ಲಿ ಉಚ್ಚರಿಸಲೇಬೇಕೆಂಬುದು ಶ್ರುತಿಪ್ರಾಪ್ತವಾಗಿದೆ. ಆದ್ದರಿಂದ ಪ್ರಾರಂಭದಲ್ಲಿ ಓಂಕಾರದ ಉಚ್ಚಾರಣೆಯು ಸೂತ್ರಕಾರರಿಗೂ ಅಭಿಪ್ರೇತವಾಗಿದೆ.

## ಓಂಕಾರವು ಸೂತ್ರದಲ್ಲಿ ಸೇರಿಲ್ಲ

ಪರಿಮಳ – ಸೂತ್ರಕೃತಾ 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯೇವೋಕ್ತಾವಪಿ 'ಸ್ರವತಿ' ಇತ್ಯಾದಿ ನಿಂದಾರ್ಥವಾದಬಲೇನ ಆದ್ಯಂತಯೋರೋಂಕಾರಮಧ್ಯಾಹೃತ್ಯ 'ಅಗ್ನಿಮೀಳೇ' ಇತ್ಯಾದಾವಿವ ಅಧ್ಯೇತಾರೋ ಅಧೀಯತೇ, ತದಭಿಪ್ರಾಯೇಣೈವ ತಾರಾಥಮೂಲತ್ವಮ್ ಇತಿ ಪೂರ್ವಾರ್ಧಂ ಪ್ರವೃತ್ತಮ್ । ನ ತು ಸೂತ್ರಕೃತಾಽಥಾದಿಪದಸಮಾನತಯಾಽಪಿ ಓಂಕಾರಸ್ಯ ಕೃತತ್ವಾಭಿಪ್ರಾಯೇಣ । ಅತ ಏವ ಶ್ರೀಮದ್ಭಾಷ್ಯೇಽಪಿ ಅಥಾದಿಪದಾದೇರೇವ ಅಥೋರ್ಕ್ತಿಃ । 'ಅಥಾತಃಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ' ಇತಿ 'ತಾವೇವಾದೌ ಪ್ರಯುಂಜತೇ' ಇತಿ ಚ ಉಪಕ್ರಮೋಪಸಂಹಾರೋಪೇತಪ್ರಮಾಣೋದಾಹರಣಂ ಚೇತಿ ।

ಸೂತ್ರಕಾರರು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದಷ್ಟೇ ಹೇಳಿದ್ದಾರೆ ಎಂದು ಹೇಳೋಣ, ಆದರೂ ಕೂಡ 'ಸ್ರವತ್ಯನೋಂಕೃತಂ' ಎಂಬ ನಿಂದಾರೂಪವಾದ ಅರ್ಥವಾದದ ಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಗ್ನಿಮೀಳೇ ಇತ್ಯಾದಿ ಮಂತ್ರಗಳಲ್ಲಿ ಹೇಗೆ ಓಂ ಎಂದು ಉಚ್ಚರಿಸಿ ಅಧ್ಯಯನ ಮಾಡುತ್ತಾರೋ ಅದೇ ಕ್ರಮದಲ್ಲಿ ಓಂ ಎಂದು ಉಚ್ಚರಿಸಿಯೇ ಸೂತ್ರಗಳನ್ನು ಅಧ್ಯಯನ ಮಾಡುತ್ತಾರೆ. ಈ ಅಭಿಪ್ರಾಯದಿಂದಲೇ 'ತತ್ರ ತಾರಾಥಮೂಲತ್ವಮ್' ಎಂಬ ಪೂರ್ವಾರ್ಧವು ಹೊರಟಿದೆ. ಈ ಅನುವ್ಯಾಖ್ಯಾನದ ಅಭಿಪ್ರಾಯವೇನೆಂದರೆ 'ಅಥ' 'ಅತಃ' ಶಬ್ದಗಳು ಸೂತ್ರದಲ್ಲಿ ಹೇಗೆ ಪ್ರಯುಕ್ತವಾಗಿವೆಯೋ ಅದರಂತೆ ಓಂಕಾರವೂ ಕೂಡ ಪ್ರಯುಕ್ತವಾಗಿದೆ ಎಂಬುದಲ್ಲ. ಅಧ್ಯಾಹಾರ ಮಾಡಿಕೊಳ್ಳಲ್ಪಟ್ಟ ಓಂಕಾರದ ವ್ಯಾಖ್ಯಾನವನ್ನಷ್ಟೇ ಅನುವ್ಯಾಖ್ಯಾನದಲ್ಲಿ ಮಾಡಿರುತ್ತಾರೆ. ಈ ದೃಷ್ಟಿಯಿಂದಲೇ ಶ್ರೀಮದ್ಭಾಷ್ಯದಲ್ಲಿ 'ಅಥ' 'ಅತಃ' ಇತ್ಯಾದಿಪದಗಳ ಅರ್ಥವನ್ನಷ್ಟೇ ವಿವರಿಸಿದ್ದಾರೆ. 'ಅಥಾತಃಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ' ಎಂದು ಮತ್ತು 'ತಾವೇವಾದೌ ಪ್ರಯುಂಜತೇ' ಎಂಬುದಾಗಿ ಉಪಕ್ರಮ ಮತ್ತು ಉಪಸಂಹಾರಗಳಿಂದ ಯುಕ್ತವಾದ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಇದರಿಂದ ಓಂಕಾರವನ್ನು ಸೂತ್ರಕಾರರು ಸೂತ್ರದಲ್ಲಿ ಸೇರಿಸಿಲ್ಲವೆಂದು ತಿಳಿಯುತ್ತದೆ.

ಗಮನಿಸಬೇಕಾದ ಅಂಶ – ಸೂತ್ರದ ಪ್ರಾರಂಭದಲ್ಲಿ ಅಥ, ಅತಃ ಎಂಬ ಶಬ್ದಗಳಂತೆ ಸೂತ್ರಕಾರರು ಓಂಕಾರವನ್ನು ಉಚ್ಚಾರಣೆ ಮಾಡಿರುವುದಿಲ್ಲ. ಕೇವಲ ಅಧ್ಯಾಹಾರದಿಂದ ಓಂಕಾರವು ಪ್ರಾಪ್ತವಾಗಿದೆ. ಆದ್ದರಿಂದಲೇ ಭಾಷ್ಯದ ಪ್ರಾರಂಭದಲ್ಲಿ ಓಂಕಾರವನ್ನು ವ್ಯಾಖ್ಯಾನ ಮಾಡದೇ ನೇರವಾಗಿ ಅಥ, ಅತಃ ಇತ್ಯಾದಿ ಶಬ್ದಗಳನ್ನೇ ವ್ಯಾಖ್ಯಾನ ಮಾಡಿದ್ದಾರೆ. ಅನುವ್ಯಾಖ್ಯಾನದಲ್ಲಿ ಓಂಕಾರವನ್ನು ವ್ಯಾಖ್ಯಾನ ಮಾಡಿದ್ದೂ ಕೂಡ ಅಧ್ಯಾಹೃತವಾಗಿದೆ ಎಂಬ ಅಭಿಪ್ರಾಯದಿಂದ ಮಾತ್ರ. ಸೂತ್ರಕಾರರು ಓಂಕಾರವನ್ನು ಉಚ್ಚಾರಣೆ ಮಾಡದಿದ್ದರೂ ಕೂಡ ಶ್ರುತಿಯ ಬಲದಿಂದ ಓಂಕಾರವು ವಿಹಿತವಾಗಿದೆ ಎಂಬುದು ಸೂತ್ರಕಾರರಿಗೆ ಸಮ್ಮತವಾಗಿದೆ ಎಂದು ಕೆಲವರು ಹೇಳುತ್ತಾರೆ.

ವಾಸ್ತವಿಕವಾಗಿ ಸೂತ್ರಕಾರರು ಓಂಕಾರವನ್ನು ಉಚ್ಚಾರಣೆ ಮಾಡಿದ್ದಾರೆ. ಆದರೆ ಅದನ್ನು ಸೂತ್ರದಲ್ಲಿ ಸೇರಿಸಿಲ್ಲ. ಸೂತ್ರಕಾರರು ಏಕೆ ಓಂಕಾರವನ್ನು ಉಚ್ಚಾರಣೆ ಮಾಡಿದ್ದಾರೆಂದರೆ 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಶ್ರುತಿವಾಕ್ಯದ ವಿಧಾನದಿಂದ ಪ್ರಾರಂಭದಲ್ಲಿ ಓಂ ಎಂದು ಹೇಳಿ 'ಅಥಾತಃ ಬ್ರಹ್ಮಜಿಜ್ಞಾಸಾ' ಎಂದಿದ್ದಾರೆ. ಆದ್ದರಿಂದ ಅಥ, ಅತಃ ಇತ್ಯಾದಿ ಶಬ್ದಗಳಂತೆ ಓಂಕಾರವು ಸೂತ್ರದಲ್ಲಿ ಸೇರಿರುವುದಿಲ್ಲ. ಅಂದ ಮಾತ್ರಕ್ಕೆ ಸೂತ್ರಕಾರರು ಉಚ್ಚಾರಣೆ ಮಾಡಿಯೇ ಇಲ್ಲ ಎಂದಲ್ಲ.

## ತಾತ್ಪರ್ಯಚಂದ್ರಿಕೆಯ ಪ್ರಕಾರ ಎರಡು ಓಂಕಾರಗಳಿವೆ

ಪರಿಮಳ – ಯದ್ವಾ ಚಂದ್ರಿಕೋಕ್ತದಿಶಾऽಥಾದಿಪದತುಲ್ಯತಯಾ 'ಓಂಕಾರಶ್ಚಾಥ-ಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್' ಇತಿ ಸ್ಮೃತಿಸಿದ್ಧೋಂಕಾರಪರೋऽಯಂ ಗ್ರಂಥಃ। ನ ತು 'ಪ್ರವತಿ' ಇತಿ ಶ್ರುತಿಪ್ರಾಪ್ತಸಾಧಾರಣೋಂಕಾರಪರಃ। 'ಪ್ರವತಿ' ಇತಿ ಶ್ರುತ್ಯುಕ್ತಿ-ಸ್ತೂಪಲಕ್ಷಣಂ ಧ್ಯೇಯಮಿತಿ।

ಅಥವಾ ತಾತ್ಪರ್ಯಚಂದ್ರಿಕಾದಲ್ಲಿ ಹೇಳಿದಂತೆ ಹೀಗೆ ತಿಳಿಯಬೇಕು – ಅಥ ಮೊದಲಾದ ಶಬ್ದಗಳಿಗೆ ಸಮಾನವಾಗಿಯೇ ಓಂಕಾರವನ್ನು ಸೂತ್ರಕಾರರು ಉಚ್ಚಾರಣೆ ಮಾಡಿದ್ದಾರೆ. 'ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್' 'ಓಂಕಾರ ಮತ್ತು ಅಥಶಬ್ದಗಳು ಮೊದಲು ಹೊರಹೊಮ್ಮಿದವು' ಎಂಬ ಸ್ಮೃತಿಯಿಂದ ಪ್ರಾಪ್ತವಾದ ಓಂಕಾರವಿಷಯಕವಾಗಿ 'ಕೃತವಾನ್' ಇತ್ಯಾದಿ ಗ್ರಂಥವು ಹೊರಟಿದೆ. ಹೊರತು ಪ್ರವತಿ ಇತ್ಯಾದಿ ಶ್ರುತಿಪ್ರಾಪ್ತವಾದ ಸರ್ವಸಾಧಾರಣವಾದ ಓಂಕಾರ ಪರವಾಗಿರುವುದಿಲ್ಲ. 'ಪ್ರವತಿ' ಎಂಬ ಶ್ರುತಿಯನ್ನು ಹೇಳಿದ್ದು ಉಪಲಕ್ಷಣವಾಗಿದೆ ಎಂದು ತಿಳಿಯಬೇಕು.

ವಿವರಣೆ – ತಾತ್ಪರ್ಯಚಂದ್ರಿಕಾದಲ್ಲಿ ಮತ್ತೊಂದು ರೀತಿಯಲ್ಲಿ ಉತ್ತರಿಸಿದ್ದಾರೆ. ನ್ಯಾಯ-ಸುಧಾಕಾರರು ಓಂಕಾರವನ್ನು ಸೂತ್ರಕಾರರು 'ಕೃತವಾನ್' ಇತ್ಯಾದಿಯಾಗಿ ಪ್ರಯೋಗಿಸಿದ್ದು ಹೇಗೆ? ಎಂಬ ಪ್ರಶ್ನೆಗೆ 'ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್' ಎಂಬ ಸ್ಮೃತಿಸಿದ್ಧವಾದ ಓಂಕಾರ-ವಿಷಯಕವಾಗಿ ಹೀಗೆ ಪ್ರಯೋಗಿಸಿದ್ದಾರೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎಂದು ಸರ್ವಸಾಧಾರಣವಾಗಿ ಪ್ರಾಪ್ತವಾಗುವ ಓಂಕಾರವಿಷಯದಲ್ಲಿ 'ಕೃತವಾನ್' ಇತ್ಯಾದಿ ಶಬ್ದ ಪ್ರಯೋಗಗಳನ್ನು ಮಾಡಿರುವುದಿಲ್ಲ. ಆದ್ದರಿಂದ ಒಟ್ಟು ಎರಡು ಓಂಕಾರಗಳನ್ನು ಸೂತ್ರಕಾರರು ಹೇಳಿರುತ್ತಾರೆ. ಮೊದಲನೆಯದ್ದು ಶ್ರುತಿಸಿದ್ಧ-ವಾದ ಓಂಕಾರ. ಎರಡನೆಯದ್ದು ಸ್ಮೃತಿಸಿದ್ಧವಾದ ಓಂಕಾರ. ಸ್ಮೃತಿಸಿದ್ಧವಾದ ಓಂಕಾರವನ್ನು ಸೂತ್ರ-ಕಾರರೇ ಪ್ರಯೋಗ ಮಾಡಿರುವುದರಿಂದ ಇದನ್ನು ವಿವಕ್ಷಿಸಿ 'ಕೃತವಾನ್, ಪ್ರಯುಕ್ತವಾನ್' ಇತ್ಯಾದಿ ಪ್ರಯೋಗಗಳು ಮಾಡಲ್ಪಟ್ಟಿವೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎಂಬಷ್ಟೇ ಶ್ರುತಿಯನ್ನು ಉಲ್ಲೇಖ ಮಾಡಿದ್ದಾರಲ್ಲವೇ? ಎಂಬ ಪ್ರಶ್ನೆಗೆ ಇದು ಉಪಲಕ್ಷಣವಾಗಿದೆ. ಅರ್ಥಾತ್ 'ಓಂಕಾರಶ್ಚಾಥಶಬ್ದಶ್ಚ' ಎಂಬ ಶ್ರುತಿವಾಕ್ಯವನ್ನು ಕೂಡ ವಿವಕ್ಷಿಸಬೇಕೆಂದು ಚಂದ್ರಿಕೆಯಲ್ಲಿ ಉತ್ತರಿಸಿದ್ದಾರೆ.

## ಸೂತ್ರಕಾರರು ಓಂಕಾರವನ್ನು ಸೂತ್ರದಲ್ಲಿ ಸೇರಿಸಿದ್ದಾರೆ

**ಪರಿಮಳ – ಕೇಚಿತ್ತು – ''ಸೂತ್ರಕೃತೋಂಕಾರೋಽಪಿ ಆದೌ ಕೃತ ಏವ । ಊಹ ಇತ್ಯುಕ್ತಿಸ್ತು ನಿಂದಾರ್ಥವಾದರೂಪಶ್ರುತಿಮೂಲತ್ವಾಭಿಪ್ರಾಯಾ'' ಇತ್ಯಾಹುಃ।**

ಕೆಲವರು - ಸೂತ್ರಕಾರರು ಸೂತ್ರಪ್ರಾರಂಭದಲ್ಲಿ ಓಂಕಾರವನ್ನು ಪ್ರಯೋಗಿಸಿದ್ದಾರೆಂದೇ ಹೇಳುತ್ತಾರೆ. ಹಾಗಾದರೆ ಟೀಕೆಯಲ್ಲಿ 'ಊಹೆ ಮಾಡಬೇಕೆಂದು' ಏಕೆ ಹೇಳಿದರು. ಇದರ ಅಭಿಪ್ರಾಯವೇನೆಂದರೆ ನಿಂದಾರೂಪವಾದ ಅರ್ಥವಾದಾತ್ಮಕವಾದ ವೇದವು ಓಂಕಾರದ ವಿಷಯದಲ್ಲಿ ಮೂಲಪ್ರಮಾಣವಾಗಿದೆ - ಎಂದು ಹೇಳುತ್ತಾರೆ.

ವಿವರಣೆ – ಕೆಲವರು ಸೂತ್ರಕಾರರು ಓಂಕಾರವನ್ನು ಮೊದಲು ಉಚ್ಚರಿಸಿದ್ದಾರೆ ಎಂದೇ ಹೇಳುತ್ತಾರೆ. ಹಾಗಾದರೆ ಊಹಃ ಎಂದು ಹೇಗೆ ಹೇಳಿದರು? ಎಂದರೆ ಸ್ವತಃ ಸೂತ್ರಕಾರರೇ 'ಪ್ರವತ್ಕ-ನೋಂಕೃತಂ ಬ್ರಹ್ಮ' ಎಂಬ ಅರ್ಥವಾದ ವಾಕ್ಯದ ಬಲದಿಂದ ಓಂಕಾರವನ್ನು ಊಹೆ ಮಾಡಿಕೊಂಡಿದ್ದಾರೆಂದು ಉತ್ತರಿಸುತ್ತಾರೆ. ಹಿಂದಿನ ಪಕ್ಷಗಳಲ್ಲಿ ಅರ್ಥವಾದ ವಾಕ್ಯದ ಬಲದಿಂದ ನಾವು ಓಂಕಾರವನ್ನು ಊಹೆ ಮಾಡಬೇಕೆಂದು ಹೇಳಿದರೆ ಈ ಕೇಚಿತ್ಕಾರರು ಸೂತ್ರಕಾರರೇ ಊಹೆ ಮಾಡಿಕೊಂಡಿದ್ದಾರೆಂದು ಹೇಳುತ್ತಿದ್ದಾರೆ. ಇವರ ಪಕ್ಷದಲ್ಲಿ ಪ್ರಥಮಸೂತ್ರದ ಮೊದಲು ಸೂತ್ರಾವಯವತ್ವೇನ ಸೂತ್ರಕಾರರು ಓಂಕಾರವನ್ನು ಉಚ್ಚರಿಸಿದ್ದಾರೆ.

## ವಾಸ್ತವಿಕವಾಗಿ ಓಂಕಾರವನ್ನು ಉಲ್ಲೇಖಿಸಿದ್ದರೂ ಸೂತ್ರದಲ್ಲಿ ಸೇರಿಸಿಲ್ಲ

**ಪರಿಮಳ – ವಸ್ತುತಸ್ತು ಉಚ್ಚಾರಿತೋಽಪಿ ಸೂತ್ರಕೃತಾಥಾದಿಶಬ್ದವನ್ನ ಸೂತ್ರೋಪ-ನಿಬದ್ಧಃ'' ಇತಿ।**

ವಾಸ್ತವಿಕವಾಗಿ ಸೂತ್ರದ ಆದಿಯಲ್ಲಿ ಓಂಕಾರವನ್ನು ಸೂತ್ರಕಾರರು ಉಚ್ಚರಿಸಿದ್ದಾರೆ. ಆದರೆ ಅಥ ಇತ್ಯಾದಿ ಪದಗಳಂತೆ ಅದನ್ನು ಉಪನಿಬಂಧ ಮಾಡಿರುವುದಿಲ್ಲ.

ವಿವರಣೆ – ವಾಸ್ತವಿಕವಾಗಿ ಹೀಗೆ ಹೇಳಬೇಕು. ಸೂತ್ರಕಾರರು ಓಂ ಎಂದು ಉಚ್ಚರಿಸಿಯೇ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಪ್ರಾರಂಭ ಮಾಡಿದ್ದಾರೆ. ಆದರೆ ಅದನ್ನು ಸೂತ್ರದ ಅವಯವವನ್ನಾಗಿ ವಿವಕ್ಷಿಸಿಲ್ಲ.

ಇಲ್ಲೊಂದು ಪ್ರಶ್ನೆ ಎದುರಾಗುತ್ತದೆ. ಹಾಗಾದರೆ ಸೂತ್ರದ ಅವಯವವೆಂದು ಹೇಗೆ ಹೇಳುತ್ತೀರಿ? ಎಂದು. ವಿವಕ್ಷಾಭೇದದಿಂದ ಇದಕ್ಕೆ ಉತ್ತರಿಸಬೇಕು. ಅರ್ಥವಾದದ ಬಲದಿಂದ ಸೂತ್ರಕಾರರು ಓಂ ಎಂದು ಉಚ್ಚರಿಸಿದ್ದಾರೆ. ಆದರೆ ಇದನ್ನು ಸೂತ್ರದ ಅವಯವವನ್ನಾಗಿಯೂ ಕೂಡ ನಾವು ವಿವಕ್ಷಿಸಬಹುದು. ಇದಕ್ಕೆ ಇನ್ನೂ ಹೆಚ್ಚಿನ ಉತ್ತರವನ್ನು, ವಿಮರ್ಶೆಯನ್ನು ವಿದ್ವಾಂಸರಿಂದ ಕೇಳಿ ತಿಳಿದುಕೊಳ್ಳಬೇಕು.

## ಓಂಕಾರವಿಷಯದಲ್ಲಿ ಶಿಕ್ಷಾವಾಕ್ಯವನ್ನೇಕೆ ಉದಾಹರಿಸಿಲ್ಲ?

ಪರಿಮಳ – ಯತ್ತು –

''ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ॥

ಇತಿ ಶಿಕ್ಷಾಗ್ರಂಥೇ ಪೂರ್ವಾರ್ಧೇ ವಿಧೇರಪ್ಯುಕ್ತೇಃ ಅರ್ಥವಾದಸಾಮರ್ಥ್ಯಾತ್ ಇತಿ ಸುಧೋಕ್ತಿರಯುಕ್ತಾ । ಕುಮಾರಸಂಭವೇ ದ್ವಿತೀಯಸರ್ಗೇ 'ಉದ್ಯತಃ ಪ್ರಣವೋ ಯಾಸಾಮ್' ಇತಿ ಶ್ಲೋಕೇ –

'ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇ ಚ ಸರ್ವದಾ'

ಇತ್ಯಾದಿ ಶಿಕ್ಷಾವಚನಮ್ ಇತ್ಯುಕ್ತತ್ವಾಚ್ಚ'' ಇತಿ, ತನ್ನ । ತತ್ರ ಶಿಕ್ಷಾವಚನಸ್ಯ ಸ್ರವತೀತಿ ನಿಂದಾರ್ಥವಾದಮೂಲತ್ವೇನ ಸ್ಪಷ್ಟಾರ್ಥತಯಾ ಸಾವಧಿಕತಯಾ ಶಿಕ್ಷಾಗ್ರಂಥಕರ್ತೃಕೃತತ್ವೇನೋಪಪತ್ತೇಃ ।

''ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ॥

ಎಂಬುದು ಶಿಕ್ಷಾವಚನ. ಇದರ ಪೂರ್ವಾರ್ಧದಲ್ಲಿ ಓಂಕಾರವನ್ನು ವಿಧಾನ ಮಾಡಲಾಗಿದೆ. ಇದನ್ನು ಸುಧಾಕಾರರು ಉಲ್ಲೇಖ ಮಾಡಬೇಕಿತ್ತು. ಇದನ್ನು ಬಿಟ್ಟು ಅರ್ಥವಾದದ ಬಲದಿಂದ

ಓಂಕಾರವನ್ನು ಊಹೆ ಮಾಡಬೇಕೆಂದು ಹೇಗೆ ಹೇಳಿದರು? ಮತ್ತು 'ಉದ್ಧೃತಃ ಪ್ರಣವಃ ಯಾಸಾಮ್' ಎಂಬ ಕುಮಾರಸಂಭವಶ್ಲೋಕವ್ಯಾಖ್ಯಾನದಲ್ಲಿ 'ಬ್ರಹ್ಮಣಃ' ಎಂಬ ಶಿಕ್ಷಾವಚನವನ್ನು ಆಧಾರವಾಗಿ ಹೇಳಿದ್ದಾರೆ. ಆದ್ದರಿಂದ ಇದು ಪ್ರಮಾಣವಾಗಿದೆ. ಇದನ್ನು ಬಿಟ್ಟು ಮತ್ತೊಂದು ರೀತಿಯಲ್ಲಿ ಸುಧಾವಚನ ಹೊರಟಿರುವುದು ಅಯುಕ್ತವಲ್ಲವೇ? ಎಂಬುದಾಗಿ ಕೆಲವರು ಆಕ್ಷೇಪಿಸುತ್ತಾರೆ.

ಇದು ತಪ್ಪು. ಏಕೆಂದರೆ ಶಿಕ್ಷಾಕಾರರ ಮಾತಿನಲ್ಲಿ 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ನಿಂದಾರೂಪ ಅರ್ಥವಾದಾತ್ಮಕವಾದ ಶ್ರುತಿಯೇ ಮೂಲಪ್ರಮಾಣವಾಗಿದೆ. ಇದು ಅವರ ಶ್ಲೋಕದಿಂದಲೇ ಸ್ಪಷ್ಟವಾಗಿ ಕಾಣಿಸುತ್ತಿದೆ. ಇದರ ಆಧಾರದಿಂದಲೇ 'ಬ್ರಹ್ಮಣಃ ಪ್ರಣವಂ ಕುರ್ಯಾತ್' ಎಂದು ಶಿಕ್ಷಾಕಾರರು ಹೇಳಿದ್ದಾರೆ. ಆದ್ದರಿಂದ ಶಿಕ್ಷಾಕಾರರಿಗೂ ಮೂಲಪ್ರಮಾಣವಾದ ಶ್ರುತಿಯ ಆಧಾರದಿಂದ ಓಂಕಾರದ ಊಹೆಯನ್ನು ಟೀಕೆಯಲ್ಲಿ ತಿಳಿಸಿದ್ದಾರೆ. ಇದು ಅತ್ಯಂತ ಯುಕ್ತವೇ ಆಗಿದೆ.

## ಓಂಕಾರವು ಹೇಗೆ ಸೂತ್ರಾವಯವವಾಗುತ್ತದೆ

ಪರಿಮಳ – ನನ್ವಸ್ತು ಓಂಕಾರಸ್ಯ ಸೂತ್ರಾದೌ ವೇದಾಧ್ಯಯನೋಪಕ್ರಮಸಾಧಾರಣ್ಯೇನ ಸತ್ವಂ ನಿಂದಾರ್ಥವಾದಸಿದ್ಧಮ್ । ತಾವತಾ ಕಥಮವಯವತ್ವಮ್? ಇತ್ಯತ ಆಹ – ನ ಚೇತಿ ॥ ಊಹ್ಯಮಾನಮ್ = ಅಧ್ಯಾಹ್ರಿಯಮಾಣಮ್ । ಪೃಥಗಿತಿ· ॥ ವಾಕ್ಯಾರ್ಥತಯಾ ಅನ್ವಯಪ್ರತಿಯೋಗ್ಯಸಮಪರ್ಕಮ್ ಇತ್ಯರ್ಥಃ । ಅಮಂತ್ರಾವಯವತ್ವೇತಿ ॥ 'ಮಂತ್ರಾವಯವತ್ವಾಭಾವಪ್ರಸಂಗಾತ್' ಇತ್ಯರ್ಥಃ। ಕ್ವಚಿತ್ ಮಂತ್ರಾನವಯವತ್ವೇತಿ ಪಾಠಃ।

ಓಂಕಾರವು ಸೂತ್ರದ ಆದಿಯಲ್ಲಿ ಹೇಳಬೇಕು. ವೇದಾಧ್ಯಯನದ ಪ್ರಾರಂಭದಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು ನಿಂದಾತ್ಮಕವಾದ ಅರ್ಥವಾದಬಲದಿಂದ ಏನು ಸಿದ್ಧವಾಗಿದೆಯೋ ಅದೇ ಓಂಕಾರವನ್ನು ಸೂತ್ರದ ಆದಿಯಲ್ಲಿ ಕೂಡ ಉಚ್ಚರಿಸೋಣ. ಅಂದಮಾತ್ರಕ್ಕೆ ಸೂತ್ರದ ಅವಯವವೆಂದು ಹೇಗೆ ಸಿದ್ಧವಾಗುತ್ತದೆ? ಈ ಪ್ರಶ್ನೆಗೆ ''ನ ಚ'' ಇತ್ಯಾದಿಗ್ರಂಥದಿಂದ

ಉತ್ತರಿಸುತ್ತಿದ್ದಾರೆ. 'ಊಹ್ಯಮಾನಂ' ಎಂದರೆ ಅಧ್ಯಾಹಾರ ಮಾಡಲ್ಪಡುವುದು ಎಂದರ್ಥ. ''ಪೃಥಗಿತಿ'' ಎಂದರೆ ವಾಕ್ಯಾರ್ಥದಲ್ಲಿ ಸಂಬದ್ಧಪಟ್ಟ ಪದಾರ್ಥವನ್ನು ತಿಳಿಸುವುದಿಲ್ಲ ಎಂದು ಅರ್ಥ. ''ಅಮಂತ್ರಾವಯವತ್ವ'' – ಮಂತ್ರದ ಅವಯವವಾಗದಿರುವ ಪ್ರಸಂಗ ಬರುತ್ತದೆ ಎಂದರ್ಥ. ಕೆಲವು ಪುಸ್ತಕಗಳಲ್ಲಿ ಮಂತ್ರ ಅನವಯವತ್ವ ಎಂಬ ಪಾಠವಿದೆ.

## ಅಧ್ಯಾಹೃತವಾದದ್ದಕ್ಕೂ ಕೂಡ ಅನ್ವಯವನ್ನು ತಿಳಿಯಬೇಕು

ಪರಿಮಳ – 'ಸಂಯಜ್ಞಪತಿರಾಶಿಷಾ' ಇತ್ಯತ್ರ 'ಗಚ್ಛತಾಮ್' ಇತ್ಯಸ್ಯ 'ಇಷೇ ತ್ವಾ' ಇತ್ಯಾದೌ ಛಿನದ್ಮೀತ್ಯಾದೇರಧ್ಯಾಹೃತಸ್ಯಾನ್ವಯಪ್ರತಿಯೋಗಿಸಮರ್ಪಕತ್ವರೂಪಾವಯವತ್ವಾಭಾವಪ್ರಸಂಗಾತ್ । ತಥಾತ್ವೇ 'ವ್ಯವಾಯಾನ್ನಾನುಷಜ್ಯತೇ' ಇತ್ಯಾದಿ ಜೈಮಿನಿಸೂತ್ರಕೃತಃ 'ವ್ಯತಿಹಾರೋ ವಿಶಿಂಷಂತಿ ಹಿ' ಇತಿ ಬ್ರಹ್ಮಸೂತ್ರಕೃತಶ್ಚ ತತ್ರ ತತ್ರ ಅಧ್ಯಾಹಾರೋಕ್ತಿರಯುಕ್ತಾ ಸ್ಯಾತ್ ಇತಿ ಭಾವಃ ।

'ಸಂಯಜ್ಞಪತಿರಾಶಿಷಾ' ಎಂಬ ವಾಕ್ಯದಲ್ಲಿ 'ಗಚ್ಛತಾಮ್' ಎಂಬ ಪದದ ಅಧ್ಯಾಹಾರವು ಇರುತ್ತದೆ. ಅದರಂತೆ 'ಇಷೇ ತ್ವಾ' ಎಂಬ ವಾಕ್ಯದಲ್ಲಿ ಛಿನದ್ಮಿ ಇತ್ಯಾದಿ ಪದಗಳ ಅಧ್ಯಾಹಾರವು ಇರುತ್ತದೆ. ಅಧ್ಯಾಹೃತವಾದ ಪದಕ್ಕೆ ಅನ್ವಯಪ್ರತಿಯೋಗಿಸಮರ್ಪಕವಾಗುತ್ತದೆ. ಆದ್ದರಿಂದ ಅಧ್ಯಾಹೃತವಾದ ಪದಗಳೂ ಕೂಡ ವಾಕ್ಯಾರ್ಥದಲ್ಲಿ ಅನ್ವಯ ಹೊಂದುವ ಪದಾರ್ಥವನ್ನು ತಿಳಿಸುವಿಕೆ ಎಂಬ ಅವಯವತ್ವವು ಇಲ್ಲದೇ ಇರುವ ಪ್ರಸಂಗವು ಬರುತ್ತದೆ. ಗಚ್ಛತಿ, ಛಿನತ್ತಿ ಇತ್ಯಾದಿ ಮುಂತಾದವುಗಳು ಸಂಯಜ್ಞಪತಿರಾಶಿಷಾ, ಇಷೇತ್ವಾ ಮುಂತಾದ ವಾಕ್ಯಗಳಲ್ಲಿ ಅವಯವಗಳಾಗದಿರುವ ಪ್ರಸಂಗವು ಬರುತ್ತದೆ. ಹಾಗೇನಾದರೂ ಅವುಗಳು ಅವಯವಗಳಾಗದಿದ್ದರೆ 'ವ್ಯವಾಯಾನ್ನಾನುಷಜ್ಯತೇ' 'ವ್ಯತಿಹಾರೋ ವಿಶಿಂಷಂತಿ ಹಿ' ಇತ್ಯಾದಿಯಾಗಿ ಜೈಮಿನಿಋಷಿಗಳು ಅಥವಾ ಬಾದರಾಯಣರು ಅಲ್ಲಲ್ಲಿ ತೋರಿಸಿದ ಅಧ್ಯಾಹಾರವೂ ಕೂಡ ಅಯುಕ್ತವಾಗಬೇಕಾಗುತ್ತದೆ. ಇಷ್ಟು ಈ ವಾಕ್ಯದ ಅಭಿಪ್ರಾಯ.

ವಿವರಣೆ – ಓಂಕಾರವನ್ನು ಅಧ್ಯಾಹಾರ ಮಾಡಿಕೊಂಡಿದ್ದಾರೆ. ಆದರೂ ಕೂಡ ಅನ್ವಯಪ್ರತಿಯೋಗಿಸಮರ್ಪಕವಾಗಿ ಸೂತ್ರಾರ್ಥದಲ್ಲಿ ಅನ್ವಯವನ್ನು ಹೊಂದುತ್ತದೆ. ಅಧ್ಯಾಹಾರ ಮಾಡಿಕೊಂಡಿ-

ರುವ ಕಾರಣದಿಂದ ಸೂತ್ರಾರ್ಥದಲ್ಲಿ ಅನ್ವಯ ಹೊಂದದೇ ಇದ್ದರೆ ಇಷೇ ತ್ವಾ ಇತ್ಯಾದಿ ವಾಕ್ಯಗಳಲ್ಲಿ ಅಧ್ಯಾಹಾರ ಮಾಡಿಕೊಂಡ ಗಚ್ಛತಿ ಇತ್ಯಾದಿ ಪದಾರ್ಥಗಳಿಗೂ ಕೂಡ ವಾಕ್ಯಾರ್ಥದಲ್ಲಿ ಅನ್ವಯವು ಇಲ್ಲದೇ ಇರಬೇಕಾಗುತ್ತದೆ. ಮತ್ತು ಸೂತ್ರಕಾರರು ಅಲ್ಲಲ್ಲಿ ಮಾಡಲ್ಪಡುವ ಅಧ್ಯಾಹಾರಗಳೂ ಕೂಡ ನಿರರ್ಥಕಗಳಾಗಬೇಕಾಗುತ್ತವೆ.

## ಸೂತ್ರದ ಕೊನೆಯಲ್ಲಿರುವ ಓಂಕಾರವನ್ನು ಸೇರಿಸಿಯೂ ಉಚ್ಚರಿಸಬೇಕು

ಪರಿಮಳ – ಅನವಯವತ್ವಸಾಧಕಪ್ರಾಗುಕ್ತಹೇತೋಃ ಕಾ ಗತಿಃ? ಇತ್ಯತೋಽನ್ಯ-ಥೋಪಪತ್ತಿಮಾಹ – ತತಶ್ಚೇತಿ ॥ ಯದ್ವಾ ಪ್ರತಿಸೂತ್ರಮಾದ್ಯಂತಯೋರೋಂಕರ್ತ-ವ್ಯತ್ವಸ್ಯಾವಶ್ಯಕತ್ವೇ ಸತೀತ್ಯರ್ಥಃ । ಪ್ರತಿಸೂತ್ರಮ್ ॥ 'ದ್ವಿತೀಯಾದಿ ಸರ್ವಸೂತ್ರೇಷು' ಇತ್ಯರ್ಥಃ । ಆದಾವೇವೇತಿ ॥ 'ಪ್ರಥಮಸೂತ್ರ ಏವ' ಇತ್ಯರ್ಥಃ । 'ಓಂಕಾರಃ' ಇತ್ಯೇಕ-ವಚನೇನ ಪ್ರಥಮಸೂತ್ರೇಽಪಿ ಆದಾವೇವೋಚ್ಚಾರ್ಯಮಾಣಃ ನ ತ್ವಂತೇಽಪ್ಯುಚ್ಚಾರ್ಯ-ಮಾಣ ಇತಿ ಗಮ್ಯತೇ । ಅಂತಿಮಸ್ಯ ಸೂತ್ರಾನವಯವತ್ವೇನ ಅದೃಷ್ಟಮಾತ್ರಾರ್ಥತಯಾ ಪೃಥಕ್ಕರಣಾಭಾವೇಽಪಿ ಏತತ್ಸೂತ್ರಮಾತ್ರಸಂಬಂಧತ್ವಶಂಕಾನುದಯೇನಾದಿಮೋಂಕಾರ-ಸ್ಯೈವ ತಥಾತ್ವೇ ಶಂಕೋದಯಾತ್ । ಯದ್ವಾ ಓಂಕಾರ ಇತ್ಯಾದ್ಯಂತಯೋರಪ್ಯುಚ್ಚಾರ್ಯ-ಮಾಣೋ ಗೃಹ್ಯತೇ ।

ವಿವರಣೆ – ಓಂಕಾರವು ಸೂತ್ರದ ಅವಯವವಲ್ಲವೆಂದು ಸಾಧಿಸುವ ಹಿಂದಿನ ಅನುಮಾನಕ್ಕೆ ಏನು ಗತಿ? ಎಂಬ ಪ್ರಶ್ನೆಗೆ ಆ ಅನುಮಾನದ ಹೇತು ಸಾಧ್ಯವಿಲ್ಲದಿದ್ದರೂ ಕೂಡ ಉಪಪನ್ನವಾಗುತ್ತದೆಂದು ಅನ್ಯಥಾ ಉಪಪತ್ತಿಯನ್ನು ''ತತಶ್ಚ'' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ. ''ತತಶ್ಚ'' ಎಂದರೆ 'ಓಂಕಾರವು ಪ್ರಥಮಸೂತ್ರದ ಅವಯವವೆಂದು ಸಿದ್ಧವಾಗುತ್ತಿರಲು' ಎಂದರ್ಥ. ಅಥವಾ 'ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರದ ಅಧ್ಯಾಹಾರವು ಆವಶ್ಯಕವೆಂದು ಸಿದ್ಧವಾಗುತ್ತಿರಲು' ಎಂದೂ ಕೂಡ ಅರ್ಥವನ್ನು ತಿಳಿಯಬಹುದು.

''ಪ್ರತಿಸೂತ್ರಮ್'' – 'ಎರಡನೆಯ ಸೂತ್ರದಿಂದ ಆರಂಭಿಸಿ ಸಕಲಸೂತ್ರಗಳಲ್ಲಿ' ಎಂದರ್ಥ.

''ಆದಾವೇವ'' - 'ಪ್ರಥಮಸೂತ್ರದಲ್ಲಿ ಮಾತ್ರ' ಎಂದರ್ಥ.

ಓಂಕಾರಃ ಎಂಬುದಾಗಿ ಟೀಕಾರಾಯರು ಏಕವಚನಾಂತಪ್ರಯೋಗವನ್ನು ಮಾಡಿದ್ದಾರೆ. ಇದರಿಂದ ಪ್ರಥಮಸೂತ್ರದ ಆದಿಯಲ್ಲಿ ಉಚ್ಚರಿಸುವ ಓಂಕಾರವನ್ನೇ ಅಸಂಹಿತತಯಾ ಉಚ್ಚರಿಸಬೇಕೆಂದು ತಿಳಿಸಿದ್ದಾರೆ. ಪ್ರಥಮಸೂತ್ರದ ಕೊನೆಯಲ್ಲಿ ಉಚ್ಚರಿಸುವ ಓಂಕಾರವನ್ನು ಸಂಹಿತತಯಾ ಉಚ್ಚಾರ ಮಾಡಬಹುದೆಂದು ತಿಳಿಯುತ್ತದೆ. ಏಕೆಂದರೆ, ಆದಿಯಲ್ಲಿ ಓಂಕಾರವನ್ನು ಅಸಂಹಿತತಯಾ ಏಕೆ ಉಚ್ಚರಿಸಬೇಕೆಂದರೆ, ಮುಂದಿನ ಸೂತ್ರಗಳಲ್ಲೂ ಅನುವೃತ್ತಿಯಾಗಬೇಕು ಎಂಬುದಕ್ಕಾಗಿ. ಆದರೆ ಅಂತಿಮ ಓಂಕಾರದಲ್ಲಿ ಈ ಆಶಂಕೆಯೇ ಬರುವುದಿಲ್ಲ. ಕೇವಲ ಅದೃಷ್ಟಪ್ರಯೋಜನಕ್ಕೋಸ್ಕರ ಅದನ್ನು ಉಚ್ಚರಿಸಲಾಗುತ್ತದೆ. ಇದಕ್ಕೆ ದೃಷ್ಟಪ್ರಯೋಜನವು ಇರುವುದಿಲ್ಲ. ಅದನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯು ಇರುವುದಿಲ್ಲ. ಅಥವಾ 'ಓಂಕಾರಃ ಆದ್ಯಂತ್ಯಯೋಃ ಉಚ್ಚಾರ್ಯಮಾಣಃ' ಎಂಬುದಾಗಿ ಅನ್ವಯವನ್ನು ಮಾಡಿದಾಗ ಜಾತ್ಯೇಕವಚನವನ್ನು ತಿಳಿಯಬೇಕು. ಅಸಂಹಿತತಯಾ ಅಂತಿಮ ಓಂಕಾರ-ವನ್ನು ಪಠಿಸಿದರೂ ಕೂಡ ಯಾವುದೇ ಬಾಧಕವಿಲ್ಲ.

ಎರಡನೆಯ ಪಕ್ಷದಲ್ಲಿ ಮೊದಲು ಉಚ್ಚರಿಸುವ ಮತ್ತು ಕೊನೆಯಲ್ಲಿ ಉಚ್ಚರಿಸುವ ಎರಡೂ ಓಂಕಾರಗಳು ಅಸಂಹಿತತಯಾ ಪಠಿತವಾಗಿವೆಯೆಂದೇ ತಿಳಿಯಬಹುದು. ಟೀಕೆಯಲ್ಲಿ 'ಓಂಕಾರಃ' ಎಂಬುದಾಗಿ ಏಕವಚನವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ಸೂತ್ರದ ಪ್ರಾರಂಭದಲ್ಲಿರುವ ಓಂಕಾರವನ್ನಷ್ಟೇ ಅಸಂಹಿತತಯಾ ಉಚ್ಚಾರ ಮಾಡಬೇಕು. ಕೊನೆಯಲ್ಲಿರುವ ಓಂಕಾರವನ್ನು ಹೇಗೆ ಉಚ್ಚರಿಸಿದರೂ ಬಾಧಕವಿಲ್ಲ. ಅದನ್ನು ಸಂಹಿತತಯಾ ಉಚ್ಚಾರ ಮಾಡಿದ ಮಾತ್ರಕ್ಕೆ ಈ ಸೂತ್ರಕ್ಕೆ ಮಾತ್ರ ಸಂಬಂಧಪಟ್ಟದೆಯೆಂಬ ಭ್ರಾಂತಿಯೇ ಬರುವುದಿಲ್ಲ. ಏಕೆಂದರೆ ಕೊನೆಯಲ್ಲಿ ಹೇಳುವ ಓಂಕಾರಕ್ಕೆ ಅದೃಷ್ಟಮಾತ್ರ ಪ್ರಯೋಜನವಿದೆ.

## ಓಂಕಾರವನ್ನು ಶಾಸ್ತ್ರದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಉಚ್ಚರಿಸಿದರೆ ಸಾಕು ಎಂದು ಕೆಲವರ ವಾದ

ಪರಿಮಳ – ಕೇಚಿತ್ತು – ಪ್ರಥಮಸೂತ್ರೇऽಪ್ಯೇಕ ಏವೋಂಕಾರ ಆದಾವುಚ್ಚಾ-ರ್ಯಮಾಣಃ । ಅಂತಿಮಸ್ತು ಸರ್ವಸೂತ್ರಪಾರಾಯಣಾನಂತರಮ್ 'ಅನಾವೃತ್ತಿಃಶಬ್ದಾತ್' ಇತಿ ಸೂತ್ರಸಮಾಪ್ತ್ಯನಂತರಮುಚ್ಚಾರ್ಯಮಾಣ ಏವ ವೇದಾಧ್ಯನವದೇವ ಇತ್ಯಾಹುಃ ।

ಅಧಿಕೃತತ್ವೇನೇತಿ ॥ 'ದ್ವಿತೀಯಾದಿಸೂತ್ರೇಽಪಿ ಅನುವರ್ತಮಾನತ್ವೇನ' ಇತ್ಯರ್ಥಃ । ಇದಂ ಸರ್ವತ್ರ ದ್ವಿತೀಯಾದಾವಪ್ಯನುವರ್ತ್ಯತಾಮ್ ಇತಿ ಬುದ್ಧ್ಯೋಚ್ಚಾರ್ಯತ ಇತಿ ಯಾವತ್ ।

ಕೆಲವರು ಹೀಗೆ ಹೇಳುತ್ತಾರೆ – ಪ್ರಥಮಸೂತ್ರದ ಆದಿಯಲ್ಲಿ ಒಮ್ಮೆ ಓಂಕಾರವನ್ನು ಉಚ್ಚಾರ ಮಾಡಿದರೆ ಸಾಕು. ಎಲ್ಲಾ ಸೂತ್ರಗಳನ್ನು ಪಾರಾಯಣ ಮಾಡಿ ಮುಗಿಸಿದ ಮೇಲೆ 'ಅನಾವೃತ್ತಿಃ ಶಬ್ದಾತ್' ಎಂಬ ಸೂತ್ರದ ಕೊನೆಯಲ್ಲಿ ಒಮ್ಮೆ ಓಂ ಎಂದು ಉಚ್ಚಾರ ಮಾಡಿ ಮುಗಿಸಿದರೆ ಸಾಕು. ಪ್ರತಿಸೂತ್ರಗಳಲ್ಲಿ ಓಂಕಾರವು ಅನಾವಶ್ಯಕ- ಎಂದು. ಇವರ ಈ ಪಕ್ಷವನ್ನು ಗ್ರಂಥದಲ್ಲಿ ''ಅಧಿಕೃತತ್ವೇನ ಉಚ್ಚಾರ್ಯತೇ'' ಎಂದು ಉತ್ತರಿಸಿದ್ದಾರೆ. ದ್ವಿತೀಯಾದಿಸೂತ್ರ-ಗಳಲ್ಲೂ ಕೂಡ ಈ ಪ್ರಥಮಸೂತ್ರದಲ್ಲಿರುವ ಓಂಕಾರಕ್ಕೆ ಅನುವೃತ್ತಿಯು ಇರುತ್ತದೆ ಎಂದರ್ಥ. ಈ ಮೊದಲನೆಯ ಸೂತ್ರದಲ್ಲಿರುವ ಓಂಕಾರಕ್ಕೆ ದ್ವಿತೀಯಾದಿ ಸೂತ್ರಗಳಲ್ಲೂ ಕೂಡ ಅನು-ವೃತ್ತಿಯನ್ನು ಮಾಡಿಕೊಳ್ಳಬೇಕು ಎಂಬ ಭಾವನೆಯಿಂದ ಪ್ರಥಮಸೂತ್ರದ ಪ್ರಾರಂಭದಲ್ಲಿ ಓಂ ಎಂದು ಉಚ್ಚರಿಸಿದ್ದಾರೆ ಎಂದಭಿಪ್ರಾಯ.

ವಿವರಣೆ – ಕೆಲವರು ವೇದಮಂತ್ರವನ್ನು ಪಠಿಸುವಾಗ ಪ್ರಾರಂಭದಲ್ಲಿ ಓಂ ಎಂದು ಉಚ್ಚರಿಸಿ ಪುನಃ ಕೊನೆಯಲ್ಲಿ ಓಂ ಎಂದು ಹೇಳಿ ಹೇಗೆ ಮುಕ್ತಾಯ ಮಾಡುತ್ತೇವೋ ಅದರಂತೆ ಪ್ರಥಮಸೂತ್ರದ ಪ್ರಾರಂಭದಲ್ಲಿ ಓಂ ಎಂದು ಉಚ್ಚರಿಸಿ ಕೊನೆಯ ಸೂತ್ರದಲ್ಲಿ ಮುಕ್ತಾಯ ಮಾಡುವಾಗ ಮತ್ತೊಮ್ಮೆ ಓಂ ಎಂದು ಉಚ್ಚರಿಸಿದರೆ ಸಾಕು. ಇವರ ಈ ಪಕ್ಷವನ್ನು ಕೂಡ ಇಲ್ಲಿ ನಿರಾಕರಿಸಿದ್ದಾರೆ.

## ಓಂಕಾರವು ಪ್ರಥಮಸೂತ್ರದ ಅವಯವ ಎಂಬುದಕ್ಕೆ ಏನರ್ಥ?

ಪರಿಮಳ – ಅಸ್ತ್ವೇವಂ ಪೃಥಕ್ಪಾಠಸ್ತು ಕುತಃ? ಇತ್ಯತ ಆಹ – ತಸ್ಯೇತಿ ॥ ಸಂಹಿತತಯಾ ಸಂಶ್ಲಿಷ್ಟತಯಾ ನಿವೇಶೇಽಧ್ಯಯನೇ ಕೃತೇ ಸತೀತ್ಯರ್ಥಃ । 'ಪ್ರಥಮಸೂತ್ರಾವಯವ ಏವ' ಇತ್ಯತ್ರ ಅವಯವಶಬ್ದ ಉಪಕಾರಕಮಾತ್ರಪರಃ ನತ್ವನ್ವಯಪ್ರತಿಯೋಗಿಸಮರ್ಪಕರೂಪಾ-ವಯವಪರಃ । ತಥಾತ್ವೇ ಸತಿ 'ತನ್ಮಾ ವಿಜ್ಞಾಯಿ' ಇತ್ಯುತ್ತರವಾಕ್ಯೇ ಪ್ರಥಮಸೂತ್ರಾ-ವಯವತ್ವಮಾತ್ರಂ ವಿಜ್ಞಾತಂ ಮಾ ಭೂತ್ ಕಿಂತು ದ್ವಿತೀಯಾದಿಸೂತ್ರಾವಯವತ್ವಮಪಿ

ವ್ಯಜ್ಞಾಯೀತ್ಯರ್ಥಸ್ಯ ವಾಚ್ಯತ್ವೇನ ದ್ವಿತೀಯಾದೌ ಅದೃಷ್ಟಮಾತ್ರೋಪಕಾರಕತಯಾ ಅನ್ವಯಪ್ರತಿಯೋಗಿಸಮರ್ಪಕತ್ವಸ್ಯ ಬಾಧಾತ್ ।

ಓಂಕಾರವು ಪ್ರಥಮಸೂತ್ರದ ಅವಯವವೇ ಆಗಲಿ; ಆದರೂ ಅದನ್ನು ಪ್ರತ್ಯೇಕವಾಗಿ ಏಕೆ ಪಠಿಸಬೇಕು? ಎಂಬ ಪ್ರಶ್ನೆಗೆ ''ತಸ್ಯ'' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ''ಸಂಹಿತತಯಾ'' ಬೇರೆ ಪದಗಳ ಜೊತೆ ಸಂಧಿಮಾಡಿ ''ನಿವೇಶೇ'' ಅಧ್ಯಯನವನ್ನು ಮಾಡಿದರೆ ಎಂದರ್ಥ. ''ಪ್ರಥಮಸೂತ್ರೇ ಅವಯವೇ ಏವ'' ಎಂಬಲ್ಲಿರುವ ಅವಯವಶಬ್ದಕ್ಕೆ ಉಪಕಾರಕ ಎಂದಷ್ಟೇ ಅರ್ಥವನ್ನು ತಿಳಿಯಬೇಕು. ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದುವ ಪದಾರ್ಥವನ್ನು ತಿಳಿಸುತ್ತದೆಂಬ ಅವಯವ ಎಂಬರ್ಥವನ್ನು ತಿಳಿಯಬಾರದು. ಹಾಗಾದಲ್ಲಿ ''ತಸ್ಮಾ ವಿಜ್ಞಾಯಿ'' ಈ ವಾಕ್ಯಕ್ಕೆ ಓಂಕಾರವು ಪ್ರಥಮಸೂತ್ರಕ್ಕಷ್ಟೇ ಅವಯವವಾಗುತ್ತದೆಂದು ತಿಳಿಯಬಾರದು. ದ್ವಿತೀಯಾದಿ ಸಕಲಸೂತ್ರಗಳಿಗೂ ಕೂಡ ಅವಯವವಾಗಿದೆಯೆಂದು ತಿಳಿಯಬೇಕು. ಈ ಅರ್ಥವನ್ನು ಹೇಳಬೇಕಾಗುತ್ತದೆ. ಆದ್ದರಿಂದ ಎರಡನೆಯ ಸೂತ್ರ ಮೊದಲಾದವುಗಳಲ್ಲಿ ಅದೃಷ್ಟವಾದ ಫಲಕ್ಕೆ ಕಾರಣವಾಗಿರುತ್ತದೆಂಬ ಅವಯವತ್ವವೇ ಇರುತ್ತದೆ. ಅನ್ವಯಕ್ಕೆ ಸಂಬಂಧಪಟ್ಟ ಅರ್ಥವನ್ನು ತಿಳಿಸುತ್ತದೆಂಬ ಹಿಂದಿನ ಅವಯವತ್ವವು ಅವುಗಳಲ್ಲಿ ಬಾಧಿತ-ವಾಗುತ್ತದೆ.

ಅಥವಾ ದ್ವಿತೀಯಾದಿಸೂತ್ರಗಳಲ್ಲಿ ಓಂಕಾರವನ್ನು ಅದೃಷ್ಟೋಪಕಾರಕಭಾವದಿಂದ ಅನುವೃತ್ತಿ ಮಾಡಬೇಕೆಂಬ ಅಭಿಪ್ರಾಯವು ತಿಳಿಯದೇ ಇರಬೇಕಾದೀತು. ಇಷ್ಟು ''ಪ್ರಥಮ-ಸೂತ್ರಾವಯವ ಏವ ವಿಜ್ಞಾಯೇತ'' ಎಂಬ ವಾಕ್ಯದ ಅಭಿಪ್ರಾಯವಾಗಿದೆ.

ವಿವರಣೆ – ಪ್ರಥಮಸೂತ್ರದಲ್ಲಿರುವ ಓಂಕಾರವು ದ್ವಿತೀಯಾದಿಸೂತ್ರಗಳಲ್ಲಿ ಅನ್ವಯವನ್ನು ಹೊಂದಲಿ! ಅಂದ ಮಾತ್ರಕ್ಕೆ ಪ್ರತ್ಯೇಕವಾಗಿ ಏಕೆ ಪಠಿಸಬೇಕು? ಸಂಹಿತತಯಾ ಏಕೆ ಪಠಿಸಬಾರದು?

ಉತ್ತರ ಹೀಗಿದೆ – ಒಂದು ವೇಳೆ ಸಂಹಿತತಯಾ ಪಠಿಸಿದರೆ ಇದು ಕೇವಲ ಪ್ರಥಮಸೂತ್ರದ ಅವಯವವಾಗಿದೆ ಎಂಬ ಭ್ರಾಂತಿ ಬರುತ್ತದೆ. ಹೀಗೆ ಭ್ರಾಂತಿ ಬರಬಾರದೆನ್ನಲು ಅಸಂಹಿತತಯಾ ನಿರ್ದೇಶ ಮಾಡಲಾಗಿದೆ.

ಎರಡು ಬಗೆಯಲ್ಲಿ "ಅವಯವ" ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. (೧) ಅನ್ವಯಪ್ರತಿ-ಯೋಗಿಯನ್ನು ಯಾವುದು ತಿಳಿಸುತ್ತದೋ ಅದು ಅವಯವ ಎನಿಸುತ್ತದೆ. (೨) ಯಾವುದು ಉಪಕಾರಕವಾದದ್ದೋ ಅದು ಅವಯವ ಎನಿಸುತ್ತದೆ. ಈ ಎರಡರಲ್ಲಿ ಮೊದಲನೆಯ ಅರ್ಥವನ್ನು ಇಲ್ಲಿ ವಿವಕ್ಷಿಸುವುದಿಲ್ಲ. "ಸೂತ್ರೇಣ ಸಹ ಏಕಕಾರ್ಯಕಾರಿತ್ವಂ" ಎಂಬ ಉಪಕಾರಕತ್ವರೂಪವಾದ ಅವಯವತ್ವವನ್ನೇ ಇಲ್ಲಿ ವಿವಕ್ಷಿಸುತ್ತೇವೆ. ಈ ಅರ್ಥವನ್ನು ಒಪ್ಪದಿದ್ದರೆ ಟೀಕಾಪಂಕ್ತಿಯೇ ಅಪಾರ್ಥ-ವಾಗುತ್ತದೆ.

ಅದು ಹೀಗೆ – "ಒಂದು ವೇಳೆ ಓಂಕಾರವನ್ನು ಪ್ರಥಮಸೂತ್ರದಲ್ಲಿ ಸಂಹಿತತಯಾ ನಿರ್ದೇಶ ಮಾಡಿದರೆ ಆಗ ಅದು ಕೇವಲ ಪ್ರಥಮಸೂತ್ರದ ಅವಯವವೆಂದು ತಿಳಿಯಬೇಕಾದೀತು. ಮುಂದಿನ ಸೂತ್ರಗಳಿಗೆ ಓಂಕಾರವು ಅವಯವವಲ್ಲ ಎಂಬ ಪ್ರತೀತಿಯು ಬರುತ್ತಿತ್ತು. ಹಾಗೆ ಪ್ರತೀತಿಯು ಬರಬಾರದು. ಮುಂದಿನ ಸೂತ್ರಗಳಲ್ಲೂ ಕೂಡ ಅವಯವವಾಗಿದೆ ಎಂಬ ಪ್ರತೀತಿಯು ಬರಬೇಕೆಂದು ತಿಳಿಸುವುದಕ್ಕಾಗಿ ಅಸಂಹಿತತಯಾ ಉಚ್ಚರಿಸಬೇಕು" ಎಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದರೆ ಪ್ರಥಮಸೂತ್ರಕ್ಕೆ ಮಾತ್ರ ಓಂಕಾರವು ಅವಯವವಲ್ಲ. ಮುಂದಿನ ಸೂತ್ರಗಳಿಗೂ ಕೂಡ ಅವಯವ-ವಾಗುತ್ತದೆ. ಎಲ್ಲಾ ಸೂತ್ರಗಳಲ್ಲೂ ಅವಯವವಾಗಿದೆ ಎಂದು ತಿಳಿಸುವುದಕ್ಕಾಗಿ ಇಲ್ಲಿ ಅಸಂಹಿತತಯಾ ನಿರ್ದೇಶ ಮಾಡಿದ್ದೇವೆ ಎಂದು ಹೇಳಿದಂತಾಗುತ್ತದೆ. ಒಂದು ವೇಳೆ ಅವಯವಶಬ್ದಕ್ಕೆ 'ಅನ್ವಯಪ್ರತಿ-ಯೋಗಿಸಮರ್ಪಕ' ಎಂಬರ್ಥವನ್ನು ವಿವಕ್ಷಿಸಿದರೆ ದ್ವಿತೀಯಾದಿ ಸೂತ್ರಗಳಲ್ಲೂ ಕೂಡ ಓಂಕಾರಕ್ಕೆ ಅನ್ವಯವನ್ನು ಹೇಳಬೇಕಾದೀತು? ಆದರೆ ಇದು ಸಾಧ್ಯವೇ ಇಲ್ಲ. ಅದಕ್ಕೋಸ್ಕರ ಅವಯವಶಬ್ದಕ್ಕೆ ಉಪಕಾರಕ ಎಂದಷ್ಟೇ ಅರ್ಥವನ್ನು ಹೇಳಬೇಕು. ಆಗ ಪ್ರಥಮಸೂತ್ರಕ್ಕೆ ಮಾತ್ರ ಓಂಕಾರವು ಉಪಕಾರಕವಲ್ಲ; ಸರ್ವಸೂತ್ರಗಳಿಗೂ ಕೂಡ ಉಪಕಾರಕವಾಗಿದೆ ಎಂಬರ್ಥವನ್ನು ಹೇಳಿದಂತಾಗುತ್ತದೆ.

## ಅನ್ವಯಪ್ರತಿಯೋಗಿಸಮರ್ಪಕತ್ವದ ಪ್ರತಿಪಾದನೆ

ಪರಿಮಳ – ಯದ್ವಾ 'ಪ್ರಥಮಸೂತ್ರಾವಯವ ಏವ ವಿಜ್ಞಾಯೇತ' ಇತಿ, 'ದ್ವಿತೀಯಾದಾವದೃಷ್ಟಮಾತ್ರೋಪಕಾರಕತ್ವೇನ ಅನುವೃತ್ತಿರ್ನ ಜ್ಞಾಯೇತ' ಇತ್ಯೇವಂ ವ್ಯಾಖ್ಯೇಯಮ್ । ಪೃಥಗೋಂಕ್ರಿಯತ ಇತಿ ॥ ಯಥಾ ಪಾಣನೀಯೇ । 'ಪ್ರತ್ಯಯಃ' 'ಪರಶ್ಚ' 'ಧಾತೋಃ' 'ಅಂಗಸ್ಯ' ಇತ್ಯಾದೀನ್ಯನೇಕಸೂತ್ರೇಷ್ವನುವೃತ್ತ್ಯರ್ಥಂ ಪೃಥಕ್ಕೃತ್ಯ ನಿರ್ದಿಶ್ಯಂತೇ ನ ತೂಪರಿತನಸೂತ್ರಸಂಶ್ಲಿಷ್ಟತಯಾ ತಥಾ ಇಹಾಪೀತಿ ಭಾವಃ ।

ಅಥವಾ ದ್ವಿತೀಯಾದಿಸೂತ್ರಗಳಲ್ಲಿ ಓಂಕಾರವನ್ನು ಅದೃಷ್ಟೋಪಕಾರಕಭಾವದಿಂದಲೇ ಅನುವೃತ್ತಿಮಾಡಬೇಕೆಂಬ ಅಭಿಪ್ರಾಯವು ತಿಳಿಯದೇ ಇರಬೇಕಾದೀತು!! ಎಂಬುದಾಗಿಯೂ ''ಪ್ರಥಮಸೂತ್ರಾವಯವ ಏವ ವಿಜ್ಞಾಯೇತ' ಎಂಬ ವಾಕ್ಯಕ್ಕೆ ಅರ್ಥವನ್ನು ತಿಳಿಯಬಹುದು.

''ಪೃಥಗೋಂಕ್ರಿಯತೇ'' – ಪಾಣಿನಿಯ ಸೂತ್ರದಲ್ಲಿ 'ಪ್ರತ್ಯಯಃ' ಎಂಬುದು ಐದನೆಯ ಅಧ್ಯಾಯದ ಸಮಾಪ್ತಿಯ ತನಕ ಸಂಜ್ಞಾರೂಪವಾಗಿ ಅಧಿಕೃತವಾಗಿದೆ. ಇದರಂತೆ 'ಪರಶ್ಚ' 'ಧಾತೋಃ' 'ಅಂಗಶ್ಚ' ಇವೇ ಮೊದಲಾದ ಸೂತ್ರಗಳೂ ಕೂಡ ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯನ್ನು ಹೊಂದುತ್ತವೆ. ಅದರಂತೆ ಇಲ್ಲೂ ಕೂಡ ತಿಳಿಯಬೇಕು.

ವಿವರಣೆ – ಅಥವಾ ಅವಯವಶಬ್ದಕ್ಕೆ 'ಅನ್ವಯಪ್ರತಿಯೋಗಿಸಮರ್ಪಕ' ಎಂಬರ್ಥವನ್ನು ಕೂಡ ವಿವಕ್ಷಿಸಬಹುದು. ಈ ಪಕ್ಷದಲ್ಲಿ 'ಅವಯವೇ ಏವ' ಎಂಬಲ್ಲಿರುವ ಏವಕಾರದಿಂದ ಇದನ್ನು ವ್ಯಾವೃತ್ತಿ ಮಾಡಬೇಕು – ದ್ವಿತೀಯಾದಿಸೂತ್ರಗಳಲ್ಲಿ ಇರುವ ಅದೃಷ್ಟಮಾತ್ರೋಪಕಾರಕತ್ವವು ವ್ಯಾವೃತ್ತವಾಗುತ್ತದೆ. ಹೊರತು ಓಂಕಾರವು ದ್ವಿತೀಯಾದಿಸೂತ್ರಗಳ ಅವಯವವೇ ಆಗಿರುವುದಿಲ್ಲ ಎಂದು ಏವಕಾರದಿಂದ ತಿಳಿಯಬಾರದು.

'ಪ್ರತ್ಯಯಃ' ಎಂಬ ಪಾಣಿನಿಸೂತ್ರವು ಪ್ರಥಮಾಧ್ಯಾಯ ಮುಗಿಯುವ ತನಕ ಸಂಜ್ಞಾರೂಪವಾಗಿ ಅನುವೃತ್ತವಾಗುತ್ತದೆ. 'ಪರಶ್ಚ' ಎಂಬ ಸೂತ್ರವು ಪಂಚಮಾಧ್ಯಾಯದ ಪರಿಸಮಾಪ್ತಿಯ ತನಕ ಸಂಜ್ಞಾರೂಪವಾಗಿ ಅನುವೃತ್ತವಾಗುತ್ತದೆ. 'ಧಾತೋಃ' ಎಂಬ ಸೂತ್ರವು ತೃತೀಯಾಧ್ಯಾಯದ ಸಮಾಪ್ತಿಯ ತನಕ ಅನುವೃತ್ತಿಯಾಗುತ್ತದೆ. 'ಅಂಗಸ್ಯ' ಎಂಬ ಸೂತ್ರವೂ ಕೂಡ ಹೀಗೆಯೇ. ಹೀಗೆ ಅನೇಕ ಸೂತ್ರಗಳಲ್ಲಿ ಸಂಪೂರ್ಣವಾದ ಒಂದು ಸೂತ್ರವನ್ನೇ ಅನುವೃತ್ತಿಮಾಡುವ ಕ್ರಮವಿದೆ. ಅನುವೃತ್ತಿ ಮಾಡುವುದಕ್ಕಾಗಿಯೇ ಆ ಸೂತ್ರಗಳನ್ನು ಪ್ರತ್ಯೇಕವಾಗಿ ನಿರ್ದೇಶಿಸಲಾಗುತ್ತದೆ. ಮತ್ತೊಂದು ಸೂತ್ರದ ಜೊತೆ ಅನುವೃತ್ತವಾಗುವುದನ್ನು ಸೇರಿಸಿರುವುದಿಲ್ಲ. ಅರ್ಥಾತ್ ಅಧಿಕಾರವನ್ನು ಹೊಂದುವ ಸೂತ್ರಗಳು ಅಸಂಕೀರ್ಣವಾಗಿಯೇ ಇರುತ್ತವೆ. ಅದೇ ಉದಾಹರಣೆಯಿಂದ ಇಲ್ಲಿಯೂ ಕೂಡ ಸೂತ್ರದಲ್ಲಿ ಓಂಕಾರವನ್ನು ಸೇರಿಸಬಾರದಿತ್ತು. ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿ ಮಾಡಬೇಕಾದ್ದರಿಂದ ಓಂಕಾರವನ್ನೇ ಪ್ರತ್ಯೇಕವಾಗಿ ಹೇಳಬೇಕಾಗಿತ್ತು? ಎಂಬುದು ಪ್ರಶ್ನೆಯ ಅಭಿಪ್ರಾಯ.

* * * * *

## ಪೂರ್ವಪಕ್ಷಿಗಳ ಅನುಮಾನಕ್ಕೆ ಅನ್ಯಥಾಸಿದ್ಧಿದೋಷವು ಸುಸ್ಥಿರವಾಯಿತು

ಪರಿಮಳ – 'ಢ್ರಲೋಪೇ ಪೂರ್ವಸ್ಯ ದೀರ್ಘೋऽಣಃ' ಇತ್ಯಾದೌ ಪಾಣಿನೀಯೇ ಸಂಹಿತತಯಾ ನಿರ್ದಿಷ್ಟಸ್ಯಾಪಿ ದೀರ್ಘಾದಿಪದಸ್ಯ ಅನೇಕಸೂತ್ರೇಷ್ವನುವೃತ್ತಿರ್ಭಾಷ್ಯವೃತ್ತಿ-ಕಾರಾದಿವ್ಯಾಖ್ಯಾನಾದ್ ಯಥಾऽವಸೀಯತೇ ತಥಾ ಇಹಾಪಿ ಭಾಷ್ಯಕಾರಾದಿ-ವ್ಯಾಖ್ಯಾನಾತ್ ಅನುವೃತ್ತ್ಯವಗಮಸಂಭವಾತ್ ಅನುವೃತ್ತ್ಯರ್ಥಂ ಶಿಷ್ಟಾನಾಂ ಪೃಥಕ್‌ಪಾಠ ಇತ್ಯಯುಕ್ತಮ್ ।

ಕಿಂತ್ವನವಯವತ್ವಾದೇವ ಇತ್ಯತ ಆಹ – ನ ಚೇತಿ ॥ ಅಧಿಕಾರ ಉತ್ತರಸೂತ್ರೇಷು ಅನುಷಜ್ಯಮಾನತ್ವಮ್ ಇತ್ಯರ್ಥಃ । ಅಂತರಂಗೇತಿ ॥ ಅಸಂಹಿತಾಪಾಠೋऽಂತರಂಗಮ್ । ವ್ಯಾಖ್ಯಾನಂ ಬಹಿರಂಗಮಿತಿ ಭಾವಃ । 'ಇತಿ'ಪದಸ್ಯ 'ಏತದುಕ್ತಮ್' ಇತಿ ಪೂರ್ವೇಣಾ-ನ್ವಯಃ ॥

ತಾವತಾऽನವಯವತ್ವಸಾಧಕಹೇತೋಃ ಕಾ ಗತಿರುಕ್ತಾ ಇತ್ಯತ ಆಹ – ತದನೇನೇತಿ ॥ ಸರ್ವತ್ರ ಇತ್ಯರ್ಥೇನ ॥

'ಢ್ರಲೋಪೇ ಪೂರ್ವಸ್ಯ ದೀರ್ಘೋऽಣಃ' ಇತ್ಯಾದಿ ಪಾಣಿನಿಯ ಸೂತ್ರಗಳಲ್ಲೂ ಕೂಡ ಸಂಹಿತತಯಾ ನಿರ್ದೇಶಿಸಲ್ಪಟ್ಟ ದೀರ್ಘ ಇತ್ಯಾದಿ ಪದಗಳನ್ನು ಮುಂದಿನ ಅನೇಕ ಸೂತ್ರಗಳಲ್ಲಿ ಅನುವೃತ್ತಿ ಮಾಡುವುದನ್ನು ಭಾಷ್ಯಕಾರರು ಹಾಗೂ ವೃತ್ತಿಕಾರರು ಒಪ್ಪಿದ್ದಾರೆ. ಅವರ ವ್ಯಾಖ್ಯಾನದಿಂದ ಈ ವಿಷಯವು ಸ್ಪಷ್ಟವಾಗುತ್ತದೆ. ಅದೇ ರೀತಿಯಾಗಿ ಇಲ್ಲಿಯೂ ಸಹ ಭಾಷ್ಯ-ಕಾರಾದಿಗಳ ವ್ಯಾಖ್ಯಾನದ ಬಲದಿಂದ ಓಂಕಾರವನ್ನು ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಹೀಗೆ ವ್ಯಾಖ್ಯಾನದಿಂದಲೇ ಅನುವೃತ್ತಿಯು ತಿಳಿಯುವಾಗ ಪ್ರತ್ಯೇಕವಾಗಿ ಶಿಷ್ಟರು ಓಂಕಾರವನ್ನು ಉಚ್ಚರಿಸಿದ್ದು ಏಕೆ?

ಈ ಪ್ರಶ್ನೆಯು ಅಯುಕ್ತವಾಗಿದೆ. ಪ್ರತ್ಯೇಕವಾಗಿ ಉಚ್ಚರಿಸಿದ್ದು ಅವಯವವಾಗಿರುವುದಿಲ್ಲ ಎಂದಷ್ಟೇ ಅಭಿಪ್ರಾಯದಿಂದ. ಈ ಪ್ರಶ್ನೆಗೆ "ನ ಚ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

''ಅಧಿಕಾರಃ'' - 'ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯನ್ನು ಪಡೆಯುವಿಕೆ' ಎಂದರ್ಥ. ''ಅಂತರಂಗ'' – ಸೂತ್ರದಲ್ಲಿ ಅಸಂಹಿತವಾಗಿ ಪಠಿಸುವುದನ್ನು ಅಂತರಂಗ ಎನ್ನುತ್ತಾರೆ. ವ್ಯಾಖ್ಯಾನಗಳಲ್ಲಿ ಹೇಳುವುದನ್ನು ಬಹಿರಂಗ ಎನ್ನುತ್ತಾರೆ. ''ಇತಿ'' ಎಂಬ ಪದಕ್ಕೆ 'ಏತದುಕ್ತಮ್' ಎಂಬ ಮೊದಲಿರುವ ಪದದ ಜೊತೆ ಸಂಬಂಧವನ್ನು ಹೇಳಬೇಕು. ಸೂತ್ರದಲ್ಲಿ ಓಂಕಾರವು ಅವಯವವಾಗಿಲ್ಲ ಎಂಬುದಾಗಿ ಸಾಧಿಸುವ ಅನುಮಾನಕ್ಕೆ ಯಾವ ದೋಷವನ್ನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ ''ತದನೇನ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ವಿವರಣೆ – ಅಸಂಹಿತತಯಾ ನಿರ್ದೇಶ ಮಾಡಿದ್ದಕ್ಕೆ ಉತ್ತರಸೂತ್ರಗಳಲ್ಲಿ ಅನುವೃತ್ತಿಯು ಸಾಧ್ಯವಿಲ್ಲ ಎಂಬ ಆಕ್ಷೇಪವೇ ತಪ್ಪು. ಏಕೆಂದರೆ 'ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ' ಎಂಬ ಸೂತ್ರದಲ್ಲಿ ದೀರ್ಘಃ ಎಂಬ ಪದವು ಅಸಂಹಿತತಯಾ ಅಣಃ ಎಂಬುದರ ಜೊತೆ ನಿರ್ದೇಶಿಸಲ್ಪಟ್ಟಿದೆ. ಇದಕ್ಕೆ ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯು ಇರುತ್ತದೆಂದು ಭಾಷ್ಯಕಾರರು ಹಾಗೂ ವೃತ್ತಿಕಾರರು ಅಂಗೀಕರಿಸಿದ್ದಾರೆ. ಆದ್ದರಿಂದ ಅನುವೃತ್ತಿಗೋಸ್ಕರ ಅಸಂಹಿತತಯಾ ನಿರ್ದೇಶ ಮಾಡಿದ್ದಾರೆಂದು ಸಾಧಿಸಲು ಸಾಧ್ಯವಿಲ್ಲ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು – 'ಓಂಕಾರಃ ನ ಪ್ರಥಮಸೂತ್ರಾವಯವಃ ಲಕ್ಷಣಾಂತರಾಭಾವೇ ಸತಿ ಸಂಪಾಠೇ ಅಸಂಹಿತತಯಾ ಪಠ್ಯಮಾನತ್ವಾತ್' ಎಂಬ ಪೂರ್ವಪಕ್ಷಿಯ ಅನುಮಾನಕ್ಕೆ ನಾವು ಅನ್ಯಥಾಸಿದ್ಧಿಯನ್ನು ಹೇಳಿದ್ದೇವೆ. 'ಅಸಂಹಿತತಯಾ ಪಠ್ಯಮಾನತ್ವವು ಇರಲಿ; ಅವಯವತ್ವಾಭಾವಃ ಮಾಸ್ತು' ಎಂದು . ಈ ಅನ್ಯಥಾಸಿದ್ಧಿಯನ್ನು ಪೂರ್ವಪಕ್ಷಿಯು ಅಸಾಧುವೆಂದು ಈಗ ಆಕ್ಷೇಪ ಮಾಡುತ್ತಿದ್ದಾನೆ. ಏಕೆಂದರೆ, ಭಾಷ್ಯಕಾರಾದಿಗಳ ವ್ಯಾಖ್ಯಾನದಿಂದಲೇ ಅನುವೃತ್ತಿಯನ್ನು ತಿಳಿಯಲು ಸಾಧ್ಯವಿದೆ. ಕೇವಲ ಅನುವೃತ್ತಿಗೋಸ್ಕರ ಅಸಂಹಿತತಯಾ ಪಠಿಸುವ ಅವಶ್ಯಕತೆಯು ಇರುವುದಿಲ್ಲ ಎಂಬುದಾಗಿ ಪೂರ್ವಪಕ್ಷಿಯ ಅಭಿಪ್ರಾಯ. ಇದಕ್ಕೆ ಉತ್ತರ ಹೀಗಿದೆ – ವ್ಯಾಖ್ಯಾನವು ಬಹಿರಂಗವಾಗಿರುತ್ತದೆ. ಮೂಲಗ್ರಂಥವು ಅಂತರಂಗವಾಗಿರುತ್ತದೆ. ಗ್ರಂಥಕಾರರೇ ಸ್ವತಃ ತಿಳಿಸುತ್ತಿರುವಾಗ ವ್ಯಾಖ್ಯಾನವನ್ನು ಅಪೇಕ್ಷಿಸುವ ಅವಶ್ಯಕತೆಯು ಇರುವುದಿಲ್ಲ. ಪ್ರಕೃತ ಅಸಂಹಿತತಯಾ ಓಂಕಾರವನ್ನು ಉಚ್ಚರಿಸಿರುವುದೇ ಅಂತರಂಗವಾಗಿದೆ. ಆದ್ದರಿಂದ 'ಸರ್ವತ್ರಾನುಗತತ್ವೇನ' ಎಂಬ ಶ್ಲೋಕದಿಂದ ಪೂರ್ವಪಕ್ಷಿಗಳ ಅನುಮಾನಕ್ಕೆ ಅನ್ಯಥಾಸಿದ್ಧಿದೋಷವನ್ನು ಹೇಳಿದಂತಾಯಿತು.

## ತಿಳಿಯಲೇಬೇಕಾದ ಹಲವಾರು ಪ್ರಮೇಯಗಳು

ವಾಕ್ಯಾರ್ಥಚಂದ್ರಿಕಾ – ನನು ಸರ್ವಸೂತ್ರೇಷು ಓಂಕಾರಾನುಗತಿರೇವ ಕುತಃ? ಯೇನ ಅಸಂಹಿತತಯಾ ನಿರ್ದೇಶಂ ಪ್ರತಿ ಸಾ ನಿಮಿತ್ತಂ ಸ್ಯಾತ್ । ಅಸ್ತು ವಾ ಸಾ ತಥಾಽಪಿ ನಿಮಿತ್ತಾಂತರೇಣ ಅಸಂಹಿತತಯಾ ನಿರ್ದೇಶೋಪಪತ್ತೌ ನ ತಸ್ಯಾ ನಿಮಿತ್ತತ್ವಮಿತ್ಯತ ಆಹ – ಏತದುಕ್ತಂ ಭವತಿ ಇತಿ ॥ ಅವಯವತ್ವೋಪಪಾದಕೋಹಸಾಧಕವಾಕ್ಯೇ ಬ್ರಹ್ಮಪದಪ್ರಯೋಗಾದಸ್ತು ವೇದವಿದ್ಯಾಯಾಮ್ ಆದ್ಯಂತಯೋರೂಹಾತ್ ಓಂಕಾರಸ್ಯ ತದವಯವತ್ವಮ್ । ಸೂತ್ರೇಷು ಕಿಮಾಯಾತಮ್ । ತಥಾತ್ವೇ ವಾ ಸರ್ವಸೂತ್ರಾಣಾಂ ಭಿನ್ನವಿದ್ಯಾತ್ವೇ ವಾಕ್ಯಭೇದಾಪತ್ತ್ಯಾ ಏಕವಿದ್ಯಾತ್ವಾತ್ ಕಿಂ ಸರ್ವಸೂತ್ರಾನುಗಮೇನ ಇತ್ಯಾಶಂಕಾಂ ಪರಿಹರ್ತುಮನೇಕವೇದವಾಕ್ಯವಿಚಾರರೂಪತ್ವಾತ್ ಸೂತ್ರಾಣಾಮಪಿ ಪ್ರತ್ಯೇಕಂ ಬ್ರಹ್ಮವಿದ್ಯಾತ್ವಮ್ ಉಪೋದ್ಘಾತೇನಾಹ – ಸರ್ವಾಣಿ ಹೀತಿ ॥

ಪ್ರಶ್ನೆ – ಸರ್ವಸೂತ್ರಗಳಲ್ಲಿ ಓಂಕಾರದ ಅನುಗತಿಯನ್ನೇ ಏಕೆ ಹೇಳಬೇಕು? ಹಾಗಾದಲ್ಲಿ ಅಸಂಹಿತತಯಾ ನಿರ್ದೇಶಕ್ಕೆ ಆ ಅನುಗತಿಯು ನಿಮಿತ್ತವಾಗುತ್ತಿತ್ತು. ಅಥವಾ ಅನುಗತಿಯನ್ನು ಒಪ್ಪೋಣ. ಆದರೂ ಕೂಡ ಬೇರೆ ನಿಮಿತ್ತಗಳು ಇರುವುದರಿಂದ ಅಸಂಹಿತತಯಾ ನಿರ್ದೇಶ ಮಾಡಿದ್ದಾರೆಂದು ಹೇಳಬಹುದು. ಅನುಗತಿಯೇ ನಿಮಿತ್ತವಾಗಬೇಕಾಗಿಲ್ಲ? ಈ ಪ್ರಶ್ನೆಗೆ "ಏತದುಕ್ತಂ ಭವತಿ" ಎಂಬುದರಿಂದ ಉತ್ತರಿಸಿದ್ದಾರೆ.

ಅವಯವತ್ವಕ್ಕೆ ಉಪಪಾದಕವಾದ ಯಾವ ಊಹೆ ಇದೆಯೋ ತತ್ಸಾಧಕವಾದ ವಾಕ್ಯದಲ್ಲಿ ಬ್ರಹ್ಮಪದಪ್ರಯೋಗದಿಂದ ವೇದವಿದ್ಯೆಯ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕು. ಅಲ್ಲಿ ಅವಯವತ್ವವೂ ಕೂಡ ಓಂಕಾರಕ್ಕೆ ಯುಕ್ತವಾಗುತ್ತದೆ. ಅಂದಮಾತ್ರಕ್ಕೆ ಸೂತ್ರಗಳಲ್ಲಿ ಏನು ಹೇಳಿದಂತಾಯಿತು? ಒಂದು ವೇಳೆ ಸೂತ್ರಗಳನ್ನು ಬ್ರಹ್ಮ ಎಂದು ತಿಳಿಯೋಣ. ಆದರೂ ಎಲ್ಲಾ ಸೂತ್ರಗಳು ಭಿನ್ನವಿದ್ಯೆಯೆಂದು ಒಪ್ಪಿದರೆ ವಾಕ್ಯಭೇದಾಪತ್ತಿದೋಷವು ಬರುತ್ತದೆ. ಏಕವಿದ್ಯೆಯೆಂದೇ ಒಪ್ಪಬೇಕು. ಆಗ ಸರ್ವಸೂತ್ರಗಳಲ್ಲಿ ಅನುಗಮವನ್ನು ಒಪ್ಪುವುದರಿಂದ ಏನು ಪ್ರಯೋಜನ? ಈ ಆಶಂಕೆಯನ್ನು ಪರಿಹರಿಸಲು ಬ್ರಹ್ಮಸೂತ್ರಗಳು ಅನೇಕವೇದವಾಕ್ಯವಿಚಾರರೂಪವಾಗಿರುವುದರಿಂದ ಪ್ರತ್ಯೇಕವಾಗಿ ಬ್ರಹ್ಮವಿದ್ಯೆಯಾಗಿದೆ ಎಂಬುದನ್ನು ಉಪೋದ್ಘಾತರೂಪದಿಂದ "ಸರ್ವಾಣಿ ಹಿ" ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

ವಿವರಣೆ – ಎಲ್ಲಾ ಸೂತ್ರಗಳಲ್ಲಿ ಓಂಕಾರಕ್ಕೆ ಅನುಗತಿಯನ್ನು ತಿಳಿಯಬೇಕಾದ್ದರಿಂದ ಅಸಂಹಿತತಯಾ ನಿರ್ದೇಶಿಸಿದ್ದಾರೆಂದು ಹೇಳಲಾಗಿದೆ. ಆದರೆ ಸರ್ವಸೂತ್ರಗಳಲ್ಲಿ ಓಂಕಾರದ ಅನುಗತಿಯು ಏಕೆ

ಬೇಕು? ಕೇವಲ ಮೊದಲನೆಯ ಸೂತ್ರದಲ್ಲಷ್ಟೇ ಓಂಕಾರವು ಸಾಕು. ಅಥವಾ ಅನುಗತಿಯನ್ನು ಸರ್ವಸೂತ್ರಗಳಲ್ಲಿ ಒಪ್ಪೋಣ. ಆದರೂ ಕೂಡ ಬೇರೆ ನಿಮಿತ್ತಕ್ಕೋಸ್ಕರವೂ ಅಸಂಹಿತತಯಾ ನಿರ್ದೇಶವು ಇರಬಹುದು. ಸಕಲಸೂತ್ರಗಳ ಅನುಗತಿಗೋಸ್ಕರವೇ ಅಸಂಹಿತತಯಾ ನಿರ್ದೇಶಿಸಿದ್ದಾರೆಂದು ಹೇಗೆ ಹೇಳುತ್ತೀರಿ? ಈ ಎರಡು ಪ್ರಶ್ನೆಗೆ "ಏತದುಕ್ತಂ ಭವತಿ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

'ಓಂಕಾರಃ ಸೂತ್ರಾವಯವಃ ಸೂತ್ರೇಷು ಊಹ್ಯಮಾನತ್ವಾತ್' ಎಂಬುದಾಗಿ ಊಹವನ್ನು ಅವಯವತ್ವಸಾಧಕಯುಕ್ತಿಯನ್ನಾಗಿ ಹೇಳುತ್ತಿದ್ದೀರಿ. ಆ ಊಹವನ್ನು ಸಮರ್ಥನೆ ಮಾಡುವುದಕ್ಕಾಗಿ 'ಪ್ರವತ್ಯನೋಂಕೃತಂ ಬ್ರಹ್ಮ' ಇತ್ಯಾದಿ ಶ್ರುತಿವಾಕ್ಯವನ್ನು ಪ್ರಮಾಣವನ್ನಾಗಿ ಹೇಳುತ್ತಿದ್ದೀರಿ. ಆದರೆ ಈ ವಾಕ್ಯದಲ್ಲಿ ಬ್ರಹ್ಮ ಎಂದು ಹೇಳಲಾಗಿದೆ. ಬ್ರಹ್ಮ ಎಂಬ ಪದಕ್ಕೆ ವೇದ ಎಂದರ್ಥ. ವೇದಮಂತ್ರಗಳಲ್ಲಿ ಆದ್ಯಂತಗಳಲ್ಲಿ ಓಂಕಾರವನ್ನು ಹೇಳಬೇಕೆಂದಷ್ಟೇ ಈ ಶ್ರುತಿಯು ಹೇಳುತ್ತಿದೆ. ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಹೇಳಬೇಕೆನ್ನಲು ಈ ವಾಕ್ಯವು ಹೇಗೆ ಪ್ರಮಾಣವಾಗುತ್ತದೆ? ಒಂದು ವೇಳೆ ಬ್ರಹ್ಮಪದಕ್ಕೆ ಸೂತ್ರ ಎಂಬರ್ಥವನ್ನು ವಿವಕ್ಷಿಸೋಣ. ಆದರೂ ಕೂಡ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಪ್ರಾರಂಭಿಸಿ 'ಅನಾವೃತ್ತಿಃ ಶಬ್ದಾತ್' ಎಂಬ ಸೂತ್ರದ ತನಕ ಪ್ರತಿಯೊಂದು ಸೂತ್ರಗಳು ಒಂದೇ ವಿದ್ಯೆ ಎನಿಸುತ್ತವೆ. ಈ ಎಲ್ಲಾ ಸೂತ್ರಗಳೂ ಬೇರೆ ಬೇರೆ ವಿದ್ಯೆ ಎಂದು ಹೇಳುವುದಾದರೆ ವಾಕ್ಯಭೇದದೋಷವು ಬರುತ್ತದೆ. ಆದ್ದರಿಂದ ಪ್ರಾರಂಭದಲ್ಲಿ ಒಮ್ಮೆ ಓಂ ಎಂದು ಉಚ್ಚರಿಸಿ ಶಾಸ್ತ್ರವು ಮುಕ್ತಾಯವಾದಾಗ ಒಮ್ಮೆ ಓಂ ಎಂದು ಉಚ್ಚರಿಸಿದರೆ ಸಾಕು. ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಏಕೆ ಉಚ್ಚರಿಸಬೇಕು?

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ನೀಡುವುದಕ್ಕಾಗಿ ಮೊದಲು ಉಪೋದ್ಘಾತವನ್ನು "ಸರ್ವಾಣಿ ಹಿ" ಇತ್ಯಾದಿ ಗ್ರಂಥದಿಂದ ತಿಳಿಸುತ್ತಿದ್ದಾರೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ ಕೇವಲ ವೇದ ಎಂದಷ್ಟೇ ಅರ್ಥವಲ್ಲ. ವೇದಕ್ಕೆ ಸಂಬಂಧಪಟ್ಟ ಶಾಸ್ತ್ರವೂ ಕೂಡ ಬ್ರಹ್ಮ ಎಂದು ಕರೆಸಿಕೊಳ್ಳುತ್ತದೆ. ವೇದ ಹಾಗೂ ವೈದಿಕಗ್ರಂಥಗಳನ್ನು ಬ್ರಹ್ಮ ಎಂದು ಕರೆಯಲಾಗಿದೆ. ಇನ್ನು ಪ್ರತಿಯೊಂದು ಸೂತ್ರಗಳೂ ಕೂಡ ಪ್ರತ್ಯೇಕವಾಗಿ ಬ್ರಹ್ಮವಿದ್ಯೆ ಎನಿಸಿವೆ. ಆದ್ದರಿಂದ ಅನೇಕವಾಕ್ಯವಿಚಾರಗಳನ್ನು ಪ್ರತಿಯೊಂದು ಸೂತ್ರಗಳೂ ಕೂಡ ಮಾಡುತ್ತಿರುವುದರಿಂದ ಪ್ರತಿಯೊಂದು ಬ್ರಹ್ಮವಿದ್ಯೆಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕು. ಈ ವಿಚಾರವನ್ನು ಟೀಕೆಯಲ್ಲಿ ಉಪೋದ್ಘಾತರೂಪದಿಂದ ಹೇಳಿರುತ್ತಾರೆ.

## ತಿಳಿಯಲೇಬೇಕಾದ ಹಲವಾರು ಪ್ರಮೇಯಗಳು

ವಾಕ್ಯಾರ್ಥಚಂದ್ರಿಕಾ – ನನು ಸರ್ವಸೂತ್ರೇಷು ಓಂಕಾರಾನುಗತಿರೇವ ಕುತಃ? ಯೇನ ಅಸಂಹಿತತಯಾ ನಿರ್ದೇಶಂ ಪ್ರತಿ ಸಾ ನಿಮಿತ್ತಂ ಸ್ಯಾತ್ । ಅಸ್ತು ವಾ ಸಾ ತಥಾಽಪಿ ನಿಮಿತ್ತಾಂತರೇಣ ಅಸಂಹಿತತಯಾ ನಿರ್ದೇಶೋಪಪತ್ತೌ ನ ತಸ್ಯಾ ನಿಮಿತ್ತತ್ವಮಿತ್ಯತ ಆಹ – ಏತದುಕ್ತಂ ಭವತಿ ಇತಿ ॥ ಅವಯವತ್ವೋಪಪಾದಕೋಹಸಾಧಕವಾಕ್ಯೇ ಬ್ರಹ್ಮಪದಪ್ರಯೋಗಾದಸ್ತು ವೇದವಿದ್ಯಾಯಾಮ್ ಆದ್ಯಂತಯೋರೂಹಾತ್ ಓಂಕಾರಸ್ಯ ತದವಯವತ್ವಮ್ । ಸೂತ್ರೇಷು ಕಿಮಾಯಾತಮ್ । ತಥಾತ್ವೇ ವಾ ಸರ್ವಸೂತ್ರಾಣಾಂ ಭಿನ್ನವಿದ್ಯಾತ್ವೇ ವಾಕ್ಯಭೇದಾಪತ್ತ್ಯಾ ಏಕವಿದ್ಯಾತ್ವಾತ್ ಕಿಂ ಸರ್ವಸೂತ್ರಾನುಗಮೇನ ಇತ್ಯಾಶಂಕಾಂ ಪರಿಹರ್ತುಮನೇಕವೇದವಾಕ್ಯವಿಚಾರರೂಪತ್ವಾತ್ ಸೂತ್ರಾಣಾಮಪಿ ಪ್ರತ್ಯೇಕಂ ಬ್ರಹ್ಮವಿದ್ಯಾತ್ವಮ್ ಉಪೋದ್ಘಾತೇನಾಹ – ಸರ್ವಾಣಿ ಹೀತಿ ॥

ಪ್ರಶ್ನೆ – ಸರ್ವಸೂತ್ರಗಳಲ್ಲಿ ಓಂಕಾರದ ಅನುಗತಿಯನ್ನೇ ಏಕೆ ಹೇಳಬೇಕು? ಹಾಗಾದಲ್ಲಿ ಅಸಂಹಿತತಯಾ ನಿರ್ದೇಶಕ್ಕೆ ಆ ಅನುಗತಿಯು ನಿಮಿತ್ತವಾಗುತ್ತಿತ್ತು. ಅಥವಾ ಅನುಗತಿಯನ್ನು ಒಪ್ಪೋಣ. ಆದರೂ ಕೂಡ ಬೇರೆ ನಿಮಿತ್ತಗಳು ಇರುವುದರಿಂದ ಅಸಂಹಿತತಯಾ ನಿರ್ದೇಶ ಮಾಡಿದ್ದಾರೆಂದು ಹೇಳಬಹುದು. ಅನುಗತಿಯೇ ನಿಮಿತ್ತವಾಗಬೇಕಾಗಿಲ್ಲ? ಈ ಪ್ರಶ್ನೆಗೆ "ಏತದುಕ್ತಂ ಭವತಿ" ಎಂಬುದರಿಂದ ಉತ್ತರಿಸಿದ್ದಾರೆ.

ಅವಯವತ್ವಕ್ಕೆ ಉಪಪಾದಕವಾದ ಯಾವ ಊಹೆ ಇದೆಯೋ ತತ್ಸಾಧಕವಾದ ವಾಕ್ಯದಲ್ಲಿ ಬ್ರಹ್ಮಪದಪ್ರಯೋಗದಿಂದ ವೇದವಿದ್ಯೆಯ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕು. ಅಲ್ಲಿ ಅವಯವತ್ವವೂ ಕೂಡ ಓಂಕಾರಕ್ಕೆ ಯುಕ್ತವಾಗುತ್ತದೆ. ಅಂದಮಾತ್ರಕ್ಕೆ ಸೂತ್ರಗಳಲ್ಲಿ ಏನು ಹೇಳಿದಂತಾಯಿತು? ಒಂದು ವೇಳೆ ಸೂತ್ರಗಳನ್ನು ಬ್ರಹ್ಮ ಎಂದು ತಿಳಿಯೋಣ. ಆದರೂ ಎಲ್ಲಾ ಸೂತ್ರಗಳು ಭಿನ್ನವಿದ್ಯೆಯೆಂದು ಒಪ್ಪಿದರೆ ವಾಕ್ಯಭೇದಾಪತ್ತಿದೋಷವು ಬರುತ್ತದೆ. ಏಕವಿದ್ಯೆಯೆಂದೇ ಒಪ್ಪಬೇಕು. ಆಗ ಸರ್ವಸೂತ್ರಗಳಲ್ಲಿ ಅನುಗಮವನ್ನು ಒಪ್ಪುವುದರಿಂದ ಏನು ಪ್ರಯೋಜನ? ಈ ಆಶಂಕೆಯನ್ನು ಪರಿಹರಿಸಲು ಬ್ರಹ್ಮಸೂತ್ರಗಳು ಅನೇಕವೇದವಾಕ್ಯವಿಚಾರರೂಪವಾಗಿರುವುದರಿಂದ ಪ್ರತ್ಯೇಕವಾಗಿ ಬ್ರಹ್ಮವಿದ್ಯೆಯಾಗಿದೆ ಎಂಬುದನ್ನು ಉಪೋದ್ಘಾತರೂಪದಿಂದ "ಸರ್ವಾಣಿ ಹಿ" ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

ವಿವರಣೆ – ಎಲ್ಲಾ ಸೂತ್ರಗಳಲ್ಲಿ ಓಂಕಾರಕ್ಕೆ ಅನುಗತಿಯನ್ನು ತಿಳಿಯಬೇಕಾದ್ದರಿಂದ ಅಸಂಹಿತತಯಾ ನಿರ್ದೇಶಿಸಿದ್ದಾರೆಂದು ಹೇಳಲಾಗಿದೆ. ಆದರೆ ಸರ್ವಸೂತ್ರಗಳಲ್ಲಿ ಓಂಕಾರದ ಅನುಗತಿಯು ಏಕೆ

ಬೇಕು? ಕೇವಲ ಮೊದಲನೆಯ ಸೂತ್ರದಲ್ಲಷ್ಟೇ ಓಂಕಾರವು ಸಾಕು. ಅಥವಾ ಅನುಗತಿಯನ್ನು ಸರ್ವಸೂತ್ರಗಳಲ್ಲಿ ಒಪ್ಪೋಣ. ಆದರೂ ಕೂಡ ಬೇರೆ ನಿಮಿತ್ತಕ್ಕೋಸ್ಕರವೂ ಅಸಂಹಿತತಯಾ ನಿರ್ದೇಶವು ಇರಬಹುದು. ಸಕಲಸೂತ್ರಗಳ ಅನುಗತಿಗೋಸ್ಕರವೇ ಅಸಂಹಿತತಯಾ ನಿರ್ದೇಶಿಸಿದ್ದಾರೆಂದು ಹೇಗೆ ಹೇಳುತ್ತೀರಿ? ಈ ಎರಡು ಪ್ರಶ್ನೆಗೆ "ಏತದುಕ್ತಂ ಭವತಿ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

'ಓಂಕಾರಃ ಸೂತ್ರಾವಯವಃ ಸೂತ್ರೇಷು ಊಹ್ಯಮಾನತ್ವಾತ್' ಎಂಬುದಾಗಿ ಊಹವನ್ನು ಅವಯವತ್ವಸಾಧಕಯುಕ್ತಿಯನ್ನಾಗಿ ಹೇಳುತ್ತಿದ್ದೀರಿ. ಆ ಊಹವನ್ನು ಸಮರ್ಥನೆ ಮಾಡುವುದಕ್ಕಾಗಿ 'ಸ್ರವತ್ಯನೋಂಕೃತಂ ಬ್ರಹ್ಮ' ಇತ್ಯಾದಿ ಶ್ರುತಿವಾಕ್ಯವನ್ನು ಪ್ರಮಾಣವನ್ನಾಗಿ ಹೇಳುತ್ತಿದ್ದೀರಿ. ಆದರೆ ಈ ವಾಕ್ಯದಲ್ಲಿ ಬ್ರಹ್ಮ ಎಂದು ಹೇಳಲಾಗಿದೆ. ಬ್ರಹ್ಮ ಎಂಬ ಪದಕ್ಕೆ ವೇದ ಎಂದರ್ಥ. ವೇದಮಂತ್ರಗಳಲ್ಲಿ ಆದ್ಯಂತಗಳಲ್ಲಿ ಓಂಕಾರವನ್ನು ಹೇಳಬೇಕೆಂದಷ್ಟೇ ಈ ಶ್ರುತಿಯು ಹೇಳುತ್ತಿದೆ. ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಹೇಳಬೇಕೆನ್ನಲು ಈ ವಾಕ್ಯವು ಹೇಗೆ ಪ್ರಮಾಣವಾಗುತ್ತದೆ? ಒಂದು ವೇಳೆ ಬ್ರಹ್ಮಪದಕ್ಕೆ ಸೂತ್ರ ಎಂಬರ್ಥವನ್ನು ವಿವಕ್ಷಿಸೋಣ. ಆದರೂ ಕೂಡ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಪ್ರಾರಂಭಿಸಿ 'ಅನಾವೃತ್ತಿಃ ಶಬ್ದಾತ್' ಎಂಬ ಸೂತ್ರದ ತನಕ ಪ್ರತಿಯೊಂದು ಸೂತ್ರಗಳು ಒಂದೇ ವಿದ್ಯೆ ಎನಿಸುತ್ತವೆ. ಈ ಎಲ್ಲಾ ಸೂತ್ರಗಳೂ ಬೇರೆ ಬೇರೆ ವಿದ್ಯೆ ಎಂದು ಹೇಳುವುದಾದರೆ ವಾಕ್ಯಭೇದದೋಷವು ಬರುತ್ತದೆ. ಆದ್ದರಿಂದ ಪ್ರಾರಂಭದಲ್ಲಿ ಒಮ್ಮೆ ಓಂ ಎಂದು ಉಚ್ಚರಿಸಿ ಶಾಸ್ತ್ರವು ಮುಕ್ತಾಯವಾದಾಗ ಒಮ್ಮೆ ಓಂ ಎಂದು ಉಚ್ಚರಿಸಿದರೆ ಸಾಕು. ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಏಕೆ ಉಚ್ಚರಿಸಬೇಕು?

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ನೀಡುವುದಕ್ಕಾಗಿ ಮೊದಲು ಉಪೋದ್ಘಾತವನ್ನು "ಸರ್ವಾಣಿ ಹಿ" ಇತ್ಯಾದಿ ಗ್ರಂಥದಿಂದ ತಿಳಿಸುತ್ತಿದ್ದಾರೆ. 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ ಕೇವಲ ವೇದ ಎಂದಷ್ಟೇ ಅರ್ಥವಲ್ಲ. ವೇದಕ್ಕೆ ಸಂಬಂಧಪಟ್ಟ ಶಾಸ್ತ್ರವೂ ಕೂಡ ಬ್ರಹ್ಮ ಎಂದು ಕರೆಸಿಕೊಳ್ಳುತ್ತದೆ. ವೇದ ಹಾಗೂ ವೈದಿಕಗ್ರಂಥಗಳನ್ನು ಬ್ರಹ್ಮ ಎಂದು ಕರೆಯಲಾಗಿದೆ. ಇನ್ನು ಪ್ರತಿಯೊಂದು ಸೂತ್ರಗಳೂ ಕೂಡ ಪ್ರತ್ಯೇಕವಾಗಿ ಬ್ರಹ್ಮವಿದ್ಯೆ ಎನಿಸಿವೆ. ಆದ್ದರಿಂದ ಅನೇಕವಾಕ್ಯವಿಚಾರಗಳನ್ನು ಪ್ರತಿಯೊಂದು ಸೂತ್ರಗಳೂ ಕೂಡ ಮಾಡುತ್ತಿರುವುದರಿಂದ ಪ್ರತಿಯೊಂದು ಬ್ರಹ್ಮವಿದ್ಯೆಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕು. ಈ ವಿಚಾರವನ್ನು ಟೀಕೆಯಲ್ಲಿ ಉಪೋದ್ಘಾತರೂಪದಿಂದ ಹೇಳಿರುತ್ತಾರೆ.

ಪ್ರತಿಯೊಂದು ಸೂತ್ರಗಳೂ ಕೂಡ ಪ್ರತ್ಯೇಕವಾಗಿ ಬ್ರಹ್ಮವಿದ್ಯೆಯಾಗಿವೆ ಎಂದು ಹೇಳಿದರೆ ವಾಕ್ಯಭೇದದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಯು ಅಯುಕ್ತವಾಗಿದೆ. ಪ್ರಾರಂಭದ ಸೂತ್ರದಿಂದ ಕೊನೆಯ ಸೂತ್ರದ ತನಕ ಮಹಾಬ್ರಹ್ಮವಿದ್ಯೆಯೆಂದು ಕರೆಸಿಕೊಳ್ಳುತ್ತದೆ. ಪ್ರತಿಯೊಂದು ಸೂತ್ರವೂ ಅವಾಂತರಬ್ರಹ್ಮವಿದ್ಯೆ ಎಂಬುದಾಗಿ ಕರೆಸಿಕೊಳ್ಳುತ್ತದೆ. ಆದ್ದರಿಂದ ವಾಕ್ಯಭೇದದೋಷಕ್ಕೂ ಅವಕಾಶವಿಲ್ಲ.

## ಸ್ಥಾನಿಯೇ ಇಲ್ಲದಾಗ ಊಹೆ ಹೇಗೆ ಮಾಡುತ್ತೀರಿ?

ವಾಕ್ಯಾರ್ಥಚಂದ್ರಿಕಾ – ಅತ್ರ ಆದ್ಯಂತಯೋರೂಹಃ ಇತಿ ಸ್ಥಾನಿರಹಿತಾದ್ಯಂತಪ್ರದೇಶ ಊಹೋಕ್ತ್ಯಾ ನಾತ್ರೋಹಶಬ್ದಃ ಕರ್ಮವ್ಯುತ್ಪತ್ತ್ಯಾ ಪ್ರಾಕೃತಸ್ಥಾನಪತಿತಾ ಇತ್ಯಾದ್ಯುಕ್ತವಿಕೃತ-ಪ್ರಯೋಗಪರೋಽಪಿ ತು ಭಾವವ್ಯುತ್ಪತ್ತ್ಯಾ ಅಧ್ಯಾಹಾರಪರ ಇತಿ ಸೂಚನೇನ 'ಸೂರ್ಯಾಯ' ಇತ್ಯೂಹಂ ಪ್ರತ್ಯಗ್ನಯಃ ಇತ್ಯಾದೇರಿವ ಪ್ರಕೃತೇ 'ಸ್ಥಾನಿನೋಽಭಾವಾತ್ ನೋಹಃ ಸಂಭವತಿ' ಇತ್ಯಾಶಂಕಾ ಗರ್ಭಸ್ರಾವೇಣೈವ ನಿರಸ್ತಾ ಭವತಿ । (ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ । ಊಹಃ ಪ್ರಯೋಗೋ ವಿಕೃತ ಊಹ್ಯಮಾನತಯೋದಿತಃ ॥)

ಪ್ರಕೃತ 'ಆದ್ಯಂತಯೋಃ ಊಹಃ' ಎಂಬುದಾಗಿ ಸ್ಥಾನೀರಹಿತವಾದ ಆದ್ಯಂತಪ್ರದೇಶಗಳಲ್ಲಿ ಊಹೆಯನ್ನು ಮಾಡಬೇಕೆಂದು ಹೇಳಿರುವುದರಿಂದ ಇಲ್ಲಿರುವ ಊಹಶಬ್ದಕ್ಕೆ ಕರ್ಮವ್ಯುತ್ಪತ್ತಿಯನ್ನು ಆಶ್ರಯಿಸಿ 'ಪ್ರಾಕೃತಸ್ಥಾನಪತಿತ' ಇತ್ಯಾದಿಯಾಗಿ ಮೀಮಾಂಸಕರು ಹೇಳಿದ 'ಊಹ್ಯತೇ ಇತಿ ಊಹಃ' ಎಂಬ ವಿಕೃತಪ್ರಯೋಗವನ್ನು ವಿವಕ್ಷಿಸಬಾರದು. ಮತ್ತೇನೆಂದರೆ ಭಾವವ್ಯುತ್ಪತ್ತಿಯನ್ನು ಆಶ್ರಯಿಸಿ 'ಊಹನಂ ಇತಿ ಊಹಃ' ಎಂಬುದಾಗಿ ಅಧ್ಯಾಹಾರಪರವಾಗಿ ತಿಳಿಯಬೇಕು. ಹೀಗೆ ಸೂಚನೆ ಮಾಡಿದ್ದರಿಂದ 'ಸೂರ್ಯಾಯ' ಎಂಬ ಊಹಕ್ಕೆ 'ಅಗ್ನಯೇ' ಎಂಬಂತೆ ಪ್ರಕೃತದಲ್ಲಿ ಸ್ಥಾನಿಯು ಇರುವುದಿಲ್ಲ. ಆದ್ದರಿಂದ ಊಹೆಯು ಯುಕ್ತವಾಗುವುದಿಲ್ಲ. ಈ ಆಶಂಕೆಯನ್ನು ಗರ್ಭಸ್ರಾವದಿಂದಲೇ ನಿರಾಸ ಮಾಡಿದಂತಾಯಿತು.

ವಿವರಣೆ – 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಮಂತ್ರದಲ್ಲಿರುವ 'ಅಗ್ನಯೇ' ಎಂಬ ಸ್ಥಾನದಲ್ಲಿ 'ಸೂರ್ಯಾಯ' ಎಂಬ ಪದವನ್ನು ಊಹೆಯನ್ನು ಮಾಡಲಾಗುತ್ತದೆ. 'ಸೂರ್ಯಾಯ' ಎಂಬ ಪದದ ಊಹೆಗೆ ಅಗ್ನಯೇ ಎಂಬ ಪದವು ಸ್ಥಾನಿ ಎಂದು ಕರೆಸಿಕೊಳ್ಳುತ್ತದೆ. ಅದರಂತೆ ಓಂಕಾರವನ್ನು ಊಹೆ ಮಾಡಲು 'ಸ್ಥಾನಿ'ಯೆ ಇರುವುದಿಲ್ಲ?

ಈ ಆಶಂಕೆಯು ಗರ್ಭಸ್ರಾವದಿಂದಲೇ ಪರಿಹಾರವಾಯಿತು. ಏಕೆಂದರೆ 'ಏತತ್ ಸ್ಥಾನೇ ಊಹಃ ಕರ್ತವ್ಯಃ' ಎಂಬುದಾಗಿ ಗ್ರಂಥದಲ್ಲಿ ಹೇಳಿರುವುದಿಲ್ಲ. 'ಆದ್ಯಂತಯೋಃ ಊಹಃ ಕರ್ತವ್ಯಃ' ಎಂದಷ್ಟೇ ಹೇಳಿರುತ್ತಾರೆ. ಸೂತ್ರದ ಆದಿ ಮತ್ತು ಅಂತ್ಯಪ್ರದೇಶಗಳು ಸ್ಥಾನೀರಹಿತವಾಗಿವೆ. ಸ್ಥಾನೀರಹಿತಸ್ಥಳದಲ್ಲಿ ಊಹೆಯನ್ನು ಟೀಕಾರಾಯರು ಹೇಳಿರುತ್ತಾರೆ. ಇದರಿಂದ ಮೀಮಾಂಸಕರು ಹೇಳುವ ಊಹೆಯನ್ನು ವಿವಕ್ಷಿಸಬಾರದು. ಅಧ್ಯಾಹಾರ ಎಂಬರ್ಥದಲ್ಲಿ ವಿವಕ್ಷಿಸಬೇಕು ಎಂದು ತಿಳಿಯುತ್ತದೆ.

## ಅಧ್ಯಾಹಾರ ಮಾಡಲು ಪ್ರಮಾಣವಿದ್ದರೆ ಸಾಕು

ವಾಕ್ಯಾರ್ಥಚಂದ್ರಿಕಾ – 'ಶ್ರೌತಾರ್ಥವಾದಃ' ಇತ್ಯೇತದೂಹಸ್ಯಾರ್ಥವಾದಪ್ರಮಾಣಕತ್ವೋಕ್ತ್ಯಾ ಸಪ್ರಮಾಣಕತ್ವಮೇವೋಹೇ ನಿಯಾಮಕಂ ನ ತು ಲೌಕಿಕಾಕಾಂಕ್ಷೈವ ಇತ್ಯರ್ಥಸೂಚನಾತ್ 'ಸಂಯಜ್ಞಪತಿರಾಶಿಷಾ ಇಷೇ ತ್ವಾ' ಇತ್ಯಾದಾವಿವ ಸಾಕಾಂಕ್ಷತ್ವಾಭಾವಾನ್ನಾಧ್ಯಾಹಾರೋಽಪ್ಯೂಹಶಬ್ದಾರ್ಥ ಇತ್ಯಪಿ ಶಂಕಾಽಸಂಗತಾ ಇತಿ ದ್ರಷ್ಟವ್ಯಮ್ ।

ಶ್ರೌತವಾದ ಅರ್ಥವಾದ ಎಂಬುದಾಗಿ ಹೇಳಿದ್ದರಿಂದ ಊಹೆಗೆ ಅರ್ಥವಾದ ಪ್ರಮಾಣವಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಊಹೆ ಮಾಡುವುದಕ್ಕೆ ಪ್ರಮಾಣವಿರುವುದೇ ನಿಯಾಮಕವಾಗಿದೆ. ಹೊರತು ಲೌಕಿಕವಾದ ಆಕಾಂಕ್ಷೆಯು ನಿಯಾಮಕವಾಗಿರುವುದಿಲ್ಲ ಎಂಬುದಾಗಿ ಸೂಚನೆ ಮಾಡಿದ್ದಾರೆ. ಆದ್ದರಿಂದ ಸಂಯಜ್ಞಪತಿರಾಶಿಷಾ, ಇಷೇ ತ್ವಾ ಇತ್ಯಾದಿ ಸ್ಥಳಗಳಂತೆ ಸಾಕಾಂಕ್ಷತ್ವವು ಇಲ್ಲದ ಕಾರಣ ಅಧ್ಯಾಹಾರವನ್ನು ಮಾಡಬೇಕಾಗಿಲ್ಲ ಎಂಬುದಾಗಿ ಅಧ್ಯಾಹಾರವೂ ಕೂಡ ಊಹಶಬ್ದಾರ್ಥವಾಗಿದೆ ಎಂಬ ಶಂಕೆಯು ಅಸಂಗತವಾಗಿದೆಯೆಂದು ತಿಳಿಯಬೇಕು.

ವಿವರಣೆ – ಊಹಶಬ್ದಕ್ಕೆ ಅಧ್ಯಾಹಾರ ಎಂಬರ್ಥವನ್ನೇ ವಿವಕ್ಷಿಸೋಣ. ಆದರೆ ಸಾಕಾಂಕ್ಷತ್ವವಿದ್ದಲ್ಲಿ ಮಾತ್ರ ಅಧ್ಯಾಹಾರವನ್ನು ತಿಳಿಯಬೇಕು. 'ಇಷೇ ತ್ವಾ ಇತಿ ಛಿನತ್ತಿ'; 'ಊರ್ಜೇ ತ್ವಾ ಇತಿ ಅನುಮಾರ್ಷ್ಟಿ' 'ಸಂಯಜ್ಞಪತಿರಾಶಿಷಾ ಸಂಗಚ್ಛತಾಮ್' ಇತ್ಯಾದಿ ಸ್ಥಳಗಳಲ್ಲಿ ಆಕಾಂಕ್ಷೆಯು ಇರುವುದರಿಂದಲೇ ಅಧ್ಯಾಹಾರವನ್ನು ಮಾಡುತ್ತಾರೆ. ಪ್ರಕೃತ ಪ್ರಥಮಸೂತ್ರದ ಓಂಕಾರದ ವಿಷಯದಲ್ಲಿ ಆಕಾಂಕ್ಷೆಯೇ ಇರುವುದಿಲ್ಲ. ಹೀಗಿರುವಾಗ ಅಧ್ಯಾಹಾರವನ್ನು ಏಕೆ ಮಾಡಬೇಕು?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಊಹೆಯನ್ನು ಮಾಡುವುದಕ್ಕೆ ಪ್ರಮಾಣವಿದೆ ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆಕಾಂಕ್ಷೆಯನ್ನು ಹೇಳಿರುವುದಿಲ್ಲ. ಅಧ್ಯಾಹಾರ ಮಾಡುವುದಕ್ಕೆ ಪ್ರಮಾಣವಿರ-

ಬೇಕೇ ಹೊರತು ಆಕಾಂಕ್ಷಾಮಾತ್ರವೇ ನಿಯಾಮಕವಲ್ಲ. ಪ್ರಮಾಣವಿದ್ದರೆ ಆಕಾಂಕ್ಷೆ ಇಲ್ಲದಿದ್ದರೂ ಕೂಡ ಅಧ್ಯಾಹಾರ ಮಾಡಬಹುದು.

## ಓಂಕಾರಕ್ಕೆ ಮುಂದಿನ ಸೂತ್ರಗಳಲ್ಲಿ ಅನ್ವಯವಿಲ್ಲದಿದ್ದರೂ ದೋಷವಿಲ್ಲ

ವಾಕ್ಯಾರ್ಥಚಂದ್ರಿಕಾ – ಅರ್ಥವಾದೇ ಬ್ರಹ್ಮವಿದ್ಯಾಸು ಆದ್ಯಂತಯೋರೋಂಕಾರಾನುಚ್ಚಾರಣೇಽನಿಷ್ಟಕಥನೇಽಪ್ಯೂಹಃ ಕರ್ತವ್ಯ ಇತ್ಯರ್ಥಸ್ಯ ತತಃ ಶಾಬ್ದಮರ್ಯಾದಯಾಽಭಾವಾತ್ 'ಸಾಮರ್ಥ್ಯಾತ್' ಇತ್ಯುಕ್ತಮ್ । ಅತ್ರ 'ಪ್ರವತ್ಯನೋಂಕೃತಮ್' ಇತ್ಯರ್ಥವಾದಸ್ವರೂಪವಿಶೇಷೋಪಾದಾನೇನ ಸ್ರವಣವಿಶರಣಪರಿಹಾರರೂಪಾದೃಷ್ಟಫಲಾರ್ಥತ್ವಬೋಧನಾದರ್ಥಪ್ರತೀತೇರಾದಾವೇವ ಪ್ರಯೋಗೇನ ಚರಿತಾರ್ಥತ್ವಾದಂತೇ ಪ್ರಯೋಗವೈಯರ್ಥ್ಯಮ್ ಅನುಷಕ್ತಸ್ಯೋತ್ತರಸೂತ್ರಾನ್ವಯದೋಷಶ್ಚೇತಿ ದೋಷದ್ವಯಮಸಂಗತಮಿತಿ ದ್ರಷ್ಟವ್ಯಮ್ ॥

ಬ್ರಹ್ಮವಿದ್ಯೆಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡದಿದ್ದರೆ ಅನಿಷ್ಟವಾಗುತ್ತದೆಂದು ಅರ್ಥವಾದದಲ್ಲಿ ಹೇಳಲಾಗಿದೆ. ಆದರೂ ಕೂಡ 'ಊಹಃ ಕರ್ತವ್ಯಃ' ಎಂಬುದಾಗಿ ಹೇಳಿದ್ದರಿಂದ ಶಬ್ದಮರ್ಯಾದೆಯಿಂದ ಇದು ತಿಳಿಯದಿದ್ದರೂ ''ಸಾಮರ್ಥ್ಯಾತ್'' ಎಂದು ಹೇಳಿದ್ದಾರೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎಂಬ ಶ್ರುತಿಯಿಂದ ಅರ್ಥಾತ್ ಲಭ್ಯವಾಗಿದೆ ಎಂದಭಿಪ್ರಾಯ.

ಇಲ್ಲಿ 'ಪ್ರವತ್ಯನೋಂಕೃತಂ' ಎಂಬ ಅರ್ಥವಾದಸ್ವರೂಪವಿಶೇಷವನ್ನು ವಿವಕ್ಷಿಸಿದ್ದರಿಂದ ಸ್ರವಣವಿಶರಣಪರಿಹಾರರೂಪವಾದ ಅದೃಷ್ಟಫಲವನ್ನು ಹೇಳಿದಂತಾಯಿತು. ಆದ್ದರಿಂದ ಅರ್ಥಪ್ರತೀತಿಯು ಮೊದಲ ಓಂಕಾರದ ಪ್ರಯೋಗದಿಂದಲೇ ಚರಿತಾರ್ಥವಾಗುತ್ತದೆ. ಹಾಗಾಗಿ ಕೊನೆಯಲ್ಲಿ ಓಂಕಾರದ ಪ್ರಯೋಗವು ವ್ಯರ್ಥವಾಗುತ್ತದೆ. ಮತ್ತು ಅನುಷಂಗ ಮಾಡಿದ ಓಂಕಾರಕ್ಕೆ ಉತ್ತರಸೂತ್ರದಲ್ಲಿ ಅನ್ವಯವು ಕೂಡ ಇರುವುದಿಲ್ಲ ಎಂಬ ದೋಷದ್ವಯಗಳಿಗೆ ಈಗ ಸಂಗತಿ ಇರುವುದಿಲ್ಲ ಎಂದು ತಿಳಿಯಬೇಕು.

ವಿವರಣೆ – ಶ್ರುತಿಯಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂದು ಹೇಳಿರುವುದಿಲ್ಲ. ಉಚ್ಚಾರಣೆ ಮಾಡದಿದ್ದರೆ ಅನಿಷ್ಟವಾಗುತ್ತದೆ ಎಂದಷ್ಟೇ ಹೇಳಲಾಗಿದೆ ಎಂಬ ಪ್ರಶ್ನೆಯು ಪ್ರಾಪ್ತವಾದರೆ ''ಸಾಮರ್ಥ್ಯಾತ್'' ಎಂದು ಉತ್ತರಿಸಿದ್ದಾರೆ. ಶಬ್ದಮರ್ಯಾದೆಯಿಂದ ಊಹೆ ಮಾಡಬೇಕೆಂದು ತಿಳಿಯದಿದ್ದರೂ ಸಾಮರ್ಥ್ಯದ ಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು ಶ್ರುತಿಯಿಂದ ತಿಳಿಯುತ್ತದೆ.

ಪ್ರಾರಂಭದಲ್ಲಿ ಅರ್ಥಪ್ರತೀತಿಗೋಸ್ಕರ ಓಂಕಾರವನ್ನು ಅಧ್ಯಾಹಾರ ಮಾಡಲಾಗುತ್ತಿದೆ. ಹಾಗಾದರೆ ಕೊನೆಯಲ್ಲೇಕೆ ಓಂಕಾರವನ್ನು ಉಚ್ಚರಿಸಬೇಕು? ಮತ್ತು ಉತ್ತರಸೂತ್ರದಲ್ಲಿ ಈ ಓಂಕಾರಕ್ಕೆ ಅನುವೃತ್ತಿಯನ್ನು ಹೇಳಿದರೆ ಅನ್ವಯವು ಸಾಧ್ಯವಿಲ್ಲವಲ್ಲ? ಈ ಎರಡು ಪ್ರಶ್ನೆಗಳಿಗೂ ಕೂಡ ಈಗ ಉತ್ತರಿಸಿದಂತಾಯಿತು. ಅನಿಷ್ಟಪರಿಹಾರಕ್ಕೋಸ್ಕರ ಉಚ್ಚಾರಣೆಯನ್ನು ಮಾಡಬೇಕು. ಇದರಿಂದ ಅದೃಷ್ಟಪ್ರಯೋಜನಕ್ಕೋಸ್ಕರ ಓಂಕಾರವನ್ನು ಉಚ್ಚರಿಸಬೇಕು ಎಂದು ಹೇಳಿದಂತಾಯಿತು. ಕೊನೆಯಲ್ಲಿ ಉಚ್ಚರಿಸುವುದೂ ಕೂಡ ಅದೃಷ್ಟಪ್ರಯೋಜನಕ್ಕೋಸ್ಕರವೇ ಆಗಿರುತ್ತದೆ. ಮುಂದಿನ ಎಲ್ಲಾ ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸುವುದೂ ಕೂಡ ಅದೃಷ್ಟಪ್ರಯೋಜನಕ್ಕೋಸ್ಕರವೆಂದು ತಿಳಿಯ-ಬೇಕು. ಇದರಿಂದ ಮೇಲಿನ ಎಲ್ಲಾ ಆಕ್ಷೇಪಗಳೂ ಪರಿಹಾರವಾದವು.

## ಊಹ್ಯಮಾನತ್ವವು ಅವಯವತ್ವದಿಂದ ಅವಿನಾಭೂತವಾಗಿದೆ

ವಾಕ್ಯಾರ್ಥಚಂದ್ರಿಕಾ – ಅತ್ರ ಊಹ್ಯಮಾನಸ್ಯ ವಾಕ್ಯಾದ್ ಬಹಿರ್ಭೂತತ್ವೇ ಶ್ರೌತಾರ್ಥ-ವಾದಸಾಮರ್ಥ್ಯಾತ್ ಪ್ರತಿಸೂತ್ರಮಾದ್ಯಂತಯೋರೂಹಸಿದ್ಧಾವಪಿ ತಸ್ಯ ತದನವಯವತ್ವೇನ ಸಂಹಿತತಯಾ ನಿರ್ದೇಶಪ್ರಸಕ್ತೇರೇವ ಅಭಾವೇನ ಅಸಂಹಿತತಯಾ ನಿರ್ದೇಶಸ್ಯ ನಾಧಿಕಾರ-ಜ್ಞಾಪಕತ್ವಮ್ ಇತಿ ನ ಸ್ವಾಭಿಮತಾನ್ಯಥಾಸಿದ್ಧಸಂಭವ ಇತ್ಯತ ಊಹ್ಯಮಾನತ್ವಸ್ಯ ಅವಯವ-ತ್ವಾವಿನಾಭಾವಮ್ ಉಪಪಾದಯತಿ – ನ ಚೇತಿ ॥

ಊಹ್ಯಮಾನವಾದದ್ದಕ್ಕೆ ವಾಕ್ಯಾದ್ ಬಹಿರ್ಭೂತತ್ವವನ್ನು ಹೇಳಿದರೆ ಶ್ರೌತಾರ್ಥವಾದದ ಸಾಮರ್ಥ್ಯದಿಂದ ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಊಹವು ಸಿದ್ಧವಾದರೂ ಕೂಡ ಅದಕ್ಕೆ ಅವಯವತ್ವವು ಇರುವುದಿಲ್ಲ. ಆದ್ದರಿಂದ ಸಂಹಿತತಯಾ ನಿರ್ದೇಶಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಅಸಂಹಿತತಯಾ ನಿರ್ದೇಶಕ್ಕೆ ಮುಂದಿನ ಸೂತ್ರಗಳ ಅನುಗತಿಗೆ ಜ್ಞಾಪಕವಾಗಿದೆ ಎಂಬುದು ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ ಸ್ವಾಭಿಮತವಾದ ಅನ್ಯಥಾಸಿದ್ಧಿದೋಷವೂ ಕೂಡ ಕೂಡುವುದಿಲ್ಲ. ಈ ಪ್ರಶ್ನೆಗೆ ಊಹ್ಯಮಾನತ್ವಕ್ಕೆ ಅವಯವತ್ವದಿಂದ ಅವಿನಾಭಾವವನ್ನು "ನ ಚ" ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ವಿವರಣೆ – ಓಂಕಾರವನ್ನು ಊಹೆ ಮಾಡಬೇಕೆಂದು ಸಿದ್ಧವಾಯಿತು. ಆ ಊಹ್ಯಮಾನವಾದ ಓಂಕಾರವು ವಾಕ್ಯದಿಂದ ಬಹಿರ್ಭೂತವಾಗಿದೆ ಎಂದು ತಿಳಿದರೆ ಶ್ರೌತವಾದ ಅರ್ಥವಾದ ಬಲದಿಂದ ಊಹೆ ಮಾಡಬೇಕೆಂದು ಸಿದ್ಧವಾದರೂ ಕೂಡ ವಾಕ್ಯದ ಅವಯವವೇ ಆಗುವುದಿಲ್ಲ. ಆಗ ವಾಕ್ಯದ

ಬೇಕೇ ಹೊರತು ಆಕಾಂಕ್ಷಾಮಾತ್ರವೇ ನಿಯಾಮಕವಲ್ಲ. ಪ್ರಮಾಣವಿದ್ದರೆ ಆಕಾಂಕ್ಷೆ ಇಲ್ಲದಿದ್ದರೂ ಕೂಡ ಅಧ್ಯಾಹಾರ ಮಾಡಬಹುದು.

## ಓಂಕಾರಕ್ಕೆ ಮುಂದಿನ ಸೂತ್ರಗಳಲ್ಲಿ ಅನ್ವಯವಿಲ್ಲದಿದ್ದರೂ ದೋಷವಿಲ್ಲ

ವಾಕ್ಯಾರ್ಥಚಂದ್ರಿಕಾ – ಅರ್ಥವಾದೇ ಬ್ರಹ್ಮವಿದ್ಯಾಸು ಆದ್ಯಂತಯೋರೋಂಕಾರಾನುಚ್ಚಾರಣೇಽನಿಷ್ಟಕಥನೇಽಪ್ಯೂಹಃ ಕರ್ತವ್ಯ ಇತ್ಯರ್ಥಸ್ಯ ತತಃ ಶಾಬ್ದಮರ್ಯಾದಯಾಽಭಾವಾತ್ 'ಸಾಮರ್ಥ್ಯಾತ್' ಇತ್ಯುಕ್ತಮ್ । ಅತ್ರ 'ಪ್ರವತ್ಯನೋಂಕೃತಮ್' ಇತ್ಯರ್ಥವಾದಸ್ವರೂಪವಿಶೇಷೋಪಾದಾನೇನ ಶ್ರವಣವಿಶರಣಪರಿಹಾರರೂಪಾದೃಷ್ಟಫಲಾರ್ಥತ್ವಬೋಧನಾದರ್ಥಪ್ರತೀತೇರಾದಾವೇವ ಪ್ರಯೋಗೇನ ಚರಿತಾರ್ಥತ್ವಾದಂತೇ ಪ್ರಯೋಗವೈಯರ್ಥ್ಯಮ್ ಅನುಷಕ್ತಸ್ಯೋತ್ತರಸೂತ್ರಾನ್ವಯದೋಷಶ್ಚೇತಿ ದೋಷದ್ವಯಮಸಂಗತಮಿತಿ ದ್ರಷ್ಟವ್ಯಮ್ ॥

ಬ್ರಹ್ಮವಿದ್ಯೆಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡದಿದ್ದರೆ ಅನಿಷ್ಟವಾಗುತ್ತದೆಂದು ಅರ್ಥವಾದದಲ್ಲಿ ಹೇಳಲಾಗಿದೆ. ಆದರೂ ಕೂಡ 'ಊಹಃ ಕರ್ತವ್ಯಃ' ಎಂಬುದಾಗಿ ಹೇಳಿದ್ದರಿಂದ ಶಬ್ದಮರ್ಯಾದೆಯಿಂದ ಇದು ತಿಳಿಯದಿದ್ದರೂ ''ಸಾಮರ್ಥ್ಯಾತ್'' ಎಂದು ಹೇಳಿದ್ದಾರೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎಂಬ ಶ್ರುತಿಯಿಂದ ಅರ್ಥಾತ್ ಲಭ್ಯವಾಗಿದೆ ಎಂದಭಿಪ್ರಾಯ.

ಇಲ್ಲಿ 'ಪ್ರವತ್ಯನೋಂಕೃತಂ' ಎಂಬ ಅರ್ಥವಾದಸ್ವರೂಪವಿಶೇಷವನ್ನು ವಿವಕ್ಷಿಸಿದ್ದರಿಂದ ಶ್ರವಣವಿಶರಣಪರಿಹಾರರೂಪವಾದ ಅದೃಷ್ಟಫಲವನ್ನು ಹೇಳಿದಂತಾಯಿತು. ಆದ್ದರಿಂದ ಅರ್ಥಪ್ರತೀತಿಯು ಮೊದಲ ಓಂಕಾರದ ಪ್ರಯೋಗದಿಂದಲೇ ಚರಿತಾರ್ಥವಾಗುತ್ತದೆ. ಹಾಗಾಗಿ ಕೊನೆಯಲ್ಲಿ ಓಂಕಾರದ ಪ್ರಯೋಗವು ವ್ಯರ್ಥವಾಗುತ್ತದೆ. ಮತ್ತು ಅನುಷಂಗ ಮಾಡಿದ ಓಂಕಾರಕ್ಕೆ ಉತ್ತರಸೂತ್ರದಲ್ಲಿ ಅನ್ವಯವು ಕೂಡ ಇರುವುದಿಲ್ಲ ಎಂಬ ದೋಷದ್ವಯಗಳಿಗೆ ಈಗ ಸಂಗತಿ ಇರುವುದಿಲ್ಲ ಎಂದು ತಿಳಿಯಬೇಕು.

ವಿವರಣೆ – ಶ್ರುತಿಯಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂದು ಹೇಳಿರುವುದಿಲ್ಲ. ಉಚ್ಚಾರಣೆ ಮಾಡದಿದ್ದರೆ ಅನಿಷ್ಟವಾಗುತ್ತದೆ ಎಂದಷ್ಟೇ ಹೇಳಲಾಗಿದೆ ಎಂಬ ಪ್ರಶ್ನೆಯು ಪ್ರಾಪ್ತವಾದರೆ ''ಸಾಮರ್ಥ್ಯಾತ್'' ಎಂದು ಉತ್ತರಿಸಿದ್ದಾರೆ. ಶಬ್ದಮರ್ಯಾದೆಯಿಂದ ಊಹೆ ಮಾಡಬೇಕೆಂದು ತಿಳಿಯದಿದ್ದರೂ ಸಾಮರ್ಥ್ಯದ ಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು ಶ್ರುತಿಯಿಂದ ತಿಳಿಯುತ್ತದೆ.

ಪ್ರಾರಂಭದಲ್ಲಿ ಅರ್ಥಪ್ರತೀತಿಗೋಸ್ಕರ ಓಂಕಾರವನ್ನು ಅಧ್ಯಾಹಾರ ಮಾಡಲಾಗುತ್ತಿದೆ. ಹಾಗಾದರೆ ಕೊನೆಯಲ್ಲೇಕೆ ಓಂಕಾರವನ್ನು ಉಚ್ಚರಿಸಬೇಕು? ಮತ್ತು ಉತ್ತರಸೂತ್ರದಲ್ಲಿ ಈ ಓಂಕಾರಕ್ಕೆ ಅನುವೃತ್ತಿಯನ್ನು ಹೇಳಿದರೆ ಅನ್ವಯವು ಸಾಧ್ಯವಿಲ್ಲವಲ್ಲ? ಈ ಎರಡು ಪ್ರಶ್ನೆಗಳಿಗೂ ಕೂಡ ಈಗ ಉತ್ತರಿಸಿದಂತಾಯಿತು. ಅನಿಷ್ಟಪರಿಹಾರಕ್ಕೋಸ್ಕರ ಉಚ್ಚಾರಣೆಯನ್ನು ಮಾಡಬೇಕು. ಇದರಿಂದ ಅದೃಷ್ಟಪ್ರಯೋಜನಕ್ಕೋಸ್ಕರ ಓಂಕಾರವನ್ನು ಉಚ್ಚರಿಸಬೇಕು ಎಂದು ಹೇಳಿದಂತಾಯಿತು. ಕೊನೆಯಲ್ಲಿ ಉಚ್ಚರಿಸುವುದೂ ಕೂಡ ಅದೃಷ್ಟಪ್ರಯೋಜನಕ್ಕೋಸ್ಕರವೇ ಆಗಿರುತ್ತದೆ. ಮುಂದಿನ ಎಲ್ಲಾ ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸುವುದೂ ಕೂಡ ಅದೃಷ್ಟಪ್ರಯೋಜನಕ್ಕೋಸ್ಕರವೆಂದು ತಿಳಿಯಬೇಕು. ಇದರಿಂದ ಮೇಲಿನ ಎಲ್ಲಾ ಆಕ್ಷೇಪಗಳೂ ಪರಿಹಾರವಾದವು.

## ಊಹ್ಯಮಾನತ್ವವು ಅವಯವತ್ವದಿಂದ ಅವಿನಾಭೂತವಾಗಿದೆ

ವಾಕ್ಯಾರ್ಥಚಂದ್ರಿಕಾ – ಅತ್ರ ಊಹ್ಯಮಾನಸ್ಯ ವಾಕ್ಯಾದ್ ಬಹಿರ್ಭೂತತ್ವೇ ಶ್ರೌತಾರ್ಥವಾದಸಾಮರ್ಥ್ಯಾತ್ ಪ್ರತಿಸೂತ್ರಮಾದ್ಯಂತಯೋರೂಹಸಿದ್ಧಾವಪಿ ತಸ್ಯ ತದನವಯವತ್ವೇನ ಸಂಹಿತತಯಾ ನಿರ್ದೇಶಪ್ರಸಕ್ತೇರೇವ ಅಭಾವೇನ ಅಸಂಹಿತತಯಾ ನಿರ್ದೇಶಸ್ಯ ನಾಧಿಕಾರಜ್ಞಾಪಕತ್ವಮ್ ಇತಿ ನ ಸ್ವಾಭಿಮತಾನ್ಯಥಾಸಿದ್ಧಸಂಭವ ಇತ್ಯತ ಊಹ್ಯಮಾನತ್ವಸ್ಯ ಅವಯವತ್ವಾವಿನಾಭಾವಮ್ ಉಪಪಾದಯತಿ – ನ ಚೇತಿ ॥

ಊಹ್ಯಮಾನವಾದದ್ದಕ್ಕೆ ವಾಕ್ಯಾದ್ ಬಹಿರ್ಭೂತತ್ವವನ್ನು ಹೇಳಿದರೆ ಶ್ರೌತಾರ್ಥವಾದದ ಸಾಮರ್ಥ್ಯದಿಂದ ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಊಹವು ಸಿದ್ಧವಾದರೂ ಕೂಡ ಅದಕ್ಕೆ ಅವಯವತ್ವವು ಇರುವುದಿಲ್ಲ. ಆದ್ದರಿಂದ ಸಂಹಿತತಯಾ ನಿರ್ದೇಶಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಅಸಂಹಿತತಯಾ ನಿರ್ದೇಶಕ್ಕೆ ಮುಂದಿನ ಸೂತ್ರಗಳ ಅನುಗತಿಗೆ ಜ್ಞಾಪಕವಾಗಿದೆ ಎಂಬುದು ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ ಸ್ವಾಭಿಮತವಾದ ಅನ್ಯಥಾಸಿದ್ಧಿದೋಷವೂ ಕೂಡ ಕೂಡುವುದಿಲ್ಲ. ಈ ಪ್ರಶ್ನೆಗೆ ಊಹ್ಯಮಾನತ್ವಕ್ಕೆ ಅವಯವತ್ವದಿಂದ ಅವಿನಾಭಾವವನ್ನು "ನ ಚ" ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ವಿವರಣೆ – ಓಂಕಾರವನ್ನು ಊಹೆ ಮಾಡಬೇಕೆಂದು ಸಿದ್ಧವಾಯಿತು. ಆ ಊಹ್ಯಮಾನವಾದ ಓಂಕಾರವು ವಾಕ್ಯದಿಂದ ಬಹಿರ್ಭೂತವಾಗಿದೆ ಎಂದು ತಿಳಿದರೆ ಶ್ರೌತವಾದ ಅರ್ಥವಾದ ಬಲದಿಂದ ಊಹೆ ಮಾಡಬೇಕೆಂದು ಸಿದ್ಧವಾದರೂ ಕೂಡ ವಾಕ್ಯದ ಅವಯವವೇ ಆಗುವುದಿಲ್ಲ. ಆಗ ವಾಕ್ಯದ

ಅವಯವವೇ ಆಗದಿದ್ದಾಗ ಸಂಹಿತತಯಾ ನಿರ್ದೇಶ ಮಾಡಲು ಪ್ರಸಕ್ತಿಯೇ ಇರುವುದಿಲ್ಲ. ಅನುಗತಿಗೋಸ್ಕರ ಅಸಂಹಿತತಯಾ ನಿರ್ದೇಶವೆಂದೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಊಹ ಸಿದ್ಧವಾದರೂ ಕೂಡ ಅವಯವತ್ವವು ಸಿದ್ಧವಾಗದೇ ಇದ್ದರೆ ಸಂಹಿತತಯಾ ನಿರ್ದೇಶಕ್ಕೆ ಪ್ರಸಕ್ತಿಯು ಇರುವುದಿಲ್ಲ. ಆಗ ಅಸಂಹಿತತಯಾ ನಿರ್ದೇಶವು ಅನುವೃತ್ತಿಗೋಸ್ಕರ ಎಂದು ಹೇಳುವುದೂ ಕೂಡ ಸಾಧ್ಯವಾಗುವುದಿಲ್ಲ. ಆದ್ದರಿಂದ ಪರರ ಅನುಮಾನಕ್ಕೆ ನಾವು ಹೇಳಿದ ಅನ್ಯಥಾಸಿದ್ಧಿಯೂ ಕೂಡ ಅಯುಕ್ತವಾಗಬೇಕಾಗುತ್ತದೆ. ಅದಕ್ಕೋಸ್ಕರ ಊಹ್ಯಮಾನವಾದದ್ದು ಅವಯವ ಆಗಲೇಬೇಕೆಂದು ಸಮರ್ಥಿಸಬೇಕು. 'ಯಃ ಊಹ್ಯಮಾನಃ ಸಃ ಸರ್ವೋಽಪಿ ಅವಯವಃ ಏವ' ಎಂಬುದನ್ನು ಈಗ ಸಮರ್ಥಿಸುತ್ತಿದ್ದಾರೆ.

## ಅಧ್ಯಯನ ನಿಯಮಕ್ಕೂ ಓಂಕಾರಕ್ಕೂ ವ್ಯತ್ಯಾಸವಿದೆ

**ವಾಕ್ಯಾರ್ಥಚಂದ್ರಿಕಾ – ಯದ್ವಾ ಶ್ರೌತಾರ್ಥವಾದಸಾಮರ್ಥ್ಯೇನ ಆದ್ಯಂತಯೋ-ರೋಂಕಾರೋಹಸಿದ್ಧಾವಪಿ ತಸ್ಯಾಧ್ಯಯನನಿಯಮಾದಿವತ್ ಬಹಿರ್ಭೂತಸ್ಯ ಸಕೃದಧ್ಯಾಹೃತಸ್ಯೈವ ಸರ್ವಸೂತ್ರೋಪಕಾರಿತ್ವಸಂಭವೇನ ಪ್ರತಿಸೂತ್ರಮುಚ್ಚಾರಣಸಿದ್ಧ್ಯಾ ನ ಪ್ರಕೃತಸಿದ್ಧಿರಿತ್ಯತೋ ಅಧ್ಯಾಹೃತಸ್ಯ ವಾಕ್ಯಾವಯವತ್ವೇನ ಅಧ್ಯಯನನಿಯಮಾದಿವೈಷಮ್ಯಾತ್ ಅರ್ಥವಾದಬಲೇನ ಪ್ರತಿಸೂತ್ರಮ್ ಅಧ್ಯಾಹಾರೇ ಸಿದ್ಧೇ ತದ್ಬಲಾದೇವ ಅವಯವತ್ವಸಿದ್ಧಾವವಯವಾನಾಂ ಚ ಪ್ರತಿಸೂತ್ರಮುಚ್ಚಾರಣಸ್ಯಾಪಿ ನಿಯತತ್ವಾತ್ ಪ್ರಕೃತಸಿದ್ಧಿರಿತ್ಯಾಶಯೇನಾಹ – ನ ಚೇತಿ ॥**

ಅಥವಾ ಶ್ರೌತವಾದ ಅರ್ಥವಾದದ ಸಾಮರ್ಥ್ಯದಿಂದ ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕು ಎಂದು ಸಿದ್ಧವಾಗುತ್ತದೆ. ಆದರೂ ಕೂಡ ಆ ಓಂಕಾರವು ಅಧ್ಯಯನ ನಿಯಮಾದಿಗಳಂತೆ ಬಹಿರ್ಭೂತವಾಗಿದೆ. ಒಮ್ಮೆ ಅಧ್ಯಾಹಾರಮಾಡಿಕೊಂಡದ್ದು ಎಲ್ಲಾ ಸೂತ್ರಗಳಿಗೂ ಉಪಕಾರಿಯಾಗುತ್ತದೆ. ಪ್ರತಿಯೊಂದು ಸೂತ್ರಗಳಲ್ಲಿ ಪ್ರತ್ಯೇಕವಾಗಿ ಉಚ್ಚಾರಣೆಯನ್ನು ಮಾಡ-ಬೇಕಾಗಿಲ್ಲ. ಆದ್ದರಿಂದ ಅಸಂಸ್ಪಷ್ಟತಯಾ ನಿರ್ದೇಶವು ಅಯುಕ್ತವಾಗಿದೆ?

ಈ ಪ್ರಶ್ನೆಯು ತಪ್ಪು. ಏಕೆಂದರೆ ಅಧ್ಯಾಹೃತವಾದದ್ದು ವಾಕ್ಯದ ಅವಯವವಾಗಿದೆ. ಅಧ್ಯಯನ-ನಿಯಮಾದಿಗಳಿಗಿಂತ ಇದರಲ್ಲಿ ವೈಷಮ್ಯವಿದೆ. ಆ ಕಾರಣದಿಂದ ಅರ್ಥವಾದದ ಸಾಮರ್ಥ್ಯದಿಂದ ಪ್ರತಿಯೊಂದು ಸೂತ್ರಗಳಲ್ಲಿ ಅಧ್ಯಾಹಾರವನ್ನು ಮಾಡಬೇಕೆಂಬುದು ಸಿದ್ಧವಾಗುತ್ತದೆ. ಏತದ್ ಬಲದಿಂದ ಸೂತ್ರದ ಅವಯವವೆಂದು ಸಿದ್ಧವಾಗುತ್ತದೆ. ಅವಯವಗಳನ್ನು ಪ್ರತಿಯೊಂದು ಸೂತ್ರಗಳಲ್ಲೂ

ಉಚ್ಚರಿಸಬೇಕೆಂಬುದು ನಿಯಮಸಿದ್ಧವಾಗಿದೆ. ಆದ್ದರಿಂದ ಪ್ರಕೃತವಾದ ಅಸಂಸ್ಪಷ್ಟತಯಾ ನಿರ್ದೇಶವು ಸಿದ್ಧವಾಯಿತು. ಈ ಅಭಿಪ್ರಾಯದಿಂದ "ನಚ" ಇತ್ಯಾದಿ ಗ್ರಂಥವು ಹೊರಟದೆ.

ವಿವರಣೆ – ಮತ್ತೊಂದು ಬಗೆಯಲ್ಲಿ "ನಚ" ಇತ್ಯಾದಿ ಗ್ರಂಥಕ್ಕೆ ಪೀಠಿಕೆಯನ್ನು ತಿಳಿಯಬಹುದು. ಅಧ್ಯಯನನಿಯಮಾದಿಗಳಂತೆ ಓಂಕಾರವು ಬಹಿರ್ಭೂತವಾಗಿದ್ದುಕೊಂಡೇ ಸೂತ್ರಕ್ಕೆ ಉಪಕಾರಕ-ವಾಗುತ್ತದೆ. ಏಕೆಂದರೆ ಅದೃಷ್ಟಪ್ರಯೋಜನಕ್ಕೋಸ್ಕರ ಓಂಕಾರವನ್ನು ಉಚ್ಚರಿಸಲಾಗುತ್ತಿದೆ ಎಂದು ನೀವೇ ಹೇಳುತ್ತಿದ್ದೀರಿ. ಹೀಗೆ ಹೇಳಿದಾಗ ಪ್ರತಿಸೂತ್ರದಲ್ಲಿ ಓಂಕಾರವನ್ನು ಉಚ್ಚಾರ ಮಾಡುವ ಅವಶ್ಯಕತೆಯು ಸರ್ವಥಾ ಇರುವುದಿಲ್ಲ. ಏಕೆಂದರೆ ಸ್ವಾಧ್ಯಾಯವನ್ನು ಅಧ್ಯಯನ ಮಾಡುವಾಗ ಪ್ರತಿಯೊಂದು ಮಂತ್ರ-ಗಳಲ್ಲೂ ಪ್ರಾಙ್ಮುಖವಾಗಿ ನಾವು ಕೂಡುವುದಿಲ್ಲ. ಒಮ್ಮೆ ಪೂರ್ವಾಭಿಮುಖವಾಗಿ ಕುಳಿತರೆ ಸಾಕು. ಇದರಂತೆ ಐದುನೂರಆರವತ್ತನಾಕು ಸೂತ್ರಗಳಲ್ಲಿ ಮೊದಲೊಮ್ಮೆ ಓಂ ಎಂದು ಉಚ್ಚರಿಸಿದರೆ ಸಾಕು. ಪ್ರತಿಸೂತ್ರಗಳಲ್ಲಿ ಓಂಕಾರದ ಅನುವೃತ್ತಿಯೂ ಕೂಡ ಅನಾವಶ್ಯಕ. ಆದ್ದರಿಂದ ಪ್ರತಿಸೂತ್ರಗಳಲ್ಲಿ ಅನುವೃತ್ತಿಯನ್ನು ತಿಳಿಸುವುದಕ್ಕೋಸ್ಕರ ಪ್ರಥಮಸೂತ್ರದಲ್ಲಿ ಅಸಂಹಿತತಯಾ ನಿರ್ದೇಶಮಾಡಬೇಕೆಂದು ಹೇಳುವುದು ಅಯುಕ್ತವಾಗುತ್ತದೆ?

ಈ ಶಂಕೆಯು ಅಯುಕ್ತವಾಗಿದೆ. ಏಕೆಂದರೆ ಪ್ರಾಙ್ಮುಖತ್ವಾದಿಗಳು ಅಧ್ಯಾಹಾರ್ಯಮಾಣಗಳಲ್ಲ. ಪ್ರಾಙ್ಮುಖತ್ವ, ದರ್ಭಾಸನ, ಪವಿತ್ರಧಾರಣ ಇವುಗಳು ಶಬ್ದವಲ್ಲದ ಕಾರಣ ಅಧ್ಯಾಹಾರಕ್ಕೆ ಅನರ್ಹ-ವಾಗಿವೆ. ಆದರೆ ಓಂಕಾರವು ಅದೃಷ್ಟಕ್ಕೋಸ್ಕರ ಉಚ್ಚರಿಸುವುದಾದರೂ ಕೂಡ ಶಬ್ದರೂಪವಾಗಿದೆ. ಹೀಗೆ ಪ್ರಾಙ್ಮುಖತ್ವಾದಿಗಳಿಗಿಂತ ಓಂಕಾರದಲ್ಲಿ ವೈಷಮ್ಯವಿರುವುದರಿಂದ ಮುಂದಿನ ಸೂತ್ರಗಳಲ್ಲಿ ಅಧ್ಯಾಹಾರ ಮಾಡಿಕೊಳ್ಳಲು ಯೋಗ್ಯವಾಗಿದೆ. ಅದಕ್ಕೋಸ್ಕರ ಪ್ರಥಮಸೂತ್ರದ ಅವಯವವಾಗಿರುತ್ತದೆ. ಅವ-ಯವತ್ವವು ಸಿದ್ಧವಾಗಿರುವುದರಿಂದ ಪ್ರತಿಸೂತ್ರದಲ್ಲಿ ಇದರ ಉಚ್ಚಾರಣೆಯು ಸಿದ್ಧವಾಗುತ್ತದೆ. ಅದಕ್ಕೋಸ್ಕರ ಅಸಂಹಿತತಯಾ ನಿರ್ದೇಶಮಾಡಿದ್ದು ಯುಕ್ತವಾಗುತ್ತದೆ.

## ಅಮಂತ್ರಾವಯವತ್ವಪ್ರಸಂಗಾತ್
## ಎಂಬ ಆಪಾದನೆಯ ಅರ್ಥಗಾಂಭೀರ್ಯ

ವಾಕ್ಯಾರ್ಥಚಂದ್ರಿಕಾ – ಅತ್ರ ಅವಯವತ್ವಸ್ಯ ಪ್ರಸಂಗೇಽಪಿ ಅಮಂತ್ರತ್ವಪ್ರಸಂಗಾತ್ ಇತಿ ವಾ ಮಂತ್ರಾನಂತರ್ಗತತ್ವಪ್ರಸಂಗಾದಿತಿ ಚೋಕ್ತ್ವಾ ಮಂತ್ರಾನವಯವತ್ವಲಾಭೇ ಅಪಿ ತಥಾಽನುಕ್ತ್ವಾ

ಮಂತ್ರಾನವಯವತ್ವಪ್ರಸಂಗಾತ್ ಇತ್ಯುಕ್ತ್ವಾ ಚ ಯದ್ಯಪ್ಯನಾಮ್ನಾತೇಷು ಅಮಂತ್ರತ್ವಮ್ ಆಮ್ನಾತೇಷು ಹಿ ವಿಭಾಗಃ ಸ್ಯಾತ್ ಇತ್ಯುಕ್ತರೀತ್ಯಾ 'ಮಂತ್ರಃ' ಇತ್ಯಭಿಯುಕ್ತಪ್ರಯೋಗವಿಷಯಸ್ಯೈವ ಮಂತ್ರತ್ವಾತ್ ಮಂತ್ರೇಷೂಹ್ಯಮಾನಸ್ಯ ನ ಮಂತ್ರತ್ವಮ್ ।

'ಆಮ್ನಾಯಮಾನಂ ಹ್ಯನುಷಜ್ಯಮಾನಮಂತರ್ಗತಂ ಮಂತ್ರವಿಚಾರಣಾಯಾಮ್'

ಇತ್ಯುಕ್ತರೀತ್ಯಾ ನ ವಾ ಮಂತ್ರಾಂತರ್ಭೂತತ್ವಂ ನ ವಾ ಮಂತ್ರವಾಕ್ಯೇನ ಸಹೈಕಕಾರ್ಯಕಾರಿತ್ವೇನ ಮಂತ್ರವಾಕ್ಯಾವಯವತ್ವಮ್ । ರಥಘೋಷಾದೇರಪಿ ಮಹೇಂದ್ರಸ್ತೋತ್ರಾವಯವತ್ವಪ್ರಸಂಗಾತ್ । ತಥಾಽಪಿ ಅವದಾನಾದಿವಿಧೌ ದ್ರವಾದಿಪದವದ್ ವಿಶ್ವಜಿದಾದೌ ಫಲಪದವದೂಹಾದೇರಪಿ ಶ್ರುತಾರ್ಥಾಪತ್ತ್ಯಾದಿಕಲ್ಪ್ಯಸ್ಯಾರ್ಥಾದ್ವಾ ಕಲ್ಪನೈಕದೇಶತ್ವಾದಿತಿ ವೇದೈಕದೇಶತ್ವೋಕ್ತೇರ್ವೇದಾಭ್ಯುಪಗಮ ಇತಿ ತದಭಿಯುಕ್ತೈರುಕ್ತತ್ವೇನ ಊಹ್ಯಮಾನಸ್ಯಾಪಿ ವೇದತ್ವಸ್ವೀಕಾರಾದ್ ವೇದತ್ವೇ ಸತಿ ಮಂತ್ರವಾಕ್ಯೇನ ಸಹೈಕಕಾರ್ಯಕಾರಿತ್ವಂ ವಾ ವಾಕ್ಯತ್ವೇ ಸತಿ ಮಂತ್ರೇಣ ಸಹೈಕಕಾರ್ಯಕಾರಿತ್ವಂ ವಾ ಮಂತ್ರಾವಯವತ್ವಂ ತೇಷಾಮಪಿ ಇಷ್ಟಮೇವ । ಪ್ರಕೃತೇ ಚ ವಾಕ್ಯತ್ವೇ ಸತಿ ಬ್ರಹ್ಮವಿದ್ಯಯಾ ಏಕಕಾರ್ಯಕಾರಿತ್ವರೂಪಮೇವ ತದವಯವತ್ವಂ ವಿವಕ್ಷಿತಮ್ । ತಾವತೈವ 'ಓಂಕಾರಸ್ಯ ಮಂಗಲಾರ್ಥತಯಾ ಸೂತ್ರಾದೌ ಉಪನಿಬಂಧನರೂಪಸ್ವಪ್ರಯೋಜನಸಿದ್ಧೇಃ' ಇತ್ಯರ್ಥಸೂಚನೇನ ಊಹಪ್ರವರನಾಮಧೇಯಾನಾಮ್ ಅಮಂತ್ರತ್ವಸ್ಯ ದ್ವಿತೀಯೇ ಸಿದ್ಧಾಂತಿತತ್ವಾತ್ ಮಂತ್ರೇಷ್ವಪಿ ಊಹಮಾನಸ್ಯ ತದನವಯವತ್ವಾಪಾದನಮ್ ಇಷ್ಟಮೇವೇತಿ ಶಂಕಾಽಸಂಗತಾ ಇತಿ ಜ್ಞೇಯಮ್ ।

ಅವಯವತ್ವದ ವಿಚಾರವು ನಡೆಯುತ್ತಿರುವ ಪ್ರಸಂಗದಲ್ಲಿ 'ಅಮಂತ್ರತ್ವಪ್ರಸಂಗಾತ್' ಎಂದು ಟೀಕೆಯಲ್ಲಿ ಹೇಳಬಹುದಿತ್ತು. ಅಥವಾ 'ಮಂತ್ರಾನಂತರ್ಗತತ್ವಪ್ರಸಂಗಾತ್' ಎಂದೂ ಕೂಡ ಹೇಳಬಹುದಿತ್ತು. ಆದರೆ ಟೀಕೆಯಲ್ಲಿ ಹೀಗೆ ಹೇಳಿರುವುದಿಲ್ಲ. 'ಮಂತ್ರಾನವಯವತ್ವಪ್ರಸಂಗಾತ್' ಎಂದೇ ಹೇಳಿದ್ದಾರೆ. ಹಾಗೆ ಹೇಳದೇ ಹೀಗೆ ಹೇಳಿದ್ದರಿಂದ ಇದನ್ನು ಸೂಚನೆ ಮಾಡಿದ್ದಾರೆ [೧] –.

'ಅನಾಮ್ನಾತೇಷು ಅಮಂತ್ರತ್ವಂ ಆಮ್ನಾತೇಷು ಹಿ ವಿಭಾಗಃ ಸ್ಯಾತ್' 'ಅಧ್ಯಯನ ಮಾಡುವ ಕಾಲದಲ್ಲಿ ಯಾವುದನ್ನು ಸೇರಿಸಿ ಅಧ್ಯಯನ ಮಾಡಿರುತ್ತಾರೋ ಅದೇ ಮಂತ್ರ ಎನಿಸುತ್ತದೆ. ಯಾವುದು

[೧](ಪ್ರಸಂಗಾತ್ ಇತ್ಯುಕ್ತ್ವಾ ಚ ಎಂಬುದಕ್ಕೆ ಸುಮಾರು ಹತ್ತು ಸಾಲುಗಳು ಆದನಂತರ ಇತ್ಯರ್ಥಸೂಚನೇನ ಎಂಬ ಪದವಿದೆ. ಅಲ್ಲಿಗೆ ಅನ್ವಯವನ್ನು ಮಾಡಬೇಕು)

ಅಧ್ಯಯನದಲ್ಲಿ ಸೇರಿರುವುದಿಲ್ಲವೋ ಅದು ಮಂತ್ರವಾಗುವುದಿಲ್ಲ' ಹೀಗೆ ಜೈಮಿನಿಸೂತ್ರದಲ್ಲಿ ಹೇಳಿದ ಪ್ರಕಾರ ಮಂತ್ರಃ ಎಂಬ ಅಭಿಯುಕ್ತಪ್ರಯೋಗವಿಷಯಕ್ಕೆ ಮಾತ್ರ ಮಂತ್ರತ್ವವು ಇರುತ್ತದೆ. ಮಂತ್ರಗಳಲ್ಲಿ ಊಹ್ಯಮಾನವಾದದ್ದಕ್ಕೆ ಮಂತ್ರತ್ವವು ಬರುವುದಿಲ್ಲ. ಮತ್ತು ಆಮ್ನಾಯಮಾನಂ ಅನುಷಜ್ಯಮಾನಂ ಅಂತರ್ಗತಂ ಮಂತ್ರವಿಚಾರಣಾಯಾಮ್' ಎಂಬ ವಚನದ ಪ್ರಕಾರ ಊಹ್ಯಮಾನವಾದದ್ದಕ್ಕೆ ಮಂತ್ರಾಂತರ್ಗತತ್ವವು ಕೂಡ ಇರುವುದಿಲ್ಲ. ಅಷ್ಟೇ ಅಲ್ಲ ಮಂತ್ರದ ಅವಯವತ್ವವೂ ಕೂಡ ಊಹ್ಯ-ಮಾನವಾದುದ್ದಕ್ಕೆ ಇರುವುದಿಲ್ಲ. ಏಕೆಂದರೆ ಮಂತ್ರವಾಕ್ಯದ ಜೊತೆ ಏಕಕಾರ್ಯಕಾರಿತ್ವೇನ ಅವಯವತ್ವ-ವನ್ನು ಹೇಳಬೇಕು. ಮಂತ್ರವಾಕ್ಯೇನ ಸಹ ಏಕಕಾರ್ಯಕಾರಿತ್ವೇನ ಮಂತ್ರವಾಕ್ಯದ ಅವಯವತ್ವವನ್ನು ವಿವಕ್ಷಿಸಿದರೆ ರಥಘೋಷಾದಿಗಳಿಗೂ ಕೂಡ ಮಹೇಂದ್ರಸ್ತೋತ್ರದ ಅವಯವತ್ವವು ಬರಬೇಕಾಗುತ್ತದೆ. ಆದ್ದರಿಂದ ಟೀಕೆಯಲ್ಲಿ 'ಅಮಂತ್ರತ್ವಪ್ರಸಂಗಾತ್' ಎಂದು ಹೇಳಿದರೂ 'ಮಂತ್ರಾನಂತರ್ಗತತ್ವ-ಪ್ರಸಂಗಾತ್' ಎಂದು ಹೇಳಿದರೂ 'ಮಂತ್ರಾನವಯವತ್ವಪ್ರಸಂಗಾತ್' ಎಂದು ಹೇಳಿದರೂ ಕೂಡ ಇಷ್ಟಾಪತ್ತಿಯೇ ಆಗುತ್ತದೆ.

ಆದರೂ ಕೂಡ ಅವದಾನಾದಿ ವಿಧಿಗಳಲ್ಲಿ ದ್ರವ್ಯಾದಿಪದಗಳಂತೆ ವಿಶ್ವಜಿದಾದಿಯಾಗಗಳಲ್ಲಿ ಫಲಪದದಂತೆ ಊಹಾದಿಗಳಿಗೂ ಕೂಡ ಶ್ರುತಿತ್ವವು ಅರ್ಥಾಪತ್ತ್ಯಾದಿಗಳಿಂದ ಸಿದ್ಧವಾಗುತ್ತದೆ. ವೇದೈಕ-ದೇಶತ್ವವನ್ನು ಹೇಳಿದ್ದರಿಂದ ವೇದತ್ವವನ್ನು ಅಂಗೀಕರಿಸಬೇಕು. ಹೀಗೆ ಅಭಿಯುಕ್ತರು ಊಹ್ಯಮಾನ-ವಾದದ್ದಕ್ಕೂ ಕೂಡ ವೇದತ್ವವನ್ನು ಸ್ವೀಕರಿಸಿದ್ದರಿಂದ 'ವೇದತ್ವೇ ಸತಿ ಮಂತ್ರವಾಕ್ಯೇನ ಸಹ ಏಕಕಾರ್ಯ-ಕಾರಿತ್ವ'ವಾದ 'ವಾಕ್ಯತ್ವೇ ಸತಿ ಮಂತ್ರೇಣ ಸಹ ಏಕಕಾರ್ಯಕಾರಿತ್ವ'ರೂಪವಾದ ಮಂತ್ರಾವಯವತ್ವವು ಮೀಮಾಂಸಕರಿಗೂ ಕೂಡ ಇಷ್ಟವೇ ಆಗಿದೆ. ಪ್ರಕೃತದಲ್ಲಿ 'ವಾಕ್ಯತ್ವೇ ಸತಿ ಬ್ರಹ್ಮವಿದ್ಯಯಾ ಸಹ ಏಕಕಾರ್ಯಕಾರಿತ್ವ'ರೂಪವಾದ ಅವಯವತ್ವವನ್ನೇ ವಿವಕ್ಷಿಸಲಾಗಿದೆ. (ಬ್ರಹ್ಮವಿದ್ಯೆಗೆ ಸಂಬಂಧಪಟ್ಟಂತೆ ಹೇಳುವಾಗ ಮಂತ್ರೇಣ ಸಹ ಎನ್ನಬಾರದು. ಬ್ರಹ್ಮವಿದ್ಯಯಾ ಸಹ ಎಂದು ಹೇಳಬೇಕು). ಹೀಗೆ ಹೇಳುವುದರಿಂದ ಓಂಕಾರಕ್ಕೆ ಮಂಗಲಾರ್ಥತಯಾ ಸೂತ್ರದ ಪ್ರಾರಂಭದಲ್ಲಿ ಉಪನಿಬಂಧನರೂಪವಾದ ಸ್ವಪ್ರಯೋಜನವು ಸಿದ್ಧವಾಗುತ್ತದೆ. ಗ್ರಂಥದಲ್ಲಿ ಮಂತ್ರಾನವಯವತ್ವಪ್ರಸಂಗಾತ್ ಎಂದು ಹೇಳಿದ್ದರಿಂದ ಇಷ್ಟೆಲ್ಲಾ ಅರ್ಥಗಳನ್ನು ಸೂಚನೆ ಮಾಡಿದ್ದಾರೆ. ಆದ್ದರಿಂದ 'ಊಹಪ್ರವರನಾಮಧೇಯಾನಾಂ ಅಮಂತ್ರ-ತ್ವಸ್ಯ' ಎಂಬುದಾಗಿ ಎರಡನೆಯ ಅಧ್ಯಾಯದಲ್ಲಿ ಸಿದ್ಧಾಂತ ಮಾಡಿರುವುದರಿಂದ ಮಂತ್ರಗಳಲ್ಲೂ ಕೂಡ ಊಹ್ಯಮಾನವಾದದ್ದಕ್ಕೆ ಅನವಯವತ್ವದ ಆಪಾದನೆಯು ಇಷ್ಟಾಪತ್ತಿಯೇ ಆಗಿದೆ ಎಂಬ ಶಂಕೆಯು ಅಸಂಗತವಾಗಿದೆ ಎಂದು ತಿಳಿಯಬೇಕು.

ವಿವರಣೆ – ಟೀಕೆಯಲ್ಲಿ ಆಪಾದನೆ ಮಾಡುವ ಸಂದರ್ಭದಲ್ಲಿ 'ಅಮಂತ್ರತ್ವಪ್ರಸಂಗಾತ್' ಎಂದು ಹೇಳಿಲ್ಲ. ಅಥವಾ ಮಂತ್ರಾನಂತರ್ಗತತ್ವಪ್ರಸಂಗಾತ್ ಎಂದೂ ಕೂಡ ಆಪಾದನೆಯನ್ನು ಮಾಡಿರುವುದಿಲ್ಲ. ವಾಸ್ತವಿಕವಾಗಿ ಹೀಗೆಯೇ ಆಪಾದನೆ ಮಾಡಬಹುದಿತ್ತು. ಆದರೂ ಹೀಗೆ ಆಪಾದನೆಯನ್ನು ಮಾಡದೇ 'ಅಮಂತ್ರಾವಯವತ್ವಪ್ರಸಂಗಾತ್' ಎಂದು ಹೇಳಿದ್ದಾರೆ. 'ಮಂತ್ರದ ಅವಯವತ್ವವು ಇಲ್ಲದೇ ಹೋದೀತು!' ಎಂದು ಆಪಾದ್ಯವನ್ನು ನಿರ್ದೇಶ ಮಾಡಿದ್ದಾರೆ. ಇದರಿಂದ ಮುಂದಿನ ಪ್ರಮೇಯವನ್ನು ಸೂಚಿಸಿದ್ದಾರೆ –

''ಮಂತ್ರಃ'' ಎಂಬ ಅಭಿಯುಕ್ತರ ಪ್ರಯೋಗಕ್ಕೆ ವಿಷಯವಾದದ್ದೇ ಮಂತ್ರ ಎಂದು ಕರೆಸಿಕೊಳ್ಳುತ್ತದೆ. ಎಲ್ಲಿ ಅಭಿಯುಕ್ತರ ಮಂತ್ರಃ ಎಂಬ ಪ್ರಯೋಗವು ಇರುವುದಿಲ್ಲವೋ ಅದು ಮಂತ್ರವಾಗುವುದಿಲ್ಲ. ಪ್ರಕೃತ ಅಧ್ಯಾಹಾರ ಮಾಡಲ್ಪಟ್ಟ ಶಬ್ದಗಳು ಲೌಕಿಕವಾಗಿವೆ. ನಾವು ಸೇರಿಸಿದ್ದರಿಂದ ಮಂತ್ರತ್ವವು ಅವುಗಳಲ್ಲಿ ಬರುವುದಿಲ್ಲ. ಇಂಥ ಸಂದರ್ಭದಲ್ಲಿ ಅಮಂತ್ರತ್ವಪ್ರಸಂಗಾತ್ ಎಂಬುದಾಗಿ ಆಪಾದನೆ ಮಾಡಿದರೆ ಮೀಮಾಂಸಕರು ಇಷ್ಟಾಪತ್ತಿ ಎಂದು ಹೇಳುತ್ತಾರೆ.

'ಆಮ್ನಾಯಮಾನಂ ಹ್ಯನುಷಜ್ಯಮಾನಮಂತರ್ಗತಂ ಮಂತ್ರವಿಚಾರಣಾಯಾಮ್' ಎಂಬುದಾಗಿ ಮೀಮಾಂಸಕರು ಹೇಳುವಂತೆ ಮಂತ್ರಾಂತರ್ಭೂತತ್ವವು ಕೂಡ ಇರುವುದಿಲ್ಲ. 'ಮಂತ್ರೇಣ ಸಹ ಏಕಕಾರ್ಯಕಾರಿತ್ವಮ್' ಎಂಬುದನ್ನೂ ಅವಯವವೆಂದು ವಿವಕ್ಷಿಸಿದರೆ ರಥಘೋಷಾದಿಗಳಿಗೂ ಕೂಡ ಅವಯವತ್ವವು ಬರಬೇಕಾದೀತು. ಏಕೆಂದರೆ, ಮಂತ್ರೇಣ ಸಹ ಏಕಕಾರ್ಯಕಾರಿತ್ವವನ್ನೇ ನೀವು ಅವಯವವೆಂದು ಹೇಳಿದ್ದೀರಿ. ಮಾಹೇಂದ್ರಸ್ತೋತ್ರಕ್ಕೆ ರಥಘೋಷವು ಉಪಕಾರಕವಾಗಿದೆ. ಮಾಹೇಂದ್ರಸ್ತೋತ್ರವನ್ನು ಹೇಳಬೇಕೆಂದು ನೆನಪು ಮಾಡುವುದಕ್ಕಾಗಿ ಯಜ್ಞವೇದಿಕೆಯ ಸನಿಹದಲ್ಲಿ ರಥಘೋಷವನ್ನು ಮಾಡುವುದಕ್ಕಾಗಿ ರಥವನ್ನು ಓಡಿಸುತ್ತಾರೆ. ಒಂದು ವೇಳೆ ರಥಘೋಷವೆಂಬ ಸ್ಮಾರಕವಿಲ್ಲದೇ ಮಾಹೇಂದ್ರಸ್ತೋತ್ರವನ್ನು ಪಠಿಸಿದರೆ ಅದರಿಂದ ಅದೃಷ್ಟವು ಹುಟ್ಟುವುದಿಲ್ಲ. ಇಲ್ಲಿ ರಥಘೋಷವೂ ಸಹ ಮಂತ್ರೇಣ ಸಹ ಏಕಕಾರ್ಯಕಾರಿಯು ಆಗಿರುತ್ತದೆ. ಅಂದಮಾತ್ರಕ್ಕೆ ರಥಘೋಷವು ಮಾಹೇಂದ್ರಸ್ತೋತ್ರದ ಅವಯವವಾಗುವುದಿಲ್ಲ. ಇದರಂತೆ ವಾಕ್ಯೇನ ಸಹ ಏಕಕಾರ್ಯಕಾರಿತ್ವವನ್ನೇ ಅವಯವತ್ವವೆಂದು ಹೇಳಿದರೆ ರಥಘೋಷಾದಿಗಳಲ್ಲೂ ಕೂಡ ಅವಯವತ್ವವು ಬರಬೇಕಾದೀತು. ಆದ್ದರಿಂದ ಹೇಗೆ ಆಪಾದನೆ ಮಾಡಿದರು?

ಮೀಮಾಂಸಕರು ಅಧ್ಯಾಹಾರ ಮಾಡಿದ ಪದಗಳಿಗೆ ಮಂತ್ರತ್ವವನ್ನು ಒಪ್ಪುವುದಿಲ್ಲ; ಆದರೆ

ವೇದತ್ವವಿರುತ್ತದೆಂದು ಒಪ್ಪುತ್ತಾರೆ. ಉದಾಹರಣೆ – 'ವಿಶ್ವಜಿತಾ ಯಜೇತ' ಎಂಬಲ್ಲಿ 'ಸ್ವರ್ಗಕಾಮಃ' ಎಂಬ ಪದವನ್ನು ಅಧ್ಯಾಹಾರ ಮಾಡುತ್ತೇವೆ. 'ಸ್ರುವೇಣ ಅವದ್ಯತಿ' ಎಂಬಲ್ಲಿ ದ್ರವದ್ರವ್ಯತ್ವವನ್ನು ಅಧ್ಯಾಹಾರ ಮಾಡುತ್ತೇವೆ. ಈ ಅಧ್ಯಾಹಾರಗಳು ಐಚ್ಛಿಕವಲ್ಲ. ನ್ಯಾಯಬಲದಿಂದ ಅಥವಾ ಅರ್ಥಾಪತ್ತಿ ಬಲದಿಂದ ಸಿದ್ಧವಾದ ಪದಗಳಿಗೆ ಮಾತ್ರ ಅಧ್ಯಾಹಾರವನ್ನು ಮಾಡಬೇಕು. 'ವಿಶ್ವಜಿತಾ ಯಜೇತ' ಎಂಬಲ್ಲಿ ಫಲವಾಚಕಪದವು ಇಲ್ಲದಿದ್ದರೆ ಶ್ರುತಿಗೆ ಅಪ್ರಾಮಾಣ್ಯಬರುವ ಪ್ರಸಂಗವು ಬರುತ್ತದೆ. ಆದಕ್ಕಾಗಿ 'ಸ್ವರ್ಗಕಾಮಃ' ಎಂಬ ಪದವನ್ನು ಎಲ್ಲರಿಗೂ ಅವಿಶಿಷ್ಟವಾದ್ದರಿಂದ ಅಧ್ಯಾಹಾರ ಮಾಡಬೇಕು. 'ಸ್ರುವೇಣ ಅವದ್ಯತಿ' ಎಂಬಲ್ಲಿ ಸ್ರುವದಿಂದ ಕಠಿಣವಾದ ಪದಾರ್ಥವನ್ನು ಅವದಾನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ದ್ರವದ್ರವ್ಯವನ್ನೇ ಅವದಾನ ಮಾಡಬೇಕು ಎಂದು ತಿಳಿಯುತ್ತೇವೆ. ಈ ಅಧ್ಯಾಹೃತವಾದ 'ಸ್ವರ್ಗಕಾಮಃ' ಎಂಬುದಕ್ಕೆ ಮತ್ತು 'ದ್ರವದ್ರವ್ಯತ್ವಂ' ಎಂಬುದಕ್ಕೆ ಮಂತ್ರತ್ವವು ಇರುವುದಿಲ್ಲ. ಆದರೆ ವೇದತ್ವವು ಇರುತ್ತದೆಂದು ಮೀಮಾಂಸಕರು ಒಪ್ಪಿದ್ದಾರೆ. ಇದರಿಂದ ಊಹ್ಯಮಾನವಾದದ್ದಕ್ಕೆ ವೇದತ್ವವು ಸಿದ್ಧವಾಗುತ್ತದೆ. 'ವೇದತ್ವೇ ಸತಿ ಮಂತ್ರೇಣ ಸಹ ಏಕಕಾರ್ಯಕಾರಿತ್ವಮ್ ಅವಯವತ್ವಮ್' ಅಥವಾ 'ವಾಕ್ಯತ್ವೇ ಸತಿ ಮಂತ್ರೇಣ ಸಹ ಏಕಕಾರ್ಯಕಾರಿತ್ವಮ್ ಅವಯವತ್ವಮ್' ಎಂದು ವಿವಕ್ಷಿಸಿದಂತಾಯಿತು. ಇದರಿಂದ ಮಾಹೇಂದ್ರಸ್ತೋತ್ರದ ರಥಘೋಷದಲ್ಲಿ ಅತಿವ್ಯಾಪ್ತಿಯು ಪರಿಹಾರವಾಯಿತು. ಒಂದು ವೇಳೆ 'ಮಂತ್ರೇಣ ಸಹ ಏಕಕಾರ್ಯಕಾರಿತ್ವಮ್' ಎಂದಷ್ಟೇ ಹೇಳಿದರೆ ರಥಘೋಷವೂ ಕೂಡ ಮಾಹೇಂದ್ರಸ್ತೋತ್ರಕ್ಕೆ ಅವಯವವಾಗುತ್ತಿತ್ತು. ಆದರೆ 'ವೇದತ್ವೇ ಸತಿ ಮಂತ್ರೇಣ ಸಹ ಏಕಕಾರ್ಯಕಾರಿತ್ವಮ್' ಎಂಬುದಾಗಿ ನಾವು ಅವಯವತ್ವವನ್ನು ಹೇಳುತ್ತಿದ್ದೇವೆ. ರಥಘೋಷದಲ್ಲಿ ವೇದತ್ವ ಅಥವಾ ಮಂತ್ರತ್ವವು ಇರುವುದಿಲ್ಲ. ಆದರೆ ಓಂಕಾರಕ್ಕೆ ವೇದತ್ವ ಹಾಗೂ ವಾಕ್ಯತ್ವಗಳು ಇರುತ್ತವೆ. 'ವೇದತ್ವೇ ಸತಿ ಮಂತ್ರೇಣ ಸಹ ಏಕಕಾರ್ಯಕಾರಿತ್ವ'ರೂಪವಾದ ಅವಯವದ ಲಕ್ಷಣವು ಊಹ್ಯಮಾನವಾದ ಶಬ್ದಗಳಿಗೆ ಇರುತ್ತವೆ. ಇದನ್ನು ಆಪಾದನೆ ಮಾಡಿದರೆ ಅನಿಷ್ಟಾಪಾದನೆ ಆಗುತ್ತದೆ. ಪ್ರಕೃತ ನಾವು ಓಂಕಾರಕ್ಕೆ ವೇದತ್ವವನ್ನು ಹೇಳುವುದಿಲ್ಲ. ವಾಕ್ಯತ್ವವನ್ನು ಮಾತ್ರ ಹೇಳುತ್ತೇವೆ. 'ವಾಕ್ಯತ್ವೇ ಸತಿ ಬ್ರಹ್ಮವಿದ್ಯಯಾ ಸಹ ಏಕಕಾರ್ಯಕಾರಿತ್ವ'ರೂಪವಾದ ಅವಯವತ್ವವು ಇದ್ದೇ ಇರುತ್ತದೆ.

## ಓಂಕಾರದ ಅಧಿಕಾರವು ಅನಾವಶ್ಯಕ

ವಾಕ್ಯಾರ್ಥಚಂದ್ರಿಕಾ – ನನ್ವೇವಮಧ್ಯಾಹಾರಸ್ಯಾವಶ್ಯಕತ್ವೇऽಧ್ಯಾಹೃತಸ್ಯ 'ಛಿನದ್ಮಿ' ಇತ್ಯಾದೇಃ ಪ್ರಯೋಗದಶಾಯಾಮ್ ಉಚ್ಚಾರಣನಿಯಮವತ್ ಪ್ರತಿಸೂತ್ರಮೋಂಕಾರಸ್ಯ ನಿಯ-

ತೋಚ್ಚಾರಣಾಪತ್ತ್ಯಾ ಉತ್ತರತ್ರಾಧಿಕಾರಾಭಾವೇನ ಅಸಂಹಿತತಯಾ ನಿರ್ದೇಶಸ್ಯ ತತ್ಸೂಚಕತ್ವಂ ನ ಸಿದ್ಧ್ಯೇದಿತಿ ನಾನ್ಯಥಾಸಿದ್ಧಿರುಕ್ತಾ ಸ್ಯಾದಿತ್ಯತ ಆಹ – ತತಶ್ಚೇತಿ ॥

ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಲೇಬೇಕು. ಯಾವುದು ಅಧ್ಯಾಹೃತವೋ ಅದಕ್ಕೆ ಛಿನದ್ಮಿ ಇತ್ಯಾದಿಯಾಗಿ ಪ್ರಯೋಗ ದಶೆಯಲ್ಲಿ ಉಚ್ಚಾರಣೆ ಮಾಡಲೇಬೇಕೆಂಬ ನಿಯಮವಿದೆ. ಅದೇ ಪ್ರಕಾರ ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ನಿಯಮೇನ ಓಂಕಾರವನ್ನು ಉಚ್ಚಾರಣೆ ಮಾಡಲೇಬೇಕು. ಇದು ನಿಯಮದಿಂದ ಪ್ರಾಪ್ತವಾಗಿದೆ. ಇದಕ್ಕೆ ಅಧಿಕಾರವನ್ನು ಹೇಳುವ ಆವಶ್ಯಕತೆಯು ಇರುವುದಿಲ್ಲ. ಆದ್ದರಿಂದ ಅಧಿಕಾರಕ್ಕೋಸ್ಕರ ಅಸಂಹಿತತಯಾ ನಿರ್ದೇಶಮಾಡಿದ್ದು ಸಿದ್ಧವಾಗುವುದಿಲ್ಲ. ಪೂರ್ವಪಕ್ಷಿಗಳಿಗೆ ಅನ್ಯಥಾಸಿದ್ಧಿಯನ್ನು ಹೇಳಿದಂತಾಗುವುದಿಲ್ಲ? ಈ ಪ್ರಶ್ನೆಗೆ "ತತಶ್ಚ" ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

## ಊಹವು ಅನುಷಂಗಕ್ಕೆ ಪ್ರಯೋಜಕವಾಗಿದೆ; ಅನುಗತಿಯೇ ಊಹೆಯಲ್ಲ

ವಾಕ್ಯಾರ್ಥಚಂದ್ರಿಕಾ – ಅತ್ರ ತತಶ್ಚ ಗೌರವಂ ಸ್ಯಾತ್ ಇತ್ಯಧಿಕೃತತ್ವೇನೋಚ್ಚಾರ್ಯತ ಇತಿ ಲಾಘವತರ್ಕಸಹಕೃತೋಹಸ್ಯಾನುಷಂಗರೂಪಾಧಿಕೃತತ್ವೇನ ಉಚ್ಚಾರಣೇ ಪ್ರಯೋಜಕತ್ವೋಕ್ತ್ಯಾ ನ ಹ್ಯನುಗತಿರೂಹಃ । 'ಆಮ್ನಾಯಮಾನಂ ಹ್ಯನುಷಜ್ಯಮಾನಮ್' ಇತ್ಯನುಷಜ್ಯಮಾನಸ್ಯ ಮಂತ್ರತ್ವೋಕ್ತ್ಯಾ ಅನಾಮ್ನಾತೇಷ್ವಮಂತ್ರತ್ವಮ್ ಇತ್ಯೂಹಸ್ಯ ಅಮಂತ್ರತ್ವೋಕ್ತ್ಯಾ ಚಾನುಷಂಗೋಹಯೋರ್ಭೇದೇನ ವ್ಯವಹಾರಾತ್ ತದ್ವಿರೋಧ ಇತಿ ಕಸ್ಯಚಿತ್ ಪ್ರಲಪನಮಜ್ಞಾನಮೂಲಮಿತಿ ಸೂಚಿತಂ ಭವತಿ । ಯದರ್ಥಮೇತಾವದುಕ್ತಂ ತದಿದಾನೀಮಾಹ – ತಸ್ಯೇತಿ ॥

ಇಲ್ಲಿ "ತತಶ್ಚಗೌರವಂ ಸ್ಯಾತ್ ಇತಿ ಅಧಿಕೃತತ್ವೇನ ಉಚ್ಚಾರ್ಯತೇ" ಎಂಬುದಾಗಿ ಲಾಘವತರ್ಕಸಹಕೃತವಾದ ಊಹಕ್ಕೆ ಅನುಷಂಗರೂಪವಾದ ಅಧಿಕೃತತ್ವೇನ ಉಚ್ಚಾರಣೆಗೆ ಪ್ರಯೋಜಕತ್ವವನ್ನು ಹೇಳಿದ್ದರಿಂದ ಅನುಗತಿಯನ್ನೇ ಊಹವೆಂದಿದ್ದಾರೆಂದು ಸರ್ವಥಾ ತಿಳಿಯಬಾರದು. 'ಆಮ್ನಾಯಮಾನಂ ಹಿ ಅನುಷಜ್ಯಮಾನಂ' ಎಂಬುದಾಗಿ ಅನುಷಂಗಕ್ಕೆ ಮಂತ್ರತ್ವವನ್ನು ಹೇಳಿದ್ದಾರೆ. 'ಅನಾಮ್ನಾತೇಷ್ವಮಂತ್ರತ್ವಂ' ಎಂಬುದಾಗಿ ಊಹಕ್ಕೆ ಅಮಂತ್ರತ್ವವನ್ನು ಹೇಳಿದ್ದಾರೆ. ಇದರಿಂದ ಅನುಷಂಗವೇ ಬೇರೆ ಊಹೆಯೇ ಬೇರೆ ಎಂದು ಮೀಮಾಂಸಕರು ಒಪ್ಪಿದ್ದಾರೆ. ಅವರ ವ್ಯವಹಾರವಿರೋಧವು ನಿಮಗೆ

ಬರುತ್ತದಲ್ಲವೇ ಎಂಬ ಯಾರೋ ಒಬ್ಬ ಪೂರ್ವಪಕ್ಷಕಾರನ ಪ್ರಲಾಪವು ಅಜ್ಞಾನಮೂಲಕವೆಂದು ಇದರಿಂದ ಸೂಚಿಸಿದಂತಾಯಿತು. ಇಲ್ಲಿಯ ತನಕ ಯಾವುದಕ್ಕೋಸ್ಕರ ಶ್ಲೋಕಾಭಿಪ್ರಾಯವನ್ನು "ಏತದುಕ್ತಂ ಭವತಿ" ಎಂಬುದರಿಂದ ಸಂಗ್ರಹಿಸಿದರೋ ಆ ಪ್ರಯೋಜನವನ್ನು "ತಸ್ಯ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ – ಚಂದ್ರಿಕಾ ಹಾಗೂ ಸುಧಾಗ್ರಂಥದ ಮೇಲೆ ಕೆಲವು ಆಧುನಿಕರು ಪ್ರಶ್ನಿಸಿದ್ದನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ – ಅನುಗತಿಯೇ ಬೇರೆ, ಊಹವೇ ಬೇರೆ. 'ಆಮ್ನಾಯಮಾನಂ ಹಿ ಅನುಷಜ್ಯಮಾನಂ' ಎಂಬುದಾಗಿ ಅನುಷಜ್ಯಮಾನವಾದದ್ದಕ್ಕೆ ಮಂತ್ರತ್ವವನ್ನು ಹೇಳಬೇಕು. 'ಅನಾಮ್ನಾತೇಷ್ವಮಂತ್ರತ್ವಂ' ಎಂಬುದಾಗಿ ಊಹಕ್ಕೆ ಅಮಂತ್ರತ್ವವನ್ನು ಹೇಳಲಾಗಿದೆ. ಅನುಷಜ್ಯಮಾನವಾದದ್ದಕ್ಕೆ ಮಂತ್ರತ್ವವನ್ನು ಊಹ್ಯಮಾನವಾದದ್ದಕ್ಕೆ ಮಂತ್ರತ್ವವು ಇಲ್ಲವೆಂದು ಮೀಮಾಂಸಕರು ಹೇಳಿದ್ದಾರೆ. ಇದರಿಂದ ಅನುಷಂಗವೇ ಬೇರೆ ಊಹವೇ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ಆದರೆ ನೀವು ಓಂಕಾರವನ್ನು ಊಹೆ ಮಾಡಬೇಕು. ಮತ್ತು ಅನುವೃತ್ತಿ ಮಾಡಬೇಕೆಂದು ಹೇಳುತ್ತಿದ್ದೀರಿ. ಇದರಿಂದ ಊಹೆಯನ್ನೇ ಅನುಷಂಗವೆಂದು ನೀವು ಹೇಳಿದಂತಾಯಿತು. ಆದ್ದರಿಂದ ಗ್ರಂಥದಲ್ಲಿ ಹೇಳಿದ್ದು ಹೇಗೆ ಸಮಂಜಸವಾಗುತ್ತದೆ? ಇವರ ಹುರುಳಿಲ್ಲದ ಈ ಆಕ್ಷೇಪವು ಅಜ್ಞಾನಮೂಲಕವಾಗಿದೆ. ನಾವು ಊಹೆಯನ್ನು ಅನುಷಂಗವೆಂದು ಹೇಳಿಯೇ ಇಲ್ಲ. ಪ್ರತಿಸೂತ್ರಗಳಲ್ಲಿಯೂ ಅಧ್ಯಾಹಾರಮಾಡಬೇಕಾದ ಓಂಕಾರವನ್ನು ಒಂದು ಕಡೆ ಮಾತ್ರ ಉಚ್ಚಾರಣೆ ಮಾಡಬೇಕು. ಎಲ್ಲಾ ಕಡೆಯೂ ಉಚ್ಚಾರಣೆ ಮಾಡಿದರೆ ಗೌರವವು ಬರುತ್ತದೆ. ಒಮ್ಮೆ ಮಾತ್ರ ಅಸಂಹಿತತಯಾ ಉಚ್ಚಾರಣೆ ಮಾಡಿ ಎಲ್ಲೆಡೆಯೂ ಅನುವೃತ್ತಿಯನ್ನು ಹೇಳುತ್ತಿದ್ದೇವೆ ಹೊರತು, ಊಹವೇ ಅನುಷಂಗ, ಅನುಷಂಗವೇ ಊಹವೆಂದು ಹೇಳಿಯೇ ಇಲ್ಲ. ಆದ್ದರಿಂದ ಇವರ ಪ್ರಲಾಪವು ಅಸಂಗತವಾಗಿದೆ.

'ಪ್ರವತ್ಯನೋಂಕೃತಂ ಬ್ರಹ್ಮ' ಎಂಬ ಅರ್ಥವಾದವಾಕ್ಯದ ಬಲದಿಂದ ಊಹವನ್ನು ಮಾಡುತ್ತೇವೆ. ಇದು ಕೇವಲ ಊಹವಲ್ಲ. ಲಾಘವತರ್ಕಸಹಕೃತವಾದ ಊಹವಾಗಿದೆ. ಸಾಮಾನ್ಯವಾಗಿ ಊಹೆಯು ಉಚ್ಚಾರಣೆಗೆ ಪ್ರಯೋಜಕವಾಗಿರುತ್ತದೆ. ಊಹ್ಯಮಾನವಾದ ಶಬ್ದಗಳೆಲ್ಲವನ್ನೂ ಉಚ್ಚಾರಣೆ ಮಾಡಬೇಕು. ಆದ್ದರಿಂದ ಊಹೆಯು ಉಚ್ಚಾರಣೆಗೆ ಪ್ರಯೋಜಕವಾಗುತ್ತದೆ. ಆದರೆ ಅಧಿಕೃತತ್ವೇನ ಉಚ್ಚಾರಣೆಗೆ ಲಾಘವತರ್ಕಸಹಕೃತವಾದ ಊಹವು ಪ್ರಯೋಜಕವಾಗಿದೆ. ಊಹಸಾಮಾನ್ಯವು ಉಚ್ಚಾರಣಸಾಮಾನ್ಯಕ್ಕೆ ಪ್ರಯೋಜಕವಾಗುತ್ತದೆ. ಲಾಘವತರ್ಕಸಹಕೃತವಾದ ಊಹೆಯು ಅಧಿಕೃತತ್ವೇನ ಉಚ್ಚಾರಣೆಗೆ ಪ್ರಯೋಜಕವಾಗುತ್ತದೆ. ಪ್ರಕೃತ ಪ್ರಥಮಸೂತ್ರದಲ್ಲಿ ಅಸಂಹಿತತಯಾ ಓಂಕಾರವನ್ನು

ಹೇಳಲಾಗಿದೆ. ಅಸಂಹಿತತಯಾ ಉಚ್ಚಾರಣೆಯೆಂದರೂ ಅಧಿಕೃತತ್ವೇನ ಉಚ್ಚಾರಣೆಯೆಂದರೂ ಕೂಡ ಒಂದೆಯೇ ಆಗಿದೆ. ಅನುಷಂಗಮಾಡುವುದಕ್ಕಾಗಿ ಹೀಗೆ ಅಸಂಹಿತತಯಾ ಉಚ್ಚಾರಣೆ ಮಾಡ-ಲಾಗುತ್ತದೆ. ಪ್ರತಿಸೂತ್ರದಲ್ಲಿ ಉಚ್ಚಾರಣೆ ಮಾಡಿದರೆ ಗೌರವವು ಬರುತ್ತದೆ. ಆದ್ದರಿಂದ ಲಾಘವವೂ ಕೂಡ ಇರಬೇಕು. ಹೀಗೆ ಲಾಘವವು ಇರುವುದರಿಂದ ಪ್ರಥಮಸೂತ್ರದಲ್ಲಿ ಅನುಷಂಗಕ್ಕೋಸ್ಕರ ಓಂಕಾರವನ್ನು ಅಸಂಹಿತತಯಾ ಉಚ್ಚಾರಣೆ ಮಾಡಬೇಕು ಎಂಬ ವಿವಕ್ಷೆಯನ್ನು ಹೊಂದಿದ್ದಾರೆ. ಹೀಗೆ ಊಹವು ಅನುಷಂಗಕ್ಕೆ ಪ್ರಯೋಜಕವೆಂದಷ್ಟೇ ನಾವು ಹೇಳಿದ್ದೇವೆ. ಊಹವನ್ನೇ ಅನುಷಂಗವೆಂದು ಹೇಳದ ಕಾರಣ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

## 'ಏತದುಕ್ತಂ ಭವತಿ' ಎಂಬ ಗ್ರಂಥವು ಸಾರ್ಥಕವಾಯಿತು

ವಾಕ್ಯಾರ್ಥಚಂದ್ರಿಕಾ – ಅಧಿಕಾರೇ ಜ್ಞಾಪಕಾಂತರಂ ಶಂಕತೇ – ನ ಚೇತಿ ॥ ಅಂತರಂಗೇತಿ ॥ ವಾಕ್ಯಸ್ಯ ನಿರ್ದೇಶಾಪೇಕ್ಷಯಾ ವ್ಯಾಖ್ಯಾನಸ್ಯ ಬಹಿರಂಗತ್ವಾದಿತಿ ಭಾವಃ । ಅಸ್ತ್ವಯಂ ವಾಕ್ಯಾಭಿ-ಪ್ರಾಯಃ, ತಾವತಾಽಪಿ ಅನುಮಾನೇ ದೂಷಣಂ ಕಿಮುಕ್ತಂ ಭವತಿ? ಇತ್ಯತ ಆಹ – ತದನೇನೇತಿ ॥

ಓಂಕಾರವು ಅಧಿಕಾರವನ್ನು ಹೊಂದುತ್ತದೆ ಎಂಬ ವಿಷಯದಲ್ಲಿ ಮತ್ತೊಂದು ಜ್ಞಾಪಕವನ್ನು "ನಚ" ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. "ಅಂತರಂಗ" – ವಾಕ್ಯದ ನಿರ್ದೇಶವನ್ನು ಅಪೇಕ್ಷೆ ಪಡುವುದರಿಂದ ವ್ಯಾಖ್ಯಾನವು ಬಹಿರಂಗವಾಗಿರುತ್ತದೆ ಎಂದಭಿಪ್ರಾಯ. ಅನುವ್ಯಾಖ್ಯಾನಕ್ಕೆ ನೀವು ಹೇಳಿದ ಅಭಿಪ್ರಾಯವನ್ನು ಸಮಂಜಸವೆಂದು ಅಂಗೀಕರಿಸೋಣ ಇದರಿಂದ ಪೂರ್ವಪಕ್ಷಿಗಳ ಅನು-ಮಾನಕ್ಕೆ ಯಾವ ದೋಷವನ್ನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ "ತದನೇನ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

## ಊಹಶಬ್ದಕ್ಕೆ ಕರ್ಮವ್ಯುತ್ಪತ್ತಿಯನ್ನು ಆಶ್ರಯಿಸಬಾರದು; ಭಾವವ್ಯುತ್ಪತ್ತಿಯನ್ನು ಆಶ್ರಯಿಸಬೇಕು

ಯಾದುಪತ್ಯ – ಅರ್ಥವಾದೋ ನಿಂದಾರೂಪಃ । ಊಹಃ ಕರ್ತವ್ಯ ಇತಿ ॥ ಯದ್ಯಪ್ಯತ್ರ 'ಮಂತ್ರಸಾಮಸಂಸ್ಕಾರೋಹಃ' ಇತ್ಯಾದಾವಿವ ಊಹಶಬ್ದೋ ನ ಕರ್ಮವ್ಯುತ್ಪತ್ತ್ಯೋಹ್ಯಮಾನಪರಃ 'ಸೂರ್ಯಾಯ' ಇತ್ಯಾದ್ಯೂಹಂ ಪ್ರತಿ 'ಅಗ್ನಯೇ' ಇತ್ಯಾದೇರಿವ ಪ್ರಕೃತೇ ಸ್ಥಾನಿನೋಽಭಾವೇನ –

'ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ ।
ಊಹಃ ಪ್ರಯೋಗೋ ವಿಕೃತ ಊಹ್ಯಮಾನತಯೋದಿತಃ ॥'

ಇತಿ ತದೂಹಲಕ್ಷಣಾಭಾವಾತ್ । ತಥಾಽಪಿ 'ಅಧ್ಯಾಹಾರಸ್ತರ್ಕ ಊಹಃ' ಇತಿ ಪ್ರಸಿದ್ಧೇ-ರ್ಭಾವವ್ಯುತ್ಪತ್ತ್ಯಾ ಅಧ್ಯಾಹಾರಪರೋ ವಿವಕ್ಷಿತಃ ।

ಅರ್ಥವಾದವೆಂದರೆ ನಿಂದಾರೂಪವೆಂದು ವಿವಕ್ಷಿಸಬೇಕು. 'ಊಹಃ ಕರ್ತವ್ಯಃ' – ವಾಸ್ತವಿಕ-ವಾಗಿ ಇಲ್ಲಿ 'ಮಂತ್ರಸಾಮಸಂಸ್ಕಾರೋಹಃ' ಎಂಬಲ್ಲಿ ಹೇಳಿದಂತೆ 'ಊಹ್ಯತೇ ಇತಿ ಊಹಃ' ಎಂಬುದಾಗಿ ಕರ್ಮವ್ಯುತ್ಪತ್ತಿಯನ್ನು ಮಾಡಬಾರದು. 'ಅಗ್ನಯೇ' ಇತ್ಯಾದಿ ಪದಸ್ಥಾನದಲ್ಲಿ ಊಹ್ಯಮಾನವಾದ 'ಸೂರ್ಯಾಯ' ಇತ್ಯಾದಿ ಪದಗಳನ್ನು ಊಹ್ಯಮಾನತ್ವ ಎಂಬ ಕರ್ಮವ್ಯುತ್ಪತ್ತಿಯಿಂದ ಊಹ ಎಂದು ಕರೆಯುತ್ತಾರೆ. ಅದೇ ರೀತಿಯಾಗಿ 'ಊಹಃ ಕರ್ತವ್ಯಃ' ಎಂಬಲ್ಲಿ ಊಹ ಎಂಬ ಶಬ್ದಕ್ಕೆ ಊಹ್ಯಮಾನ ಎಂಬ ಅರ್ಥವನ್ನು ವಿವಕ್ಷಿಸಬಾರದು. ಏಕೆಂದರೆ ಸ್ಥಾನಿಯು ಇರುವುದಿಲ್ಲ. ಸ್ಥಾನಿ ಇದ್ದಾಗ ಮಾತ್ರ ಕರ್ಮವ್ಯುತ್ಪತ್ತಿಯನ್ನು ಆಶ್ರಯಿಸಬೇಕು. ಮತ್ತೇನೆಂದರೆ 'ಅಧ್ಯಾಹಾರಸ್ತರ್ಕಃ ಊಹಃ' ಎಂಬುದಾಗಿ ಹೇಳಿದಂತೆ ಭಾವವ್ಯುತ್ಪತ್ತಿಯಿಂದ ಅಧ್ಯಾಹಾರ ಎಂಬರ್ಥವನ್ನೇ ವಿವಕ್ಷಿಸಬೇಕು.

'ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ ।
ಊಹಃ ಪ್ರಯೋಗೋ ವಿಕೃತ ಊಹ್ಯಮಾನತಯೋದಿತಃ ॥

ಎಂಬ ಊಹಲಕ್ಷಣವು ಓಂಕಾರದಲ್ಲಿ ಇರುವುದಿಲ್ಲ.

## ಮೀಮಾಂಸಕರಿಗೆ ಮಾಡಿದ ಆಪಾದನೆಯು ಇಷ್ಟಾಪತ್ತಿ ಎನ್ನಲಾಗದು

ಯಾದುಪತ್ಯ – ನ ಚ 'ಇಷೇತ್ವಾ' ಇತ್ಯಾದಾವಿವ ವಸ್ತ್ವಾಕಾಂಕ್ಷಾಭಾವಾದ್ ಅಧ್ಯಾ-ಹಾರೋ ವ್ಯರ್ಥ ಇತಿ ವಾಚ್ಯಮ್ । ದೃಷ್ಟಾರ್ಥಾಭಾವೇಽಪಿ ಉದಾಹೃತಶ್ರುತ್ಯಾ ಪ್ರವಣವಿಶರಣಾ-ಭಾವರೂಪಾದೃಷ್ಟಾರ್ಥಸಂಪಾದಕತಯಾ ಸಾರ್ಥಕತ್ವಾತ್ ।

ಅಮಂತ್ರಾವಯವತ್ವಪ್ರಸಂಗಾದಿತಿ ॥ ಅತ್ರ ಆಪಾದ್ಯಮಾನಂ ಮಂತ್ರಾನವಯವತ್ವಂ ಮಂತ್ರೇಣ ಸಹೈಕಕಾರ್ಯಕಾರಿತ್ವಾಭಾವರೂಪಂ ವಿವಕ್ಷಿತಮ್ । ತೇನ 'ಊಹಪ್ರವರನಾಮ-ಧೇಯಾನಾಮ್ ಅಮಂತ್ರತ್ವಸ್ಯ' ದ್ವಿತೀಯೇ ಸಿದ್ಧಾಂತಿತತ್ವಾತ್ ಇಷ್ಟಾಪಾದನಮೇತತ್ ಇತಿ ದೂಷ-ಣಾನವಕಾಶ ಇತಿ ಧ್ಯೇಯಮ್ ।

ಹೇಳಲಾಗಿದೆ. ಅಸಂಹಿತತಯಾ ಉಚ್ಚಾರಣೆಯೆಂದರೂ ಆಧಿಕ್ಯತತ್ವೇನ ಉಚ್ಚಾರಣೆಯೆಂದರೂ ಕೂಡ ಒಂದೆಯೇ ಆಗಿದೆ. ಅನುಷಂಗಮಾಡುವುದಕ್ಕಾಗಿ ಹೀಗೆ ಅಸಂಹಿತತಯಾ ಉಚ್ಚಾರಣೆ ಮಾಡ-ಲಾಗುತ್ತದೆ. ಪ್ರತಿಸೂತ್ರದಲ್ಲಿ ಉಚ್ಚಾರಣೆ ಮಾಡಿದರೆ ಗೌರವವು ಬರುತ್ತದೆ. ಆದ್ದರಿಂದ ಲಾಘವವೂ ಕೂಡ ಇರಬೇಕು. ಹೀಗೆ ಲಾಘವವು ಇರುವುದರಿಂದ ಪ್ರಥಮಸೂತ್ರದಲ್ಲಿ ಅನುಷಂಗಕ್ಕೋಸ್ಕರ ಓಂಕಾರವನ್ನು ಅಸಂಹಿತತಯಾ ಉಚ್ಚಾರಣೆ ಮಾಡಬೇಕು ಎಂಬ ವಿವಕ್ಷೆಯನ್ನು ಹೊಂದಿದ್ದಾರೆ. ಹೀಗೆ ಊಹವು ಅನುಷಂಗಕ್ಕೆ ಪ್ರಯೋಜಕವೆಂದಷ್ಟೇ ನಾವು ಹೇಳಿದ್ದೇವೆ. ಊಹವನ್ನೇ ಅನುಷಂಗವೆಂದು ಹೇಳದ ಕಾರಣ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

## 'ಏತದುಕ್ತಂ ಭವತಿ' ಎಂಬ ಗ್ರಂಥವು ಸಾರ್ಥಕವಾಯಿತು

**ವಾಕ್ಯಾರ್ಥಚಂದ್ರಿಕಾ – ಅಧಿಕಾರೇ ಜ್ಞಾಪಕಾಂತರಂ ಶಂಕತೇ – ನ ಚೇತಿ ॥ ಅಂತರಂಗೇತಿ ॥ ವಾಕ್ಯಸ್ಯ ನಿರ್ದೇಶಾಪೇಕ್ಷಯಾ ವ್ಯಾಖ್ಯಾನಸ್ಯ ಬಹಿರಂಗತ್ವಾದಿತಿ ಭಾವಃ । ಅಸ್ತ್ವಯಂ ವಾಕ್ಯಾಭಿ-ಪ್ರಾಯಃ, ತಾವತಾऽಪಿ ಅನುಮಾನೇ ದೂಷಣಂ ಕಿಮುಕ್ತಂ ಭವತಿ? ಇತ್ಯತ ಆಹ – ತದನೇನೇತಿ ॥**

ಓಂಕಾರವು ಅಧಿಕಾರವನ್ನು ಹೊಂದುತ್ತದೆ ಎಂಬ ವಿಷಯದಲ್ಲಿ ಮತ್ತೊಂದು ಜ್ಞಾಪಕವನ್ನು "ನಚ" ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. "ಅಂತರಂಗ" – ವಾಕ್ಯದ ನಿರ್ದೇಶವನ್ನು ಅಪೇಕ್ಷೆ ಪಡುವುದರಿಂದ ವ್ಯಾಖ್ಯಾನವು ಬಹಿರಂಗವಾಗಿರುತ್ತದೆ ಎಂದಭಿಪ್ರಾಯ. ಅನುವ್ಯಾಖ್ಯಾನಕ್ಕೆ ನೀವು ಹೇಳಿದ ಅಭಿಪ್ರಾಯವನ್ನು ಸಮಂಜಸವೆಂದು ಅಂಗೀಕರಿಸೋಣ ಇದರಿಂದ ಪೂರ್ವಪಕ್ಷಿಗಳ ಅನು-ಮಾನಕ್ಕೆ ಯಾವ ದೋಷವನ್ನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ "ತದನೇನ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

## ಊಹಶಬ್ದಕ್ಕೆ ಕರ್ಮವ್ಯುತ್ಪತ್ತಿಯನ್ನು ಆಶ್ರಯಿಸಬಾರದು; ಭಾವವ್ಯುತ್ಪತ್ತಿಯನ್ನು ಆಶ್ರಯಿಸಬೇಕು

**ಯಾದುಪತ್ಯ – ಅರ್ಥವಾದೋ ನಿಂದಾರೂಪಃ । ಊಹಃ ಕರ್ತವ್ಯ ಇತಿ ॥ ಯದ್ಯಪ್ಯತ್ರ 'ಮಂತ್ರಸಾಮಸಂಸ್ಕಾರೋಹಃ' ಇತ್ಯಾದಾವಿವ ಊಹಶಬ್ದೋ ನ ಕರ್ಮವ್ಯುತ್ಪತ್ತ್ಯೋಹ್ಯಮಾನಪರಃ 'ಸೂರ್ಯಾಯ' ಇತ್ಯಾದ್ಯೂಹಂ ಪ್ರತಿ 'ಅಗ್ನಯೇ' ಇತ್ಯಾದೇರಿವ ಪ್ರಕೃತೇ ಸ್ಥಾನಿನೋऽಭಾವೇನ –**

'ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ ।
ಊಹಃ ಪ್ರಯೋಗೋ ವಿಕೃತ ಊಹ್ಯಮಾನತಯೋದಿತಃ ॥'

ಇತಿ ತದೂಹಲಕ್ಷಣಾಭಾವಾತ್ । ತಥಾಽಪಿ 'ಅಧ್ಯಾಹಾರಸ್ತರ್ಕ ಊಹಃ' ಇತಿ ಪ್ರಸಿದ್ಧೇ-ರ್ಭಾವವ್ಯುತ್ಪತ್ತ್ಯಾ ಅಧ್ಯಾಹಾರಪರೋ ವಿವಕ್ಷಿತಃ ।

ಅರ್ಥವಾದವೆಂದರೆ ನಿಂದಾರೂಪವೆಂದು ವಿವಕ್ಷಿಸಬೇಕು. 'ಊಹಃ ಕರ್ತವ್ಯಃ' – ವಾಸ್ತವಿಕ-ವಾಗಿ ಇಲ್ಲಿ 'ಮಂತ್ರಸಾಮಸಂಸ್ಕಾರೋಹಃ' ಎಂಬಲ್ಲಿ ಹೇಳಿದಂತೆ 'ಊಹ್ಯತೇ ಇತಿ ಊಹಃ' ಎಂಬುದಾಗಿ ಕರ್ಮವ್ಯುತ್ಪತ್ತಿಯನ್ನು ಮಾಡಬಾರದು. 'ಅಗ್ನಯೇ' ಇತ್ಯಾದಿ ಪದಸ್ಥಾನದಲ್ಲಿ ಊಹ್ಯಮಾನವಾದ 'ಸೂರ್ಯಾಯ' ಇತ್ಯಾದಿ ಪದಗಳನ್ನು ಊಹ್ಯಮಾನತ್ವ ಎಂಬ ಕರ್ಮವ್ಯುತ್ಪತ್ತಿಯಿಂದ ಊಹ ಎಂದು ಕರೆಯುತ್ತಾರೆ. ಅದೇ ರೀತಿಯಾಗಿ 'ಊಹಃ ಕರ್ತವ್ಯಃ' ಎಂಬಲ್ಲಿ ಊಹ ಎಂಬ ಶಬ್ದಕ್ಕೆ ಊಹ್ಯಮಾನ ಎಂಬ ಅರ್ಥವನ್ನು ವಿವಕ್ಷಿಸಬಾರದು. ಏಕೆಂದರೆ ಸ್ಥಾನಿಯು ಇರುವುದಿಲ್ಲ. ಸ್ಥಾನಿ ಇದ್ದಾಗ ಮಾತ್ರ ಕರ್ಮವ್ಯುತ್ಪತ್ತಿಯನ್ನು ಆಶ್ರಯಿಸಬೇಕು. ಮತ್ತೇನೆಂದರೆ 'ಅಧ್ಯಾಹಾರಸ್ತರ್ಕಃ ಊಹಃ' ಎಂಬುದಾಗಿ ಹೇಳಿದಂತೆ ಭಾವವ್ಯುತ್ಪತ್ತಿಯಿಂದ ಅಧ್ಯಾಹಾರ ಎಂಬರ್ಥವನ್ನೇ ವಿವಕ್ಷಿಸಬೇಕು.

'ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ ।
ಊಹಃ ಪ್ರಯೋಗೋ ವಿಕೃತ ಊಹ್ಯಮಾನತಯೋದಿತಃ ॥

ಎಂಬ ಊಹಲಕ್ಷಣವು ಓಂಕಾರದಲ್ಲಿ ಇರುವುದಿಲ್ಲ.

## ಮೀಮಾಂಸಕರಿಗೆ ಮಾಡಿದ ಆಪಾದನೆಯು ಇಷ್ಟಾಪತ್ತಿ ಎನ್ನಲಾಗದು

ಯಾದುಪತ್ಯ – ನ ಚ 'ಇಷೇತ್ವಾ' ಇತ್ಯಾದಾವಿವ ವಸ್ತ್ವಾಕಾಂಕ್ಷಾಭಾವಾದ್ ಅಧ್ಯಾ-ಹಾರೋ ವ್ಯರ್ಥ ಇತಿ ವಾಚ್ಯಮ್ । ದೃಷ್ಟಾರ್ಥಾಭಾವೇಽಪಿ ಉದಾಹೃತಶ್ರುತ್ಯಾ ಸ್ರವಣವಿಶರಣಾ-ಭಾವರೂಪಾದೃಷ್ಟಾರ್ಥಸಂಪಾದಕತಯಾ ಸಾರ್ಥಕತ್ವಾತ್ ।

ಅಮಂತ್ರಾವಯವತ್ವಪ್ರಸಂಗಾದಿತಿ ॥ ಅತ್ರ ಆಪಾದ್ಯಮಾನಂ ಮಂತ್ರಾನವಯವತ್ವಂ ಮಂತ್ರೇಣ ಸಹೈಕಕಾರ್ಯಕಾರಿತ್ವಾಭಾವರೂಪಂ ವಿವಕ್ಷಿತಮ್ । ತೇನ 'ಊಹಪ್ರವರನಾಮ-ಧೇಯಾನಾಮ್ ಅಮಂತ್ರತ್ವಸ್ಯ' ದ್ವಿತೀಯೇ ಸಿದ್ಧಾಂತಿತತ್ವಾತ್ ಇಷ್ಟಾಪಾದನಮೇತತ್ ಇತಿ ದೂಷ-ಣಾನವಕಾಶ ಇತಿ ಧ್ಯೇಯಮ್ ।

'ಇಷೇ ತ್ವಾ' ಇತ್ಯಾದಿ ಸ್ಥಳಗಳಲ್ಲಿ ಛಿನತ್ತಿ ಇತ್ಯಾದಿ ಕ್ರಿಯಾಪದವನ್ನು ಅಧ್ಯಾಹಾರ ಮಾಡುತ್ತೇವೆ. ಏಕೆಂದರೆ ಆಕಾಂಕ್ಷೆಯು ಇರುತ್ತದೆ. ಎಲ್ಲಿ ಅಧ್ಯಾಹಾರ ಮಾಡಬೇಕೋ ಅಲ್ಲಿ ಆಕಾಂಕ್ಷೆಯು ಇರಬೇಕು. ಪ್ರಕೃತ ಓಂಕಾರದ ಬಗ್ಗೆ ಆಕಾಂಕ್ಷೆಯೇ ಇಲ್ಲದ ಕಾರಣ ಅಧ್ಯಾಹಾರ ಮಾಡುವುದು ವ್ಯರ್ಥವಲ್ಲವೇ?

ಹೀಗೆ ಪ್ರಶ್ನಿಸಬಾರದು. ಓಂಕಾರದ ಅಧ್ಯಾಹಾರಕ್ಕೆ ದೃಷ್ಟಪ್ರಯೋಜನವು ಇಲ್ಲದಿದ್ದರೂ ಕೂಡ 'ಸ್ರವಣ ವಿಶರಣ'ವೆಂಬ ಅದೃಷ್ಟಾರ್ಥಪ್ರಯೋಜನವು ಇರುವುದರಿಂದ ಓಂಕಾರದ ಅಧ್ಯಾಹಾರವು ಸಾರ್ಥಕವಾಗುತ್ತದೆ. ಅದೃಷ್ಟಾರ್ಥಪ್ರಯೋಜನವಿದ್ದಾಗ ಆಕಾಂಕ್ಷೆಯು ಅನಾವಶ್ಯಕ.

"ಅಮಂತ್ರಾವಯತ್ವಪ್ರಸಂಗಾತ್" – ಇಲ್ಲಿ ಆಪಾದನೆ ಮಾಡುತ್ತಿರುವ ಮಂತ್ರಾನವಯವತ್ವವು ಮಂತ್ರೇಣ ಸಹ ಏಕಕಾರ್ಯಕಾರಿತ್ವಾಭಾವರೂಪವಾಗಿ ವಿವಕ್ಷಿಸಿದ್ದೇವೆ. ಆದ್ದರಿಂದ 'ಊಹಪ್ರವರ-ನಾಮಧೇಯಾನಾಮ್ ಅಮಂತ್ರತ್ವಸ್ಯ' ಎಂಬ ಎರಡನೆಯ ಅಧ್ಯಾಯದ ಮೀಮಾಂಸಾಸೂತ್ರದಲ್ಲಿ ಸಿದ್ಧಾಂತಮಾಡಿದ್ದು ನಮಗೆ ಅಭಿಪ್ರೇತವೇ ಆಗಿದೆ. ಮಂತ್ರೇಣ ಸಹ ಏಕಕಾರ್ಯಕಾರಿತ್ವರೂಪವಾದ ಅನವಯವತ್ವವು ಮೀಮಾಂಸಕರಿಗೆ ಅಭಿಮತವೇ ಆಗಿರುವುದರಿಂದ ತದಭಾವವನ್ನು ನಾವು ಆಪಾದನೆ ಮಾಡುತ್ತಿರುವುದರಿಂದ ಇಷ್ಟಾಪತ್ತಿ ಎಂದು ಹೇಳಲು ಸಾಧ್ಯವಾಗುವುದಿಲ್ಲ.

ವಿವರಣೆ – ಊಹ್ಯಮಾನವಾದ ಓಂಕಾರವು ಸೂತ್ರದ ಅವಯವವೇ ಆಗಿದೆ. ಒಂದು ವೇಳೆ ಊಹ್ಯಮಾನವಾದ ಓಂಕಾರವು ಸೂತ್ರಾವಯವ ಆಗದೇ ಇದ್ದರೆ ಮಂತ್ರಗಳಲ್ಲಿ ಊಹಿಸಲ್ಪಡುವ ಸೂರ್ಯಾಯ ಇತ್ಯಾದಿ ಪದಗಳೂ ಕೂಡ ಅವಯವ ಆಗದೇ ಇರಬೇಕಾದೀತು!! ಎಂಬುದಾಗಿ ಆಪಾದನೆಯನ್ನು ಟೀಕೆಯಲ್ಲಿ ತೋರಿಸಲಾಗಿದೆ. ಆದರೆ ಮೀಮಾಂಸಕರು ಇದನ್ನು ಇಷ್ಟಾಪತ್ತಿ ಎನ್ನು-ತ್ತಾರೆ. ಏಕೆಂದರೆ 'ಊಹಪ್ರವರನಾಮಧೇಯಾನಾಂ ಅಮಂತ್ರತ್ವಸ್ಯ' ಎಂಬ ಸೂತ್ರದ ಪ್ರಕಾರ ಊಹೆ ಮಾಡಿದ ಪದಗಳಿಗೆ ಅಮಂತ್ರತ್ವವನ್ನೇ ಒಪ್ಪಿದ್ದಾರೆ. ಹೀಗಿರುವಾಗ ಮೀಮಾಂಸಕರಿಗೆ ಇದು ಹೇಗೆ ಅನಿಷ್ಟಾಪಾದನೆ ಆಗುತ್ತದೆ?

ಸಮಾಧಾನವನ್ನು ಹೀಗೆ ತಿಳಿಯಬೇಕು – ಟೀಕೆಯಲ್ಲಿ ಮಾಡುತ್ತಿರುವ ಅನವಯವತ್ವದ ಆಪಾದನೆಯು ಮಂತ್ರೇಣ ಸಹ ಏಕಕಾರ್ಯಕಾರಿತ್ವಾಭಾವರೂಪದ್ದಾಗಿದೆ. ಈ ಆಪಾದನೆಯು ಮೀಮಾಂಸಕರಿಗೆ ಅನಿಷ್ಟವೇ ಆಗಿದೆ. ಊಹ್ಯಮಾನವಾದ ಶಬ್ದಗಳಿಗೆ ಏಕಕಾರ್ಯಕಾರಿತ್ವರೂಪವಾದ ಅವಯವತ್ವವು ಮೀಮಾಂಸಕರಿಗೆ ಅಭಿಪ್ರೇತವೇ ಆಗಿದೆ. ತದಭಾವವನ್ನು ಆಪಾದನೆ ಮಾಡುವುದು ಇಷ್ಟಾಪತ್ತಿ ಆಗುವುದಿಲ್ಲ. (ತಾತ್ಪರ್ಯಚಂದ್ರಿಕೆಯ ಜಿಜ್ಞಾಸಾಧಿಕರಣದಲ್ಲಿ ಇದರ ಹೆಚ್ಚಿನ ವಿಚಾರವಿದೆ).

## ಓಂಕಾರಕ್ಕೆ ಮುಂದಿನ ಸೂತ್ರಗಳಲ್ಲಿ ಅನುವೃತ್ತಿ ಇದ್ದರೂ ಕೂಡ ಅನ್ವಯವಿರುವುದಿಲ್ಲ.

ಯಾದುಪತ್ಯ – ಅಧಿಕೃತತ್ವೇನೇತಿ ।। 'ಙ್ಯಾಪ್ ಪ್ರಾತಿಪದಿಕಾತ್' ಇತ್ಯಾದಾವಿವ ಉತ್ತರತ್ರಾನುಷಂಗಾರ್ಥತ್ವೇನ ಇತ್ಯರ್ಥಃ । ನ ಚೈವಮೋಂಕಾರಸ್ಯ ತದ್ವದೇವ ಉತ್ತರಸೂತ್ರೇಷ್ವಪಿ ಅನ್ವಯಪ್ರಸಂಗಃ। ಅನನ್ವಯೇಽಪಿ ಅದೃಷ್ಟಾರ್ಥಮೇವಾನುಷಂಗಸ್ಯೋಕ್ತಶ್ರುತಿಸಿದ್ಧತ್ವಾತ್ ।

ನ ಚ ವ್ಯಾಖ್ಯಾನತ ಇತಿ ॥ 'ಶ್ರೌತಾರ್ಥವಾದಾನುಸಾರಿವ್ಯಾಖ್ಯಾನತಃ' ಇತ್ಯರ್ಥಃ। ಅಂತ-ರಂಗೇತಿ ॥ ಪೃಥಕ್ಕರಣಮೇವಾತ್ರ ಅಂತರಂಗಜ್ಞಾಪಕಮಿತಿ ಭಾವಃ ॥

'ಙ್ಯಾಪ್ ಪ್ರಾತಿಪದಿಕಾತ್' ಇತ್ಯಾದಿಗಳಲ್ಲಿ ಮುಂದೆ ಅನುವೃತ್ತಿಯಾಗುವುದಕ್ಕೋಸ್ಕರವೇ ಅಸಂಹಿತತಯಾ ಹೇಳುತ್ತಾರೆ. ಅದರಂತೆ ಓಂಕಾರವೂ ಕೂಡ ಮುಂದಿನ ಸೂತ್ರಗಳಲ್ಲಿ ಅನುವೃತ್ತಿ-ಯಾಗಬೇಕೆಂಬ ಉದ್ದೇಶದಿಂದ ಅಸಂಹಿತತಯಾ ಪಠಿಸಲಾಗಿದೆ. ಮುಂದಿನ ಸೂತ್ರದಲ್ಲಿ ಅನುವೃತ್ತವಾ-ಗುವ ಪದಗಳಿಗೆ ಮುಂದಿನ ಸೂತ್ರಗಳಲ್ಲಿ ಅನ್ವಯವಾಗುವುದು ವ್ಯಾಕರಣಶಾಸ್ತ್ರಗಳಲ್ಲಿ ಕಂಡಿದೆ. ಅದರಂತೆ ಓಂಕಾರಕ್ಕೂ ಕೂಡ ಉತ್ತರಸೂತ್ರದಲ್ಲೂ ಅನ್ವಯವನ್ನು ಹೇಳಬೇಕಲ್ಲವೇ?

ಹೌದು. ದೃಷ್ಟಪ್ರಯೋಜನವಿದ್ದಾಗ ಮಾತ್ರ ಅನುವೃತ್ತವಾಗುವವೆಲ್ಲಾ ಅನ್ವಯವನ್ನು ಹೇಳ-ಬೇಕು. ಅದೃಷ್ಟಪ್ರಯೋಜನವಿದ್ದಾಗ ಅನ್ವಯವನ್ನು ಹೇಳುವ ಅವಶ್ಯಕತೆ ಇರುವುದಿಲ್ಲ. ಅದೃಷ್ಟ-ಪ್ರಯೋಜನವು ಓಂಕಾರಕ್ಕೆ ಶ್ರುತಿಸಿದ್ಧವಾಗಿದೆ.

"ನ ಚ ವ್ಯಾಖ್ಯಾನತಃ" – ಶ್ರೌತವಾದ ಅರ್ಥವಾದಕ್ಕೆ ಅನುಸಾರಿಯಾದ ವ್ಯಾಖ್ಯಾನದಿಂದಲೇ ಉತ್ತರತ್ರ ಅನುವೃತ್ತಿಯನ್ನು ತಿಳಿಸಬಹುದಲ್ಲವೇ ಎಂದು ಪ್ರಶ್ನಿಸಬಾರದು. ವ್ಯಾಖ್ಯಾನವು ಬಹಿರಂಗ ಜ್ಞಾಪಕವಾಗಿದೆ. ಸೂತ್ರಕಾರರ ಪೃಥಕ್ಕರಣವೇ ಅಂತರಂಗ ಜ್ಞಾಪಕವಾಗಿದೆ ಎಂದು ತಿಳಿಯಬೇಕು.

## ಸುಧಾಪರಿಮಳಸಾರ

ಪ್ರತಿಯೊಂದು ಸೂತ್ರವೂ ಕೂಡ ಅನೇಕ ವೇದವಾಕ್ಯಗಳನ್ನು ವಿಚಾರ ಮಾಡುವದರಿಂದ ಎಲ್ಲವೂ ಪ್ರತ್ಯೇಕ ಅವಾಂತರ ಬ್ರಹ್ಮವಿದ್ಯೆಗಳಾಗಿವೆ. ಬ್ರಹ್ಮವಿದ್ಯೆಯ ಆದ್ಯಂತಗಳಲ್ಲಿ ಓಂಕಾರವಿರಬೇಕು ಎಂಬುದು ಶ್ರೌತ ಅರ್ಥವಾದ-ದಿಂದ ಸಿದ್ಧವಾಗುತ್ತದೆ. 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' "ಆದಿಯಲ್ಲಿ ಓಂಕಾರವಿಲ್ಲದಿದ್ದರೆ

ಪುಣ್ಯ ಸೋರಿ ಹೋಗುತ್ತದೆ. ನಂತರ ಓಂಕಾರವಿಲ್ಲದಿದ್ದರೆ ಪುಣ್ಯ ನಶಿಸುತ್ತದೆ'' ಎಂದು ಅರ್ಥವಾದವಾಕ್ಯ. ಆದುದರಿಂದ ಓಂಕಾರ ಪ್ರತಿಯೊಂದು ಸೂತ್ರದ ಆದ್ಯಂತಗಳಲ್ಲಿಯೂ ಇದೆ ಎಂದು ಊಹೆ ಮಾಡಬೇಕು. ಹೀಗೆ ಊಹ್ಯವಾದ ಶಬ್ದವು ವಾಕ್ಯದಿಂದ ಭಿನ್ನ ಎಂದು ಹೇಳಬಾರದು. ಅದೂ ಕೂಡ ವಾಕ್ಯಘಟಕವೇ ಆಗಿದ್ದು, ಇತರ ಪದಾರ್ಥಗಳೊಂದಿಗೆ ಅನ್ವಯವನ್ನು ಹೊಂದುತ್ತದೆ. 'ಇಷೇ ತ್ವಾ' ಇತ್ಯಾದಿ ಮಂತ್ರಗಳಲ್ಲಿ 'ಛಿನತ್ತಿ' ಮುಂತಾದ ಪದಗಳ ಅಧ್ಯಾಹಾರ ಮಾಡುತ್ತೇವೆ. ಇಲ್ಲಿ ಛಿನತ್ತಿ ಎಂಬ ಪದಕ್ಕೆ ಮಂತ್ರಾವಯವತ್ವವನ್ನು ಒಪ್ಪಲೇಬೇಕು. ಹೀಗೆ ಪ್ರತಿಸೂತ್ರದಲ್ಲಿಯೂ ಓಂಕಾರ ಅನಿವಾರ್ಯವಾಗಿ ಬೇಕೇ ಬೇಕು. ಆದರೆ ಎಲ್ಲೆಡೆ ಓಂಕಾರ ಉಚ್ಚಾರ ಮಾಡಿದರೆ ಗೌರವ ಬರುತ್ತದೆ. ಆದಕ್ಕಾಗಿ ಮುಂದಿನ ಎಲ್ಲ ಸೂತ್ರಗಳಲ್ಲಿ ಅನುವೃತ್ತಿ ಮಾಡುವ ಅಭಿಪ್ರಾಯದಿಂದ ಮೊದಲೇ ಓಂಕಾರ ಉಚ್ಚಾರಣೆ ಮಾಡುತ್ತಾರೆ. ವ್ಯಾಕರಣಸೂತ್ರದಲ್ಲಿ ಅಧಿಕೃತಪದಗಳನ್ನು ಸ್ವರಿತಸ್ವರದಿಂದ ಉಚ್ಚಾರ-ಮಾಡುವಂತೆ. ಆದುದರಿಂದ ಈ ಓಂಕಾರವನ್ನು ಸಂಧಿಮಾಡಿ ಅಥಶಬ್ದದ ಹಾಗೆ ಒಟ್ಟಿಗೆ ಹೇಳಿದ್ದರೆ ಇದು ಪ್ರಥಮಸೂತ್ರ ಅವಯವ ಮಾತ್ರ. ದ್ವಿತೀಯಾದಿಸೂತ್ರಗಳಿಗೆ ಸಂಬಂಧಪಟ್ಟಿಲ್ಲ ಎಂಬ ಭ್ರಾಂತಿ ಬರುತ್ತಿತ್ತು. ಅಂತಹ ಭ್ರಾಂತಿಯನ್ನು ಹೋಗಲಾಡಿಸುವುದಕ್ಕಾಗಿ ಅಸಂಹಿತತಯಾ ಓಂಕಾರವನ್ನು ಪ್ರಥಮಸೂತ್ರದಲ್ಲಿ ಉಚ್ಚರಿಸಿದ್ದಾರೆ.

ಯದ್ಯಪಿ ವ್ಯಾಖ್ಯಾನ ಮಾಡುವಾಗ ಓಂಕಾರ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿ ಎಂದು ತಿಳಿಸಿದರೆ ಸಾಕು. ಪೃಥಕ್ಕಾಗಿ ಉಚ್ಚರಿಸುವುದು ವ್ಯರ್ಥ ಎಂಬ ಆಕ್ಷೇಪ ಬರಬಹುದು. ಆದರೆ ಅಂತರಂಗಜ್ಞಾಪಕವಿಲ್ಲದಾಗ ಬಹಿರಂಗ-ಜ್ಞಾಪಕವನ್ನು ಹುಡುಕಬೇಕು. ವ್ಯಾಖ್ಯಾನಬಹಿರಂಗ.

ಸೂತ್ರದಲ್ಲೇ ಅಧಿಕೃತತ್ವವನ್ನು ತಿಳಿಸುವ ಉಪಾಯವಿದ್ದಾಗ ವ್ಯಾಖ್ಯಾನದ ಅಪೇಕ್ಷೆ ಬೇಕಾಗಿಲ್ಲ. ಆದುದರಿಂದ ಬೇರೆಯಾಗಿ ಓಂಕಾರವನ್ನು ಹೇಳಿದ್ದಾರೆ. ಆದುದರಿಂದ ಪ್ರತ್ಯೇಕ ಉಚ್ಚಾರಣೆಗೆ ಬೇರೆ ಉದ್ದೇಶವಿದೆ. ಹೀಗಾಗಿ ಈ ಹೇತುವನ್ನು ಓಂಕಾರವನ್ನು ಸೂತ್ರಾವಯವವಲ್ಲ ಎಂದು ಸಾಧನ ಮಾಡಲು ಪ್ರಯೋಗಿಸಲು ಬರುವುದಿಲ್ಲ. ಹೇತುವು ಅನ್ಯಥಾಸಿದ್ಧ. ಪ್ರಕೃತಸಾಧ್ಯಸಾಧಕವಲ್ಲದಿದ್ದರೂ ಪಕ್ಷದಲ್ಲಿ ಕೂಡಬಹುದಾದ್ದರಿಂದ. ತಥಾಚ ಓಂಕಾರವು ಸೂತ್ರಾವಯವ ಮತ್ತು ದ್ವಿತೀಯಾದಿಸೂತ್ರಗಳಲ್ಲಿ ಅದಕ್ಕೆ ಅನುವೃತ್ತಿ ಇದೆ ಎಂಬ ವಿಷಯ ಸಿದ್ಧವಾಗುತ್ತದೆ.

## ನೆನೆಪಿಡಿ

* 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಮಂತ್ರದ ಪ್ರಾರಂಭದಲ್ಲಿ ಓಂಕಾರವನ್ನು ಹೇಳದಿದ್ದರೆ ಹಸಿಗಡಿಗೆಯಲ್ಲಿ ನೀರು ಹಾಕಿದಂತೆ ಮಂತ್ರವು ಸೋರಿ ಹೋಗುತ್ತದೆ. ಕೊನೆಯಲ್ಲಿ ಓಂಕಾರವನ್ನು ಹೇಳದಿದ್ದರೆ ನಿರ್ವೀರ್ಯವಾಗುತ್ತದೆ.

* 'ಸ್ರವತ್ಯನೋಙ್ಕೃತಂ ಬ್ರಹ್ಮ' ಎಂಬ ವಾಕ್ಯದಲ್ಲಿ ಬ್ರಹ್ಮಪದಪ್ರಯೋಗದಿಂದ ವೇದ-ಮಂತ್ರಗಳ ಆದ್ಯಂತಗಳಲ್ಲಷ್ಟೇ ಓಂಕಾರವು ವಿಹಿತವಾಗಿದೆಯೆಂದು ತಿಳಿಯಬಾರದು. ಬ್ರಹ್ಮಪದಕ್ಕೆ ವೇದ ಹಾಗೂ ವೇದಕ್ಕೆ ಸಂಬಂಧಪಟ್ಟ ಶಾಸ್ತ್ರವನ್ನು ವಿವಕ್ಷಿಸಬೇಕು.

* ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಅನುಷಂಗ ಮಾಡಿದರೆ ವಾಕ್ಯಭೇದದೋಷ ಬರುತ್ತದಲ್ಲವೇ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಎಲ್ಲಾ ಸೂತ್ರಗಳಿಗೆ ಮಹಾಬ್ರಹ್ಮವಿದ್ಯೆಯೆಂದೂ, ಒಂದೊಂದು ಸೂತ್ರಗಳಿಗೆ ಅವಾಂತರಬ್ರಹ್ಮವಿದ್ಯೆಯೆಂದೂ ಕರೆದಿದ್ದರಿಂದ ತಪ್ಪಾಗುವುದಿಲ್ಲ.

* ಸ್ರವತ್ಯನೋಂಕೃತಂ ಬ್ರಹ್ಮ ಎಂಬುದು ಶ್ರೌತವಾದ ಅರ್ಥವಾದ ಪ್ರಮಾಣರೂಪ-ವಾಗಿದೆ.

* ಅರ್ಥವಾದದಿಂದ 'ಮಂತ್ರಸ್ಯ ಸ್ರವಣವಿಶರಣಭಾವಕಾಮಃ ಆದ್ಯಂತ್ಯಯೋಃ ಓಂ ಕುರ್ಯಾತ್' ಎಂಬ ವಿಧಿವಾಕ್ಯವನ್ನು ಊಹಿಸಬೇಕು. ಈ ವಿಧಿವಾಕ್ಯದಿಂದ ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು ತಿಳಿಯುತ್ತದೆ.

* ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂಬ ನೇರ ಪ್ರಮಾಣಗಳು ಇರುವುದಿಲ್ಲ.

* ಅಗ್ನಿ ಎಂಬ ಸ್ಥಾನೀ ಇದ್ದರೆ ಸೂರ್ಯ ಎಂಬ ಪದವನ್ನು ಊಹೆ ಮಾಡಿಕೊಳ್ಳುವುದು ಮೀಮಾಂಸಾದಲ್ಲಿ ಕಂಡಿದೆ. ಇಲ್ಲಿ ಸ್ಥಾನೀಯೇ ಇಲ್ಲವಲ್ಲ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಅದೃಷ್ಟಪ್ರಯೋಜನಕ್ಕೋಸ್ಕರ ಸ್ಥಾನೀ ಇಲ್ಲದಿದ್ದರೂ ಊಹೆಯನ್ನು ಮಾಡಬಹುದು.

* ಊಹ್ಯತೇ ಅನೇನ ಇತಿ ಊಹಃ ಎಂಬ ವ್ಯುತ್ಪತ್ತಿಯನ್ನು ತಿಳಿಯಬಾರದು. ಊಹನಂ ಇತಿ ಊಹಃ ಎಂಬ ಭಾವವ್ಯುತ್ಪತ್ತಿಯನ್ನು ತಿಳಿಯಬೇಕು.

* ಸೂತ್ರಕಾರರು ಓಂ ಎಂದು ಉಚ್ಚರಿಸಿಯೇ ಇಲ್ಲ. ಅದು ಕೇವಲ ಶ್ರುತಿಪ್ರಾಪ್ತ-ವಾಗಿದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದಷ್ಟೇ ಸೂತ್ರಕಾರರು ಹೇಳಿದ್ದಾರೆ. ಇದು ಕೆಲವರ ಪಕ್ಷ.

* ಸೂತ್ರಪ್ರಾರಂಭದಲ್ಲಿ ಎರಡು ಓಂಕಾರಗಳಿವೆ. ಮೊದಲನೆಯದು ಶ್ರುತಿಪ್ರಾಪ್ತ-ವಾದದ್ದು. ಎರಡನೆಯದು ಸ್ಮೃತಿಪ್ರಾಪ್ತವಾದದ್ದು. ಇದು ತಾತ್ಪರ್ಯಚಂದ್ರಿಕೆಯ ಪಕ್ಷ.

* ಸೂತ್ರಕಾರರು ಓಂಕಾರವನ್ನು ಮೊದಲು ಒಮ್ಮೆ ಮಾತ್ರ ಉಚ್ಚರಿಸಿಯೇ ಇದ್ದಾರೆ. ಇದು ಇನ್ನು ಕೆಲವರ ಪಕ್ಷ.

* ಸೂತ್ರಕಾರರು ಓಂಕಾರವನ್ನು ಉಚ್ಚರಿಸಿಯೇ ಇದ್ದಾರೆ. ಆದರೆ ಸೂತ್ರದಲ್ಲಿ ಅದನ್ನು ಸೇರಿಸಿರುವುದಿಲ್ಲ. ಇದು ವಾಸ್ತವಪಕ್ಷ.

* ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುಗತಿ ಮಾಡಬೇಕೆಂಬ ಉದ್ದೇಶದಿಂದ ಓಂಕಾರವನ್ನು ಅಸಂಹಿತತಯಾ ನಿರ್ದೇಶಿಸಿದ್ದಾರೆ.

* ಸೂತ್ರದ ಕೊನೆಯಲ್ಲಿರುವ ಓಂಕಾರವನ್ನು ಸಂಹಿತತಯಾ ಉಚ್ಚರಿಸಿದರೂ ಬಾಧಕವಿಲ್ಲ. ಈ ಸೂತ್ರಕ್ಕೆ ಮಾತ್ರ ಸಂಬಂಧಪಟ್ಟಿದೆ ಎಂಬ ಭ್ರಾಂತಿಯು ಬರುವುದಿಲ್ಲ.

* ಓಂಕಾರಕ್ಕೆ ಮುಂದಿನ ಸೂತ್ರಗಳಲ್ಲಿ ಅನುವೃತ್ತಿ ಇದೆ. ಆದರೆ ಅನ್ವಯವಿರುವುದಿಲ್ಲ. ಅದೃಷ್ಟಪ್ರಯೋಜನವಿದ್ದಲ್ಲಿ ಅನ್ವಯವನ್ನು ಹೇಳಬೇಕಾಗಿಲ್ಲ.

* ಪ್ರಥಮಸೂತ್ರದ ಪ್ರಾರಂಭದಲ್ಲಿ ಒಮ್ಮೆ ಓಂ ಎಂದುಚ್ಚರಿಸಿ, ಗ್ರಂಥವು ಮುಗಿದ ಮೇಲೆ ಮತ್ತೊಮ್ಮೆ ಓಂ ಎಂದು ಉಚ್ಚರಿಸಿದರೆ ಸಾಕು ಎಂಬುದು ಕೆಲವರ ಪಕ್ಷ.

* ಅಸಂಹಿತತಯಾ ನಿರ್ದೇಶವು ಅಂತರಂಗ ಪ್ರಮಾಣ; ವ್ಯಾಖ್ಯಾನವು ಬಹಿರಂಗ-ಪ್ರಮಾಣ. ಅಂತರಂಗಪ್ರಮಾಣವೇ ಇರುವುದರಿಂದ ಬಹಿರಂಗಪ್ರಮಾಣವನ್ನು ಹುಡುಕ-ಬಾರದು.

## ಓಂಕಾರವು ಊಹ್ಯವೋ ಅಥವಾ ವಿಧಿಸಿದ್ಧವೋ?

**ಶ್ರೀಮನ್ನ್ಯಾಯಸುಧಾ – ನನು ಚ ಶ್ರೌತಾರ್ಥವಾದಬಲೇನ ಆದ್ಯಂತಯೋ-ರೋಂಕಾರಸ್ಯೋಹೋ ವಾ ಪ್ರಾಙ್ಮುಖತ್ವಾದಿವತ್ ಬಹಿರ್ಭೂತಸ್ಯೈವ ಉಚ್ಚಾ-ರಣಂ ವಾ ವಿಧೇಯತ್ವೇನ ಕಲ್ಪ್ಯಮಿತಿ ಸಂದಿಹ್ಯತೇ ।**

'ಪ್ರವತ್ಯನೋಂಕೃತಂ ಬ್ರಹ್ಮ' ಎಂಬ ಶ್ರುತಿಸಿದ್ಧವಾದ ಅರ್ಥವಾದದ ಸಾಮರ್ಥ್ಯದಿಂದ ಸೂತ್ರದ ಆದ್ಯಂತಗಳಲ್ಲಿ ಓಂಕಾರವನ್ನು ಊಹಿಸಬೇಕು. ಅಥವಾ 'ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕು' ಇತ್ಯಾದಿ ನಿಯಮದಂತೆ ಸೂತ್ರದಿಂದ ಬಹಿರ್ಭೂತವಾಗಿದ್ದರೂ

ಕೂಡ ಅಧ್ಯಯನನಿಯಮದಲ್ಲಿ ಅಂತರ್ಗತವಾಗಿ ಓಂಕಾರದ ಉಚ್ಚಾರಣೆಯು ವಿಹಿತ-ವಾಗಿದೆಯೆಂದು ಕಲ್ಪನೆ ಮಾಡಬೇಕು ಎಂಬುದಾಗಿ ಸಂದೇಹವು ಪ್ರಾಪ್ತವಾಗುತ್ತದೆ.

ವಿವರಣೆ – ಪ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಅರ್ಥವಾದ ವಾಕ್ಯವನ್ನು ನೋಡಿದಾಗ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಏಕೆಂದರೆ ಈ ವಾಕ್ಯವು ನೇರವಾದ ಅರ್ಥವನ್ನು ತಿಳಿಸುತ್ತಿಲ್ಲ. ಆದ್ದರಿಂದ ಹೀಗೆ ಸಂದೇಹ ಬರುತ್ತದೆ – 'ಅರ್ಥವಾದದ ಬಲದಿಂದ ವಿಧಿಯನ್ನಂತೂ ಕಲ್ಪನೆ ಮಾಡಬೇಕು. ಆದ್ಯಂತಗಳಲ್ಲಿ ಓಂಕಾರವನ್ನು ಅಧ್ಯಾಹಾರ ಮಾಡಬೇಕೆಂದು ಹೇಳಬೇಕೋ, ಅಥವಾ ಪ್ರಾಙ್ಮುಖತ್ವ ಮೊದಲಾದವುಗಳಂತೆ ಬಹಿ-ರ್ಭೂತವಾಗಿ ಉಚ್ಚಾರಣೆಯನ್ನಷ್ಟೇ ಕಲ್ಪನೆ ಮಾಡಬೇಕೋ? ಎಂಬುದಾಗಿ. ಒಂದು ವೇಳೆ ಎರಡನೆಯ ಪಕ್ಷವನ್ನು ಒಪ್ಪಿದರೆ ಓಂಕಾರಕ್ಕೆ ಅವಯವತ್ವವು ಸಿದ್ಧವಾಗುವುದಿಲ್ಲ. ಮೊದಲನೆಯ ಪಕ್ಷವನ್ನು ಒಪ್ಪಿದರೆ ಊಹ್ಯಮಾನತ್ವಾತ್ ಅನುಮಾನ ಮಾಡಬಹುದು – "ಓಂಕಾರಃ ಸರ್ವಸೂತ್ರೇಷು ಅನುಗತಃ ಸೂತ್ರೇಷು ಊಹ್ಯಮಾನತ್ವಾತ್" ಎಂದು. ಆದರೆ ಎರಡನೆಯ ಪಕ್ಷದಲ್ಲಿ ಹೀಗೆ ಸೂತ್ರಾವಯವತ್ವವು ಓಂಕಾರಕ್ಕೆ ಸಿದ್ಧವಾಗುವುದಿಲ್ಲ.

## ಪೂರ್ವಪಕ್ಷಿಗಳ ಅನುಮಾನಕ್ಕೆ ಸಂದಿಗ್ಧಾನ್ಯಥಾಸಿದ್ಧಿ ಹಾಗೂ ಬಾಧ ದೋಷಗಳು

**ಸತ್ಯಮ್ । ಸಂದೇಹೇಽಪಿ ತಯಾ ಪ್ರಣಾಡ್ಯಾನುಮಾನಸ್ಯ ಸಂದಿಗ್ಧಾನ್ಯಥಾ-ಸಿದ್ಧ್ಯಾಽಪಿ ಆಭಾಸತ್ವಮೇವ । ವಕ್ಷ್ಯಮಾಣನ್ಯಾಯೇನ ಓಂಕಾರಾರ್ಥಸ್ಯ ಪ್ರಥಮಸೂತ್ರವಾಕ್ಯಾರ್ಥೇ ಸಮನ್ವಯೇನ ನಿಶ್ಚಯೋಪಪತ್ತೌ ಬಾಧಿತವಿಷಯಂ ಚಾನುಮಾನಮಿತಿ ।**

ಹೀಗೆ ಸಂದೇಹ ಬರುವುದು ಸತ್ಯ; ಆದರೂ ಕೂಡ ಸರ್ವತ್ರ ಅನುಗತವಾಗಿದೆ ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದಂತೆ ಸೂತ್ರಾವಯವವಲ್ಲವೆಂದು ತಿಳಿಸುವ ಅನುಮಾನ ಪ್ರಯೋಗದಲ್ಲಿ ಹೇತುವು ಸಂದಿಗ್ಧಾನ್ಯಥಾಸಿದ್ಧವಾಗುತ್ತದೆ. ಆದ್ದರಿಂದ ಆಭಾಸವಾಗುತ್ತದೆ.

ಮುಂದೆ ತಿಳಿಸುವ ನ್ಯಾಯದಿಂದ ಓಂಕಾರದ ಅರ್ಥವು ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಸಮನ್ವಯವನ್ನು ಹೊಂದುತ್ತದೆಂಬ ನಿಶ್ಚಯವು ಉಂಟಾಗುತ್ತದೆ. ಆದ್ದರಿಂದ ಪೂರ್ವ-ಪಕ್ಷಿಗಳು ಹೇಳಿದ ಅನುಮಾನವು ಬಾಧಿತವಾದ ಸಾಧ್ಯವನ್ನು ವಿಷಯೀಕರಿಸಿದೆ ಎಂದು ಸಿದ್ಧವಾಗುತ್ತದೆ.

ವಿವರಣೆ – 'ಓಂಕಾರಃ ನ ಸೂತ್ರಾವಯವಃ ಲಕ್ಷಣಾಂತರಾಭಾವೇ ಸತಿ ಅಸಂಹಿತತಯಾ ಉಚ್ಚಾರ್ಯಮಾಣತ್ವಾತ್' ಎಂಬುದಾಗಿ ಪೂರ್ವಪಕ್ಷಿಗಳು ಅನುಮಾನವನ್ನು ಹೇಳಿದ್ದರು. ಇಲ್ಲಿ ಅಸಂಹಿತತಯಾ ಉಚ್ಚಾರ್ಯಮಾಣತ್ವವು ಅನವಯವತ್ವಪ್ರಯುಕ್ತವೋ, ಅಥವಾ ಅಧಿಕಾರ-ಜ್ಞಾಪಕತ್ವೇನ ಅನ್ಯಥಾಸಿದ್ಧವೋ ಎಂಬ ಸಂದೇಹವು ಹಾಗೆಯೇ ಉಳಿಯುವುದರಿಂದ ಸಂದಿಗ್ಧಾನ್ಯಥಾ-ಸಿದ್ಧಿಯು ಬರುತ್ತದೆ. ಸಂದಿಗ್ಧಾನ್ಯಥಾಸಿದ್ಧಿಯಿಂದ ಅನುಮಾನವು ಆಭಾಸವಾಗುತ್ತದೆ.

ಮತ್ತು ಮುಂದೆ 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿ ಅನುವ್ಯಾಖ್ಯಾನಪದ್ಯದಿಂದ ಓಂಕಾರದ ಅರ್ಥಕ್ಕೆ ಪ್ರಥಮಸೂತ್ರಾರ್ಥದಲ್ಲಿ ಅನ್ವಯವನ್ನು ಸಾಧಿಸುವವರಿದ್ದಾರೆ. ಆಗ ಈ ಓಂಕಾರವು ಪ್ರಥಮಸೂತ್ರದ ಅವಯವವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಒಂದು ವೇಳೆ ಊಹೆಯನ್ನು ಮಾಡಿ ಅವಯವವೆಂದು ಸಾಧನೆ ಮಾಡುವುದಾದರೆ ಊಹದ ವಿಧಿಯನ್ನು ಕಲ್ಪನೆ ಮಾಡಬೇಕಾಗುತ್ತದೆ. ಊಹದ ವಿಧಿಯು ಸಿದ್ಧವಾದರೆ ಊಹ್ಯಮಾನತ್ವಾತ್ ಅವಯವತ್ವವು ಸಿದ್ಧವಾಗುತ್ತದೆ. ಆದರೆ ಸೂತ್ರಾರ್ಥದಲ್ಲಿ ಅನ್ವಯವಾಗುವುದರಿಂದ ಓಂಕಾರವು ಅವಯವವಾಗುತ್ತದೆಂದು ಹೇಳಿದರೆ ನಿಶ್ಚಯವೇ ಆಗುತ್ತದೆ. ಈ ಪಕ್ಷದಲ್ಲಿ ಪೂರ್ವಪಕ್ಷಿಗಳ ಅನುಮಾನಕ್ಕೆ ಬಾಧದೋಷವೇ ಪ್ರಾಪ್ತವಾಗುತ್ತದೆ.

## ಪೂರ್ವಪಕ್ಷಿಯ ಅನುಮಾನದಲ್ಲಿ ದೃಷ್ಟಾಂತಕ್ಕೆ ಸಾಧ್ಯವೈಕಲ್ಯದೋಷ

**ಅಥವಾ ದೃಷ್ಟಾಂತದೂಷಣಮನೇನ ಕ್ರಿಯತೇ । ತಥಾ ಹಿ । ಅಖಿಲೈ-ರ್ವೇದಪಾಠಕೈಃ ಪೃಥಗ್ ರೂಪಾಂತರೇಣ ಸ್ಥಾನವ್ಯತ್ಯಾಸೇನ ಯದೋಂಕ್ರಿಯತೇ ತದುಕ್ತನ್ಯಾಯೇನಾದಾವುಚ್ಚಾರಣೇನೈವ ಲಬ್ಧೇನ ಸರ್ವತ್ರಾನುಗತತ್ವೇನ ಕಾರಣೇನೈವ ಉಪಪದ್ಯತೇ ಇತಿ । ಅನೇನ ದೃಷ್ಟಾಂತೇ ಸಾಧಕಸ್ಯ ಹೇತೋ-ರನ್ಯಥಾಸಿದ್ಧಿರುಕ್ತಾ ಭವತಿ । ತಥಾ ಚ ದೃಷ್ಟಾಂತಸ್ಯ ಸಾಧ್ಯವಿಲಕತಾ ಇತಿ ।**

ಅಥವಾ 'ಸರ್ವತ್ರಾನುಗತತ್ವೇನ' ಎಂಬ ಶ್ಲೋಕವು ತಿಳಿಸಿದಂತೆ ಅನುಗತವಾಗಿರುವಿಕೆ ಎಂಬ ಯುಕ್ತಿಯು ದೃಷ್ಟಾಂತದ ದೋಷವನ್ನು ತಿಳಿಸುತ್ತಿದೆ ಎಂದು ಹೇಳಬಹುದು. ಅದು ಹೀಗೆ – ಎಲ್ಲಾ ವೇದಪಾಠಕರು ರೂಪಭೇದ ಸ್ಥಾನಭೇದದಿಂದ ಪ್ರತ್ಯೇಕವಾಗಿ ಓಂಕಾರವನ್ನು ಪಠಿಸುತ್ತಾರೆ. ಇದರಲ್ಲಿ ಆದಿಯಲ್ಲಿ ಉಚ್ಚರಿಸುವುದರಿಂದ ತಿಳಿಯುವ ಎಲ್ಲಾ ಸೂತ್ರಗಳಲ್ಲಿ ಅನುಗತವಾಗಿದೆ ಎಂಬ ಹಿಂದೆ ತಿಳಿಸಿದ ಯುಕ್ತಿಯು ಒಂದು ಕಾರಣ. ಇದರಿಂದಲೇ ಸಂಧಿಯಿಲ್ಲದೇ ಓಂಕಾರವನ್ನು ಉಚ್ಚರಿಸಿದ್ದಾರೆಂಬ ಅನುಮಾನಪ್ರಯೋಗದ ಹೇತುವು ದೃಷ್ಟಾಂತದಲ್ಲಿ ಸೂತ್ರಾನವಯವತ್ವವೆಂಬ ಸಾಧ್ಯವಿಲ್ಲದಿದ್ದರೂ ಕೂಡ ಇರುವುದರಿಂದ ಅನ್ಯಥಾಸಿದ್ಧವಾಗುತ್ತದೆ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವನ್ನು ಹೇಳಿದಂತಾಗುತ್ತದೆ.

ವಿವರಣೆ – ಪೂರ್ವಪಕ್ಷಿಯು ಅನುಮಾನದಲ್ಲಿ 'ವೇದಾಧ್ಯಯನೋಪಕ್ರಮೇ ಉಚ್ಚಾರ್ಯಮಾಣೋಂಕಾರವತ್' ಎಂಬುದಾಗಿ ದೃಷ್ಟಾಂತವನ್ನು ಹೇಳಿದ್ದನು. ಈ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವನ್ನು ಇದೇ ಅನುವ್ಯಾಖ್ಯಾನಶ್ಲೋಕದಿಂದ ಆಚಾರ್ಯರು ತಿಳಿಸುತ್ತಿದ್ದಾರೆ. ಅದು ಹೀಗೆ – ಹಿಂದೆ ಪೂರ್ವಪಕ್ಷಿಯು ತಾನೇ ಸಾಧ್ಯವೈಕಲ್ಯದೋಷವನ್ನು ಆಕ್ಷೇಪ ಮಾಡಿಕೊಂಡು ಅವನೇ ಪರಿಹಾರವನ್ನು ಮಾಡಿದ್ದನು. 'ವೇದಮಂತ್ರೇಷು ಉಚ್ಚಾರ್ಯಮಾಣಃ ಓಂಕಾರಃ ತದವಯವಃ, ತತ್ತತ್ ಸ್ಥಾನಪರಿತ್ಯಾಗೇನ ಅನ್ಯಾನ್ಯಸ್ಥಾನೇಷು ಪಠ್ಯಮಾನತ್ವಾತ್' ಎಂಬುದಾಗಿ ಹೇಳಿದ್ದನು. ಇಲ್ಲಿ ಅನ್ಯಾನ್ಯಸ್ಥಾನೇ ಪಠ್ಯಮಾನತ್ವಾತ್ ಎಂಬ ಹೇತುವು ಅನ್ಯಥಾಸಿದ್ಧವಾಗಿದೆ. ಅನ್ಯಾನ್ಯಸ್ಥಾನದಲ್ಲಿ ಅನುವೃತ್ತಿಜ್ಞಾಪನೆಗೋಸ್ಕರವೇ ಪಠಿಸುತ್ತಾರೆ. ಒಂದು ಕಡೆ ಉಚ್ಚಾರಣೆ ಮಾಡಿದರೆ ಎಲ್ಲೆಡೆಯೂ ಅನುಗತವಾಗಲಿ ಎಂಬ ಉದ್ದೇಶದಿಂದ ಅನ್ಯಾನ್ಯಸ್ಥಾನದಲ್ಲಿ ಪಠಿಸುತ್ತಾರೆ. ತಾವತಾ ಅದನ್ನು ಅವಯವವಲ್ಲವೆಂದು ಹೇಳಬಾರದು. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವು ಬರುವುದಿಲ್ಲ. ಈ ಸಾಧ್ಯವನ್ನು ಸಾಧಿಸಲು ಪೂರ್ವಪಕ್ಷಿಗಳು ಯಾವ ಹೇತುವನ್ನು ಹೇಳಿದ್ದಾರೋ ಅದು ಅನ್ಯಥಾಸಿದ್ಧವಾಗಿದೆ.

ಆಚಾರ್ಯರ ವಾಕ್ಯಕ್ಕೆ ಇಲ್ಲಿ ಸುಂದರವಾಗಿ ಅನ್ವಯ ಮಾಡಿದ್ದಾರೆ. 'ಪೃಥಕ್' ಎಂಬುದಕ್ಕೆ ಅಸಂಹಿತತಯಾ ಎಂದು ಅರ್ಥವಲ್ಲ. ರೂಪಾಂತರೇಣ ಎಂದರ್ಥ. ರೂಪಾಂತರೇಣ ಎಂದರೆ ಸ್ಥಾನವ್ಯತ್ಯಾಸದಿಂದ ಎಂದರ್ಥ. 'ಓಂಕ್ರಿಯತೇ' ಯಾವ ಓಂಕಾರವನ್ನು ಉಚ್ಚರಿಸುತ್ತೇವೋ ಅದು ಒಮ್ಮೆ ಉಚ್ಚಾರಣೆ ಮಾಡಿದರೆ ಎಲ್ಲೆಡೆಯೂ ಅನುಗತವಾಗುತ್ತದೆ ಎಂಬ ಕಾರಣದಿಂದ ಸ್ಥಾನವ್ಯತ್ಯಾಸದಿಂದ

ಉಚ್ಚಾರಣೆಯು ಉಪಪನ್ನವಾಗುತ್ತದೆ. ಹೀಗೆ ಆಚಾರ್ಯರು ಹೇಳಿದ್ದರಿಂದ ಅನ್ಯಥಾಸಿದ್ಧಿಯನ್ನು ಹೇಳಿದಂತಾಯಿತು.

## ಓಂಕಾರವು ಪ್ರಥಮಸೂತ್ರಾವಯವವೆಂದು ಸಿದ್ಧವಾಯಿತು

**ಏವಮನುಮಾನೇ ನಿರಸ್ತೇ ನಿರಪವಾದೇನಾದಾವುಚ್ಚಾರಣೇನೋಂಕಾರಸ್ಯ ಪ್ರಥಮಸೂತ್ರಾವಯವತಾಸಿದ್ಧಾವುಕ್ತಮುಪಪನ್ನಮ್ ।**

**ತದೇವಂ ಸಿದ್ಧೇ ಶಾಸ್ತ್ರವ್ಯಾಖ್ಯೇಯತ್ವೇ, ಪ್ರೇಕ್ಷಾವತ್‌ಪ್ರವೃತ್ತಿವಿಷಯಸ್ಯೈವ ಆರಂಭಣೀಯತ್ವಾತ್, ಪ್ರಯೋಜನಾಭಿಧೇಯಸಂಬಂಧವತ್ಯೇವ ಚ ಪ್ರೇಕ್ಷಾ-ವತಾಂ ಪ್ರವೃತ್ತೇಃ, ಆರಂಭಣೀಯತಾಸಿದ್ಧಯೇ ಪ್ರೇಕ್ಷಾವತಃ ಪ್ರವರ್ತಯಿತುಂ ಪ್ರಯೋಜನಾದ್ಯಭಿಸಂಬಂಧಂ ಪ್ರತಿಪಾದಯತಃ ಪ್ರಥಮಸೂತ್ರಸ್ಯ ವ್ಯಾಖ್ಯಾಮ್ 'ಓತತ್ವವಾಚೀ' ಇತ್ಯಾದಿನಾ ಆರಭತೇ ॥**

ಹೀಗೆ ಹಿಂದಿನ ಅನುಮಾನವನ್ನು ನಿರಾಸ ಮಾಡಿದಂತಾಯಿತು. ಆದ್ದರಿಂದ ಮೊದ-ಲಿರುವ ನಿರಪವಾದ ಉಚ್ಚಾರಣೆಯಿಂದ ಓಂಕಾರವು ಪ್ರಥಮಸೂತ್ರದ ಅವಯವವೆಂದು ಸಿದ್ಧವಾಗುತ್ತದೆ. 'ತತ್ರ ತಾರಾಥಮೂಲತ್ವಮ್' ಎಂಬಲ್ಲಿ ಹೇಳಿದ್ದು ಯುಕ್ತವಾಗುತ್ತದೆ. ಹೀಗೆ ಸಿದ್ಧವಾದ ಮೇಲೆ ಶಾಸ್ತ್ರದಲ್ಲಿ ಪ್ರಾಮಾಣ್ಯವು ಹಾಗೂ ಮಂಗಲಾಚರಣೆಯೂ ಕೂಡ ಇರುತ್ತದೆಂದಂತಾಯಿತು. ಆದ್ದರಿಂದ ಈ ಶಾಸ್ತ್ರವು ವ್ಯಾಖ್ಯಾನಕ್ಕೆ ಅರ್ಹವಾಗಿದೆ. ಜ್ಞಾನಿಗಳು ಸ್ವೀಕಾರ ಮಾಡುವ ಗ್ರಂಥಗಳಷ್ಟೇ ಆರಂಭಮಾಡಲು ಅರ್ಹವಾಗಿರುತ್ತವೆ. ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳಿರುವ ಗ್ರಂಥಗಳಲ್ಲಷ್ಟೇ ಜ್ಞಾನಿಗಳು ಪ್ರವೃತ್ತಿ ಮಾಡುತ್ತಾರೆ. ಆದ್ದರಿಂದ ಈ ಶಾಸ್ತ್ರಕ್ಕೆ ಆರಂಭಣೀಯತ್ವವು ಇರುತ್ತದೆ. ಇದನ್ನು ಸಾಧಿಸಲು ಜ್ಞಾನಿಗಳಿಗೆ ಪ್ರವೃತ್ತಿಯನ್ನು ಮಾಡಿಸಲು ಪ್ರಯೋಜನ ಮೊದಲಾದ ಅನುಬಂಧಗಳನ್ನು ಪ್ರತಿಪಾದಿಸುವ ಪ್ರಥಮಸೂತ್ರದ ವ್ಯಾಖ್ಯಾನವನ್ನು ''ಓತತ್ವವಾಚೀ'' ಇತ್ಯಾದಿಯಾಗಿ ಪ್ರಾರಂಭಿಸುತ್ತಾರೆ.

ವಿವರಣೆ – 'ಓಂಕಾರಃ ಪ್ರಥಮಸೂತ್ರಾವಯವಃ ಆದೌ ಉಚ್ಚಾರ್ಯಮಾಣತ್ವಾತ್' ಎಂಬ ನಮ್ಮ ಅನುಮಾನಕ್ಕೆ ಪೂರ್ವಪಕ್ಷಿಯು ಹೇಳಿದ ಸತ್ಪ್ರತಿಪಕ್ಷಾನುಮಾನವು ದುಷ್ಟವಾಗಿದೆಯೆಂದು ಸಾಧಿಸಿದಂತಾಯಿತು. ಆದ್ದರಿಂದ ನಮ್ಮ ಅನುಮಾನದ ಮೂಲಕ ಓಂಕಾರವು ಪ್ರಥಮಸೂತ್ರದ ಅವಯವವೆಂದು ಯಾವುದೇ ವಿರೋಧವಿಲ್ಲದೇ ಸಿದ್ಧವಾಗುತ್ತದೆ. 'ತತ್ರ ತಾರಾಥಮೂಲತ್ವಮ್' ಎಂಬಲ್ಲಿ ತಿಳಿಸಿದಂತೆ ಇಂಥ ಓಂಕಾರವು ಮಾಂಗಲಿಕವಾಗಿದೆ.

## ಸರ್ವತ್ರಾನುಗತತ್ವೇನ ಎಂಬುದಕ್ಕೆ ಮತ್ತೊಂದು ವ್ಯಾಖ್ಯಾನ

ಪರಿಮಳ – ಊಹೋ ವಾ ಇತಿ ॥ 'ಅವಯವತಾಽಧ್ಯಾಹಾರೋ ವಾ' ಇತ್ಯರ್ಥಃ । ಉತ್ತರಮಾಹ – ಸತ್ಯಂ ಸಂದೇಹೇಽಪೀತಿ ॥ ತಯಾ ಪ್ರಣಾಡ್ಯೇತಿ ॥ 'ಪ್ರಾಗುಕ್ತಕೋಟಿದ್ವಯರೂಪಪ್ರಣಾಡ್ಯಾ' ಇತ್ಯರ್ಥಃ । ಯದ್ವಾ 'ಏತದುಕ್ತಂ ಭವತಿ ಇತ್ಯಾದಿನೋಕ್ತಪ್ರಣಾಡ್ಯಾ' ಇತ್ಯರ್ಥಃ । ವಕ್ಷ್ಯಮಾಣೇತಿ ॥ 'ಓತತ್ವಾಚೇ' ಇತ್ಯಾದಿನಾ ವಕ್ಷ್ಯಮಾಣೇತ್ಯರ್ಥಃ । ಅನೇನ ॥ ಸರ್ವತ್ರೇತ್ಯರ್ಥೇನ । 'ರೂಪಾಂತರೇಣ' ಇತ್ಯಸ್ಯಾರ್ಥಃ 'ಸ್ಥಾನೇ'ತಿ ॥ ಹೇತೋರಿತಿ ॥ ಅನ್ಯಾನ್ಯಸ್ಥಾನೇನ ಪಠ್ಯಮಾನತ್ವರೂಪಸ್ಯ ವೇದೋಪಕ್ರಮೇ ಪಠ್ಯಮಾನಸ್ಯೋಂಕಾರರೂಪದೃಷ್ಟಾಂತೇ ವೇದಾನವಯವತ್ವಸಾಧಕಹೇತೋರಿತ್ಯರ್ಥಃ ।

"ಊಹೋ ವಾ"– ಅವಯವವಾದುದರಿಂದ ಅಧ್ಯಾಹಾರವನ್ನು ಮಾಡಬೇಕು? ಎಂದರ್ಥ. "ನನು" ಇತ್ಯಾದಿ ಗ್ರಂಥದಿಂದ ಮಾಡಿದ ಆಕ್ಷೇಪಕ್ಕೆ ಉತ್ತರವನ್ನು "ಸತ್ಯಂ ಸಂದೇಹೇಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

"ತಯಾ ಪ್ರಣಾಡ್ಯಾ" – ಶ್ರುತಿಸಿದ್ಧವಾದ ಅರ್ಥವಾದ ಬಲದಿಂದ ಓಂಕಾರದ ಊಹವನ್ನು ವಿಧಿಸಲಾಗಿದೆ ಎಂದು ಕಲ್ಪನೆ ಮಾಡಬೇಕು. ಅಥವಾ ಪ್ರಾಙ್ಮುಖತ್ವಾದಿಗಳಂತೆ ಅಧ್ಯಯನನಿಯಮಾಂತರ್ಗತವಾಗಿದ್ದು ಸೂತ್ರದಲ್ಲಿ ಘಟಕವಾಗಿಲ್ಲವೆಂದು ಕಲ್ಪನೆ ಮಾಡಬೇಕೋ? ಹೀಗೆ ತೋರಿಸಿದ ಎರಡು ಪ್ರಕಾರಗಳಿಂದ ಎಂದರ್ಥ. ಅಥವಾ "ಏತದುಕ್ತಂ ಭವತಿ" ಇತ್ಯಾದಿ ಟೀಕಾವಾಕ್ಯಗಳಿಂದ ತೋರಿಸಿದ ರೀತಿಯಿಂದ ಎಂದೂ ಕೂಡ ಅರ್ಥವನ್ನು ತಿಳಿಯಬಹುದು.

"ವಕ್ಷ್ಯಮಾಣನ್ಯಾಯಾತ್" – ಓತತ್ವಾಚೀ ಇತ್ಯಾದಿ ಮುಂದೆ ಹೇಳುವ ಶ್ಲೋಕಗಳಿಂದ ಎಂದರ್ಥ. "ಅನೇನ" – ಸರ್ವತ್ರ ಎಂಬ ಅರ್ಧಶ್ಲೋಕದಿಂದ, "ರೂಪಾಂತರೇಣ" – ರೂಪಾಂತರೇಣ ಎಂಬುದರ ಅರ್ಥವನ್ನೇ "ಸ್ಥಾನವ್ಯತ್ಯಾಸೇನ" ಎಂದು ಹೇಳಿದ್ದಾರೆ. "ಹೇತೋಃ" ಅಧ್ಯಯನದ ಉಪಕ್ರಮದಲ್ಲಿ ಪಠಿಸಲ್ಪಡುವ ಓಂಕಾರವು ವೇದದ ಅವಯವವಾಗುವುದಿಲ್ಲ. ಇದನ್ನು ಸಾಧಿಸುವ ಅನುಮಾನದಲ್ಲಿರುವ ಅನ್ಯಾನ್ಯ = ಬೇರೆ ಬೇರೆ ಸ್ಥಳಗಳಲ್ಲಿ ಪಠಿಸಲ್ಪಡುವ ಹೇತುವಿಗೆ ಎಂದರ್ಥ.

## ಅಗ್ನಿಮೀಳೇ ಇತ್ಯಾದಿ ಸ್ಥಳಗಳಲ್ಲಿರುವ ಓಂಕಾರಕ್ಕೂ ಕೂಡ ಅವಯವತ್ವವಿದೆ

ಪರಿಮಳ – 'ಅಗ್ನಿಮೀಳೇ' ಇತ್ಯಾದೌ ಪ್ರವಣಾದಿದೋಷಪರಿಹಾರಕತಯಾ ಅಧ್ಯಾಪಕೈರುಚ್ಚಾರ್ಯಮಾಣಸ್ಯ ವೇದವಾಕ್ಯಾವಯವತ್ವಂ ಚ ವೇದಬೋಧ್ಯಾಗ್ನ್ಯಾದಿರೂಪಾರ್ಥೇ ಗುಣಪೂರ್ಣತ್ವಾದಿವಿಶೇಷಣಾರ್ಪಕತ್ವಾನುಸಂಧಾನಾಭಿಪ್ರಾಯೇಣೇತಿ ಧ್ಯೇಯಮ್ । ತಥೈವ ಚಂದ್ರಿಕೋಕ್ತೇಃ ॥ ಸಾಧ್ಯೇತಿ ॥ 'ಅನವಯವತ್ವರೂಪಸಾಧ್ಯವಿಕಲತಾ' ಇತ್ಯರ್ಥಃ । ಅನುಮಾನೇ ಸೂತ್ರಾನವಯವತ್ವಸಾಧಕಾನುಮಾನ ಇತ್ಯರ್ಥಃ । ಉಕ್ತಮಿತಿ ॥ 'ತಾರಾಥಮೂಲತ್ವಮ್' ಇತ್ಯುಕ್ತಮಿತ್ಯರ್ಥಃ ॥ ಉಪೋದ್ಘಾತಃ ಸಮಾಪ್ತಃ ॥

"ಅಗ್ನಿಮೀಳೇ" – ಅಗ್ನಿಮೀಳೇ ಮೊದಲಾದ ವೇದಗಳಲ್ಲಿ ಪ್ರವಣ, ವಿಶರಣ ಮೊದಲಾದ ದೋಷಗಳನ್ನು ಪರಿಹರಿಸುವುದಕ್ಕಾಗಿ ಅಧ್ಯಾಪಕರು ಓಂಕಾರವನ್ನು ಆದ್ಯಂತಗಳಲ್ಲಿ ಉಚ್ಚಾರಣೆ ಮಾಡುತ್ತಾರೆ. ಈ ಓಂಕಾರವು ವೇದವಾಕ್ಯದ ಅವಯವವೇ ಆಗಿರುತ್ತದೆ. ವೇದದಿಂದ ತಿಳಿಸಲ್ಪಡುವ ಅಗ್ನಿ ಮುಂತಾದ ಅರ್ಥಗಳಲ್ಲಿ ಗುಣಪೂರ್ಣತ್ವಮೊದಲಾದ ವಿಶೇಷಣಗಳನ್ನು ಓಂಕಾರವು ತಿಳಿಸುತ್ತದೆ. ಈ ಅನುಸಂಧಾನದ ಅಭಿಪ್ರಾಯದಿಂದ ಓಂಕಾರವು ವೇದದ ಅವಯವವೆಂದು ತಿಳಿಯಬೇಕು. ತಾತ್ಪರ್ಯಚಂದ್ರಿಕಾಗ್ರಂಥದಲ್ಲಿ ಹೀಗೆಯೇ ಉಪಪಾದನೆ ಮಾಡಿದ್ದಾರೆ.

"ಸಾಧ್ಯವಿಕಲತಾ" – ಅವಯವವಾಗಿರುವುದಿಲ್ಲ ಎಂಬ ಸಾಧ್ಯವು ದೃಷ್ಟಾಂತದಲ್ಲಿ ಬರುವುದಿಲ್ಲವಾದ್ದರಿಂದ ಸಾಧ್ಯವೈಕಲ್ಯದೋಷವು ಬರುತ್ತದೆ ಎಂದಭಿಪ್ರಾಯ. "ಅನುಮಾನೇ" –ಸೂತ್ರದ ಅವಯವವಾಗಿರುವುದಿಲ್ಲ ಎಂದು ಸಾಧಿಸುವ ಅನುಮಾನದಲ್ಲಿ ಎಂದರ್ಥ. "ಉಕ್ತಮ್" – 'ತತ್ರ ತಾರಾಥಮೂಲತ್ವಮ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟದ್ದು. ಇಲ್ಲಿಗೆ ಉಪೋದ್ಘಾತವು ಮುಗಿಯಿತು.

## ಉಪೋದ್ಘಾತ ಮುಗಿಯಿತು ಗ್ರಂಥ ಪ್ರಾರಂಭವಾಯಿತು

ಪರಿಮಳ – ಓತತ್ವಾಚೇತ್ಯಾದೇರಪಿ ಉಪೋದ್ಘಾತತ್ವಭ್ರಮನಿರಾಸಾಯ ಆಹ – ತದೇವಮಿತಿ ॥ ಉಕ್ತಪ್ರಕಾರೇಣ ಪ್ರಾಮಾಣ್ಯಮಂಗಲಾಚಾರಾಭ್ಯಾಂ ಯುಕ್ತತ್ವಾತ್ ಸಿದ್ಧೇ ಶಾಸ್ತ್ರವ್ಯಾಖ್ಯೇಯತ್ವ ಇತ್ಯಸ್ಯ ಪ್ರಥಮಸೂತ್ರಸ್ಯ ವ್ಯಾಖ್ಯಾಮಾರಭತ ಇತ್ಯನೇನಾನ್ವಯಃ । ಶಂಕೋತ್ಥಾಪನಾಯ ವಾ ವೈಯರ್ಥ್ಯನಿರಾಸಾಯ ವಾ ಆದ್ಯಸೂತ್ರತಾತ್ಪರ್ಯಮಾಹ – ಪ್ರೇಕ್ಷಾವದಿತಿ ॥

"ಓತತ್ವಾಚೇ ಹ್ಯೋಂಕಾರಃ" ಇತ್ಯಾದಿ ವಾಕ್ಯಸಂದರ್ಭವೂ ಕೂಡ ಉಪೋದ್ಘಾತವೇ ಆಗಿದೆ ಎಂಬ ಭ್ರಮೆಯನ್ನು ಪರಿಹರಿಸಲು "ತದೇವಂ" ಇತ್ಯಾದಿ ವಾಕ್ಯವು ಹೊರಟಿದೆ. "ಏವಂ" – ಹಿಂದೆ ತೋರಿಸಿದಂತೆ ಪ್ರಾಮಾಣ್ಯವು ಮಂಗಲಾಚರಣೆಯು ಇರುವುದರಿಂದ ಈ ಶಾಸ್ತ್ರವು ವ್ಯಾಖ್ಯಾನಮಾಡಲು ಅರ್ಹವಾಗಿದೆ ಎಂದು ಸಿದ್ಧವಾಗುತ್ತದೆ. 'ವ್ಯಾಖ್ಯೇಯತ್ವೇ ಸಿದ್ಧೇ' ಎಂಬ ಪದಗಳಿಗೆ 'ಪ್ರಥಮಸೂತ್ರವ್ಯಾಖ್ಯಾಮಾರಭತೇ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಶಂಕೆಯನ್ನು ಉತ್ಥಾಪನೆ ಮಾಡುವುದಕ್ಕಾಗಿ ಅಥವಾ ವೈಯರ್ಥ್ಯವನ್ನು ಪರಿಹರಿಸುವುದಕ್ಕಾಗಿ ಮೊದಲನೆಯ ಸೂತ್ರತಾತ್ಪರ್ಯವನ್ನು "ಪ್ರೇಕ್ಷಾವತ್" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## ಉಪೋದ್ಘಾತದ ಸಾರಾಂಶ

ವಿವರಣೆ – ಬ್ರಹ್ಮಸೂತ್ರಗಳಿಗೆ ಅರ್ಥವಿವಕ್ಷಾಪೂರ್ವಕತ್ವವೇ ಇರುವುದಿಲ್ಲವೆಂದು ಮೊದಲು ಆಕ್ಷೇಪ ಮಾಡಲಾಯಿತು. ಅನಂತರ ಪ್ರಾಮಾಣ್ಯವು ಇರುವುದಿಲ್ಲ ಎಂದು ಆಕ್ಷೇಪಿಸಲಾಯಿತು.

ಪ್ರಾಮಾಣ್ಯವಿದ್ದರೂ ಕೂಡ ಇತರಗ್ರಂಥಗಳನ್ನು ಬಿಟ್ಟು ಇದನ್ನೇ ಏಕೆ ವ್ಯಾಖ್ಯಾನಮಾಡಬೇಕು ಎಂದು ಪ್ರಶ್ನಿಸಲಾಯಿತು. ಈ ಆಕ್ಷೇಪಗಳಿಗೆ ಈ ಶಾಸ್ತ್ರವು ಪರವಿದ್ಯೆ ಆಗಿರುವುದರಿಂದ ಅರ್ಥವಿವಕ್ಷಾಪೂರ್ವಕವಾಗಿದೆ. ಮತ್ತು ಅನುತ್ತಮಪ್ರಾಮಾಣ್ಯವೂ ಕೂಡ ಇರುತ್ತದೆ. ಈ ಕಾರಣದಿಂದ ಬೇರೆ ಗ್ರಂಥಗಳನ್ನು ಬಿಟ್ಟು ಈ ಗ್ರಂಥವೇ ವ್ಯಾಖ್ಯಾನಕ್ಕೆ ಅರ್ಹವಾಗಿದೆ. ಇಷ್ಟು ಸಮರ್ಥನೆಮಾಡಿದ ಮೇಲೆ ಪುನಃ ಆಕ್ಷೇಪ ಮಾಡಲಾಯಿತು. ಈ ಶಾಸ್ತ್ರದಲ್ಲಿ ಮಂಗಳಾಚರಣೆಯೇ ಇರುವುದಿಲ್ಲ. ಇಂಥ ಗ್ರಂಥವನ್ನೇಕೆ ವ್ಯಾಖ್ಯಾನ ಮಾಡಬೇಕು ಎಂಬ ಪ್ರಶ್ನೆಗೆ ಓಂಕಾರ ಮತ್ತು ಅಥಶಬ್ದಗಳು ಮಾಂಗಲಿಕವಾಗಿವೆ, ಮಂಗಳಾಚರಣೆ ಇರುವುದರಿಂದ ಈ ಗ್ರಂಥವು ವ್ಯಾಖ್ಯೇಯವಾಗಿದೆ ಎಂದು ಇಲ್ಲಿಯ ತನಕ ಸಮರ್ಥಿಸಲಾಯಿತು. ಇಷ್ಟು ಗ್ರಂಥಕ್ಕೆ ಉಪೋದ್ಘಾತ. ಮುಂದೆ ಗ್ರಂಥದ ಅಧ್ಯಯನ ಪ್ರಾರಂಭವಾಗುತ್ತಿದೆ. ಸೂತ್ರಗಳಲ್ಲಿರುವ ಪ್ರತಿಯೊಂದು ಅಕ್ಷರಗಳನ್ನೂ ವ್ಯಾಖ್ಯಾನ ಮಾಡಲಾಗುತ್ತಿದೆ. ಪ್ರಥಮಸೂತ್ರವನ್ನು ಅಧ್ಯಯನ ಮಾಡುವ ಮೊದಲು ಒಂದು ಪ್ರಶ್ನೆ ಎದುರಾಗುತ್ತದೆ. ಮೊದಲನೆಯ ಸೂತ್ರವೇ ವ್ಯರ್ಥವಾಗಿದೆ. ಇದರ ಅವಶ್ಯಕತೆ ಏನು? ಎಂದು. ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಪ್ರಥಮಸೂತ್ರದ ಸಾರ್ಥಕ್ಯವನ್ನು "ಪ್ರೇಕ್ಷಾವತ್" ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

## ಶಾಸ್ತ್ರಪ್ರವೃತ್ತಿಯಲ್ಲಿ ಪ್ರಯೋಜನಾದಿಗಳ ಜ್ಞಾನವು ಆವಶ್ಯಕ

**ಪರಿಮಳ** – ಪ್ರಯೋಜನೇತಿ ॥ ಪ್ರಯೋಜನವಿಷಯಸಂಬಂಧವತೀತಿ ವಾ ತಾಭ್ಯಾಂ ಸಂಬಂಧವತೀತಿ ವಾಽರ್ಥಃ । ಪ್ರಯೋಜನಾದ್ಯಭಿಸಂಬಂಧಮಿತಿ ॥ 'ಶಾಸ್ತ್ರಸ್ಯ' ಇತ್ಯನುಷಂಗಃ । ಮೋಕ್ಷರೂಪಪ್ರಯೋಜನೇನ ಬ್ರಹ್ಮರೂಪವಿಷಯಜ್ಞಾನದ್ವಾರಾ ಜನ್ಯಜನಕಭಾವರೂಪಸಂಬಂಧಂ ಬ್ರಹ್ಮಸೂತ್ರಸಂದರ್ಭರೂಪಶಾಸ್ತ್ರಸ್ಯ ಪ್ರತಿಪಾದಯತ ಇತ್ಯರ್ಥಃ । ತಜ್ಜ್ಞಾನಾಧೀನತ್ವಾತ್ ಪ್ರವೃತ್ತೇರಿತಿ ಭಾವಃ । ಏತಚ್ಚ ಜಿಜ್ಞಾಸಾದ್ವಾರಾ ಇತ್ಯೇತದಗ್ರೇ ವ್ಯಕ್ತಮ್ ॥

"ಪ್ರಯೋಜನಾದ್ಯಭಿಸಂಬಂಧವತ್ಯೇವ" – ಪ್ರಯೋಜನ, ವಿಷಯ, ಸಂಬಂಧಗಳುಳ್ಳದ್ದರಲ್ಲಿ ಎಂದರ್ಥ. ಅಥವಾ ಪ್ರಯೋಜನ ವಿಷಯಗಳಿಂದ ಸಂಬಂಧವುಳ್ಳದ್ದರಲ್ಲಿ ಎಂದೂ ಅರ್ಥ. 'ಪ್ರಯೋಜನಾದ್ಯಭಿಸಂಬಂಧಂ" – 'ಶಾಸ್ತ್ರಸ್ಯ ಎಂಬ ಪದವನ್ನು ಅಧ್ಯಾಹಾರ ಮಾಡಿ-

ಕೊಳ್ಳಬೇಕು. ಮೋಕ್ಷವೆಂಬ ಪ್ರಯೋಜನವು ಬ್ರಹ್ಮವೆಂಬ ವಿಷಯದ ಜ್ಞಾನದ ಮೂಲಕ ಬರುತ್ತದೆ. ಆದ್ದರಿಂದ ಮೋಕ್ಷಕ್ಕೂ ಈ ಶಾಸ್ತ್ರಕ್ಕೂ ಬ್ರಹ್ಮಜ್ಞಾನದ್ವಾರಾ ಜನ್ಯಜನಕಭಾವ-ರೂಪವಾದ ಸಂಬಂಧವಿರುತ್ತದೆ. ಹೀಗೆ ಪ್ರತಿಪಾದಿಸುವುದು ಪ್ರಥಮಸೂತ್ರದ ಉದ್ದೇಶ. ಏಕೆಂದರೆ ಪ್ರಯೋಜನದ ಜ್ಞಾನವಿದ್ದರೆ ಮಾತ್ರ ಪ್ರವೃತ್ತಿಯಾಗಲು ಸಾಧ್ಯ. ಪ್ರವೃತ್ತಿಯು ಪ್ರಯೋಜನಾದಿಜ್ಞಾನಾಧೀನವಾಗಿದೆ ಎಂದಭಿಪ್ರಾಯ. ಪ್ರಯೋಜನಾದಿಗಳ ಜ್ಞಾನವು ಬ್ರಹ್ಮ-ಜ್ಞಾನದಲ್ಲಿ ಇಚ್ಛೆಯನ್ನು ಹುಟ್ಟಿಸುತ್ತದೆ. ಅದರಿಂದ ಪ್ರವೃತ್ತಿಯು ಉಂಟಾಗುತ್ತದೆ. ಹೀಗೆ ಜಿಜ್ಞಾಸೆಯ ಮೂಲಕ ಪ್ರಯೋಜನಾದಿಗಳ ಜ್ಞಾನವು ಪ್ರವೃತ್ತಿಕಾರಣವಾಗುತ್ತದೆಂಬ ವಿಚಾರ-ವನ್ನು ಮುಂದೆ ಸ್ಪಷ್ಟಪಡಿಸುತ್ತಾರೆ.

## ಅರ್ಥವಾದಾನ್ಯಥಾನುಪಪತ್ತಿಗೆ ಅನ್ಯಥಾಸಿದ್ಧಿಯ ಆಶಂಕೆ

ವಾಕ್ಯಾರ್ಥಚಂದ್ರಿಕಾ – ನನು ಚಾರ್ಥವಾದಸ್ಯ ಅದೃಷ್ಟಫಲಬೋಧಕತ್ವೇನ ವಾಕ್ಯಾರ್ಥೇ ಸಮನ್ವಯರೂಪದೃಷ್ಟಫಲಸಮರ್ಪಕತ್ವಾಭಾವೇನ ಬ್ರಹ್ಮವಿದ್ಯೋಚ್ಚಾರಣದಶಾಯಾಮ್ ಓಂಕಾ-ರೋಚ್ಚಾರಣಮಾತ್ರಸ್ಯ ಅರ್ಥವಾದೇನ ಸಿದ್ಧಾವಪಿ ನ ನಿಯಮೇನ ಊಹಸಿದ್ಧಿಃ । ಊಹೇನೇವ ರಾತ್ರಿಸತ್ರನ್ಯಾಯೇನ ಪ್ರಾಙ್ಮುಖತ್ವಾದಿವದ್ ಬಹಿರ್ಭೂತಸ್ಯೋಚ್ಚಾರಣಸ್ಯ ವಿಧಿಕಲ್ಪನಯಾಽಪಿ ಅರ್ಥವಾದಸ್ಯೋಪಪತ್ತೇಃ । ಏವಂ ಚ 'ಅರ್ಥವಾದಸಾಮರ್ಥ್ಯಾತ್' ಇತ್ಯುಕ್ತಮನುಪಪನ್ನಮಿತಿ ಸಾಮರ್ಥ್ಯರೂಪಾನ್ಯಥಾನುಪಪತ್ತಾವನ್ಯಥಾಸಿದ್ಧಿಂ ಶಂಕತೇ – ನನು ಚೇತಿ ॥

ಅರ್ಥವಾದವು ಅದೃಷ್ಟಫಲಬೋಧಕವಾಗಿರುತ್ತದೆ. ಹಾಗಾಗಿ ವಾಕ್ಯಾರ್ಥದಲ್ಲಿ ಸಮನ್ವಯವೆಂಬ ದೃಷ್ಟಫಲಸಮರ್ಪಕವೆಂದು ಹೇಳಬಾರದು. ಬ್ರಹ್ಮವಿದ್ಯೆಯ ಉಚ್ಚಾರಣೆ ಮಾಡುವ ಸಮಯದಲ್ಲಿ ಓಂಕಾರದ ಉಚ್ಚಾರಣೆಯನ್ನಷ್ಟೇ ಮಾಡಬೇಕೆಂಬುದು ಅರ್ಥವಾದದಿಂದ ಸಿದ್ಧವಾಗುತ್ತದೆ. ಆದರೂ ಕೂಡ ನಿಯಮೇನ ಊಹೆಯು ಸಿದ್ಧವಾಗುವುದಿಲ್ಲ. ಊಹೆಯಂತೆ ರಾತ್ರಿಸತ್ರನ್ಯಾಯದಿಂದ ಪ್ರಾಙ್ಮುಖ-ತ್ವಾದಿಗಳಂತೆ ಬಹಿರ್ಭೂತವಾದ ಉಚ್ಚಾರಣೆಗೆ ವಿಧಿಕಲ್ಪನೆಯಿಂದಲೂ ಕೂಡ ಅರ್ಥವಾದವು ಉಪ-ಪನ್ನವಾಗುತ್ತದೆ. ಆದ್ದರಿಂದ "ಅರ್ಥವಾದಸಾಮರ್ಥ್ಯಾತ್" ಎಂದು ಹೇಳಿದ್ದು ಅನುಪಪನ್ನವಾಗಿದೆ. ಹೀಗೆ ಸಾಮರ್ಥ್ಯರೂಪವಾದ ಅನ್ಯಥಾನುಪಪತ್ತಿಯಲ್ಲಿ ಅನ್ಯಥಾಸಿದ್ಧಿಯನ್ನು "ನನು ಚ" ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

ವಿವರಣೆ – ಹಿಂದೆ ಗ್ರಂಥಕಾರರು 'ಓಂಕಾರಸ್ಯ ಊಹಃ ಕರ್ತವ್ಯಃ ಅರ್ಥವಾದಸಾಮರ್ಥ್ಯಾತ್' ಎಂಬುದಾಗಿ ಹೇಳಿದ್ದರು. ಇಲ್ಲಿ ಸಾಮರ್ಥ್ಯಶಬ್ದಕ್ಕೆ ಅನ್ಯಥಾನುಪಪತ್ತಿ ಎಂದರ್ಥ. ಅಲ್ಲಿ ಹೇಳಿದ ಅನ್ಯಥಾನುಪಪತ್ತಿಗೆ ಅನ್ಯಥಾ ಉಪಪತ್ತಿಯನ್ನು ಪ್ರಕೃತ ಆಶಂಕಿಸುತ್ತಿದ್ದಾರೆ. ಅದು ಹೀಗೆ – ಅರ್ಥವಾದಕ್ಕೆ ಯಾವುದಾದರೂ ವಿಧಿಯು ಇರಬೇಕು. ಊಹದ ವಿಧಿಯೋ ಅಥವಾ ಉಚ್ಚಾರಣೆ ವಿಧಿಯೋ ಎಂಬುದೇ ಇಲ್ಲಿ ಉಂಟಾಗುವ ಗೊಂದಲ. ಅರ್ಥವಾದವು ಯಾವತ್ತೂ ಕೂಡ ಅದೃಷ್ಟಫಲವನ್ನೇ ಹೇಳುತ್ತದೆ. ದೃಷ್ಟಫಲವನ್ನು ಹೇಳುವುದಿಲ್ಲ. ಓಂಕಾರವು ಗುಣಪೂರ್ಣತ್ವವನ್ನು ಹೇಳುತ್ತದೆ. ಇದು ಬ್ರಹ್ಮನಲ್ಲಿ ವಿಶೇಷಣವಾಗಿದೆ ಎಂಬ ವಿಚಾರವನ್ನು ಇಲ್ಲಿ ಅರ್ಥವಾದವು ತಿಳಿಸುತ್ತಿಲ್ಲ. ಆದ್ದರಿಂದ ವಾಕ್ಯಾರ್ಥೇ ಸಮನ್ವಯರೂಪವಾದ ದೃಷ್ಟಫಲವನ್ನು ಅರ್ಥವಾದವು ಹೇಳುತ್ತಲೇ ಇಲ್ಲ. ಬ್ರಹ್ಮವಿದ್ಯೆಯ ಉಚ್ಚಾರಣೆ ಮಾಡುವ ಸಮಯದಲ್ಲಿ ಓಂಕಾರದ ಉಚ್ಚಾರಣೆಯನ್ನಷ್ಟೇ ಅರ್ಥವಾದವು ಸಾಧಿಸುತ್ತಿದೆ. ಅಂದಮಾತ್ರಕ್ಕೆ ನಿಯಮದಿಂದ ಊಹಮಾಡಬೇಕೆಂದು ಸಿದ್ಧವಾಗುವುದಿಲ್ಲ.

ರಾತ್ರಿಸತ್ರಕ್ಕೆ ಯಾವುದೇ ವಿಧಿಯು ಇರುವುದಿಲ್ಲ. ಅರ್ಥವಾದಪ್ರಮಾಣವಷ್ಟೇ ಇರುತ್ತದೆ. ಅರ್ಥವಾದದಿಂದ ಅಲ್ಲಿ ವಿಧಿಯನ್ನು ಕಲ್ಪನೆ ಮಾಡಲಾಗಿದೆ. ಈ ವಿಚಾರವು ಪೂರ್ವಮೀಮಾಂಸೆಯ ನಾಕನೆಯ ಅಧ್ಯಾಯದ ಮೂರನೆಯ ಪಾದದ ಎಂಟನೆಯ ಅಧಿಕರಣದಲ್ಲಿ ಪ್ರಸಕ್ತವಾಗಿದೆ. ಅದೇ ರೀತಿಯಾಗಿ ಪ್ರಕೃತದಲ್ಲಿ ಪ್ರಾಙ್ಮುಖತ್ವಾದಿಗಳಂತೆ ಓಂಕಾರವನ್ನು ಉಚ್ಚಾರಣೆ ಮಾಡಬೇಕು ಎಂಬ ವಿಧಿಯನ್ನು ಕಲ್ಪನೆ ಮಾಡುವುದರಿಂದಲೂ ಕೂಡ ಅರ್ಥವಾದವು ಉಪಪನ್ನವಾಗುತ್ತದೆ. ಆದ್ದರಿಂದ ಊಹೆಯನ್ನು ಒಪ್ಪದೇ ಅರ್ಥವಾದವು ಉಪಪನ್ನವಾಗುವುದಿಲ್ಲ ಎಂಬ ಅನ್ಯಥಾನುಪಪತ್ತಿಯು ಉಚ್ಚಾರಣೆಗೆ ವಿಧಿಕಲ್ಪನೆಯ ಮೂಲಕ ಅನ್ಯಥಾ ಉಪಪನ್ನವಾಯಿತು. ಸಾಮರ್ಥ್ಯದಿಂದ ತಿಳಿಯುವ ಅನ್ಯಥಾ ಉಪಪತ್ತಿಗೆ ಅನ್ಯಥಾಸಿದ್ಧಿಯನ್ನು ಹೇಳಿದಂತಾಯಿತು.

## ಪೂರ್ವಪಕ್ಷಿಯ ಅನುಮಾನಕ್ಕೆ ಆಭಾಸತ್ವಸಮರ್ಥನೆ

ವಾಕ್ಯಾರ್ಥಚಂದ್ರಿಕಾ – ಸಂದೇಹೇಽಪಿ ಊಹಪಕ್ಷೇ ಊಹ್ಯಮಾನಸ್ಯ ಅವಯವತ್ವಾತ್ ಪ್ರತಿಸೂತ್ರಂ ಚೋಚ್ಚಾರಣೇ ಗೌರವಾದಧಿಕೃತತ್ವೇನ ಆದೌ ಉಚ್ಚಾರಣೇ ಸಿದ್ಧೇ ಅಧಿಕಾರಜ್ಞಾಪಕತಯಾ ಅಸಂಹಿತತಯಾ ನಿರ್ದೇಶೋಪಪತ್ತೌ ಹೇತೋರನ್ಯಥಾಸಿದ್ಧಿಃ ಪಕ್ಷಾಂತರೇ ತು ನೇತಿ ಸಂದಿಗ್ಧಾನ್ಯಥಾಸಿದ್ಧಿರಪಿ ಅನುಮಾನದೂಷಣಮೇವ ಇತ್ಯಾಹ – ಸಂದೇಹೇಽಪೀತಿ ॥

ಸಂದೇಹವಿದ್ದರೂ ಕೂಡ ಊಹಪಕ್ಷದಲ್ಲಿ ಊಹ್ಯಮಾನವಾದದ್ದಕ್ಕೆ ಅವಯವತ್ವವು ಕೂಡುತ್ತದೆ. ಆಗ ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವವು ಬರುತ್ತದೆ. ಆದ್ದರಿಂದ ಅಧಿಕೃತತ್ವೇನ ಪ್ರಥಮಸೂತ್ರದಲ್ಲಿ ಮಾತ್ರ ಉಚ್ಚಾರಣವು ಸಿದ್ಧವಾಗುವುದಾದರೆ ಅಧಿಕಾರಜ್ಞಾಪಕತ್ವೇನ ಅಸಂಹಿತತಯಾ ನಿರ್ದೇಶವು ಉಪಪನ್ನವಾಗುತ್ತದೆ. ಆಗ ಅಸಂಹಿತತಯಾ ನಿರ್ದೇಶವು ಉಪಪನ್ನವಾದರೆ ಹೇತುವಿಗೆ ಅನ್ಯಥಾಸಿದ್ಧಿಯು ಬರುತ್ತದೆ. ಮತ್ತೊಂದು ಪಕ್ಷದಲ್ಲಿ ಈ ದೋಷವು ಇರುವುದಿಲ್ಲ. ಹೀಗೆ ಸಂದಿಗ್ಧವಾದ ಅನ್ಯಥಾಸಿದ್ಧಿಯೂ ಕೂಡ ಅನುಮಾನದೋಷವೆಂದೇ ಕರೆಸಿಕೊಳ್ಳುತ್ತದೆ. ಇದನ್ನು "ಸಂದೇಹೇಽಪಿ" ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ವಿವರಣೆ – ನಮ್ಮ ಅರ್ಥಾಪತ್ತಿಯು ಸಂದಿಗ್ಧವಾದರೂ ಕೂಡ ದೋಷವಿಲ್ಲ. ಪೂರ್ವಪಕ್ಷಿಗಳ ಅನುಮಾನವು ಸಂದಿಗ್ಧಾನ್ಯಥಾಸಿದ್ಧಿಯಿಂದ ದುಷ್ಟವಾಗುತ್ತದೆ. ಅದು ಹೀಗೆ – ಸಂದೇಹದಲ್ಲಿ ಊಹೆ ಮತ್ತು ಉಚ್ಚಾರಣೆ ಎಂಬ ಎರಡು ಕೋಟಿಗಳಿವೆ. ಒಂದು ವೇಳೆ ಊಹೆಯು ಪ್ರಾಪ್ತವಾದರೆ ಆಗ ಅವಯವತ್ವವು ನಿಶ್ಚಯವಾಗುತ್ತದೆ. ಆಗ ಪ್ರತಿಯೊಂದು ಸೂತ್ರದಲ್ಲಿ ಉಚ್ಚಾರಣೆ ಮಾಡಿದರೆ ಗೌರವವು ಬರುವುದರಿಂದ ಪ್ರಥಮಸೂತ್ರದಲ್ಲಿ ಅಧಿಕೃತತ್ವೇನ ಓಂಕಾರವನ್ನು ಉಚ್ಚರಿಸಲಾಗಿದೆ. ಒಂದು ವೇಳೆ ಸಂಹಿತತಯಾ ನಿರ್ದೇಶಮಾಡಿದರೆ ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯು ತಿಳಿಯುತ್ತಿರಲಿಲ್ಲ. ಅದಕ್ಕೋಸ್ಕರ ಅಸಂಹಿತತಯಾ ನಿರ್ದೇಶಮಾಡಲಾಗಿದೆ. ಹೀಗೆ ಅಸಂಹಿತತಯಾ ನಿರ್ದೇಶವನ್ನು ಮಾಡಲು ಪಾಕ್ಷಿಕವಾಗಿ ಕಾರಣವು ಇರುತ್ತದೆ. ಊಹಪಕ್ಷದಲ್ಲಿ ಮಾತ್ರ ಹೀಗೆ ಅನ್ಯಥಾಸಿದ್ಧಿಯನ್ನು ಹೇಳಲು ಸಾಧ್ಯವಾಗುತ್ತದೆ. ಉಚ್ಚಾರಣೆಯ ಪಕ್ಷದಲ್ಲಿ ಅನ್ಯಥಾಸಿದ್ಧಿಯನ್ನು ಹೇಳಲು ಆಗುವುದಿಲ್ಲ. ಒಂದು ಪಕ್ಷದಲ್ಲಿ ಅನ್ಯಥಾಸಿದ್ಧಿಯು ಪ್ರಾಪ್ತವಾಗುತ್ತದೆ. ಮತ್ತೊಂದು ಪಕ್ಷದಲ್ಲಿ ಅನ್ಯಥಾಸಿದ್ಧಿಯು ಬರುವುದಿಲ್ಲ. ಆದ್ದರಿಂದ ಸಂದಿಗ್ಧಾನ್ಯಥಾಸಿದ್ಧಿಯು ಬರುತ್ತದೆ. ಈ ಸಂದಿಗ್ಧಾನ್ಯಥಾಸಿದ್ಧಿಯಿಂದಲೂ ಕೂಡ ಅನುಮಾನವು ದುಷ್ಟವೆಂದು ತಿಳಿಯುತ್ತದೆ.

## ಅರ್ಥಾಪತ್ತಿಯು ಯಾವುದೇ ದೋಷವಿಲ್ಲದ ಅಧ್ಯಾಹಾರಮಾರ್ಗವನ್ನೇ ಆಶ್ರಯಿಸುತ್ತದೆ

ವಾಕ್ಯಾರ್ಥಚಂದ್ರಿಕಾ – ಅಂಗೀಕೃತ್ಯ ಚೇದಮುದಿತಮ್ । ವಸ್ತುತಸ್ತು ಓಂಕಾರಸ್ಯ ವಿಷಯಾದಿಸಮರ್ಪಕತಯಾ ಪ್ರಥಮಸೂತ್ರವಾಕ್ಯಾರ್ಥೇ ಸಮನ್ವಯಸ್ಯ ವಕ್ಷ್ಯಮಾಣತ್ವಾದ್ ವಾಕ್ಯಾರ್ಥಾನ್ವಿತಸ್ಯ ಚ ತದ್ಬಹಿರ್ಭಾವಾಸಂಭವಾದ್ ಅರ್ಥವಾದೋ ಬಹಿರ್ಭೂತೋಚ್ಚಾರಣವಿಧಿ

ಕಲ್ಪನಾಯಾಂ ಪ್ರವೃತ್ತೋ ವಕ್ಷ್ಯಮಾಣನ್ಯಾಯಾನುಸಂಧಾನೇನ ಪ್ರಥಮಸೂತ್ರ ಏವ ಕುಂಠಿತಃ। ತತ್ರ ಅಪ್ರಸರಾದ್ ವಿಧಿಕಲ್ಪನಾಮಾರ್ಗಂ ಪರಿತ್ಯಜ್ಯ ಉಕ್ತರೀತ್ಯಾ ತದರ್ಥಾನನ್ವಿತತ್ವೇಽಪಿ ತದೇಕಕಾರ್ಯ-ಕಾರಿತ್ವಸ್ಯ ಅಧ್ಯಾಹೃತೇಽಪಿ ಸಂಭವೇನಾಧ್ಯಾಹಾರಪಕ್ಷೇ ದೋಷಮನುಪಲಭಮಾನಃ ಸರ್ವ-ಸಾಧಾರಣಮಧ್ಯಾಹಾರಮಾರ್ಗಮೇವಾಶ್ರಯತೀತಿ ನಿಶ್ಚಿತಾನ್ಯಥಾಸಿದ್ಧಿರೇವ।

ಇಲ್ಲಿಯ ತನಕ ಹೇಳಿದ್ದು ಅಂಗೀಕಾರವಾದದಿಂದ. ವಾಸ್ತವವಿಚಾರ ಹೀಗಿದೆ – ಓಂಕಾರಕ್ಕೆ ವಿಷಯಾದಿಸಮರ್ಪಕತ್ವೇನ ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಅನ್ವಯವು ಇರುತ್ತದೆಂದು ಮುಂದೆ ಸಮರ್ಥಿಸಲಾಗುತ್ತದೆ. ವಾಕ್ಯಾರ್ಥದಲ್ಲಿ ಅನ್ವಿತವಾದದ್ದಕ್ಕೆ ಬಹಿರ್ಭಾವವು ಕೂಡುವುದಿಲ್ಲ. ಆದ್ದರಿಂದ ಅರ್ಥವಾದವು ಬಹಿರ್ಭೂತವಾದ ಉಚ್ಚಾರಣೆಯ ವಿಧಿಕಲ್ಪನೆ ಎಂಬ ಮಾರ್ಗದಲ್ಲಿ ಪ್ರವೃತ್ತವಾಗಿ ವಕ್ಷ್ಯಮಾಣನ್ಯಾಯವನ್ನು ಅನುಸಂಧಾನ ಮಾಡಿಕೊಂಡು ಪ್ರಥಮಸೂತ್ರದಲ್ಲೇ ಕುಂಠಿತವಾಗುತ್ತದೆ. (ಓಂಕಾರಕ್ಕೆ ಪ್ರಥಮಸೂತ್ರಾರ್ಥದಲ್ಲಿ ಅನ್ವಯವಿದೆಯೆಂಬ ತಿಳಿವಳಿಕೆಯು ಅರ್ಥಾಪತ್ತಿಗೆ ಮುಂದೆ ತೆರಳಲು ಪ್ರತಿಬಂಧಕವಾಗುತ್ತದೆ. ಪ್ರತಿಬಂಧಕವಿದ್ದಾಗ ಮುಂದೆ ಸಾಗಲು ಸಾಧ್ಯವಾಗುವುದಿಲ್ಲ.). ಆದ್ದರಿಂದ ಅರ್ಥಾಪತ್ತಿಯು ಉಚ್ಚಾರಣೆವಿಧಿಕಲ್ಪನೆಯೆಂಬ ದಾರಿಯನ್ನು ಬಿಟ್ಟು ಹಿಂದೆ ಹೇಳಿದಂತೆ ಅಧ್ಯಾಹಾರಮಾಡಬೇಕೆಂಬ ಮಾರ್ಗದಲ್ಲಿ ಸಾಗುತ್ತದೆ. ಈ ಪಕ್ಷದಲ್ಲಿ ದ್ವಿತೀಯಾದಿಸೂತ್ರಾರ್ಥಗಳಲ್ಲಿ ಓಂಕಾರದ ಅರ್ಥಕ್ಕೆ ಅನ್ವಯವಿಲ್ಲದಿದ್ದರೂ ಕೂಡ ತದೇಕಕಾರ್ಯಕಾರಿತ್ವರೂಪವಾದ ಅವಯವತ್ವವು ದ್ವಿತೀಯಾದಿಸೂತ್ರಗಳಲ್ಲೂ ಕೂಡ ಇದ್ದೇ ಇರುತ್ತದೆ. ಆದ್ದರಿಂದ ಅಧ್ಯಾಹಾರಪಕ್ಷದಲ್ಲಿ ಯಾವುದೇ ದೋಷಗಳು ಕಾಣಿಸದೇ ಇರುವ ಸರ್ವಸಾಧಾರಣವಾದ ಅಧ್ಯಾಹಾರಮಾರ್ಗವನ್ನೇ ಅರ್ಥಾಪತ್ತಿಯು ಆಶ್ರಯಿಸುತ್ತದೆ. (ಅಧ್ಯಾಹಾರವು ಎಲ್ಲಾ ಸೂತ್ರಗಳಲ್ಲೂ ಇರುವುದರಿಂದ ಸರ್ವಸಾಧಾರಣ ಎಂದು ಹೇಳಿದ್ದಾರೆ.) ಹೀಗೆ ಹೇಳಿದ್ದರಿಂದ ಓಂಕಾರವು ಪ್ರಥಮಸೂತ್ರದ ಅವಯವಾಗಿದೆಯೆಂದೇ ನಿಶ್ಚಯ-ವಾಯಿತು. ಆದ್ದರಿಂದ ನಿಶ್ಚಿತವಾದ ಅನ್ಯಥಾಸಿದ್ಧಿದೋಷವನ್ನೇ ಪೂರ್ವಪಕ್ಷಿಗಳ ಅನುಮಾನಕ್ಕೆ ಸಾಧಿಸಿ-ದಂತಾಯಿತು.

ವಿವರಣೆ – (ಅರ್ಥಾಪತ್ತಿಯನ್ನು ಚೇತನನಂತೆ ವಿವಕ್ಷಿಸಿ ಇಲ್ಲಿ ವಾಕ್ಯಗಳು ಹೊರಟಿವೆ. ಅರ್ಥಾಪತ್ತಿಯ ಅನುಸಂಧಾನವಿರುವ ಚೇತನನ ಪ್ರವೃತ್ತಿಯು ಹೇಗಿರುತ್ತದೋ ಅದನ್ನು ಗೌಣವಾಗಿ ವಿವಕ್ಷಿಸಿ ಅರ್ಥಾಪತ್ತಿಯಲ್ಲಿಯೇ ಹೇಳುತ್ತಿದ್ದಾರೆ.)

ಅನ್ಯಥಾನುಪಪತ್ತಿಯಿಂದ ಅರ್ಥಾಪತ್ತಿಗೆ ಇಲ್ಲಿ ಎರಡು ಮಾರ್ಗಗಳಿವೆ. (೧) ಊಹೆಯನ್ನು ಮಾಡುವುದು (೨) ಓಂಕಾರವನ್ನು ಬಹಿರ್ಭೂತವಾಗಿ ಉಚ್ಚಾರಣೆ ಮಾಡುವುದು ಎಂದು. ಒಂದು ವೇಳೆ ಅರ್ಥಾಪತ್ತಿಯು ಓಂಕಾರವನ್ನು ಬಹಿರ್ಭೂತವಾಗಿ ಉಚ್ಚಾರಣೆ ಮಾಡಬೇಕು ಎಂಬ ಮಾರ್ಗದಲ್ಲಿ ತೆರಳಿದರೆ ಪ್ರಥಮಸೂತ್ರದಲ್ಲೇ ಕುಂಠಿತವಾಗುತ್ತದೆ. ಯಾವಾಗ ಓಂಕಾರವು ಪ್ರಥಮಸೂತ್ರದಲ್ಲಿ ಅನ್ವಯವನ್ನು ಹೊಂದುತ್ತದೋ ಆಗ ಅರ್ಥಾಪತ್ತಿಯು ಕೇವಲ ಪ್ರಥಮಸೂತ್ರದ ಅವಯವವೆಂದಷ್ಟೇ ಸಾಧಿಸಿ, ಕುಂಠಿತವಾಗಿಬಿಡುತ್ತದೆ. ಆದಕ್ಕಾಗಿ ಊಹೆಯೆಂಬ ಮಾರ್ಗವನ್ನೇ ಅರ್ಥಾಪತ್ತಿಯು ಅನುಸರಿಸಬೇಕು. ಇದರಲ್ಲಿ ಕುಂಠಿತವಾಗಲು ಅವಕಾಶವಿಲ್ಲ. ಅಧ್ಯಾಹಾರ ಮಾಡುವ ಪಕ್ಷದಲ್ಲೂ ಕೂಡ ಪ್ರಥಮಸೂತ್ರಾರ್ಥದಲ್ಲಿ ಅನ್ವಯವು ಇದ್ದೇ ಇದೆ. ದ್ವಿತೀಯಾದಿಸೂತ್ರಗಳಲ್ಲಿ ಅನ್ವಯವು ಇರುವುದಿಲ್ಲ. ಆದರೂ ಕೂಡ ಸೂತ್ರೇಣ ಸಹ ಏಕಕಾರ್ಯಕಾರಿತ್ವರೂಪವಾದ ಅವಯವತ್ವವನ್ನು ದ್ವಿತೀಯಾದಿ ಸೂತ್ರಗಳಲ್ಲೂ ಕೂಡ ಹೇಳಬಹುದು. ಅನ್ವಯಪ್ರತಿಯೋಗಿಸಮರ್ಪಕತ್ವವೆಂಬ ಅವಯವತ್ವವು ದ್ವಿತೀಯಾದಿಸೂತ್ರಗಳಲ್ಲಿ ಇರುವುದಿಲ್ಲವೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಆದ್ದರಿಂದ ಉಚ್ಚಾರಣೆಮಾಡಬೇಕೆಂಬ ಮಾರ್ಗವನ್ನು ಪರಿತ್ಯಾಗಮಾಡಿ ಯಾವುದೇ ಪ್ರತಿಬಂಧಕವಿಲ್ಲದ ದೀರ್ಘಮಾರ್ಗದಲ್ಲಿ ಸಾಗಲು ಸಾಧ್ಯವಾಗುವ ಅಧ್ಯಾಹಾರಪಕ್ಷವನ್ನೇ ಅರ್ಥಾಪತ್ತಿಪ್ರಮಾಣವು ಆಶ್ರಯಿಸುತ್ತದೆ.

## 'ವಕ್ಷ್ಯಮಾಣನ್ಯಾಯೇನ' ಎಂಬುದಕ್ಕೆ ಎರಡು ಅವತಾರಿಕೆ

ವಾಕ್ಯಾರ್ಥಚಂದ್ರಿಕಾ – ಪ್ರಥಮಸೂತ್ರವಾಕ್ಯಾರ್ಥಾನ್ವಯೇನ ಅವಯವತ್ವನಿಶ್ಚಯಾತ್ ಬಾಧಿತವಿಷಯತ್ವಂ ಚಾನುಮಾನಸ್ಯ ಇತ್ಯಾಶಯೇನಾಹ – ವಕ್ಷ್ಯಮಾಣೇತಿ ॥ ಯದ್ವಾ ನ ಕೇವಲಮರ್ಥವಾದಬಲೇನ ಸಂದಿಗ್ಧಾನ್ಯಥಾಸಿದ್ಧ್ಯಾ ಅನುಮಾನಸ್ಯ ಆಭಾಸತ್ವಂ ವಕ್ಷ್ಯಮಾಣನ್ಯಾಯೇನ ಬಾಧಿತವಿಷಯತ್ವಾಚ್ಚ ಇತ್ಯಾಶಯೇನಾಹ – ವಕ್ಷ್ಯಮಾಣೇತಿ ॥

ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದುವುದರಿಂದ ಓಂಕಾರಕ್ಕೆ ಸೂತ್ರಾವಯವತ್ವವೇ ನಿಶ್ಚಯವಾಗುತ್ತದೆ. ಆದ್ದರಿಂದ ಅನುಮಾನವು ಬಾಧಿತವಿಷಯವಾಗುತ್ತದೆ. ಈ ಅಭಿಪ್ರಾಯದಿಂದ ''ವಕ್ಷ್ಯಮಾಣ'' ಇತ್ಯಾದಿ ಗ್ರಂಥವು ಹೊರಟದೆ. ಅಥವಾ ಕೇವಲ ಅರ್ಥವಾದದ ಸಾಮರ್ಥ್ಯದಿಂದ ಸಂದಿಗ್ಧಾನ್ಯಥಾಸಿದ್ಧಿಯಿರುವ ಪ್ರಯುಕ್ತ ಅನುಮಾನವು ಆಭಾಸವಾಗುವುದಲ್ಲ. ಮುಂದೆ ಹೇಳುವ ನ್ಯಾಯದಿಂದ ಬಾಧಿತವಿಷಯವೂ ಕೂಡ ಆಗುತ್ತದೆ. ಈ ಅಭಿಪ್ರಾಯದಿಂದ ''ವಕ್ಷ್ಯಮಾಣ'' ಇತ್ಯಾದಿ ಗ್ರಂಥವು ಹೊರಟದೆ.

ವಿವರಣೆ – "ವಕ್ಷ್ಯಮಾಣನ್ಯಾಯೇನ" ಎಂಬ ಗ್ರಂಥಕ್ಕೆ ಎರಡು ಬಗೆಯಲ್ಲಿ ಅವತಾರಿಕೆಯನ್ನು ನೀಡುತ್ತಿದ್ದಾರೆ. ಎರಡೂ ಪಕ್ಷಗಳಲ್ಲಿರುವ ವ್ಯತ್ಯಾಸವನ್ನು ಹೀಗೆ ಗಮನಿಸಬೇಕು – ಸಂದಿಗ್ಧಾನ್ಯಥಾ-ಸಿದ್ಧಿಯನ್ನು ಅಂಗೀಕಾರವಾದದಿಂದ ಹೇಳಲಾಯಿತು. ವಿಚಾರಮಾಡಿದರೆ ನಿಶ್ಚಿತಾನ್ಯಥಾಸಿದ್ಧಿಯನ್ನೇ ಹೇಳಬಹುದು. ಜೊತೆಯಲ್ಲಿ ಬಾಧದೋಷವನ್ನು ಹೇಳುತ್ತಿದ್ದಾರೆ ಎಂಬುದು ಮೊದಲನೆಯ ಅವ-ತಾರಿಕೆಯ ಅಭಿಪ್ರಾಯ.

ನಿಶ್ಚಿತಾನ್ಯಥಾಸಿದ್ಧಿಯು ಬೇಡವೇ ಬೇಡ. ಸಂದಿಗ್ಧಾನ್ಯಥಾಸಿದ್ಧಿಯಿಂದಲೇ ಅನುಮಾನವು ಆಭಾಸ-ವಾಗುವುದಲ್ಲ. ಬಾಧದೋಷದಿಂದಲೂ ಕೂಡ ಅನುಮಾನವು ಆಭಾಸವಾಗುತ್ತದೆಂಬುದು ಎರಡ-ನೆಯ ಅವತಾರಿಕೆಯ ಅಭಿಪ್ರಾಯವಾಗಿದೆ.

## ನಮ್ಮ ಸ್ಥಾಪನಾನುಮಾನವೇ ಅವಯವತ್ವಸಾಧಕ

ವಾಕ್ಯಾರ್ಥಚಂದ್ರಿಕಾ – ಉಕ್ತನ್ಯಾಯೇನ ಇತಿ ॥ 'ಅರ್ಥವಾದಬಲಾದ್ ಊಹೇ ಸಿದ್ಧೇ ಪ್ರತಿವಾಕ್ಯಮುಚ್ಚಾರಣೇ ಗೌರವಂ ಸ್ಯಾತ್' ಇತ್ಯುಕ್ತನ್ಯಾಯೇನ ಇತ್ಯರ್ಥಃ । ಅರ್ಥವಾದವಕ್ಷ್ಯ-ಮಾಣನ್ಯಾಯಯೋಃ ಅವಯವತ್ವಸಾಧಕತ್ವೇನ ಉಕ್ತತ್ವೇಽಪಿ ತಯೋಃ ಪರಾನುಮಾನದೂಷಣೇ ವ್ಯಾಪೃತತ್ವೇನ ಉಪಕ್ರಮೋಕ್ತಸಾಧಕಮೇವ ಅವಯವತ್ವಸಾಧಕತಯಾ ಉಪಸಂಹರತಿ – ಏವ-ಮಿತಿ ॥ ವಿಸ್ತರಸ್ತು ಚಂದ್ರಿಕಾಯಾಂ ದ್ರಷ್ಟವ್ಯಃ ।

"ಉಕ್ತನ್ಯಾಯೇನ" – ಅರ್ಥವಾದದ ಸಾಮರ್ಥ್ಯದಿಂದ ಊಹೆ ಮಾಡಬೇಕೆಂದು ಸಿದ್ಧವಾದ ಮೇಲೆ ಪ್ರತಿವಾಕ್ಯಗಳಲ್ಲಿ ಉಚ್ಚಾರಣೆಯನ್ನು ಮಾಡಿದರೆ ಗೌರವದೋಷವು ಬರುತ್ತದೆ ಎಂಬ ಹಿಂದೆ ಹೇಳಿದ ನ್ಯಾಯದಿಂದ ಎಂದರ್ಥ.

ಅರ್ಥವಾದ ಹಾಗೂ ವಕ್ಷ್ಯಮಾಣನ್ಯಾಯಗಳಿಗೆ ಅವಯವತ್ವಸಾಧಕತ್ವವನ್ನು ಹೇಳಿದರೂ ಕೂಡ ಇವೆರಡು ಪರರ ಅನುಮಾನಕ್ಕೆ ದೋಷವನ್ನು ಹೇಳುವುದರಲ್ಲಿ ವ್ಯಾಪೃತವಾಗಿವೆ. ಆದ್ದರಿಂದ ಉಪಕ್ರಮದಲ್ಲಿ ಹೇಳಿದ ಸಾಧಕವನ್ನೇ ಅವಯವತ್ವಸಾಧಕವನ್ನಾಗಿ ಹೇಳುತ್ತಾ "ಏವಂ" ಇತ್ಯಾದಿ ಗ್ರಂಥದಿಂದ ಉಪಸಂಹಾರ ಮಾಡುತ್ತಿದ್ದಾರೆ. ಇನ್ನೂ ಹೆಚ್ಚಿನ ವಿಷಯವನ್ನು ತಾತ್ಪರ್ಯಚಂದ್ರಿಕೆಯನ್ನು ಓದಿ ತಿಳಿಯಬೇಕು.

ವಿವರಣೆ – ವೇದಮಂತ್ರವನ್ನು ಹೇಳುವ ಸಂದರ್ಭದಲ್ಲೂ ಕೂಡ ಸ್ಥಾನವ್ಯತ್ಯಾಸದಿಂದ ಪಠನವನ್ನು

ಮಾಡುವುದೂ ಕೂಡ ಮುಂದೆ ಅನುಗತವಾಗುವುದಕ್ಕಾಗಿ ಎಂದು. ಸೂತ್ರದ ವಿಷಯದಲ್ಲಿ ಹೇಳಿದ ನ್ಯಾಯವನ್ನು ವೇದಮಂತ್ರದಲ್ಲೂ ಕೂಡ ತಿಳಿದುಕೊಳ್ಳಬೇಕು.

ಇಲ್ಲಿಯ ತನಕ ಹೇಳಿದ್ದೆಲ್ಲವೂ ಪರರ ಅನುಮಾನಕ್ಕೆ ದೋಷವನ್ನು ಹೇಳುವುದಕ್ಕಾಗಿ ಮಾತ್ರ. ''ಓಂಕಾರಃ ಪ್ರಥಮಸೂತ್ರಾವಯವಃ ಆದೌ ಉಚ್ಚಾರ್ಯಮಾಣತ್ವಾತ್' ಎಂಬ ನಮ್ಮ ಸ್ಥಾಪನಾನುಮಾನವೇ ನಿಜವಾಗಿಯೂ ಓಂಕಾರಕ್ಕೆ ಅವಯವತ್ವವನ್ನು ಸಾಧಿಸುತ್ತದೆ. ಈ ವಕ್ಷ್ಯಮಾಣನ್ಯಾಯ ಅಥವಾ ಅರ್ಥವಾದ ಇವೆಲ್ಲವೂ ನೇರವಾಗಿ ಓಂಕಾರಕ್ಕೆ ಅವಯವತ್ವವನ್ನು ಸಾಧಿಸುತ್ತಿಲ್ಲ. ಆದ್ದರಿಂದ ಸ್ಥಾಪನಾನುಮಾನವನ್ನು ಉಪಸ್ಥಾಪನೆ ಮಾಡುವ ಮೂಲಕವೇ ವಿಷಯವನ್ನು ಉಪಸಂಹಾರ ಮಾಡುತ್ತಿದ್ದಾರೆ.

ವಾಕ್ಯಾರ್ಥಚಂದ್ರಿಕಾ – 'ಓತತ್ವಾಚೇ' ಇತ್ಯಾದೇರಪಿ ಪೂರ್ವವದ್ ವ್ಯಾಖ್ಯೇಯತಾ ಉಪಯುಕ್ತಪ್ರಮೇಯಪ್ರತಿಪಾದಕತ್ವಂ ನ ತು ವ್ಯಾಖ್ಯಾನತ್ವಮಿತಿ ಭ್ರಾಂತಿಂ ನಿವಾರಯಿತುಮ್ 'ಓತತ್ವಾಚೇ' ಇತ್ಯಾದಿವ್ಯಾಖ್ಯಾನೋಪಯುಕ್ತಪ್ರಮೇಯೋಪಕ್ಷೇಪಾಯ ಓತತ್ವಾಚೇ ಇತ್ಯಾದಿಭಾಷ್ಯಸ್ಯೋಪಲಕ್ಷಣತ್ವಾತ್ ನ ಸೂತ್ರಪ್ರತಿಪಾದ್ಯತತ್ಫಲಾನುಕ್ತ್ಯಾ ಭಾಷ್ಯೇ ನ್ಯೂನತೇತ್ಯರ್ಥಸೂಚನಾಯ ಚ ಫಲಫಲಿಭಾವೋಪಪಾದನಪುರಃಸರಂ ಪರಮ್ ಅವಾಂತರಫಲೇ ಪ್ರತಿಪಾದ್ಯಂ ಚ ಕಥಯನ್ನೇವ ಪೂರ್ವಗ್ರಂಥಾಭಿಸಂಭಿನ್ನತಯಾ ಉತ್ತರಗ್ರಂಥಪ್ರತಿಪಾದ್ಯಂ ಕಥಯತಿ – ತದೇವಮಿತಿ ॥

'ಓತತ್ವಾಚೇ' ಇತ್ಯಾದಿ ಅನುವ್ಯಾಖ್ಯಾನಶ್ಲೋಕವೂ ಕೂಡ 'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕದಂತೆ ವ್ಯಾಖ್ಯೇಯತ್ವವನ್ನು ಸಮರ್ಥಿಸುತ್ತಿದೆ. ಅದಕ್ಕೆ ಉಪಯುಕ್ತವಾದ ಪ್ರಮೇಯವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆ; ಹೊರತು ಸೂತ್ರವ್ಯಾಖ್ಯಾನವಲ್ಲ ಎಂಬ ಭ್ರಾಂತಿಯನ್ನು ನಿರಾಕರಣೆ ಮಾಡಬೇಕಾಗಿದೆ. ಹಾಗೂ ಓತತ್ವಾಚೇ ಇತ್ಯಾದಿ ವ್ಯಾಖ್ಯಾನಕ್ಕೆ ಉಪಯುಕ್ತವಾದ ಪ್ರಮೇಯವನ್ನು ಉಪಕ್ಷೇಪ ಮಾಡಬೇಕಾಗಿದೆ. ಅದಕ್ಕಾಗಿ ಓತತ್ವಾಚೇ ಇತ್ಯಾದಿ ಭಾಷ್ಯವು ಉಪಲಕ್ಷಣವಾಗಿದೆ ಎಂದು ತಿಳಿಸಬೇಕಾಗಿದೆ. ಮತ್ತು ಭಾಷ್ಯಕಾರರು ಸೂತ್ರಪ್ರತಿಪಾದ್ಯವಾದ ಪ್ರಮೇಯವನ್ನು ಹಾಗೂ ಪ್ರಥಮಸೂತ್ರದ ಫಲವನ್ನು ಹೇಳಿರುವುದಿಲ್ಲ. ಆದ್ದರಿಂದ ನ್ಯೂನತಾದೋಷವು ಬರುತ್ತದೆ. ಈ ಅರ್ಥವನ್ನು ಸೂಚನೆ ಮಾಡುವುದಕ್ಕಾಗಿ ಫಲಫಲಿಭಾವದ ಉಪಪಾದನೆಯ ಮೂಲಕ ಮಹಾಫಲ ಹಾಗೂ ಅವಾಂತರಫಲಗಳನ್ನು ಪ್ರತಿಪಾದ್ಯವಿಷಯವನ್ನೂ ಕೂಡ ಹೇಳುವ ಮೂಲಕ ಹಿಂದಿನ ಗ್ರಂಥದಿಂದ

ವಿವೇಚನೆ ಮಾಡಿ ಉತ್ತರಗ್ರಂಥಪ್ರತಿಪಾದ್ಯವಾದದ್ದನ್ನು ತಿಳಿಸಲು 'ತದೇವಂ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಇಲ್ಲಿಯ ತನಕ ವ್ಯಾಖ್ಯಾನ ಮಾಡಿದ 'ಪ್ರಾದುರ್ಭೂತಃ' ಇತ್ಯಾದಿ ಶ್ಲೋಕಗಳೆಲ್ಲವೂ ವ್ಯಾಖ್ಯಾನರೂಪವಾಗಿರುವುದಿಲ್ಲ. ವ್ಯಾಖ್ಯೇಯತ್ವಕ್ಕೆ ಉಪಯುಕ್ತವಾದ ಪ್ರಮೇಯಗಳನ್ನಷ್ಟೇ ಪ್ರತಿಪಾದನೆ ಮಾಡುತ್ತಿವೆ ಎಂದು ಹೇಳಲಾಯಿತು. ಇದರಂತೆ ಮುಂದೆ ಬರುವ 'ಓತತ್ವವಾಚೀ' ಇತ್ಯಾದಿ ಶ್ಲೋಕಗಳೂ ಕೂಡ ವ್ಯಾಖ್ಯಾನವಲ್ಲ; ಸೂತ್ರದ ವ್ಯಾಖ್ಯೇಯತ್ವಕ್ಕೆ ಉಪಯುಕ್ತವಾದ ಪ್ರಮೇಯಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂಬ ಭ್ರಾಂತಿಯನ್ನು ನಿವಾರಣೆ ಮಾಡುವುದಕ್ಕಾಗಿ 'ಓತತ್ವವಾಚೀ' ಇತ್ಯಾದಿ ಅನುವ್ಯಾಖ್ಯಾನ ಶ್ಲೋಕಗಳು ಸೂತ್ರದವ್ಯಾಖ್ಯಾನಕ್ಕಾಗಿಯೇ ಹೊರಟಿವೆ ಎಂದು ತಿಳಿಸುತ್ತಿದ್ದಾರೆ. ಆದ್ದರಿಂದ 'ಓತತ್ವವಾಚೀ' ಇತ್ಯಾದಿ ಅನುವ್ಯಾಖ್ಯಾನಕ್ಕೆ ಉಪಕ್ಷೇಪ ಮಾಡುವುದಕ್ಕಾಗಿ ಮತ್ತು ಪ್ರಥಮ-ಸೂತ್ರದಲ್ಲಿ ಪ್ರತಿಪಾದ್ಯವಾದ ವಿಷಯವನ್ನಾಗಲೀ ಫಲವನ್ನಾಗಲೀ ಭಾಷ್ಯಕಾರರು ಹೇಳಿಯೇ ಇಲ್ಲವಲ್ಲ? ಎಂಬ ಆಶಂಕೆಗೆ ಉತ್ತರಿಸುವುದಕ್ಕಾಗಿಯೂ ಕೂಡ 'ತದೇವಂ' ಇತ್ಯಾದಿ ಗ್ರಂಥವು ಹೊರಟಿದೆ. ಪ್ರಥಮಸೂತ್ರದಿಂದ ಪ್ರತಿಪಾದ್ಯವಾದದ್ದನ್ನು, ಫಲವನ್ನು ಹಾಗೂ ಅವಾಂತರಫಲವನ್ನೂ ಕೂಡ ಇದೇ ವಾಕ್ಯದಿಂದ ಹೇಳುತ್ತಿದ್ದಾರೆ. ಆರಂಭಣೀಯತ್ವಸಿದ್ಧಿಯು ಮಹಾಫಲವಾಗಿದೆ. ಪ್ರೇಕ್ಷಾವತ್ಪ್ರವೃತ್ತಿಯು ಅವಾಂತರಫಲವಾಗಿದೆ. ಪ್ರಯೋಜನಾದ್ಯಭಿಸಂಬಂಧವು ಸೂತ್ರಪ್ರತಿಪಾದ್ಯವಾಗಿದೆ ಎಂದು ತಿಳಿಯಬೇಕು.

## ಸಂದಿಗ್ಧಾನ್ಯಥಾಸಿದ್ಧಿಯಿಂದ ಪೂರ್ವಪಕ್ಷಿಯ ಅನುಮಾನವು ಆಭಾಸವಾಗಿದೆ

**ಯಾದುಪತ್ಯ – ತಯಾ ಪ್ರಣಾಡ್ಯಾ ಇತಿ ॥ ಶ್ರೌತಾರ್ಥವಾದಬಲೇನ ಆದ್ಯಂತಯೋರೋಂಕಾರಸ್ಯ ಊಹವಿಧಿಕಲ್ಪನೇ ತೇನ ಚ ಅವಯವತ್ವಕಲ್ಪನಾಸಿದ್ಧೌ ಪ್ರತಿಸೂತ್ರಮಾದ್ಯಂತಯೋರುಚ್ಚಾರಣೇ ಗೌರವಂ ಸ್ಯಾತ್ ಇತ್ಯಾದಾವೇವ ಓಂಕಾರೋಽಧಿಕೃತತ್ವೇನ ಉಚ್ಚಾರ್ಯತೇ ತಸ್ಯ ಸಂಹಿತತಯಾ ನಿರ್ದೇಶೇ ಪ್ರಥಮಸೂತ್ರಾವಯವ ಏವಾಯಂ ವಿಜ್ಞಾಯೇತ ತನ್ಮಾ ವಿಜ್ಞಾಯೀತಿ ಶಿಷ್ಟೈಃ ಪೃಥಗೋಂಕ್ರಿಯತೇ । ಏವಂ ಚ ಹೇತೋರನ್ಯಥಾಸಿದ್ಧಿರಿತಿ ಪೂರ್ವೋಕ್ತಯಾ ಪರಂಪರಯಾ ಇತ್ಯರ್ಥಃ ।**

"ತಯಾ ಪ್ರಣಾಡ್ಯಾ" – ಶ್ರೌತವಾದ ಅರ್ಥವಾದದ ಸಾಮರ್ಥ್ಯದಿಂದ ಸೂತ್ರದ ಆದ್ಯಂತಗಳಲ್ಲಿ ಓಂಕಾರದ ಊಹೆಯನ್ನು ಮಾಡಬೇಕೆಂಬ ವಿಧಿಯನ್ನು ಕಲ್ಪನೆ ಮಾಡುತ್ತಿದ್ದೀರಿ. ಹಾಗಾದರೆ

ಅವಯವತ್ವವು ಕಲ್ಪನೆ ಮಾಡಬೇಕೆಂದು ಸಿದ್ಧವಾಗುತ್ತದೆ. ಆಗ ಪ್ರತಿಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವವು ಬರಬೇಕಾಗುತ್ತದೆ. ಆದ್ದರಿಂದ ಪ್ರಾರಂಭದಲ್ಲೇ ಓಂಕಾರವನ್ನು ಅಧಿಕೃತತ್ವೇನ ಉಚ್ಚಾರಣೆ ಮಾಡಲಾಗುತ್ತದೆ. ಅದನ್ನು ಸಂಹಿತತಯಾ ನಿರ್ದೇಶಮಾಡಿದರೆ ಕೇವಲ ಪ್ರಥಮಸೂತ್ರದ ಅವಯವವೆಂದು ತಿಳಿದೀತು. ಹಾಗೆ ತಿಳಿಯಬಾರದೆಂಬ ಉದ್ದೇಶದಿಂದ ಶಿಷ್ಟರು ಓಂಕಾರವನ್ನು ಉಚ್ಚಾರಣೆ ಮಾಡಿದ್ದಾರೆ. ಆದ್ದರಿಂದ ಹಿಂದೆ ಹೇಳಿದ ಪ್ರಕಾರ ಹೇತುವಿಗೆ ಅನ್ಯಥಾಸಿದ್ಧಿಯು ಪರಂಪರೆಯಿಂದ ಪ್ರಾಪ್ತವಾಗುತ್ತದೆ.

ವಿವರಣೆ – ಶ್ರೌತವಾದ ಅರ್ಥವಾದಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕೋ? ಅಥವಾ ಪ್ರಾಙ್ಮುಖತ್ವಾದಿಗಳಂತೆ ಕೇವಲ ಸೂತ್ರಾತ್ ಬಹಿರ್ಭೂತವಾಗಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೋ? ಎಂಬ ಸಂದೇಹವಷ್ಟೇ ಪ್ರಾಪ್ತವಾಗುತ್ತಿದೆ. ಸಂದೇಹಬಂದರೂ ಕೂಡ ಸಂದಿಗ್ಧಾನ್ಯಥಾಸಿದ್ಧಿಯು ಬರುತ್ತದೆ. ಇಲ್ಲಿ ಊಹೋ ವಾ ಬಹಿರ್ಭೂತಸ್ಯ ಉಚ್ಚಾರಣಂ ವಾ? ಎಂಬುದಾಗಿ ಎರಡು ಕೋಟಿಗಳಿರುವುದರಿಂದ ಸಂದೇಹವು ಪ್ರಾಪ್ತವಾಗುತ್ತದೆ.

ಒಂದು ವೇಳೆ ಊಹವು ಇದ್ದರೆ ಊಹ್ಯಮಾನವಾದದ್ದು ಸೂತ್ರದ ಅವಯವವಾಗುತ್ತದೆ. ಆಗ ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂದು ಸಿದ್ಧವಾಗುತ್ತದೆ. ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವದೋಷ ಬರುತ್ತದೆ. ಅದನ್ನು ಪರಿಹರಿಸುವುದಕ್ಕಾಗಿ ಪ್ರಥಮಸೂತ್ರದಲ್ಲಿ ಓಂಕಾರವನ್ನು ಅಧಿಕೃತತ್ವೇನ ಹೇಳಬೇಕು. ಅಧಿಕೃತತ್ವೇನ ಹೇಳುವಾಗ ಸಂಹಿತತಯಾ ನಿರ್ದೇಶ ಮಾಡಿದರೆ ಕೇವಲ ಪ್ರಥಮಸೂತ್ರದ ಅವಯವವಾಗಿದೆ ಎಂಬ ಭ್ರಾಂತಿಯು ಬರುತ್ತದೆ. ಈ ಭ್ರಮೆಯನ್ನು ಪರಿಹಾರಮಾಡುವುದಕ್ಕಾಗಿ ಅಸಂಹಿತತಯಾ ಓಂಕಾರವನ್ನು ನಿರ್ದೇಶ ಮಾಡಲಾಗಿದೆ. ಹೀಗೆ ಅನ್ಯಥಾಸಿದ್ಧಿಯನ್ನು ನಿಶ್ಚಿತವಾಗಿ ಹೇಳಲು ಬಾರದಿದ್ದರೂ ಸಂದಿಗ್ಧವಾಗಿರುವುದರಿಂದ ಪೂರ್ವಪಕ್ಷಿಗಳ ಅನುಮಾನವು ಆಭಾಸವಾಗುತ್ತದೆ.

## ಸನ್ನ್ಯಾಯರತ್ನಾವಳಿಯಿಂದ ವಿರೋಧಪರಿಹಾರ

ಯಾದುಪತ್ಯ – ಪ್ರಥಮಸೂತ್ರವಾಕ್ಯಾರ್ಥ ಇತಿ ॥ ನ ಚಾತ್ರ 'ಓಂಕಾರಸ್ತು ಪೃಥಗುಚ್ಚಾರಿತೋ ವೇದಿತವ್ಯಃ । ನ ಅಥಶಬ್ದವತ್ ಸೂತ್ರೋಪನಿಬದ್ಧಃ' ಇತಿ ಸನ್ನ್ಯಾಯರತ್ನಾವಲೀವಿರೋಧೋ ವಾಚ್ಯಃ । ಸನ್ನ್ಯಾಯರತ್ನಾವಲ್ಯುಕ್ತಂ 'ಪೃಥಕ್ತ್ವಮ್' ಅಸಂಹಿತತಯಾ ಉಚ್ಚಾರ್ಯಮಾಣತ್ವಂ ವಿವಕ್ಷಿತಂ ನ ತ್ವನವಯವತ್ವರೂಪಮ್ । ಅನ್ಯಥಾ –

ವಿವೇಚನೆ ಮಾಡಿ ಉತ್ತರಗ್ರಂಥಪ್ರತಿಪಾದ್ಯವಾದದ್ದನ್ನು ತಿಳಿಸಲು 'ತದೇವಂ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಇಲ್ಲಿಯ ತನಕ ವ್ಯಾಖ್ಯಾನ ಮಾಡಿದ 'ಪ್ರಾದುರ್ಭೂತಃ' ಇತ್ಯಾದಿ ಶ್ಲೋಕಗಳೆಲ್ಲವೂ ವ್ಯಾಖ್ಯಾನರೂಪವಾಗಿರುವುದಿಲ್ಲ. ವ್ಯಾಖ್ಯೇಯತ್ವಕ್ಕೆ ಉಪಯುಕ್ತವಾದ ಪ್ರಮೇಯಗಳನ್ನಷ್ಟೇ ಪ್ರತಿಪಾದನೆ ಮಾಡುತ್ತಿವೆ ಎಂದು ಹೇಳಲಾಯಿತು. ಇದರಂತೆ ಮುಂದೆ ಬರುವ 'ಓತತ್ವವಾಚೀ' ಇತ್ಯಾದಿ ಶ್ಲೋಕಗಳೂ ಕೂಡ ವ್ಯಾಖ್ಯಾನವಲ್ಲ; ಸೂತ್ರದ ವ್ಯಾಖ್ಯೇಯತ್ವಕ್ಕೆ ಉಪಯುಕ್ತವಾದ ಪ್ರಮೇಯಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂಬ ಭ್ರಾಂತಿಯನ್ನು ನಿವಾರಣೆ ಮಾಡುವುದಕ್ಕಾಗಿ 'ಓತತ್ವವಾಚೀ' ಇತ್ಯಾದಿ ಅನುವ್ಯಾಖ್ಯಾನ ಶ್ಲೋಕಗಳು ಸೂತ್ರದವ್ಯಾಖ್ಯಾನಕ್ಕಾಗಿಯೇ ಹೊರಟಿವೆ ಎಂದು ತಿಳಿಸುತ್ತಿದ್ದಾರೆ. ಆದ್ದರಿಂದ 'ಓತತ್ವವಾಚೀ' ಇತ್ಯಾದಿ ಅನುವ್ಯಾಖ್ಯಾನಕ್ಕೆ ಉಪಕ್ಷೇಪ ಮಾಡುವುದಕ್ಕಾಗಿ ಮತ್ತು ಪ್ರಥಮಸೂತ್ರದಲ್ಲಿ ಪ್ರತಿಪಾದ್ಯವಾದ ವಿಷಯವನ್ನಾಗಲೀ ಫಲವನ್ನಾಗಲೀ ಭಾಷ್ಯಕಾರರು ಹೇಳಿಯೇ ಇಲ್ಲವಲ್ಲ? ಎಂಬ ಆಶಂಕೆಗೆ ಉತ್ತರಿಸುವುದಕ್ಕಾಗಿಯೂ ಕೂಡ 'ತದೇವಂ' ಇತ್ಯಾದಿ ಗ್ರಂಥವು ಹೊರಟಿದೆ. ಪ್ರಥಮಸೂತ್ರದಿಂದ ಪ್ರತಿಪಾದ್ಯವಾದದ್ದನ್ನು, ಫಲವನ್ನು ಹಾಗೂ ಅವಾಂತರಫಲವನ್ನೂ ಕೂಡ ಇದೇ ವಾಕ್ಯದಿಂದ ಹೇಳುತ್ತಿದ್ದಾರೆ. ಆರಂಭಣೀಯತ್ವಸಿದ್ಧಿಯು ಮಹಾಫಲವಾಗಿದೆ. ಪ್ರೇಕ್ಷಾವತ್ಪ್ರವೃತ್ತಿಯು ಅವಾಂತರಫಲವಾಗಿದೆ. ಪ್ರಯೋಜನಾದ್ಯಭಿಸಂಬಂಧವು ಸೂತ್ರಪ್ರತಿಪಾದ್ಯವಾಗಿದೆ ಎಂದು ತಿಳಿಯಬೇಕು.

## ಸಂದಿಗ್ಧಾನ್ಯಥಾಸಿದ್ಧಿಯಿಂದ ಪೂರ್ವಪಕ್ಷಿಯ ಅನುಮಾನವು ಆಭಾಸವಾಗಿದೆ

ಯಾದುಪತ್ಯ – ತಯಾ ಪ್ರಣಾಡ್ಯಾ ಇತಿ ॥ ಶ್ರೌತಾರ್ಥವಾದಬಲೇನ ಆದ್ಯಂತಯೋರೋಂಕಾರಸ್ಯ ಊಹವಿಧಿಕಲ್ಪನೇ ತೇನ ಚ ಅವಯವತ್ವಕಲ್ಪನಾಸಿದ್ಧೌ ಪ್ರತಿಸೂತ್ರಮಾದ್ಯಂತಯೋರುಚ್ಚಾರಣೇ ಗೌರವಂ ಸ್ಯಾತ್ ಇತ್ಯಾದಾವೇವ ಓಂಕಾರೋಽಧಿಕೃತತ್ವೇನ ಉಚ್ಚಾರ್ಯತೇ ತಸ್ಯ ಸಂಹಿತತಯಾ ನಿರ್ದೇಶೇ ಪ್ರಥಮಸೂತ್ರಾವಯವ ಏವಾಯಂ ವಿಜ್ಞಾಯೇತ ತನ್ಮಾ ವಿಜ್ಞಾಯೀತಿ ಶಿಷ್ಟೈಃ ಪೃಥಗೋಂಕ್ರಿಯತೇ । ಏವಂ ಚ ಹೇತೋರನ್ಯಥಾಸಿದ್ಧಿರಿತಿ ಪೂರ್ವೋಕ್ತಯಾ ಪರಂಪರಯಾ ಇತ್ಯರ್ಥಃ।

"ತಯಾ ಪ್ರಣಾಡ್ಯಾ" – ಶ್ರೌತವಾದ ಅರ್ಥವಾದದ ಸಾಮರ್ಥ್ಯದಿಂದ ಸೂತ್ರದ ಆದ್ಯಂತಗಳಲ್ಲಿ ಓಂಕಾರದ ಊಹೆಯನ್ನು ಮಾಡಬೇಕೆಂಬ ವಿಧಿಯನ್ನು ಕಲ್ಪನೆ ಮಾಡುತ್ತಿದ್ದೀರಿ. ಹಾಗಾದರೆ

ಅವಯವತ್ವವು ಕಲ್ಪನೆ ಮಾಡಬೇಕೆಂದು ಸಿದ್ಧವಾಗುತ್ತದೆ. ಆಗ ಪ್ರತಿಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವವು ಬರಬೇಕಾಗುತ್ತದೆ. ಆದ್ದರಿಂದ ಪ್ರಾರಂಭದಲ್ಲೇ ಓಂಕಾರವನ್ನು ಅಧಿಕೃತತ್ವೇನ ಉಚ್ಚಾರಣೆ ಮಾಡಲಾಗುತ್ತದೆ. ಅದನ್ನು ಸಂಹಿತತಯಾ ನಿರ್ದೇಶಮಾಡಿದರೆ ಕೇವಲ ಪ್ರಥಮಸೂತ್ರದ ಅವಯವವೆಂದು ತಿಳಿದೀತು. ಹಾಗೆ ತಿಳಿಯಬಾರದೆಂಬ ಉದ್ದೇಶದಿಂದ ಶಿಷ್ಯರು ಓಂಕಾರವನ್ನು ಉಚ್ಚಾರಣೆ ಮಾಡಿದ್ದಾರೆ. ಆದ್ದರಿಂದ ಹಿಂದೆ ಹೇಳಿದ ಪ್ರಕಾರ ಹೇತುವಿಗೆ ಅನ್ಯಥಾಸಿದ್ಧಿಯು ಪರಂಪರೆಯಿಂದ ಪ್ರಾಪ್ತವಾಗುತ್ತದೆ.

ವಿವರಣೆ – ಶ್ರೌತವಾದ ಅರ್ಥವಾದಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಬೇಕೋ? ಅಥವಾ ಪ್ರಾಙ್ಮುಖತ್ವಾದಿಗಳಂತೆ ಕೇವಲ ಸೂತ್ರಾತ್ ಬಹಿರ್ಭೂತವಾಗಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೋ? ಎಂಬ ಸಂದೇಹವಷ್ಟೇ ಪ್ರಾಪ್ತವಾಗುತ್ತಿದೆ. ಸಂದೇಹಬಂದರೂ ಕೂಡ ಸಂದಿಗ್ಧಾನ್ಯಥಾಸಿದ್ಧಿಯು ಬರುತ್ತದೆ. ಇಲ್ಲಿ ಊಹೋ ವಾ ಬಹಿರ್ಭೂತಸ್ಯ ಉಚ್ಚಾರಣಂ ವಾ? ಎಂಬುದಾಗಿ ಎರಡು ಕೋಟಿಗಳಿರುವುದರಿಂದ ಸಂದೇಹವು ಪ್ರಾಪ್ತವಾಗುತ್ತದೆ.

ಒಂದು ವೇಳೆ ಊಹವು ಇದ್ದರೆ ಊಹ್ಯಮಾನವಾದದ್ದು ಸೂತ್ರದ ಅವಯವವಾಗುತ್ತದೆ. ಆಗ ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಬೇಕೆಂದು ಸಿದ್ಧವಾಗುತ್ತದೆ. ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಉಚ್ಚಾರಣೆ ಮಾಡಿದರೆ ಗೌರವದೋಷ ಬರುತ್ತದೆ. ಅದನ್ನು ಪರಿಹರಿಸುವುದಕ್ಕಾಗಿ ಪ್ರಥಮಸೂತ್ರದಲ್ಲಿ ಓಂಕಾರವನ್ನು ಅಧಿಕೃತತ್ವೇನ ಹೇಳಬೇಕು. ಅಧಿಕೃತತ್ವೇನ ಹೇಳುವಾಗ ಸಂಹಿತತಯಾ ನಿರ್ದೇಶ ಮಾಡಿದರೆ ಕೇವಲ ಪ್ರಥಮಸೂತ್ರದ ಅವಯವವಾಗಿದೆ ಎಂಬ ಭ್ರಾಂತಿಯು ಬರುತ್ತದೆ. ಈ ಭ್ರಮೆಯನ್ನು ಪರಿಹಾರಮಾಡುವುದಕ್ಕಾಗಿ ಅಸಂಹಿತತಯಾ ಓಂಕಾರವನ್ನು ನಿರ್ದೇಶ ಮಾಡಲಾಗಿದೆ. ಹೀಗೆ ಅನ್ಯಥಾಸಿದ್ಧಿಯನ್ನು ನಿಶ್ಚಿತವಾಗಿ ಹೇಳಲು ಬಾರದಿದ್ದರೂ ಸಂದಿಗ್ಧವಾಗಿರುವುದರಿಂದ ಪೂರ್ವಪಕ್ಷಿಗಳ ಅನುಮಾನವು ಆಭಾಸವಾಗುತ್ತದೆ.

## ಸನ್ನ್ಯಾಯರತ್ನಾವಳಿಯಿಂದ ವಿರೋಧಪರಿಹಾರ

ಯಾದುಪತ್ಯ – ಪ್ರಥಮಸೂತ್ರವಾಕ್ಯಾರ್ಥ ಇತಿ ॥ ನ ಚಾತ್ರ 'ಓಂಕಾರಸ್ತು ಪೃಥಗುಚ್ಚಾರಿತೋ ವೇದಿತವ್ಯಃ । ನ ಅಥಶಬ್ದವತ್ ಸೂತ್ರೋಪನಿಬದ್ಧಃ' ಇತಿ ಸನ್ನ್ಯಾಯರತ್ನಾವಲೀವಿರೋಧೋ ವಾಚ್ಯಃ । ಸನ್ನ್ಯಾಯರತ್ನಾವಲ್ಯುಕ್ತಂ 'ಪೃಥಕ್ತ್ವಮ್' ಅಸಂಹಿತತಯಾ ಉಚ್ಚಾರ್ಯಮಾಣತ್ವಂ ವಿವಕ್ಷಿತಂ ನ ತ್ವನವಯವತ್ವರೂಪಮ್ । ಅನ್ಯಥಾ –

'ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್ ॥'

ಇತಿ ಭಾಷ್ಯೋದಾಹೃತಪ್ರಮಾಣೇನ 'ತತ್ರ ತಾರಾಮೂಲತ್ವಮ್' ಇತ್ಯನುವ್ಯಾಖ್ಯಾನೇನ ಚ ವಿರೋಧಪ್ರಸಂಗಾತ್ । ಅತೋ ನ ಕೋऽಪಿ ವಿರೋಧ ಇತಿ ।

"ಪ್ರಥಮಸೂತ್ರವಾಕ್ಯಾರ್ಥೇ" – ಈ ಸಂದರ್ಭದಲ್ಲಿ "ಓಂಕಾರಸ್ತು ಪೃಥಗುಚ್ಚಾರಿತೋ ವೇದಿತವ್ಯಃ । ನ ಅಥಶಬ್ದವತ್ ಸೂತ್ರೋಪನಿಬದ್ಧಃ' ಓಂಕಾರವು ಪ್ರತ್ಯೇಕ ಉಚ್ಚರಿಸಲ್ಪಟ್ಟಿದೆ ಎಂದು ತಿಳಿಯಬೇಕು; ಅಥಶಬ್ದದಂತೆ ಇದು ಸೂತ್ರದಲ್ಲಿ ಸೇರಿರುವುದಿಲ್ಲ. ಹೀಗೆ ಸನ್ನ್ಯಾಯರತ್ನಾವಲಿಯಲ್ಲಿ ಹೇಳಿದ್ದರ ವಿರೋಧ ಬರುತ್ತದಲ್ಲವೇ?

ಹೀಗೆ ಪ್ರಶ್ನಿಸಬಾರದು. ಸನ್ನ್ಯಾಯರತ್ನಾವಲಿಯಲ್ಲಿ ಹೇಳಲ್ಪಟ್ಟ ಪೃಥಕ್ತ್ವಕ್ಕೆ ಅಸಂಹಿತತಯಾ ವಿಚಾರ್ಯಮಾಣತ್ವ ಎಂದಷ್ಟೇ ಅರ್ಥ. ಸೂತ್ರದ ಅವಯವವಲ್ಲ ಎಂದರ್ಥವಲ್ಲ. ಹೀಗೆ ಒಪ್ಪದಿದ್ದರೆ 'ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್' ಎಂಬ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಪ್ರಮಾಣದಿಂದ ಮತ್ತು 'ತತ್ರ ತಾರಾಥಮೂಲತ್ವಮ್' ಎಂಬ ಅನುವ್ಯಾಖ್ಯಾನದ ಮಾತಿನಿಂದ ವಿರೋಧವು ಬರುತ್ತದೆ. ಆದ್ದರಿಂದ ಯಾವುದೇ ವಿರೋಧವಿಲ್ಲವೆಂದು ಹೇಳಿದ್ದಾರೆ.

ವಿವರಣೆ – ಸುಧಾಕಾರರು ಹೀಗೆ ಹೇಳಿದರು – ಓಂಕಾರವು ಊಹ್ಯಮಾನವಾಗಿದ್ದರೂ ಕೂಡ ಸೂತ್ರದ ಅವಯವವಾಗಿದೆ. ಮತ್ತು ಸಮಾನಕಾಲದಲ್ಲಿ ಪ್ರಥಮಸೂತ್ರಾರ್ಥದ ಜೊತೆ ಅನ್ವಯವನ್ನು ಕೂಡ ಹೊಂದುತ್ತದೆ. ಮೀಮಾಂಸಾನುಗ್ರಾಹ್ಯವಾದ ಪ್ರಮಾಣಸಮರ್ಪಕವೂ ಕೂಡ ಆಗಿರುತ್ತದೆ. ಇದರಿಂದ ಓಂಕಾರಕ್ಕೆ ಪ್ರಥಮಸೂತ್ರದ ಅವಯವತ್ವವು ನಿಶ್ಚಯವಾಗುತ್ತದೆ - ಎಂದು.

ಆದರೆ ಸನ್ನ್ಯಾಯರತ್ನಾವಳಿಯಲ್ಲಿ ಇದಕ್ಕೆ ವಿರುದ್ಧವಾಗಿ ಹೇಳಿದ್ದಾರೆ – 'ಓಂಕಾರಸ್ತು ಪೃಥಗುಚ್ಚಾರಿತೋ ವೇದಿತವ್ಯಃ । ನ ಅಥಶಬ್ದವತ್ ಸೂತ್ರೋಪನಿಬದ್ಧಃ' 'ಅಥಶಬ್ದವು ಹೇಗೆ ಸೂತ್ರದಲ್ಲಿ ಸೇರಿದೆಯೋ ಅದರಂತೆ ಓಂಕಾರವು ಸೂತ್ರದಲ್ಲಿ ಸೇರಿರುವುದಿಲ್ಲ. ಇದನ್ನು ಪ್ರತ್ಯೇಕವಾಗಿ ಉಚ್ಚರಿಸಿದ್ದಾರೆಂದು ತಿಳಿಯಬೇಕು' ಈ ಮಾತಿನಿಂದ ಓಂಕಾರವು ಸೂತ್ರದ ಅವಯವವಾಗಿರುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಸುಧಾಕಾರರು ಅವಯವವಾಗಿದೆ ಎನ್ನುತ್ತಿದ್ದಾರೆ. ಆದ್ದರಿಂದ ಸನ್ನ್ಯಾಯರತ್ನಾವಳಿಗೆ ವಿರೋಧ ಬಂದಿತಲ್ಲವೇ?

ಸಮಾಧಾನವನ್ನು ಹೀಗೆ ತಿಳಿಯಬೇಕು – ಪೃಥಗುಚ್ಚಾರಿತಃ ಎಂಬುದಕ್ಕೆ ಓಂಕಾರವು ಸೂತ್ರದ ಅವಯವಾಗಿರುವುದಿಲ್ಲ ಎಂದರ್ಥವಲ್ಲ. ಅಸಂಹಿತತಯಾ ಉಚ್ಚರಿಸಲ್ಪಟ್ಟಿದೆ ಎಂದರ್ಥ. 'ಅಥ'ಶಬ್ದವು

ಹೇಗೆ ಸಂಹಿತತಯಾ ನಿರ್ದಿಷ್ಟವಾಗಿದೆಯೋ ಅದರಂತೆ ಓಂಕಾರವು ಸಂಹಿತತಯಾ ಉಚ್ಚರಿಸಲ್ಪಟ್ಟಿಲ್ಲ ಎಂದರ್ಥ. ಈ ಅರ್ಥವನ್ನು ಸನ್ನ್ಯಾಯರತ್ನಾವಳಿಯ ಮಾತಿಗೆ ಹೇಳದಿದ್ದರೆ ಭಾಷ್ಯಹಾಗೂ ಅನು-ವ್ಯಾಖ್ಯಾನಗಳ ವಿರೋಧವು ಸನ್ನ್ಯಾಯರತ್ನಾವಳಿಗೆ ಬರುತ್ತದೆ. 'ಓಂಕಾರಶ್ಚಾಥಶಬ್ದಶ್ಚ' ಎಂಬ ಮಾತಿನಿಂದ ಓಂಕಾರವು ಸೂತ್ರದ ಅವಯವವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಮತ್ತು ಓಂಕಾರವು ಪ್ರಥಮಸೂತ್ರದ ಅವಯವವಾಗಿರುವುದರಿಂದಲೇ ಅನುವ್ಯಾಖ್ಯಾನದಲ್ಲಿ 'ತತ್ರ ತಾರಾಥಮೂಲತ್ವಮ್' ಎಂಬುದಾಗಿ ಓಂಕಾರವನ್ನು ವ್ಯಾಖ್ಯಾನಮಾಡಿರುತ್ತಾರೆ.

## ಸುಧಾವಾಕ್ಯಕ್ಕೆ ಮಾಯಾವಾದ-
## ಖಂಡನಟೀಕಾವಾಕ್ಯದ ವಿರೋಧಪರಿಹಾರ

ಯಾದುಪತ್ಯ – 'ರೂಪಾಂತರೇಣ' ಇತ್ಯಸ್ಯೈವ ವಿವರಣಮ್ – ಸ್ಥಾನವ್ಯತ್ಯಾಸೇನೇತಿ ॥ ಆದಾವುಚ್ಚಾರಣೇನೇತಿ ॥ 'ಪೂರ್ವೋಕ್ತಸ್ಥಾಪನಾನುಮಾನರೂಪೇಣ' ಇತ್ಯರ್ಥಃ।

ಪ್ರೇಕ್ಷಾವತ್‌ಪ್ರವೃತ್ತಿವಿಷಯಸ್ಯೈವಾರಂಭಣೀಯತ್ವಾದಿತಿ ॥ ಯದ್ಯಪ್ಯತ್ರ ಆರಂಭಣೀಯತ್ವಂ ಮಾಯಾವಾದಖಂಡನಟೀಕೋಕ್ತಂ ಪ್ರೇಕ್ಷಾವದುಪಾದೇಯತ್ವರೂಪಂ ಗ್ರಹೀತುಂ ನ ಶಕ್ಯಮ್। ತಸ್ಯ ಪ್ರೇಕ್ಷಾವತ್‌ಪ್ರವೃತ್ತಿವಿಷಯತ್ವರೂಪತಯಾ ಅತ್ರೋಕ್ತಪ್ರಯೋಜ್ಯಪ್ರಯೋಜಕಭಾವಾನುಪಪತ್ತೇಃ। ತಥಾಽಪಿ ಶ್ರೋತವ್ಯತ್ವಾದಿರೂಪಮನ್ಯದೇವ ಇತಿ ದ್ರಷ್ಟವ್ಯಮ್।

'ರೂಪಾಂತರೇಣ' ಎಂಬುದರ ವಿವರಣೆಯನ್ನೇ ಸ್ಥಾನವ್ಯತ್ಯಾಸೇನ ಎಂಬುದರಿಂದ ಮಾಡಿ-ರುತ್ತಾರೆ. 'ಆದೌ ಉಚ್ಚಾರಣೇನ'' – ಹಿಂದೆ ಹೇಳಿದ ಸ್ಥಾಪನಾನುಮಾನದಿಂದ ಎಂದರ್ಥ.

''ಪ್ರೇಕ್ಷಾವತ್ ಪ್ರವೃತ್ತಿವಿಷಯಸ್ಯೈವಾರಂಭಣೀಯತ್ವಾತ್'' – ವಾಸ್ತವಿಕವಾಗಿ ಇಲ್ಲಿ ಆರಂಭ-ಣೀಯತ್ವವನ್ನು ಮಾಯಾವಾದಖಂಡನಟೀಕೆಯಲ್ಲಿ ಹೇಳಿದಂತೆ ಪ್ರೇಕ್ಷಾವದುಪಾದೇಯತ್ವರೂಪವಾದ-ದ್ದನ್ನಾಗಿ ಸ್ವೀಕರಿಸಬಹುದು. ಏಕೆಂದರೆ ಆರಂಭಣೀಯವಾದದ್ದು ಪ್ರೇಕ್ಷಾವತ್ಪ್ರವೃತ್ತಿಗೆ ವಿಷಯವಾಗಿರುತ್ತದೆ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಪ್ರಯೋಜ್ಯಪ್ರಯೋಜ್ಯಕಭಾವವು ಅನುಪಪನ್ನವಾಗುತ್ತದೆ. ಆದರೂ ಕೂಡ ಶ್ರೋತವ್ಯತ್ವಾದಿರೂಪವಾದ ಮತ್ತೊಂದು ರೀತಿಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

ವಿವರಣೆ – ಮೂಲಗ್ರಂಥದಲ್ಲಿ ''ಪೃಥಕ್'' ಎಂಬ ಪದವಿದೆ. ಅದಕ್ಕೆ ಗ್ರಂಥಕಾರರು ರೂಪಾಂತ-

ರೇಣ ಎಂಬರ್ಥವನ್ನು ಬರೆದಿದ್ದಾರೆ. ರೂಪಾಂತರೇಣ ಎಂಬುದಕ್ಕೆ ಸ್ಥಾನವನ್ನು ವ್ಯತ್ಯಾಸಮಾಡಿ ಹೇಳಿ-ದ್ದಾರೆ ಎಂದರ್ಥ.

"ಓಂಕಾರಃ ಪ್ರಥಮಸೂತ್ರಾವಯವಃ ಶಿಷ್ಯೈಃ ಅಧ್ಯೇತೃಭಿಃ ನಿಯಮೇನ ಸೂತ್ರಾದೌ ಉಚ್ಚಾರ್ಯ-ಮಾಣತ್ವಾತ್, ಅಥಶಬ್ದವತ್" ಎಂಬುದು ನಾವು ಮಾಡಿದ ಸ್ಥಾಪನಾನುಮಾನ. ಇದಕ್ಕೆ ಪೂರ್ವ-ಪಕ್ಷಿಯು ಹೇಳಿದ ಪ್ರತಿಪಕ್ಷಾನುಮಾನ ಹೀಗಿದೆ – 'ಓಂಕಾರಃ ನ ಪ್ರಥಮಸೂತ್ರಾವಯವಃ ಲಕ್ಷಣಾಂತರಾಭಾವೇ ಸತಿ ಸಂಪಾಠೇ ಅಸಂಹಿತತಯಾ ನಿರ್ದಿಶ್ಯಮಾನತ್ವಾತ್' ಎಂದು. ಈ ಪ್ರತಿ-ಪಕ್ಷಾನುಮಾನಕ್ಕೆ ಅನ್ಯಥಾಸಿದ್ಧಿ, ಸಾಧ್ಯವೈಕಲ್ಯ ಮೊದಲಾದ ದೋಷಗಳನ್ನು ಹೇಳಿ ಆಭಾಸತ್ವವನ್ನು ನಾವು ತೋರಿಸಿದ್ದೇವೆ. ಇದರಿಂದ ನಮ್ಮ ಸ್ಥಾಪನಾನುಮಾನವು ನಿರ್ದುಷ್ಟವೆಂದು ಸಿದ್ಧವಾಯಿತು. ಇದರಿಂದ ಓಂಕಾರವು ಪ್ರಥಮಸೂತ್ರದ ಅವಯವವೆಂದು ಸಿದ್ಧವಾಯಿತು. 'ತತ್ರ ತಾರಾಥಮೂಲತ್ವಮ್' ಎಂಬ ಮೂಲವು ಸಾಧಿತವಾಯಿತು.

ಇಲ್ಲಿ ಗ್ರಂಥಕಾರರು ಹೀಗೆ ಸಮರ್ಥಿಸುತ್ತಿದ್ದಾರೆ – ಶಾಸ್ತ್ರವು ಆರಂಭಣೀಯವೆಂದು ಸಿದ್ಧ-ವಾಗಬೇಕಾದರೆ ಪ್ರೇಕ್ಷಾವತ್ ಪ್ರವೃತ್ತಿವಿಷಯತ್ವವು ಸಿದ್ಧವಾಗಬೇಕು. ಪ್ರೇಕ್ಷಾವತ್‌ಪ್ರವೃತ್ತಿವಿಷಯತ್ವವು ಸಿದ್ಧವಾಗಬೇಕಾದರೆ ವಿಷಯಪ್ರಯೋಜನಅಧಿಕಾರಿಸಂಬಂಧಗಳೆಂಬ ಅನುಬಂಧಚತುಷ್ಟಯವು ಇರಬೇಕು. ಅದಕ್ಕೋಸ್ಕರ ಪ್ರಥಮಸೂತ್ರದಲ್ಲಿ ಸೂತ್ರಕಾರರು ಅನುಬಂಧಚತುಷ್ಟಯವನ್ನು ಹೇಳಿದ್ದಾರೆ ಎಂದು. ಇಲ್ಲಿ ಪ್ರೇಕ್ಷಾವತ್‌ಪ್ರವೃತ್ತಿವಿಷಯತ್ವಕ್ಕೂ ಆರಂಭಣೀಯತ್ವಕ್ಕೂ ಪ್ರಯೋಜ್ಯಪ್ರಯೋಜಕ-ಭಾವವನ್ನು ಗ್ರಂಥಕಾರರು ಹೇಳುತ್ತಿದ್ದಾರೆ. ಆದರೆ ಮಾಯಾವಾದಖಂಡನಟೀಕೆಯಲ್ಲಿ ಇದಕ್ಕೆ ವಿರುದ್ಧವಾಗಿಯೇ ಹೇಳಿದ್ದಾರೆ. 'ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್' ಎಂಬ ಅನುಮಾನ-ಪ್ರಯೋಗದಲ್ಲಿ ಆರಂಭಣೀಯತ್ವವೆಂದರೆ ಏನು? ಎಂಬ ಪ್ರಶ್ನೆಗೆ ಪ್ರೇಕ್ಷಾವದುಪಾದೇಯತ್ವಂ ಎಂಬರ್ಥವನ್ನು ಮಾಯಾವಾದಖಂಡನಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಆರಂಭಣೀಯಶಬ್ದಕ್ಕೆ ಪ್ರೇಕ್ಷಾವದುಪಾದೇಯತ್ವ ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗಿರುವಾಗ ಆರಂಭಣೀಯತ್ವಕ್ಕೆ ಪ್ರೇಕ್ಷಾವದುಪಾದೇಯತ್ವವು ಹೇಗೆ ತಾನೆ ಪ್ರಯೋಜಕವಾಗಲು ಸಾಧ್ಯ ?

ಸಮಾಧಾನ ಹೀಗಿದೆ – ಮಾಯಾವಾದಖಂಡನಟೀಕೆಯಲ್ಲಿ ಹೇಳಲ್ಪಟ್ಟ ಪ್ರೇಕ್ಷಾವದುಪಾ-ದೇಯತ್ವವನ್ನು ಆರಂಭಣೀಯತ್ವಶಬ್ದದ ಅರ್ಥವನ್ನಾಗಿ ಇಲ್ಲಿ ವಿವಕ್ಷಿಸಬಾರದು. ಮತ್ತೇನೆಂದರೆ 'ಶ್ರೋತವ್ಯತ್ವ, ಮಂತವ್ಯತ್ವ'ರೂಪವಾದ ಬೇರೆ ರೀತಿಯ ಆರಂಭಣೀಯತ್ವವನ್ನೇ ಇಲ್ಲಿ ವಿವಕ್ಷಿಸಬೇಕು.

ಈ ಬ್ರಹ್ಮಮೀಮಾಂಸಾಶಾಸ್ತ್ರವು ಶ್ರೋತವ್ಯತ್ವ, ಮಂತವ್ಯತ್ವಾದಿಗಳುಳ್ಳದ್ದು ಎಂಬುದು ಪ್ರೇಕ್ಷಾವದುಪಾದೇಯತ್ವದಿಂದ ಸಿದ್ಧವಾಗುತ್ತದೆ ಎಂಬುದಾಗಿ ಇಲ್ಲಿ ಹೇಳುತ್ತಿದ್ದಾರೆ. ಬೇರೆ ಪ್ರೇಕ್ಷಾವಂತರು ಈ ಗ್ರಂಥವನ್ನು ಉಪಾದೇಯವೆಂದು ಸ್ವೀಕರಿಸಿದರೆ ನಾವು ಈ ಗ್ರಂಥದ ಶ್ರವಣಮನನಾದಿಗಳಲ್ಲಿ ತೊಡಗಬಹುದು. ಪ್ರೇಕ್ಷಾವದುಪಾದೇಯತ್ವವು ಅನುಬಂಧಚತುಷ್ಟಯವಿದ್ದರೆ ಮಾತ್ರ ಸಿದ್ಧವಾಗುತ್ತದೆ. ಆ ಅನುಬಂಧಚತುಷ್ಟಯವನ್ನು ಸೂತ್ರಕಾರರು ಮೊದಲು ಹೇಳುತ್ತಿದ್ದಾರೆ ಎಂಬುದಾಗಿ ಇಲ್ಲಿರುವ ಗ್ರಂಥಕ್ಕೆ ಅರ್ಥವನ್ನು ತಿಳಿದುಕೊಳ್ಳಬೇಕು.

## ಸುಧಾಪರಿಮಳಸಾರ

ಶ್ರೌತ ಅರ್ಥವಾದದಿಂದಾಗಿ ಆದ್ಯಂತಗಳಲ್ಲಿ ಓಂಕಾರದ ಊಹೆಯನ್ನು ಮಾಡಬೇಕೋ ಅಥವಾ ಪ್ರಾಙ್ಮುಖತ್ವಾದಿ ನಿಯಮದಂತೆ ಸೂತ್ರಾವಯವವಾಗದೆಯೇ ಉಚ್ಚರಿಸಬಹುದೋ ಎಂಬ ಸಂಶಯವೇ ಬರುತ್ತದೆ. ಆದುದರಿಂದ ಅನ್ಯಥಾಸಿದ್ಧಿಯನ್ನು ಹೇಗೆ ಹೇಳೋಣ ಎಂಬ ಆಕ್ಷೇಪ ಇಲ್ಲಿ ಬರಬಹುದು. ಆದರೂ ಈ ಆಕ್ಷೇಪವನ್ನು ನಾವೂ ಒಪ್ಪುತ್ತೇವೆ. ಹಿಂದೆ ಹೇಳಿದ ಎರಡೂ ರೀತಿ ಸಮಂಜಸವೇ ಆದುದರಿಂದ ಸಂಶಯ ಸಹಜವಾಗಿಯೇ ಬರುತ್ತದೆ. ಆದರೂ ನಿಮ್ಮ ಅನುಮಾನವೇನೂ ನಿರ್ದುಷ್ಟವಲ್ಲ. ಏಕೆಂದರೆ ಅನುಮಾನಕ್ಕೆ ಸಂದಿಗ್ಧಾನ್ಯಥಾಸಿದ್ಧಿದೋಷ ಬರುತ್ತದೆ. ಆದುದರಿಂದ ಅನುಮಾನ ದುಷ್ಟವೇ ಆಗಿದೆ. 'ಓತತ್ವವಾಚೀ' ಎಂದು ಮುಂದೆ ಹೇಳುವಂತೆ ಈ ಓಂಕಾರವು ವಿಷಯಸಮರ್ಪಕವಾಗಿ ಪ್ರಥಮಸೂತ್ರವಾಕ್ಯಾರ್ಥದಲ್ಲಿ ಸಮನ್ವಯ ಹೊಂದುತ್ತದೆ ಎಂದು ಸಿದ್ಧವಾಗುವುದರಿಂದ ಈ ಓಂಕಾರ ಕೇವಲ ಪ್ರಾಙ್ಮುಖತ್ವಾದಿನಿಯಮದಂತೆ ಪ್ರಯುಕ್ತವಾಗಿಲ್ಲ. ಹೊರತು ಸೂತ್ರಾವಯವವೆಂದೂ ಸಿದ್ಧವಾಗುವುದರಿಂದ ಅನುಮಾನಕ್ಕೆ ಬಾಧದೋಷವೂ ಬರುತ್ತದೆ.

'ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ' ಎಂಬ ಮೂಲವಾಕ್ಯದಿಂದ ಅನುಮಾನಕ್ಕೆ ಅನ್ಯಥಾಸಿದ್ಧಿದೋಷವನ್ನು ಹೇಳುವಂತೆ ವ್ಯಾಖ್ಯಾನ ಮಾಡಲಾಯಿತು. ಈಗ ಮತ್ತೊಂದು ರೀತಿಯಲ್ಲಿ ಈ ಮೂಲಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ಭಾಗದಿಂದ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ ಎಂದು ಸಮರ್ಥನೆ ಮಾಡಬಹುದು. ದೃಷ್ಟಾಂತ ವೇದದ ಓಂಕಾರ. ವೇದ ಅಧ್ಯಯನ ಮಾಡುವ ಪಾಠಕರು ಸ್ಥಾನವ್ಯತ್ಯಾಸ ಮಾಡಿ ಬೇರೆ ಬೇರೆ ಸ್ಥಳಗಳಲ್ಲಿ ಓಂಕಾರ ಉಚ್ಚಾರ ಮಾಡುತ್ತಾರೆಯೇ ಹೊರತು ಓಮಿತಿ ಬ್ರಹ್ಮ ಎಂಬಂತೆ ನಿಯತಸ್ಥಳದಲ್ಲಿ ಪಠಿಸುವುದಿಲ್ಲ. ಆದುದರಿಂದ ಈ ಓಂಕಾರ ಮಂತ್ರಾವಯವವಲ್ಲ ಎಂದು ಉದಾಹರಣೆ. ಆದರೆ ಮಂತ್ರಪಾಠಕರು ಹಾಗೆ ಭಿನ್ನ ಭಿನ್ನ ಸ್ಥಾನದಲ್ಲಿ ಓಂಕಾರವನ್ನು ಪಠಿಸಲು ಬೇರೆ ಕಾರಣವಿದೆ. ಅಧ್ಯಾಪಕರು ಆದಿಯಲ್ಲಿ ಹೇಳಿಕೊಟ್ಟು ಉಚ್ಚರಿಸಿದ ಓಂಕಾರ ಸರ್ವತ್ರ ಅನುಗತವಾಗಿದೆ ಎಂಬ ಕಾರಣದಿಂದ ಪ್ರತಿಯೊಂದು ಕಡೆ ಉಚ್ಚರಿಸಬೇಕಿದ್ದರೂ ಕೂಡ ದಿನದ ಅಧ್ಯಯನದ ಆರಂಭದಲ್ಲಿ ಮಾತ್ರ ಉಚ್ಚಾರಣೆ ಮಾಡುತ್ತಾರೆ. ಆದರೆ ಸ್ರವಣಾದಿದೋಷ-

ಪರಿಹಾರಕ್ಕಾಗಿ ಉಚ್ಚಾರ ಮಾಡಿದ ಓಂಕಾರವು ಆಯಾಯ ಮಂತ್ರದಲ್ಲಿ ಉಕ್ತವಾದ ಅಗ್ನ್ಯಾದಿಶಬ್ದವಾಚ್ಯನಾದ ಭಗವಂತನಲ್ಲಿ ಗುಣಪೂರ್ಣತ್ವವನ್ನು ಹೇಳುವ ಮೂಲಕ ಮಂತ್ರಾವಯವವೇ ಆಗಿದೆ. ಆದುದರಿಂದ ದೃಷ್ಟಾಂತದಲ್ಲಿ ಅಮಂತ್ರಾವಯವತ್ವರೂಪಸಾಧ್ಯವು ಇಲ್ಲದಿದ್ದರೂ ಬೇರೆ ಪ್ರಯೋಜನಕ್ಕಾಗಿ ಭಿನ್ನಭಿನ್ನಸ್ಥಾನದಲ್ಲಿ ಉಚ್ಚರಿತವಾಗುವ ಕಾರಣ ಹೇತು ಅನ್ಯಥಾಸಿದ್ಧವಾಗುತ್ತದೆ. ದೃಷ್ಟಾಂತದಲ್ಲಿ ಅಮಂತ್ರಾವಯವತ್ವರೂಪಸಾಧ್ಯ ಬರುವುದಿಲ್ಲವಾದ್ದರಿಂದ ಸಾಧ್ಯವೈಕಲ್ಯರೂಪದೋಷವೂ ಬರುತ್ತದೆ. ಹೀಗೆ ಅನುಮಾನದಿಂದ ಆದಿಯಲ್ಲಿ ಉಚ್ಚರಿತವಾದ ಓಂಕಾರ ಸೂತ್ರಾವಯವ ಅಲ್ಲ ಎಂದು ಸಾಧಿಸಲು ಬರುವುದಿಲ್ಲ. ಆದುದರಿಂದ ಯಾವುದೇ ಬಾಧಕವಿಲ್ಲ. ಆದುದರಿಂದ ಆದಿಯಲ್ಲಿ ಉಚ್ಚರಿತ ಓಂಕಾರ ಪ್ರಥಮಸೂತ್ರಾವಯವ ಎಂದು ಸಿದ್ಧವಾಗುತ್ತದೆ. ಹೀಗಾಗಿ ''ತತ್ರ ತಾರಾಥ-ಮೂಲತ್ವಂ'' ಎಂದು ಹೇಳಿದ್ದು ಸರಿಯಾಗಿಯೇ ಇದೆ.

ಹೀಗೆ ಬೇರೆ ಬೇರೆ ಕಾರಣಗಳಿಂದ ಈ ಶಾಸ್ತ್ರವು ವ್ಯಾಖ್ಯೇಯವೇ ಅಲ್ಲ ಅನ್ನುವ ಆಕ್ಷೇಪ ಮಾಡಿದಾಗ ಆ ಎಲ್ಲಾ ಆಕ್ಷೇಪಗಳಿಗೂ ಸಮಾಧಾನವನ್ನು ಹೇಳಿರುವುದರಿಂದ ಶಾಸ್ತ್ರವು ವ್ಯಾಖ್ಯೇಯ ಎಂದು ಸಿದ್ಧವಾಯಿತು. ವ್ಯಾಖ್ಯಾನಯೋಗ್ಯವಾಗಿದ್ದರೂ ಕೂಡ ಈ ಸೂತ್ರಗ್ರಂಥವು ಆರಂಭಣೀಯವೇ ಅಲ್ಲ ಎನ್ನುವ ಶಂಕೆ ಬರಬಹುದು. ಏಕೆಂದರೆ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧರೂಪವಾದ ಅನುಬಂಧಚತುಷ್ಟಯವಿದ್ದರೆ ಮಾತ್ರ ಆ ಗ್ರಂಥ ಆರಂಭಣೀಯ. ಅಂದರೆ ಪ್ರಜ್ಞಾವಂತರಿಂದ ಸ್ವೀಕಾರಾರ್ಹವಾಗುತ್ತದೆ. ಆದಕ್ಕಾಗಿ ಪ್ರೇಕ್ಷಾವಂತರು ಈ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕೋಸ್ಕರ ಆರಂಭಣೀಯತ್ವವನ್ನು ಸಮರ್ಥನೆ ಮಾಡಲು ವಿಷಯಪ್ರಯೋಜನಾದಿಗಳನ್ನು ತಿಳಿಸಬೇಕು. ಮೊದಲ ಸೂತ್ರ ವಿಷಯಾದಿಗಳನ್ನು ಪ್ರತಿಪಾದನೆ ಮಾಡುತ್ತದೆ. ಆದುದರಿಂದ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎನ್ನುವ ಮೊದಲ ಸೂತ್ರದ ವ್ಯಾಖ್ಯಾನವನ್ನು ಓತತ್ವವಾಚೇ ಹ್ಯೋಂಕಾರಃ ಎಂಬ ಅನು-ವ್ಯಾಖ್ಯಾನದಲ್ಲಿ ಮಾಡುತ್ತಿದ್ದಾರೆ.

## ನೆನೆಪಿಡಿ

* 'ಗುರುರ್ಗುರೂಣಾಂ' ಇತ್ಯಾದಿ ಶ್ಲೋಕಗಳು ಸೂತ್ರದ ವ್ಯಾಖ್ಯಾನವಲ್ಲ; ವ್ಯಾಖ್ಯೇಯತ್ವಕ್ಕೆ ಉಪಯುಕ್ತವಾದ ಪ್ರಮೇಯಗಳನ್ನಷ್ಟೇ ಪ್ರತಿಪಾದನೆ ಮಾಡುತ್ತಿವೆ.

* ಸೂತ್ರವ್ಯಾಖ್ಯಾನವು 'ಓತತ್ವವಾಚೇ ಹ್ಯೋಂಕಾರಃ' ಇತ್ಯಾದಿ ಅನುವ್ಯಾಖ್ಯಾನ ಶ್ಲೋಕದಿಂದ ಪ್ರಾರಂಭವಾಗುತ್ತಿದೆ.

* ಪ್ರಥಮಸೂತ್ರಕ್ಕೆ ಆರಂಭಣೀಯತ್ವಸಮರ್ಥನೆಯು ಮಹಾಫಲವಾಗಿದೆ. ಪ್ರೇಕ್ಷಾವತ್‌ಪ್ರವೃತ್ತಿಯು ಅವಾಂತರಫಲವಾಗಿದೆ. ಪ್ರಯೋಜನಾದ್ಯಭಿಸಂಬಂಧವು ಪ್ರತಿಪಾದ್ಯವಾಗಿದೆ. ಹೀಗೆ ಸೂತ್ರದ ಫಲ ಹಾಗೂ ಪ್ರತಿಪಾದ್ಯವಿಷಯಗಳನ್ನು ತಿಳಿಯಬೇಕು.

## ಪ್ರಯೋಜನಾದಿಗಳನ್ನು ಮೊದಲು ತಿಳಿಸುವುದು ಅತ್ಯಂತಸಾರ್ಥಕ

ಶ್ರೀಮನ್ನ್ಯಾಯಸುಧಾ – ನನು ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ ಯದಿ ಶಾಸ್ತ್ರಪ್ರವೃತ್ತೇಃ ಪ್ರಾಗೇವ ಪ್ರಮಾಣಾಂತರಸಿದ್ಧಾ ವ್ಯರ್ಥಂ ತದಾ ತದಭಿಧಾನಂ ಶಾಸ್ತ್ರೇ । ಪ್ರಮಾಣಾಂತರಸಿದ್ಧೇ ಕ್ವಚಿದುಪದೇಶಾನಪೇಕ್ಷಣಾತ್ । ಅಥಹ್ಯೈವ ತನ್ನಿಶ್ಚಯಃ, ತದಾ ಪ್ರವೃತ್ತೌ ಪ್ರಯೋಜನಾದಿನಿಶ್ಚಯೋ ನಿಶ್ಚಿತೇ ಚ ಪ್ರಯೋಜನಾದೌ ಪ್ರವೃತ್ತಿರಿತ್ಯನ್ಯೋನ್ಯಾಶ್ರಯತ್ವಮ್ । ಅಥ ಪ್ರಥಮಸೂತ್ರಾತ್ ತನ್ನಿಶ್ಚಯಃ । ತತ್ರೈವ ಕಥಂ ಪ್ರವೃತ್ತಿಃ । ತದರ್ಥಂ ಚ ಪ್ರಯೋಜನಾಂತರಾಭಿಧಾನೇ ಅನವಸ್ಥಾ । ಏವಮೇವ ತತ್ರ ಪ್ರವೃತ್ತಾವುತ್ತರತ್ರಾಪಿ ತಥಾತ್ವಪ್ರಸಂಗಾದನರ್ಥಕಂ ಸೂತ್ರೇ ಪ್ರಯೋಜನಾದ್ಯಭಿಧಾನಮಿತಿ ॥

ಉಚ್ಯತೇ । ತ್ರಿವಿಧಾ ಹಿ ಪುಂಸಾಂ ಚಿತ್ತವೃತ್ತಿಃ । ಅನುಭವಃ, ಇಚ್ಛಾ, ಪ್ರಯತ್ನಶ್ಚ । ತತ್ರ ಸಾಧನಗೋಚರೌ ಇಚ್ಛಾಪ್ರಯತ್ನೌ ಪ್ರವೃತ್ತಿರಿತಿ ಉಚ್ಯೇತೇ । ನ ತು ಅನುಭವೋ ನಾಪಿ ಫಲಗೋಚರೇಚ್ಛಾ । ಯೇನ ತಯೋರಪಿ ಪ್ರಯೋಜನನಿಶ್ಚಯಾಪೇಕ್ಷಾ ಸ್ಯಾತ್ ।

ನ ಹಿ ಉಪೇಕ್ಷಣೀಯಂ ನಿಷ್ಪ್ರಯೋಜನಮಿತಿ ನಾನುಭೂಯತೇ । ನಾಪಿ ಸುಖಂ ಪ್ರಯೋಜನಾಂತರರಹಿತಮಿತಿ ನೇಷ್ಯತೇ । ನ ಚ ಮುಮುಕ್ಷುಣಾ ಅನಪೇಕ್ಷಿತೇ ಸ್ವರ್ಗೇ ಯಾಗಾದಿಕಂ ತತ್ಸಾಧನತಯಾ ನಾನುಭೂಯತೇ । ಪುರುಷಾರ್ಥಸಾಧನೇ ತು ಇಚ್ಛಾಲಕ್ಷಣಾ ಪ್ರಯತ್ನಲಕ್ಷಣಾ ವಾ ಪ್ರವೃತ್ತಿಸ್ತಥಾ ನ ಸ್ವರಸಸಿದ್ಧಾ । ನ ಹಿ ಕಶ್ಚಿತ್ ಕ್ಷುತ್ಪ್ರಹಾಣಾದಿಕಮನನುಸಂಧಾಯ ಭೋಕ್ತುಮಿಚ್ಛತಿ ಪ್ರಯತತೇ ವಾ ।

ತಸ್ಮಾದ್ ಯೋ ಯತ್ರ ಪ್ರವರ್ತನೀಯಃ ಸ ತತ್ ಪ್ರಯೋಜನಾದಿಕಂ ದರ್ಶಯಿತ್ವೈವ ಇತಿ ಸಾರ್ಥಕಂ ಸೂತ್ರೇ ಪ್ರಯೋಜನಾದ್ಯಭಿಧಾನಮ್ ।

ಪ್ರಶ್ನೆ – 'ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ' ಎಂಬ ವಿಷಯವು ಬ್ರಹ್ಮ-ಮೀಮಾಂಸಾಶಾಸ್ತ್ರದ ಅಧ್ಯಯನಕ್ಕಿಂತ ಮೊದಲೇ ಬೇರೆ ಪ್ರಮಾಣಗಳಿಂದ ಸಿದ್ಧವಾಗಿದೆ ಎಂದು ಹೇಳಿದರೆ ಆಗ ಈ ಶಾಸ್ತ್ರದಲ್ಲಿ ಈ ಬಗೆಯ ಸಂಗತಿಯನ್ನು ಹೇಳುವುದು ವ್ಯರ್ಥ-ವಾಗುತ್ತದೆ. ಏಕೆಂದರೆ ಬೇರೆ ಪ್ರಮಾಣದಿಂದ ವಿಷಯವು ಸಿದ್ಧವಾದ ಮೇಲೆ ಪುನಃ ಅದರ ಬಗ್ಗೆ ತಿಳಿಸುವ ಆವಶ್ಯಕತೆಯು ಇರುವುದಿಲ್ಲ.

'ಬ್ರಹ್ಮಜ್ಞಾನವು ಮೋಕ್ಷಕ್ಕೆ ಸಾಧಕವಾಗಿದೆ' ಎಂಬುದರ ನಿಶ್ಚಯವು ಇದೇ ಶಾಸ್ತ್ರ-ದಿಂದಲೇ ಬರುತ್ತದೆಂದು ಹೇಳಬೇಕು. ಆಗ ಈ ಶಾಸ್ತ್ರದಲ್ಲಿ ಪ್ರವೃತ್ತಿಯನ್ನು ಮಾಡಿದ ಮೇಲೆ ಪ್ರಯೋಜನಾದಿಗಳ ನಿರ್ಣಯವಾಗುತ್ತದೆ. ಪ್ರಯೋಜನಾದಿಗಳು ನಿರ್ಣಯವಾದ ಮೇಲಷ್ಟೇ ಈ ಶಾಸ್ತ್ರದ ಅಧ್ಯಯನದಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಹೀಗೆ ಶಾಸ್ತ್ರ-ಪ್ರಯೋಜನ ಮತ್ತು ಅಧ್ಯಯನದ ಪ್ರವೃತ್ತಿಗಳು ಪರಸ್ಪರವಾಗಿ ಒಂದನ್ನೊಂದು ಆಶ್ರಯಿಸಿ-ಕೊಂಡಿರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಇನ್ನು ಮೊದಲನೆಯ ಸೂತ್ರದಿಂದ ಪ್ರಯೋಜನಾದಿಗಳು ನಿಶ್ಚಯವಾಗುತ್ತದೆಂದು ಹೇಳಬೇಕು. ಆಗ ಆ ಪ್ರಥಮಸೂತ್ರದಲ್ಲಿ ಪ್ರವೃತ್ತಿ ಹೇಗಾಗುತ್ತದೆ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಏಕೆಂದರೆ, ಪ್ರಥಮಸೂತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕೂ ಕೂಡ ಪ್ರಯೋಜನಾದಿಗಳ ನಿಶ್ಚಯವಾಗಿರಬೇಕು. ಒಂದು ವೇಳೆ ಪ್ರಥಮಸೂತ್ರದಲ್ಲಿ ಪ್ರವೃತ್ತಿ-ಯಾಗುವುದಕ್ಕೆ ಮೊದಲು ಪ್ರಯೋಜನಾದಿಗಳನ್ನು ಹೇಳುತ್ತೇವೆಂದು ಹೇಳಿದರೆ ಅನವಸ್ಥಾ-ದೋಷವು ಬರುತ್ತದೆ. ಇನ್ನು ಆಕಸ್ಮಿಕವಾಗಿ ಪ್ರಯೋಜನಾದಿಗಳ ಬಗ್ಗೆ ಚಿಂತನೆ ನಡೆಸದೆ ಪ್ರಥಮಸೂತ್ರದಲ್ಲಿ ಪ್ರವೃತ್ತಿಯಾಗುತ್ತದೆಂದು ಹೇಳಿದರೆ ಸಮಾನನ್ಯಾಯದಿಂದ ಮುಂದಿನ ಸೂತ್ರಗಳಲ್ಲೂ ಕೂಡ ಪ್ರವೃತ್ತಿಯು ಉಂಟಾಗಲಿ. ಪ್ರಥಮಸೂತ್ರದಲ್ಲಿ ಪ್ರಯೋಜನಾದಿ-ಗಳನ್ನು ಹೇಳಿದ್ದು ವ್ಯರ್ಥವೇ ಆಗುತ್ತದೆ?

ಉತ್ತರ – ಮೇಲಿನ ಪ್ರಶ್ನೆಗೆ ಉತ್ತರ ಹೀಗಿದೆ – ಮನುಷ್ಯರ ಚಿತ್ತವೃತ್ತಿಗಳು ಒಟ್ಟು ಮೂರು ಬಗೆಯಲ್ಲಿರುತ್ತವೆ. (೧) ಅನುಭವ, (೨) ಇಚ್ಛೆ, (೩) ಪ್ರಯತ್ನ ಎಂದು. ಈ ಮೂರರಲ್ಲಿ ಸಾಧನವಿಷಯಕವಾದ ಇಚ್ಛೆ ಹಾಗೂ ಪ್ರಯತ್ನಗಳನ್ನು ಪ್ರವೃತ್ತಿ ಎಂದು ಕರೆಯುತ್ತಾರೆ. ಆದರೆ ಸಾಧನವಿಷಯಕವಾದ ಅನುಭವವನ್ನಾಗಲೀ ಫಲವಿಷಯಕವಾದ ಇಚ್ಛೆಯನ್ನಾಗಲೀ ಪ್ರವೃತ್ತಿಯೆಂದು ಯಾರೂ ಸಹ ಕರೆಯುವುದಿಲ್ಲ. ಇದರಂತೆ ಸಾಧನಾನುಭವ ಹಾಗೂ ಫಲೇಚ್ಛೆಗಳು ಪ್ರವೃತ್ತಿಯೆಂದು ಕರೆಸಿಕೊಂಡರೆ ಆಗ ಅಲ್ಲಿಯೂ ಕೂಡ ಪುನಃ ಇದೇ ಪ್ರಯೋಜನಾದಿಗಳು ಕಾರಣವಾಗಿವೆ ಎಂಬ ನಿಶ್ಚಯವು ಆವಶ್ಯಕವಾಗುತ್ತಿತ್ತು. ಆದರೆ ಇವುಗಳನ್ನು ಪ್ರವೃತ್ತಿಯೆಂದು ಯಾರೂ ಕೂಡ ಕರೆಯುವುದಿಲ್ಲ.

ಅದು ಹೀಗೆ – ಉಪೇಕ್ಷಿಸಲು ಅರ್ಹವಾದ ಪದಾರ್ಥದಿಂದ ಪ್ರಯೋಜನವಿಲ್ಲದಿದ್ದರೂ ಅದರ ಜ್ಞಾನವು ಬರುವುದಿಲ್ಲ ಎಂದೇನಿಲ್ಲ. ಮತ್ತು ಸುಖಕ್ಕೆ ಮತ್ತೊಂದು ಪ್ರಯೋಜನವಿಲ್ಲದಿದ್ದರೂ ಅದನ್ನು ಅಪೇಕ್ಷಿಸುವುದಿಲ್ಲ ಎಂದೇನಿಲ್ಲ. ಈ ಎರಡು ಉದಾಹರಣೆಯಂತೆ ಮೋಕ್ಷವನ್ನು ಬಯಸುವವನಿಗೆ ಅನಪೇಕ್ಷಿತವಾಗಿದ್ದರೂ ಕೂಡ ಯಾಗವು ಸ್ವರ್ಗಸಾಧನವಾಗಿದೆ ಎಂಬ ಯಾಗವಿಷಯಕವಾದ ಸ್ವರ್ಗಸಾಧನೆಯ ಅನುಭವವು ಬರುವುದಿಲ್ಲ ಎಂದೂ ಕೂಡ ಇಲ್ಲ. ಅರ್ಥಾತ್ ಬಂದೇ ಬರುತ್ತದೆ. ಆದರೆ ಪರಮಪುರುಷಾರ್ಥಕ್ಕೆ ಸಾಧನವಾದ ಶಾಸ್ತ್ರವಿಷಯಕವಾದ ಇಚ್ಛೆ ಹಾಗೂ ಪ್ರಯತ್ನಗಳು ಹಿಂದಿನ ಮನೋವೃತ್ತಿಗಳಂತೆ ಸಹಜವಾಗಿ ಬರುವುದಿಲ್ಲ. ಏಕೆಂದರೆ ಭೋಜನವು ಹಸಿವನ್ನು ಪರಿಹರಿಸುವ ಸಾಧನವಾಗಿದೆ ಎಂಬ ಪರಿಜ್ಞಾನವು ಇಲ್ಲದೇ ಯಾರೊಬ್ಬನೂ ಕೂಡ ಭೋಜನವನ್ನು ಇಚ್ಛಿಸುವುದಿಲ್ಲ ಮತ್ತು ಅದರ ಬಗ್ಗೆ ಪ್ರಯತ್ನವನ್ನು ಕೂಡ ಮಾಡುವುದಿಲ್ಲ. ಆದ್ದರಿಂದ ಯಾವನೊಬ್ಬನನ್ನೂ ಯಾವುದೇ ವಿಷಯದಲ್ಲಿ ಪ್ರವೃತ್ತಿ ಮಾಡುವಂತೆ ಮಾಡಬೇಕೋ ಅವನಿಗೆ ಆ ವಿಷಯದ ಬಗ್ಗೆ ಪ್ರಯೋಜನಾದಿಗಳನ್ನು ತೋರಿಸಬೇಕು. ತನ್ಮೂಲಕವಾಗಿ ತದ್ವಿಷಯದಲ್ಲಿ ಅವನನ್ನು ಪ್ರೇರಣೆ ಮಾಡಬೇಕು. ಈ ದೃಷ್ಟಿಯಿಂದ ಸೂತ್ರಗಳಲ್ಲಿ ಪ್ರಯೋಜನಾದಿಗಳನ್ನು ತಿಳಿಸುವುದು ಸಾರ್ಥಕವಾಗಿರುತ್ತದೆ.

## ಪ್ರಯೋಜನಾದ್ಯಭಿಸಂಬಂಧಜ್ಞಾನವೇ ಪ್ರವೃತ್ತಿಗೆ ಹೇತು

ಪರಿಮಳ - ಪ್ರಯೋಜನಾದ್ಯಭಿಸಂಬಂಧಜ್ಞಾನಂ ಪ್ರವೃತ್ತಿಹೇತುರಿತ್ಯುಕ್ತಮ್ । ತತ್ ಕಿಂ ಮಾನಾಂತರೇಣಾಥೈತಚ್ಛಾಸ್ತ್ರೇಣ ಉತ ಆದ್ಯಸೂತ್ರೇಣ ಇತಿ ವಿಕಲ್ಪಾನ್ ಕ್ರಮೇಣ ನಿರಾಹ – ನನ್ವಿತ್ಯಾದಿನಾ ॥ ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ ಇತಿ ॥ 'ಬ್ರಹ್ಮಜ್ಞಾನದ್ವಾರಾ ಶಾಸ್ತ್ರಸ್ಯ ಮೋಕ್ಷಹೇತುತಾ' ಇತ್ಯರ್ಥಃ।

'ಪ್ರಯೋಜನಾದಿಗಳ ಜ್ಞಾನವು ಪ್ರವೃತ್ತಿಗೆ ಕಾರಣ' ಎಂದು ಹೇಳಿದರು. ಪ್ರವೃತ್ತಿಯು ಬೇರೆ ಪ್ರಮಾಣದಿಂದಲೋ, ಈ ಶಾಸ್ತ್ರದಿಂದಲೋ, ಅಥವಾ ಪ್ರಥಮಸೂತ್ರದಿಂದಲೋ? ಇಷ್ಟು ವಿಕಲ್ಪಗಳನ್ನು ಮಾಡಿ ಕ್ರಮವಾಗಿ "ನನು" ಇತ್ಯಾದಿಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. "ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ" – ಬ್ರಹ್ಮಜ್ಞಾನದ ಮೂಲಕ ಶಾಸ್ತ್ರಕ್ಕೆ ಮೋಕ್ಷಹೇತುತ್ವ ಎಂದರ್ಥ.

ವಿವರಣೆ – ಬ್ರಹ್ಮಮೀಮಾಂಸಾಶಾಸ್ತ್ರವು ವ್ಯಾಖ್ಯೇಯವೆಂದು ಸಾಧಿಸಿದ ಅನಂತರ 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿ ಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಪ್ರಾರಂಭ ಮಾಡುತ್ತಿದ್ದಾರೆ. ಮೊದಲು ಪ್ರಥಮಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ. ಪ್ರಥಮಸೂತ್ರವು ಏಕೆ ಹೊರಟಿದೆ? ಎಂಬ ಪ್ರಶ್ನೆಯು ಬಂದರೆ ವಿಷಯಪ್ರಯೋಜನಾದಿಗಳನ್ನು ಹೇಳುವುದಕ್ಕಾಗಿ ಹೊರಟಿದೆ. ಏಕೆಂದರೆ ವಿಷಯ-ಪ್ರಯೋಜನಾದಿ ಅನುಬಂಧಚತುಷ್ಟಯವುಳ್ಳ ಗ್ರಂಥದಲ್ಲಷ್ಟೇ ಪ್ರೇಕ್ಷಾವಂತರು ಪ್ರವೃತ್ತಿಯನ್ನು ಮಾಡು-ತ್ತಾರೆ. ಈ ಪ್ರಯೋಜನಾದಿಗಳ ಜ್ಞಾನವು ಬೇರೆ ಪ್ರಮಾಣದಿಂದ ಬರಬೇಕೋ? ಅಥವಾ ಏತಚ್ಛಾಸ್ತ್ರ-ದಿಂದ ಹೊಂದಬೇಕೋ? ಅಥವಾ ಈ ಪ್ರಥಮಸೂತ್ರದಿಂದಲೇ ಪಡೆಯಬೇಕೋ?

ಟೀಕಾರಾಯರ ವಾಕ್ಯದಲ್ಲಿ "ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ" ಎಂದು ಹೇಳಲಾಗಿದೆ. ಇದಕ್ಕೆ 'ಶಾಸ್ತ್ರಸ್ಯ ಬ್ರಹ್ಮಜ್ಞಾನಹೇತುತಾ, ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಎಂದರ್ಥ. ಶಾಸ್ತ್ರದಿಂದ ಬ್ರಹ್ಮಜ್ಞಾನವು ಬರುತ್ತದೆ. ಆ ಬ್ರಹ್ಮಜ್ಞಾನದಿಂದ ಮೋಕ್ಷವು ದೊರೆಯುತ್ತದೆ. ಆದ್ದರಿಂದ ಮೋಕ್ಷಕ್ಕೆ ಬ್ರಹ್ಮಜ್ಞಾನವು ಕಾರಣವಾಗಿದೆ. ಬ್ರಹ್ಮಜ್ಞಾನಕ್ಕೆ ಶಾಸ್ತ್ರವು ಕಾರಣವಾಗಿದೆ ಎಂದು ತಿಳಿಯಬೇಕು. ಬ್ರಹ್ಮಜ್ಞಾನದ ಮೂಲಕ ಶಾಸ್ತ್ರವು ಮೋಕ್ಷಕ್ಕೆ ಹೇತುವಾಗಿದೆ ಎಂಬುದೇ ನಿಜವಾದ ಪ್ರಮೇಯವಾಗಿದೆ. ಹೀಗೆ ಜ್ಞಾನವು ಬಂದ ಮೇಲೆ ಜಿಜ್ಞಾಸಾ ಮಾಡಲು ಸಾಧ್ಯವಾಗುತ್ತದೆ. ಮತ್ತು ಮುಮುಕ್ಷುಗಳೆಂದು ಕರೆಯಲು ಸಾಧ್ಯ-

ವಾಗುತ್ತದೆ. ಆದ್ದರಿಂದ ಈ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕಿಂತ ಮೊದಲು ಶಾಸ್ತ್ರವು ಬ್ರಹ್ಮಜ್ಞಾನದ ಮೂಲಕ ಮೋಕ್ಷಹೇತುವಾಗಿದೆ ಎಂಬ ಜ್ಞಾನವು ಬೇರೆ ಪ್ರಮಾಣದಿಂದಲೇ ತಿಳಿದಿದ್ದಲ್ಲಿ ಈ ಶಾಸ್ತ್ರದಲ್ಲಿ ಅದನ್ನು ಹೇಳುವುದು ವ್ಯರ್ಥವಾಗುತ್ತದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಅತಃ ಎಂಬ ಪದಕ್ಕೆ ಜಿಜ್ಞಾಸಾಜನ್ಯವಾದ ಯಾವ ಜ್ಞಾನವಿದೆಯೋ ತಜ್ಜನ್ಯವಾದ ಮೋಕ್ಷರೂಪಪ್ರಯೋಜನ-ವಿರುವುದರಿಂದ ಎಂಬರ್ಥವನ್ನು ಹೇಳುವ ಅವಶ್ಯಕತೆಯೇ ಇರುವುದಿಲ್ಲ. ಏಕೆಂದರೆ, ಜ್ಞಾನವು ಶಾಸ್ತ್ರ-ದಿಂದ ಸಾಧ್ಯವಾಗಿದೆ; ಈ ಜ್ಞಾನದಿಂದ ಮೋಕ್ಷವು ದೊರೆಯುತ್ತದ ಎಂಬುದು ಬೇರೆ ಪ್ರಮಾಣದಿಂದಲೇ ಪ್ರಾಪ್ತವಾಗಿದೆ. ಪ್ರಮಾಣಾಂತರದಿಂದ ಅಪ್ರಾಪ್ತವಾದದ್ದನ್ನಷ್ಟೇ ಶಾಸ್ತ್ರದಲ್ಲಿ ಹೇಳಬೇಕು.

## ಅನೇಕವಿಕಲ್ಪಗಳನ್ನು ತೋರಿಸಲು ಏನು ಕಾರಣ?

ಪರಿಮಳ – ಯದ್ಯಪಿ ಪ್ರಯೋಜನಾದ್ಯಭಿಸಂಬಂಧಾಭಿಧಾನಮಾದ್ಯಸೂತ್ರೇ ಚೇತ್ ತತ್ರೈವ ಕಥಂ ಪ್ರವೃತ್ತಿಃ ಇತ್ಯೇವ ಶಂಕನೀಯಮ್ । ತಥಾಪಿ ಯದಿ ಕಶ್ಚಿದನ್ಯತ ಏವ ತಜ್ಜ್ಞಾನಮಿತಿ ಬ್ರೂಯಾತ್, ತದಾ ತಂ ಪ್ರತ್ಯುತ್ತರಂ ವಕ್ತುಂ ಪರಿಶೇಷಾದಾದ್ಯ-ಸೂತ್ರಾದೇವ ತದಿತಿ ದೃಢೀಕರ್ತುಂ 'ಪ್ರಮಾಣಾಂತರಸಿದ್ಧಾ' ಇತ್ಯಾದಿಕೋಟೇರಪ್ಯುಪನ್ಯಾಸ ಇತ್ಯದೋಷಃ ।

ವಾಸ್ತವಿಕವಾಗಿ 'ಪ್ರಯೋಜನಾದ್ಯಭಿಸಂಬಂಧಂ ಪ್ರತಿಪಾದಯತಾ ಪ್ರಥಮಸೂತ್ರಸ್ಯ' 'ಪ್ರಯೋಜನಾದ್ಯಭಿಸಂಬಂಧವನ್ನು ಪ್ರಥಮಸೂತ್ರವು ಪ್ರತಿಪಾದಿಸುತ್ತದೆ' ಎಂಬುದಾಗಿ ಟೀಕೆ-ಯಲ್ಲಿಯೇ ಹೇಳಿರುತ್ತಾರೆ. ಆದ್ದರಿಂದ ಪ್ರಯೋಜನಾದಿಗಳ ಜ್ಞಾನವು ಬೇರೆ ಪ್ರಮಾಣ-ದಿಂದಲೋ? ಅಥವಾ ಈ ಶಾಸ್ತ್ರದಿಂದಲೋ ? ಇತ್ಯಾದಿಯಾಗಿ ಕೋಟ್ಯಂತರಗಳ ಬಗ್ಗೆ ಆಶಂಕೆಯನ್ನು ಮಾಡಲು ಅವಕಾಶವೇ ಇರುವುದಿಲ್ಲ. ಆದ್ದರಿಂದ ಶಾಸ್ತ್ರದಲ್ಲಿ ಪ್ರವೃತ್ತಿಮಾಡು-ವುದಕ್ಕಾಗಿ ಪ್ರಯೋಜನಾದಿಗಳ ನಿಶ್ಚಯವು ಪ್ರಥಮಸೂತ್ರದಿಂದಲೇ ಉಂಟಾಗುವುದಾದರೆ ಆ ಪ್ರಥಮಸೂತ್ರದಲ್ಲಿ ಪ್ರವೃತ್ತಿಯು ಹೇಗೆ ಉಂಟಾಗುತ್ತದೆ? ಎಂಬ ಶಂಕೆಯು ಹುಟ್ಟುತ್ತದೆ. ಈ ಬಗೆಯಲ್ಲಿಯೇ ಗ್ರಂಥದಲ್ಲಿ ಶಂಕೆಯನ್ನು ತೋರಿಸಬೇಕಿತ್ತು.

ಆದರೂ ಕೂಡ ಒಂದು ವೇಳೆ ಯಾರೋ ಒಬ್ಬನು ಪ್ರಯೋಜನಾದಿಗಳ ಜ್ಞಾನವು ಪ್ರಥಮಸೂತ್ರದಿಂದ ಬರುವುದಿಲ್ಲ; ಬೇರೆ ಪ್ರಮಾಣದಿಂದ ಬರುತ್ತದೆ ಎಂದು ಆಕ್ಷೇಪ

## ಪ್ರಯೋಜನಾದ್ಯಭಿಸಂಬಂಧಜ್ಞಾನವೇ ಪ್ರವೃತ್ತಿಗೆ ಹೇತು

ಪರಿಮಳ - ಪ್ರಯೋಜನಾದ್ಯಭಿಸಂಬಂಧಜ್ಞಾನಂ ಪ್ರವೃತ್ತಿಹೇತುರಿತ್ಯುಕ್ತಮ್ । ತತ್ ಕಿಂ ಮಾನಾಂತರೇಣಾಥೈತಚ್ಛಾಸ್ತ್ರೇಣ ಉತ ಆದ್ಯಸೂತ್ರೇಣ ಇತಿ ವಿಕಲ್ಪಾನ್ ಕ್ರಮೇಣ ನಿರಾಹ – ನನ್ವಿತ್ಯಾದಿನಾ ॥ ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ ಇತಿ ॥ 'ಬ್ರಹ್ಮಜ್ಞಾನದ್ವಾರಾ ಶಾಸ್ತ್ರಸ್ಯ ಮೋಕ್ಷಹೇತುತಾ' ಇತ್ಯರ್ಥಃ ।

'ಪ್ರಯೋಜನಾದಿಗಳ ಜ್ಞಾನವು ಪ್ರವೃತ್ತಿಗೆ ಕಾರಣ' ಎಂದು ಹೇಳಿದರು. ಪ್ರವೃತ್ತಿಯು ಬೇರೆ ಪ್ರಮಾಣದಿಂದಲೋ, ಈ ಶಾಸ್ತ್ರದಿಂದಲೋ, ಅಥವಾ ಪ್ರಥಮಸೂತ್ರದಿಂದಲೋ? ಇಷ್ಟು ವಿಕಲ್ಪಗಳನ್ನು ಮಾಡಿ ಕ್ರಮವಾಗಿ "ನನು" ಇತ್ಯಾದಿಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. "ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ" – ಬ್ರಹ್ಮಜ್ಞಾನದ ಮೂಲಕ ಶಾಸ್ತ್ರಕ್ಕೆ ಮೋಕ್ಷಹೇತುತ್ವ ಎಂದರ್ಥ.

ವಿವರಣೆ – ಬ್ರಹ್ಮಮೀಮಾಂಸಾಶಾಸ್ತ್ರವು ವ್ಯಾಖ್ಯೇಯವೆಂದು ಸಾಧಿಸಿದ ಅನಂತರ 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿ ಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಪ್ರಾರಂಭ ಮಾಡುತ್ತಿದ್ದಾರೆ. ಮೊದಲು ಪ್ರಥಮಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ. ಪ್ರಥಮಸೂತ್ರವು ಏಕೆ ಹೊರಟಿದೆ? ಎಂಬ ಪ್ರಶ್ನೆಯು ಬಂದರೆ ವಿಷಯಪ್ರಯೋಜನಾದಿಗಳನ್ನು ಹೇಳುವುದಕ್ಕಾಗಿ ಹೊರಟಿದೆ. ಏಕೆಂದರೆ ವಿಷಯ-ಪ್ರಯೋಜನಾದಿ ಅನುಬಂಧಚತುಷ್ಟಯವುಳ್ಳ ಗ್ರಂಥದಲ್ಲಷ್ಟೇ ಪ್ರೇಕ್ಷಾವಂತರು ಪ್ರವೃತ್ತಿಯನ್ನು ಮಾಡು-ತ್ತಾರೆ. ಈ ಪ್ರಯೋಜನಾದಿಗಳ ಜ್ಞಾನವು ಬೇರೆ ಪ್ರಮಾಣದಿಂದ ಬರಬೇಕೋ? ಅಥವಾ ಏತಚ್ಛಾಸ್ತ್ರ-ದಿಂದ ಹೊಂದಬೇಕೋ? ಅಥವಾ ಈ ಪ್ರಥಮಸೂತ್ರದಿಂದಲೇ ಪಡೆಯಬೇಕೋ?

ಟೀಕಾರಾಯರ ವಾಕ್ಯದಲ್ಲಿ "ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ" ಎಂದು ಹೇಳಲಾಗಿದೆ. ಇದಕ್ಕೆ 'ಶಾಸ್ತ್ರಸ್ಯ ಬ್ರಹ್ಮಜ್ಞಾನಹೇತುತಾ, ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಎಂದರ್ಥ. ಶಾಸ್ತ್ರದಿಂದ ಬ್ರಹ್ಮಜ್ಞಾನವು ಬರುತ್ತದೆ. ಆ ಬ್ರಹ್ಮಜ್ಞಾನದಿಂದ ಮೋಕ್ಷವು ದೊರೆಯುತ್ತದೆ. ಆದ್ದರಿಂದ ಮೋಕ್ಷಕ್ಕೆ ಬ್ರಹ್ಮಜ್ಞಾನವು ಕಾರಣವಾಗಿದೆ. ಬ್ರಹ್ಮಜ್ಞಾನಕ್ಕೆ ಶಾಸ್ತ್ರವು ಕಾರಣವಾಗಿದೆ ಎಂದು ತಿಳಿಯಬೇಕು. ಬ್ರಹ್ಮಜ್ಞಾನದ ಮೂಲಕ ಶಾಸ್ತ್ರವು ಮೋಕ್ಷಕ್ಕೆ ಹೇತುವಾಗಿದೆ ಎಂಬುದೇ ನಿಜವಾದ ಪ್ರಮೇಯವಾಗಿದೆ. ಹೀಗೆ ಜ್ಞಾನವು ಬಂದ ಮೇಲೆ ಜಿಜ್ಞಾಸಾ ಮಾಡಲು ಸಾಧ್ಯವಾಗುತ್ತದೆ. ಮತ್ತು ಮುಮುಕ್ಷುಗಳೆಂದು ಕರೆಯಲು ಸಾಧ್ಯ-

ವಾಗುತ್ತದೆ. ಆದ್ದರಿಂದ ಈ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕಿಂತ ಮೊದಲು ಶಾಸ್ತ್ರವು ಬ್ರಹ್ಮಜ್ಞಾನದ ಮೂಲಕ ಮೋಕ್ಷಹೇತುವಾಗಿದೆ ಎಂಬ ಜ್ಞಾನವು ಬೇರೆ ಪ್ರಮಾಣದಿಂದಲೇ ತಿಳಿದಿದ್ದಲ್ಲಿ ಈ ಶಾಸ್ತ್ರದಲ್ಲಿ ಅದನ್ನು ಹೇಳುವುದು ವ್ಯರ್ಥವಾಗುತ್ತದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಅತಃ ಎಂಬ ಪದಕ್ಕೆ ಜಿಜ್ಞಾಸಾಜನ್ಯವಾದ ಯಾವ ಜ್ಞಾನವಿದೆಯೋ ತಜ್ಜನ್ಯವಾದ ಮೋಕ್ಷರೂಪಪ್ರಯೋಜನ-ವಿರುವುದರಿಂದ ಎಂಬರ್ಥವನ್ನು ಹೇಳುವ ಅವಶ್ಯಕತೆಯೇ ಇರುವುದಿಲ್ಲ. ಏಕೆಂದರೆ, ಜ್ಞಾನವು ಶಾಸ್ತ್ರ-ದಿಂದ ಸಾಧ್ಯವಾಗಿದೆ; ಈ ಜ್ಞಾನದಿಂದ ಮೋಕ್ಷವು ದೊರೆಯುತ್ತದೆ ಎಂಬುದು ಬೇರೆ ಪ್ರಮಾಣದಿಂದಲೇ ಪ್ರಾಪ್ತವಾಗಿದೆ. ಪ್ರಮಾಣಾಂತರದಿಂದ ಅಪ್ರಾಪ್ತವಾದದ್ದನ್ನಷ್ಟೇ ಶಾಸ್ತ್ರದಲ್ಲಿ ಹೇಳಬೇಕು.

## ಅನೇಕವಿಕಲ್ಪಗಳನ್ನು ತೋರಿಸಲು ಏನು ಕಾರಣ?

ಪರಿಮಳ – ಯದ್ಯಪಿ ಪ್ರಯೋಜನಾದ್ಯಭಿಸಂಬಂಧಾಭಿಧಾನಮಾದ್ಯಸೂತ್ರೇ ಚೇತ್ ತತ್ರೈವ ಕಥಂ ಪ್ರವೃತ್ತಿಃ ಇತ್ಯೇವ ಶಂಕನೀಯಮ್ । ತಥಾಪಿ ಯದಿ ಕಶ್ಚಿದನ್ಯತ ಏವ ತಜ್ಜ್ಞಾನಮಿತಿ ಬ್ರೂಯಾತ್, ತದಾ ತಂ ಪ್ರತ್ಯುತ್ತರಂ ವಕ್ತುಂ ಪರಿಶೇಷಾದಾದ್ಯ-ಸೂತ್ರಾದೇವ ತದಿತಿ ದೃಢೀಕರ್ತುಂ 'ಪ್ರಮಾಣಾಂತರಸಿದ್ಧಾ' ಇತ್ಯಾದಿಕೋಟೇರಪ್ಯುಪನ್ಯಾಸ ಇತ್ಯದೋಷಃ ।

ವಾಸ್ತವಿಕವಾಗಿ 'ಪ್ರಯೋಜನಾದ್ಯಭಿಸಂಬಂಧಂ ಪ್ರತಿಪಾದಯತಾ ಪ್ರಥಮಸೂತ್ರಸ್ಯ' 'ಪ್ರಯೋಜನಾದ್ಯಭಿಸಂಬಂಧವನ್ನು ಪ್ರಥಮಸೂತ್ರವು ಪ್ರತಿಪಾದಿಸುತ್ತದೆ' ಎಂಬುದಾಗಿ ಟೀಕೆ-ಯಲ್ಲಿಯೇ ಹೇಳಿರುತ್ತಾರೆ. ಆದ್ದರಿಂದ ಪ್ರಯೋಜನಾದಿಗಳ ಜ್ಞಾನವು ಬೇರೆ ಪ್ರಮಾಣ-ದಿಂದಲೋ? ಅಥವಾ ಈ ಶಾಸ್ತ್ರದಿಂದಲೋ? ಇತ್ಯಾದಿಯಾಗಿ ಕೋಟ್ಯಂತರಗಳ ಬಗ್ಗೆ ಆಶಂಕೆಯನ್ನು ಮಾಡಲು ಅವಕಾಶವೇ ಇರುವುದಿಲ್ಲ. ಆದ್ದರಿಂದ ಶಾಸ್ತ್ರದಲ್ಲಿ ಪ್ರವೃತ್ತಿಮಾಡು-ವುದಕ್ಕಾಗಿ ಪ್ರಯೋಜನಾದಿಗಳ ನಿಶ್ಚಯವು ಪ್ರಥಮಸೂತ್ರದಿಂದಲೇ ಉಂಟಾಗುವುದಾದರೆ ಆ ಪ್ರಥಮಸೂತ್ರದಲ್ಲಿ ಪ್ರವೃತ್ತಿಯು ಹೇಗೆ ಉಂಟಾಗುತ್ತದೆ? ಎಂಬ ಶಂಕೆಯು ಹುಟ್ಟುತ್ತದೆ. ಈ ಬಗೆಯಲ್ಲಿಯೇ ಗ್ರಂಥದಲ್ಲಿ ಶಂಕೆಯನ್ನು ತೋರಿಸಬೇಕಿತ್ತು.

ಆದರೂ ಕೂಡ ಒಂದು ವೇಳೆ ಯಾರೋ ಒಬ್ಬನು ಪ್ರಯೋಜನಾದಿಗಳ ಜ್ಞಾನವು ಪ್ರಥಮಸೂತ್ರದಿಂದ ಬರುವುದಿಲ್ಲ; ಬೇರೆ ಪ್ರಮಾಣದಿಂದ ಬರುತ್ತದೆ ಎಂದು ಆಕ್ಷೇಪ

ಮಾಡಬಹುದು. ಅವನಿಗೆ ಉತ್ತರವನ್ನು ಹೇಳುವುದಕ್ಕಾಗಿ ಪರಿಶೇಷಪ್ರಮಾಣದಿಂದ ಪ್ರಥಮ-ಸೂತ್ರದಿಂದಲೇ ಆ ಪ್ರಯೋಜನಾದಿಗಳ ಸಂಬಂಧಜ್ಞಾನವು ಪ್ರಾಪ್ತವಾಗುತ್ತದೆ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ರಮಾಣಾಂತರದಿಂದ ಪ್ರಯೋಜನಾದಿಗಳ ನಿಶ್ಚಯವು ಬರುತ್ತದೋ? ಎಂಬ ಸಂಶಯವನ್ನು ತೋರಿಸಿದ್ದಾರೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ವಿವರಣೆ – ವಾದಗ್ರಂಥಗಳಲ್ಲಿ ಯಾವುದೇ ಪ್ರಮೇಯಗಳನ್ನು ಸಿದ್ಧವತ್‌ಕೃತ್ಯ ಹೇಳುವಂತಿಲ್ಲ. ಈ ಒಂದು ಪಕ್ಷದಲ್ಲಿ ದೋಷವನ್ನು ಹೇಳಿದಾಗ ಮತ್ತೊಂದು ಪಕ್ಷವನ್ನು ಆಕ್ಷೇಪಿಸಲು ಅವಕಾಶವಿದೆ. ಅದಕ್ಕಾಗಿ ವಿಕಲ್ಪಗಳನ್ನು ಮಾಡಿ ಪ್ರತಿಯೊಂದು ಪಕ್ಷಗಳಲ್ಲೂ ದೋಷವನ್ನು ತೋರಿಸಿ, ಅಂತಿಮವಾಗಿ ಪರಿಶೇಷಪ್ರಮಾಣದಿಂದ ಒಂದು ಪಕ್ಷವನ್ನು ಆಶ್ರಯಿಸುವುದು ಶಾಸ್ತ್ರದಲ್ಲಿ ಪರಂಪರಾಗತವಾದ ಸಂಪ್ರದಾಯವಾಗಿದೆ. ಆದ್ದರಿಂದ ಯಾರಾದರೂ ಒಬ್ಬ ಬೇರೆ ಪ್ರಮಾಣದಿಂದಲೇ ಶಾಸ್ತ್ರದಲ್ಲಿ ಪ್ರವೃತ್ತಿ-ಯಾಗುತ್ತದೆ ಎಂದು ಹೇಳಿದರೆ ಅದಕ್ಕೆ ಉತ್ತರಿಸುವುದಕ್ಕಾಗಿ ಅನೇಕ ಕೋಟಿಗಳನ್ನು ಟೀಕೆಯಲ್ಲಿ ಹೇಳು-ರುತ್ತಾರೆ.

## ಪ್ರಥಮಸೂತ್ರದಿಂದ ಪ್ರಯೋಜನಾದಿಗಳ ನಿಶ್ಚಯವೆಂದರೆ ಅನವಸ್ಥಾ

ಪರಿಮಳ – ಕಥಮಿತಿ ॥ ಆದ್ಯಸೂತ್ರಜನ್ಯೋಕ್ತರೂಪನಿಶ್ಚಯಸ್ಯಾಪಿ ಫಲಾಂತರ-ಹೇತುತ್ವಾನಿಶ್ಚಯೇ ತಜ್ಜನಕಾದ್ಯಸೂತ್ರೇಽಪಿ ಪ್ರವೃತ್ತ್ಯಯೋಗಾದಿತಿ ಭಾವಃ। ತದರ್ಥಮಿತಿ ॥ ಯಥಾ ಜನ್ಮಾದ್ಯಸ್ಯೇತ್ಯಾದಿಶಾಸ್ತ್ರಪ್ರವೃತ್ತಿಹೇತುತಯಾ ತಜ್ಜನ್ಯಬ್ರಹ್ಮಜ್ಞಾನದ್ವಾರಾ ತಸ್ಯ ಪ್ರಯೋಜನಾದ್ಯಭಿಸಂಬಂಧಜ್ಞಾನಜನನಾಯ 'ಆದ್ಯಸೂತ್ರಮ್' ಇತ್ಯುಚ್ಯತೇ । ತಥಾ ಆದ್ಯಸೂತ್ರೇಽಪಿ ಪ್ರವೃತ್ತ್ಯರ್ಥಮ್ ಆದ್ಯಸೂತ್ರಸ್ಯಾಪಿ ತಜ್ಜನ್ಯೋಕ್ತರೂಪಜ್ಞಾನದ್ವಾರಾ ತಸ್ಯ ಪ್ರಯೋಜನಾದ್ಯಭಿಸಂಬಂಧಂ ಜ್ಞಾಪಯಿತುಂ ಸೂತ್ರಾಂತರಂ, ತತ್ರಾಪ್ಯೇವಮಿತ್ಯರ್ಥಃ।

'ತತ್ರೈವಂ ಕಥಂ ಪ್ರವೃತ್ತಿಃ' – ಪ್ರಥಮಸೂತ್ರದಿಂದ ಉಂಟಾಗುವ ಪ್ರಯೋಜನಾದಿಗಳ ನಿಶ್ಚಯವು ಮತ್ತೊಂದು ಪ್ರಯೋಜನವನ್ನು ತಂದು ಕೊಡುತ್ತದೆ ಎಂಬ ನಿಶ್ಚಯವು ಯಾರಿಗೆ ಇರುವುದಿಲ್ಲವೋ ಅವನಿಗೆ ಪ್ರಥಮಸೂತ್ರದಲ್ಲೂ ಕೂಡ ಪ್ರವೃತ್ತಿಯು ಉಂಟಾಗುವುದಿಲ್ಲ ಎಂದಭಿಪ್ರಾಯ.

'ತದರ್ಥಮ್' – ಉದಾಹರಣೆ - 'ಜನ್ಮಾದ್ಯಸ್ಯ ಯತಃ' ಮೊದಲಾದ ಶಾಸ್ತ್ರಗಳಲ್ಲಿ ಪ್ರವೃತ್ತಿಗೆ ಕಾರಣವಾದ್ದರಿಂದ ಬ್ರಹ್ಮಜ್ಞಾನದ ಮೂಲಕ ಮೋಕ್ಷವಾಗುತ್ತದೆ. ಹೀಗೆ ಪ್ರಯೋ-ಜನಾದ್ಯಭಿಸಂಬಂಧಗಳನ್ನು ಪ್ರತಿಪಾದನೆ ಮಾಡಬೇಕು. ಅದಕ್ಕಾಗಿ ಮೊದಲನೆಯ ಸೂತ್ರವು ಆವಶ್ಯಕವಾಗಿದೆ ಎಂದು ಹೇಳುವಂತೆ ಇಲ್ಲಿಯೂ ಕೂಡ ಪ್ರಥಮಸೂತ್ರದಲ್ಲಿ ಪ್ರವೃತ್ತಿ ಹೊಂದುವುದಕ್ಕಾಗಿ ಪ್ರಯೋಜನಾದಿಗಳ ನಿಶ್ಚಯವನ್ನು ಹುಟ್ಟಿಸುವ ಮೂಲಕ ವಿಶಿಷ್ಟವಾದ ಮತ್ತೊಂದು ಫಲವು ಪ್ರಥಮಸೂತ್ರಕ್ಕಿದೆ ಎಂದು ತಿಳಿಸಲು ಮತ್ತೊಂದು ಸೂತ್ರವು ಬೇಕಾಗುತ್ತದೆ. ಆ ಸೂತ್ರದಲ್ಲೂ ಕೂಡ ಪ್ರವೃತ್ತಿ ಮಾಡುವುದಕ್ಕಾಗಿ ಮತ್ತೊಂದು ಸೂತ್ರವು ಬೇಕಾಗುತ್ತದೆ. ಹೀಗೆ ಅನವಸ್ಥಾದೋಷವು ಬರುತ್ತದೆ.

ವಿವರಣೆ – "ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಬ್ರಹ್ಮಜ್ಞಾನವೇ ಫಲವಾಗಿದೆ; ಆ ಬ್ರಹ್ಮಜ್ಞಾನಕ್ಕೆ ಮೋಕ್ಷವು ಫಲವಾಗಿದೆ. ಈ ವಿಷಯವು ಬೇರೆ ಪ್ರಮಾಣದಿಂದ ತಿಳಿಯುವುದಿಲ್ಲ. ಇದೇ ಸೂತ್ರದಿಂದ ತಿಳಿ-ಯುತ್ತದೆ" ಎಂದು ಹೇಳಿದಾಗ ಈ ಸೂತ್ರದಲ್ಲಿ ಪ್ರವೃತ್ತಿಯು ಹೇಗಾಗುತ್ತದೆ? ಎಂಬ ಶಂಕೆಯು ಮೂಡುತ್ತದೆ.

'ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಬ್ರಹ್ಮಜ್ಞಾನವು ಪ್ರಯೋಜನವಾಗಿದೆ; ಆ ಬ್ರಹ್ಮಜ್ಞಾನಕ್ಕೆ ಮೋಕ್ಷವು ಪ್ರಯೋಜನವಾಗಿದೆ' ಎಂದು ಹೇಳಿದಾಗ ಪ್ರಥಮಸೂತ್ರಕ್ಕೆ ಏನು ಪ್ರಯೋಜನ? ಎಂಬ ಪ್ರಶ್ನೆಯು ಬರುತ್ತದೆ. ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಇದರಿಂದ ನಿಶ್ಚಯವಾಗುತ್ತದೆ. ಆ ನಿಶ್ಚಯಕ್ಕೆ ಬೇರೆ ಯಾವುದೇ ಪ್ರಯೋಜನವು ಇರುವುದಿಲ್ಲ. ಆದ್ದರಿಂದ ಪ್ರಯೋಜನಾದಿಗಳು ಇದ್ದರೆ ಮಾತ್ರ ಪ್ರವೃತ್ತಿಯು ಉಂಟಾಗುತ್ತದೆ. ಎಂಬುದಾಗಿ ಈ ಹಿಂದೆಯೇ ಹೇಳಿರುವಿರಿ. ಆದ್ದರಿಂದ ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂಬ ಯಾವ ನಿಶ್ಚಯವು ಪ್ರಥಮಸೂತ್ರದಿಂದ ಪ್ರಾಪ್ತವಾಗುತ್ತದೆ. ಪುನಃ ಈ ನಿಶ್ಚಯಕ್ಕೆ ಏನು ಪ್ರಯೋಜನ? ಎಂಬುದು ತಿಳಿದರೆ ಮಾತ್ರ ಆದರ ನಿಶ್ಚಯಕ್ಕೋಸ್ಕರ ಪ್ರಥಮ-ಸೂತ್ರದಲ್ಲಿ ಪ್ರವೃತ್ತಿಯನ್ನು ಮಾಡಬೇಕು. ಹೀಗೆ ಹೇಳಿದರೆ ಅನವಸ್ಥಾದೋಷವು ಬರುತ್ತದೆ.

ಅನವಸ್ಥಾದೋಷವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ಪ್ರವೃತ್ತಿಯು ಉಂಟಾಗಬೇಕೆಂದರೆ ಪ್ರಯೋಜನಾದಿಗಳನ್ನು ಹೇಳಬೇಕು. ಸಮಗ್ರಶಾಸ್ತ್ರದಲ್ಲಿ ಪ್ರವೃತ್ತಿಯನ್ನು ಮಾಡಲು ಪ್ರಯೋಜನವನ್ನು ಪ್ರಥಮಸೂತ್ರವು ಹೇಳುತ್ತದೆ. ಈ ಪ್ರಥಮಸೂತ್ರದಲ್ಲಿ ಪ್ರವೃತ್ತಿಯು ಉಂಟಾಗಬೇಕೆಂದರೆ ಪ್ರಥಮಸೂತ್ರದಿಂದ ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂದು ಹೇಳಲಾಗಿದೆ. ಈ ನಿಶ್ಚಯಕ್ಕೋಸ್ಕರ

ಶಾಸ್ತ್ರದಲ್ಲಿ ಪ್ರವೃತ್ತಿ ಮಾಡಬೇಕೆಂಬ ಪ್ರಯೋಜನವಿದೆ. ಈ ನಿಶ್ಚಯವನ್ನು ಉಂಟುಮಾಡುವ ಪ್ರಥಮ-ಸೂತ್ರದಲ್ಲಿ ಪ್ರವೃತ್ತಿಯನ್ನು ಮಾಡಬೇಕು ಎಂದು ತಿಳಿಸುವುದಕ್ಕಾಗಿ ಮೊದಲು ಇನ್ನೊಂದು ಸೂತ್ರವನ್ನು ಬರೆಯಬೇಕು. ಏಕೆಂದರೆ, ಪುನಃ ಆ ಸೂತ್ರದಲ್ಲಿ ಪ್ರವೃತ್ತಿ ಮಾಡಲು ಪ್ರಯೋಜನಾದಿಗಳ ನಿಶ್ಚಯವು ಆವಶ್ಯಕವಾಗಿದೆ. ಅದನ್ನು ತಿಳಿಸಲು ಅದರ ಮೊದಲು ಇನ್ನೊಂದು ಸೂತ್ರವನ್ನು ಬರೆಯಬೇಕು. ಹೀಗೆ ಅನವಸ್ಥಾದೋಷವು ಬರುತ್ತದೆ.

## ಪ್ರವೃತ್ತಿ ಎಂದರೇನು?

ಪರಿಮಳ – ಏವಮೇವೇತಿ ॥ 'ಪ್ರಯೋಜನಹೇತುತ್ವಾನನುಸಂಧಾನೇನೈವ ಆದ್ಯ-ಸೂತ್ರೇ ಪ್ರವೃತ್ತೌ' ಇತ್ಯರ್ಥಃ । ತತ್ರೈವ ಕಥಂ ಪ್ರವೃತ್ತಿಃ? ಇತ್ಯಾದಿನೋಕ್ತಾಮನವಸ್ಥಾಂ ನಿರಸಿತುಂ ಪ್ರವೃತ್ತಿಶಬ್ದಾರ್ಥಂ ತಾವನ್ನಿರ್ಧಾರಯತಿ – ತ್ರಿವಿಧಾ ಹಿ ಇತ್ಯಾದಿನಾ ॥ 'ಪ್ರಯತ್ನಶ್ಚ' ಇತ್ಯನಂತರಮ್ 'ಇತಿ'ಶಬ್ದೋಽಧ್ಯಾಹಾರ್ಯಃ । ಸಾಧನಗೋಚರಾ ಫಲಗೋಚರಾ ಚ ಇತ್ಯಪಿ ಯೋಜ್ಯಮ್ । ನತ್ವನುಭವ ಇತಿ ॥ ಪುಮರ್ಥಸಾಧನತ್ವ-ಪ್ರಕಾರಕಸಾಧಕಗೋಚರಾನುಭವ ಇತ್ಯರ್ಥಃ । ಫಲಗೋಚರೇಚ್ಛಾಪಿ ನ ಪ್ರವೃತ್ತಿರಿತ್ಯುಚ್ಯತ ಇತ್ಯನ್ವಯಃ ।

''ಏವಮೇವ'' – 'ಪ್ರಯೋಜನಹೇತುತ್ವದ ಅನುಸಂಧಾನವಿಲ್ಲದೆಯೇ ಪ್ರಥಮಸೂತ್ರ-ದಲ್ಲಿ ಪ್ರವೃತ್ತಿಯು ಉಂಟಾಗುವುದಾದಲ್ಲಿ'' ಎಂದರ್ಥ.

''ತತ್ರೈವ ಕಥಂ ಪ್ರವೃತ್ತಿಃ'' – 'ಆ ಪ್ರಥಮಸೂತ್ರದಲ್ಲಿ ಹೇಗೆ ಪ್ರವೃತ್ತಿಯುಂಟಾಗುತ್ತದೆ?' ಇತ್ಯಾದಿಯಾಗಿ ಹೇಳಲ್ಪಟ್ಟ ಅನವಸ್ಥಾದೋಷವನ್ನು ನಿರಾಕರಣೆ ಮಾಡುವುದಕ್ಕಾಗಿ ಪ್ರವೃತ್ತಿಶಬ್ದದ ಅರ್ಥವನ್ನು ನಿಶ್ಚಯಾತ್ಮಕವಾಗಿ 'ತ್ರಿವಿಧಾ ಹಿ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. 'ಪ್ರಯತ್ನಶ್ಚ' ಎಂಬುದರ ನಂತರ 'ಇತಿ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು 'ಇಚ್ಛಾ ಸಾಧನಗೋಚರಾ ಫಲಗೋಚರಾ ಚ' 'ಇಚ್ಛೆಯೂ ಕೂಡ ಎರಡು ವಿಧ. ಸಾಧನವಿಷಯಕ ಫಲವಿಷಯಕ ಎಂದು'. ಇದನ್ನು ಕೂಡ ಅಲ್ಲಿಯೇ ಯೋಜನೆ ಮಾಡಿಕೊಳ್ಳಬೇಕು.

'ನತ್ವನುಭವಃ' – 'ಪುಮರ್ಥಸಾಧನತ್ವಪ್ರಕಾರಕವಾದ ಸಾಧನಗೋಚರವಾದ ಅನುಭವ'

ಎಂದರ್ಥ. ಫಲಗೋಚರವಾದ ಇಚ್ಛೆಯೂ ಕೂಡ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಹೀಗೆ ಅನ್ವಯವನ್ನು ತಿಳಿದು ಅರ್ಥಮಾಡಿಕೊಳ್ಳಬೇಕು.

ವಿವರಣೆ – ಪ್ರವೃತ್ತಿಗೆ ಎಲ್ಲೆಡೆಯೂ ಪ್ರಯೋಜನಾದ್ಯನುಸಂಧಾನದ ಅವಶ್ಯಕತೆಯು ಇರುವುದಿಲ್ಲ ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಅದಕ್ಕಾಗಿ ಪ್ರವೃತ್ತಿ ಎಂದರೇನು? ಎಂಬುದನ್ನು ತಿಳಿದು-ಕೊಳ್ಳಬೇಕು. ಆ ಪ್ರವೃತ್ತಿಶಬ್ದದ ಅರ್ಥವನ್ನೇ ಟೀಕೆಯಲ್ಲಿ 'ತ್ರಿವಿಧಾ ಹಿ' ಇತ್ಯಾದಿ ವಾಕ್ಯದಿಂದ ಹೇಳಿ-ದ್ದಾರೆ. ಪ್ರವೃತ್ತಿಯನ್ನು ತಿಳಿಯುವುದಕ್ಕಿಂತ ಮೊದಲು ಮನಸ್ಸಿನ ಚಿತ್ತವೃತ್ತಿಯ ಬಗ್ಗೆ ತಿಳಿದುಕೊಳ್ಳಬೇಕು. ಅನುಭವ ಇಚ್ಛೆ ಹಾಗೂ ಪ್ರಯತ್ನಗಳು ಮನಸ್ಸಿನ ಮೂರು ಬಗೆಯ ಚಿತ್ತವೃತ್ತಿಗಳು. ಈ ಮೂರರಲ್ಲಿ ಯಾವುದನ್ನು ಪ್ರವೃತ್ತಿ ಎನ್ನಬೇಕು? ಎಂಬ ಪ್ರಶ್ನೆಗೆ ಸಾಧನವಿಷಯಕವಾದ ಇಚ್ಛಾಪ್ರಯತ್ನಗಳು ಮಾತ್ರ ಪ್ರವೃತ್ತಿ ಎಂದು ಕರೆಸಿಕೊಳ್ಳುತ್ತವೆ.

## ಅನವಸ್ಥಾದೋಷದ ಪರಿಹಾರ

ಪರಿಮಳ – ಯೇನೇತಿ ॥ ಪ್ರವೃತ್ತಿಶರೀರಪ್ರವೇಶೇನ ನಿಮಿತ್ತೇನ ಸಾಧನತ್ವಪ್ರಕಾರಕ-ಸಾಧನಗೋಚರನಿಶ್ಚಯಫಲೇಚ್ಛಯೋರಪಿ ಸ್ವಸ್ವವಿಷಯಸ್ಯ ಸ್ವಸ್ಯ ವಾ ಫಲಹೇತುತ್ವ-ನಿಶ್ಚಯಾಪೇಕ್ಷಾ ಸ್ಯಾತ್ತಥಾ ತನ್ನಿಮಿತ್ತಾನವಸ್ಥಾ ಚ ಸ್ಯಾತ್ ಇತ್ಯಪಿ ಯೋಜ್ಯಮ್ । ಏತಚ್ಚ ಉಪಲಕ್ಷಣಮ್ । ಯೇನ ಫಲೇಚ್ಛಾಪಿ ಫಲಾಂತರಾಧೀನೇಚ್ಛಾ ಸ್ಯಾತ್ । ತಥಾ ತನ್ನಿಮಿತ್ತಾ ಅನವಸ್ಥಾ ಚ ಸ್ಯಾದಿತ್ಯಪಿ ಧ್ಯೇಯಮ್ ।

''ಯೇನ'' – ಪ್ರವೃತ್ತಿಯ ಶರೀರದಲ್ಲಿ ಸೇರಿರುವ ನಿಮಿತ್ತದಿಂದ.

ಸಾಧನತ್ವಪ್ರಕಾರಕವಾದ ಮತ್ತು ಸಾಧನವಿಷಯಕವಾದ ನಿಶ್ಚಯ ಹಾಗೂ ಫಲವಿಷ-ಯಕವಾದ ಇಚ್ಛೆ ಇವುಗಳು ಉಂಟಾಗಬೇಕೆಂದರೆ ಅವುಗಳಿಗಾಗಲೀ ಅವುಗಳ ವಿಷಯಕ್ಕಾಗಲೀ ಇಂಥ ಫಲವಿದೆಯೆಂಬ ನಿಶ್ಚಯವು ಅವಶ್ಯಕವಾಗಿ ಬೇಕಾಗುತ್ತದೆ. ಹಾಗೂ ಆ ನಿಮಿತ್ತದಿಂದ ಹಿಂದೆ ತೋರಿಸಿದಂತೆ ಅನವಸ್ಥಾ ದೋಷವೂ ಕೂಡ ಬರುತ್ತಿತ್ತು. ಅಷ್ಟೇ ಅಲ್ಲದೆ ಫಲ-ವಿಷಯಕವಾದ ಇಚ್ಛೆಯೂ ಕೂಡ ಮತ್ತೊಂದು ಫಲವಿದ್ದರೆ ಉಂಟಾಗುತ್ತದೆಂಬ ಪ್ರಸಂಗವು ಬರುತ್ತದೆ. ಈ ನಿಮಿತ್ತದಿಂದ ಅನವಸ್ಥಾದೋಷವು ಬರುತ್ತದೆಂದು ತಿಳಿಯಬೇಕು.

ವಿವರಣೆ – ಅನವಸ್ಥಾದೋಷಕ್ಕೆ ಯಾವುದು ಮೂಲವೋ ಅದನ್ನು ಇಲ್ಲಿ ಸ್ಪಷ್ಟವಾಗಿ ತೋರಿಸು-ತ್ತಿದ್ದಾರೆ – ಪುರುಷಾರ್ಥಸಾಧನತ್ವಪ್ರಕಾರಕವಾದ ಸಾಧನವು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಅಥವಾ ಫಲಗೋಚರವಾದ ಇಚ್ಛೆಯು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಆಗ ಪುರುಷಾರ್ಥಸಾಧನತ್ವ-ಪ್ರಕಾರಕವಾದ ಜ್ಞಾನಕ್ಕೆ ಏನು ಪ್ರಯೋಜನ? ಫಲವಿಷಯಕವಾದ ಜ್ಞಾನಕ್ಕೆ ಏನು ಪ್ರಯೋಜನ? ಎಂಬುದಾಗಿ ಜಿಜ್ಞಾಸೆಯು ಉಂಟಾಗಿ ತನ್ನಿಮಿತ್ತಕವಾಗಿ ಅನವಸ್ಥಾದೋಷವು ಪ್ರಾಪ್ತವಾಗುತ್ತಿತ್ತು. ಆದರೆ ಪ್ರವೃತ್ತಿಯ ಶರೀರದಲ್ಲಿ ಇವುಗಳನ್ನು ಸೇರಿಸಿರುವುದಿಲ್ಲ. ಇಲ್ಲಿ ಎರಡು ಬಗೆಯಲ್ಲಿ ಅನವಸ್ಥಾದೋಷ-ವನ್ನು ಹೇಳಲಾಗಿತ್ತು. (೧) ಪುರುಷಾರ್ಥಸಾಧನತ್ವಪ್ರಕಾರಕವಾದ ಅನುಭವವನ್ನು ಪ್ರವೃತ್ತಿ ಎಂದು ಹೇಳಿದರೆ ಇದರ ಪ್ರಯೋಜನವೇನೆಂದು ತಿಳಿದುಕೊಳ್ಳಬೇಕಾದ್ದರಿಂದ ಅನವಸ್ಥಾದೋಷವು ಬರುತ್ತದೆ. (೨) ಇಚ್ಛೆಯನ್ನು ಪ್ರವೃತ್ತಿ ಎಂದು ಕರೆದರೆ ಆ ಫಲವಿಷಯಕವಾದ ಇಚ್ಛೆಗೆ ಇನ್ನೊಂದು ಫಲವಿದ್ದರೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಆದರೆ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವನ್ನಾಗಲೀ ಫಲಗೋಚರವಾದ ಇಚ್ಛೆಯನ್ನಾಗಲೀ ಪ್ರವೃತ್ತಿ ಎಂದು ನಾವು ಹೇಳಿರುವುದಿಲ್ಲ. ಆದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಪರಿಮಳ – 'ಪ್ರಯೋಜನನಿಶ್ಚಯಾಪೇಕ್ಷಾ' ಇತ್ಯಸ್ಯ 'ಪ್ರಯೋಜನಹೇತುತ್ವನಿಶ್ಚಯಾ-ಪೇಕ್ಷಾ' ಇತ್ಯರ್ಥಃ । ಸಾಧನಾನುಭವಫಲೇಚ್ಛಯೋಃ ಪ್ರಯೋಜನಾಪೇಕ್ಷಾ ನ ಇತ್ಯೇತತ್ ಕ್ರಮೇಣ ವ್ಯನಕ್ತಿ – ನ ಹೀತಿ ॥ ನನೂಕ್ತರೂಪಾನುಭವಸ್ಯ ಫಲಾಂತರಾನಪೇಕ್ಷತ್ವೇಽಪಿ ಸಾಧನತ್ವಪ್ರಕಾರಕಸಾಧನಗೋಚರಾನುಭವಸ್ಯ ಫಲೇಚ್ಛಾಪೇಕ್ಷತ್ವಂ ತು ಸ್ಯಾದಿತ್ಯತಸ್ತದಪಿ ನೇತ್ಯಾಹ – ನ ಚೇತಿ ॥ ಅನಪೇಕ್ಷಿತತ್ವೇ ಹೇತುಃ – ಮುಮುಕ್ಷುಣೇತಿ ॥ 'ಜ್ಯೋತಿ-ಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಶ್ರವಣೇ ಸತಿ ಸ್ವರ್ಗಾದೌ ವಿರಾಗಿ-ಣೋಽಪಿ ವ್ಯುತ್ಪನ್ನಸ್ಯ ವಾಕ್ಯಾರ್ಥಬೋಧೋದಯಾನುಭವಾದಿತಿ ಭಾವಃ ।

"ಪ್ರಯೋಜನನಿಶ್ಚಯಾಪೇಕ್ಷಾ" ಎಂಬುದಕ್ಕೆ ಪ್ರಯೋಜನಹೇತುತ್ವನಿಶ್ಚಯದ ಅಪೇಕ್ಷೆ ಎಂದರ್ಥ. ಸಾಧನಾನುಭವ ಹಾಗೂ ಫಲೇಚ್ಛೆಗಳಿಗೆ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲ ಎಂಬುದನ್ನು "ನಹಿ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಹಿಂದೆ ಹೇಳಿದ ಅನುಭವಕ್ಕೆ ಫಲಾಂತರದ ಅಪೇಕ್ಷೆಯು ಇಲ್ಲದಿದ್ದರೂ ಕೂಡ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವಕ್ಕೆ ಫಲೇಚ್ಛೆಯ ಅಪೇಕ್ಷೆಯು ಇದ್ದೇ ಇರುತ್ತದೆಂಬ ಪ್ರಶ್ನೆಗೆ ಸರ್ವಥಾ ಇರುವುದಿಲ್ಲವೆಂದು "ನಚ" ಇತ್ಯಾದಿ ಗ್ರಂಥದಿಂದ ಉತ್ತರಿಸು-ತ್ತಿದ್ದಾರೆ. ಅನಪೇಕ್ಷಿತವಾಗಿದೆ ಎಂಬುದಕ್ಕೆ ಹೇತುವನ್ನು "ಮುಮುಕ್ಷುಣಾ" ಎಂಬುದರಿಂದ ಹೇಳಿದ್ದಾರೆ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿ ವಾಕ್ಯವನ್ನು ಕೇಳಿದಾಗ ಸ್ವರ್ಗಾದಿಗಳಲ್ಲಿ ವಿರಕ್ತನಾದ ವ್ಯುತ್ಪನ್ನನಿಗೂ ಕೂಡ ವಾಕ್ಯಾರ್ಥಜ್ಞಾನವು ಬರುವುದು ಅನುಭವಸಿದ್ಧವಾಗಿದೆ ಎಂದಭಿಪ್ರಾಯ.

ವಿವರಣೆ – ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವು ಪ್ರಯತ್ನ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ, ಫಲಗೋಚರಕವಾದ ಇಚ್ಛೆ ಎಂಬುದಾಗಿ ಇಚ್ಛೆಯು ಎರಡುವಿಧವಾಗಿದೆ. ಸಾಧನವಿಷಯಕವಾದ ಪ್ರಯತ್ನವು ಮತ್ತೊಂದು. ಈ ಮೂರರಲ್ಲಿ ಯಾವುದನ್ನು ಪ್ರವೃತ್ತಿ ಎನ್ನಬೇಕು ಎಂದರೆ ಸಾಮಾನ್ಯವಾದ ಅನುಭವವಾಗಲೀ ಸಾಧನವಿಷಯಕವಾದ ಅನುಭವವಾಗಲೀ ಅಥವಾ ಫಲೇಚ್ಛೆಯಾಗಲೀ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನ-ಗೋಚರವಾದ ಇಚ್ಛೆ ಹಾಗೂ ಸಾಧನಗೋಚರವಾದ ಪ್ರಯತ್ನ ಇವೆರಡನ್ನು ಮಾತ್ರ ಪ್ರವೃತ್ತಿ ಎಂದು ಕರೆಯುತ್ತೇವೆ. ಈ ಪ್ರವೃತ್ತಿಯು ಬರಬೇಕೆಂದರೆ ಪ್ರಯೋಜನಾದಿಗಳ ಅನುಸಂಧಾನವು ಅವಶ್ಯವಾಗಿ ಬೇಕಾಗುತ್ತದೆ. ಏಕೆಂದರೆ, ಸಾಧನದಲ್ಲಿ ಪ್ರಯತ್ನಮಾಡುವುದು ಸಹಜವಾಗಿ ಉಂಟಾಗುವುದಿಲ್ಲ. ಪ್ರಯೋಜನಾದಿಗಳ ಅರಿವು ಬೇಕು.

## ಪ್ರಥಮಸೂತ್ರದ ಅಧ್ಯಯನದಲ್ಲಿ ಹೇಗೆ ಪ್ರವೃತ್ತಿಯಾಗುತ್ತದೆ?

ಪರಿಮಳ – ನನು ಯಥಾಽಽದ್ಯಸೂತ್ರಾತ್ ಶಾಸ್ತ್ರಸ್ಯ ಪುಮರ್ಥಹೇತುತ್ವಾನುಭವಸ್ತಸ್ಯ ಫಲಹೇತುತ್ವಜ್ಞಾನಾನಪೇಕ್ಷಸ್ತಥಾ ಇಚ್ಛಾಪ್ರಯತ್ನಾವಪಿ ತದನಪೇಕ್ಷೌ ಸ್ಯಾತಾಮ್ । ಏವಂ ಚಾದ್ಯಸೂತ್ರಂ ವ್ಯರ್ಥಮಿತ್ಯತ ಆಹ – ಪುರುಷಾರ್ಥಸಾಧನೇ ತ್ವಿತಿ ॥ ಶಾಸ್ತ್ರರೂಪ ಇತಿ ಭಾವಃ । ಇಚ್ಛಾ ಪ್ರಾರಂಭೇಚ್ಛಾ । ಪ್ರಯತ್ನೇತಿ ॥ ಶ್ರವಣಾದ್ಯನುಕೂಲಪ್ರಯತ್ನೇತ್ಯರ್ಥಃ । ನ ಸ್ವರಸಸಿದ್ಧೇತಿ ॥ ಪುರುಷಾರ್ಥಹೇತುತ್ವಜ್ಞಾನಂ ವಿನಾ ಫಲೇಚ್ಛಾಂ ಚ ವಿನಾ ನ ಸಿದ್ಧೇ-

ವಿವರಣೆ – ಅನವಸ್ಥಾದೋಷಕ್ಕೆ ಯಾವುದು ಮೂಲವೋ ಅದನ್ನು ಇಲ್ಲಿ ಸ್ಪಷ್ಟವಾಗಿ ತೋರಿಸು-ತ್ತಿದ್ದಾರೆ – ಪುರುಷಾರ್ಥಸಾಧನತ್ವಪ್ರಕಾರಕವಾದ ಸಾಧನವು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಅಥವಾ ಫಲಗೋಚರವಾದ ಇಚ್ಛೆಯು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಆಗ ಪುರುಷಾರ್ಥಸಾಧನತ್ವ-ಪ್ರಕಾರಕವಾದ ಜ್ಞಾನಕ್ಕೆ ಏನು ಪ್ರಯೋಜನ? ಫಲವಿಷಯಕವಾದ ಜ್ಞಾನಕ್ಕೆ ಏನು ಪ್ರಯೋಜನ? ಎಂಬುದಾಗಿ ಜಿಜ್ಞಾಸೆಯು ಉಂಟಾಗಿ ತನ್ನಿಮಿತ್ತಕವಾಗಿ ಅನವಸ್ಥಾದೋಷವು ಪ್ರಾಪ್ತವಾಗುತ್ತಿತ್ತು. ಆದರೆ ಪ್ರವೃತ್ತಿಯ ಶರೀರದಲ್ಲಿ ಇವುಗಳನ್ನು ಸೇರಿಸಿರುವುದಿಲ್ಲ. ಇಲ್ಲಿ ಎರಡು ಬಗೆಯಲ್ಲಿ ಅನವಸ್ಥಾದೋಷ-ವನ್ನು ಹೇಳಲಾಗಿತ್ತು. (೧) ಪುರುಷಾರ್ಥಸಾಧನತ್ವಪ್ರಕಾರಕವಾದ ಅನುಭವವನ್ನು ಪ್ರವೃತ್ತಿ ಎಂದು ಹೇಳಿದರೆ ಇದರ ಪ್ರಯೋಜನವೇನೆಂದು ತಿಳಿದುಕೊಳ್ಳಬೇಕಾದ್ದರಿಂದ ಅನವಸ್ಥಾದೋಷವು ಬರುತ್ತದೆ. (೨) ಇಚ್ಛೆಯನ್ನು ಪ್ರವೃತ್ತಿ ಎಂದು ಕರೆದರೆ ಆ ಫಲವಿಷಯಕವಾದ ಇಚ್ಛೆಗೆ ಇನ್ನೊಂದು ಫಲವಿದ್ದರೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಆದರೆ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವನ್ನಾಗಲೀ ಫಲಗೋಚರವಾದ ಇಚ್ಛೆಯನ್ನಾಗಲೀ ಪ್ರವೃತ್ತಿ ಎಂದು ನಾವು ಹೇಳಿರುವುದಿಲ್ಲ. ಆದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಪರಿಮಳ – 'ಪ್ರಯೋಜನನಿಶ್ಚಯಾಪೇಕ್ಷಾ' ಇತ್ಯಸ್ಯ 'ಪ್ರಯೋಜನಹೇತುತ್ವನಿಶ್ಚಯಾ-ಪೇಕ್ಷಾ' ಇತ್ಯರ್ಥಃ । ಸಾಧನಾನುಭವಫಲೇಚ್ಛಯೋಃ ಪ್ರಯೋಜನಾಪೇಕ್ಷಾ ನ ಇತ್ಯೇತತ್ ಕ್ರಮೇಣ ವ್ಯನಕ್ತಿ – ನ ಹೀತಿ ॥ ನನೂಕ್ತರೂಪಾನುಭವಸ್ಯ ಫಲಾಂತರಾನಪೇಕ್ಷತ್ವೇಽಪಿ ಸಾಧನತ್ವಪ್ರಕಾರಕಸಾಧನಗೋಚರಾನುಭವಸ್ಯ ಫಲೇಚ್ಛಾಪೇಕ್ಷತ್ವಂ ತು ಸ್ಯಾದಿತ್ಯತಸ್ತದಪಿ ನೇತ್ಯಾಹ – ನ ಚೇತಿ ॥ ಅನಪೇಕ್ಷಿತತ್ವೇ ಹೇತುಃ – ಮುಮುಕ್ಷುಣೇತಿ ॥ 'ಜ್ಯೋತಿ-ಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಶ್ರವಣೇ ಸತಿ ಸ್ವರ್ಗಾದೌ ವಿರಾಗಿ-ಣೋಽಪಿ ವ್ಯುತ್ಪನ್ನಸ್ಯ ವಾಕ್ಯಾರ್ಥಬೋಧೋದಯಾನುಭವಾದಿತಿ ಭಾವಃ ।

"ಪ್ರಯೋಜನನಿಶ್ಚಯಾಪೇಕ್ಷಾ" ಎಂಬುದಕ್ಕೆ ಪ್ರಯೋಜನಹೇತುತ್ವನಿಶ್ಚಯದ ಅಪೇಕ್ಷೆ ಎಂದರ್ಥ. ಸಾಧನಾನುಭವ ಹಾಗೂ ಫಲೇಚ್ಛೆಗಳಿಗೆ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲ ಎಂಬುದನ್ನು "ನಹಿ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಹಿಂದೆ ಹೇಳಿದ ಅನುಭವಕ್ಕೆ ಫಲಾಂತರದ ಅಪೇಕ್ಷೆಯು ಇಲ್ಲದಿದ್ದರೂ ಕೂಡ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವಕ್ಕೆ ಫಲೇಚ್ಛೆಯ ಅಪೇಕ್ಷೆಯು ಇದ್ದೇ ಇರುತ್ತದೆಂಬ ಪ್ರಶ್ನೆಗೆ ಸರ್ವಥಾ ಇರುವುದಿಲ್ಲವೆಂದು "ನಚ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಅನಪೇಕ್ಷಿತವಾಗಿದೆ ಎಂಬುದಕ್ಕೆ ಹೇತುವನ್ನು "ಮುಮುಕ್ಷುಣಾ" ಎಂಬುದರಿಂದ ಹೇಳಿದ್ದಾರೆ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿ ವಾಕ್ಯವನ್ನು ಕೇಳಿದಾಗ ಸ್ವರ್ಗಾದಿಗಳಲ್ಲಿ ವಿರಕ್ತನಾದ ವ್ಯುತ್ಪನ್ನನಿಗೂ ಕೂಡ ವಾಕ್ಯಾರ್ಥಜ್ಞಾನವು ಬರುವುದು ಅನುಭವಸಿದ್ಧವಾಗಿದೆ ಎಂದಭಿಪ್ರಾಯ.

ವಿವರಣೆ – ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವು ಪ್ರಯತ್ನ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ, ಫಲಗೋಚರಕವಾದ ಇಚ್ಛೆ ಎಂಬುದಾಗಿ ಇಚ್ಛೆಯು ಎರಡುವಿಧವಾಗಿದೆ. ಸಾಧನವಿಷಯಕವಾದ ಪ್ರಯತ್ನವು ಮತ್ತೊಂದು. ಈ ಮೂರರಲ್ಲಿ ಯಾವುದನ್ನು ಪ್ರವೃತ್ತಿ ಎನ್ನಬೇಕು ಎಂದರೆ ಸಾಮಾನ್ಯವಾದ ಅನುಭವವಾಗಲೀ ಸಾಧನವಿಷಯಕವಾದ ಅನುಭವವಾಗಲೀ ಅಥವಾ ಫಲೇಚ್ಛೆಯಾಗಲೀ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ ಹಾಗೂ ಸಾಧನಗೋಚರವಾದ ಪ್ರಯತ್ನ ಇವೆರಡನ್ನು ಮಾತ್ರ ಪ್ರವೃತ್ತಿ ಎಂದು ಕರೆಯುತ್ತೇವೆ. ಈ ಪ್ರವೃತ್ತಿಯು ಬರಬೇಕೆಂದರೆ ಪ್ರಯೋಜನಾದಿಗಳ ಅನುಸಂಧಾನವು ಅವಶ್ಯವಾಗಿ ಬೇಕಾಗುತ್ತದೆ. ಏಕೆಂದರೆ, ಸಾಧನದಲ್ಲಿ ಪ್ರಯತ್ನಮಾಡುವುದು ಸಹಜವಾಗಿ ಉಂಟಾಗುವುದಿಲ್ಲ. ಪ್ರಯೋಜನಾದಿಗಳ ಅರಿವು ಬೇಕು.

## ಪ್ರಥಮಸೂತ್ರದ ಅಧ್ಯಯನದಲ್ಲಿ ಹೇಗೆ ಪ್ರವೃತ್ತಿಯಾಗುತ್ತದೆ?

ಪರಿಮಳ – ನನು ಯಥಾऽऽದ್ಯಸೂತ್ರಾತ್ ಶಾಸ್ತ್ರಸ್ಯ ಪುಮರ್ಥಹೇತುತ್ವಾನುಭವಸ್ತಸ್ಯ ಫಲಹೇತುತ್ವಜ್ಞಾನಾನಪೇಕ್ಷಸ್ತಥಾ ಇಚ್ಛಾಪ್ರಯತ್ನಾವಪಿ ತದನಪೇಕ್ಷೌ ಸ್ಯಾತಾಮ್ । ಏವಂ ಚಾದ್ಯಸೂತ್ರಂ ವ್ಯರ್ಥಮಿತ್ಯತ ಆಹ – ಪುರುಷಾರ್ಥಸಾಧನೇ ತ್ವಿತಿ ॥ ಶಾಸ್ತ್ರರೂಪ ಇತಿ ಭಾವಃ । ಇಚ್ಛಾ ಪ್ರಾರಂಭೇಚ್ಛಾ । ಪ್ರಯತ್ನೇತಿ ॥ ಶ್ರವಣಾದ್ಯನುಕೂಲಪ್ರಯತ್ನೇತ್ಯರ್ಥಃ । ನ ಸ್ವರಸಸಿದ್ಧೇತಿ ॥ ಪುರುಷಾರ್ಥಹೇತುತ್ವಜ್ಞಾನಂ ವಿನಾ ಫಲೇಚ್ಛಾಂ ಚ ವಿನಾ ನ ಸಿದ್ಧೇ-

ವಿವರಣೆ – ಅನವಸ್ಥಾದೋಷಕ್ಕೆ ಯಾವುದು ಮೂಲವೋ ಅದನ್ನು ಇಲ್ಲಿ ಸ್ಪಷ್ಟವಾಗಿ ತೋರಿಸು-ತ್ತಿದ್ದಾರೆ – ಪುರುಷಾರ್ಥಸಾಧನತ್ವಪ್ರಕಾರಕವಾದ ಸಾಧನವು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಅಥವಾ ಫಲಗೋಚರವಾದ ಇಚ್ಛೆಯು ಪ್ರವೃತ್ತಿಯ ಶರೀರದಲ್ಲಿ ಸೇರಿದ್ದರೆ ಆಗ ಪುರುಷಾರ್ಥಸಾಧನತ್ವ-ಪ್ರಕಾರಕವಾದ ಜ್ಞಾನಕ್ಕೆ ಏನು ಪ್ರಯೋಜನ? ಫಲವಿಷಯಕವಾದ ಜ್ಞಾನಕ್ಕೆ ಏನು ಪ್ರಯೋಜನ? ಎಂಬುದಾಗಿ ಜಿಜ್ಞಾಸೆಯು ಉಂಟಾಗಿ ತನ್ನಿಮಿತ್ತಕವಾಗಿ ಅನವಸ್ಥಾದೋಷವು ಪ್ರಾಪ್ತವಾಗುತ್ತಿತ್ತು. ಆದರೆ ಪ್ರವೃತ್ತಿಯ ಶರೀರದಲ್ಲಿ ಇವುಗಳನ್ನು ಸೇರಿಸಿರುವುದಿಲ್ಲ. ಇಲ್ಲಿ ಎರಡು ಬಗೆಯಲ್ಲಿ ಅನವಸ್ಥಾದೋಷ-ವನ್ನು ಹೇಳಲಾಗಿತ್ತು. (೧) ಪುರುಷಾರ್ಥಸಾಧನತ್ವಪ್ರಕಾರಕವಾದ ಅನುಭವವನ್ನು ಪ್ರವೃತ್ತಿ ಎಂದು ಹೇಳಿದರೆ ಇದರ ಪ್ರಯೋಜನವೇನೆಂದು ತಿಳಿದುಕೊಳ್ಳಬೇಕಾದ್ದರಿಂದ ಅನವಸ್ಥಾದೋಷವು ಬರುತ್ತದೆ. (೨) ಇಚ್ಛೆಯನ್ನು ಪ್ರವೃತ್ತಿ ಎಂದು ಕರೆದರೆ ಆ ಫಲವಿಷಯಕವಾದ ಇಚ್ಛೆಗೆ ಇನ್ನೊಂದು ಫಲವಿದ್ದರೆ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಆದರೆ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವನ್ನಾಗಲೀ ಫಲಗೋಚರವಾದ ಇಚ್ಛೆಯನ್ನಾಗಲೀ ಪ್ರವೃತ್ತಿ ಎಂದು ನಾವು ಹೇಳಿರುವುದಿಲ್ಲ. ಆದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಪರಿಮಳ – 'ಪ್ರಯೋಜನನಿಶ್ಚಯಾಪೇಕ್ಷಾ' ಇತ್ಯಸ್ಯ 'ಪ್ರಯೋಜನಹೇತುತ್ವನಿಶ್ಚಯಾ-ಪೇಕ್ಷಾ' ಇತ್ಯರ್ಥಃ । ಸಾಧನಾನುಭವಫಲೇಚ್ಛಯೋಃ ಪ್ರಯೋಜನಾಪೇಕ್ಷಾ ನ ಇತ್ಯೇತತ್ ಕ್ರಮೇಣ ವ್ಯನಕ್ತಿ – ನ ಹೀತಿ ॥ ನನೂಕ್ತರೂಪಾನುಭವಸ್ಯ ಫಲಾಂತರಾನಪೇಕ್ಷತ್ವೇಽಪಿ ಸಾಧನತ್ವಪ್ರಕಾರಕಸಾಧನಗೋಚರಾನುಭವಸ್ಯ ಫಲೇಚ್ಛಾಪೇಕ್ಷತ್ವಂ ತು ಸ್ಯಾದಿತ್ಯತಸ್ತದಪಿ ನೇತ್ಯಾಹ – ನ ಚೇತಿ ॥ ಅನಪೇಕ್ಷಿತತ್ವೇ ಹೇತುಃ – ಮುಮುಕ್ಷುಣೇತಿ ॥ 'ಜ್ಯೋತಿ-ಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಶ್ರವಣೇ ಸತಿ ಸ್ವರ್ಗಾದೌ ವಿರಾಗಿ-ಣೋಽಪಿ ವ್ಯುತ್ಪನ್ನಸ್ಯ ವಾಕ್ಯಾರ್ಥಬೋಧೋದಯಾನುಭವಾದಿತಿ ಭಾವಃ ।

"ಪ್ರಯೋಜನನಿಶ್ಚಯಾಪೇಕ್ಷಾ" ಎಂಬುದಕ್ಕೆ ಪ್ರಯೋಜನಹೇತುತ್ವನಿಶ್ಚಯದ ಅಪೇಕ್ಷೆ ಎಂದರ್ಥ. ಸಾಧನಾನುಭವ ಹಾಗೂ ಫಲೇಚ್ಛೆಗಳಿಗೆ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲ ಎಂಬುದನ್ನು "ನಹಿ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಹಿಂದೆ ಹೇಳಿದ ಅನುಭವಕ್ಕೆ ಫಲಾಂತರದ ಅಪೇಕ್ಷೆಯು ಇಲ್ಲದಿದ್ದರೂ ಕೂಡ ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವಕ್ಕೆ ಫಲೇಚ್ಛೆಯ ಅಪೇಕ್ಷೆಯು ಇದ್ದೇ ಇರುತ್ತದೆಂಬ ಪ್ರಶ್ನೆಗೆ ಸರ್ವಥಾ ಇರುವುದಿಲ್ಲವೆಂದು "ನಚ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಅನಪೇಕ್ಷಿತವಾಗಿದೆ ಎಂಬುದಕ್ಕೆ ಹೇತುವನ್ನು "ಮುಮುಕ್ಷುಣಾ" ಎಂಬುದರಿಂದ ಹೇಳಿದ್ದಾರೆ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿ ವಾಕ್ಯವನ್ನು ಕೇಳಿದಾಗ ಸ್ವರ್ಗಾದಿಗಳಲ್ಲಿ ವಿರಕ್ತನಾದ ವ್ಯುತ್ಪನ್ನನಿಗೂ ಕೂಡ ವಾಕ್ಯಾರ್ಥಜ್ಞಾನವು ಬರುವುದು ಅನುಭವಸಿದ್ಧವಾಗಿದೆ ಎಂದಭಿಪ್ರಾಯ.

ವಿವರಣೆ – ಸಾಧನತ್ವಪ್ರಕಾರಕವಾದ ಸಾಧನವಿಷಯಕವಾದ ಅನುಭವವು ಪ್ರಯತ್ನ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ, ಫಲಗೋಚರಕವಾದ ಇಚ್ಛೆ ಎಂಬುದಾಗಿ ಇಚ್ಛೆಯು ಎರಡುವಿಧವಾಗಿದೆ. ಸಾಧನವಿಷಯಕವಾದ ಪ್ರಯತ್ನವು ಮತ್ತೊಂದು. ಈ ಮೂರರಲ್ಲಿ ಯಾವುದನ್ನು ಪ್ರವೃತ್ತಿ ಎನ್ನಬೇಕು ಎಂದರೆ ಸಾಮಾನ್ಯವಾದ ಅನುಭವವಾಗಲೀ ಸಾಧನವಿಷಯಕವಾದ ಅನುಭವವಾಗಲೀ ಅಥವಾ ಫಲೇಚ್ಛೆಯಾಗಲೀ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ ಹಾಗೂ ಸಾಧನಗೋಚರವಾದ ಪ್ರಯತ್ನ ಇವೆರಡನ್ನು ಮಾತ್ರ ಪ್ರವೃತ್ತಿ ಎಂದು ಕರೆಯುತ್ತೇವೆ. ಈ ಪ್ರವೃತ್ತಿಯು ಬರಬೇಕೆಂದರೆ ಪ್ರಯೋಜನಾದಿಗಳ ಅನುಸಂಧಾನವು ಅವಶ್ಯವಾಗಿ ಬೇಕಾಗುತ್ತದೆ. ಏಕೆಂದರೆ, ಸಾಧನದಲ್ಲಿ ಪ್ರಯತ್ನಮಾಡುವುದು ಸಹಜವಾಗಿ ಉಂಟಾಗುವುದಿಲ್ಲ. ಪ್ರಯೋಜನಾದಿಗಳ ಅರಿವು ಬೇಕು.

## ಪ್ರಥಮಸೂತ್ರದ ಅಧ್ಯಯನದಲ್ಲಿ ಹೇಗೆ ಪ್ರವೃತ್ತಿಯಾಗುತ್ತದೆ?

ಪರಿಮಳ – ನನು ಯಥಾಽಽದ್ಯಸೂತ್ರಾತ್ ಶಾಸ್ತ್ರಸ್ಯ ಪುಮರ್ಥಹೇತುತ್ವಾನುಭವಸ್ತಸ್ಯ ಫಲಹೇತುತ್ವಜ್ಞಾನಾನಪೇಕ್ಷಸ್ತಥಾ ಇಚ್ಛಾಪ್ರಯತ್ನಾವಪಿ ತದನಪೇಕ್ಷೌ ಸ್ಯಾತಾಮ್ । ಏವಂ ಚಾದ್ಯಸೂತ್ರಂ ವ್ಯರ್ಥಮಿತ್ಯತ ಆಹ – ಪುರುಷಾರ್ಥಸಾಧನೇ ತ್ವಿತಿ ॥ ಶಾಸ್ತ್ರರೂಪ ಇತಿ ಭಾವಃ । ಇಚ್ಛಾ ಪ್ರಾರಂಭೇಚ್ಛಾ । ಪ್ರಯತ್ನೇತಿ ॥ ಶ್ರವಣಾದ್ಯನುಕೂಲಪ್ರಯತ್ನೇತ್ಯರ್ಥಃ । ನ ಸ್ವರಸಸಿದ್ಧೇತಿ ॥ ಪುರುಷಾರ್ಥಹೇತುತ್ವಜ್ಞಾನಂ ವಿನಾ ಫಲೇಚ್ಛಾಂ ಚ ವಿನಾ ನ ಸಿದ್ಧೇ-

ತ್ಯರ್ಥಃ । ತದ್ವ್ಯನಕ್ತಿ – ನ ಹೀತಿ ॥ ಕ್ಷುತ್ಪ್ರಹಾಣಾದಿಕಂ ಭೋಜನಸಾಧ್ಯತ್ವೇನಾನುಸಂಧಾಯ ಇತ್ಯರ್ಥಃ । ಸಾರ್ಥಕಮಿತಿ ॥ ಏತೇನ ಆದ್ಯಪಕ್ಷೇ ಭಾಷ್ಯಕಾರೀಯಂ ಪ್ರಯೋಜನಾಭಿಧೇಯಸಂಬಂಧವ್ಯುತ್ಪಾದನಮಪಿ ಸಮರ್ಥಿತಂ ಧ್ಯೇಯಮ್ ।

ಪ್ರಥಮಸೂತ್ರದಿಂದ ಈ ಶಾಸ್ತ್ರವು ಪುರುಷಾರ್ಥಸಾಧನವಾಗಿದೆ ಎಂಬ ಅನುಭವವು ಉಂಟಾಗುತ್ತದೆ. ಆ ಅನುಭವಕ್ಕೆ ಫಲಕಾರಣವಾಗಿದೆ ಎಂಬ ನಿಶ್ಚಯದ ಅವಶ್ಯಕತೆ ಇರುವುದಿಲ್ಲ. ಇದೇ ದೃಷ್ಟಾಂತದಿಂದ ಸಾಧನವಿಷಯಕವಾದ ಇಚ್ಛಾಪ್ರಯತ್ನಗಳು ಕೂಡ ಫಲಕಾರಣವೆಂಬ ನಿಶ್ಚಯವಿಲ್ಲದೇ ಏಕೆ ಬರಬಾರದು? ಆದ್ದರಿಂದ ಪ್ರಯೋಜನಾದಿಗಳನ್ನು ತಿಳಿಸುವ ಪ್ರಥಮಸೂತ್ರವು ವ್ಯರ್ಥವಲ್ಲವೇ?

ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ "ಪುರುಷಾರ್ಥಸಾಧನೇ ತು" ಇತ್ಯಾದಿ ಗ್ರಂಥವು ಹೊರಟಿದೆ. ಇಲ್ಲಿ ಮೋಕ್ಷವೆಂಬ ಪುರುಷಾರ್ಥಕ್ಕೆ ಶಾಸ್ತ್ರವು ಸಾಧನವಾಗಿದೆ ಎಂದು ತಿಳಿಯಬೇಕು. ಇಚ್ಛಾ ಎಂದರೆ ಪ್ರಾರಂಭ ಮಾಡಬೇಕೆಂಬ ಇಚ್ಛೆ ಎಂದರ್ಥ. ಪ್ರಯತ್ನಶಬ್ದಕ್ಕೆ ಶಾಸ್ತ್ರಶ್ರವಣಾದಿಗಳಿಗೆ ಅನುಕೂಲವಾದ ಪ್ರಯತ್ನ ಎಂದರ್ಥ.

"ನ ಸ್ವರಸಸಿದ್ಧಾ" ಪುರುಷಾರ್ಥಕಾರಣವಾಗಿದೆ ಎಂಬ ಜ್ಞಾನವನ್ನು ಹಾಗೂ ಫಲವಿಷಯಕವಾದ ಇಚ್ಛೆಯನ್ನು ಅಪೇಕ್ಷೆ ಪಡದೆ ಸಹಜವಾಗಿ ಪ್ರವೃತ್ತಿಯು ಉಂಟಾಗುವುದಿಲ್ಲ ಎಂದರ್ಥ. ಇದರ ವಿವರಣೆಗಾಗಿ "ನ ಹಿ" ಇತ್ಯಾದಿ ವಾಕ್ಯವು ಹೊರಟಿದೆ. ಹಸಿವೆಯನ್ನು ಪರಿಹರಿಸಿಕೊಳ್ಳಲು ಭೋಜನವು ಕಾರಣವಾಗಿದೆ ಎಂಬ ಜ್ಞಾನವಿಲ್ಲದೇ ಯಾರೂ ಕೂಡ ಭೋಜನದಲ್ಲಿ ಪ್ರವೃತ್ತಿಯನ್ನು ಮಾಡುವುದಿಲ್ಲ ಎಂದಭಿಪ್ರಾಯ. ಹೀಗೆ ಹೇಳಿದ್ದರಿಂದ ಪ್ರಥಮಪಕ್ಷದಲ್ಲಿ ಪ್ರಯೋಜನಾದಿಗಳಿವೆ ಎಂಬ ಭಾಷ್ಯಕಾರರ ನಿರೂಪಣೆಯನ್ನು ಸಮರ್ಥಿಸಿದಂತಾಯಿತು.

ವಿಶೇಷವಿಚಾರ – ಪ್ರಥಮಸೂತ್ರದಲ್ಲಿ ಪ್ರವೃತ್ತಿಯು ಉಂಟಾಗುವುದಕ್ಕೋಸ್ಕರ ಪ್ರಯೋಜನಾದಿಗಳು ಆವಶ್ಯಕವಾಗಿವೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆ ಎಂದು ಯಾರು ಹೇಳುತ್ತಾನೋ ಅವನನ್ನು ಕುರಿತು ಹೀಗೆ ಪ್ರಶ್ನಿಸುತ್ತೇವೆ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇವೇ ಮೊದಲಾದ ವಾಕ್ಯಗಳಿಂದ ಬರುವ ಸ್ವರ್ಗವನ್ನು ಕುರಿತು ಯಾಗವು ಸಾಧನವಾಗಿದೆ

ಎಂಬ ಅನುಭವದಂತೆ ಜಿಜ್ಞಾಸೆಯು ಮೋಕ್ಷಸಾಧನವಾಗಿದೆ ಎಂಬ ಪ್ರಥಮಸೂತ್ರದಿಂದ ಬರುವ ಫಲಸಾಧನತ್ವದ ಅನುಭವವೂ ಕೂಡ ಪ್ರವೃತ್ತಿಯೇ ಆಗಿದೆ ಎಂಬ ಅಭಿಪ್ರಾಯವಿರುವುದರಿಂದ ಇದನ್ನು ಪ್ರತಿಪಾದನೆ ಮಾಡಿದರೆ ಅನವಸ್ಥಾದೋಷ ಬರುತ್ತದೆಂದು ಹೇಳುತ್ತೀರೋ? ಅಥವಾ ಮೊದಲನೇ ಸೂತ್ರದಿಂದ ಪ್ರಾಪ್ತವಾಗುವ ಜಿಜ್ಞಾಸಾವಾಕ್ಯವಿಚಾರರೂಪವಾದ ಪುರುಷಾರ್ಥಸಾಧನವಾದ ಇಚ್ಛಾ-ಪ್ರಯತ್ನರೂಪವಾದ ಪ್ರವೃತ್ತಿಯು ಪ್ರಯೋಜನಾದಿಗಳ ನಿಶ್ಚಯವಿದ್ದಲ್ಲಿ ಮಾತ್ರ ಸಾಧ್ಯವಾಗುತ್ತದೆಂದು ಹೇಳಿದರೆ ಅನವಸ್ಥಾದೋಷ ಬರುತ್ತದೆಂದು ಹೇಳುತ್ತೀರೋ? ಈ ಎರಡು ಪ್ರಶ್ನೆಗಳಲ್ಲಿ ಮೊದಲನೆ-ಯದ್ದು ಅಯುಕ್ತವಾಗಿದೆ. ಏಕೆಂದರೆ ದೃಷ್ಟಾಂತವಾದ ಸ್ವರ್ಗಸಾಧನವಾಗಿದೆ ಎಂಬ ಅನುಭವವು ಪ್ರವೃತ್ತಿಯೆಂದು ಯಾರೂ ಹೇಳುವುದಿಲ್ಲ. ದಾರ್ಷ್ಟಾಂತಿಕವಾದ ಮೋಕ್ಷಸಾಧನೆಯಾಗಿದೆ ಎಂಬ ಅನುಭವವೂ ಕೂಡ ಪ್ರವೃತ್ತಿ ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಇಂಥ ಪ್ರವೃತ್ತಿಗೋಸ್ಕರ ಪ್ರಯೋಜನದ ನಿಶ್ಚಯವಾಗಿರಬೇಕೆಂಬುದು ಅನಾವಶ್ಯಕ. ಎರಡೂ ಬಗೆಯ ಅನುಭವಗಳು ಚಿತ್ತ-ವೃತ್ತಿಯೇ ಆಗಿದ್ದರೂ ಕೂಡ ಪ್ರವೃತ್ತಿಯೆಂದು ಕರೆಸಿಕೊಳ್ಳಲಾರವು. ಈ ಅಭಿಪ್ರಾಯದಿಂದ ಚಿತ್ತವೃತ್ತಿ ಮತ್ತು ಪ್ರವೃತ್ತಿಗಳ ಸ್ವರೂಪದ ವಿವೇಚನೆಯನ್ನು ಪ್ರಕೃತ "ಉಚ್ಯತೇ" ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ.

ಅನುಭವಾದಿಗಳನ್ನು ಪ್ರವೃತ್ತಿ ಎಂದು ಕರೆಯಲು ಸಾಧ್ಯವಿಲ್ಲ. ಆದ್ದರಿಂದ ಆ ಅನುಭವಾದಿಗಳು ಪ್ರಯೋಜನದ ನಿಶ್ಚಯವನ್ನು ಅವಲಂಬಿಸುವುದಿಲ್ಲ. ಮತ್ತು ಪ್ರಯೋಜನನಿಶ್ಚಯದ ಸಾಪೇಕ್ಷತ್ವವು ಅವುಗಳಿಗೆ ಅಸಂಭಾವಿತವೂ ಆಗಿದೆ. ಈ ವಿಷಯವನ್ನು "ನಹಿ" ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ. ಉದಾಸೀನದ ಜ್ಞಾನಫಲೇಚ್ಛೆಗಳು ದೃಷ್ಟಾಂತವಾಗಿವೆಯೆಂದು ಪ್ರಥಮಪಕ್ಷದಲ್ಲಿ ತಿಳಿಯಬೇಕು. ಎರಡನೆಯ ಪಕ್ಷದಲ್ಲಿ ಪ್ರಥಮಸೂತ್ರದ ಪ್ರವೃತ್ತಿಗೆ ಪ್ರಯೋಜನಾದಿಗಳ ಜ್ಞಾನವು ಆವಶ್ಯಕವಾಗುತ್ತದೆ. ತನ್ಮೂಲಕವಾಗಿ ಅನವಸ್ಥಾದೋಷವು ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ಪ್ರವೃತ್ತಿಯಷ್ಟೇ ಪ್ರಯೋಜನಾದಿಗಳ ಜ್ಞಾನವು ಆವಶ್ಯಕವಾಗಿದೆ. ಅನುಭವಾದಿಗಳಿಗೆ ಪ್ರಯೋಜನದ ಜ್ಞಾನವು ಹೇಗೆ ಆವಶ್ಯಕವಲ್ಲವೋ ಹಾಗೆ ಪ್ರವೃತ್ತಿವಿಷಯದಲ್ಲಿ ತಿಳಿಯಬಾರದು ಎಂಬುದನ್ನು "ಪುರುಷಾರ್ಥಸಾಧನೇ ತು" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಬ್ರಹ್ಮಮೀಮಾಂಸಾಶಾಸ್ತ್ರವು ಬಹ್ವರ್ಥಗರ್ಭಿತವಾಗಿದೆ; ಗಂಭೀರವಾಗಿದೆ; ಪರಿಶ್ರಮದಿಂದಷ್ಟೇ ಅಧ್ಯಯನ ಮಾಡಲು ಸಾಧ್ಯವಾಗಿದೆ. ಆದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಲ್ಲಿ ಸ್ವಾಭಾವಿಕವಾದ ಇಚ್ಛೆ ಮತ್ತು ಪ್ರಯತ್ನಗಳು ಸಾಮಾನ್ಯರಿಗೆ ಉಂಟಾಗುವುದಿಲ್ಲ. ಉದಾಹರಣೆ – ರಾಜನು ಪುಷ್ಕಳವಾದ ಸಂಪತ್ತನ್ನು ಕೊಡುತ್ತಾನೆ ಎಂಬ ನಿಶ್ಚಯವಿಲ್ಲದೇ ಯಾವುದೇ ಭಟನು ಗದಾ-

ಯುದ್ಧದಲ್ಲಿ ಪಾಲ್ಗೊಂಡು ಆಯಾಸವನ್ನು ಪಡಲು ಬಯಸುವುದಿಲ್ಲ. ಆ ಯುದ್ಧದಲ್ಲಿ ಪ್ರವೃತ್ತಿಯನ್ನು ಕೂಡ ಮಾಡುವುದಿಲ್ಲ. ಆದ್ದರಿಂದ 'ಆನಂದಮಯೋಽಭ್ಯಾಸಾತ್' ಇತ್ಯಾದಿರೂಪವಾದ ಬ್ರಹ್ಮ-ಜಿಜ್ಞಾಸೆಯಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿ ಅದರಲ್ಲಿ ಪ್ರವೃತ್ತಿಯನ್ನು ಮಾಡುವುದಕ್ಕಾಗಿಯೂ ಫಲನಿರ್ಣಯವು ಅವಶ್ಯಕವಾಗಿದೆ. ಯಾವ ಅಧಿಕಾರಿಯು ಕೇವಲ ಸುಖಸ್ವರೂಪವಾದ ಮೋಕ್ಷದ ಅಪೇಕ್ಷೆಯನ್ನು ಹೊಂದಿದ್ದಾನೋ ಅದಕ್ಕಾಗಿ ಯೋಗ್ಯರಾದ ಗುರುಗಳನ್ನು ಉಪಸತ್ತಿ ಮಾಡಿದ್ದಾನೋ ಶಮದಮಾದಿಸಂಪದ್ಭರಿತನಾಗಿದ್ದಾನೋ ಅಂಥ ಅಧಿಕಾರಿಗೆ ಗುರುಗಳ ಉಪದೇಶಾನುಸಾರಿಯಾಗಿ ಪ್ರಥಮಸೂತ್ರದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಪ್ರಥಮಸೂತ್ರದ ಅಧ್ಯಯನದಿಂದ ಪ್ರಯೋಜನ-ವೇನು? ಎಂಬುದನ್ನು ಮೊದಲು ತಿಳಿಯಲು ಇಚ್ಛಿಸುವುದಿಲ್ಲ. ಆದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿಲ್ಲ. ಹೀಗೆ ಪ್ರಥಮಸೂತ್ರದ ಅಧ್ಯಯನದಲ್ಲಿ ತೊಡಗಿದ ಅಧಿಕಾರಿಗೆ ಅಲ್ಪಮಟ್ಟದಲ್ಲಿ ಬ್ರಹ್ಮಜಿಜ್ಞಾಸೆಯು ಪ್ರಾರಂಭವಾಗುತ್ತದೆ. 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಹೇಳಿದ ಮೋಕ್ಷಕಾರಣವಾದ ಜ್ಞಾನವನ್ನು 'ಅತಃ' ಎಂಬ ಶಬ್ದವು ಪರಾಮರ್ಶದ ಮೂಲಕ ತಿಳಿಸುತ್ತದೆ. ಮತ್ತು 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ಶ್ರುತಿ ಹೇಳಿದ ಜಿಜ್ಞಾಸೆಯು ಬ್ರಹ್ಮಜಿಜ್ಞಾಸಾಪದದಿಂದ ತಿಳಿಯುತ್ತದೆ. ಅಥ ಎಂಬ ಪದದಿಂದ ಅಧಿಕಾರವು ತಿಳಿಯುತ್ತದೆ. ಇಷ್ಟನ್ನು ತಿಳಿಯುವುದರಲ್ಲಿ ಅಧಿಕಪ್ರಯಾಸವಿಲ್ಲದ ಕಾರಣ ಪ್ರಥಮಸೂತ್ರದ ಅಧ್ಯಯನದಲ್ಲಿ ಸುಲಭವಾಗಿಯೇ ಪ್ರವೃತ್ತಿ ಉಂಟಾ-ಗುತ್ತದೆ. (ಗುರ್ವರ್ಥದೀಪಿಕಾದಲ್ಲಿ ಉಚ್ಯತೇ ಇತ್ಯಾದಿ ಗ್ರಂಥಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ).

ಪ್ರಥಮಸೂತ್ರವನ್ನು ಬೇರೆ ಯಾವುದೋ ಕಾರಣದಿಂದ ಒಬ್ಬ ಜಿಜ್ಞಾಸುವು ಕೇಳುತ್ತಾನೆ. ವ್ಯುತ್ಪನ್ನನಾದ ಆ ಜಿಜ್ಞಾಸುವಿಗೆ ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ ಎಂಬ ಜ್ಞಾನವು ಉಂಟಾಗುತ್ತದೆ. ಆ ಜ್ಞಾನಕ್ಕೆ ವಿಚಾರವು ಸಾಧನವಾಗಿದೆ; ಅಂಥ ವಿಚಾರವು ಕರ್ತವ್ಯವೆಂದೂ ಕೂಡ ಪ್ರಥಮಸೂತ್ರದಿಂದ ತಿಳಿಯುತ್ತಾನೆ. ಪ್ರಥಮಸೂತ್ರದಲ್ಲಿ ಹೀಗೆ ಪ್ರವೃತ್ತಿಯು ಉಂಟಾದ ಮೇಲೆ ದ್ವಿತೀಯಾದಿ ಸೂತ್ರಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಈ ಅಭಿಪ್ರಾಯದಿಂದ 'ಉಚ್ಯತೇ' ಇತ್ಯಾದಿ ಗ್ರಂಥವು ಹೊರಟಿದೆ. ವಾಕ್ಯದ ಅರ್ಥಜ್ಞಾನವು ಪ್ರವೃತ್ತಿ ಎಂಬ ಪಕ್ಷದಲ್ಲಿ ಪ್ರಯೋಜನನಿಶ್ಚಯವು ಇಲ್ಲದೇ ಇದ್ದಾಗ ಪ್ರಥಮಸೂತ್ರದ ಅರ್ಥಜ್ಞಾನವೂ ಕೂಡ ಆಗದೇ ಇರುವ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರವೃತ್ತಿಶಬ್ದದ ಅರ್ಥವನ್ನು 'ತ್ರಿವಿಧಾ ಹಿ' ಇತ್ಯಾದಿ ವಾಕ್ಯದಿಂದ ನಿಶ್ಚಯವಾಗಿ ಹೇಳುತ್ತಿದ್ದಾರೆ. ಅನುಭವವು ಪ್ರವೃತ್ತಿಯಲ್ಲ ಎಂಬ ವಿಷಯಕ್ಕೆ ದೃಷ್ಟಾಂತವಾಗಿ ಇಚ್ಛೆಯನ್ನು ಹೇಳಿರುತ್ತಾರೆ. ಅನುಭವ ಹಾಗೂ ಫಲೇಚ್ಛೆಗಳು ಪ್ರವೃತ್ತಿಯಾಗುವುದು ಬೇಡ; ಆದರೂ ಕೂಡ ಅವುಗಳನ್ನು ಕುರಿತು ಪ್ರಯೋಜನಾದಿ-

ನಿಶ್ಚಯವು ಕಾರಣವೆಂದು ಏಕೆ ಹೇಳಬಾರದು? ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಪ್ರಯೋಜನಾದಿಗಳ ನಿಶ್ಚಯವಿಲ್ಲದಿದ್ದರೂ ಕೂಡ ಅನುಭವ ಹಾಗೂ ಫಲೇಚ್ಛೆಗಳು ಬರುತ್ತವೆಂಬುದನ್ನು ತಿಳಿಯಬೇಕು. ಉದಾಸೀನವಾದ ಪದಾರ್ಥದ ಅನುಭವವು ಪ್ರವೃತ್ತಿಯಾಗದಿರಲಿ ಸಾಧನಾನುಭವವು ಮಾತ್ರ ಪ್ರಯೋಜನನಿಶ್ಚಯದ ಸಾಪೇಕ್ಷವಾಗಿಯೇ ಬರುತ್ತದೆ. ಆದ್ದರಿಂದ ಪ್ರಥಮಸೂತ್ರವನ್ನು ಕೇಳಿದರೂ ಕೂಡ ಅದರಿಂದ ಬ್ರಹ್ಮಜ್ಞಾನವು ಮೋಕ್ಷಸಾಧನವಾಗಿದೆ ಎಂಬ ಜ್ಞಾನ ಬರುವುದಿಲ್ಲ. ಈ ಆಕ್ಷೇಪವನ್ನು "ನಚ" ಇತ್ಯಾದಿ ಗ್ರಂಥದಿಂದ ಪರಿಹರಿಸಿದ್ದಾರೆ.

## ಪ್ರಥಮಸೂತ್ರವು ಅವಗತಾರ್ಥಬೋಧಕವಾದರೆ ಅಪ್ರಮಾಣವಾದೀತು

ವಾಕ್ಯಾರ್ಥಚಂದ್ರಿಕಾ – ನನು ಪ್ರಥಮಸೂತ್ರಸ್ಯ ಶಾಸ್ತ್ರಪ್ರವೃತ್ತಿಪ್ರಯೋಜಕಪ್ರಯೋಜನಾದಿ-ಪ್ರತಿಪಾದಕತ್ವಂ ವದತಾ ತಸ್ಯ ಶಾಸ್ತ್ರಾಂತರ್ಭಾವಃ ಅಂಗೀಕ್ರಿಯತೇ ನ ವಾ । ಆದ್ಯೇಽಪಿ ತಸ್ಯ ಪ್ರಮಾಣಾಂತರಸಿದ್ಧಬ್ರಹ್ಮಜ್ಞಾನಮೋಕ್ಷಸಾಧ್ಯಸಾಧನಭಾವಬೋಧಕತ್ವಂ ತದನವಗತತದ್ಬೋಧಕತ್ವಂ ವಾ । ಆದ್ಯೇ ವಾಕ್ಯಪ್ರಾಮಾಣ್ಯಸ್ಯ ಫಲನಿಯತತ್ವೇನ ಅವಗತಾರ್ಥಬೋಧಕತ್ವೇ ಪ್ರಯೋಜ-ನಾಂತರಸ್ಯಾಪಿ ಅಭಾವೇನ ಅಪ್ರಾಮಾಣ್ಯಾಪತ್ತೇಃ ।

ಆಕ್ಷೇಪ – ಮೊದಲನೆಯ ಸೂತ್ರವು ಶಾಸ್ತ್ರದಲ್ಲಿ ಪ್ರವೃತ್ತಿಗೆ ಪ್ರಯೋಜಕವಾದ ಪ್ರಯೋಜ-ನಾದಿಗಳನ್ನು ಪ್ರತಿಪಾದನೆ ಮಾಡುತ್ತದೆ ಎಂದು ಹೇಳುವವರು ಪ್ರಥಮಸೂತ್ರಕ್ಕೆ ಶಾಸ್ತ್ರದಲ್ಲಿ ಅಂತ-ರ್ಭಾವವನ್ನು ಅಂಗೀಕರಿಸುತ್ತಾರೋ ಇಲ್ಲವೋ? ಅಂಗೀಕರಿಸುತ್ತಾರೆಂಬ ಮೊದಲನೆಯ ಪಕ್ಷವನ್ನು ಒಪ್ಪಿದರೆ ಆ ಪ್ರಥಮಸೂತ್ರವು ಬೇರೆ ಪ್ರಮಾಣದಿಂದ ಸಿದ್ಧವಾದ ಬ್ರಹ್ಮಜ್ಞಾನಕ್ಕೂ ಮೋಕ್ಷಕ್ಕೂ ಯಾವ ಸಾಧ್ಯಸಾಧನಭಾವವಿದೆಯೋ ಅದನ್ನು ತಿಳಿಸುತ್ತದೋ ಅಥವಾ ಬೇರೆ ಪ್ರಮಾಣದಿಂದ ಸಿದ್ಧವಾಗದೇ ಇರುವ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವನ್ನು ತಿಳಿಸುತ್ತದೋ? ಮೊದಲನೆಯ ಪಕ್ಷವನ್ನು ಅಂಗೀಕರಿಸಿದರೆ ವಾಕ್ಯಪ್ರಾಮಾಣ್ಯವು ಫಲನಿಯತವಾಗಿರುವುದರಿಂದ ಅವಗತಾರ್ಥ-ಬೋಧಕವೆಂದು ಹೇಳಿದರೆ ಬೇರೆ ಪ್ರಯೋಜನವೂ ಕೂಡ ಇಲ್ಲದ್ದರಿಂದ ಅಪ್ರಾಮಾಣ್ಯದೋಷವು ಬರುತ್ತದೆ.

ವಿವರಣೆ – 'ಓಂ ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಮೊದಲನೆಯ ಸೂತ್ರವು ಶಾಸ್ತ್ರದಲ್ಲಿ ಪ್ರವೃತ್ತಿಯುಂಟಾಗುವುದಕ್ಕಾಗಿ ಪ್ರಯೋಜನಾದಿಗಳನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಇಲ್ಲಿಯ

ತನಕ ಹೇಳಲಾಯಿತು. ಇದರ ಮೇಲೆ ಈಗ ಆಕ್ಷೇಪ ಮಾಡುತ್ತಿದ್ದಾರೆ. ಪ್ರಥಮಸೂತ್ರವು ಶಾಸ್ತ್ರದಲ್ಲಿ ಸೇರಿದೆಯೋ ಇಲ್ಲವೋ? ಇಂಥ ಮೊದಲನೆಯ ಸೂತ್ರವು ಬೇರೆ ಪ್ರಮಾಣದಿಂದ ಸಿದ್ಧವಾದ ಬ್ರಹ್ಮಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ತಿಳಿಸಿದರೆ ಶಾಸ್ತ್ರದಲ್ಲಿ ಇದಕ್ಕೆ ಅಂತರ್ಭಾವವೇ ಕೂಡುವುದಿಲ್ಲ. ಏಕೆಂದರೆ ಶಾಸ್ತ್ರದಲ್ಲಿ ಅಂತರ್ಭಾವ ಕೂಡಬೇಕೆಂದರೆ ಇದು ಪ್ರಮಾಣವಾಗಬೇಕು. ಪ್ರಮಾಣವಾಗಬೇಕೆಂದರೆ ಅವಗತಾರ್ಥಬೋಧಕವಾಗಬಾರದು. ಬೇರೆ ಪ್ರಮಾಣದಿಂದ ಅವಗತವಾದದ್ದನ್ನೇ ತಿಳಿಸಿದರೆ ಅನವಗತಾರ್ಥಬೋಧಕತ್ವವು ಇಲ್ಲದೇ ವಾಕ್ಯಪ್ರಾಮಾಣ್ಯವು ಯುಕ್ತವಾಗುವುದಿಲ್ಲ. ಮೋಕ್ಷಸಾಧನತ್ವ ಎಂಬ ಪ್ರಯೋಜನವನ್ನು ಬಿಟ್ಟು ಬೇರೆ ಪ್ರಯೋಜನವಂತೂ ಹೇಳಲು ಸಾಧ್ಯವಿಲ್ಲ.

ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ 'ಯಥಾರ್ಥಂ ಪ್ರಮಾಣಂ' ಎಂಬುದು ಪ್ರಮಾಣದ ಲಕ್ಷಣ. ಅನವಗತಾರ್ಥಬೋಧಕತ್ವಂ ಎಂಬುದು ಪ್ರಮಾಣದ ಲಕ್ಷಣವಲ್ಲ. ಯತ್ರ ಪ್ರಾಮಾಣ್ಯಂ ತತ್ರ ನಿಯಮೇನ ಯಾಥಾರ್ಥ್ಯಮ್' ಎಂಬ ನಿಯಮವಿದೆ. ಆದರೆ 'ಯತ್ರ ಪ್ರಾಮಾಣ್ಯಂ ತತ್ರ ನಿಯಮೇನ ಫಲವತ್ವಮ್' ಎಂಬ ನಿಯಮವು ಇರುವುದಿಲ್ಲ. ಆದರೆ ವಾಕ್ಯಾರ್ಥಚಂದ್ರಿಕಾದಲ್ಲಿ 'ವಾಕ್ಯಪ್ರಾಮಾಣ್ಯಸ್ಯ ಫಲನಿಯತತ್ವೇನ' ಎಂದು ಹೇಳಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಪ್ರಾಮಾಣ್ಯವು ಫಲನಿಯತವಾಗದೇ ಇದ್ದರೂ ವಾಕ್ಯಪ್ರಾಮಾಣ್ಯಮಾತ್ರ ಫಲನಿಯತವಾಗಿದೆ. ಪ್ರತ್ಯಕ್ಷಾದಿ ಪ್ರಮಾಣಗಳಲ್ಲಿ ಫಲವಿರಲೇಬೇಕೆಂಬ ನಿಯಮವಿಲ್ಲ. ಆದರೆ ವಾಕ್ಯಪ್ರಾಮಾಣ್ಯದಲ್ಲಿ ನಿಯಮೇನ ಫಲವಿರಬೇಕು. ಹಾಗಾದರೆ 'ಗುಡೋ ಮಧುರಃ' ಎಂಬ ವಾಕ್ಯವೂ ಕೂಡ ಅಪ್ರಮಾಣವೇ ಆಗಬೇಕೆಂಬ ಪ್ರಶ್ನೆಗೆ ಅವಕಾಶವಿರುವುದಿಲ್ಲ. ಗುಡೋ ಮಧುರಃ ಎಂಬ ವಾಕ್ಯವು ಯಥಾರ್ಥವಾಗಿದೆ. ಆದರೆ ಉಪಾದೇಯತ್ವೇನ ಸಹಕೃತವಾದ ಪ್ರಾಮಾಣ್ಯವು ಅದರಲ್ಲಿರುವುದಿಲ್ಲ. ಯಾವುದು ಉಪಾದೇಯತ್ವೇನ ಸಹಿತವಾದ ಪ್ರಾಮಾಣ್ಯವನ್ನು ಹೊಂದಿರುತ್ತದೋ ಅದು ನಿಯಮೇನ ಫಲವುಳ್ಳದ್ದಾಗಿರಬೇಕು. ಈ ದೃಷ್ಟಿಯಿಂದ 'ವಾಕ್ಯಪ್ರಾಮಾಣ್ಯಸ್ಯ ಫಲನಿಯತತ್ವೇನ' ಎಂಬುದಾಗಿ ಹೇಳಿದ್ದಾರೆ.

ಪ್ರಕೃತ ಬೇರೆ ಪ್ರಮಾಣದಿಂದ ಸಿದ್ಧವಾದ ಸಾಧ್ಯಸಾಧನಭಾವವನ್ನು ಪ್ರಥಮಸೂತ್ರವೂ ಕೂಡ ಹೇಳುವುದಾದರೆ ಯಾವುದೇ ಪ್ರಯೋಜನವು ಇದಕ್ಕಿಲ್ಲ ಎಂದು ಹೇಳಿದಂತಾಯಿತು. ಈ ಒಂದು ವಿಚಾರವನ್ನು ಬಿಟ್ಟು ಬೇರೆ ವಿಚಾರವನ್ನು ಪ್ರಥಮಸೂತ್ರವು ಪ್ರತಿಪಾದನೆ ಮಾಡದೇ ಇರುವುದರಿಂದ 'ಅಪ್ರಾಮಾಣ್ಯದೋಷವು ಬರುತ್ತದೆ.

ಆದ್ದರಿಂದ ವಾಕ್ಯಕ್ಕೆ ಅವಗತಾರ್ಥಬೋಧಕತ್ವವನ್ನು ಹೇಳಬಾರದು.

## ಶಾಸ್ತ್ರದಲ್ಲಿ ಪ್ರವೃತ್ತಿಯೇ ಅಸಾಧ್ಯವೆಂದು ಆಕ್ಷೇಪ

ವಾಕ್ಯಾರ್ಥಚಂದ್ರಿಕಾ— ದ್ವಿತೀಯೇಽಪಿ ಫಲಾಧ್ಯಧ್ಯಾಯೈಃ ತನ್ನಿಶ್ಚಯಃ ಪ್ರಥಮಸೂತ್ರಂ ತು ತತ್ಪ್ರತಿಜ್ಞಾನರೂಪಮಿತಿ ವಾ ಶಾಸ್ತ್ರೈಕದೇಶಪ್ರಥಮಸೂತ್ರೇಣೈವ ತನ್ನಿಶ್ಚಯೋ ವಾ । ಆದ್ಯೇ ಶಾಸ್ತ್ರಪ್ರವೃತ್ತಿಪ್ರಯೋಜನಾದಿನಿಶ್ಚಯಸ್ಯ ಶಾಸ್ತ್ರಪ್ರವೃತ್ತಿಸಾಧ್ಯತ್ವೇನ ಅನ್ಯೋನ್ಯಾಶ್ರಯತಾಪತ್ತೇಃ । ಶಾಸ್ತ್ರಾಂತರ್ಭಾವೋ ನ ಇತ್ಯಾದ್ಯದ್ವಿತೀಯೇ ಶಾಸ್ತ್ರೈಕದೇಶಪ್ರಥಮಸೂತ್ರೇಣೈವ ತನ್ನಿಶ್ಚಯ ಇತಿ ಅವ್ಯವಹಿತದ್ವಿತೀಯೇಽಪಿ ಪ್ರಥಮಸೂತ್ರೇ ಪ್ರವೃತ್ತಿಃ ಪ್ರಯೋಜನಾದಿನಿಶ್ಚಯಸಾಧ್ಯಾ ನ ವಾ । ಆದ್ಯೇ ತತ್ರ ಪ್ರಯೋಜನಾದಿನಿಶ್ಚಾಯಕವಾಕ್ಯಸ್ಯ ಅಭಾವೇ ಪ್ರವೃತ್ತ್ಯನುಪಪತ್ತ್ಯಾ ತತ್ಪ್ರವೃತ್ತಿಪ್ರಯೋಜಕ-ಪ್ರಯೋಜನಾದಿನಿಶ್ಚಾಯಕಾಂತರಾಭಿಧಾನೇ ತತ್ಪ್ರವೃತ್ತಿಪ್ರಯೋಜಕಪ್ರಯೋಜನಾದಿನಿಶ್ಚಾಯಕಾಂತ-ರಪರಂಪರಯಾಽನವಸ್ಥಾಪತ್ತೇಃ । ನೇತಿ ಪಕ್ಷೇ ನ್ಯಾಯಸಾಮ್ಯೇನ ಶಾಸ್ತ್ರಪ್ರವೃತ್ತೇರಪಿ ತನ್ನಿಶ್ಚಯಾ-ಭಾವೇಽಪ್ಯುಪಪತ್ತ್ಯಾ ಪ್ರಥಮಸೂತ್ರೇ ತದಭಿಧಾನಂ ವ್ಯರ್ಥಂ ಸ್ಯಾದಿತ್ಯಾಶಂಕತೇ – ನನ್ವಿತಿ ॥

ಎರಡನೆಯ ಪಕ್ಷದಲ್ಲೂ ಕೂಡ ಫಲಾಧ್ಯಾಯ ಹಾಗೂ ಸಾಧನಾಧ್ಯಾಯಗಳಿಂದ ಸಾಧ್ಯ-ಸಾಧನಭಾವವು ನಿಶ್ಚಯವಾಗುತ್ತದೆ. ಪ್ರಥಮಸೂತ್ರವು ಕೇವಲ ಪ್ರತಿಜ್ಞಾರೂಪವಾಗಿದೆ ಎಂದು ವಿವಕ್ಷಿಸುತ್ತೀರೋ ಅಥವಾ ಶಾಸ್ತ್ರೈಕದೇಶವಾದ ಪ್ರಥಮಸೂತ್ರದಿಂದಲೇ ಸಾಧ್ಯಸಾಧನಭಾವವು ನಿಶ್ಚಯ-ವಾಗುತ್ತದೆಂದು ಹೇಳುತ್ತೀರೋ?

ಫಲಾಧ್ಯಾಯ ಹಾಗೂ ಸಾಧನಾಧ್ಯಾಯಗಳಿಂದ ಸಾಧ್ಯಸಾಧನಭಾವವು ನಿಶ್ಚಯವಾಗು-ವುದಾದರೆ ಶಾಸ್ತ್ರಪ್ರವೃತ್ತಿಗೆ ಪ್ರಯೋಜಕವಾದ ಪ್ರಯೋಜನಾದಿಗಳ ನಿಶ್ಚಯವು ಶಾಸ್ತ್ರಪ್ರವೃತ್ತಿಸಾಧ್ಯ-ವಾಗಿರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವವು ಇರುವುದಿಲ್ಲ ಎಂಬ ಮೊದಲನೆಯ ವಿಕಲ್ಪದಲ್ಲಿ ಎರಡನೆಯ ಕೋಟಿಯನ್ನು ಅಂಗೀಕರಿಸಿದರೆ ಮತ್ತು ಈಗ ತಾನೇ ವಿಕಲ್ಪಿಸಿದ ಎರಡು ವಿಕಲ್ಪಗಳಲ್ಲಿ ಶಾಸ್ತ್ರೈಕದೇಶವಾದ ಪ್ರಥಮಸೂತ್ರದಿಂದಲೇ ಸಾಧ್ಯಸಾಧನಭಾವವು ನಿಶ್ಚಯವಾಗುತ್ತದೆಂದು ಹೇಳಿದರೆ ಈ ಎರಡೂ ವಿಕಲ್ಪಗಳನ್ನು ಸೇರಿ ಪುನಃ ಹೀಗೆ ಪ್ರಶ್ನಿಸುತ್ತೇವೆ? ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಯು ಪ್ರಯೋಜನಾದಿನಿಶ್ಚಯದಿಂದ ಸಾಧ್ಯವೋ ಅಲ್ಲವೋ ಎಂದು? ಪ್ರಯೋಜನಾದಿ-ನಿಶ್ಚಯದಿಂದ ಸಾಧ್ಯವೆಂಬ ಮೊದಲನೆಯ ಪಕ್ಷವನ್ನು ಒಪ್ಪಿದರೆ ಆ ಪ್ರಯೋಜನಾದಿಗಳನ್ನು ನಿಶ್ಚಯ ಮಾಡುವಂಥ ಬೇರೆ ಯಾವುದೇ ಪ್ರಮಾಣವಿಲ್ಲವೆಂದು ಹೇಳಿದರೆ ಪ್ರವೃತ್ತಿಯೇ ಅನುಪಪನ್ನವಾಗುತ್ತದೆ. ಪ್ರಥಮಸೂತ್ರದ ಪ್ರವೃತ್ತಿಗೆ ಪ್ರಯೋಜಕವಾದ ಪ್ರಯೋಜನಾದಿಗಳ ನಿಶ್ಚಯಕ್ಕೆ ಮತ್ತೊಂದು ಪ್ರಮಾಣ-

ವನ್ನು ಹೇಳಿದರೆ ತತ್ಪ್ರವೃತ್ತಿಪ್ರಯೋಜಕವಾದ ಪ್ರಯೋಜನಾದಿನಿಶ್ಚಾಯಕವನ್ನು ಪುನಃ ಒಪ್ಪಬೇಕಾ-ಗುತ್ತದೆ. ಹೀಗೆ ಹೇಳುತ್ತಾ ಹೋದರೆ ಅನವಸ್ಥಾದೋಷವು ಬರುತ್ತದೆ. ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಯು ಪ್ರಯೋಜನಾದಿನಿಶ್ಚಯಸಾಧ್ಯವಲ್ಲವೆಂದು ಹೇಳಿದರೆ ಸಮಾನನ್ಯಾಯದಿಂದ ಉಳಿದ ಶಾಸ್ತ್ರ-ಗಳಲ್ಲೂ ಕೂಡ ಪ್ರವೃತ್ತಿಯು ತನ್ನಿಶ್ಚಾಯಕವಾಗದಿದ್ದರೂ ಕೂಡ ಉಪಪನ್ನವಾಗುತ್ತದೆ. ಆದ್ದರಿಂದ ಪ್ರಥಮಸೂತ್ರದಲ್ಲಿ ಶಾಸ್ತ್ರಪ್ರವೃತ್ತಿಗೆ ಪ್ರಯೋಜಕವಾದ ಸಾಧ್ಯಸಾಧನಭಾವವನ್ನು ಹೇಳಿದ್ದು ವ್ಯರ್ಥವಾಗಿ-ದೆಯಲ್ಲವೇ?

ಇತ್ಯಾದಿ ಆಶಂಕೆಯನ್ನು ''ನನು'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಿವರಣೆ – ಪ್ರಥಮಸೂತ್ರವು ಬೇರೆ ಪ್ರಮಾಣದಿಂದ ಸಿದ್ಧವಾದ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವನ್ನು ತಿಳಿಸುವುದಾದಲ್ಲಿ ಅಪ್ರಾಮಾಣ್ಯದೋಷವು ಬರುತ್ತದೆ. ಆದರೆ ನಾವು ಹಾಗೆ ಹೇಳುವುದಿಲ್ಲ. ಇತರ ಯಾವುದೇ ಪ್ರಮಾಣದಿಂದ ತಿಳಿಯದಿರುವ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವನ್ನು ತಿಳಿಸುತ್ತದೆ ಎನ್ನುತ್ತೇವೆ. ಈಗ ಮೊದಲು ತಿಳಿದದ್ದನ್ನೇ ತಿಳಿಸಿದಂತಾಗದ ಕಾರಣ ಅಪ್ರಾಮಾಣ್ಯದೋಷವು ಬರುವುದಿಲ್ಲ.

ಹೀಗೆ ಪೂರ್ವಪಕ್ಷಕಾರನು ತನ್ನ ಪಕ್ಷವನ್ನು ಸಮರ್ಥಿಸಿಕೊಂಡರೆ ಪುನಃ ಎರಡು ವಿಕಲ್ಪಗಳನ್ನು ಮಾಡುತ್ತಿದ್ದಾರೆ. ಪ್ರತ್ಯಕ್ಷ, ಅನುಮಾನ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗದೇ ಇರುವ ಸಾಧ್ಯ-ಸಾಧನಭಾವವನ್ನು ಪ್ರಥಮಸೂತ್ರವು ಹೇಳುತ್ತದೆಂದು ಇಲ್ಲಿಯ ಅಭಿಪ್ರಾಯ. ಪುನಃ ಇಲ್ಲಿ ಮಾಡು-ತ್ತಿರುವ ವಿಕಲ್ಪಗಳು ಹೀಗಿವೆ – ಸಾಧನಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಮೋಕ್ಷಕ್ಕೂ ಬ್ರಹ್ಮಜ್ಞಾನಕ್ಕೂ ಸಾಧ್ಯಸಾಧನಭಾವವನ್ನು ಸಾಧಿಸುತ್ತಾರೆ. ಪ್ರಥಮಸೂತ್ರದಲ್ಲಿ ಅದರ ಪ್ರತಿಜ್ಞೆಯನ್ನಷ್ಟೇ ಮಾಡುತ್ತಿದ್ದಾರೆಂದು ಹೇಳಲಾಗದು. ಸಾಧನಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಮೋಕ್ಷಕ್ಕೂ ಬ್ರಹ್ಮಜ್ಞಾನಕ್ಕೂ ಸಾಧ್ಯಸಾಧನಭಾವವು ಇದೆಯೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಬೇರೆ ಪ್ರಮಾಣದಿಂದ ಸಾಧ್ಯಸಾಧನಭಾವವು ನಿಶ್ಚಯವಾಗಿರುವುದಿಲ್ಲ; ಪ್ರಥಮಸೂತ್ರವು ಕೇವಲ ಪ್ರತಿಜ್ಞೆಯನ್ನಷ್ಟೇ ಮಾಡುತ್ತಿದೆ. ಮೂರು ಹಾಗೂ ನಾಕನೇ ಅಧ್ಯಾಯಗಳಿಂದಲೇ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವು ನಿಶ್ಚಯವಾಗಿದೆ ಎಂದು ಹೇಳುವುದಾದರೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾದರೆ ತೃತೀಯಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಸಿದ್ಧವಾಗುತ್ತದೆ. ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂಬ ನಿಶ್ಚಯವಾದರೆ ಮಾತ್ರ ಈ ಶಾಸ್ತ್ರದಲ್ಲಿ ಪ್ರವೃತ್ತಿಮಾಡಲು ಸಾಧ್ಯವಾಗುತ್ತದೆ. ಏಕೆಂದರೆ, ಮೋಕ್ಷವು ಮುಮುಕ್ಷುವಿಗೆ ಅಪೇಕ್ಷಿತವಾಗಿರುತ್ತದೆ.

ಅಂಥ ಮೋಕ್ಷಕ್ಕೆ ಬ್ರಹ್ಮಜ್ಞಾನವು ಸಾಧನವಾಗಿದೆ. ಅದಕ್ಕೆ ಜಿಜ್ಞಾಸೆಯು ಸಾಧನವಾಗಿದೆ. ಅದಕ್ಕೆ ಉಪಯುಕ್ತವಾದ ನ್ಯಾಯಗ್ರಥನಾತ್ಮಕವಾಗಿದೆ ಈ ಬ್ರಹ್ಮಮೀಮಾಂಸಾಶಾಸ್ತ್ರ. ಹೀಗೆ ಅಭಿಪ್ರಾಯವನ್ನು ಹೊಂದಿ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡಬೇಕು. ಈ ನಿಶ್ಚಯವು ಮೂರು ಹಾಗೂ ನಾಕನೇ ಅಧ್ಯಾಯಗಳ ಅಧ್ಯಯನದಿಂದ ಸಾಧ್ಯವಾಗುವುದಾದರೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾಗುತ್ತದೆ. ಆಗ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಸಿದ್ಧವಾಗುತ್ತದೆ. ಬ್ರಹ್ಮಜ್ಞಾನಕ್ಕೆ ಮೋಕ್ಷಸಾಧನತ್ವವು ಸಿದ್ಧವಾದ ಮೇಲೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಪ್ರಾರಂಭದಲ್ಲಿ ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವವೇ ಇಲ್ಲವೆಂದು ವಿಕಲ್ಪವನ್ನು ಮಾಡಲಾಗಿತ್ತು. ಇದು ದ್ವಿತೀಯಪಕ್ಷವಾಗಿತ್ತು. ಮತ್ತು ಈಗ ಅವ್ಯವಹಿತಪೂರ್ವದಲ್ಲಿ ಬ್ರಹ್ಮಜ್ಞಾನಕ್ಕೂ ಮೋಕ್ಷಕ್ಕೂ ಸಾಧ್ಯಸಾಧನಭಾವವು ಪ್ರಥಮಸೂತ್ರದಿಂದಲೇ ನಿಶ್ಚಯವಾಗುತ್ತಿದೆ ಎಂಬುದಾಗಿ ಮತ್ತೊಂದು ದ್ವಿತೀಯವಿಕಲ್ಪವನ್ನು ಮಾಡಿದರು. ಹೀಗೆ ಮೊದಲಿನ ದ್ವಿತೀಯಪಕ್ಷ ಹಾಗೂ ಕೊನೆಯಲ್ಲಿ ಮಾಡಿದ ದ್ವಿತೀಯಪಕ್ಷ ಇವೆರಡನ್ನೂ ಕೂಡ ಒಟ್ಟಿಗೆ ಸೇರಿಸಿ ನಿರಾಕರಣೆಯನ್ನು 'ಶಾಸ್ತ್ರಾಂತರ್ಭಾವ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಈ ಎರಡೂ ಪಕ್ಷಗಳನ್ನು ಸೇರಿಸಿ ಪುನಃ ಎರಡು ವಿಕಲ್ಪಗಳನ್ನು ಮಾಡುತ್ತಿದ್ದಾರೆ – ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಗೆ ಪ್ರಯೋಜನಾದಿಗಳ ನಿಶ್ಚಯವು ಆವಶ್ಯಕ-ವೋ ಇಲ್ಲವೋ? ಎಂದು. ಆವಶ್ಯಕವೆಂದರೆ ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಗೆ ಪ್ರಯೋ-ಜನಾದಿನಿಶ್ಚಯವು ಇರಲೇಬೇಕೆಂದು ಹೇಳಿದರೆ ಸಮಗ್ರ ಶಾಸ್ತ್ರದಲ್ಲಿ ಪ್ರವೃತ್ತಿಮಾಡಲು ಪ್ರಯೋಜಕವಾದ ಪ್ರಯೋಜನಾದಿಗಳನ್ನು ಹೇಳುವುದಕ್ಕಾಗಿ ಪ್ರಥಮಸೂತ್ರವು ಹೊರಟಿದೆ. ಪ್ರಥಮಸೂತ್ರದಲ್ಲಿ ಪ್ರವೃತ್ತಿ-ಮಾಡಲು ಪ್ರಯೋಜಕವಾದ ಪ್ರಯೋಜನಾದಿಗಳನ್ನು ನಿಶ್ಚಯ ಮಾಡಲು ಮತ್ತೊಂದು ನಿಶ್ಚಾಯಕವನ್ನೇ ಹೇಳಬೇಕು. ಅಲ್ಲಿಯೂ ಪ್ರವೃತ್ತಿಮಾಡುವುದಕ್ಕೆ ಪ್ರಯೋಜಕವಾದ ಮತ್ತೊಂದು ನಿಶ್ಚಾಯಕವನ್ನು ಹೇಳಬೇಕು. ಹೀಗೆ ಅನವಸ್ಥಾದೋಷವು ಬರುತ್ತದೆ. ಪ್ರವೃತ್ತಿಪ್ರಯೋಜಕಪ್ರಯೋಜನಾದಿನಿಶ್ಚಾಯ-ಕಾಂತರಪರಂಪರೆಯಿಂದ ಅನವಸ್ಥಾದೋಷವು ಬರುತ್ತದೆ. 'ಕುಕ್ಕುಟಾಂಡ' ಅಥವಾ 'ಬೀಜಾಂಕುರ' ಪರಂಪರೆಯಂತೆ ಈ ಪರಂಪರೆಯನ್ನು ಕೂಡ ತಿಳಿಯಬೇಕು.

ಒಂದು ವೇಳೆ ಪ್ರಥಮಸೂತ್ರದಲ್ಲಿ ಪ್ರವೃತ್ತಿಮಾಡಲು ಪ್ರಯೋಜನಾದಿಗಳ ನಿಶ್ಚಯದ ಅಪೇಕ್ಷೆಯಿಲ್ಲ ಎಂದು ಹೇಳುವುದಾದರೆ ಸಮಗ್ರಶಾಸ್ತ್ರದಲ್ಲಿಯೂ ಕೂಡ ಸಮಾನನ್ಯಾಯದಿಂದ ಪ್ರವೃತ್ತಿಯುಂಟಾ-ಗುತ್ತದೆ. ಆಗ ಪ್ರಥಮಸೂತ್ರದಲ್ಲಿ ಸಮಗ್ರಶಾಸ್ತ್ರಪ್ರವೃತ್ತಿಗೋಸ್ಕರ ಪ್ರಯೋಜನಾದಿಗಳನ್ನು ಹೇಳಿದ್ದು ಅಯುಕ್ತವಾಗುತ್ತದೆ. ಈ ಆಶಂಕೆಯನ್ನು ಇಲ್ಲಿ ಪರಿಹರಿಸುತ್ತಿದ್ದಾರೆ.

ವನ್ನು ಹೇಳಿದರೆ ತತ್‌ಪ್ರವೃತ್ತಿಪ್ರಯೋಜಕವಾದ ಪ್ರಯೋಜನಾದಿನಿಶ್ಚಾಯಕವನ್ನು ಪುನಃ ಒಪ್ಪಬೇಕಾ-ಗುತ್ತದೆ. ಹೀಗೆ ಹೇಳುತ್ತಾ ಹೋದರೆ ಅನವಸ್ಥಾದೋಷವು ಬರುತ್ತದೆ. ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಯು ಪ್ರಯೋಜನಾದಿನಿಶ್ಚಯಸಾಧ್ಯವಲ್ಲವೆಂದು ಹೇಳಿದರೆ ಸಮಾನನ್ಯಾಯದಿಂದ ಉಳಿದ ಶಾಸ್ತ್ರ-ಗಳಲ್ಲೂ ಕೂಡ ಪ್ರವೃತ್ತಿಯು ತನ್ನಿಶ್ಚಾಯಕವಾಗದಿದ್ದರೂ ಕೂಡ ಉಪಪನ್ನವಾಗುತ್ತದೆ. ಆದ್ದರಿಂದ ಪ್ರಥಮಸೂತ್ರದಲ್ಲಿ ಶಾಸ್ತ್ರಪ್ರವೃತ್ತಿಗೆ ಪ್ರಯೋಜಕವಾದ ಸಾಧ್ಯಸಾಧನಭಾವವನ್ನು ಹೇಳಿದ್ದು ವ್ಯರ್ಥವಾಗಿ-ದೆಯಲ್ಲವೇ?

ಇತ್ಯಾದಿ ಆಶಂಕೆಯನ್ನು "ನನು" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಿವರಣೆ – ಪ್ರಥಮಸೂತ್ರವು ಬೇರೆ ಪ್ರಮಾಣದಿಂದ ಸಿದ್ಧವಾದ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವನ್ನು ತಿಳಿಸುವುದಾದಲ್ಲಿ ಅಪ್ರಾಮಾಣ್ಯದೋಷವು ಬರುತ್ತದೆ. ಆದರೆ ನಾವು ಹಾಗೆ ಹೇಳುವುದಿಲ್ಲ. ಇತರ ಯಾವುದೇ ಪ್ರಮಾಣದಿಂದ ತಿಳಿಯದಿರುವ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವನ್ನು ತಿಳಿಸುತ್ತದೆ ಎನ್ನುತ್ತೇವೆ. ಈಗ ಮೊದಲು ತಿಳಿದದ್ದನ್ನೇ ತಿಳಿಸಿದಂತಾಗದ ಕಾರಣ ಅಪ್ರಾಮಾಣ್ಯದೋಷವು ಬರುವುದಿಲ್ಲ.

ಹೀಗೆ ಪೂರ್ವಪಕ್ಷಕಾರನು ತನ್ನ ಪಕ್ಷವನ್ನು ಸಮರ್ಥಿಸಿಕೊಂಡರೆ ಪುನಃ ಎರಡು ವಿಕಲ್ಪಗಳನ್ನು ಮಾಡುತ್ತಿದ್ದಾರೆ. ಪ್ರತ್ಯಕ್ಷ, ಅನುಮಾನ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗದೇ ಇರುವ ಸಾಧ್ಯ-ಸಾಧನಭಾವವನ್ನು ಪ್ರಥಮಸೂತ್ರವು ಹೇಳುತ್ತದೆಂದು ಇಲ್ಲಿಯ ಅಭಿಪ್ರಾಯ. ಪುನಃ ಇಲ್ಲಿ ಮಾಡು-ತ್ತಿರುವ ವಿಕಲ್ಪಗಳು ಹೀಗಿವೆ – ಸಾಧನಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಮೋಕ್ಷಕ್ಕೂ ಬ್ರಹ್ಮಜ್ಞಾನಕ್ಕೂ ಸಾಧ್ಯಸಾಧನಭಾವವನ್ನು ಸಾಧಿಸುತ್ತಾರೆ. ಪ್ರಥಮಸೂತ್ರದಲ್ಲಿ ಅದರ ಪ್ರತಿಜ್ಞೆಯನ್ನಷ್ಟೇ ಮಾಡುತ್ತಿದ್ದಾರೆಂದು ಹೇಳಲಾಗದು. ಸಾಧನಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಮೋಕ್ಷಕ್ಕೂ ಬ್ರಹ್ಮಜ್ಞಾನಕ್ಕೂ ಸಾಧ್ಯಸಾಧನಭಾವವು ಇದೆಯೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಬೇರೆ ಪ್ರಮಾಣದಿಂದ ಸಾಧ್ಯಸಾಧನಭಾವವು ನಿಶ್ಚಯವಾಗಿರುವುದಿಲ್ಲ; ಪ್ರಥಮಸೂತ್ರವು ಕೇವಲ ಪ್ರತಿಜ್ಞೆಯನ್ನಷ್ಟೇ ಮಾಡುತ್ತಿದೆ. ಮೂರು ಹಾಗೂ ನಾಕನೇ ಅಧ್ಯಾಯಗಳಿಂದಲೇ ಬ್ರಹ್ಮಜ್ಞಾನ ಹಾಗೂ ಮೋಕ್ಷಗಳಿಗೆ ಸಾಧ್ಯಸಾಧನಭಾವವು ನಿಶ್ಚಯವಾಗಿದೆ ಎಂದು ಹೇಳುವುದಾದರೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾದರೆ ತೃತೀಯಾಧ್ಯಾಯ ಹಾಗೂ ಫಲಾಧ್ಯಾಯಗಳಿಂದ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಸಿದ್ಧವಾಗುತ್ತದೆ. ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂಬ ನಿಶ್ಚಯವಾದರೆ ಮಾತ್ರ ಈ ಶಾಸ್ತ್ರದಲ್ಲಿ ಪ್ರವೃತ್ತಿಮಾಡಲು ಸಾಧ್ಯವಾಗುತ್ತದೆ. ಏಕೆಂದರೆ, ಮೋಕ್ಷವು ಮುಮುಕ್ಷುವಿಗೆ ಅಪೇಕ್ಷಿತವಾಗಿರುತ್ತದೆ.

ಅಂಥ ಮೋಕ್ಷಕ್ಕೆ ಬ್ರಹ್ಮಜ್ಞಾನವು ಸಾಧನವಾಗಿದೆ. ಅದಕ್ಕೆ ಜಿಜ್ಞಾಸೆಯು ಸಾಧನವಾಗಿದೆ. ಅದಕ್ಕೆ ಉಪಯುಕ್ತವಾದ ನ್ಯಾಯಗ್ರಥನಾತ್ಮಕವಾಗಿದೆ ಈ ಬ್ರಹ್ಮಮೀಮಾಂಸಾಶಾಸ್ತ್ರ. ಹೀಗೆ ಅಭಿಪ್ರಾಯವನ್ನು ಹೊಂದಿ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡಬೇಕು. ಈ ನಿಶ್ಚಯವು ಮೂರು ಹಾಗೂ ನಾಕನೇ ಅಧ್ಯಾಯಗಳ ಅಧ್ಯಯನದಿಂದ ಸಾಧ್ಯವಾಗುವುದಾದರೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾಗುತ್ತದೆ. ಆಗ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಸಿದ್ಧವಾಗುತ್ತದೆ. ಬ್ರಹ್ಮಜ್ಞಾನಕ್ಕೆ ಮೋಕ್ಷಸಾಧನತ್ವವು ಸಿದ್ಧವಾದ ಮೇಲೆ ಶಾಸ್ತ್ರದಲ್ಲಿ ಪ್ರವೃತ್ತಿಯು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ಪ್ರಾರಂಭದಲ್ಲಿ ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವವೇ ಇಲ್ಲವೆಂದು ವಿಕಲ್ಪವನ್ನು ಮಾಡಲಾಗಿತ್ತು. ಇದು ದ್ವಿತೀಯಪಕ್ಷವಾಗಿತ್ತು. ಮತ್ತು ಈಗ ಅವ್ಯವಹಿತಪೂರ್ವದಲ್ಲಿ ಬ್ರಹ್ಮಜ್ಞಾನಕ್ಕೂ ಮೋಕ್ಷಕ್ಕೂ ಸಾಧ್ಯಸಾಧನಭಾವವು ಪ್ರಥಮಸೂತ್ರದಿಂದಲೇ ನಿಶ್ಚಯವಾಗುತ್ತದೆ ಎಂಬುದಾಗಿ ಮತ್ತೊಂದು ದ್ವಿತೀಯವಿಕಲ್ಪವನ್ನು ಮಾಡಿದರು. ಹೀಗೆ ಮೊದಲಿನ ದ್ವಿತೀಯಪಕ್ಷ ಹಾಗೂ ಕೊನೆಯಲ್ಲಿ ಮಾಡಿದ ದ್ವಿತೀಯಪಕ್ಷ ಇವೆರಡನ್ನೂ ಕೂಡ ಒಟ್ಟಿಗೆ ಸೇರಿಸಿ ನಿರಾಕರಣೆಯನ್ನು 'ಶಾಸ್ತ್ರಾಂತರ್ಭಾವ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಈ ಎರಡೂ ಪಕ್ಷಗಳನ್ನು ಸೇರಿಸಿ ಪುನಃ ಎರಡು ವಿಕಲ್ಪಗಳನ್ನು ಮಾಡುತ್ತಿದ್ದಾರೆ – ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಗೆ ಪ್ರಯೋಜನಾದಿಗಳ ನಿಶ್ಚಯವು ಆವಶ್ಯಕ-ವೋ ಇಲ್ಲವೋ? ಎಂದು. ಆವಶ್ಯಕವೆಂದರೆ ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಗೆ ಪ್ರಯೋ-ಜನಾದಿನಿಶ್ಚಯವು ಇರಲೇಬೇಕೆಂದು ಹೇಳಿದರೆ ಸಮಗ್ರ ಶಾಸ್ತ್ರದಲ್ಲಿ ಪ್ರವೃತ್ತಿಮಾಡಲು ಪ್ರಯೋಜಕವಾದ ಪ್ರಯೋಜನಾದಿಗಳನ್ನು ಹೇಳುವುದಕ್ಕಾಗಿ ಪ್ರಥಮಸೂತ್ರವು ಹೊರಟಿದೆ. ಪ್ರಥಮಸೂತ್ರದಲ್ಲಿ ಪ್ರವೃತ್ತಿ-ಮಾಡಲು ಪ್ರಯೋಜಕವಾದ ಪ್ರಯೋಜನಾದಿಗಳನ್ನು ನಿಶ್ಚಯ ಮಾಡಲು ಮತ್ತೊಂದು ನಿಶ್ಚಾಯಕವನ್ನೇ ಹೇಳಬೇಕು. ಅಲ್ಲಿಯೂ ಪ್ರವೃತ್ತಿಮಾಡುವುದಕ್ಕೆ ಪ್ರಯೋಜಕವಾದ ಮತ್ತೊಂದು ನಿಶ್ಚಾಯಕವನ್ನು ಹೇಳಬೇಕು. ಹೀಗೆ ಅನವಸ್ಥಾದೋಷವು ಬರುತ್ತದೆ. ಪ್ರವೃತ್ತಿಪ್ರಯೋಜಕಪ್ರಯೋಜನಾದಿನಿಶ್ಚಾಯ-ಕಾಂತರಪರಂಪರೆಯಿಂದ ಅನವಸ್ಥಾದೋಷವು ಬರುತ್ತದೆ. 'ಕುಕ್ಕುಟಾಂಡ' ಅಥವಾ 'ಬೀಜಾಂಕುರ' ಪರಂಪರೆಯಂತೆ ಈ ಪರಂಪರೆಯನ್ನು ಕೂಡ ತಿಳಿಯಬೇಕು.

ಒಂದು ವೇಳೆ ಪ್ರಥಮಸೂತ್ರದಲ್ಲಿ ಪ್ರವೃತ್ತಿಮಾಡಲು ಪ್ರಯೋಜನಾದಿಗಳ ನಿಶ್ಚಯದ ಅಪೇಕ್ಷೆಯಿಲ್ಲ ಎಂದು ಹೇಳುವುದಾದರೆ ಸಮಗ್ರಶಾಸ್ತ್ರದಲ್ಲಿಯೂ ಕೂಡ ಸಮಾನನ್ಯಾಯದಿಂದ ಪ್ರವೃತ್ತಿಯುಂಟಾ-ಗುತ್ತದೆ. ಆಗ ಪ್ರಥಮಸೂತ್ರದಲ್ಲಿ ಸಮಗ್ರಶಾಸ್ತ್ರಪ್ರವೃತ್ತಿಗೋಸ್ಕರ ಪ್ರಯೋಜನಾದಿಗಳನ್ನು ಹೇಳಿದ್ದು ಅಯುಕ್ತವಾಗುತ್ತದೆ. ಈ ಆಶಂಕೆಯನ್ನು ಇಲ್ಲಿ ಪರಿಹರಿಸುತ್ತಿದ್ದಾರೆ.

## 'ಶಾಸ್ತ್ರಸ್ಯ ಪ್ರಯೋಜನಹೇತುತಾ' ಎಂದೇಕೆ ಹೇಳಲಿಲ್ಲ

ವಾಕ್ಯಾರ್ಥಚಂದ್ರಿಕಾ— ಅತ್ರ ಶಾಸ್ತ್ರಸ್ಯ ಪ್ರಯೋಜನಹೇತುತಾ ಇತಿ ವಕ್ತವ್ಯೇ ನ್ಯಾಯ-ಗ್ರಥನಾತ್ಮಕಶಾಸ್ತ್ರಸ್ಯ ನ್ಯಾಯಾನುಸಂಧಾನಫಲಕತ್ವಸ್ಯ ನ್ಯಾಯಾನುಸಂಧಾನರೂಪವಿಚಾರಸ್ಯ ಚ ವಿಚಾರ್ಯಜ್ಞಾನಹೇತುತಾಯಾ ಲೋಕಸಿದ್ಧತ್ವಾತ್ ಲೋಕತೋಽಸಿದ್ಧಬ್ರಹ್ಮಜ್ಞಾನಮೋಕ್ಷಸಾಧ್ಯ-ಸಾಧನಭಾವಸ್ಯೈವ ಸೂತ್ರಪ್ರಮೇಯತ್ವಮಿತ್ಯಭಿಪ್ರೇತ್ಯ 'ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಇತ್ಯುಕ್ತಮ್ । ಪ್ರಮಾಣಾಂತರಸಿದ್ಧತಾ ಚ ವಿಚಾರಸ್ಯ ಜ್ಞಾನಹೇತುತಾಯಾಃ ಇವ ಪ್ರತ್ಯಕ್ಷಾದಿಸಿದ್ಧತಾ ವಾ । ಅಲೌಕಿಕತ್ವಾದಸ್ಯಾರ್ಥಸ್ಯ ಶ್ರುತಿಸಿದ್ಧತಾ ವೇತಿ ದ್ರಷ್ಟವ್ಯಮ್ ॥

'ಶಾಸ್ತ್ರಸ್ಯ ಪ್ರಯೋಜನಹೇತುತಾ' ಎಂದೇ ಹೇಳಬೇಕಿತ್ತು. ಆದರೂ ಕೂಡ 'ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಎಂದು ಹೇಳಲು ಕಾರಣ ಹೀಗಿದೆ – ನ್ಯಾಯಗ್ರಥನಾತ್ಮಕವಾದ ಶಾಸ್ತ್ರಕ್ಕೆ ನ್ಯಾಯಾನು-ಸಂಧಾನವೇ ಫಲವಾಗಿದೆ. ನ್ಯಾಯಾನುಸಂಧಾನರೂಪವಾದ ವಿಚಾರಕ್ಕೆ ಜ್ಞಾನವು ಫಲವಾಗಿದೆ ಎಂಬುದು ಲೋಕದಿಂದಲೇ ಸಿದ್ಧವಾಗಿದೆ. ಬ್ರಹ್ಮಜ್ಞಾನಕ್ಕೆ ಮೋಕ್ಷವು ಫಲವೆಂಬುದು ಲೋಕದಿಂದ ಸಿದ್ಧವಾಗಿರು-ವುದಿಲ್ಲ. ಆದ್ದರಿಂದ ಈ ಸಾಧ್ಯಸಾಧನಭಾವವನ್ನಷ್ಟೇ ಸೂತ್ರಪ್ರಮೇಯವೆಂದು ವಿವಕ್ಷಿಸಿ 'ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಎಂದು ಗ್ರಂಥದಲ್ಲಿ ಹೇಳಿದ್ದಾರೆ.

ಪ್ರಮಾಣಾಂತರಸಿದ್ಧತ್ವವು ವಿಚಾರಕ್ಕೆ ಜ್ಞಾನಹೇತುತ್ವದಂತೆ ಪ್ರತ್ಯಕ್ಷಾದಿ ಸಿದ್ಧವೆಂದು ತಿಳಿಯ-ಬೇಕು. ಅಥವಾ ಈ ಅರ್ಥವು ಅಲೌಕಿಕವಾಗಿರುವುದರಿಂದ ಶ್ರುತಿಸಿದ್ಧವೂ ಆಗಿದೆಯೆಂದು ತಿಳಿಯಬೇಕು.

ವಿವರಣೆ – ಗ್ರಂಥದಲ್ಲಿ 'ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ ಮೊದಲು ನ್ಯಾಯಗ್ರಥನಾತ್ಮಕವಾದ ಶಾಸ್ತ್ರದಿಂದ ನ್ಯಾಯಾನುಸಂಧಾನವು ಉಂಟಾಗುತ್ತದೆ. ನ್ಯಾಯಾನು-ಸಂಧಾನದಿಂದ ಜ್ಞಾನವು ದೊರೆಯುತ್ತದೆ. ಆ ಜ್ಞಾನದಿಂದ ಮೋಕ್ಷವು ದೊರೆಯುತ್ತದೆ. ಹೀಗೆ ಮೂರು ಹಂತಗಳಿರುತ್ತವೆ. ಈ ಮೂರು ಹಂತಗಳನ್ನು ಬಿಟ್ಟು ಬ್ರಹ್ಮಜ್ಞಾನವು ಮೋಕ್ಷಸಾಧನವೆಂದು ಹೇಗೆ ಹೇಳಿದರು?

ಉತ್ತರ – ಉತ್ತರ ಹೀಗಿದೆ – ಈ ನ್ಯಾಯಗ್ರಥನಾತ್ಮಕವಾದ ಶಾಸ್ತ್ರದಿಂದ ನ್ಯಾಯಾನುಸಂಧಾನವೆಂಬ ಫಲ ದೊರೆಯುತ್ತದೆಂಬುದು ಲೋಕದಿಂದಲೇ ಸಿದ್ಧವಾಗಿದೆ. ಮತ್ತು ನ್ಯಾಯಾನುಸಂಧಾನವೆಂಬ ವಿಚಾರದಿಂದ ಬ್ರಹ್ಮಜ್ಞಾನವು ದೊರೆಯುತ್ತದೆಂಬುದು ಕೂಡ ಲೋಕದಿಂದಲೇ ಸಿದ್ಧವಾಗಿದೆ. ಆದ್ದರಿಂದ ಈ ಎರಡು ಅಂಶಗಳನ್ನು ವಿವಕ್ಷಿಸದೇ ನೇರವಾಗಿ ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂದು ಹೇಳಿ-ರುತ್ತಾರೆ.

## ಗ್ರಂಥದಲ್ಲಿ ಸೂತ್ರಪ್ರವೃತ್ತೇಃ ಪ್ರಾಕ್ ಎಂದೇಕೆ ಹೇಳಲಿಲ್ಲ

ವಾಕ್ಯಾರ್ಥಚಂದ್ರಿಕಾ– ಸೂತ್ರೇ ಪ್ರಕೃತೇ ಶಾಸ್ತ್ರ ಇತ್ಯುಕ್ತಿಃ ಪ್ರಥಮಸೂತ್ರಸ್ಯ ಶಾಸ್ತ್ರಾಂತರ್ಭಾವಪಕ್ಷೇ ದೂಷಣತ್ವಂ ಸೂಚಯಿತುಂ ತಥಾ ಚೇಹೈವೇತಿ ಶಾಸ್ತ್ರಪರಾಮರ್ಶಾದನ್ಯೋನ್ಯಾಶ್ರಯತೋಪಪಾದನಸೌಕರ್ಯಮ್ । ಪ್ರಮಾಣಾಂತರಸಿದ್ಧೇ ಕ್ವಚಿದುಪದೇಶಾನಪೇಕ್ಷಣಾದಿತಿ ಚ ಶ್ರೌತಪ್ರಯೋಜನಾದೇಃ ನ್ಯಾಯೇನೋಪಪಾದನಾರ್ಥಮಿತಿ ವಕ್ಷ್ಯಮಾಣವ್ಯಾವರ್ತ್ಯತ್ವೇನೇತಿ ದ್ರಷ್ಟವ್ಯಮ್ ॥

ಸೂತ್ರವು ಪ್ರಕೃತವಾಗಿರುವುದರಿಂದ 'ಸೂತ್ರಪ್ರವೃತ್ತೇಃ ಪ್ರಾಗೇವ'' ಎಂದು ಹೇಳಬೇಕಿತ್ತು. ಆದರೂ ಕೂಡ ಶಾಸ್ತ್ರಶಬ್ದವನ್ನು ಪ್ರಯೋಗಿಸಿದ್ದಕ್ಕೆ ಕಾರಣ ಹೀಗಿದೆ – ಮೊದಲನೆಯ ಸೂತ್ರಕ್ಕೆ ಶಾಸ್ತ್ರದಲ್ಲಿ ಅಂತರ್ಭಾವವನ್ನು ಹೇಳಿದ ಪಕ್ಷದಲ್ಲಿ ದೋಷವನ್ನು ಸೂಚಿಸಬೇಕಾಗಿದೆ. ಮತ್ತು ಮುಂದೆ ಇಹೈವ ಎಂಬುದಾಗಿ ಶಾಸ್ತ್ರವನ್ನು ಪರಾಮರ್ಶ ಮಾಡುತ್ತಿರುವುದರಿಂದ ಅನ್ಯೋನ್ಯಾಶ್ರಯದೋಷವನ್ನು ಉಪಪಾದನೆ ಮಾಡುವ ಸೌಕರ್ಯಕ್ಕಾಗಿಯೂ ಸೂತ್ರಶಬ್ದವನ್ನು ಪ್ರಯೋಗಿಸದೇ ಶಾಸ್ತ್ರಶಬ್ದವನ್ನು ಪ್ರಯೋಗಿಸಿದ್ದಾರೆ.

'ಪ್ರಮಾಣಾಂತರಸಿದ್ಧೇ ಕ್ವಚಿತ್ ಉಪದೇಶಾನಪೇಕ್ಷಣಾತ್' ಎಂಬುದಾಗಿ ಗ್ರಂಥದಲ್ಲಿ ಹೇಳಿರುತ್ತಾರೆ. ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯಗಳಿಂದ ಉಪಪಾದನೆ ಮಾಡುವುದಕ್ಕಾಗಿ ಎಂಬುದಾಗಿ ಮುಂದೆ 'ಶ್ರೌತಪ್ರಯೋಜನಾದೇಃ ನ್ಯಾಯೇನೋಪಪಾದನಾರ್ಥಮ್' ಎಂದು ಹೇಳುವವರಿದ್ದಾರೆ. ಅದನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಹೀಗೆ ಹೇಳಿದ್ದಾರೆಂದು ತಿಳಿಯಬೇಕು.

## ಅನುಮಾನದಲ್ಲಿ ವ್ಯಭಿಚಾರ ಪರಿಹರಿಸುವುದಕ್ಕಾಗಿ 'ಉಚ್ಯತೇ' ಇತ್ಯಾದಿ ಗ್ರಂಥ ಹೊರಟಿದೆ

ವಾಕ್ಯಾರ್ಥಚಂದ್ರಿಕಾ– ವಿಮತಾ ಶಾಸ್ತ್ರೇ ಪ್ರವೃತ್ತಿಃ ಪ್ರಯೋಜನಾದಿಜ್ಞಾನಸಾಧ್ಯಾ ಪ್ರವೃತ್ತಿತ್ವಾತ್ ಬಾಲಸ್ಯ ಸ್ತನ್ಯಪಾನಪ್ರವೃತ್ತಿವತ್ ಇತ್ಯನುಮಾನೇನ ಪ್ರವೃತ್ತೇಃ ಪ್ರಯೋಜನಾದಿಜ್ಞಾನಸಾಧ್ಯತ್ವಸಿದ್ಧೇಃ ಸೂತ್ರಕಾರೇಣ ಶಾಸ್ತ್ರೇ ಪ್ರವರ್ತನೀಯಂ ಪ್ರತಿ ಪ್ರಯೋಜನಾದಿ ದರ್ಶನೀಯಮೇವೇತಿ ಯುಕ್ತಂ ಸೂತ್ರೇ ತದಭಿಧಾನಮಿತಿ ವಕ್ತುಂ ಯತ್ಕಿಂಚಿದನುಭವೇ ಫಲೇಚ್ಛಾಯಾಂ ಸ್ವಾನಪೇಕ್ಷಿತಪ್ರಯೋಜನಸಾಧನಾನುಭವೇ ಚ ಪ್ರವೃತ್ತಿತ್ವಹೇತೋರ್ವ್ಯಭಿಚಾರಾದನುಮಾನಮೇವ

ಅಯುಕ್ತಮಿತ್ಯತಃ ಸಾಧನಗೋಚರೇಚ್ಛಾಪ್ರಯತ್ನಯೋರೇವ ಪ್ರವೃತ್ತಿತ್ವೇನೋಭಯವಿಧಾನುಭವ-ಫಲೇಚ್ಛಯೋಶ್ಚಿತ್ತವೃತ್ತಿತ್ವೇಽಪಿ ಪ್ರವೃತ್ತಿತ್ವಾಭಾವಾನ್ನ ವ್ಯಭಿಚಾರ ಇತ್ಯಾಹ – ಉಚ್ಯತ ಇತಿ ॥

'ವಿಮತಾ ಶಾಸ್ತ್ರೇ ಪ್ರವೃತ್ತಿಃ ಪ್ರಯೋಜನಾದಿಜ್ಞಾನಸಾಧ್ಯಾ ಪ್ರವೃತ್ತಿತ್ವಾತ್ ಬಾಲಸ್ಯ ಸ್ತನ್ಯಪಾನ-ಪ್ರವೃತ್ತಿವತ್' ಬಾಲಕನು ಸ್ತನ್ಯಪಾನದಲ್ಲಿ ಮಾಡಲ್ಪಡುವ ಪ್ರವೃತ್ತಿಯು ಪ್ರವೃತ್ತಿಯಾಗಿದೆ. ಪ್ರಯೋಜನ-ವಿದೆ ಎಂಬ ಜ್ಞಾನದಿಂದ ಸಾಧ್ಯವಾಗಿದೆ. ಇದರಂತೆ ವಿವಾದವಿಷಯಭೂತವಾದ ಈ ಶಾಸ್ತ್ರದಲ್ಲಿ ಮಾಡುವ ಪ್ರವೃತ್ತಿಯು ಪ್ರವೃತ್ತಿಯಾಗಿರುವುದರಿಂದ ಪ್ರಯೋಜನವಿದೆಯೆಂಬ ಜ್ಞಾನದಿಂದಲೇ ಸಾಧ್ಯ-ವಾಗಿರುತ್ತದೆ. ಈ ಅನುಮಾನದಿಂದ ಪ್ರವೃತ್ತಿಯು ಪ್ರಯೋಜನಾದಿ ಜ್ಞಾನಸಾಧ್ಯವಾಗಿದೆಯೆಂದು ಸಿದ್ಧ-ವಾಗುತ್ತದೆ. ಆದ್ದರಿಂದ ಸೂತ್ರಕಾರರು ಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವವನಿಗೆ ಪ್ರಯೋಜನಾದಿಗಳನ್ನು ತೋರಿಸಲೇಬೇಕು. ಆದ್ದರಿಂದ ಪ್ರಥಮಸೂತ್ರದಲ್ಲಿ ಮೋಕ್ಷಪ್ರಯೋಜನವನ್ನು ಹೇಳಿದ್ದು ಯುಕ್ತವಾಗಿದೆ ಎಂಬುದನ್ನು ಈಗ ಸಮರ್ಥಿಸುತ್ತಿದ್ದಾರೆ. ಆದಕ್ಕಾಗಿ ಯತ್ಕಿಂಚಿದನುಭವದಲ್ಲಿ ಫಲೇಚ್ಛೆಯು ಇದ್ದಾಗ ತನ್ನಿಂದ ಅಪೇಕ್ಷಿತವಲ್ಲದ ಪ್ರಯೋಜನವನ್ನು ತಿಳಿಸುವ ಅನುಭವದಲ್ಲಿ ಪ್ರವೃತ್ತಿತ್ವಹೇತುವಿಗೆ ವ್ಯಭಿಚಾರವು ಬರುತ್ತದೆ. ಆದ್ದರಿಂದ ಈ ಅನುಮಾನವೇ ಅಯುಕ್ತವಾಗಿದೆಯೆಲ್ಲವೇ? ಈ ಪ್ರಶ್ನೆಗೆ ಸಾಧನವಿಷಯಕ-ವಾದ ಇಚ್ಛೆ ಹಾಗೂ ಪ್ರಯತ್ನಗಳಷ್ಟೇ ಪ್ರವೃತ್ತಿಯೆಂದು ಕರೆಸಿಕೊಳ್ಳುತ್ತವೆ. ಉಭಯವಿಧವಾದ ಅನುಭವ ಹಾಗೂ ಫಲೇಚ್ಛೆಗಳು ಚಿತ್ತವೃತ್ತಿಯಾಗಿದ್ದರೂ ಕೂಡ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಫಲೇಚ್ಛೆಯಲ್ಲಿ ಮತ್ತು ಸ್ವಾನಪೇಕ್ಷಿತಪ್ರಯೋಜನಸಾಧನಾನುಭವದಲ್ಲಿ ಪ್ರವೃತ್ತಿತ್ವಹೇತುವಿಗೆ ವ್ಯಭಿ-ಚಾರದೋಷವು ಬರುವುದಿಲ್ಲವೆಂಬುದನ್ನು "ಉಚ್ಯತೇ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ – ಎಲ್ಲಾ ಪ್ರವೃತ್ತಿಗಳೂ ಪ್ರಯೋಜನವನ್ನು ಅಪೇಕ್ಷಿಸಿರುತ್ತವೆ. ಆದ್ದರಿಂದ ಸ್ವಪ್ರವೃತ್ತಿಯೂ ಕೂಡ ಪ್ರಯೋಜನದ ಅಪೇಕ್ಷೆಯನ್ನು ಹೊಂದಿರುತ್ತದೆ. ಇದರಲ್ಲಿ ಬಾಲಕನ ಸ್ತನ್ಯಪಾನಪ್ರವೃತ್ತಿ ಮೊದ-ಲಾದವು ದೃಷ್ಟಾಂತಗಳಾಗಿವೆ. ಹೀಗೆ ಅನುಮಾನದ ಮೂಲಕ ಪ್ರಯೋಜನವಿದೆಯೆಂದು ತಿಳಿಯುತ್ತದೆ. ಈ ಅನುಮಾನಪ್ರಯೋಗದಲ್ಲಿ ಹೇತುವಿಗೆ ವ್ಯಭಿಚಾರದೋಷವು ಇರುವುದಿಲ್ಲವೆಂಬುದನ್ನು ತಿಳಿಸು-ವುದಕ್ಕಾಗಿ 'ಉಚ್ಯತೇ' ಇತ್ಯಾದಿ ಗ್ರಂಥವು ಹೊರಟದೆ.

## ಅನುಮಾನದಲ್ಲಿ ಬಾಧದೋಷಪರಿಹಾರ

ವಾಕ್ಯಾರ್ಥಚಂದ್ರಿಕಾ– ಸ್ಯಾದಿತಿ ॥ ಅನ್ಯಥಾ ವ್ಯಭಿಚಾರಾಪತ್ತೇರಿತಿ ಭಾವಃ । ನನು ಸಾಧ್ಯಸತ್ತ್ವಮೇವಾಭ್ಯುಪಗಮ್ಯ ವ್ಯಭಿಚಾರಪರಿಹಾರಸಂಭವೇ ಏವಂ ವೈಲಕ್ಷಣ್ಯಮಂಗೀಕೃತ್ಯ ಹೇತ್ವ-

ಭಾವವ್ಯತ್ಪಾದನಮನುಚಿತಮಿತ್ಯತಃ ತತ್ರ ಸಾಧ್ಯಾಭ್ಯುಪಗಮಸ್ಯ ಅಯುಕ್ತತಾಮಾಹ – ನ ಹೀತ್ಯಾದಿನಾ ॥ ಉಪೇಕ್ಷಣೀಯಸ್ಯ ಸ್ವಸ್ಯ ಪ್ರಯೋಜನತ್ವಾಭಾವೇ ಸತಿ ಪ್ರಯೋಜನಾಂತರಶೂನ್ಯತ್ವಂ ಸುಖಸ್ಯ ತು ಪ್ರಯೋಜನಾಂತರಶೂನ್ಯತ್ವಮಾತ್ರಂ ಯಾಗಾದೇಸ್ತು ಅನಪೇಕ್ಷಿತಪ್ರಯೋಜನತ್ವಮಿತಿ ವಿಶೇಷಃ (ಭೇದಃ) ।

ನನು ಪಕ್ಷೀಭೂತಪ್ರವೃತ್ತೇರಪ್ಯನುಭವಾದಿವತ್ ಪ್ರಯೋಜನಾದಿನಿರಪೇಕ್ಷತ್ವೇ ಬಾಧಃ ಸ್ಯಾದಿತ್ಯತ ಆಹ – ಪುರುಷಾರ್ಥೇತಿ ॥ ಅತ್ರ 'ಅರ್ಥಸಾಧನ' ಇತ್ಯಂಶೇನ ಸುಖೋಪೇಕ್ಷಣೀಯಯೋಃ ಪುರುಷಾರ್ಥೇತ್ಯಂಶೇನಾನಪೇಕ್ಷಿತಪ್ರಯೋಜನಸ್ಯ ವ್ಯಾವೃತ್ತಿರಿತಿ ದ್ರಷ್ಟವ್ಯಮ್ । ತದೇವ ಉಪಪಾದಯತಿ – ನ ಹೀತಿ ॥

"ಸ್ಯಾತ್" – ಗ್ರಂಥದಲ್ಲಿ 'ಪ್ರಯೋಜನನಿಶ್ಚಯಾಪೇಕ್ಷಾ ಸ್ಯಾತ್' ಎಂದು ಹೇಳಿದ್ದಾರೆ. ಕೇವಲ ಅನುಭವ ಹಾಗೂ ಫಲವಿಷಯಕವಾದ ಇಚ್ಛೆಯನ್ನು ಪ್ರವೃತ್ತಿಯೆಂದು ಹೇಳಿದ್ದಲ್ಲಿ ವ್ಯಭಿಚಾರದೋಷವು ಬರುತ್ತಿತ್ತು ಎಂಬುದು ಈ ವಾಕ್ಯದ ಅಭಿಪ್ರಾಯ.

ಸಾಧ್ಯವನ್ನು ಅಂಗೀಕರಿಸಿಯೂ ಕೂಡ ವ್ಯಭಿಚಾರದೋಷವನ್ನು ಪರಿಹಾರ ಮಾಡಬಹುದು. ಆದ್ದರಿಂದ ಪ್ರಯೋಜನಸಾಪೇಕ್ಷತ್ವವನ್ನು ಒಪ್ಪಿಯೇ ವ್ಯಭಿಚಾರವನ್ನು ಪರಿಹರಿಸಬಹುದಲ್ಲವೇ? ಪ್ರವೃತ್ತಿಯೇ ಅಲ್ಲವೆಂದು ಹೇಳಿ ಅನುಭವ ಹಾಗೂ ಫಲೇಚ್ಛೆಗಳಲ್ಲಿ ವ್ಯಭಿಚಾರವನ್ನು ಏಕೆ ಪರಿಹರಿಸುತ್ತಿದ್ದೀರಿ?

ಸಾಧ್ಯವನ್ನು ಒಪ್ಪುವುದು ಅನುಭವವಿರುದ್ಧವಾಗಿದೆ. ಆದ್ದರಿಂದ ಪ್ರಯೋಜನಸಾಪೇಕ್ಷತ್ವವನ್ನು ಒಪ್ಪಿ ವ್ಯಭಿಚಾರವನ್ನು ಪರಿಹರಿಸಲಾಗದು ಎಂಬ ಸಮಾಧಾನವನ್ನು "ನಹಿ" ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ಪಕ್ಷೀಭೂತವಾದ ಪ್ರವೃತ್ತಿಯೂ ಕೂಡ ಅನುಭವಾದಿಗಳಂತೆ ಪ್ರಯೋಜನಾದಿಗಳಿಂದ ನಿರಪೇಕ್ಷಿತವಾದರೆ ಬಾಧದೋಷವು ಬರುತ್ತದಲ್ಲವೇ? ಈ ಪ್ರಶ್ನೆಗೆ "ಪುರುಷಾರ್ಥಸಾಧನೇ ತು" ಇತ್ಯಾದಿಯಾಗಿ ಗ್ರಂಥದಲ್ಲಿ ಉತ್ತರಿಸುತ್ತಿದ್ದಾರೆ. ಇಲ್ಲಿ ಅರ್ಥಸಾಧನೇ ಎಂಬ ಅಂಶದಿಂದ ಸುಖ ಹಾಗೂ ಉಪೇಕ್ಷಣೀಯವಾದ ಪದಾರ್ಥಗಳನ್ನು ವ್ಯಾವೃತ್ತಿ ಮಾಡಿರುತ್ತಾರೆ. ಪುರುಷಾರ್ಥ ಎಂಬ ಅಂಶದಿಂದ ಅನಪೇಕ್ಷಿತಪ್ರಯೋಜನವನ್ನು ವ್ಯಾವೃತ್ತಿ ಮಾಡಿರುತ್ತಾರೆಂದು ತಿಳಿಯಬೇಕು. ಅದರ ಉಪಪಾದನೆಗಾಗಿ ನಹಿ ಇತ್ಯಾದಿ ವಾಕ್ಯವು ಹೊರಟಿದೆ.

## ಉಚ್ಯತೇ ಇತ್ಯಾದಿ ಗ್ರಂಥಕ್ಕೆ ಮತ್ತೊಂದು ಪೀಠಿಕೆ

ವಾಕ್ಯಾರ್ಥಚಂದ್ರಿಕಾ– ಏವಮ್ ಆಭಾಸೋದ್ಧಾರೇ ಸಿದ್ಧಮನುಮಾನಮಿತ್ಯಭಿಪ್ರೇತ್ಯ ಉಪಸಂಹರತಿ – ತಸ್ಮಾದಿತಿ ॥ ಯದ್ವಾ । ಯದಿ ಪಕ್ಷೀಭೂತಪ್ರವೃತ್ತೇಃ ಪ್ರಯೋಜನಾದಿ-ನಿಶ್ಚಯಸಾಧ್ಯತ್ವಂ ತರ್ಹಿ ಜ್ಞಾನಫಲೇಚ್ಛಯೋರಪಿ ಪ್ರವೃತ್ತಿತ್ವಾವಿಶೇಷಾತ್ ಪ್ರಯೋಜನಾದಿನಿಶ್ಚಯ-ಸಾಧ್ಯತಾ ಸ್ಯಾತ್ । ಅನ್ಯಥಾ ಪಕ್ಷೀಕೃತಪ್ರವೃತ್ತೇರಪಿ ನ ಸ್ಯಾದಿತಿ ಪೂರ್ವೋಕ್ತಾನುಮಾನೇ ತರ್ಕಪರಾಹತೌ ಪ್ರಾಪ್ತಾಯಾಂ ಜ್ಞಾನೇಚ್ಛಾಪ್ರಯತ್ನಾನಾಂ ಚಿತ್ತವೃತ್ತಿತ್ವಾವಿಶೇಷೇಽಪಿ ಪ್ರವೃತ್ತಿ-ತ್ವಾವಿಶೇಷೋಽಸಿದ್ಧಃ । ಸಾಧನೇಚ್ಛಾಪ್ರಯತ್ನಯೋರೇವ ಪ್ರವೃತ್ತಿತ್ವೇನ ಜ್ಞಾನಫಲೇಚ್ಛಯೋಃ ಪ್ರವೃತ್ತಿತ್ವಾಭಾವಾತ್ । ತದಭಾವೇ ತತ್ಪ್ರಯೋಜ್ಯಪ್ರಯೋಜನಾದಿನಿಶ್ಚಯಸಾಪೇಕ್ಷತಾಯಾ ಅಪಿ ಅಭಾವಾತ್ ಪಕ್ಷೀಭೂತಪ್ರವೃತ್ತೇಶ್ಚ ಪ್ರಯೋಜಕವತ್ತ್ವಾತ್ ಪ್ರಯೋಜ್ಯವತ್ತ್ವಮಿತಿ ವ್ಯಾಪ್ತಿವಿಕಲೋ-ಽಯಂ ತರ್ಕಾಭಾಸ ಇತ್ಯಭಿಪ್ರೇತ್ಯಾಹ – ಉಚ್ಯತ ಇತಿ ॥

ಹೀಗೆ ಯಾವುದೇ ದೋಷಗಳು ಇಲ್ಲದೇ ಇರುವುದರಿಂದ ಅನುಮಾನವು ನಿರ್ದುಷ್ಟವೆಂದು ಸಿದ್ಧವಾಯಿತು. ಈ ಅಭಿಪ್ರಾಯದಿಂದ ''ತಸ್ಮಾತ್'' ಇತ್ಯಾದಿಯಾಗಿ ಉಪಸಂಹಾರ ಮಾಡುತ್ತಿದ್ದಾರೆ.

ಅಥವಾ ''ಉಚ್ಯತೇ'' ಇತ್ಯಾದಿ ಗ್ರಂಥಕ್ಕೆ ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನ ಮಾಡಬಹುದು – ಪಕ್ಷೀಭೂತವಾದ ಪ್ರವೃತ್ತಿಯಲ್ಲಿ ಪ್ರಯೋಜನಾದಿ ನಿಶ್ಚಯವನ್ನು ಸಾಧಿಸುವುದಾದರೆ ಜ್ಞಾನ ಹಾಗೂ ಫಲೇಚ್ಛೆಗಳೂ ಕೂಡ ಪ್ರವೃತ್ತಿಯಾಗಿರುವುದರಿಂದ ಪ್ರಯೋಜನಾದಿ ನಿಶ್ಚಯಗಳನ್ನು ಅಪೇಕ್ಷಿಸಲಿ. ಇಲ್ಲದಿದ್ದರೆ ಶಾಸ್ತ್ರಪ್ರವೃತ್ತಿಯೂ ಸಹ ಪ್ರಯೋಜನಸಾಪೇಕ್ಷವಾಗುವುದು ಬೇಡ. ಹೀಗೆ ಹಿಂದಿನ ಅನುಮಾನದಲ್ಲಿ ತರ್ಕಪರಾಹತಿದೋಷವು ಬರುತ್ತದೆ. ಈ ತರ್ಕದಿಂದ ಪರಾಹತಿಯನ್ನು ಪರಿಹರಿಸು-ವುದಕ್ಕಾಗಿ ತರ್ಕವೇ ದೋಷಗ್ರಸ್ತವಾಗಿದೆ. ಆದ್ದರಿಂದ ಅಂಥ ತರ್ಕದಿಂದ ಪ್ರತಿಹತಿಯನ್ನು ಹೇಳಲಾಗದು. ಜ್ಞಾನ ಇಚ್ಛೆ ಹಾಗೂ ಪ್ರಯತ್ನಗಳು ಮನೋವೃತ್ತಿಗಳಾಗಿವೆ. ಆದರೆ ಪ್ರವೃತ್ತಿರೂಪವಾಗಿರುವುದಿಲ್ಲ. ಸಾಧನವಿಷಯಕವಾದ ಫಲ ಹಾಗೂ ಇಚ್ಛೆಗಳಷ್ಟೇ ಪ್ರವೃತ್ತಿಯಾಗುತ್ತವೆ. ಪ್ರವೃತ್ತಿಯೆಂದು ಕರೆಸಿಕೊಳ್ಳು-ವುದೇ ಪ್ರಯೋಜನನಿಶ್ಚಯಸಾಪೇಕ್ಷತ್ವವನ್ನು ಹೊಂದಲು ಕಾರಣವಾಗುತ್ತದೆ. ಜ್ಞಾನೇಚ್ಛೆಗಳಲ್ಲಿ ಪ್ರವೃತ್ತಿತ್ವವೇ ಇರುವುದಿಲ್ಲ. ಆದ್ದರಿಂದ ಪ್ರಯೋಜನನಿಶ್ಚಯದ ಸಾಪೇಕ್ಷತ್ವವು ಕೂಡ ಬರುವುದಿಲ್ಲ. ಪಕ್ಷೀಭೂತವಾದ ಶಾಸ್ತ್ರಪ್ರವೃತ್ತಿಯಲ್ಲಾದರೋ ಪ್ರಯೋಜಕವಾದ ಪ್ರವೃತ್ತಿತ್ವವು ಇರುವುದರಿಂದ ಪ್ರಯೋಜ್ಯವಾದ ಪ್ರಯೋಜನನಿಶ್ಚಯಸಾಪೇಕ್ಷತ್ವವು ಇರುತ್ತದೆ. ಹೀಗೆ ವ್ಯಾಪ್ತಿಯಿಲ್ಲವಾದ್ದರಿಂದ ತರ್ಕವು

ಆಪಾದ್ಯಾಪಾದಕಭಾವವ್ಯಾಪ್ತಿಯೆಂಬ ಅಂಗದಿಂದ ರಹಿತವಾಗಿದೆ. ಈ ಅಭಿಪ್ರಾಯದಿಂದ "ಉಚ್ಯತೇ" ಇತ್ಯಾದಿ ಗ್ರಂಥವು ಹೊರಟದೆ.

## ಅನುಮಾನಕ್ಕೆ ತರ್ಕಪರಾಹತಿಯು ಬರುವುದಿಲ್ಲ.

ವಾಕ್ಯಾರ್ಥಚಂದ್ರಿಕಾ– ನನು ಜ್ಞಾನಫಲೇಚ್ಛಯೋರಪಿ ಪ್ರಯೋಜಕಪ್ರಯೋಜ್ಯಯೋಃ ಪ್ರವೃತ್ತಿತ್ವಪ್ರಯೋಜನಾದಿನಿಶ್ಚಯಸಾಪೇಕ್ಷತ್ವಯೋಃ ಸ್ವೀಕಾರೇಣೈವ ತರ್ಕಸ್ಯೇಷ್ಟಾಪಾದನತ್ವೇ ವಕ್ತುಂ ಶಕ್ಯೇ ವ್ಯಾಪ್ತಿವೈಕಲ್ಯೋಕ್ತೌ ಕಿಂ ಬೀಜಮಿತ್ಯತಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಸ್ಯ ತತ್ರಾ-ಸಂಭವಿತ್ವಾತ್ ಯುಕ್ತಂ ವ್ಯಾಪ್ತಿವೈಕಲ್ಯಕಥನಮಿತ್ಯಭಿಪ್ರೇತ್ಯಾಹ – ನ ಹೀತ್ಯಾದಿನಾ ॥ ಪಕ್ಷೀಕೃತ-ಪ್ರವೃತ್ತಾವಪಿ ಪ್ರಯೋಜನಾದಿನಿಶ್ಚಯಸಾಧ್ಯತ್ವಸ್ಯಾಸಂಭವಿತ್ವೇ ತತ್ಸಾಧನಮಶಕ್ಯಮಿತ್ಯತ ಆಹ – ಪುರುಷಾರ್ಥೇತಿ ॥ ಏವಂ ಚ ತರ್ಕಪರಾಹತೇರಭಾವಾತ್ ಯುಕ್ತಮನುಮಾನಮಿತ್ಯಭಿಪ್ರೇತ್ಯ ತತ್ಫಲಮುಪಸಂಹಾರವ್ಯಾಜೇನಾಹ – ತಸ್ಮಾದಿತಿ ॥

ಜ್ಞಾನ ಹಾಗೂ ಫಲೇಚ್ಛೆಗಳಿಗೂ ಕೂಡ ಪ್ರಯೋಜಕಪ್ರಯೋಜ್ಯಗಳಿಗೆ ಪ್ರವೃತ್ತಿತ್ವ ಹಾಗೂ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಗಳನ್ನು ಸ್ವೀಕಾರ ಮಾಡುವುದರಿಂದಲೇ ತರ್ಕಕ್ಕೆ ಇಷ್ಟಾಪಾದನೆಯನ್ನು ಹೇಳಲು ಬರುತ್ತದೆ. ಆದರೂ ವ್ಯಾಪ್ತಿವೈಕಲ್ಯವನ್ನೇ ಹೇಳಿದ್ದಕ್ಕೆ ಏನು ಕಾರಣ? ಈ ಪ್ರಶ್ನೆಗೆ ಪ್ರಯೋ-ಜನಾದಿ ನಿಶ್ಚಯಸಾಪೇಕ್ಷತ್ವವು ಅಲ್ಲಿ ಅಸಂಭಾವಿತವಾಗಿದೆ. ಆದ್ದರಿಂದ ವ್ಯಾಪ್ತಿವೈಕಲ್ಯವನ್ನು ಹೇಳಿದ್ದು ಯುಕ್ತವೇ ಆಗಿದೆ. ಈ ಅಭಿಪ್ರಾಯದಿಂದ "ನಹಿ" ಇತ್ಯಾದಿ ಗ್ರಂಥವು ಹೊರಟದೆ. ಪಕ್ಷೀಭೂತವಾದ ಪ್ರವೃತ್ತಿಯಲ್ಲೂ ಕೂಡ ಪ್ರಯೋಜನಾದಿ ನಿಶ್ಚಯಸಾಧ್ಯತ್ವವು ಅಸಂಭಾವಿತವಾಗುವುದಾದರೆ ಅದರ ಸಾಧನೆಯು ಅಶಕ್ಯವಾಗುತ್ತದಲ್ಲವೇ? ಈ ಪ್ರಶ್ನೆಗೆ "ಪುರುಷಾರ್ಥಸಾಧನೇ ತು" ಎಂಬುದರಿಂದ ಉತ್ತರಿಸಿದ್ದಾರೆ. ಆದ್ದರಿಂದ ತರ್ಕಪರಾಹತಿಯನ್ನು ಹೇಳಲು ಸಾಧ್ಯವಿಲ್ಲ. ಹಿಂದೆ ಹೇಳಿದ ಅನುಮಾನವು ಯುಕ್ತವೇ ಆಗಿದೆ. ಈ ಅಭಿಪ್ರಾಯದಿಂದ ಚರಿತಾರ್ಥವನ್ನು ಉಪಸಂಹಾರ ನೆಪದಿಂದ "ತಸ್ಮಾತ್" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## ಉಚ್ಯತೇ ಇತ್ಯಾದಿಗ್ರಂಥಕ್ಕೆ ಮೂರನೆಯ ವ್ಯಾಖ್ಯಾನ.

ವಾಕ್ಯಾರ್ಥಚಂದ್ರಿಕಾ– ಅಥವಾ ಪ್ರಥಮಸೂತ್ರಪ್ರವೃತ್ತೇಃ ಪ್ರಯೋಜನಾಂತರಾಭಿ-ಧಾನೇಽನವಸ್ಥಾಂ ಪ್ರಸಂಜಯನ್ ಪ್ರಷ್ಟವ್ಯಃ। 'ಜ್ಯೋತಿಷ್ಟೋಮೇನ ಸ್ವರ್ಗಕಾಮಃ' ಇತ್ಯಾದಿವಾಕ್ಯ-

ಜನಿತಮುಮುಕ್ಷ್ವನಭಿಮತಸ್ವರ್ಗಾದಿಸಾಧನತಾನುಭವಸ್ಯೇವ ಪ್ರಥಮಸೂತ್ರಾಜ್ಜಾಯಮಾನಫಲ-ಸಾಧನತಾನುಭವಮಾತ್ರಸ್ಯ ಪ್ರವೃತ್ತಿಶಬ್ದಾರ್ಥತ್ವಮ್ ಇತ್ಯಭಿಪ್ರೇತ್ಯ ತದರ್ಥಂ ಪ್ರಯೋಜ-ನಾಂತರಾಭಿಧಾನೇಽನವಸ್ಥಾಪ್ರಸಂಗಂ ಬ್ರೂಷೇ ಆಹೋಸ್ವಿತ್ ಪ್ರಥಮಸೂತ್ರಸಾಧ್ಯಜಿಜ್ಞಾಸಾ-ವಾಕ್ಯವಿಚಾರರೂಪಪುರುಷಾರ್ಥಸಾಧನೇಚ್ಛಾಪ್ರಯತ್ನರೂಪಪ್ರಥಮಸೂತ್ರಪ್ರವೃತ್ತೇಃ ಪ್ರಯೋಜ-ನಾದಿನಿಶ್ಚಯಸಾಧ್ಯತ್ವೇಽನವಸ್ಥಾಪ್ರಸಂಗಂ ಬ್ರೂಷೇ? ನಾದ್ಯಃ । ದೃಷ್ಟಾಂತದಾರ್ಷ್ಟಾಂತಿಕಾನು-ಭವದ್ವಯಸ್ಯಾಪಿ ಪ್ರಯೋಜನಾದಿನಿಶ್ಚಯಸಾಧ್ಯತ್ವಾನಭ್ಯುಪಗಮಾತ್ । ನ ಚ ತರ್ಹ್ಯೇವಮೇವ ಪ್ರವೃತ್ತಾವಿತ್ಯುಕ್ತದೂಷಣಪ್ರಸಂಗಃ । ಅನುಭವದ್ವಯಸ್ಯ ಚಿತ್ತವೃತ್ತಿತ್ವೇಽಪಿ ಪ್ರವೃತ್ತಿತ್ವಾಭಾವೇನ ತದ್ದೂಷಣಾಪ್ರವೃತ್ತೇರಿತ್ಯಭಿಪ್ರೇತ್ಯ ಚಿತ್ತವೃತ್ತಿಪ್ರವೃತ್ತಿಸ್ವರೂಪಂ ವಿವೇಚಯತಿ – ಉಚ್ಯತ ಇತಿ ॥ ನ ಕೇವಲಂ ಪ್ರವೃತ್ತಿತ್ವಾಭಾವಾದನುಭವಾದೇಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಾಭಾವೋಽಪಿ ತ್ವಸಂಭಾವಿತತ್ವಾಚ್ಚೇತ್ಯಾಹ – ನ ಹೀತ್ಯಾದಿನಾ ॥ ಅತ್ರ ಪಕ್ಷೇ ಉಪೇಕ್ಷಣೀಯಾನುಭವಫಲೇಚ್ಛಯೋ-ರ್ದೃಷ್ಟಾಂತತಯೋಪಾದಾನಮಿತಿ ಮಂತವ್ಯಮ್ । ದ್ವಿತೀಯೇ ತು ಪ್ರಥಮಸೂತ್ರಪ್ರವೃತ್ತೇಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಮನುಮತಮೇವ । ಅನವಸ್ಥಾಂ ಚ ಪರಿಹರಿಷ್ಯಾಮ ಇತ್ಯಭಿ-ಪ್ರೇತ್ಯಾನುಭವಾದೇರಿವ ಪ್ರವೃತ್ತೇಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಂ ನಾಸಂಭಾವಿತಮಿತ್ಯಾಹ – ಪುರುಷಾರ್ಥೇತಿ ॥ ಫಲಿತಮಾಹ – ತಸ್ಮಾದಿತಿ ॥

ಅಥವಾ ಪ್ರಥಮಸೂತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕೆ ಮತ್ತೊಂದು ಪ್ರಯೋಜನವನ್ನು ಹೇಳಿದರೆ ಅನವಸ್ಥಾ ದೋಷವು ಬರುತ್ತದೆಂದು ಪೂರ್ವಪಕ್ಷಿಯು ಹೇಳುತ್ತಾನೆ. ಅದನ್ನು ನಿರಾಕರಣೆ ಮಾಡುವುದಕ್ಕಾಗಿ ಪೂರ್ವಪಕ್ಷಿಯನ್ನು ಕುರಿತು ಹೀಗೆ ಪ್ರಶ್ನಿಸುತ್ತೇವೆ. 'ಜ್ಯೋತಿಷ್ಟೋಮೇನ ಸ್ವರ್ಗ-ಕಾಮೋ ಯಜೇತ' ಇತ್ಯಾದಿ ವಾಕ್ಯಗಳಿಂದ ಮುಮುಕ್ಷುವಿಗೆ ಅಭಿಮತವಲ್ಲದ ಯಾವ ಸ್ವರ್ಗಾದಿ-ಸಾಧನತ್ವದ ಅನುಭವವು ಬರುತ್ತದೋ ಅದರಂತೆ ಪ್ರಥಮಸೂತ್ರದಿಂದ ದೊರೆಯುವ ಫಲಸಾಧನತ್ವದ ಅನುಭವವು ಬರುತ್ತದೆ. ಈ ಪ್ರಥಮಸೂತ್ರದಿಂದ ತಿಳಿಯುವ ಫಲಸಾಧನತ್ವದ ಅನುಭವವಷ್ಟೇ ಪ್ರವೃತ್ತಿಶಬ್ದದ ಅರ್ಥವೆಂದು ಹೇಳಿ ಅದಕ್ಕಾಗಿ ಮತ್ತೊಂದು ಪ್ರಯೋಜನವನ್ನು ಹೇಳಬೇಕಾದ್ದರಿಂದ ಅನವಸ್ಥಾದೋಷವು ಬರುತ್ತದೆಂದು ಹೇಳುತ್ತೀಯೋ? ಅಥವಾ ಪ್ರಥಮಸೂತ್ರದಿಂದ ಸಾಧ್ಯವಾದ ಜಿಜ್ಞಾಸಾವಾಕ್ಯವಿಚಾರರೂಪವಾದ ಪುರುಷಾರ್ಥಸಾಧನವಾದ ಇಚ್ಛಾಪ್ರಯತ್ನರೂಪವಾದ ಪ್ರಥಮ-ಸೂತ್ರಪ್ರವೃತ್ತಿಗೆ ಪ್ರಯೋಜನಾದಿನಿಶ್ಚಯಸಾಧ್ಯತ್ವವನ್ನು ಹೇಳಿದರೆ ಅನವಸ್ಥಾದೋಷವನ್ನು ಹೇಳು-ವಿಯೋ?

ಮೊದಲನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ದೃಷ್ಟಾಂತ ಹಾಗೂ ದಾರ್ಷ್ಟಾಂತಿಕ ಅನುಭವದ್ವಯಗಳಿಗೂ ಪ್ರಯೋಜನಾದಿನಿಶ್ಚಯಸಾಧ್ಯತ್ವವನ್ನು ನಾವು ಅಂಗೀಕಾರ ಮಾಡಿರುವುದಿಲ್ಲ. ಹಾಗಾದರೆ ಪ್ರವೃತ್ತಿಯಲ್ಲೂ ಕೂಡ ಹೀಗೆಯೇ ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ, ಎರಡೂ ಅನುಭವಗಳು ಚಿತ್ತವೃತ್ತಿಗಳೇ ಆಗಿವೆ. ಆದರೂ ಕೂಡ ಪ್ರವೃತ್ತಿಯೆಂದು ಕರೆಸಿ-ಕೊಳ್ಳುವುದಿಲ್ಲ. ಆದ್ದರಿಂದ ಆ ದೋಷಕ್ಕೆ ಅವಕಾಶವಿಲ್ಲ. ಈ ಅಭಿಪ್ರಾಯದಿಂದ ಚಿತ್ತವೃತ್ತಿ ಹಾಗೂ ಪ್ರವೃತ್ತಿಗಳ ಸ್ವರೂಪವನ್ನು ತಿಳಿಸುವುದಕ್ಕಾಗಿ "ಉಚ್ಯತೇ" ಇತ್ಯಾದಿ ಗ್ರಂಥವು ಹೊರಟಿದೆ.

ಕೇವಲ ಪ್ರವೃತ್ತಿತ್ವವು ಇಲ್ಲದ್ದರಿಂದ ಎಂದಷ್ಟೇ ಅಲ್ಲ ಅನುಭವಾದಿಗಳಿಗೆ ಪ್ರಯೋಜನಾದಿ-ನಿಶ್ಚಯಸಾಪೇಕ್ಷತ್ವಾಭಾವವು ಕೂಡ ಅಸಂಭಾವಿತವಾಗಿದೆ ಎಂಬುದನ್ನು "ನಹಿ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಈ ಪಕ್ಷದಲ್ಲಿ ಉಪೇಕ್ಷಣೀಯವಾದ ಅನುಭವ ಹಾಗೂ ಫಲೇಚ್ಛೆಗಳನ್ನು ದೃಷ್ಟಾಂತ-ಕ್ಕೋಸ್ಕರ ಹೇಳಿದ್ದಾರೆಂದು ತಿಳಿಯಬೇಕು. ಎರಡನೆಯ ಪಕ್ಷದಲ್ಲಿ ಪ್ರಥಮಸೂತ್ರಪ್ರವೃತ್ತಿಗೆ ಪ್ರಯೋ-ಜನಾದಿ ನಿಶ್ಚಯಗಳ ಅಪೇಕ್ಷೆ ಇರುತ್ತದೆಂಬುದು ಅಭಿಮತವೇ ಆಗಿದೆ. ಅನವಸ್ಥಾದೋಷವನ್ನು ಕೂಡ ಪರಿಹರಿಸುವವರಿದ್ದೇವೆ. ಈ ಅಭಿಪ್ರಾಯದಿಂದ ಅನುಭವಾದಿಗಳಂತೆ ಪ್ರವೃತ್ತಿಗೆ ಪ್ರಯೋಜನಾದಿನಿಶ್ಚಯ-ಸಾಪೇಕ್ಷತ್ವವು ಅಸಂಭಾವಿತವಲ್ಲ ಎಂಬುದನ್ನು "ಪುರುಷಾರ್ಥ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಫಲಿತಾರ್ಥವನ್ನು "ತಸ್ಮಾತ್" ಇತ್ಯಾದಿ ವಾಕ್ಯವು ತಿಳಿಸುತ್ತಿದೆ.

## ಘನಗರ್ಜಿತನ್ಯಾಯದಿಂದ ಪ್ರಥಮಸೂತ್ರಶ್ರವಣವಾಗುತ್ತದೆ

ಯಾದುಪತ್ಯ – ಪ್ರಥಮಸೂತ್ರಾದೇವ ಬ್ರಹ್ಮಜ್ಞಾನಸ್ಯ ಮೋಕ್ಷಹೇತುತ್ವನಿಶ್ಚಯಃ । ನ ಚ ಪ್ರಯೋಜನಾದ್ಯನಿಶ್ಚಯೇ ತತ್ರೈವ ಕಥಂ ಪ್ರವೃತ್ತಿಃ? ಇತಿ ವಾಚ್ಯಮ್ । ತತ್ರ ಅಪ್ರವೃತ್ತಸ್ಯಾಪಿ ಘನಗರ್ಜಿತನ್ಯಾಯೇನ ಪ್ರಥಮಸೂತ್ರಶ್ರವಣೇ ವೃತ್ತನ್ನಸ್ಯ ಮುಮುಕ್ಷೋಃ 'ಬ್ರಹ್ಮಜ್ಞಾನಂ ಮೋಕ್ಷಹೇತುಃ' ಇತ್ಯನುಭವೋಪಪತ್ತೇರಿತ್ಯಭಿಪ್ರೇತ್ಯ ಸಮಾಧಾನಮಾಹ – ಉಚ್ಯತ ಇತಿ ॥

ಪ್ರಥಮಸೂತ್ರದಿಂದಲೇ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವದ ನಿಶ್ಚಯವಾಗುತ್ತದೆ. ಪ್ರಯೋಜ-ನಾದಿಗಳ ನಿಶ್ಚಯವಿಲ್ಲದಿದ್ದಾಗ ಆ ಪ್ರಥಮಸೂತ್ರದಲ್ಲೇ ಹೇಗೆ ಪ್ರವೃತ್ತಿಯಾಗುತ್ತದೆ? ಹೀಗೆ ಪ್ರಶ್ನಿಸ-ಬಾರದು. ಪ್ರಥಮಸೂತ್ರದಲ್ಲಿ ಯಾರೇ ಒಬ್ಬ ಅಧಿಕಾರಿಯು ಪ್ರವೃತ್ತಿ ಮಾಡುವುದೇ ಬೇಡ. ಘನ-ಗರ್ಜಿತನ್ಯಾಯದಿಂದ ಪ್ರಥಮಸೂತ್ರದ ಶ್ರವಣವಾಗುತ್ತದೆ. ವೃತ್ತನ್ನನು ಮುಮುಕ್ಷುವಾಗಿದ್ದರೆ ಬ್ರಹ್ಮ-

ಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ ಎಂಬ ಅನುಭವ ಬರುತ್ತದೆ. ಈ ಅಭಿಪ್ರಾಯದಿಂದ ಸಮಾಧಾನವನ್ನು 'ಉಚ್ಯತೇ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ – ಶಾಸ್ತ್ರದಲ್ಲಿ ಬೇರೆ ಪ್ರಮಾಣದಿಂದ ಪ್ರವೃತ್ತಿಯಾಗುತ್ತದೋ ಅಥವಾ ಈ ಶಾಸ್ತ್ರದಲ್ಲಿರುವ ಕೆಲವು ಸೂತ್ರಗಳ ಅಧ್ಯಯನದಿಂದ ಪ್ರವೃತ್ತಿಯಾಗುತ್ತದೋ ಅಥವಾ ಪ್ರಥಮಸೂತ್ರದ ಅಧ್ಯಯನದಿಂದ ಪ್ರವೃತ್ತಿಯಾಗುತ್ತದೋ? ಎಂಬುದಾಗಿ ವಿಕಲ್ಪವನ್ನು ಮಾಡಿದರೆ ಪ್ರಥಮಸೂತ್ರದ ಅಧ್ಯಯನದಿಂದಲೇ ಈ ಶಾಸ್ತ್ರದಲ್ಲಿ ಪ್ರವೃತ್ತಿಯಾಗುತ್ತದೆಂದು ಉತ್ತರಿಸುತ್ತಿದ್ದಾರೆ. ಬ್ರಹ್ಮಜ್ಞಾನವು ಮೋಕ್ಷಕ್ಕೆ ಸಾಧನವಾಗಿದೆ ಎಂಬ ಅರಿವು ಮೊದಲನೆಯ ಸೂತ್ರವನ್ನು ಕೇಳಿದವನಿಗೆ ಬರುತ್ತದೆ. ಆ ಪ್ರಥಮಸೂತ್ರವನ್ನು ಅಧ್ಯಯನ ಮಾಡಲು ಅಧಿಕಾರಿಯು ಹೇಗೆ ಪ್ರವೃತ್ತನಾಗುತ್ತಾನೆ. ಪ್ರಯೋಜನಾದಿಗಳನ್ನು ಹೇಳುವುದಕ್ಕೆ ಮತ್ತೊಂದು ಸೂತ್ರವು ಬೇಕಲ್ಲವೇ. ಆಗ ಅನವಸ್ಥಾ ಬರುತ್ತದಲ್ಲವೇ? ಇತ್ಯಾದಿ ಆಕ್ಷೇಪಗಳಿಗೆ ಅವಕಾಶವೇ ಇಲ್ಲ. ಏಕೆಂದರೆ, ಪ್ರಥಮಸೂತ್ರದ ಅಧ್ಯಯನದಲ್ಲಿ ಪ್ರವೃತ್ತಿಯನ್ನು ಮಾಡಲೇಬೇಕಿಲ್ಲ. ಘನಗರ್ಜಿತನ್ಯಾಯ-ದಿಂದಲೇ ಅದರ ಪರಿಜ್ಞಾನ ಮುಮುಕ್ಷುವಿಗೆ ಬರುತ್ತದೆ.

"ಘನಗರ್ಜಿತನ್ಯಾಯ" – ಮಯೂರವು ಪ್ರಯೋಜನವನ್ನು ತಿಳಿದು ಮೇಘದ ಗರ್ಜನೆಯನ್ನು ಕೇಳುವುದಿಲ್ಲ. ತನ್ನಷ್ಟಕ್ಕೇ ತಾನಿದ್ದಾಗ ಮೇಘದ ಧ್ವನಿಯನ್ನು ಕೇಳುತ್ತದೆ. ಕೇಳಿದನಂತರ ನರ್ತನದಲ್ಲಿ ತೊಡಗುತ್ತದೆ. ಇದೇ ಉದಾಹರಣೆಯಂತೆ ಕಥಂಚಿತ್ ಉಪನ್ಯಾಸಾದಿಗಳ ಶ್ರವಣದಿಂದ ವ್ಯುತ್ಪನ್ನನಿಗೆ ಪ್ರಥಮಸೂತ್ರವು ಶ್ರುತವಾಗುತ್ತದೆ. ಪ್ರಥಮಸೂತ್ರದ ಶ್ರವಣವಾದಾಗ ತಾನು ಬಯಸಿದ ಮೋಕ್ಷಕ್ಕೆ ಬ್ರಹ್ಮಜ್ಞಾನವು ಕಾರಣವಾಗಿದೆ ಎಂಬ ಜ್ಞಾನೋದಯವಾಗುತ್ತದೆ. ಅನಂತರ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ತೊಡಗುತ್ತಾನೆ. ಯಾವ ರೀತಿಯಾಗಿ ಮಯೂರಪಕ್ಷಿಗೆ ಸಹಜವಾಗಿ ಕೇಳಿದ ಘನಗರ್ಜನೆಯಿಂದ ನರ್ತನದಲ್ಲಿ ತೊಡಗುವ ಅಪೇಕ್ಷೆಯುಂಟಾಗುತ್ತದೋ ಅದರಂತೆ ಮುಮುಕ್ಷುವಿಗೆ ಸಹಜವಾಗಿ ಶ್ರುತ-ವಾದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಿಂದ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಲ್ಲಿ ಪ್ರವೃತ್ತಿಯು ಉಂಟಾಗುತ್ತದೆ.

## ಅನುಭವ ಹಾಗೂ ಇಚ್ಛೆಗಳಿಗೆ ಪ್ರಯೋಜನಾದಿಗಳ ಅಪೇಕ್ಷೆ ಇಲ್ಲ

ಯಾದುಪತ್ಯ– ನನ್ವನುಭವೇಚ್ಛಾಪ್ರಯತ್ನಾನಾಂ ಪ್ರವೃತ್ತಿತ್ವಾತ್ ಪ್ರವೃತ್ತಿತ್ವಾವಚ್ಛಿನ್ನೇ ಚ ಪ್ರಯೋಜನಾದಿನಿಶ್ಚಯಸ್ಯಾಪೇಕ್ಷಿತತ್ವಾತ್ ತದಭಾವೇ ಕಥಂ ಬ್ರಹ್ಮಜ್ಞಾನಂ ಮೋಕ್ಷಹೇತು-

ರಿತ್ಯನುಭವರೂಪಾ ಪ್ರವೃತ್ತಿಃ ಪ್ರಥಮಸೂತ್ರಾತ್ ಸ್ಯಾತ್ । ಕಥಂ ವಾ ಪ್ರಯೋಜನಾದ್ಯನಿಶ್ಚಯೇ ಮೋಕ್ಷೇ ಇಚ್ಛಾರೂಪಾ ಪ್ರವೃತ್ತಿರ್ಯೇನ ಸ ಪೂರ್ವಂ ಮುಮುಕ್ಷುಃ ಸ್ಯಾದಿತ್ಯತ ಆಹ – ತ್ರಿವಿಧಾ ಹೀತಿ ॥ 'ಬ್ರಹ್ಮಜ್ಞಾನಂ ಮೋಕ್ಷಹೇತುಃ' ಇತ್ಯನುಭವಸ್ಯ ವಾ ಮೋಕ್ಷರೂಪಫಲೇಚ್ಛಯಾ ವಾ ಪ್ರವೃತ್ತಿಶಬ್ದಾವಾಚ್ಯತ್ವೇನಾಪ್ರವೃತ್ತಿತ್ವೇನ ವಿವಕ್ಷಿತತ್ವಾತ್ । ಪ್ರಯೋಜನಾದ್ಯನಿಶ್ಚಯೇಽಪಿ ಉಕ್ತರೀತ್ಯಾ ತಯೋಃ ಸಂಭವಾನ್ನ ಕೋಽಪಿ ದೋಷ ಇತಿ ಭಾವಃ ।

ಅನುಭವ ಇಚ್ಛೆ ಹಾಗೂ ಪ್ರಯತ್ನ ಈ ಮೂರೂ ಕೂಡ ಪ್ರವೃತ್ತಿಯೆಂದೇ ಕರೆಸಿಕೊಳ್ಳುತ್ತವೆ. ಪ್ರವೃತ್ತಿತ್ವಾವಚ್ಛಿನ್ನವಾದ ಈ ಮೂರರಲ್ಲೂ ಕೂಡ ಪ್ರಯೋಜನಾದಿಗಳ ನಿಶ್ಚಯವು ಅಪೇಕ್ಷಿತವಾಗಿದೆ. ಆದರೆ ಪ್ರಯೋಜನಾದಿಗಳು ಇಲ್ಲವೆಂದು ನೀವು ಹೇಳಿದರೆ ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ ಎಂಬ ಅನುಭವರೂಪವಾದ ಪ್ರವೃತ್ತಿಯು ಪ್ರಥಮಸೂತ್ರದಲ್ಲಿ ಹೇಗೆ ತಾನೇ ಆಗಲು ಸಾಧ್ಯ ? ಅಥವಾ ಪ್ರಯೋಜನಾದಿಗಳ ನಿಶ್ಚಯವಾಗದಿದ್ದರೆ ಮೋಕ್ಷದಲ್ಲಿ ಇಚ್ಛಾರೂಪವಾದ ಪ್ರವೃತ್ತಿಯುಂಟಾಗಲೂ ಕೂಡ ಹೇಗೆ ಸಾಧ್ಯ ? ಹಾಗೇನಾದರೂ ಪ್ರವೃತ್ತಿಯಾಗಿದ್ದಲ್ಲಿ ಮೊದಲೇ ಅವನು ಮುಮುಕ್ಷು ಎಂದು ಹೇಳಬಹುದಿತ್ತು ? ಈ ಪ್ರಶ್ನೆಗೆ "ತ್ರಿವಿಧಾ ಹಿ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಬ್ರಹ್ಮಜ್ಞಾನವು ಮೋಕ್ಷಸಾಧನೆಯಾಗಿದೆ ಎಂಬ ಅನುಭವವಾಗಲೀ, ಮೋಕ್ಷ ಎಂಬ ಫಲದ ಇಚ್ಛೆಯಾಗಲೀ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಇವೆರಡೂ ಕೂಡ ಅಪ್ರವೃತ್ತಿಗಳೇ ಆಗಿವೆ. ಪ್ರಯೋಜನಾದಿಗಳ ನಿಶ್ಚಯವಿಲ್ಲದಿದ್ದರೂ ಕೂಡ ಹಿಂದೆ ಹೇಳಿದಂತೆ (ಘನಗರ್ಜಿತನ್ಯಾಯದಂತೆ) ಬ್ರಹ್ಮಜ್ಞಾನವು ಮೋಕ್ಷಹೇತುವಾಗಿದೆ ಎಂಬ ಅನುಭವ ಹಾಗೂ ಮೋಕ್ಷರೂಪಫಲೇಚ್ಛೆಗಳು ಯುಕ್ತ-ವಾಗುತ್ತವೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ ಎಂದಭಿಪ್ರಾಯ.

ವಿವರಣೆ – ಅನುಭವ, ಇಚ್ಛೆ, ಪ್ರಯತ್ನ – ಈ ಮೂರೂ ಕೂಡ ಪ್ರವೃತ್ತಿಯೇ ಎನಿಸುತ್ತವೆಂದು ಇಲ್ಲಿ ಆಕ್ಷೇಪ ಮಾಡಲಾಗಿದೆ. ಅನುಭವ ಹಾಗೂ ಫಲೇಚ್ಛೆಗಳು ಪ್ರವೃತ್ತಿ ಎನಿಸುವುದಿಲ್ಲ ಎಂದು ಉತ್ತರಿಸಲಾಗಿದೆ. ಪ್ರವೃತ್ತಿಯಲ್ಲದ ಕಾರಣ ಪ್ರಯೋಜನಾದಿಗಳ ಅಪೇಕ್ಷೆಯೂ ಕೂಡ ಈ ಅನುಭವ ಹಾಗೂ ಇಚ್ಛೆಗಳಿಗೆ ಇರುವುದಿಲ್ಲ. ಆದ್ದರಿಂದ ಪ್ರಥಮಸೂತ್ರ ಓದುವ ಮೊದಲೇ ಮೋಕ್ಷವೆಂಬ ಫಲದ ಇಚ್ಛೆಯು ಅಧಿಕಾರಿಗೆ ಇರುತ್ತದೆ. ಪ್ರಥಮಸೂತ್ರವನ್ನು ಸಹಜವಾಗಿ ಶ್ರವಣ ಮಾಡಿದಾಗ ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ ಎಂಬ ಜ್ಞಾನವೂ ಕೂಡ ಬರುತ್ತದೆ. ಇವೆರಡಕ್ಕೂ ಪ್ರಯೋಜನಾದಿಗಳ ಅಪೇಕ್ಷೆ ಇರುವುದಿಲ್ಲ.

## ಅನುಭವಕ್ಕೆ ಪ್ರಯೋಜನನಿಶ್ಚಯದ ಅಪೇಕ್ಷೆ ಇರುವುದಿಲ್ಲ

ಯಾದುಪತ್ಯ – ಅನುಭವಸ್ಯ ಪ್ರಯೋಜನನಿಶ್ಚಯಾನಪೇಕ್ಷತ್ವಂ ದರ್ಶಯತಿ – ನ ಹಿ ಉಪೇಕ್ಷಣೀಯಮಿತಿ ॥ ಫಲಗೋಚರೇಚ್ಛಾಯಾಃ ತದನಪೇಕ್ಷತ್ವಂ ದರ್ಶಯತಿ – ನಾಪಿ ಸುಖಮಿತಿ ॥ ನನೂಪೇಕ್ಷಣೀಯಾನುಭವಸ್ಯ ಪ್ರಯೋಜನನಿಶ್ಚಯಾಪೇಕ್ಷತ್ವೇಽಪಿ ಸಾಧನಾನುಭವಸ್ಯ ಪ್ರಯೋಜನ-ನಿಶ್ಚಯಾಪೇಕ್ಷಾನಿಯಮಾದುಕ್ತದೋಷಸ್ತದವಸ್ಥ ಏವೇತ್ಯತ ಆಹ – ನ ಚ ಮುಮುಕ್ಷುಣೇತಿ ॥ ತಥಾ ಚ ನ ಕೋಽಪ್ಯನುಭವಃ ಪ್ರಯೋಜನನಿಶ್ಚಯಾಪೇಕ್ಷಃ ಕಿಂತು ಸ್ವಕಾರಣಾಪೇಕ್ಷ ಏವೇತಿ ಭಾವಃ।

ಅನುಭವಕ್ಕೆ ಪ್ರಯೋಜನನಿಶ್ಚಯದ ಅಪೇಕ್ಷೆ ಇರುವುದಿಲ್ಲ ಎಂಬುದನ್ನು "ನಹಿ ಉಪೇಕ್ಷ-ಣೀಯಂ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಫಲವಿಷಯಕವಾದ ಇಚ್ಛೆಗೂ ಕೂಡ ಪ್ರಯೋ-ಜನಾದಿಗಳ ಅಪೇಕ್ಷೆ ಇರುವುದಿಲ್ಲ ಎಂಬುದನ್ನು "ನಾಪಿ ಸುಖಂ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿ-ದ್ದಾರೆ.

ಉಪೇಕ್ಷಣೀಯವಾದ ತೃಣಾದಿಗಳ ಜ್ಞಾನಕ್ಕೆ ಪ್ರಯೋಜನನಿಶ್ಚಯದ ಅಪೇಕ್ಷೆ ಇಲ್ಲದಿದ್ದರೂ ಕೂಡ ಸಾಧನಾನುಭವಕ್ಕೆ ಪ್ರಯೋಜನನಿಶ್ಚಯದ ಅಪೇಕ್ಷೆಯ ನಿಯಮವಿರುವುದರಿಂದ ಹಿಂದೆ ಹೇಳಿದ ದೋಷವು ಬಂದೇ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ "ನ ಚ ಮುಮುಕ್ಷುಣಾ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ಯಾವುದೇ ಅನುಭವವು ಪ್ರಯೋಜನನಿಶ್ಚಯವನ್ನು ಅಪೇಕ್ಷಿಸುವುದಿಲ್ಲ. ಕಿಂತು ತನಗೆ ಕಾರಣವಾದದ್ದನ್ನಷ್ಟೇ ಅಪೇಕ್ಷಿಸುತ್ತದೆ ಎಂಬಭಿಪ್ರಾಯವನ್ನು ತಿಳಿಯಬೇಕು.

ವಿವರಣೆ – ಅನುಭವ ಎಂದರೆ ಜ್ಞಾನ ಎಂದರ್ಥ. ಜ್ಞಾನವು ಉಂಟಾಗಲು ಅದಕ್ಕೆ ಕಾರಣವಿದ್ದರೆ ಸಾಕು. ಪ್ರಯೋಜನವಿರಬೇಕೆಂಬ ಅನಿವಾರ್ಯತೆ ಇರುವುದಿಲ್ಲ. ಪ್ರಯೋಜನವಿದ್ದರೆ ಮಾತ್ರ ಜ್ಞಾನ-ಬರುತ್ತದೆ ಇಲ್ಲದಿದ್ದರೆ ಇಲ್ಲ ಎಂಬ ಅನುಭವ ಇರುತ್ತದೆ.

## ಸಮಗ್ರ ಶಾಸ್ತ್ರದಲ್ಲಿ ಕಥಂಚಿತ್ ಪ್ರವೃತ್ತಿಯುಂಟಾಗಲು ಸಾಧ್ಯವಿಲ್ಲ

ಯಾದುಪತ್ಯ– ನನ್ವೇವಂ ಪುರುಷಾರ್ಥಸಾಧನೇ ಬ್ರಹ್ಮಜ್ಞಾನೇ ಇಚ್ಛಾಪ್ರಯತ್ನರೂಪ-ಪ್ರವೃತ್ತ್ಯೋರಪಿ ಸ್ವಕಾರಣಾಧೀನತ್ವಸಂಭವೇನ ತದರ್ಥಂ ಸೂತ್ರೇ ಪ್ರಯೋಜನಾದ್ಯಭಿಧಾನಂ ವ್ಯರ್ಥಮಾಪನ್ನಮಿತ್ಯತ ಆಹ – ಪುರುಷಾರ್ಥಸಾಧನೇ ತ್ವಿತಿ ॥ ತಥಾ ಚ ನ ಸ್ವರಸಸಿದ್ಧಾ ಯಥಾಽನುಭವಫಲೇಚ್ಛೇ ಪ್ರಯೋಜನಾನಿಶ್ಚಯೇಽಪಿ ಸ್ವಕಾರಣಾದೇವ ಭವತಸ್ತಥೇತ್ಯರ್ಥಃ।

ನನ್ವೇವಂ ವ್ಯುತ್ಪನ್ನಸ್ಯ ಮುಮುಕ್ಷೋಃ ಪ್ರಥಮಸೂತ್ರ ಇವಾಗ್ರೇಽಪಿ ಪ್ರಯತ್ನಾದ್ಯಭಾವೇಽಪಿ ಕಥಂಚಿತ್ ಶ್ರವಣೇನ ತದರ್ಥಾನುಭವಸಂಭವಾತ್ ತದರ್ಥಕೋಕ್ತರೂಪಪ್ರವೃತ್ತಿಪ್ರಯೋಜಕಂ ಪ್ರಯೋಜನಾದ್ಯಭಿಧಾನಂ ವ್ಯರ್ಥಮಾಪನ್ನಮಿತಿ ಚೇತ್ । ನ । ಆದ್ಯಸೂತ್ರಮಾತ್ರೇ ಕಥಂಚಿತ್ ಶ್ರವಣಸ್ಯೋಕ್ತನ್ಯಾಯೇನ ಸಂಭಾವಿತತ್ವೇಽಪ್ಯಶೇಷಶಾಸ್ತ್ರೇ ತಥಾ ಶ್ರವಣಸಂಭಾವನಾಯಾ ಅನುಭವಬಾಧಿತತ್ವಾತ್ ಮೋಕ್ಷೋಪಯೋಗಿನೋ ವಿಮರ್ಶಸಾಧ್ಯಸ್ಯ ಇದಮಿತ್ಥಮಿತ್ಯೇವ ಅವಧಾರಣರೂಪಶಾಸ್ತ್ರಸಾಧ್ಯಾನುಭವಸ್ಯ ಉಕ್ತರೂಪಪ್ರವೃತ್ತ್ಯಭಾವೇ ಕಥಂಚಿತ್ ಶ್ರವಣಮಾತ್ರೇಣಾಸಂಭವಾಚ್ಚ। ಪ್ರವರ್ತನೀಯ ಇತಿ ॥ ಸಾಧನಗೋಚರೇಚ್ಛಾಪ್ರಯತ್ನವಾನ್ ಕರಣೀಯ ಇತ್ಯರ್ಥಃ।

ಪುರುಷಾರ್ಥಸಾಧನವಾದ ಬ್ರಹ್ಮಜ್ಞಾನದಲ್ಲಿ ಇಚ್ಛಾಪ್ರಯತ್ನರೂಪವಾದ ಪ್ರವೃತ್ತಿಗಳೂ ಕೂಡ ಸ್ವಕಾರಣಾಧೀನವಾಗಿವೆ. ಆಗ ಅದಕ್ಕೋಸ್ಕರ ಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳುವುದು ವ್ಯರ್ಥವಲ್ಲವೇ? ಈ ಪ್ರಶ್ನೆಗೆ "ಪುರುಷಾರ್ಥಸಾಧನೇ ತು" ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಆದ್ದರಿಂದ ಪ್ರವೃತ್ತಿಯು ಸಹಜಸಿದ್ಧವಲ್ಲ. ಯಾವ ರೀತಿಯಾಗಿ ಅನುಭವ ಹಾಗೂ ಫಲೇಚ್ಛೆಗಳು ಪ್ರಯೋಜನಾದಿಗಳ ನಿಶ್ಚಯವಿಲ್ಲದಿದ್ದರೂ ಸ್ವಕಾರಣದಿಂದಲೇ ಪ್ರಾಪ್ತವಾಗುತ್ತವೋ ಅದರಂತೆ ಸಾಧನವಿಷಯಕವಾದ ಪ್ರವೃತ್ತಿಯು ಸ್ವರಸಸಿದ್ಧವಲ್ಲ ಎಂಬುದು "ಪುರುಷಾರ್ಥಸಾಧನೇ ತು" ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

ಪ್ರಶ್ನೆ – ವ್ಯುತ್ಪನ್ನನಾದ ಮುಮುಕ್ಷುವಿಗೆ ಪ್ರಥಮಸೂತ್ರದಲ್ಲಿ ಹೇಗೆ ಘನಗರ್ಜಿತನ್ಯಾಯದಿಂದ ಪ್ರವೃತ್ತಿಯು ಉಂಟಾಗುತ್ತದೋ ಸಮಾನನ್ಯಾಯದಿಂದ ಮುಂದಿನ ಸೂತ್ರಗಳಲ್ಲೂ ಕೂಡ ಯಾವುದೇ ರೀತಿಯಲ್ಲಿ ಪ್ರಯತ್ನವನ್ನು ಮಾಡದಿದ್ದರೂ ಕೂಡ ಪ್ರವೃತ್ತಿಯು ಉಂಟಾಗಲಿ? ಕಥಂಚಿತ್ ಜನ್ಮಾದ್ಯಸ್ಯ ಯತಃ ಇತ್ಯಾದಿ ಸೂತ್ರವನ್ನು ಶ್ರವಣ ಮಾಡುತ್ತಾನೆ. ವ್ಯುತ್ಪನ್ನನಾದ್ದರಿಂದ ತದರ್ಥದ ಅನುಭವವೂ ಕೂಡ ಬರುತ್ತದೆ. ಆಗ ಉತ್ತರಸೂತ್ರಗಳಲ್ಲಿ ಪ್ರವೃತ್ತಿಗೋಸ್ಕರ ಯಾವ ಪ್ರಯೋಜನಾದಿಗಳನ್ನು ಪ್ರಥಮಸೂತ್ರವು ಹೇಳುತ್ತಿದೆಯೋ ಅದೆಲ್ಲವೂ ವ್ಯರ್ಥವಾಗುತ್ತದಲ್ಲವೇ?

ಉತ್ತರ – ಈ ಪ್ರಶ್ನೆ ಅಯುಕ್ತವಾಗಿದೆ. ಮೊದಲನೆಯ ಸೂತ್ರದಲ್ಲಿ ಮಾತ್ರ ಕಥಂಚಿತ್ ಪ್ರವೃತ್ತಿಯನ್ನು ಹೇಳಲು ಸಾಧ್ಯ. ಸಮಗ್ರ ಶಾಸ್ತ್ರದಲ್ಲಿ ಹೀಗೆ ಹೇಳಲು ಸಾಧ್ಯವಿಲ್ಲ. ಅಶೇಷಶಾಸ್ತ್ರದಲ್ಲಿ ಕಥಂಚಿತ್ ಶ್ರವಣವು ಅನುಭವಬಾಧಿತವಾಗಿದೆ. ಏಕೆಂದರೆ, ಮೋಕ್ಷಕ್ಕೆ ಉಪಯೋಗಿಯಾದ ತತ್ವಜ್ಞಾನವು ಇದಮಿತ್ಥಂ ಎಂಬುದಾಗಿ ನಿಶ್ಚಯಾತ್ಮಕವಾಗಿ ಉಂಟಾಗಬೇಕು. ಅದು ಈ ಸಮಗ್ರಶಾಸ್ತ್ರದಿಂದಷ್ಟೇ ಸಾಧ್ಯ-

ವಾಗುತ್ತದೆ. ಹಾಗೆ ನಿಶ್ಚಯಾತ್ಮಕವಾಗಿ ತತ್ವಜ್ಞಾನವುಂಟಾಗಬೇಕಾದರೆ ಆಕಸ್ಮಿಕವಾಗಿ ಕೇಳುವುದರಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಸಾಧನಾನುಭವರೂಪವಾದ ಪ್ರವೃತ್ತಿಯಿಲ್ಲದಿದ್ದರೆ ಕಥಂಚಿತ್ ಶ್ರವಣ-ಮಾತ್ರದಿಂದ ತತ್ವಜ್ಞಾನವು ಪ್ರಾಪ್ತವಾಗುವುದಿಲ್ಲ. "ಪ್ರವರ್ತನೀಯಃ" ಸಾಧನವಿಷಯಕವಾದ ಇಚ್ಛೆ ಹಾಗೂ ಪ್ರಯತ್ನವುಳ್ಳವನಿಂದ ಮಾಡಿಸಲ್ಪಡಬೇಕು ಎಂದರ್ಥ.

## ಉಚ್ಯತೇ ಇತ್ಯಾದಿ ಗ್ರಂಥಕ್ಕೆ ಕೆಲವರ ವ್ಯಾಖ್ಯಾನ

ಯಾದುಪತ್ಯ– ಕೇಚಿತ್ತು – ವಿಮತಾ ಪ್ರವೃತ್ತಿಃ ಪ್ರಯೋಜನಾದಿಜ್ಞಾನಪೂರ್ವಿಕಾ ಪ್ರವೃತ್ತಿ-ತ್ವಾತ್ ಭೋಜನಾದಿಪ್ರವೃತ್ತಿವದಿತಿ ಶಾಸ್ತ್ರವಿಷಯಪ್ರವೃತ್ತೇಃ ಪ್ರಯೋಜನಾದಿಪೂರ್ವಕತ್ವನಿಯ-ಮಾತ್ । ನೈವಮೇವ ಪ್ರವೃತ್ತಿರ್ಯುಕ್ತೇತ್ಯಾಹ – ಉಚ್ಯತ ಚೇತಿ ॥ ಇಚ್ಛಾಪ್ರಯತ್ನಾನುಭವಾನಾ-ಮೇವ ಪ್ರವೃತ್ತಿತ್ವಾತ್ ಸುಖಾದಿವಿಷಯೇಚ್ಛಾನುಭವಯೋಃ ಪ್ರಯೋಜನಾಂತರಾಭಾವಾತ್ ಪ್ರವೃತ್ತಿತ್ವಹೇತೋರ್ವ್ಯಭಿಚಾರ ಇತ್ಯತ ಆಹ – ತ್ರಿವಿಧಾ ಹೀತಿ ॥ ತತ್ರ ತೇಷಾಂ ಮಧ್ಯೇ ಸುಖಾದಿ-ವಿಷಯೇಚ್ಛಾನುಭವಯೋಃ ಪ್ರವೃತ್ತಿಶಬ್ದವಾಚ್ಯತ್ವಾಭಾವಾನ್ನ ವ್ಯಭಿಚಾರ ಇತ್ಯರ್ಥ ಇತ್ಯಾಹುಃ ॥

ಕೆಲವರ ವ್ಯಾಖ್ಯಾನ ಹೀಗಿದೆ – 'ವಿವಾದವಿಷಯವಾದ ಪ್ರವೃತ್ತಿಯು ಪ್ರವೃತ್ತಿಯಾಗಿರು-ವುದರಿಂದ ಪ್ರಯೋಜನಾದಿ ಜ್ಞಾನಪೂರ್ವಕವಾಗಿದೆ. ಭೋಜನಾದಿಗಳ ಪ್ರವೃತ್ತಿಯಂತೆ'. ಹೀಗೆ ಶಾಸ್ತ್ರವಿಷಯಪ್ರವೃತ್ತಿಯಲ್ಲಿ ಪ್ರಯೋಜನಾದಿಪೂರ್ವಕತ್ವದ ನಿಯಮವಿದೆ. ಹೀಗಿರುವಾಗ ಹಾಗೆಯೇ ಸುಮ್ಮನೆ ಪ್ರಥಮಸೂತ್ರದಲ್ಲಿ ಪ್ರವೃತ್ತಿಯಾಗಿದೆ ಎಂದು ಹೇಳಿದ್ದು ಅಯುಕ್ತವಾಗಿದೆ ಎಂಬ ಪ್ರಶ್ನೆಗೆ "ಉಚ್ಯತೇ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಇಚ್ಛಾ, ಪ್ರಯತ್ನ ಹಾಗೂ ಅನುಭವಗಳಷ್ಟೇ ಪ್ರವೃತ್ತಿಯಾಗಿರುವುದರಿಂದ ಸುಖಾದಿ-ವಿಷಯಕವಾದ ಇಚ್ಛೆ ಮತ್ತು ಅನುಭವಗಳಿಗೆ ಬೇರೆ ಪ್ರಯೋಜನವಿಲ್ಲದ ಕಾರಣ ಪ್ರವೃತ್ತಿತ್ವಹೇತುವಿಗೆ ವ್ಯಭಿಚಾರ ಬರುತ್ತದಲ್ಲವೇ? ಈ ಪ್ರಶ್ನೆಗೆ "ತ್ರಿವಿಧಾ ಹಿ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಈ ಮೂರರಲ್ಲಿ ಸುಖಾದಿವಿಷಯಕವಾದ ಇಚ್ಛೆ ಹಾಗೂ ಅನುಭವಗಳು ಪ್ರವೃತ್ತಿಶಬ್ದದಿಂದ ವಾಚ್ಯ-ವಾಗಿರುವುದಿಲ್ಲ. ಆದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು.

ವಿವರಣೆ – ಯಾವುದೇ ಪ್ರವೃತ್ತಿಯಾದರೂ ಕೂಡ ಪ್ರಯೋಜನವನ್ನು ಅಪೇಕ್ಷಿಸಿಯೇ ಇರುತ್ತದೆ. ಭೋಜನಾದಿ ಪ್ರವೃತ್ತಿಗಳಲ್ಲಿ ಹಾಗೆ ಕಂಡಿದೆ. ದ್ವಿತೀಯಾದಿ ಸೂತ್ರಗಳ ಪ್ರವೃತ್ತಿಯಲ್ಲೂ ಕೂಡ

ಪ್ರಯೋಜನಾದಿಗಳ ಅಪೇಕ್ಷೆ ಇರುವುದು ಕಂಡಿದೆ. ಆದರೆ ಪ್ರಥಮಸೂತ್ರದ ಪ್ರವೃತ್ತಿಯಲ್ಲಿ ಪ್ರಯೋಜನಾದ್ಯಪೇಕ್ಷೆಯನ್ನು ಹೇಳಿದರೆ ಅನವಸ್ಥಾದೋಷ ಬರುತ್ತದೆಂದು ಆಕ್ಷೇಪವು ಬರುತ್ತದೆ. ಆದ್ದರಿಂದ ಪ್ರಥಮಸೂತ್ರದಲ್ಲಿ ಹೇಗೆ ಪ್ರವೃತ್ತಿಯಾಗುತ್ತದೆಂಬುದೇ ಈಗ ವಿವಾದವಿಷಯವಾಗಿದೆ. ಇನ್ನು ಪ್ರಥಮಸೂತ್ರದ ಅಧ್ಯಯನದಲ್ಲಿ ಪ್ರಯೋಜನಾದಿಗಳ ಜ್ಞಾನವನ್ನು ಪಡೆದು ಪ್ರವೃತ್ತಿ ಮಾಡಿರುವುದಲ್ಲ. ಪ್ರಯೋಜನಾದಿಗಳ ಜ್ಞಾನವಿಲ್ಲದೇ ಪ್ರವೃತ್ತಿಯನ್ನು ಮಾಡಲಾಗಿದೆ ಎಂದು ಉತ್ತರಿಸಿದರೆ ಅನುಮಾನದ ಮೂಲಕ ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆ – ವಿಮತಾ ಪ್ರವೃತ್ತಿಃ ಪ್ರಯೋಜನಾದಿಜ್ಞಾನಪೂರ್ವಿಕಾ ಪ್ರವೃತ್ತಿತ್ವಾತ್ ಭೋಜನಾದಿಪ್ರವೃತ್ತಿವತ್' 'ಭೋಜನಾದಿ ಪ್ರವೃತ್ತಿಗಳು ಪ್ರವೃತ್ತಿಯಾಗಿವೆ ಮತ್ತು ಪ್ರಯೋಜನಾದಿ ಜ್ಞಾನಪೂರ್ವಕಗಳಾಗಿವೆ. ಅದರಂತೆ ವಿವಾದವಿಷಯೀಭೂತವಾದ ಪ್ರಥಮಸೂತ್ರದಲ್ಲಿ ಮಾಡುವ ಪ್ರವೃತ್ತಿಯೂ ಕೂಡ ಪ್ರವೃತ್ತಿ ಆಗಿರುವುದರಿಂದ ಪ್ರಯೋಜನಾದಿಗಳ ಜ್ಞಾನಪೂರ್ವಕವೇ ಆಗಿರಬೇಕು. ಹೀಗಿರುವಾಗ ಏವಮೇವ ಪ್ರವೃತ್ತಿಃ ಎಂದು ಹೇಗೆ ಉತ್ತರಿಸುತ್ತೀರಿ?

ಈ ಪ್ರಶ್ನೆಗೆ "ಉಚ್ಯತೇ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಸಾಧನಗೋಚರವಾದ ಇಚ್ಛೆ, ಸಾಧನಗೋಚರವಾದ ಪ್ರಯತ್ನಗಳಷ್ಟೇ ಪ್ರವೃತ್ತಿ ಎಂದು ಕರೆಸಿಕೊಳ್ಳುತ್ತವೆ. ಪ್ರಥಮಸೂತ್ರದಿಂದ ಪ್ರಾಪ್ತವಾಗುವ ಸಾಧನತ್ವಪ್ರಕಾರಕವಾದ ಅನುಭವವು ಘನಗರ್ಜಿತನ್ಯಾಯದಿಂದ ಉಂಟಾಗುತ್ತದೆ.

ಇಚ್ಛಾ, ಪ್ರಯತ್ನ ಹಾಗೂ ಅನುಭವ ಈ ಮೂರೂ ಕೂಡ ಪ್ರವೃತ್ತಿಯೇ ಆಗಿವೆ. ಆದರೆ ಸುಖಾದಿವಿಷಯಕವಾದ ಇಚ್ಛೆ ಮತ್ತು ಅನುಭವಗಳಲ್ಲಿ ಪ್ರಯೋಜನಾದಿಜ್ಞಾನಪೂರ್ವಕತ್ವವೆಂಬ ಸಾಧ್ಯವು ಇರುವುದಿಲ್ಲ ಪ್ರವೃತ್ತಿತ್ವ ಎಂಬ ಹೇತುವಷ್ಟೇ ಇದೆ. ಆದ್ದರಿಂದ ವ್ಯಭಿಚಾರವು ಬರುತ್ತದಲ್ಲವೇ?

ಇಷ್ಟಸಾಧನತ್ವಪ್ರಕಾರಕವಾದ ಅನುಭವ ಹಾಗೂ ಉಪೇಕ್ಷಣೀಯವಾದ ತೃಣಾದ್ಯನುಭವಗಳು ಪ್ರವೃತ್ತಿಯೆಂದೇ ಕರೆಸಿಕೊಳ್ಳುವುದಿಲ್ಲ. ಇದೇ ರೀತಿಯಾಗಿ ಫಲಗೋಚರವಾದ ಇಚ್ಛೆಯೂ ಕೂಡ ಪ್ರವೃತ್ತಿಎಂದು ಕರೆಸಿಕೊಳ್ಳುವುದಿಲ್ಲ. ಸಾಧನಗೋಚರವಾದ ಇಚ್ಛೆ ಹಾಗೂ ಪ್ರಯತ್ನಗಳೆರಡು ಮಾತ್ರ ಪ್ರವೃತ್ತಿ ಎಂದು ಕರೆಸಿಕೊಳ್ಳುತ್ತವೆ. ಆದ್ದರಿಂದ ಸಾಧನಗೋಚರವಾದ ಅನುಭವ ಹಾಗೂ ಫಲಗೋಚರವಾದ ಇಚ್ಛೆಗಳಿಗೆ ಪ್ರಯೋಜನಜ್ಞಾನಪೂರ್ವಕತ್ವವು ಅನಾವಶ್ಯಕವಾಗಿದೆ. ಆದ್ದರಿಂದ ಹೇತುವೇ ಇಲ್ಲದ ಕಾರಣ ವ್ಯಭಿಚಾರದೋಷವು ಬರುವುದಿಲ್ಲ.

ಹೀಗೆ ಕೆಲವರು ಮಾಡುವ ವ್ಯಾಖ್ಯಾನವನ್ನು ಯಾದುಪತ್ಯದಲ್ಲಿ "ಇತ್ಯಾಹುಃ" ಎಂಬುದಾಗಿ ಉಲ್ಲೇಖಿಸಿದ್ದಾರೆ.

# ಸುಧಾ-ಪರಿಮಳಸಾರ

ಹೀಗೆ ಬೇರೆ ಬೇರೆ ಕಾರಣಗಳಿಂದ ಈ ಶಾಸ್ತ್ರವು ವ್ಯಾಖ್ಯೇಯವೇ ಅಲ್ಲ ಎನ್ನುವ ಆಕ್ಷೇಪ ಮಾಡಿದಾಗ ಆ ಎಲ್ಲಾ ಆಕ್ಷೇಪಗಳಿಗೂ ಸಮಾಧಾನವನ್ನು ಹೇಳಿರುವುದರಿಂದ ಶಾಸ್ತ್ರವು ವ್ಯಾಖ್ಯೇಯ ಎಂದು ಸಿದ್ಧವಾಯಿತು. ವ್ಯಾಖ್ಯಾನಯೋಗ್ಯವಾಗಿದ್ದರೂ ಕೂಡ ಈ ಸೂತ್ರಗ್ರಂಥವು ಆರಂಭಣೀಯವೇ ಅಲ್ಲ ಎನ್ನುವ ಶಂಕೆ ಬರಬಹುದು. ಏಕೆಂದರೆ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧರೂಪವಾದ ಅನುಬಂಧಚತುಷ್ಟಯವಿದ್ದರೆ ಮಾತ್ರ ಆ ಗ್ರಂಥ ಆರಂಭಣೀಯ. ಅಂದರೆ ಪ್ರಜ್ಞಾವಂತರಿಂದ ಸ್ವೀಕಾರಾರ್ಹವಾಗುತ್ತದೆ. ಅದಕ್ಕಾಗಿ ಪ್ರೇಕ್ಷಾವಂತರು ಈ ಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕೋಸ್ಕರ ಆರಂಭಣೀಯತ್ವವನ್ನು ಸಮರ್ಥನೆ ಮಾಡಲು ವಿಷಯಪ್ರಯೋಜನಾದಿಗಳನ್ನು ತಿಳಿಸಬೇಕು. ಮೊದಲಸೂತ್ರ ವಿಷಯಾದಿಗಳನ್ನು ಪ್ರತಿಪಾದನೆ ಮಾಡುತ್ತದೆ. ಆದುದರಿಂದ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎನ್ನುವ ಮೊದಲ ಸೂತ್ರದ ವ್ಯಾಖ್ಯಾನವನ್ನು ಓತತ್ವವಾಚೀ ಹ್ಯೋಂಕಾರಃ ಎಂಬ ಅನು-ವ್ಯಾಖ್ಯಾನಮೂಲದಲ್ಲಿ ಮಾಡುತ್ತಿದ್ದಾರೆ.

ಪ್ರಯೋಜನಾದಿಗಳನ್ನು ತಿಳಿದರೆ ಮಾತ್ರ ಪ್ರವೃತ್ತಿ ಆಗುತ್ತದೆ ಎಂದು ಹೇಳಿದರೆ ಆ ಪ್ರಯೋಜನಾದಿಗಳ ಜ್ಞಾನ ಬೇರೆ ಪ್ರಮಾಣದಿಂದಲೋ ಅಥವಾ ಈ ಶಾಸ್ತ್ರದಿಂದಲೋ ಅಥವಾ ಮೊದಲ ಸೂತ್ರದಿಂದಲೋ ಎಂಬ ಪ್ರಶ್ನೆ ಬರುತ್ತದೆ. ಬೇರೆ ಪ್ರಮಾಣದಿಂದ ಈ ಶಾಸ್ತ್ರದಲ್ಲಿ ಪ್ರವೃತ್ತಿ ಆಗುವ ಮೊದಲೇ ಪ್ರಯೋಜನಾದಿಗಳ ಜ್ಞಾನ ಬಂದಿದೆ ಎಂದು ಹೇಳಿದರೆ ಆಗ ಈ ಶಾಸ್ತ್ರದಲ್ಲಿ ಪ್ರಯೋಜನಾದಿಗಳನ್ನು ನಿರೂಪಣೆ ಮಾಡುವುದು ವ್ಯರ್ಥ. ಏಕೆಂದರೆ ಪ್ರಮಾಣಾಂತರಸಿದ್ಧವಾದುದನ್ನು ಉಪದೇಶ ಮಾಡುವ ಅಗತ್ಯವಿರುವುದಿಲ್ಲ. ಈ ಶಾಸ್ತ್ರದಿಂದಲೇ ಪ್ರಯೋ-ಜನಾದಿಗಳ ಜ್ಞಾನ ಬರುವುದು. ಆದುದರಿಂದ ಅವುಗಳ ನಿರೂಪಣೆ ಇಲ್ಲಿ ವ್ಯರ್ಥ ಅಲ್ಲ ಅನ್ನುವುದು ಸರಿಯಲ್ಲ. ಏಕೆಂದರೆ ಶಾಸ್ತ್ರದಲ್ಲಿ ಪ್ರವೃತ್ತನಾದ ಮೇಲೆ ಇಲ್ಲಿ ಹೇಳಿದ ಪ್ರಯೋಜನಾದಿಗಳ ಜ್ಞಾನ ಬರುವುದು. ಪ್ರಯೋ-ಜನಾದಿಗಳ ನಿಶ್ಚಯ ಆದ ಮೇಲೆ ಪ್ರವೃತ್ತಿ ಆಗುವುದು. ಹೀಗೆ ಪ್ರವೃತ್ತಿಗೆ ಪ್ರಯೋಜನಜ್ಞಾನ ಕಾರಣ. ಪ್ರಯೋಜನ-ಜ್ಞಾನಕ್ಕೆ ಪ್ರವೃತ್ತಿ ಕಾರಣ. ಆದುದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದಕ್ಕೆ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದು, ಆದುದರಿಂದ ಪ್ರಥಮಸೂತ್ರದಿಂದ ಪ್ರಯೋಜನಾದಿಗಳನ್ನು ತಿಳಿದು ಮುಂದೆ ಸಕಲಶಾಸ್ತ್ರದಲ್ಲಿ ಪ್ರವೃತ್ತನಾಗುತ್ತಾನೆ ಎಂಬ ಸಮಾಧಾನ ಹೇಳಬಹುದು. ಆದರೆ ಈ ಉತ್ತರವೂ ಸರಿಯಾಗಲಾರದು. ಏಕೆಂದರೆ ಪ್ರಥಮಸೂತ್ರದಲ್ಲಿಯಾದರೂ ಹೇಗೆ ಪ್ರವೃತ್ತಿ ಎಂಬ ಪ್ರಶ್ನೆ ಬಂದೇ ಬರುತ್ತದೆ. ಅಲ್ಲಿ ಪ್ರವೃತ್ತಿಗಾಗಿ ಯಾವುದಕ್ಕೋ ಬೇರೊಂದು ಪ್ರಯೋಜನಾದಿಗಳನ್ನು ಹೇಳುವ ವಾಕ್ಯ ಒಪ್ಪಿದರೆ ಅಲ್ಲಿ ಪ್ರವೃತ್ತಿಗಾಗಿ ಮತ್ತೊಂದು, ಅದಕ್ಕೆ ಮತ್ತೊಂದು ಎಂದು ಅನವಸ್ಥಾ ಬರುತ್ತದೆ. ಪ್ರಯೋಜನಾದ್ಯನುಸಂಧಾನವಿಲ್ಲದೇ ಸುಮ್ಮನೆ ಮೊದಲ ಸೂತ್ರದಲ್ಲಿ ಪ್ರವೃತ್ತಿ ಎಂದು ಹೇಳಿದರೆ ಸಕಲಶಾಸ್ತ್ರದಲ್ಲಿಯೂ ಪ್ರಯೋಜನಾದ್ಯನುಸಂಧಾನವಿಲ್ಲದೇನೇ ಪ್ರವೃತ್ತಿ ಆಗುತ್ತದೆ ಎಂದು ಹೇಳಲು ಬರುವುದರಿಂದ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳ ನಿರೂಪಣೆ ವ್ಯರ್ಥ ಎಂದು ಪೂರ್ವಪಕ್ಷ.

ಪ್ರಥಮಸೂತ್ರದಲ್ಲಿ ಪ್ರವೃತ್ತಿ ಆಗಬೇಕಾದರೂ ಪ್ರಯೋಜನಾದಿಗಳ ಅನುಸಂಧಾನ ಬೇಕೇ ಬೇಕು. ಆದರೆ ಪ್ರವೃತ್ತಿ ಎಂದರೆ ಏನು ಎಂದು ವಿಚಾರ ಮಾಡಬೇಕು. ಮನುಷ್ಯನ ಚಿತ್ತವೃತ್ತಿ ಮೂರು ವಿಧ. ಒಂದು ಅನುಭವ, ಮತ್ತೊಂದು ಇಚ್ಛೆ, ಮತ್ತೊಂದು ಪ್ರಯತ್ನ. ಇವುಗಳಲ್ಲಿ ಸಾಧನ ಮತ್ತು ಫಲವಿಷಯಕ ಎಂದು ಪ್ರತ್ಯೇಕ ಎರಡು ವಿಧ. ಇವುಗಳಲ್ಲಿ ಎಲ್ಲವನ್ನೂ ಪ್ರವೃತ್ತಿ ಎಂದು ಕರೆಯುವುದಿಲ್ಲ. ಸಾಧನವಿಷಯಕ ಇಚ್ಛೆ ಮತ್ತು ಸಾಧನವಿಷಯಕ ಯತ್ನ ಮಾತ್ರ ಪ್ರವೃತ್ತಿ. ಹೀಗಾಗಿ ಇವುಗಳಿಗೆ ಮಾತ್ರ ಪ್ರಯೋಜನದ ಅಪೇಕ್ಷೆ ಇದೆ. ಆದರೆ ಅನುಭವವಾಗಲೀ ಅಥವಾ ಫಲವಿಷಯಕ ಇಚ್ಛೆಯಾಗಲೀ ಪ್ರವೃತ್ತಿಯಲ್ಲ. ಆದ್ದರಿಂದ ಇವುಗಳಿಗೆ ಪ್ರಯೋಜನದ ಅಪೇಕ್ಷೆ ಇಲ್ಲ. ಏಕೆಂದರೆ ಉದಾಸೀನವಸ್ತು ಇರುತ್ತದೆ. ಅದರಿಂದ ಯಾವ ಪ್ರಯೋಜನವಿಲ್ಲದಿದ್ದರೂ ಅದರ ಜ್ಞಾನ ಬಂದೇ ಬರುತ್ತದೆ. ಪ್ರಯೋಜನದ ಅಪೇಕ್ಷೆ ಇದ್ದರೆ ಮಾತ್ರ ಜ್ಞಾನ ಬರುವುದಾದರೆ ಉದಾಸೀನದ ಜ್ಞಾನ ಬಾರದಿರಬೇಕಿತ್ತು. ಅದರಂತೆ ಸುಖದ ಇಚ್ಛೆ ಪ್ರತಿಯೊಬ್ಬರಿಗೂ ಇದೆ. ಆದರೆ ಸುಖಕ್ಕೆ ಮತ್ತೊಂದು ಪ್ರಯೋಜನವಿಲ್ಲ. ಆದುದರಿಂದ ಪ್ರಯೋಜನಾಂತರ ಅಪೇಕ್ಷೆ ಇಲ್ಲದಿದ್ದರೂ ಸುಖವನ್ನು ಬಯಸುತ್ತಾರೆ. ಹೀಗಾಗಿ ಫಲೇಚ್ಛೆಗೆ ಯಾವುದೇ ಫಲಾಪೇಕ್ಷೆ ಇಲ್ಲ. ಇಲ್ಲೊಂದು ಶಂಕೆ ಬರಬಹುದು. ಉದಾಸೀನದ ಜ್ಞಾನ ಬರಲು ಫಲಾಪೇಕ್ಷೆ ಇಲ್ಲದಿದ್ದರೂ ಸಾಧನದ ಜ್ಞಾನ ಬರಲು ಫಲಾಪೇಕ್ಷೆ ಇದ್ದೇ ಇದೆ. ಆದರೆ ಇದು ಸರಿಯಲ್ಲ. ಏಕೆಂದರೆ, ಸ್ವರ್ಗವನ್ನು ಕುರಿತು ಯಾಗವು ಸಾಧನ ಎಂಬ ಅನುಭವ ವ್ಯುತ್ಪನ್ನನಾದ ಮುಮುಕ್ಷುವಿಗೂ ಬರುತ್ತದೆ. ಆದರೆ ಅವನು ಮುಮುಕ್ಷು. ಹೀಗಾಗಿ ಅವನಿಗೆ ಸ್ವರ್ಗರೂಪಫಲದ ಅಪೇಕ್ಷೆ ಇಲ್ಲ. ಹಾಗಿದ್ದರೂ ಅನುಭವ ಬಂದೇ ಬರುತ್ತದೆ. ಆದುದರಿಂದ ಅನುಭವಸಾಮಾನ್ಯಕ್ಕೆ ಫಲಾಪೇಕ್ಷೆ ಇಲ್ಲ. ಆದರೆ ಪುರುಷಾರ್ಥಸಾಧಕವಾದದ್ದು ಬ್ರಹ್ಮಜ್ಞಾನ. ಇದರಲ್ಲಿ ಇಚ್ಛೆ ಬರಬೇಕಾದರೆ, ಅಥವಾ ಪ್ರಯತ್ನ ಪಡಬೇಕಾದರೆ ಪ್ರಯೋಜನದ ಅನುಸಂಧಾನ ಬೇಕೇ ಬೇಕು. ಯಾಕೆಂದರೆ ಯಾರೂ ಕೂಡ ಊಟವು ಹಸಿವು ನಿವಾರಕ ಎಂಬ ಪ್ರಯೋಜನದ ಜ್ಞಾನವಿಲ್ಲದೇ ಊಟದಲ್ಲಿ ಪ್ರವೃತ್ತಿ ಮಾಡಲಾರರು. ಆದುದರಿಂದ ಯಾರನ್ನಾದರೂ ಎಲ್ಲಿಯಾದರೂ ಪ್ರವೃತ್ತಿಗೊಳಿಸಬೇಕು ಎಂದರೆ ಪ್ರಯೋಜನಾದಿಗಳನ್ನು ತೋರಿಸಿಯೇ ಪ್ರವರ್ತಿಸಬೇಕು. ಆದುದರಿಂದ ಪ್ರಥಮಸೂತ್ರದಲ್ಲಿ ಪ್ರಯೋಜನಾದಿನಿರೂಪಣೆ ಸಾರ್ಥಕ. ಪ್ರಥಮಸೂತ್ರದಲ್ಲಿ ಪ್ರವೃತ್ತಿ ಮಾಡಲು ಪ್ರಯೋಜನಾದಿಗಳ ಅನುಸಂಧಾನ ಬೇಕು. ಅದು "ಪ್ರಥಮಸೂತ್ರಂ ಪ್ರಯೋಜನವತ್" ಎಂಬ ಅಭಿಯುಕ್ತವಾಕ್ಯದಿಂದ ಬರುತ್ತದೆ. ಅಲ್ಲಿ ಪ್ರವೃತ್ತಿ ಮಾಡುವುದೇ ಇಲ್ಲ. ಹೊರತು ಕೇವಲ ಅನುಭವವಷ್ಟೇ ಆ ವಾಕ್ಯದಿಂದ ಬಂದಿದ್ದು. ಆದುದರಿಂದ ಅನವಸ್ಥಾದೋಷವೂ ಬರುವುದಿಲ್ಲ.

## ಪ್ರಥಮಸೂತ್ರಕ್ಕೆ ಆರಂಭಣೀಯತ್ವಸಮರ್ಥನೆ

**ಶ್ರೀಮನ್ನ್ಯಾಯಸುಧಾ – ಉಕ್ತಂ ಚ ಪ್ರಯೋಜನಾದಿಕಂ ಶ್ರೋತಾ ಕಥಂ ಶ್ರದ್ದಧೀತಾಶ್ರದ್ದಧಾನಶ್ಚ ಕಥಂ ಪ್ರವರ್ತತೇತಿ ಪುನರವಶಿಷ್ಯತೇ ।**

ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಪ್ರಯೋಜನಾದಿಗಳಲ್ಲಿ ಶ್ರೋತೃವಾದವನು ಹೇಗೆ ಶ್ರದ್ಧೆಯನ್ನು ಮಾಡಬೇಕು? ಆದರಲ್ಲಿ ಹೇಳಿದ ವಿಷಯದ ಬಗ್ಗೆ ಶ್ರದ್ಧೆಯು ಇಲ್ಲದಿದ್ದರೆ ಅವನಿಗೆ ಶಾಸ್ತ್ರದಲ್ಲಿ ಪ್ರವೃತ್ತಿಯು ಹೇಗೆ ಉಂಟಾಗುತ್ತದೆ? ಈ ಪ್ರಶ್ನೆಗಳು ಹಾಗೇ ಉಳಿದವು. ಪರಿಹಾರವಾಗಲೇ ಇಲ್ಲವಲ್ಲ?

**ತತ್ರೈಕೇ ಸಮಾಧಾನಮಾಹುಃ । ಅವಗತಸೂತ್ರಕಾರಾಪ್ತಭಾವಸ್ತಾವತ್ತದ್ವಚನಾ-ದೇವ ಶ್ರದ್ಧಾಸ್ಯತಿ । ಯದ್ಯಪಿ ಆಪ್ತತ್ವಾವಧಾರಣೇ ಪ್ರಯೋಜನಾದ್ಯಭಿಧಾನೇಽಪಿ ತತ್ಸಾಮಾನ್ಯನಿಶ್ಚಯೋ ಭವತ್ಯೇವ, 'ಪ್ರಯೋಜನಾದಿಮದಿದಂ ಶಾಸ್ತ್ರಮ್ ಆಪ್ತೋಕ್ತತ್ವಾತ್' ಇತಿ ।**

ಕೆಲವರು ಹೀಗೆ ಉತ್ತರವನ್ನು ನೀಡುತ್ತಾರೆ – ಸೂತ್ರಕಾರರು ಆಪ್ತರಾಗಿದ್ದಾರೆಂದು ನಂಬಿ ಅವರ ಮಾತಿನಲ್ಲಿ ಶ್ರದ್ಧೆಯನ್ನು ಹೊಂದುತ್ತಾನೆ. ಸೂತ್ರಕಾರರಲ್ಲಿ ಆಪ್ತತ್ವವು ನಿಶ್ಚಯ-ವಾದ ಮೇಲೆ ಆ ಸೂತ್ರಕಾರರು ಪ್ರಯೋಜನಾದಿಗಳನ್ನು ಹೇಳದೇ ಇದ್ದರೂ ಕೂಡ ಆ ಪ್ರಯೋಜನಾದಿಗಳ ವಿಷಯದಲ್ಲಿ ಸಾಮಾನ್ಯವಾಗಿ ನಿಶ್ಚಯಜ್ಞಾನವು ಬಂದೇ ಬರುತ್ತದೆ. ಏಕೆಂದರೆ ಶಾಸ್ತ್ರವು ಆಪ್ತೋಕ್ತವಾಗಿರುವುದರಿಂದ ಪ್ರಯೋಜನಾದಿಗಳನ್ನು ಹೊಂದಿಯೇ ಇರುತ್ತದೆಂದು ಸುಲಭವಾಗಿ ಜಿಜ್ಞಾಸುವು ಊಹಿಸುತ್ತಾನೆ.

**ತಥಾಽಪಿ ನಾಸೌ ಪ್ರವೃತ್ತ್ಯಂಗಮ್ । ನ ಹಿ 'ಪ್ರಯೋಜನಾದಿಮತ್' ಇತ್ಯೇವ ಪ್ರವರ್ತತೇ । ಕಿಂ ನಾಮಾಸ್ಮದಭಿಮತಪ್ರಯೋಜನಾದಿಮತ್ ಇತಿ । ಸ ಚ ಪ್ರಯೋಜನಾದಿವಿಶೇಷೋ ವಚನಾದೇವಾವಸೀಯತ ಇತಿ ಸಾರ್ಥಕಂ ತದಭಿ-ಧಾನಮ್ । ಆಪ್ತತ್ವಾನಿಶ್ಚಯೇಽಪ್ಯರ್ಥಸಂದೇಹಾದೇವ ಕೃಷ್ಯಾದಾವಿವ ಪ್ರವೃತ್ತ್ಯುಪಪತ್ತಿಃ ।**

ಆದರೂ ಕೂಡ ಈ ಸಾಮಾನ್ಯವಾದ ಜ್ಞಾನವು ಪ್ರವೃತ್ತಿಗೆ ಅಂಗವಲ್ಲ. ಏಕೆಂದರೆ

ಪ್ರಯೋಜನಾದಿಗಳು ಇದ್ದ ಮಾತ್ರಕ್ಕೆ ಯಾರೊಬ್ಬನೂ ಕೂಡ ಪ್ರವೃತ್ತಿಯನ್ನು ಮಾಡಲಾರ. ಮತ್ತೇನೆಂದರೆ 'ನಮಗೆ ಅಭಿಮತವಾದ ಪ್ರಯೋಜನವು ಈ ಶಾಸ್ತ್ರದಿಂದ ದೊರಕುತ್ತದೆ' ಎಂಬ ನಿಶ್ಚಯಜ್ಞಾನವೇ ಪ್ರವೃತ್ತಿಗೆ ಕಾರಣವಾಗುತ್ತದೆ. ಹೀಗೆ ಪ್ರಯೋಜನವಿಶೇಷಜ್ಞಾನವು ವಚನದಿಂದಲೇ ಬರುತ್ತದೆ. ಆದ್ದರಿಂದ ಸೂತ್ರಕಾರರು ಪ್ರಯೋಜನಾದಿಗಳನ್ನು ಪ್ರಥಮ-ಸೂತ್ರದಲ್ಲಿ ಹೇಳಿದ್ದು ಅತ್ಯಂತ ಸಾರ್ಥಕವಾಗಿರುತ್ತದೆ. ಆಪ್ತತ್ವನಿಶ್ಚಯವಿಲ್ಲದಿದ್ದರೂ ಕೂಡ ಅರ್ಥಸಂದೇಹದಿಂದಲೂ ಕೃಷಿ ಮೊದಲಾದವುಗಳಲ್ಲಿ ಪ್ರವೃತ್ತಿಯಾಗುವಂತೆ ಪ್ರವೃತ್ತಿಯು ಉಂಟಾಗುತ್ತದೆ.

**ನನು ಸಂದೇಹಃ ಪ್ರಯೋಜನಾದ್ಯವಚನೇಽಪಿ ಸಾಧಕಬಾಧಕಪ್ರಮಾಣಾಭಾವೇ ಸತಿ ಸುಲಭ ಏವ । ವಿಶೇಷಸ್ಮೃತಿಶ್ಚ ತದರ್ಥಿತ್ವವಿಶೇಷಾದ್ ಭವಿಷ್ಯತಿ ।**

ಈ ಪ್ರಯೋಜನದ ಸಂದೇಹವು ಪ್ರಯೋಜನಾದಿಗಳನ್ನು ಹೇಳದಿದ್ದರೂ ಕೂಡ ಸಾಧಕವಾದ ಮತ್ತು ಬಾಧಕವಾದ ಪ್ರಮಾಣಗಳು ಇಲ್ಲದಿದ್ದರೆ ಬಂದೇ ಬರುತ್ತದೆ. ಮೋಕ್ಷ-ವನ್ನು ಕುರಿತು ಉತ್ಕಟವಾದ ಅಪೇಕ್ಷೆ ಇರುವುದರಿಂದ ವಿಶೇಷಸ್ಮರಣೆಯೂ ಕೂಡ ಬರು-ತ್ತದೆ.

**ಮೈವಮ್ । ಯೋ ಹಿ ಯದ್ವಚನಾತ್ ಪ್ರವರ್ತತೇ ಸ ತದ್ವಚನಾದೇವ ವಿಶೇಷ-ಸ್ಮೃತಿಮಪೇಕ್ಷತೇ । ನ ತು ಸ್ವಾತಂತ್ರ್ಯೇಣ । ನ ಹಿ ರೋಗಾರ್ತೋ 'ಮಮೇದಂ ರೋಗನಿವೃತ್ತಿಸಾಧನಂ ನ ವಾ' ಇತಿ ಯತ್ರ ತತ್ರೋಚ್ಛೃಂಖಲಃ ಸ್ವಯಂ ಉತ್ಪ್ರೇಕ್ಷ್ಯ ಪ್ರವರ್ತತೇ । ಕಿಂ ನಾಮ ಅನವಧೃತಾಪ್ತಭಾವಸ್ಯಾಪಿ ವೈದ್ಯಸ್ಯೈವ ವಚನಾತ್ । ಅನ್ಯಥಾ ಸ್ವಯಂ ಪ್ರಯೋಜನಾಭಿಧಾನಮನಧಿಗಚ್ಛನ್ನನರ್ಥ-ಮಪ್ಯಾಶಂಕೇತ ।**

ಈ ಪ್ರಶ್ನೆಯು ತಪ್ಪು. ಏಕೆಂದರೆ ಯಾರೂ ಯಾವ ವ್ಯಕ್ತಿಯ ವಚನಪ್ರಮಾಣದಿಂದ

ಪ್ರವೃತ್ತಿಯನ್ನು ಮಾಡುತ್ತಾನೋ ಅವನು ಆ ವ್ಯಕ್ತಿಯ ವಚನದಿಂದಲೇ ಪ್ರಯೋಜನಾದಿಗಳ ಬಗ್ಗೆ ವಿಶೇಷಸ್ಮರಣೆಯನ್ನು ಅಪೇಕ್ಷಿಸುತ್ತಾನೆ. ಇದನ್ನು ಬಿಟ್ಟು ಸ್ವತಂತ್ರವಾಗಿ ಪ್ರಯೋಜ-ನಾದಿಗಳ ವಿಶೇಷಸ್ಮೃತಿಯನ್ನು ಅಪೇಕ್ಷಿಸುವುದಿಲ್ಲ. ಏಕೆಂದರೆ ರೋಗದಿಂದ ಬಳಲಿದವನು ಇದು ನನಗೆ ರೋಗವನ್ನು ಪರಿಹರಿಸುತ್ತದೋ ಇಲ್ಲವೋ ಎಂಬ ಸಂಶಯದಿಂದ ಔಷಧಿ ಯನ್ನು ತೆಗೆದುಕೊಳ್ಳಲು ಪ್ರವೃತ್ತಿಯನ್ನು ಮಾಡುವುದಿಲ್ಲ. ತಾನೇ ಊಹಿಸಿಕೊಂಡು ಸ್ವೀಕರಿಸುವುದಿಲ್ಲ. ಆದರೆ ಆಪ್ತತ್ವನಿಶ್ಚಯವಿಲ್ಲದಿದ್ದರೂ ವೈದ್ಯನ ಮಾತಿನಿಂದಲೇ ಔಷಧಿ ಯನ್ನು ತೆಗೆದುಕೊಳ್ಳಲು ಪ್ರವೃತ್ತಿಯನ್ನು ಮಾಡುತ್ತಾನೆ. ಇಲ್ಲದಿದ್ದರೆ ಸ್ವತಃ ಪ್ರಯೋಜನಾ-ಭಿಧಾನವನ್ನು ತಿಳಿಯದೇ ಅನರ್ಥವನ್ನು ಕೂಡ ಆಶಂಕಿಸಬಹುದು.

**ಕಿಂ ನಿಷ್ಪ್ರಯೋಜನಮಿದಂ ಕಾಕದಂತಪರೀಕ್ಷಾಗ್ರಂಥವತ್ ಉತಾಶಕ್ಯಸಾಧನ-ಪ್ರಯೋಜನಂ ಮೃತಿಹರಹಿಮಮಹೀಧರೋತ್ತರಸಾನುಸಿದ್ಧಸಂಜೀವಿನೀಕಥನ-ವತ್ । ಉತ ಮದನಭಿಮತಪ್ರಯೋಜನಮ್ ಆರ್ಯಾವರ್ತವಾಸಿನಂ ಪ್ರತಿ ದಾಕ್ಷಿಣಾತ್ಯಸ್ಯ ಮಾತುಲಕನ್ಯಾಪರಿಣಯನಪ್ರಕಾರೋಪದೇಶವತ್ । ಅಥವಾ ಅಭಿಮತಸ್ಯಾಪಿ ಪ್ರಯೋಜನಸ್ಯ ಸತ್ಯಪಿ ಲಘೀಯಸ್ಯುಪಾಯಾಂತರೇ ಗರೀಯಾನಯಮುಪಾಯಃ । ಪಿಪಾಸುಂ ಪ್ರತಿ ಗೀರ್ವಾಣತರಂಗಿಣೀ-ಸಮೀಪಕೂಪಖನನೋಪದೇಶವತ್ ಇತ್ಯಾದಿ ।**

(೧) ಕಾಕದಂತಾಪರೀಕ್ಷಾಗ್ರಂಥದಂತೆ ನಿಷ್ಪ್ರಯೋಜಕವೆಂದು ಅಭಿಪ್ರಾಯವೋ?

(೨) ಅಥವಾ 'ಹಿಮಾಲಯದ ತುತ್ತತುದಿಯಲ್ಲಿರುವ ಸಂಜೀವಿನಿಯು ಮರಣವನ್ನು ಪರಿಹರಿಸುವ ಔಷಧವಾಗಿದೆ' ಎಂಬ ಉಪದೇಶದಂತೆ ಈ ಶಾಸ್ತ್ರವು ಅಶಕ್ಯವಾದ ಸಾಧನೆ-ಯುಳ್ಳ ಪ್ರಯೋಜನವುಳ್ಳದ್ದೋ ?

(೩) ಅಥವಾ ಆರ್ಯಾವರ್ತದಲ್ಲಿರುವ ವ್ಯಕ್ತಿಗೆ ದಾಕ್ಷಿಣಾತ್ಯನು 'ಸೋದರಮಾವನ

ಮಗಳನ್ನು ವಿವಾಹಮಾಡಿಕೊಳ್ಳಬಹುದು' ಎಂಬ ವಿವಾಹಕ್ರಮವನ್ನು ಉಪದೇಶಿಸದಂತೆ ಅನಪೇಕ್ಷಿತವಾದ ಪ್ರಯೋಜನವನ್ನು ಈ ಶಾಸ್ತ್ರವು ತಿಳಿಸುತ್ತದೋ?

(೪) ಅಥವಾ 'ಅಭಿಮತವಾದ ಪ್ರಯೋಜನಕ್ಕೆ ಲಘುಭೂತವಾದ ಉಪಾಯವಿದ್ದಾಗ ಗುರುಭೂತವಾದ ಉಪಾಯವನ್ನು ಹೇಳುತ್ತಿದೆ. ಬಾಯಾರಿದವನಿಗೆ ಗಂಗೆಯ ಸಮೀಪ-ದಲ್ಲಿ ಬಾವಿಯನ್ನು ತೆಗೆದು ನೀರನ್ನು ಕುಡಿ ಎಂಬ ಉಪದೇಶದಂತೆ ಗುರುತರ ಉಪಾಯ-ವನ್ನು ಹೇಳುವುದಕ್ಕಾಗಿ ಈ ಶಾಸ್ತ್ರವು ಹೊರಟಿದೆಯೋ?

**ಏತಾಸು ಚಾನರ್ಥಸಂಭಾವನಾಸು ನ ಪ್ರವರ್ತೇತ । ನ ಚ ಪ್ರಯೋಜನಾದ್ಯ-ಭಿಧಾನೇಽಪ್ಯೇತಾಸಾಮವಕಾಶಃ । ಲೋಕವ್ಯವಹಾರೋಚ್ಛೇದಪ್ರಸಂಗಾತ್ । ನ ಹಿ ಕಶ್ಚಿದ್ ವೈದ್ಯವಚನಾದಾವೇವಮಾಶಂಕ್ಯ ನಿವರ್ತತೇ । ತಸ್ಮಾದುಪಪನ್ನಮು-ಭಯಥಾಽಪಿ ಪ್ರಯೋಜನಾದ್ಯಭಿಧಾನಮಿತಿ ।**

ಹೀಗೆ ಅನೇಕ ಅನರ್ಥಸಂಶಯಗಳು ಮನಸ್ಸಿನಲ್ಲಿ ಮೂಡಿದಾಗ ಜಿಜ್ಞಾಸುವು ಪ್ರವೃತ್ತಿಯನ್ನೇ ಮಾಡುವುದಿಲ್ಲ. ಪ್ರಯೋಜನ ಮೊದಲಾದವುಗಳನ್ನು ಹೇಳಿದರೆ ಈ ಅನರ್ಥಸಂಶಯಗಳು ಬರಲು ಅವಕಾಶವೇ ಇರುವುದಿಲ್ಲ. ಹಾಗೇನಾದರೂ ಕಾರಣ-ವಿಲ್ಲದೇ ಅನರ್ಥಸಂಶಯಗಳು ಬರುವುದಾದರೆ ಲೋಕದಲ್ಲಿ ವ್ಯವಹಾರವೇ ನಿಂತು-ಹೋಗುವ ಪ್ರಸಂಗ ಬರುತ್ತದೆ.

ವೈದ್ಯನು ರೋಗಿಗೆ ಹೇಳುವ ಮಾತುಗಳಲ್ಲಿ ಅನೇಕ ಅನರ್ಥಸಂಶಯಗಳನ್ನು ತಾಳಿ ಯಾರಾದರೂ ಔಷಧಿಯ ಸ್ವೀಕಾರದಿಂದ ನಿವೃತ್ತರಾಗುತ್ತಾರೇನು? ಯಾರೂ ಕೂಡ ನಿವೃತ್ತರಾಗುವುದಿಲ್ಲ.

ಆದ್ದರಿಂದ ಎರಡು ರೀತಿಯಿಂದಲೂ ಪ್ರಯೋಜನಾದಿಗಳ ನಿರೂಪಣೆಯು ಅರ್ಥ-ಪೂರ್ಣವಾಗಿದೆ.

## ಜಿಜ್ಞಾಸುವಿಗೆ ಪ್ರಥಮಸೂತ್ರಾರ್ಥದಲ್ಲಿ ಶ್ರದ್ಧೆ ಬರುತ್ತದೆಯೇ?

**ಪರಿಮಳ – ಪ್ರಯೋಜನಾದ್ಯಭಿಧಾನಸ್ಯ ಅರ್ಥವತ್ತ್ವಮಂಗೀಕೃತ್ಯಾಪಿ ಪ್ರವೃತ್ತ್ಯಸಂಭವಂ ಶಂಕತೇ – ಉಕ್ತಂ ಚೇತಿ ॥ 'ಅವಶಿಷ್ಯತೇ ಶಂಕಾ' ಇತಿ ಶೇಷಃ ।**

ಪ್ರಥಮಸೂತ್ರದಲ್ಲಿ ಪ್ರಯೋಜನಾದ್ಯಭಿಸಂಬಂಧವನ್ನು ಹೇಳಿದ್ದು ಸಾರ್ಥಕವೆಂದು ಅಂಗೀಕರಿಸಿದರೂ ಕೂಡ ಶಾಸ್ತ್ರದಲ್ಲಿ ಪ್ರವೃತ್ತಿಯು ಅಸಂಭಾವಿತವಾಗುತ್ತದೆಂದು ''ಉಕ್ತಂ ಚ'' ಇತ್ಯಾದಿ ವಾಕ್ಯದ ಮೂಲಕ ಆಶಂಕಿಸುತ್ತಿದ್ದಾರೆ. ಅವಶಿಷ್ಯತೇ ಎಂಬಲ್ಲಿ ''ಶಂಕಾ'' ಎಂಬ ಪದ-ವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ವಿವರಣೆ – ಇಲ್ಲಿಯ ತನಕ 'ಯೋ ಯತ್ರ ಪ್ರವರ್ತನೀಯಃ ಸಃ ತತ್ರ ಪ್ರಯೋಜನಾದಿಕಂ ಪ್ರದರ್ಶಯಿತ್ವೈವ ಪ್ರವರ್ತನೀಯಃ' ಎಂಬ ವ್ಯಾಪ್ತಿಯನ್ನು ಅವಲಂಬಿಸಿ 'ವಿಮತಾ ಪ್ರವೃತ್ತಿಃ ಪ್ರಯೋ-ಜನಾದಿನಿಶ್ಚಯಸಾಧ್ಯಾ ಪ್ರವೃತ್ತಿತ್ವಾತ್ ಭೋಜನಾದಿಪ್ರವೃತ್ತಿವತ್' ಎಂಬ ಅನುಮಾನದಿಂದ ಯಾವುದೇ ಒಂದು ಪ್ರವೃತ್ತಿಯಾಗಬೇಕಾದರೆ ಅವಶ್ಯವಾಗಿ ಪ್ರಯೋಜನಾದಿ ನಿಶ್ಚಯಗಳು ಇರಲೇ ಬೇಕು. ಪ್ರಥಮಸೂತ್ರದಿಂದ ತಿಳಿಯಲ್ಪಡುವ 'ಬ್ರಹ್ಮಜ್ಞಾನಂ ಮೋಕ್ಷಸಾಧನಮ್' ಎಂಬುದು ಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ. ಅಥವಾ ಮೋಕ್ಷದ ಇಚ್ಛೆಯೂ ಕೂಡ ಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ. ಆದಕ್ಕೋಸ್ಕರ ಪ್ರಯೋಜನಾದಿಗಳನ್ನು ನಿಶ್ಚಯಮಾಡಲು ಮತ್ತೊಂದು ಸೂತ್ರವನ್ನು ಬರೆಯುವ ಅವಶ್ಯಕತೆಯೂ ಇರುವುದಿಲ್ಲ. ಆದ್ದರಿಂದಲೇ ಅನವಸ್ಥಾದಿ ದೋಷಗಳಿಗೆ ಅವಕಾಶವಿಲ್ಲ. ಆದರೆ ಸಾಧನಗೋಚರವಾದ ಇಚ್ಛೆ ಹಾಗೂ ಪ್ರಯತ್ನಗಳು ಬರಬೇಕೆಂದರೆ ಅವಶ್ಯವಾಗಿ ಪ್ರಯೋಜನಾದಿ-ಗಳನ್ನು ಹೇಳಬೇಕು. ಆದನ್ನು ಹೇಳುವಂಥ ಪ್ರಥಮಸೂತ್ರವು ಸಾರ್ಥಕವಾಗುತ್ತದೆಂದು ಸಮರ್ಥಿಸ-ಬೇಕು.

ಇಲ್ಲೊಂದು ಸಂಶಯವು ಬರುತ್ತಿದೆ – ಸೂತ್ರಕಾರರು ಜಿಜ್ಞಾಸಾಜನ್ಯವಾದ ಜ್ಞಾನಜನ್ಯವಾದ ಪ್ರಸಾದಜನ್ಯವಾದ ಮೋಕ್ಷವೆಂಬ ಫಲವು ಇರುತ್ತದೆಂದು ಹೇಳಿದ್ದಾರೆ. ಅವರು ಹೇಳಿದ ಮಾತ್ರಕ್ಕೆ ಜಿಜ್ಞಾಸುವಿಗೆ ನಂಬಿಕೆಯು ಬರುವುದಿಲ್ಲ. ನಂಬಿಕೆಯಿಲ್ಲದವನು ಆದರ ಅಧ್ಯಯನದಲ್ಲಿ ಹೇಗೆ ತಾನೆ ಪ್ರವೃತ್ತಿಮಾಡುತ್ತಾನೆ? ಎಂದು.

ಈ ಸಂಶಯಕ್ಕೆ ಕೆಲವರು ಹೇಳುವ ಪರಿಹಾರವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. ಅನಂತರ ತಮ್ಮ ಅಭಿಪ್ರಾಯವನ್ನು ತಿಳಿಸುವ ಮೂಲಕ ಪ್ರಶ್ನೆಗೆ ಉತ್ತರಿಸುತ್ತಾರೆ.

## ಕೆಲವರು ಹೇಳುವ ಎರಡು ಬಗೆಯ ಸಮಾಧಾನಗಳು

**ಪರಿಮಳ – ಸ್ವಯಂ ಕಿಂತು ಶ್ರೌತಸ್ಯ ಇತ್ಯಾದಿನಾ ಸಮಾಧಿಂ ವಿವಕ್ಷುಃ ಪ್ರಕಾರಾಂತರೇಣ ಸಮಾಧಿದ್ವಯಂ ತದೇತದನುಪಪನ್ನಮಿತ್ಯಾದಿನಾ ನಿರಸಿತುಮನುವದತಿ – ತತ್ರೈಕ ಇತ್ಯಾದಿನಾ ॥ ತದ್ವಚನಾದೇವೇತಿ ॥ ಪ್ರಥಮಸೂತ್ರತದ್ವಚನಾದೇವ ಇತ್ಯರ್ಥಃ । ತಥಾತ್ವೇ ಆದ್ಯಸೂತ್ರಾನರ್ಥಕ್ಯಮಿತ್ಯಾಶಂಕ್ಯ ನಿರಾಹ – ಯದ್ಯಪೀತಿ ॥ ಅಸೌ ॥ ಸಾಮಾನ್ಯನಿಶ್ಚಯಃ । ವಚನಾದೇವೇತಿ ॥ ಪ್ರಥಮಸೂತ್ರಾದಿತ್ಯರ್ಥಃ । ಮಾನಾಂತರಾಭಾವಾದಿತಿ ಭಾವಃ । ತದಭಿಧಾನಾದಿತಿ ॥ ಆದ್ಯಸೂತ್ರ ಇತಿ ಯೋಜ್ಯಮ್ । ಸಮಾಧಾನಾಂತರಮಾಹ – ಆಪ್ತತ್ವೇತಿ ॥ ಯಥಾ ಕೃಷ್ಯಾದಾವವಶ್ಯಂ ಫಲೇ ಭವತ್ಯೇವೇತ್ಯನಿಶ್ಚಯೇಽಪಿ ಫಲೋತ್ಪತ್ತಿಸಂದೇಹಾತ್ ಪ್ರವೃತ್ತಿರೇವಂ ಶಾಸ್ತ್ರೇಽಪ್ಯಸ್ತು ಪ್ರವೃತ್ತಿರಿತ್ಯರ್ಥಃ । ಅಸ್ಮಿನ್ ಪಕ್ಷೇಽಪ್ಯಾದ್ಯಸೂತ್ರಂ ವ್ಯರ್ಥಮಿತಿ ಆಶಂಕ್ಯ ಸಮಾಧತ್ತೇ – ನನ್ವಿತ್ಯಾದಿನಾ ॥**

'ಕಿಂತು ಶ್ರೌತಸ್ಯ' ಇತ್ಯಾದಿ ಗ್ರಂಥದಿಂದ ಈ ಆಕ್ಷೇಪಕ್ಕೆ ಸ್ವತಃ ಗ್ರಂಥಕಾರರೇ ಸಮಾಧಾನವನ್ನು ಹೇಳುವವರಿದ್ದಾರೆ. ಮೊದಲು ಪ್ರಕಾರಾಂತರದಿಂದ ಬೇರೆಯವರು ಹೇಳುವ ಎರಡು ಬಗೆಯ ಸಮಾಧಾನಗಳನ್ನು ಅನುವಾದ ಮಾಡುತ್ತಿದ್ದಾರೆ. ಹಾಗೂ ''ತದೇತದನುಪಪನ್ನಮ್'' ಇತ್ಯಾದಿ ಗ್ರಂಥದಿಂದ ಆ ಎರಡು ಅಭಿಪ್ರಾಯಗಳನ್ನು ನಿರಾಕರಣೆ ಮಾಡುತ್ತಿದ್ದಾರೆ. ಪರಮತದ ಅನುವಾದವನ್ನು ''ತತ್ರ ಏಕೇ'' ಇತ್ಯಾದಿ ಗ್ರಂಥದಿಂದ ಮಾಡುತ್ತಿದ್ದಾರೆ.

''ತದ್ವಚನಾದೇವ'' – 'ಪ್ರಥಮಸೂತ್ರವೆಂಬ ಸೂತ್ರಕಾರರ ಮಾತಿನಿಂದಲೇ'.

ಹಾಗಾದರೆ ಪ್ರಥಮಸೂತ್ರವು ನಿರರ್ಥಕವಾಗುತ್ತದಲ್ಲವೇ? ಎಂಬ ಆಶಂಕೆಗೆ ಸಮಾಧಾನವನ್ನು ''ಯದ್ಯಪಿ'' ಇತ್ಯಾದಿ ಗ್ರಂಥದಿಂದ ಮಾಡುತ್ತಿದ್ದಾರೆ. ''ಅಸೌ''– ಸಾಮಾನ್ಯನಿಶ್ಚಯವು, ''ವಚನಾದೇವ'' - ಪ್ರಥಮಸೂತ್ರದಿಂದಲೇ ಆಗುತ್ತದೆಂದರ್ಥ. ಬೇರೆ ಪ್ರಮಾಣವು ಇರುವು-

ದಿಲ್ಲವೆಂದು ತಿಳಿಯಬೇಕು. "ತದಭಿಧಾನಮ್" ಎಂಬಲ್ಲಿ 'ಆದ್ಯಸೂತ್ರೇ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. ಮತ್ತೊಂದು ಸಮಾಧಾನವನ್ನು "ಆಪ್ತತ್ವ" ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

ಯಾವರೀತಿಯಾಗಿ ಕೃಷಿ ಮೊದಲಾದವುಗಳಲ್ಲಿ ಫಲವು ಬಂದೇ ಬರುತ್ತದೆಂಬ ನಿಶ್ಚಯವು ಇಲ್ಲದಿದ್ದರೂ ಕೂಡ ಫಲವು ಸಿಗಬಹುದೆಂಬ ಸಂಭಾವನೆಯಿಂದಲೇ ಜನರು ಪ್ರವೃತ್ತಿಯನ್ನು ಮಾಡುವುದು ಲೋಕದಲ್ಲಿ ಕಂಡಿದೆಯೋ ಇದರಂತೆ ಶಾಸ್ತ್ರದಲ್ಲಿಯೂ ಕೂಡ ಫಲಸಂಭಾವನೆಯಿಂದಲೇ ಪ್ರವೃತ್ತಿಯು ಉಂಟಾಗುತ್ತದೆ ಎಂದಭಿಪ್ರಾಯ. ಈ ಪಕ್ಷದಲ್ಲಿಯೂ ಕೂಡ ಪ್ರಥಮಸೂತ್ರವು ವ್ಯರ್ಥವಾಗುತ್ತದೆಂಬ ಆಕ್ಷೇಪಕ್ಕೆ ಸಮಾಧಾನವನ್ನು "ನನು" ಇತ್ಯಾದಿ ಗ್ರಂಥದಿಂದ ತಿಳಿಸುತ್ತಿದ್ದಾರೆ.

ವಿವರಣೆ – ಕೆಲವರು ಹೇಳುವ ಸಮಾಧಾನವನ್ನು 'ತತ್ರ ಏಕೇ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ಗ್ರಂಥದಲ್ಲಿ "ಅವಗತಸೂತ್ರಕಾರಾಪ್ತಭಾವಃ" ಎಂಬ ಪದವಿದೆ. 'ಸೂತ್ರಕಾರಸ್ಯ ಆಪ್ತಭಾವಃ ಯೇನ ಅವಗತಃ ಸಃ ಅವಗತಸೂತ್ರಕಾರಾಪ್ತಭಾವಃ' ಎಂಬುದಾಗಿ ಬಹುವ್ರೀಹಿಸಮಾಸವನ್ನು ತಿಳಿದುಕೊಳ್ಳಬೇಕು. ಸೂತ್ರಕಾರರು ಬ್ರಹ್ಮಜ್ಞಾನವು ಮೋಕ್ಷಕ್ಕೆ ಸಾಧನವಾಗಿದೆ ಎಂದು ಹೇಳಿದರೆ ಸಾಕು ಜಿಜ್ಞಾಸುವಿಗೆ ಅವರಲ್ಲಿ ಆಪ್ತತ್ವದ ನಿಶ್ಚಯವಿರುವುದರಿಂದ ಅವರು ಹೇಳಿದ ವಾಕ್ಯದಲ್ಲಿ ಶ್ರದ್ಧೆಯುಳ್ಳವನಾಗುತ್ತಾನೆ. ಸೂತ್ರಕಾರರು ಆಪ್ತರೆಂದು ನಿಶ್ಚಯವಾದ ಮೇಲೆ ಈ ಶಾಸ್ತ್ರಕ್ಕೆ ಪ್ರಯೋಜನವಿದೆಯೆಂಬುದು ನಿಶ್ಚಯವೇ ಆಗಿರುತ್ತದೆ. ಹೀಗಿರುವಾಗ ಪುನಃ ಪ್ರಥಮಸೂತ್ರವು ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಆದರೆ ಪ್ರಯೋಜನಾದಿಗಳ ಸಾಮಾನ್ಯನಿಶ್ಚಯವು ಪ್ರವೃತ್ತಿಗೆ ಕಾರಣವಾಗುವುದಿಲ್ಲ. ಪ್ರಯೋಜನಾದಿಗಳ ವಿಶೇಷನಿಶ್ಚಯವಷ್ಟೇ ಪ್ರವೃತ್ತಿಗೆ ಕಾರಣವಾಗುತ್ತದೆ. ಅಸ್ಮದಭಿಮತವಾದ ಪ್ರಯೋಜನವೆಂಬ ವಿಶೇಷನಿಶ್ಚಯವಿದ್ದರೆ ಮಾತ್ರ ಪ್ರವೃತ್ತಿಯನ್ನು ಮಾಡುತ್ತಾನೆ. ನನಗೆ ಇಷ್ಟವಾದ ಪ್ರಯೋಜನವು ಈ ಶಾಸ್ತ್ರದ ಅಧ್ಯಯನದಿಂದ ದೊರಕುತ್ತದೆ ಎಂಬ ನಿಶ್ಚಯವಿದ್ದರೆ ಮಾತ್ರ ಶಾಸ್ತ್ರಾಧ್ಯಯನದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಆದ್ದರಿಂದ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದು ಸಾರ್ಥಕವಾಗುತ್ತದೆ. ಮತ್ತು ಪ್ರಥಮಸೂತ್ರವೂ ಕೂಡ ಅನಾರಂಭಣೀಯವಾಗುವುದಿಲ್ಲ. ಇದು ಮೊದಲನೆಯ ಸಮಾಧಾನ.

ಕೆಲವರು ಹೇಳುವ ಎರಡನೆಯ ಸಮಾಧಾನವನ್ನು "ಆಪ್ತತ್ವಾನಿಶ್ಚಯೇಽಪಿ" ಎಂಬ ವಾಕ್ಯದಿಂದ

ಹೇಳುತ್ತಿದ್ದಾರೆ. ಸೂತ್ರಕಾರರು ಬ್ರಹ್ಮಜ್ಞಾನದಿಂದ ಮೋಕ್ಷವು ದೊರಕುತ್ತದೆಂದು ಹೇಳಿದರೆ ಜಿಜ್ಞಾಸುವಿಗೆ ಆ ವಾಕ್ಯದಲ್ಲಿ ವಿಶ್ವಾಸವು ಬರುವುದಿಲ್ಲ. ಏಕೆಂದರೆ ಸೂತ್ರಕಾರರಲ್ಲಿ ಅವನಿಗೆ ಆಪ್ತತ್ವದ ನಿಶ್ಚಯವೇ ಇರುವುದಿಲ್ಲ. ಇಂಥ ಸಂದರ್ಭದಲ್ಲಿ ಕೇವಲ ಅರ್ಥಸಂದೇಹದಿಂದಲೇ ಪ್ರಥಮಸೂತ್ರಾಧ್ಯಯನಾದಿಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ.

## ಸಂದೇಹಕ್ಕಾಗಿಯೂ ಕೂಡ ಸೂತ್ರದಲ್ಲಿ ಪ್ರಯೋಜನಾದ್ಯಭಿಧಾನವು ಅವಶ್ಯಕ

ಪರಿಮಳ– ವಿಶೇಷೇತಿ ॥ ಮೋಕ್ಷಫಲಕಂ ಭವತಿ ನ ವಾ ಸ್ವರ್ಗಫಲಕಂ ಭವತಿ ನ ವೇತ್ಯಾದಿರೂಪೇಣ ಮೋಕ್ಷಾದಿಕೋಟಿವಿಶೇಷಸ್ಮೃತಿರಿತ್ಯರ್ಥಃ । ತದರ್ಥಮಪ್ಯಾದ್ಯಸೂತ್ರಂ ವ್ಯರ್ಥಮಿತಿ ಭಾವಃ । ಅನ್ಯಥೇತಿ ॥ ಆದ್ಯಸೂತ್ರಾಭಾವ ಇತ್ಯರ್ಥಃ । ಅನರ್ಥಾಶಂಕಾಮೇವ ವ್ಯನಕ್ತಿ – ಕಿಮಿತ್ಯಾದಿನಾ ॥ ಗೀರ್ವಾಣತರಂಗಿಣೀ = ಗಂಗಾ ॥

"ವಿಶೇಷಸ್ಮೃತಿಃ" – ಶಾಸ್ತ್ರದ ಫಲವು ಮೋಕ್ಷವೋ ಅಥವಾ ಸ್ವರ್ಗವೋ? ಹೀಗೆ ಮೋಕ್ಷ ಮುಂತಾದ ವಿಶಿಷ್ಟಕೋಟಿಸ್ಮರಣೆ ಎಂದರ್ಥ. ಇದಕ್ಕೂ ಕೂಡ ಮೊದಲನೆಯ ಸೂತ್ರವು ವ್ಯರ್ಥವಾಗಿದೆ ಎಂಬುದು ಇಲ್ಲಿಯ ಅಭಿಪ್ರಾಯ. "ಅನ್ಯಥಾ" – ಮೊದಲನೆಯ ಸೂತ್ರವು ಇಲ್ಲದಿದ್ದರೆ ಅನರ್ಥಶಂಕೆ ಎಂದರ್ಥ. ಅನರ್ಥಶಂಕೆಯನ್ನು "ಕಿಂ" ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. "ಗೀರ್ವಾಣತರಂಗಿಣೀ" - ಗಂಗೆ ಎಂದರ್ಥ.

ವಿವರಣೆ – 'ಇದಂ ಬ್ರಹ್ಮಸೂತ್ರಂ ಪ್ರಯೋಜನಾದಿಮಾನ್ ನ ವಾ' ಎಂಬ ಸಂದೇಹವು ಸಾಧಕಪ್ರಮಾಣ ಹಾಗೂ ಬಾಧಕಪ್ರಮಾಣವಿಲ್ಲದಿದ್ದರೆ ಸಹಜವಾಗಿಯೇ ಬರುತ್ತದೆ. ಸೂತ್ರಕಾರರು ಹೇಳಿದ ಮೇಲಷ್ಟೇ ಈ ಸಂದೇಹವು ಬರುತ್ತದೆಂಬ ನಿಯಮವು ಇರುವುದಿಲ್ಲ.

ಸಂದೇಹದಲ್ಲಿ ಕೋಟಿವಿಶೇಷದ ಸ್ಮರಣೆಗಾಗಿ ಸೂತ್ರಕಾರರ ವಚನವು ಬೇಕಲ್ಲವೇ? ಈ ಪ್ರಶ್ನೆ ಕೂಡ ತಪ್ಪು. ಕೇವಲ ಅರ್ಥಿತ್ವದಿಂದಲೇ ಸಂದೇಹಕೋಟಿಸ್ಮರಣೆಯು ಬರುತ್ತದೆ. ವ್ಯಕ್ತಿಯು ಯಾವುದರ ಬಗ್ಗೆ ಅಪೇಕ್ಷೆಯನ್ನು ಹೊಂದಿರುತ್ತಾನೋ ತದ್ವಿಷಯದಲ್ಲಿ ಅವನಿಗೆ ಸಂದೇಹ ಬರುತ್ತದೆ. ಉದಾಹರಣೆ – ಬಾಯಾರಿದವನಿಗೆ ನೀರು ಇಲ್ಲಿ ಇದೆಯೋ ಇಲ್ಲವೋ? ಎಂಬ ಸಂದೇಹವು ಸಹಜ-

ವಾಗಿಯೇ ಬರುತ್ತದೆ. ಮತ್ತೊಬ್ಬರು ಹೇಳುವುದರಿಂದ ಅವನಿಗೆ ಸಂದೇಹವು ಬರುವುದಿಲ್ಲ. ಪ್ರಕೃತ ಮುಮುಕ್ಷುವಿಗೆ ಮೋಕ್ಷದ ಅಪೇಕ್ಷೆಯು ಇರುವುದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡುವುದರಿಂದ ಮೋಕ್ಷವು ದೊರೆಯುತ್ತದೋ ಇಲ್ಲವೋ? ಎಂಬ ಸಂದೇಹವು ಸಹಜವಾಗಿಯೇ ಬರುತ್ತದೆ.

ಪ್ರಶ್ನೆ – ಇದು ತಪ್ಪು. 'ಯೋ ಹಿ ಯದ್ವಚನಾದ್ ಪ್ರವರ್ತತೇ ಸಃ ತದ್ವಚನಾದೇವ ವಿಶೇಷಸ್ಮೃತಿಂ ಅಪೇಕ್ಷತೇ' – ವಾಸ್ತವಿಕವಾಗಿ ಹೇಳುವವನ ವಿಷಯದಲ್ಲಿ ಕೇಳುಗನಿಗೆ ಆಪ್ತಿನಿಶ್ಚಯವು ಇರುವುದಿಲ್ಲ. ಆದರೂ ಕೂಡ ಅವನ ವಚನದಿಂದಲೇ ಪ್ರವೃತ್ತಿಯನ್ನು ಮಾಡುತ್ತಾನೆ. ಸಂದೇಹದಿಂದಲೇ ಪ್ರವೃತ್ತಿಯನ್ನು ಮಾಡುತ್ತಾನೆ. ಆ ಸಂದೇಹದಲ್ಲಿ ಆವಶ್ಯಕವಾದ ಕೋಟಿಸ್ಮರಣೆಯನ್ನು ಕೂಡ ಹೇಳುವವನ ಮಾತನ್ನು ಅಪೇಕ್ಷಿಸಿಯೇ ಬರುತ್ತದೆ ಹೊರತು ಕೇವಲ ಅರ್ಥಿತ್ವವನ್ನು ಅಪೇಕ್ಷಿಸಿ ಸಂದೇಹಕೋಟಿಯು ಬರಲು ಸಾಧ್ಯವೇ ಇಲ್ಲ. ಉದಾಹರಣೆ – ವೈದ್ಯರ ವಿಷಯದಲ್ಲಿ ಆಪ್ತತ್ವಜ್ಞಾನವು ನಿಶ್ಚಯವಾಗಿ ಇರುವುದಿಲ್ಲ. ಆದರೂ ಕೂಡ ಅಂಥ ವೈದ್ಯನ ಮಾತನ್ನು ಅವಲಂಬಿಸಿ ಸಂದೇಹದಿಂದಲೇ ಪ್ರವೃತ್ತಿಯನ್ನು ಮಾಡುವುದು ಕಂಡಿದೆ. ಆಪ್ತಿವಿಶ್ವಾಸವು ಇಲ್ಲದೇ ಇದ್ದರೂ ಕೂಡ ವೈದ್ಯರು ಹೇಳುವ ಪ್ರಯೋಜನವನ್ನು ತಿಳಿಯದೇ ಇದ್ದರೆ ಏನು ಬೇಕಾದರೂ ಸಂದೇಹವು ಬರಬೇಕಾಗುತ್ತದೆ.

ಆದ್ದರಿಂದ ಸೂತ್ರಕಾರರಲ್ಲಿ ಆಪ್ತಿನಿಶ್ಚಯವಿದ್ದರೆ ಬಹಳ ಸುಲಭವಾಗಿ ಪ್ರವೃತ್ತಿಯು ಉಂಟಾಗುತ್ತದೆ. ಒಂದು ವೇಳೆ ಆಪ್ತಿನಿಶ್ಚಯವು ಇಲ್ಲದಿದ್ದರೆ ಸಂದೇಹದಿಂದಲೇ ಪ್ರವೃತ್ತಿಯನ್ನು ಮಾಡುತ್ತೇವೆ. ಆ ಸಂದೇಹಕ್ಕೋಸ್ಕರ ಯಾವ ಕೋಟಿಸ್ಮರಣೆಯ ಅವಶ್ಯಕತೆ ಇದೆಯೋ ಅದೂ ಕೂಡ ಅವರ ಮಾತಿನಿಂದಲೇ ಬರುತ್ತದೆ. ತಾನಾಗಿಯೇ ಕೋಟಿಸ್ಮರಣೆ ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಸೂತ್ರಕಾರರಲ್ಲಿ ಆಪ್ತಿನಿಶ್ಚಯವು ಇದ್ದರೂ ಇಲ್ಲದಿದ್ದರೂ ಪ್ರಥಮಸೂತ್ರದಲ್ಲಿ ಪ್ರಯೋಜನಾದ್ಯಭಿಧಾನವು ಸಾರ್ಥಕವಾಗಿದೆ. ಇಷ್ಟು ಕೆಲವರ ಅಭಿಪ್ರಾಯ.

## ನ್ಯಾಯಸೂತ್ರತ್ವವೆಂದು ಅಂಗೀಕರಿಸಿದಾಗ ಬರುವ ಸಮಸ್ಯೆಗೆ ಪರಿಹಾರ

ವಾಕ್ಯಾರ್ಥಚಂದ್ರಿಕಾ – ಶಾಸ್ತ್ರೀಯವಿಷಯಪ್ರಯೋಜನಾದಿಸಮರ್ಪಕತ್ವೇನ ಶಾಸ್ತ್ರಾರಂಭಹೇತೋರಸ್ಯ ಸೂತ್ರಸ್ಯ ವೇದಾರ್ಥನಿರ್ಣಾಯಕನ್ಯಾಯಗ್ರಥನಾತ್ಮಕತ್ವಾತ್ ಶಾಸ್ತ್ರಾಂತರ್ಭಾವೋऽ-

ಪ್ಯಸ್ತೀತಿ ನಾನವಸ್ಥಾದೋಷ ಇತಿ ವಕ್ತುಂ ಕುತೋಽಸ್ಯ ನ್ಯಾಯಸೂತ್ರತ್ವಂ ಯೇನ ನಾನವಸ್ಥೇತಿ ಆಶಂಕಾಯಾಂ ನ್ಯಾಯಸೂತ್ರತ್ವಾಂಗೀಕಾರನಿವರ್ತ್ಯಾಂ ಶಂಕಾಂ ಪ್ರಕಾರಾಂತರೇಣ ಕೇಷಾಂಚಿತ್ ಸಮಾಧಾನಪ್ರಕಾರಂ ತದ್‌ದೂಷಣಪ್ರಕಾರಂ ಚ ದರ್ಶಯತಿ – ಉಕ್ತಂ ಚೇತ್ಯಾದಿನಾ ॥ ಶ್ರೌತಸ್ಯ ಪ್ರಯೋಜನಾದೇರ್ನ್ಯಾಯೇನ ಉಪಪಾದನಾರ್ಥಮಿತ್ಯುಕ್ತ್ವಾ ಪ್ರಮಾಣಾಂತರಸಿದ್ಧಾರ್ಥಪ್ರತಿ-ಪಾದಕತ್ವೇಽಪಿ ನಾಸ್ಯ ವೈಯರ್ಥ್ಯಂ ಪೂರ್ವಪಕ್ಷರೀತ್ಯಾ ಶ್ರುತಿಪ್ರತಿಪಾದಿತೇಽಪ್ಯರ್ಥೇಽನುಪಪತ್ತೌ ಪ್ರಾಪ್ತಾಯಾಂ ನ್ಯಾಯೇನ ತದರ್ಥೋಪಪಾದಕತ್ವೇನ ಉಪದೇಶಮಾತ್ರತ್ವಾಭಾವಾದಿತಿ ಸೂಚಿತಂ ಭವತಿ ॥

ಶಾಸ್ತ್ರಸಿದ್ಧವಾದ ವಿಷಯಪ್ರಯೋಜನಾದಿಗಳನ್ನು ತಿಳಿಸುವ ಮೂಲಕ ಶಾಸ್ತ್ರಾರಂಭಕ್ಕೆ ಕಾರಣ-ವಾದ ಪ್ರಥಮಸೂತ್ರವು ವೇದಾರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕವಾಗಿದೆ. ಆದ್ದರಿಂದ ಇದಕ್ಕೆ ಶಾಸ್ತ್ರಾಂತರ್ಭಾವವೂ ಕೂಡ ಇರುವುದರಿಂದ ಇದರಲ್ಲಿ ಪ್ರವೃತ್ತಿ ಮಾಡುವುದಕ್ಕಾಗಿ ಮತ್ತೊಂದು ಸೂತ್ರದ ಅವಶ್ಯಕತೆಯು ಇರುವುದಿಲ್ಲ. ಆದ್ದರಿಂದಲೇ ಅನವಸ್ಥಾದೋಷವು ಕೂಡ ಬರುವುದಿಲ್ಲ. ಹೀಗೆ ಉಪಪಾದನೆ ಮಾಡುವುದಕ್ಕಾಗಿ ಈ ಪ್ರಥಮಸೂತ್ರಕ್ಕೆ ನ್ಯಾಯಸೂತ್ರತ್ವವು ಹೇಗೆ ತಾನೇ ಯುಕ್ತ-ವಾಗುತ್ತದೆ? ಯಾವ ಕಾರಣದಿಂದ ಅನವಸ್ಥಾದೋಷವು ಬರುವುದಿಲ್ಲ?

ಈ ಆಶಂಕೆಗೆ ನ್ಯಾಯಸೂತ್ರತ್ವವಿದೆಯೆಂದು ಅಂಗೀಕರಿಸುವ ಮೂಲಕ ಇದರಿಂದ ಪರಿ-ಹಾರವಾಗುವ ಆಶಂಕೆಯನ್ನು ಮತ್ತೊಂದು ಪ್ರಕಾರದಿಂದ ಹೇಳುತ್ತಿದ್ದಾರೆ. ಇದಕ್ಕಿಂತಲೂ ಮೊದಲು ಕೆಲವರು ಹೇಳುವ ಸಮಾಧಾನದ ರೀತಿಯನ್ನು ಹಾಗೂ ಅವರ ಸಮಾಧಾನದಲ್ಲಿರುವ ದೋಷಗಳನ್ನು ಕೂಡ ತೋರಿಸುವುದಕ್ಕಾಗಿ "ಉಕ್ತಂ ಚ" ಎಂಬ ಗ್ರಂಥವು ಹೊರಟಿದೆ.

ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದಿಂದ ಉಪಪಾದನೆ ಮಾಡುವುದಕ್ಕಾಗಿ ಈ ಸೂತ್ರವು ಹೊರಟಿದೆಯೆಂದು ಹಿಂದೆ ಹೇಳಲಾಯಿತು. ಆದ್ದರಿಂದ ಪ್ರಮಾಣಾಂತರಸಿದ್ಧವಾದ ಅರ್ಥ-ಪ್ರತಿಪಾದಕವಾದರೂ ಕೂಡ ಈ ಸೂತ್ರಕ್ಕೆ ವೈಯರ್ಥ್ಯವು ಬರುವುದಿಲ್ಲ.

ಹೀಗೆ ಪೂರ್ವಪಕ್ಷದ ಪ್ರಕಾರ ಶ್ರುತಿಯಿಂದ ಪ್ರತಿಪಾದಿತವಾಗಿದ್ದರೂ ಕೂಡ ಅರ್ಥದಲ್ಲಿ ಅನುಪಪತ್ತಿಯು ಪ್ರಾಪ್ತವಾದಾಗ ನ್ಯಾಯದ ಆಧಾರದಿಂದ ತದರ್ಥವನ್ನು ಉಪಪಾದನೆ ಮಾಡುವು-ದಕ್ಕಾಗಿ ಈ ಸೂತ್ರವು ಹೊರಟಿದೆ. ಕೇವಲ ಉಪದೇಶವಷ್ಟೇ ಪ್ರಥಮಸೂತ್ರದಲ್ಲಿ ಇರುವುದಲ್ಲ ಎಂಬ ಪ್ರಮೇಯವನ್ನು ಈ ಗ್ರಂಥದಿಂದ ಸೂಚಿಸಿದ್ದಾರೆ.

## ಮೋಕ್ಷಪ್ರಯೋಜನವನ್ನು ಸಾಧಿಸಿದರೆ ವ್ಯಭಿಚಾರ ಬರುತ್ತದೆ

ಯಾದುಪತ್ಯ – ಪ್ರಯೋಜನಾದ್ಯಭಿಧಾನಸ್ಯ ಅರ್ಥವತ್ತ್ವಮಂಗೀಕೃತ್ಯಾಪಿ ಪ್ರವೃತ್ತ್ಯಭಾವಂ ಶಂಕತೇ – ಉಕ್ತಂ ಚೇತಿ ॥ ವಚನಾದೇವಾವಸೀಯತ ಇತಿ ॥ ಆಪ್ತೋಕ್ತತ್ವಹೇತೋಃ ಪ್ರಯೋಜನ-ವಿಶೇಷವ್ಯಭಿಚಾರಿತ್ವೇನಾನುಮಾನಾಸಂಭವಾದಿತಿ ಭಾವಃ ॥ ಸುಲಭ ಏವೇತಿ ॥ ತಥಾ ಚ ಸೂತ್ರೇ ಪ್ರವೃತ್ತ್ಯರ್ಥಂ ಪ್ರಯೋಜನಾದ್ಯಭಿಧಾನಂ ವ್ಯರ್ಥಮಿತಿ ಭಾವಃ।

ಪ್ರಯೋಜನಾದ್ಯಭಿಧಾನಕ್ಕೆ ಸಾರ್ಥಕ್ಯವನ್ನು ಅಂಗೀಕರಿಸಿಯೂ ಕೂಡ ಪ್ರವೃತ್ತಿಯು ಕೂಡುವುದಿಲ್ಲ ಎಂಬುದನ್ನು "ಉಕ್ತಂ ಚ" ಇತ್ಯಾದಿಗ್ರಂಥದಿಂದ ಹೇಳುತ್ತಿದ್ದಾರೆ. "ವಚನಾದೇವ ಅವಸೀಯತೇ" – ಆಪ್ತೋಕ್ತತ್ವಹೇತುವಿಗೆ ಪ್ರಯೋಜನವಿಶೇಷದಲ್ಲಿ ವ್ಯಭಿಚಾರವಿರುವುದರಿಂದ ಅನುಮಾನವು ಯುಕ್ತವಾಗುವುದಿಲ್ಲ' ಎಂದಭಿಪ್ರಾಯ. ಆದ್ದರಿಂದ ಸೂತ್ರದಲ್ಲಿ ಪ್ರವೃತ್ತಿ ಮಾಡುವುದಕ್ಕೆ ಪ್ರಯೋಜನವನ್ನು ಹೇಳಿದ್ದು ವ್ಯರ್ಥವೆಂದು ಆಕ್ಷೇಪದ ಅಭಿಪ್ರಾಯ.

ವಿವರಣೆ – 'ಇದಂ ಶಾಸ್ತ್ರಂ ಮೋಕ್ಷಪ್ರಯೋಜನಕಂ ಆಪ್ತೋಕ್ತತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಲು ಸಾಧ್ಯವಿಲ್ಲ. ಏಕೆಂದರೆ ನಾವು ರಚಿಸಿದ ಶಾಸ್ತ್ರದಲ್ಲೂ ಆಪ್ತೋಕ್ತತ್ವವಿದೆ. ಆದರೆ ಮೋಕ್ಷಪ್ರಯೋಜನವು ಇರುವುದಿಲ್ಲವಾದ್ದರಿಂದ ವ್ಯಭಿಚಾರದೋಷವು ಬರುತ್ತದೆ. ಆದ್ದರಿಂದ 'ಇದಂ ಶಾಸ್ತ್ರಂ ಪ್ರಯೋಜನಾದಿಮತ್ ಆಪ್ತೋಕ್ತತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಬೇಕು. ಆಪ್ತೋಕ್ತತ್ವವೆಂಬ ಹೇತುವು ಪ್ರಯೋಜನಾದಿಸಾಮಾನ್ಯದ ನಿಶ್ಚಯಕ್ಕೆ ಕಾರಣವಾಗುತ್ತದೆ. ಪ್ರಯೋಜನಾದಿವಿಶೇಷನಿಶ್ಚಯಕ್ಕೆ ಕಾರಣವಾಗುವುದಿಲ್ಲ.

## ಸೂತ್ರವು ಸಂದೇಹದಲ್ಲಿ ವಿಧಿಕೋಟಿಪ್ರಾಪಕ

ಯಾದುಪತ್ಯ –ನನು ಸಂದೇಹಜನಕಕೋಟಿಸ್ಮೃತಿಹೇತುತಯಾ ತದಭಿಧಾನಂ ಸಾರ್ಥಕಮೇವೇತ್ಯತ ಆಹ – ವಿಶೇಷಸ್ಮೃತಿಶ್ಚೇತಿ ॥ ಕೋಟಿಸ್ಮೃತಿಶ್ಚ ಇತ್ಯರ್ಥಃ। ಆಪ್ತ್ಯನಿಶ್ಚಯದಶಾಯಾಮಪಿ ಪ್ರಥಮಸೂತ್ರಶ್ರವಣಾನಂತರಂ ಬ್ರಹ್ಮಜ್ಞಾನಂ ಮೋಕ್ಷಸಾಧನಂ ನ ವೇತಿ ಜಾಯಮಾನೇ ಮಾನಸೇ ಸಂಶಯೇ ವಿಧಿಕೋಟಿಪ್ರಾಪಕೇಽಪ್ಯನ್ಯನ್ನ ಸಂಭವತೀತಿ ತದರ್ಥಂ ಸೂತ್ರೇ ಪ್ರಯೋಜನಾದ್ಯ-ಭಿಧಾನಮಿತ್ಯಭಿಪ್ರೇತ್ಯ ಸಮಾಧತ್ತೇ – ಯೋ ಹೀತಿ ॥

ಸಂದೇಹಕ್ಕೆ ಜನಕವಾದ ಕೋಟಿಸ್ಮರಣೆಗೆ ಕಾರಣವಾದ್ದರಿಂದ ಆ ಪ್ರಯೋಜನಾದ್ಯಭಿಧಾನವು

ಸಾರ್ಥಕವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ "ವಿಶೇಷಸ್ಮೃತಿಶ್ಚ" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ವಿಶೇಷಸ್ಮೃತಿ ಎಂಬ ಶಬ್ದಕ್ಕೆ ಕೋಟಿಸ್ಮರಣೆ ಎಂದರ್ಥ.

ಆಪ್ತನಿಶ್ಚಯವು ಇಲ್ಲದೇ ಇದ್ದರೂ ಕೂಡ ಮೊದಲನೆಯ ಸೂತ್ರವನ್ನು ಶ್ರವಣ ಮಾಡಿದ ಮೇಲೆ ಬ್ರಹ್ಮಜ್ಞಾನವು ಮೋಕ್ಷಸಾಧನ ಆಗಿದೆಯೋ ಇಲ್ಲವೋ ಎಂಬ ಸಂದೇಹವು ಮನಸ್ಸಿನಲ್ಲಿ ಉಂಟಾಗುತ್ತದೆ. ಈ ಸಂದೇಹದಲ್ಲಿ ಬ್ರಹ್ಮಜ್ಞಾನವು ಮೋಕ್ಷಸಾಧನವಾಗಿದೆ ಎಂಬ ವಿಧಿಕೋಟಿಗೆ ಪ್ರಾಪಕವಾಗಿ ಬೇರೆ ಯಾವುದು ಇಲ್ಲದ್ದರಿಂದ ಸೂತ್ರವೇ ಅವಶ್ಯಕವಾಗುತ್ತದೆ. ಆದಕ್ಕೋಸ್ಕರ ಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದು ಸಾರ್ಥಕವಾಗಿದೆ. ಈ ಅಭಿಪ್ರಾಯದಿಂದ "ಯೋ ಹಿ" ಇತ್ಯಾದಿ ಗ್ರಂಥವು ಸಮಾಧಾನವನ್ನು ನೀಡುತ್ತಿದೆ.

## ಉತ್ಪ್ರೇಕ್ಷೆಯಿಂದ ಬರುವ ಕೋಟಿಸ್ಮರಣೆ-ಯಿಂದ ಪ್ರವೃತ್ತಿ ಉಂಟಾಗುವುದಿಲ್ಲ

ಯಾದುಪತ್ಯ– ಯದ್ವಚನಾತ್ ಪ್ರವರ್ತತ ಇತಿ ॥ ಯದ್ವಚನಶ್ರವಣಾನಂತರಭಾವಿಮಾನಸಸಂಶಯಾತ್ ಪ್ರವರ್ತತ ಇತ್ಯರ್ಥಃ । ವೈದ್ಯಸ್ಯೈವ ವಚನಾತ್ ಇತ್ಯನಂತರಮಿದಂ ರೋಗನಿವೃತ್ತಿಸಾಧನಮಿತಿ ವಿಧಿಕೋಟಿಮವಗಮ್ಯ ಮಾನಸೇ ಸಂಶಯೇ ಸತೀತಿ ಶೇಷಃ । ಅನ್ಯಥೇತಿ ॥ ಔತ್ಪ್ರೇಕ್ಷಿಕಕೋಟಿಸ್ಮೃತ್ಯಧೀನಮಾನಸಸಂಶಯೇನ ಪ್ರವೃತ್ತಾವಿತ್ಯರ್ಥಃ । ದಾಕ್ಷಿಣಾತ್ಯಸ್ಯ ಇತಿ ಕರ್ತರೀ ಷಷ್ಠೀ । ಪರಿಣಯನಂ = ವಿವಾಹಃ । ಉಭಯಥಾಽಪೀತಿ ॥ ಆಪ್ತತ್ವನಿಶ್ಚಯಾನಿಶ್ಚಯಪಕ್ಷಯೋರಿತ್ಯರ್ಥಃ ।

"ಯದ್ವಚನಾದ್ ಪ್ರವರ್ತತೇ" – ಯಾರ ಮಾತನ್ನು ಶ್ರವಣಮಾಡಿದ ಅನಂತರದಲ್ಲಿ ಹುಟ್ಟುವ ಮಾನಸಿಕವಾದ ಸಂಶಯದ ಪ್ರವೃತ್ತಿಯನ್ನು ಮಾಡುತ್ತಾನೋ ಎಂದರ್ಥ. ವೈದ್ಯನ ಮಾತನ್ನು ಕೇಳಿದ ಅನಂತರ ಇದು ರೋಗನಿವರ್ತಕವಾಗಿದೆ ಎಂಬ ವಿಧಿಕೋಟಿಜ್ಞಾನವು ಬರುತ್ತದೆ. ಅನಂತರವೇ ಇದು ರೋಗನಿವರ್ತಕವೋ ಅಲ್ಲವೋ ಎಂಬ ಮಾನಸಿಕಸಂಶಯವು ಉಂಟಾಗುತ್ತದೆ. "ಅನ್ಯಥಾ" – ಉತ್ಪ್ರೇಕ್ಷೆಯಿಂದಲೇ ಕೋಟಿಸ್ಮರಣೆಯ ಅಧೀನವಾಗಿ ಮನಸ್ಸಿನಲ್ಲಿ ಸಂಶಯ ಬಂದು ಪ್ರವೃತ್ತಿಮಾಡುವುದಾದರೆ ಎಂದರ್ಥ. "ದಾಕ್ಷಿಣಾತ್ಯಸ್ಯ" ಎಂಬುದು ಕರ್ತರಿ ಷಷ್ಠೀ ವಿಭಕ್ತಿಯಾಗಿದೆ. "ಪರಿಣಯನ" ಎಂಬುದಕ್ಕೆ ವಿವಾಹ ಎಂದರ್ಥ. ದಾಕ್ಷಿಣಾತ್ಯಕರ್ತೃಕವಾದ ವಿವಾಹ ಎಂದರ್ಥ. "ಉಭಯಥಾಪಿ" ಆಪ್ತತ್ವನಿಶ್ಚಯವಿದ್ದರೂ ಇಲ್ಲದಿದ್ದರೂ ಎಂಬೆರಡು ಪಕ್ಷಗಳಲ್ಲಿ ಎಂದರ್ಥ.

# ಸುಧಾಪರಿಮಳಸಾರ

"ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬ ಮೊದಲನೆ ಸೂತ್ರವು ವಿಷಯವೇ ಮೊದಲಾದ ಅನುಬಂಧಚತುಷ್ಟಯಗಳನ್ನು ಮಾತ್ರ ತಿಳಿಸುತ್ತಿಲ್ಲ. ಹೊರತು ನ್ಯಾಯಗ್ರಥನಾತ್ಮಕವಾದ ಕಾರಣ ಶಾಸ್ತ್ರದಲ್ಲಿ ಅಂತರ್ಭಾವವನ್ನು ತಿಳಿಸುತ್ತಿದೆ. ಪ್ರಯೋಜನಾದಿಗಳನ್ನು ಮೊದಲನೇ ಸೂತ್ರವು ಹೇಳಿದರೂ ನಮಗೆ ನಂಬಿಕೆ ಬರಲು ಸಾಧ್ಯವಿಲ್ಲ. ನಂಬಿಕೆಯೇ ಬರದ ಮೇಲೆ ಈ ಶಾಸ್ತ್ರದಲ್ಲಿ ಪ್ರವೃತ್ತಿಯಾದರೂ ಹೇಗಾಗಲು ಸಾಧ್ಯ? ಎಂಬ ಸಂಶಯವು ಬಂದೇ ಬರುತ್ತದೆ. ಮುಂದೆ ಜಯತೀರ್ಥರು "ಶ್ರೌತಸ್ಯ ಪ್ರಯೋಜನಾದೇಃ" ಎಂಬ ವಾಕ್ಯದಿಂದ ಮೇಲೆ ಮಾಡಿದ ಎರಡು ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಮೊದಲು ನೈಯಾಯಿಕರು ನೀಡುವ ಸಮಾಧಾನವನ್ನು ನಿರಾಕರಿಸುತ್ತಾರೆ.

ಯಾರೊಬ್ಬರ ಮಾತಿನ ಮೇಲೆ ನಾವು ವಿಶ್ವಾಸವಿಡಬೇಕಾದರೆ ಅವರು ಆಪ್ತರಾಗಿರಬೇಕು. ಸೂತ್ರಕಾರರೂ ಆಪ್ತರಾದ ಕಾರಣ ಅವರ ಮಾತಿನ ಮೇಲಿನ ವಿಶ್ವಾಸದಿಂದ ಅವರು ತಿಳಿಸಿದ ಪ್ರಯೋಜನಾದಿಗಳನ್ನು ನಂಬುವುದು. ಯದ್ಯಪಿ ಸೂತ್ರಕಾರರು ಆಪ್ತರೆಂದು ನಿಶ್ಚಯವಾದಲ್ಲಿ ಅವರು ಪ್ರಯೋಜನಾದಿಗಳನ್ನು ಹೇಳದಿದ್ದರೂ "ಈ ಶಾಸ್ತ್ರವು ಪ್ರಯೋಜನಾದಿಗಳಿಂದ ಕೂಡಿದೆ. ಆಪ್ತೋಕ್ತವಾದ ಕಾರಣ" ಎಂಬ ಅನುಮಾನದಿಂದ ಪ್ರಯೋಜನಾದಿಗಳ ಸಾಮಾನ್ಯಜ್ಞಾನ ನಮಗೆ ಬರಬಹುದು. ಆದರೆ "ಪ್ರಯೋಜನದಿಂದ ಕೂಡಿದೆ" ಎಂಬ ಜ್ಞಾನವಷ್ಟೇ ಪ್ರವೃತ್ತಿಗೆ ಕಾರಣವಲ್ಲ. ಕಿಂತು "ನಮಗೆ ಬೇಕಾಗುವ ಪ್ರಯೋಜನದಿಂದ ಕೂಡಿದೆ" ಎಂಬ ವಿಶೇಷಜ್ಞಾನವಷ್ಟೇ ಪ್ರವೃತ್ತಿಗೆ ಕಾರಣ. ಹೀಗಾಗಿ ಈ ರೀತಿಯಾದ ವಿಶೇಷಪ್ರಯೋಜನಾದಿಗಳನ್ನು ಮೊದಲನೇ ಸೂತ್ರದಲ್ಲಿ ಹೇಳಿದುದು ಸರಿಯೇ ಆಗಿದೆ. (ಅಥವಾ ಹೀಗೂ ಸಮಾಧಾನಿಸಬಹುದು) ಸೂತ್ರಕಾರರಲ್ಲಿ ಆಪ್ತತ್ವನಿಶ್ಚಯವಿಲ್ಲದಿದ್ದರೂ, ರೈತಜನರಿಗೆ ಕೃಷಿಯಿಂದ ಫಲವು ದೊರೆತೇ ಬಿಡುವುದೆಂಬ ನಿಶ್ಚಯವಿಲ್ಲದಿದ್ದರೂ ಫಲ ದೊರೆಯಬಹುದೆಂಬ "ಅರ್ಥಸಂದೇಹ"-ದಿಂದ ಪ್ರವೃತ್ತಿಯಾಗುವಂತೆ ಈ ಶಾಸ್ತ್ರದಲ್ಲೂ ಪ್ರವೃತ್ತಿಯನ್ನು ಕೂಡಿಸಬಹುದು. ಆದಕ್ಕಾಗಿ ಪ್ರಯೋಜನಾದಿಗಳನ್ನು ಹೇಳಿದ್ದು ಸರಿಯಾಗಿದೆ.

ಸಂದೇಹದಿಂದಲೇ ಪ್ರವೃತ್ತಿಯನ್ನು ಕೂಡಿಸಬಹುದು. ಆದರೆ ಆ ಪ್ರಯೋಜನಾದಿಗಳ ಸಂದೇಹವು ಬರಲು ಸೂತ್ರಕಾರರು ಅದನ್ನು ಪ್ರಥಮಸೂತ್ರದಲ್ಲಿ ಹೇಳಬೇಕಾಗಿಲ್ಲ. 'ಪ್ರಯೋಜನವಿದೆ' ಎಂಬ ಪಕ್ಷಕ್ಕಾಗಲೀ, 'ಪ್ರಯೋಜನವಿಲ್ಲ' ಎಂಬ ಪಕ್ಷಕ್ಕಾಗಲೀ ಸಾಧಕ ಅಥವಾ ಬಾಧಕವಿಲ್ಲದಿದ್ದರೆ ಸಾಕು. ತಾನಾಗಿಯೇ ಸಂದೇಹ ಬರುತ್ತದೆ. ಮೋಕ್ಷರೂಪ ಪ್ರಯೋಜನದ ಸ್ಮರಣೆಗಾಗಿ ಸೂತ್ರದಲ್ಲಿ ಆ ಪ್ರಯೋಜನವನ್ನು ನಿರ್ದೇಶ ಮಾಡುವುದು ಆವಶ್ಯಕವೆಂದರೆ ಅದೂ ಸರಿಯಲ್ಲ. ಜಿಜ್ಞಾಸುವು(ಶ್ರೋತೃವು) ಮೋಕ್ಷಾರ್ಥಿಯೇ ಆದ ಕಾರಣ ಆ ಪ್ರಯೋಜನ-ವಿಶೇಷದ ಸ್ಮರಣೆಯೂ ಸುಲಭವೇ ಆಗಿದೆ. ಅದನ್ನೂ ನಿರ್ದೇಶಿಸಬೇಕಾಗಿಲ್ಲ ಎಂದರೆ, ಇದು ಸರಿಯಲ್ಲ. ಏಕೆಂದರೆ 'ಜಿಜ್ಞಾಸಾ ಕರ್ತವ್ಯಾ' ಎಂಬ ವಚನದಿಂದ ಪ್ರವೃತ್ತಿ ಮಾಡುವವನು ಅವರ ವಚನದಿಂದಲೇ ಪ್ರಯೋಜನವಿಶೇಷದ ಸ್ಮರಣೆಯನ್ನು ಅಪೇಕ್ಷಿಸುತ್ತಾನೆ. ಹೊರತು ಸ್ವತಂತ್ರವಾಗಿ ತನಗೆ ಬಂದ ಸ್ಮರಣೆಯಿಂದಲ್ಲ. ಉದಾಹರಣೆ : ರೋಗಿಗೆ

ವೈದ್ಯನಲ್ಲಿ ಆಪ್ತತ್ವನಿಶ್ಚಯವಿಲ್ಲದಿದ್ದರೂ ಅವನು ಹೇಳಿದ ಔಷಧದಲ್ಲಿಯೇ ಪ್ರವೃತ್ತಿ ಮಾಡುತ್ತಾನೆ ಹೊರತು ಸ್ವತಂತ್ರವಾಗಿ ತನಗೆ ಸ್ಮರಣೆ ಬಂದ ಔಷಧದಲ್ಲಿ ಅಲ್ಲ. ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು. ಅದಕ್ಕಾಗಿ ಪ್ರಥಮಸೂತ್ರದಲ್ಲಿ ಪ್ರಯೋಜನವಿಶೇಷವು ಹೇಳಲ್ಪಟ್ಟಿದೆ. ಒಂದು ವೇಳೆ ಹೇಳದಿದ್ದರೆ, ಶ್ರೋತೃವಿಗೆ 'ಜಿಜ್ಞಾಸಾ ಕರ್ತವ್ಯಾ' ಎಂದು ಹೇಳಿದವರು ಪ್ರಯೋಜನವನ್ನು ಹೇಳಿಲ್ಲವಾದ್ದರಿಂದ ಈ ಶಾಸ್ತ್ರವು ಕಾಕದಂತಪರೀಕ್ಷಾಗ್ರಂಥದಂತೆ ನಿಷ್ಪ್ರಯೋಜನವೋ? "ಕಾಗೆಗೆ ಎಷ್ಟು ದಂತಗಳಿವೆ" ಎಂಬ ಜಿಜ್ಞಾಸೆಯನ್ನುಂಟುಮಾಡುವ ಗ್ರಂಥವು ಪ್ರಯೋಜನ-ವಿಲ್ಲದ ಕಾರಣ ಹೇಗೆ "ವ್ಯರ್ಥವೋ" ಹಾಗೆಯೇ ಈ ಗ್ರಂಥವೋ?

ಅಥವಾ ಈ ಗ್ರಂಥಕ್ಕೆ ಪ್ರಯೋಜನವಿದ್ದರೂ ಸಾಯುವ ಹಂತದಲ್ಲಿರುವ ವ್ಯಕ್ತಿಗೆ "ಹಿಮಾಲಯದ ಶಿಖರದಲ್ಲಿರುವ ಸಂಜೀವಿನೀ ಔಷಧಿಯು ಮರಣಪರಿಹಾರಕ" ಎಂಬ ಉಪದೇಶದಂತೆ ಕಷ್ಟಸಾಧ್ಯವಾದದ್ದೋ? ಅಥವಾ ದಕ್ಷಿಣದೇಶದಲ್ಲಿ ವಾಸಿಸುವ ವ್ಯಕ್ತಿಯು ಅಲ್ಲಿನ ಸಂಪ್ರದಾಯಗಳನ್ನೊಳಗೊಂಡ "ಮಾತುಲಕನ್ಯಾವಿವಾಹ-ಪದ್ಧತಿಯನ್ನು" ಉತ್ತರದೇಶದಲ್ಲಿ ವಾಸಿಸುವ ವ್ಯಕ್ತಿಗೆ ಉಪದೇಶಿಸಿದರೆ ಅವನಿಗೆ ಅದರ ಅಪೇಕ್ಷೆಯಿಲ್ಲದಂತೆ. ತನಗೆ ಅನಪೇಕ್ಷಿತವಾದ ಪ್ರಯೋಜನ ಉಳ್ಳದ್ದೋ? ಅಥವಾ ಈ ಶಾಸ್ತ್ರವು ಸುಲಭವಾದ ಸಾಧನವಿರುವಾಗ ಕಷ್ಟಸಾಧ್ಯವಾದ ಜಿಜ್ಞಾಸೆಯನ್ನು ವಿಧಾನ ಮಾಡುತ್ತಿದೆಯೋ? ಹೇಗೆಂದರೆ ಬಾಯಾರಿದ ವ್ಯಕ್ತಿಗೆ "ಗಂಗೆಯ ಸಮೀಪದಲ್ಲಿ ಬಾವಿಯನ್ನು ತೋಡಿಸಿ ಆ ನೀರಿನಿಂದ ಬಾಯಾರಿಕೆಯ ದಣಿವನ್ನು ನಿವಾರಿಸು" ಎಂಬ ಉಪದೇಶದಂತೆ.

ಈ ರೀತಿಯಾದ ಅನರ್ಥಗಳ ಸಂಶಯ ಬಂದಲ್ಲಿ ಪ್ರವೃತ್ತಿಯು ಕೂಡಲಾರದು. ಹಾಗಾದರೆ ಪ್ರಯೋ-ಜನಾದಿಗಳನ್ನು ಹೇಳಿದರೂ ಹಿಂದೆ ಹೇಳಿದ ಅನರ್ಥಶಂಕೆಯು ಬರಬಹುದಲ್ಲ? ಅಂದರೆ ಅದು ಸರಿಯಲ್ಲ. ಪ್ರಯೋಜನಾದಿಗಳನ್ನು ಹೇಳಿದರೂ ಹಾಗೆ ಸಂಶಯವು ಬರುವುದಾದರೆ ಲೌಕಿಕವ್ಯವಹಾರವೇ ನಾಶವಾಗ-ಬೇಕಾದೀತು.

ಏಕೆಂದರೆ ವೈದ್ಯನು ಹೇಳಿದ ಔಷಧಿಯ ಬಗ್ಗೆ ಯಾರಾದರೂ ಸಂಶಯವನ್ನು ಹೊಂದಿ ಸ್ವೀಕರಿಸದಿರುವುದು ಕಂಡಿಲ್ಲವಷ್ಟೇ! ಆದ್ದರಿಂದ ಮೊದಲನೇ ಸೂತ್ರದಲ್ಲಿ ಮಾಡಿದ ಪ್ರಯೋಜನಾದಿಗಳ ನಿರೂಪಣೆಯು ಯುಕ್ತವಾಗಿದೆ ಎಂದು ತಾರ್ಕಿಕರ ವಾದ.

## ನೆನಪಿಡಿ

* ಸೂತ್ರಕಾರರು ಬ್ರಹ್ಮಜ್ಞಾನವು ಮೋಕ್ಷಸಾಧನವೆಂದು ಪ್ರಥಮಸೂತ್ರದಲ್ಲಿ ಹೇಳಿರು-ವರು. ಜಿಜ್ಞಾಸುವಿಗೆ ಇವರ ಈ ಮಾತಿನಲ್ಲಿ ಒಂದೇ ಬಾರಿಗೆ ಶ್ರದ್ಧೆ ಹೇಗೆ ಉಂಟಾಗುತ್ತದೆ?

* ಮೇಲಿನ ಪ್ರಶ್ನೆಗೆ ಕೆಲವರು ಎರಡು ಬಗೆಯಲ್ಲಿ ಸಮಾಧಾನವನ್ನು ಹೇಳಿದ್ದಾರೆ. ಇವರ

ಎರಡು ಬಗೆಯ ಸಮಾಧಾನಗಳನ್ನು ಈ ಮೂಲದಲ್ಲಿ ಅನುವಾದ ಮಾಡಲಾಗಿದೆ. ಮುಂದಿನ ಮೂಲದಲ್ಲಿ ಅದರ ನಿರಾಕರಣೆ ಇರುತ್ತದೆ. ಅದರ ಮುಂದಿನ ಮೂಲದಲ್ಲಿ ಗ್ರಂಥಕಾರರು ಹೇಳುವ ಸಮಾಧಾನವನ್ನು ನೀಡಲಾಗಿದೆ.

* (1) ಸೂತ್ರಕಾರರಲ್ಲಿ ಆಪ್ತತ್ವದ ನಿಶ್ಚಯವಿದ್ದರೆ ಗ್ರಂಥಾಧ್ಯಯನದಲ್ಲಿ ಸಾಮಾನ್ಯ-ನಿಶ್ಚಯವಷ್ಟೇ ಆಗುತ್ತದೆ. ಆದರೆ ಮಹಾಯಾಸಸಾಧ್ಯವಾದದ್ದರಲ್ಲಿ ವಿಶೇಷನಿಶ್ಚಯವು ಅನಿ-ವಾರ್ಯ. ಅದಕ್ಕಾಗಿ ಪ್ರಥಮಸೂತ್ರವು ಸಾರ್ಥಕ.

(2) ಆಪ್ತತ್ವನಿಶ್ಚಯವು ಸೂತ್ರಕಾರರಲ್ಲಿ ಇಲ್ಲದೇ ಇದ್ದರೆ ಅರ್ಥಸಂದೇಹದಿಂದಲೇ ಪ್ರವೃತ್ತಿಯು ಉಂಟಾಗುತ್ತದೆ. ಅರ್ಥಸಂದೇಹದಲ್ಲಿ ಕೋಟಿಗಳ ಸಮರ್ಪಣೆಗಾಗಿ ಪ್ರಥಮ-ಸೂತ್ರವು ಸಾರ್ಥಕ.

* ಕೇವಲ ಅರ್ಥಿತ್ವದಿಂದ ಔತ್ಸರ್ಗಿಕವಾದ ಕೋಟಿಸ್ಮರಣೆಗಳು ಉಂಟಾಗುವುದಾದರೆ ಹೇಗೆ ಬೇಕಾದರೂ ಸಂದೇಹವು ಬರಬೇಕಾಗುತ್ತದೆ. ಆದ್ದರಿಂದ ವಚನದಿಂದಲೇ ಸಂದೇಹ-ಕೋಟಿಗಳನ್ನು ಅಂಗಿಕರಿಸಬೇಕು.

* 'ಈ ಔಷಧಿಯು ಜ್ವರವನ್ನು ಪರಿಹಾರಮಾಡುತ್ತದೆ' ಎಂಬುದಾಗಿ ವೈದ್ಯನು ಹೇಳಿದಾಗ ಅವನ ಮಾತಿನ ಆಧಾರದಿಂದಲೇ ಈ ಔಷಧಿಗೆ ಜ್ವರಪರಿಹಾರ ಮಾಡುವ ಶಕ್ತಿ-ಯಿದೆಯೋ ಇಲ್ಲವೋ? ಎಂಬ ಸಂದೇಹ ಬರುತ್ತದೆ. ಇದರಂತೆ ಬ್ರಹ್ಮಜ್ಞಾನವು ಮೋಕ್ಷ-ಸಾಧನವಾಗಿದೆ ಎಂಬ ಸೂತ್ರಕಾರರ ವಚನದಿಂದಲೇ ಬ್ರಹ್ಮಜ್ಞಾನವು ಮೋಕ್ಷವನ್ನು ನೀಡು-ತ್ತದೋ ಇಲ್ಲವೋ ಎಂಬ ಸಂದೇಹವು ಬರುತ್ತದೆ.

* ಸಂದೇಹದಲ್ಲಿ ಎರಡು ಕೋಟಿಗಳಿವೆ. ಇವುಗಳಲ್ಲಿ ಬ್ರಹ್ಮಜ್ಞಾನವು ಮೋಕ್ಷಸಾಧನ-ವಾಗಿದೆ ಎಂಬ ವಿಧಿಕೋಟಿಯನ್ನು ತಿಳಿಯುವುದಕ್ಕೆ ಪ್ರಥಮಸೂತ್ರವು ಆವಶ್ಯಕವಾಗಿದೆ. ಆದ್ದರಿಂದ ಸೂತ್ರಕಾರರಲ್ಲಿ ಆಪ್ತತ್ವನಿಶ್ಚಯವಿದ್ದರೂ ಇಲ್ಲದಿದ್ದರೂ ಪ್ರಥಮಸೂತ್ರವು ಸಾರ್ಥಕ. ಇದು ಕೆಲವರ ಅಭಿಪ್ರಾಯ.

## ಕೆಲವು ಮತದವರ ನಿರಾಕರಣೆ

**ಶ್ರೀಮನ್ನ್ಯಾಯಸುಧಾ— ತದೇತದನುಪಪನ್ನಮ್ । ತಥಾ ಹಿ । ಯದಿ ತಾವ-**

**ದಾಪ್ತವಾಕ್ಯತಯಾ ಸೂತ್ರಮಿದಂ ಪ್ರಯೋಜನಾದೇರ್ನಿಶ್ಚಾಯಕಂ ಸ್ಯಾತ್ ತದಾ ಆಗಮತಯಾ ನ್ಯಾಯಸೂತ್ರತ್ವಹಾನಿಃ ।**

ನೈಯ್ಯಾಯಿಕರ ಈ ಸೂತ್ರಾರಂಭಣೀಯತ್ವದ ವಿಚಾರವು ಅಸಂಗತವಾಗಿದೆ. ಅದು ಹೀಗೆ – ಒಂದು ವೇಳೆ ಈ ಪ್ರಥಮಸೂತ್ರವು ಆಪ್ತವಾಕ್ಯವಾಗಿದೆ ಎಂಬ ಕಾರಣದಿಂದ ಪ್ರಯೋಜನಾದಿಗಳನ್ನು ಉಪಪಾದಿಸುವುದಾದರೆ ಆಗ ಸೂತ್ರವು ಆಗಮರೂಪವಾಗಿರುವುದರಿಂದ ನ್ಯಾಯಸೂತ್ರವೆಂದು ಕರೆಯುವುದೇ ತಪ್ಪಾಗುತ್ತದೆ. ಏಕೆಂದರೆ, ಇದರಲ್ಲಿ ನ್ಯಾಯಸೂತ್ರದ ಲಕ್ಷಣವೇ ಇರುವುದಿಲ್ಲ.

**ಕಿಂಚಾಪ್ತತ್ವಂ ಸೂತ್ರಕೃತೋ ಯೇನ ವೇದಾದಿನಾ ಪ್ರಮಾಣೇನಾವಗಂತವ್ಯಂ ತೇನೈವ ಪ್ರಯೋಜನಾದ್ಯಭಿಸಂಬಂಧೋಽಪಿ ಶಾಸ್ತ್ರಸ್ಯಾವಗಮ್ಯತ ಇತಿ ವ್ಯರ್ಥಂ ತದಭಿಧಾನಮಾಪದ್ಯೇತ । ಆಪ್ತತ್ವಾನಿಶ್ಚಯೇಽಪ್ಯರ್ಥಸಂದೇಹಾತ್ ಪ್ರವೃತ್ತಿರಿತಿ ಚಾತಿಸ್ಥವೀಯಃ । ನ ಹಿ ಕಶ್ಚಿತ್ ಪ್ರಯೋಜನಾದಿಸಂದೇಹೇಽತಿಮಹಾಯಾಸಸಾಧ್ಯೇ ಪ್ರವರ್ತತೇ, ಪ್ರಾಗುಕ್ತಾನರ್ಥಪರಂಪರಾಶ್ಚ ಕಥಂ ನ ಶಂಕೇತ ।**

ಮತ್ತು ಸೂತ್ರಕಾರರು ಆಪ್ತರಾಗಿದ್ದಾರೆಂಬ ವಿಚಾರವು ಯಾವ ವೇದಾದಿ ಪ್ರಮಾಣಗಳಿಂದ ತಿಳಿಯಲ್ಪಡುತ್ತದೋ ಅದೇ ಪ್ರಮಾಣದಿಂದ ಈ ಶಾಸ್ತ್ರದ ಪ್ರಯೋಜನ ಮೊದಲಾದ ಅನುಬಂಧಚತುಷ್ಟಯವನ್ನು ಶಾಸ್ತ್ರಕ್ಕೆ ತಿಳಿಯಬಹುದು. ಆದ್ದರಿಂದ ಈ ಸೂತ್ರದಲ್ಲಿ ಪುನಃ ಪ್ರಯೋಜನಾದಿಗಳನ್ನು ಹೇಳಿದ್ದು ವ್ಯರ್ಥವೇ ಆಗುತ್ತದೆ.

ಮತ್ತು ಸೂತ್ರಕಾರರು ಆಪ್ತರಾಗಿದ್ದಾರೆಂಬ ನಿಶ್ಚಯವು ಇಲ್ಲದಿದ್ದರೂ ಕೂಡ ಅರ್ಥಸಂದೇಹದಿಂದಲೇ ಪ್ರವೃತ್ತಿಯು ಉಂಟಾಗುತ್ತದೆಂದು ಸಮರ್ಥಿಸಿದ್ದು ಅತ್ಯಂತ ದುರ್ಬಲವಾಗಿದೆ. ಏಕೆಂದರೆ ಯಾರೊಬ್ಬನೂ ಕೂಡ ಪ್ರಯೋಜನಾದಿಗಳಲ್ಲಿ ಸಂದೇಹವಿದ್ದಾಗ ಮಹಾಯಾಸದಿಂದಷ್ಟೇ ಸಾಧ್ಯವಾಗುವ ವಿಚಾರದಲ್ಲಿ ಪ್ರವೃತ್ತಿಯನ್ನು ಮಾಡುವುದಿಲ್ಲ.

ಆದ್ದರಿಂದ ಹಿಂದೆ ಹೇಳಿದ ಅನರ್ಥಪರಂಪರೆಯನ್ನು ಹೇಗೆ ತಾನೇ ಶಂಕಿಸದೇ ಇರಲು ಸಾಧ್ಯವಾಗುತ್ತದೆ.

**ತಸ್ಮಾನ್ನೇದಂ ಪ್ರಯೋಜನಾದ್ಯುಪದೇಶಮಾತ್ರಂ, ಕಿಂತು ಶ್ರೌತಸ್ಯ ಪ್ರಯೋ-ಜನಾದೇಃ ನ್ಯಾಯೇನೋಪಪಾದನಾರ್ಥಮಿತ್ಯೇವ ಪರಿಹಾರಃ । ಆಪ್ತತ್ವಂ ತು ನ್ಯಾಯಸ್ಯ ಉಪೋದ್ಘಲಕಮಾತ್ರಮಿತಿ ಭಾಷ್ಯಕಾರೀಯಂ ತದ್ವ್ಯುತ್ಪಾದನ-ಮಪಿ ನಾನರ್ಥಕಮ್ । ಅತ ಏವಾಸ್ಯ ಸೂತ್ರಸ್ಯ ನ ಶಾಸ್ತ್ರಬಹಿರ್ಭಾವಃ । ಅಧ್ಯಯನವಿಧ್ಯಾದಿವದಸ್ಯಾಪ್ಯತಏವಾರಂಭಣೀಯತ್ವಸಿದ್ಧೇರ್ನಾನವಸ್ಥಾದಿ-ದೋಷೋಽಪೀತಿ ।**

ಆದ್ದರಿಂದ ಕೇವಲ ಪ್ರಯೋಜನಾದಿಗಳನ್ನು ತಿಳಿಸುವುದಕ್ಕಾಗಿ ಈ ಸೂತ್ರವು ಹೊರಟಿರುವುದಲ್ಲ; ಶ್ರುತಿಯಲ್ಲಿ ಹೇಳಿದ ಪ್ರಯೋಜನಾದಿಗಳನ್ನು ಯುಕ್ತಿಗಳ ಮೂಲಕ ಉಪಪಾದನೆ ಮಾಡುವುದೇ ಈ ಸೂತ್ರದ ಮುಖ್ಯ ಉದ್ದೇಶವಾಗಿದೆ. ಹೀಗೆಯೇ ಪರಿಹಾರವನ್ನು ಹೇಳಬೇಕು.

ಸೂತ್ರಕಾರರಲ್ಲಿ ಆಪ್ತತ್ವವನ್ನು ತಿಳಿಯುವುದು ಸೂತ್ರದ ಪ್ರಾಮಾಣ್ಯಕ್ಕೆ ಉಪೋದ್ಬಲಕ-ವಾಗಿದೆ. ಹಾಗಾಗಿ ಭಾಷ್ಯಕಾರರು ಸೂತ್ರಕಾರರಲ್ಲಿ ಆಪ್ತತ್ವವನ್ನು ಸಮರ್ಥಿಸಿದ್ದು ವ್ಯರ್ಥವಲ್ಲ. ಆದ್ದರಿಂದಲೇ ಈ ಸೂತ್ರಕ್ಕೆ ಶಾಸ್ತ್ರಬಹಿರ್ಭಾವವು ಯುಕ್ತವಾಗುವುದಿಲ್ಲ. ಶಾಸ್ತ್ರಾಂತರ್ಭಾವವೇ ಯುಕ್ತವಾಗುತ್ತದೆ.

ಅಧ್ಯಯನವನ್ನು ವಿಧಾನ ಮಾಡುವ ವಾಕ್ಯಗಳಂತೆ ಈ ಸೂತ್ರದ ಆರಂಭಣೀಯತ್ವವೂ ಕೂಡ ಇದೇ ಸೂತ್ರದಿಂದ ಸಿದ್ಧವಾಗುತ್ತದೆ. ಆದ್ದರಿಂದ ಅನವಸ್ಥಾದಿದೋಷಗಳಿಗೆ ಅವ-ಕಾಶವು ಇರುವುದಿಲ್ಲ.

ಹೀಗೆ ಹಿಂದಿನ ಆಕ್ಷೇಪಗಳಿಗೆ ಉತ್ತರವನ್ನು ತಿಳಿದುಕೊಳ್ಳಬೇಕು.

## ಕೇಚಿತ್ಕಾರರ ಪ್ರಥಮಪಕ್ಷದ ನಿರಾಕರಣೆ

ಪರಿಮಳ– ಯೇನೇತಿ ॥

ಪಾರಾಶರ್ಯಶ್ಚ ಕಪಿಲೋ ವೈಕುಂಠೋ ಋಷಭಸ್ತಥಾ ।
ಯಜ್ಞೋ ಧನ್ವಂತರಿಶ್ಚೈವ ಸ್ತ್ರೀರೂಪಸ್ತಾಪಸೋ ಮನುಃ ।
ನಾರಾಯಣೋ ಹರಿಃ ಕೃಷ್ಣಃ ಉಪೇಂದ್ರಃ ಸರ್ವ ಏವ ಚ ।
ಏವಮಾದ್ಯಾ ಹರೇಸ್ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾ ॥

ಇತಿ ಬೃಹದ್ಭಾಷ್ಯೋಕ್ತಪೈಂಗಿಶ್ರುತ್ಯಾದಿರೂಪವೇದೇನ । 'ನಾರಾಯಣಾದ್ವಿನಿಷ್ಪನ್ನಮ್' ಇತ್ಯಾದಿಪ್ರಾಗುಕ್ತಸ್ಮೃತ್ಯಾ ಚೇತ್ಯರ್ಥಃ । ತೇನೈವೇತಿ ॥ 'ಗುಣೋತ್ಕರ್ಷೇ ದೇವದೇವಸ್ಯ ವಿಷ್ಣೋಃ' । 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿನಾ ತಜ್ಜಾತೀಯವಾಕ್ಯೇನೈವೇತ್ಯರ್ಥಃ ।

''ಯೇನ'' –

ಪಾರಾಶರ್ಯಶ್ಚ ಕಪಿಲೋ ವೈಕುಂಠೋ ಋಷಭಸ್ತಥಾ ।
ಯಜ್ಞೋ ಧನ್ವಂತರಿಶ್ಚೈವ ಸ್ತ್ರೀರೂಪಸ್ತಾಪಸೋ ಮನುಃ ।
ನಾರಾಯಣೋ ಹರಿಃ ಕೃಷ್ಣಃ ಉಪೇಂದ್ರಃ ಸರ್ವ ಏವ ಚ ।
ಏವಮಾದ್ಯಾ ಹರೇಸ್ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾ ॥

ವೇದವ್ಯಾಸ, ಕಪಿಲ, ವೈಕುಂಠ, ಋಷಭ, ಯಜ್ಞ, ಧನ್ವಂತರೀ, ಮೋಹಿನೀ, ತಾಪಸ ಹರಿ, ಮನು, ನಾರಾಯಣ, ಶ್ರೀಹರಿ, ಕೃಷ್ಣ, ಉಪೇಂದ್ರ ಇವೆಲ್ಲವೂ ಸಾಕ್ಷಾತ್ತಾಗಿ ಪ್ರಾದುರ್ಭಾವ ಹೊಂದಿದ ಅವತಾರಗಳೆಂದು ಕರೆಯಲ್ಪಡುತ್ತವೆ.

ಹೀಗೆ ಬೃಹದಾರಣ್ಯಕಭಾಷ್ಯದಲ್ಲಿ ಭಾಷ್ಯಕಾರರು ಪೈಂಗಿಶ್ರುತಿಯನ್ನು ಉದಾಹರಿಸಿದ್ದಾರೆ. ಈ ಶ್ರುತಿಯಿಂದ ಶ್ರೀವೇದವ್ಯಾಸದೇವರು ಪರಮಾತ್ಮನ ಅವತಾರಸ್ವರೂಪರಾದ್ದರಿಂದ ಆಪ್ತರಾಗಿದ್ದಾರೆಂದು ನಿಶ್ಚಯವಾಗುತ್ತದೆ.

'ನಾರಾಯಣಾದ್ ವಿನಿಷ್ಪನ್ನಮ್' ಇತ್ಯಾದಿ ಸ್ಮೃತಿವಾಕ್ಯದ ಆಧಾರವೂ ಕೂಡ ಈ ವಿಷಯದಲ್ಲಿದೆ.

''ತೇನೈವ'' – 'ಗುಣೋತ್ಕರ್ಷೇ ದೇವದೇವಸ್ಯ ವಿಷ್ಣೋಃ' 'ತಮೇವ ವಿದ್ವಾನ್ ಅಮೃತ ಇಹ ಭವತಿ' ಇವೇ ಮೊದಲಾದ ಸಜಾತೀಯವಾಕ್ಯಗಳಿಂದ ಎಂದರ್ಥ.

ವಿವರಣೆ – ಸಾಧನಗೋಚರವಾದ ಇಚ್ಛೆ ಹಾಗೂ ಪ್ರವೃತ್ತಿಗಳನ್ನೇ ಪ್ರಯತ್ನವೆಂದು ಸಮರ್ಥಿಸಲಾಯಿತು. ಇಂಥ ಪ್ರವೃತ್ತಿಯು ಪ್ರೇಕ್ಷಾವಂತರಿಗೆ ಬರಬೇಕಾದರೆ ಅವಶ್ಯವಾಗಿ ವಿಷಯಪ್ರಯೋಜನಾದಿಗಳ ಜ್ಞಾನವು ಅವರಿಗಿರಬೇಕು. ಆ ವಿಷಯಪ್ರಯೋಜನಾದಿಗಳನ್ನೇ ಪ್ರಥಮಸೂತ್ರದಲ್ಲಿ ಶ್ರೀವೇದವ್ಯಾಸದೇವರು ಹೇಳುತ್ತಿದ್ದಾರೆ. ಆದ್ದರಿಂದ ಪ್ರಥಮಸೂತ್ರವು ಸಾರ್ಥಕವಾಗಿದೆ.

ಶ್ರೀವೇದವ್ಯಾಸದೇವರು ಹೇಳಿರುವುದು ಸತ್ಯ ; ಆದರೆ ಅವರ ವಾಕ್ಯದಲ್ಲಿ ಹೇಗೆ ತಾನೆ ಶ್ರದ್ಧೆ ಬರುತ್ತದೆ? ಎಂಬ ಪ್ರಧಾನವಾದ ಆಕ್ಷೇಪ. ಇದಕ್ಕೆ ಕೇಚಿತ್ಕಾರರು ಹೇಳುವ ಸಮಾಧಾನ ಎರಡು ಬಗೆಯಲ್ಲಿದೆ. (೧) ಶ್ರೀವೇದವ್ಯಾಸದೇವರಲ್ಲಿ ಆಪ್ತತ್ವನಿಶ್ಚಯವಿದ್ದರೆ ಬ್ರಹ್ಮನೇ ಶಾಸ್ತ್ರಕ್ಕೆ ವಿಷಯನಾಗಿದ್ದಾನೆ. ಮೋಕ್ಷಾದಿಗಳು ಪ್ರಯೋಜನಾದಿಗಳಾಗಿವೆ. ಇತ್ಯಾದಿಯಾಗಿ ಬಾದರಾಯಣರು ಹೇಳುವ ಮಾತ್ರದಿಂದಲೇ ಅವರಲ್ಲಿ ಆಪ್ತತ್ವನಿಶ್ಚಯವಿರುವುದರಿಂದ ಜಿಜ್ಞಾಸುವು ಪ್ರವೃತ್ತಿಯನ್ನು ಮಾಡುತ್ತಾನೆ. ಯಾರಿಗೆ ಆಪ್ತತ್ವದ ನಿಶ್ಚಯವಿರುವುದಿಲ್ಲವೋ ಅವನಿಗೆ ಸಂದೇಹ ಬರುವುದಕ್ಕೋಸ್ಕರ ಸೂತ್ರಕಾರರ ವಚನವೇ ಅನಿವಾರ್ಯವಾಗಿದೆ. ಪ್ರಥಮಸೂತ್ರದ ಉಲ್ಲೇಖದಿಂದಲೇ ಸಂಶಯದಲ್ಲಿರುವ ವಿಧಿಕೋಟಿಯ ಉಪಸ್ಥಿತಿಯು ಆಗುತ್ತದೆ. ಹೀಗೆ ಎರಡು ಪಕ್ಷಗಳಲ್ಲಿಯೂ ಪ್ರಥಮಸೂತ್ರವು ಸಾರ್ಥಕವಾಗಿದೆ ಎಂಬುದಾಗಿ ಹೇಳುತ್ತಾರೆ.

ಈ ಎರಡೂ ಬಗೆಯ ಸಮಾಧಾನಗಳಲ್ಲಿ ಮೊದಲನೆಯ ಸಮಾಧಾನವನ್ನು ಯದಿ ತಾವತ್'' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಇಲ್ಲಿರುವ 'ತಾವತ್' ಎಂಬ ಪದವು ಮುಂದೆ ಎರಡನೆಯ ಪಕ್ಷದ ನಿರಾಕರಣೆಯನ್ನು ಸೂಚಿಸುತ್ತಿದೆ.

ಒಂದು ವೇಳೆ ಸೂತ್ರಕಾರರು ಆಪ್ತರಾಗಿದ್ದಾರೆಂಬ ನಿಶ್ಚಯಜ್ಞಾನವಿದ್ದರೆ ಆಗ ಪ್ರಥಮಸೂತ್ರವು ನ್ಯಾಯಸೂತ್ರವೆಂದೇ ಕರೆಸಿಕೊಳ್ಳುತ್ತದೆ. ಪ್ರತಿಯೊಂದು ಸೂತ್ರಗಳು ಆಗಮರೂಪವಾಗಿ ಪ್ರಮಾಣಗಳೇ ಆಗಿವೆ. ಆದರೆ ಜೊತೆಯಲ್ಲಿ ನ್ಯಾಯೋಪಪಾದಕಗಳೂ ಕೂಡ ಆಗಿರುತ್ತವೆ. ಈಗ ಆಪ್ತವಾಕ್ಯತ್ವ-

ಮಾತ್ರದಿಂದ ಪ್ರಯೋಜನಾದಿಗಳನ್ನು ನಿಶ್ಚಯಿಸುವುದಾದರೆ ಕೇವಲ ಆಗಮಗಳಾಗುತ್ತವೆ. ನ್ಯಾಯೋಪ-ಪಾದಕಗಳು ಆಗುವುದಿಲ್ಲ ಎಂದಾಗುತ್ತದೆ.

ಮತ್ತು ಸೂತ್ರಕಾರರಲ್ಲಿ ಯಾವ ವೇದವಾಕ್ಯಗಳಿಂದ ಆಪ್ತತ್ವವು ನಿಶ್ಚಯವಾಗಿದೆಯೋ ಅದೇ ವಾಕ್ಯದಿಂದ ಪ್ರಯೋಜನಾದ್ಯಭಿಸಂಬಂಧವೂ ಕೂಡ ಶಾಸ್ತ್ರಕ್ಕೆ ತಿಳಿಯುತ್ತದೆಂದು ಗ್ರಂಥದಲ್ಲಿ ಹೇಳಿದ್ದಾರೆ. 'ಪಾರಾಶರ್ಯಶ್ಚ ಕಪಿಲೋ' ಇತ್ಯಾದಿ ಶ್ರುತಿವಾಕ್ಯದಿಂದ ಸೂತ್ರಕಾರರಲ್ಲಿ ಆಪ್ತತ್ವನಿಶ್ಚಯವು ಉಂಟಾಗಿದೆ. ಇದೇ ವಾಕ್ಯದಿಂದ ಶಾಸ್ತ್ರಕ್ಕೆ ಪ್ರಯೋಜನವು ತಿಳಿಯುತ್ತಿಲ್ಲ. ಆದ್ದರಿಂದ "ತೇನೇವ" ಎಂಬ ಪದಕ್ಕೆ ತಜ್ಜಾತೀಯವಾದ ವಾಕ್ಯದಿಂದ ಎಂಬರ್ಥವನ್ನು ವಿವಕ್ಷಿಸಬೇಕು. 'ಗುಣೋತ್ಕರ್ಷೇ ದೇವದೇವಸ್ಯ ವಿಷ್ಣೋಃ' ಎಂಬ ವಾಕ್ಯವು ಸರ್ವೋತ್ತಮನಾದ ಗುಣಪರಿಪೂರ್ಣನಾದ ವಿಷ್ಣುವಿನಲ್ಲಿ ಶಾಸ್ತ್ರಗಳು ತಾತ್ಪರ್ಯವನ್ನು ಹೊಂದಿವೆ ಎಂಬುದಾಗಿ ಹೇಳುತ್ತಿದೆ. 'ತಮೇವ ವಿದ್ವಾನ್ ಅಮೃತ ಇಹ ಭವತಿ' ಎಂಬ ವಾಕ್ಯವು ಮೋಕ್ಷಕ್ಕೆ ಬ್ರಹ್ಮಜ್ಞಾನವು ಸಾಧನವೆಂದು ಹೇಳುತ್ತಿದೆ. ಹೀಗೆ ವೇದವಾಕ್ಯದಿಂದಲೇ ಪ್ರಯೋಜನಾದಿಗಳು ತಿಳಿಯುತ್ತಿರುವುದರಿಂದ ಸೂತ್ರದಲ್ಲಿ ಅದನ್ನು ಪ್ರತಿಪಾದಿಸುವ ಆವಶ್ಯಕತೆ ಇರುವುದಿಲ್ಲ. ಆದ್ದರಿಂದ ಪ್ರಥಮಸೂತ್ರವು ಕೇಚಿತ್ಕಾರರ ಪಕ್ಷದಲ್ಲಿ ವ್ಯರ್ಥವಾಗುತ್ತದೆ. ಇದು ಮೊದಲ-ನೆಯ ಪಕ್ಷದ ನಿರಾಕರಣೆ.

## ಪ್ರಥಮಸೂತ್ರದಲ್ಲಿ ತಿಳಿಯುವ ನ್ಯಾಯಗಳು

ಪರಿಮಳ– ಅತಿಸ್ಫೀಯಃ ॥ ಅತಿಸ್ಥೂಲತರಂ ಸಮಾಧಾನಮಿತ್ಯರ್ಥಃ ॥ ಶ್ರೋತಸ್ಯ ಇತಿ ॥ 'ತದ್ವಿಜಿಜ್ಞಾಸಸ್ವ' ಇತ್ಯತ್ರ ವಿಶಬ್ದತಚ್ಛಬ್ದಾಭ್ಯಾಂ 'ಯಸ್ಯ ಪ್ರಸಾದಾತ್' ಇತ್ಯಾದೌ ಮುಚ್ಯತ ಇತ್ಯಾದಿಶಬ್ದೈಃ ಶ್ರುತಸ್ಯೇತ್ಯರ್ಥಃ ॥ ನ್ಯಾಯೇನೇತಿ ॥ ಪೂರ್ವಪಕ್ಷಿಣಾ ವಕ್ಷ್ಯ-ಮಾಣದಿಶಾ ಪ್ರಯೋಜನಾದ್ಯಭಾವಶಂಕಾಯಾಂ ಪ್ರಯೋಜನಸ್ಯ ಕರ್ಮಾದ್ಯಜನ್ಯತ್ವ-ರೂಪನ್ಯಾಯೇನ । ವಿಷಯಬ್ರಹ್ಮಣೋ ಜೀವಾದ್ ಭಿನ್ನತ್ವನ್ಯಾಯೇನಾಧಿಕಾರಿಣಃ ಶೂದ್ರಾದಿವ್ಯಾವೃತ್ತತ್ವೋಪಪಾದಕಾಧ್ಯಯನಾದಿಮತ್ತ್ವರೂಪನ್ಯಾಯೇನ ಉಪಪಾದನಾ-ರ್ಥಮ್ ಇತ್ಯರ್ಥಃ । ತದ್ ವ್ಯುತ್ಪಾದನಮುಪೀತಿ ॥ 'ಪ್ರಾದುರ್ಭೂತಃ' ಇತ್ಯಾದಿನಾ ಕೃತಮಿತಿ ಭಾವಃ ॥

''ಅತಿಸ್ಥವೀಯಃ'' – ಅತ್ಯಂತಸ್ಥೂಲತರವಾದ ಸಮಾಧಾನವಾಗಿದೆ. ''ಶ್ರೌತಸ್ಯ'' – ತದ್ವಿಜಿಜ್ಞಾಸಸ್ವ ಎಂಬ ಶ್ರುತಿವಾಕ್ಯದಲ್ಲಿರುವ ವಿ ಮತ್ತು ತತ್‌ಶಬ್ದಗಳಿಂದ ಮತ್ತು 'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್ ಆಸಂಸಾರಾತ್ ಮುಚ್ಯತೇ ನಾಪರೇಣ' ಇತ್ಯಾದಿ ಶ್ರುತಿಗಳಲ್ಲಿರುವ ಮುಚ್ಯತೇ ಮೊದಲಾದ ಶಬ್ದಗಳಿಂದ ಪ್ರತಿಪಾದಿಸಲ್ಪಡುವ ಎಂದರ್ಥ. ''ನ್ಯಾಯೇನ'' – ಪೂರ್ವಪಕ್ಷಿಯು ಮುಂದೆ ಹೇಳುವಂತೆ ಪ್ರಯೋಜನಾದಿಗಳು ಇರುವುದಿಲ್ಲ ಎಂಬ ಆಶಂಕೆಯನ್ನು ತೋರಿಸಿದರೆ ಮೋಕ್ಷಫಲವು ಕರ್ಮಾದಿಗಳಿಂದ ಉಂಟಾಗುವುದಿಲ್ಲ ಎಂಬ ಯುಕ್ತಿಯಿಂದ ಅದನ್ನು ಪರಿಹರಿಸಿ ಪ್ರಯೋಜನವನ್ನು ತೋರಿಸುತ್ತಾರೆ. ಅದರಂತೆ ವಿಷಯವೆನಿಸಿರುವ ಬ್ರಹ್ಮನು ಜೀವನಿಂದ ಭಿನ್ನನಾಗಿರುತ್ತಾನೆಂಬ ಯುಕ್ತಿಯಿಂದ ವಿಷಯವನ್ನು ಸಮರ್ಥಿಸುತ್ತಾರೆ. ಮತ್ತು ಶೂದ್ರಾದಿಗಳಲ್ಲಿ ಇಲ್ಲದೇ ಇರುವ ಅಧ್ಯಯನ ಮುಂತಾದವುಗಳಿರುವಿಕೆ ಎಂಬ ಯುಕ್ತಿಯಿಂದ ಅಧಿಕಾರಿಯನ್ನು ಸಮರ್ಥಿಸುತ್ತಾರೆ. ಈ ಸಮರ್ಥನೆಗೋಸ್ಕರ ಸೂತ್ರಕಾರರ ಪ್ರಯತ್ನವು ಸಾರ್ಥಕವಾಗಿದೆ ಎಂದರ್ಥ.

''ತದ್ವ್ಯುತ್ಪಾದನಮಪಿ'' – ಪ್ರಾದುರ್ಭೂತಃ ಇತ್ಯಾದಿ ವಾಕ್ಯಗಳಿಂದ ವ್ಯುತ್ಪಾದಿಸುವುದು ಕೂಡ ಎಂದರ್ಥ.

ವಿವರಣೆ– ಕೇಚಿತ್ಕಾರರು ಎರಡು ಬಗೆಯ ಸಮಾಧಾನಗಳನ್ನು ಹೇಳಿದ್ದಾರೆ. ಇವೆರಡರಲ್ಲಿ ಎರಡನೆಯ ಪರಿಹಾರವು ಅತ್ಯಂತ ಹೇಯವಾಗಿದೆ ಎಂಬುದನ್ನು ''ಅತಿಸ್ಥವೀಯಃ'' ಎಂಬ ಪದದಿಂದ ಗ್ರಂಥದಲ್ಲಿ ತಿಳಿಸಿದ್ದಾರೆ. ಅತ್ಯಂತ ಸ್ಥೂಲವಾದದ್ದು ಎಂಬುದು ಇದರ ಅರ್ಥ. ಆಪ್ತತ್ವನಿಶ್ಚಯವಿಲ್ಲದಿದ್ದರೂ ಅರ್ಥಚಿಂತನೆಯಿಂದಲೇ ಪ್ರವೃತ್ತಿಯಾಗುತ್ತದೆಂಬ ಸಂದೇಹವು ಬಹಳ ಸ್ಥೂಲವಾದ ಸಮಾಧಾನವಾಗಿದೆ; ಸೂಕ್ಷ್ಮವಾದ ಸಮಾಧಾನವಾಗಿರುವುದಿಲ್ಲ. ''ಸ್ಥೂಲ'' ಎಂಬ ಶಬ್ದದ ಮೇಲೆ 'ಈಯಸುನ್' ಎಂಬ ಪ್ರತ್ಯಯವು ಬಂದು ಸ್ಥವೀಯಃ ಎಂಬ ಶಬ್ದವು ನಿಷ್ಪನ್ನವಾಗಿದೆ. ಎರಡು ಪರಿಹಾರವನ್ನು ಹೇಳುತ್ತಿರುವುದರಿಂದ ಎರಡಿದ್ದಲ್ಲಿ ಈಯಸುನ್ ಪ್ರತ್ಯಯವನ್ನೇ ಹೇಳಬೇಕು. ಮೂರಕ್ಕಿಂತ ಹೆಚ್ಚು ಇದ್ದರೆ ತಮಪ್ ಹಾಗೂ ಇಷ್ಠನ್ ಪ್ರತ್ಯಯಗಳನ್ನು ಹೇಳಬೇಕು. ಆದ್ದರಿಂದ ಎರಡು ಪರಿಹಾರಗಳ ಮಧ್ಯದಲ್ಲಿ ಎರಡನೆಯ ಪರಿಹಾರವು ಅತ್ಯಂತ ಸ್ಥೂಲವಾಗಿದೆ ಎಂಬರ್ಥವನ್ನು ಹೇಳಿದಂತಾಗುತ್ತದೆ. ಅಲ್ಪಾಯಾಸಸಾಧ್ಯವಾದ ಕಾರ್ಯಗಳಲ್ಲಿ ಅರ್ಥಸಂದೇಹದಿಂದ ಪ್ರವೃತ್ತಿಯು ಕೂಡಬಹುದು. ಆದರೆ ಮಹಾಯಾಸಸಾಧ್ಯವಾದ ಕಾರ್ಯಗಳಲ್ಲಿ ಸಂದೇಹದಿಂದ ಪ್ರವೃತ್ತಿಯು ಸರ್ವಥಾ ಕೂಡುವುದಿಲ್ಲ. ಏಕೆಂದರೆ, ಯಜ್ಞಯಾಗಾದಿಗಳಿಗಿಂತಲೂ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನವು ಅತ್ಯಂತ ಕಠಿಣ-

ವಾಗಿದೆ. ಸಮಗ್ರವೇದಾರ್ಥವನ್ನೇ ಇದರಿಂದ ನಿಶ್ಚಯಿಸಬೇಕಾದ್ದರಿಂದ ಬೌದ್ಧಿಕವಾದ ಆಯಾಸ ಬಹಳ-ವಾಗುತ್ತದೆ. ಹೀಗೆ ಮಹಾಯಾಸಸಾಧ್ಯವಾದದ್ದರಲ್ಲಿ ಪ್ರವೃತ್ತಿಯು ಬರಬೇಕೆಂದರೆ ಸಂದೇಹವು ಸರ್ವಥಾ ಇರಬಾರದು.

ಕೇಚಿತ್ಕಾರರು ಹೇಳಿದ್ದು ಅಯುಕ್ತವಾಗುವುದಾದರೆ ನಿಜವಾದ ಸಮಾಧಾನ ಏನು? ಎಂಬ ಪ್ರಶ್ನೆಗೆ "ತಸ್ಮಾತ್" ಇತ್ಯಾದಿ ಗ್ರಂಥದಿಂದ ತಮ್ಮ ಸಮಾಧಾನವನ್ನು ಹೇಳುತ್ತಿದ್ದಾರೆ. ಈ ಪ್ರಥಮಸೂತ್ರವು ಕೇವಲ ಪ್ರಯೋಜನಾದಿಗಳನ್ನು ಹೇಳುತ್ತಿಲ್ಲ. ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುತ್ತಿದೆ. ಹೇಳುವವನು ಆಪ್ತನಾಗಿದ್ದಾನೆಂಬ ನಿಶ್ಚಯವು ಇಲ್ಲದಿದ್ದರೂ ಕೂಡ ನ್ಯಾಯಸಮ್ಮತವಾಗಿ ಮಾತನಾಡಿದಾಗ ಅವನ ಮಾತಿನಲ್ಲಿ ವಿಶ್ವಾಸವು ಬಂದೇ ಬರುತ್ತದೆ. ಆದ್ದರಿಂದ ಪ್ರಥಮಸೂತ್ರವು ಶ್ರೌತಪ್ರಯೋಜನಾದಿಗಳನ್ನು ನ್ಯಾಯದಿಂದ ಉಪಪಾದನೆ ಮಾಡುತ್ತಿರುವ ಕಾರಣ ಸಾರ್ಥಕವಾಗಿದೆ. ಉದಾಹರಣೆ – ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯಲ್ಲಿ ತತ್ ಎಂಬ ಶಬ್ದದಿಂದ ಬ್ರಹ್ಮನೆಂಬ ವಿಷಯವನ್ನು ವಿ ಎಂಬ ಶಬ್ದದಿಂದ ಶಮದಮಾದಿಗಳೆಂಬ ಅಧಿಕಾರಗಳನ್ನು ಹೇಳಲಾಗಿದೆ. 'ಯಸ್ಯ ಪ್ರಸಾದಾತ್' ಎಂಬಲ್ಲಿ ಮೋಕ್ಷವನ್ನು ಹೇಳಿದ್ದಾರೆ. ಹೀಗೆ ಶ್ರುತಿಯಲ್ಲಿ ಹೇಳಿದ ಪ್ರಯೋಜ-ನಾದಿಗಳನ್ನೇ ಪ್ರಥಮಸೂತ್ರವು ನ್ಯಾಯದಿಂದ ಉಪಪಾದನೆ ಮಾಡುತ್ತಿದೆ. ಪ್ರಥಮಸೂತ್ರ ಹೇಳಿದ ನ್ಯಾಯ ಹೀಗಿದೆ –

ಮೋಕ್ಷವು ಪ್ರಯೋಜನವೆಂದು ಹೇಳಿದರೆ ಕರ್ಮಾದಿಗಳಿಂದಲೇ ಮೋಕ್ಷವು ದೊರೆಯುತ್ತಿರುವಾಗ ಬ್ರಹ್ಮಜಿಜ್ಞಾಸೆಯನ್ನೇಕೆ ಮಾಡಬೇಕು? ಎಂಬ ಆಕ್ಷೇಪವು ಬರುತ್ತದೆ. ಬ್ರಹ್ಮನು ವಿಷಯನೆಂದು ಹೇಳಿದರೆ ಜೀವನೇ ಬ್ರಹ್ಮನಾಗಿದ್ದಾನೆ. ಈ ಜೀವನು ನಿಶ್ಚಿತನಾಗಿರುವುದರಿಂದ ವಿಷಯವೂ ಕೂಡ ಸಿದ್ಧವಾಗು-ವುದಿಲ್ಲ ಎಂಬ ವಿಷಯದ ಬಗ್ಗೆ ಆಕ್ಷೇಪವು ಬರುತ್ತದೆ. ಶೂದ್ರಾದಿಗಳೂ ಕೂಡ ಅಧಿಕಾರಿಗಳು ಆಗಬಹುದೆಂಬ ಅಧಿಕಾರಿಯ ಬಗ್ಗೆ ಆಕ್ಷೇಪವು ಬರುತ್ತದೆ. ಹೀಗೆ ವಿಷಯಪ್ರಯೋಜನಾದಿಗಳ ಬಗ್ಗೆ ಆಕ್ಷೇಪವು ಬಂದರೆ ಜ್ಞಾನದಿಂದಲೇ ಪ್ರಸಾದವು ದೊರೆಯುತ್ತದೆ; ಪ್ರಸಾದದಿಂದಲೇ ಮೋಕ್ಷವು ದೊರೆ-ಯುತ್ತದೆ. ಕರ್ಮದಿಂದ ಮೋಕ್ಷವು ದೊರೆಯುವುದಿಲ್ಲ ಎಂಬುದು ಪ್ರಥಮಸೂತ್ರವು ಸಮರ್ಥಿಸುತ್ತದೆ. ವಿಷಯನಾದ ಬ್ರಹ್ಮನು ಜೀವನಿಗಿಂತ ಭಿನ್ನನಾಗಿದ್ದಾನೆಂಬುದನ್ನು ನ್ಯಾಯದಿಂದ ಸಮರ್ಥಿಸುತ್ತದೆ. ಅಧಿಕಾರಿಗೆ ಶೂದ್ರಾದಿವ್ಯಾವೃತ್ತತ್ವಕ್ಕೆ ಉಪಪಾದಕವಾದ ಅಧ್ಯಯನಾದಿಮತ್ವವೆಂಬ ನ್ಯಾಯವನ್ನು ಉಪಪಾದನೆ ಮಾಡುತ್ತದೆ. ಆದ್ದರಿಂದ ಪ್ರಥಮಸೂತ್ರವು ವಿಷಯಾದಿಗಳನ್ನು ಹೇಳಲು ಹೊರಟಿರುವುದಲ್ಲ. ವಿಷಯಾದಿಗಳ ಉಪಪಾದನೆಗೆ ನ್ಯಾಯವನ್ನು ತಿಳಿಸಲು ಹೊರಟಿದೆ.

## ಅಧ್ಯಯನವಿಧಿಯಂತೆ ಪ್ರಥಮಸೂತ್ರಕ್ಕೆ ದೋಷವಿಲ್ಲ

ಪರಿಮಳ– ಅತ ಏವೇತಿ ॥ ನ್ಯಾಯವ್ಯುತ್ಪಾದಕತ್ವಾದೇವ ಇತ್ಯರ್ಥಃ । ಪ್ರೇಕ್ಷಾವತಾಂ ಶಾಸ್ತ್ರಾರಂಭಸಿದ್ಧಯೇ ಯಥೈತತ್ಸೂತ್ರಂ ತಥೈತದಾರಂಭಾರ್ಥಮಸ್ಯ ಪ್ರಯೋಜನಾದ್ಯಭಿ-ಸಂಬಂಧಬೋಧಕಸ್ಯಾನ್ಯಸ್ಯೋಕ್ತಾನವಸ್ಥಾಽಽತ್ಮಾಶ್ರಯಾದಿರ್ವಾ ಸ್ಯಾದಿತ್ಯತ ಆಹ – ಅಧ್ಯಯನೇತಿ ॥ 'ಸ್ವಾಧ್ಯಾಯೋಽಧ್ಯೇತವ್ಯಃ' ಇತಿ ವಾಕ್ಯಂ ಸ್ವಾಧ್ಯಾಯಮಾತ್ರಸ್ಯಾಧ್ಯಯನಂ ವಿದಧದಾತ್ಮನೋಽಪಿ ತದ್ವಿಧತ್ತೇ ತದ್ವದಿತ್ಯರ್ಥಃ । ಆದಿಪದೇನ 'ಸರ್ವೇ ವೇದಾ ಯತ್ಪದಮಾಮನಂತಿ' 'ವಾಚಾ ವಿರೂಪ ನಿತ್ಯಯಾ' ಇತ್ಯಾದೇರ್ಗ್ರಹಃ।

''ಅತ ಏವ'' – ವಿಷಯಪ್ರಯೋಜನಾದಿಗಳಿರುವಿಕೆ ಎಂಬ ನ್ಯಾಯಗಳನ್ನು ಪ್ರತಿಪಾದನೆ ಮಾಡುವುದರಿಂದಲೇ ಎಂದರ್ಥ. ಪ್ರೇಕ್ಷಾವಂತರಿಗೆ ಶಾಸ್ತ್ರಾರಂಭವು ಸಿದ್ಧವಾಗಬೇಕೆಂದರೆ ಹೇಗೆ ಪ್ರಥಮಸೂತ್ರವು ಆವಶ್ಯಕವೋ ಅದರಂತೆ ಈ ಸೂತ್ರದಲ್ಲಿ ಪ್ರವೃತ್ತಿಯಾಗಬೇಕಾದರೆ ಪ್ರಯೋಜನಾದಿಗಳನ್ನು ತಿಳಿಸುವ ಮತ್ತೊಂದು ಪ್ರಮಾಣವು ಬೇಕಾಗುತ್ತದೆ. ಆಗ ಅನವಸ್ಥಾ-ದೋಷವು ಬರುತ್ತದೆ. ಮತ್ತೊಂದು ಪ್ರಮಾಣವು ಬೇಡ; ತನ್ನಿಂದಲೇ ಸಿದ್ಧವಾಗುತ್ತದೆಂದು ಹೇಳಿದರೆ ಆತ್ಮಾಶ್ರಯದೋಷವು ಬರುತ್ತದೆ.

ಈ ಆಕ್ಷೇಪಕ್ಕೆ ಸಮಾಧಾನವನ್ನು ''ಅಧ್ಯಯನ'' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಾಕ್ಯವು ಸಕಲವೇದದಲ್ಲಿ ಸೇರಿದ ತನ್ನ ಅಧ್ಯಯನ-ವನ್ನು ಕೂಡ ವಿಧಾನಮಾಡುತ್ತಿದೆ. ಇದರಂತೆ ಈ ಸೂತ್ರವೂ ಕೂಡ ಸಮಸ್ತಶಾಸ್ತ್ರದ ಆರಂಭವನ್ನು ಸಮರ್ಥಿಸುವ ಮೂಲಕ ತನ್ನ ಆರಂಭವನ್ನೂ ಕೂಡ ವಿಧಿಸುತ್ತದೆ. ಆದ್ದರಿಂದ ಆತ್ಮಾಶ್ರಯದೋಷಕ್ಕೆ ಅವಕಾಶವಿಲ್ಲ.

''ಅಧ್ಯಯನವಿಧ್ಯಾದಿ'' ಎಂಬಲ್ಲಿರುವ ಆದಿಪದದಿಂದ 'ಸರ್ವೇ ವೇದಾಃ ಯತ್ಪದಮಾ-ಮನಂತಿ' 'ವಾಚಾ ವಿರೂಪ ನಿತ್ಯಯಾ' ಮೊದಲಾದ ವಾಕ್ಯಗಳನ್ನು ಸ್ವೀಕರಿಸಬೇಕು.

* * * *

## ಪ್ರಥಮಸೂತ್ರಕ್ಕೆ ದ್ವೈರೂಪ್ಯದ ವಿರೋಧವಿಲ್ಲ

ಪರಿಮಳ– ಅತ ಏವೇತಿ ॥ ಏತತ್ಸೂತ್ರಾದೇವ ಇತ್ಯರ್ಥಃ । ನ ಚ ಏಕಸ್ಯ ದ್ವೈರೂಪ್ಯವಿರೋಧಃ । ಅನ್ಯಸಾಹಿತ್ಯಕೈವಲ್ಯರೂಪಾವಚ್ಛೇದಕಧರ್ಮಾಭ್ಯಾಮುಪಪತ್ತೇರಿತಿ ಭಾವಃ । ಏತೇನ ಶಾಸ್ತ್ರೇ ಪ್ರವೃತ್ತಿಹೇತುಪ್ರಯೋಜನಾದ್ಯಭಿಸಂಬಂಧಜ್ಞಾನಾಯಾದ್ಯಸೂತ್ರಂ ಚೇತ್ ತತ್ರ ಪ್ರವೃತ್ತ್ಯರ್ಥಂ ತಸ್ಯ ಪ್ರಯೋಜನಾದ್ಯಭಿಸಂಬಂಧಬೋಧಕಸ್ಯ ಅನ್ಯಸ್ಯೋಕ್ತ್ಯಾ-ವನವಸ್ಥಿತಿರಿತಿ ನಿರಸ್ತಮ್ । ಸ್ವೇನೈವ ಸ್ವಸ್ಯಾಪಿ ಶಾಸ್ತ್ರತ್ವೇನ ರೂಪೇಣ ತದ್ಬೋಧನಾದಿತಿ ॥

"ಅತ ಏವ" – ಈ ಸೂತ್ರದಿಂದಲೇ. ಪ್ರಥಮಸೂತ್ರವು ಶಾಸ್ತ್ರದ ಉಪೋದ್ಘಾತವೂ ಆಗಿದೆ. ಶಾಸ್ತ್ರದಲ್ಲಿ ಅಂತರ್ಭಾವವನ್ನೂ ಕೂಡ ಹೊಂದುತ್ತದೆ. ಈ ಎರಡು ಸ್ವಭಾವಗಳು ಒಂದೇ ಸೂತ್ರಕ್ಕೆ ಹೇಳುವುದು ಹೇಗೆ? ಎಂಬುದು ಆಕ್ಷೇಪ. ಬೇರೆ ಸೂತ್ರಗಳ ಜೊತೆ ಸೇರದೇ ಇದ್ದಾಗ ಉಪೋದ್ಘಾತರೂಪವಾಗುತ್ತದೆ. ಬೇರೆ ಸೂತ್ರಗಳ ಜೊತೆ ಸೇರಿದಾಗ ಶಾಸ್ತ್ರದಲ್ಲಿ ಅಂತರ್ಭಾವವನ್ನು ಹೊಂದುತ್ತದೆ. ಎರಡೂ ಸ್ವಭಾವಗಳು ಒಂದೇ ಸೂತ್ರಕ್ಕೆ ಯುಕ್ತವಾಗುತ್ತದೆ.

ಶಾಸ್ತ್ರದಲ್ಲಿ ಪ್ರವೃತ್ತಿಯಾಗುವುದಕ್ಕೆ ಪ್ರಯೋಜನಾದಿ ನಿಶ್ಚಯವು ಕಾರಣವಾಗಿದೆ. ಆದಕ್ಕಾಗಿ ಈ ಪ್ರಥಮಸೂತ್ರವು ಆವಶ್ಯಕವೆಂದು ಹೇಳಿದರೆ, ಇದರಂತೆ ಪ್ರಥಮಸೂತ್ರದಲ್ಲಿ ಪ್ರವೃತ್ತಿ-ಯಾಗಲು ಪ್ರಯೋಜನಾದಿಗಳನ್ನು ತಿಳಿಸುವ ಮತ್ತೊಂದು ಸೂತ್ರವು ಬೇಕು. ಆದ್ದರಿಂದ ಅನವಸ್ಥಾದೋಷವು ಬರುತ್ತದೆ ಎಂಬ ಆಕ್ಷೇಪವನ್ನು ನಿರಾಕರಣೆ ಮಾಡಿದಂತಾಯಿತು. ತನ್ನ ಸ್ವಭಾವದಿಂದಲೇ ತನಗೆ ಶಾಸ್ತ್ರತ್ವವು ಸಿದ್ಧವಾಗುತ್ತದೆ. ಆದ್ದರಿಂದ ಶಾಸ್ತ್ರಾರಂಭಸಮರ್ಥಕತ್ವವೆಂಬ ಧರ್ಮವು ಹಾಗೂ ಶಾಸ್ತ್ರತ್ವವು ಒಂದೇ ಕಡೆ ಇರುವುದು ವಿವಕ್ಷಾಭೇದದಿಂದ ಯುಕ್ತವಾಗುತ್ತದೆ. ಯಾವುದೇ ವಿರೋಧಕ್ಕೆ ಅವಕಾಶವಿಲ್ಲ.

## ಪ್ರಥಮಸೂತ್ರವು ಶಾಸ್ತ್ರದಿಂದ ಬಹಿರ್ಭೂತವಲ್ಲ

ವಾಕ್ಯಾರ್ಥಚಂದ್ರಿಕಾ– ಆಪ್ತತ್ವಂ ತ್ವಿತಿ ॥ ನ್ಯಾಯಸ್ವರೂಪೇ ನ್ಯಾಯಸಾಧ್ಯಪ್ರಮೇಯೇ ವಾಽನ್ಯಥಾತ್ವಶಂಕಾನಿರಾಸೇನ ನ್ಯಾಯೋಪೋದ್ಬಲಕಮಿತ್ಯರ್ಥಃ ॥ ಅತ ಏವೇತಿ ॥ ವೇದಾರ್ಥ-

ನಿರ್ಣಾಯಕನ್ಯಾಯಗ್ರಥನಾತ್ಮಕಸ್ಯೈವ ಶಾಸ್ತ್ರತ್ವಾದಸ್ಯ ಚ ತಥಾತ್ವಾದಿತ್ಯರ್ಥಃ । ಏವಂ ಚಾಸ್ಯ ಶಾಸ್ತ್ರಬಹಿರ್ಭಾವೇ ಶಾಸ್ತ್ರಾರಂಭಸಮರ್ಥನೇನೈತದಾರಂಭಾಸಿದ್ಧೇರೇತದಾರಂಭೋಪಪಾದಕಾಂತ-ರಾಪೇಕ್ಷಾಯಾಮನವಸ್ಥಾಯಾಮಪಿ ನೇದಾನೀಂ ಸಾ । ಏತದಾರಂಭಾಯೋಪ-ಪಾದಕಾಂತರಾನನ್ವೇಷಣಾತ್ । ನಾಪಿ ಸಮನ್ವಯಾಧ್ಯಾಯಾದ್ಯಾರಂಭೋಪಪಾದಕೈತದಾರಂಭಾಯ ತದಧ್ಯಾಯಾದ್ಯಪೇಕ್ಷಾ ಯೇನಾನ್ಯೋನ್ಯಾಶ್ರಯಃ ಸ್ಯಾತ್ । ನಾಪ್ಯೇತದಾರಂಭಾಯೈತದ-ಪೇಕ್ಷಯಾಮಾತ್ಮಾಶ್ರಯಃ । 'ಸ್ವಾಧ್ಯಾಯೋಽಧ್ಯೇತವ್ಯಃ' ಇತಿ ವಾಕ್ಯತ್ವರೂಪವಿಶೇಷಾಕಾರೇಣ ಸರ್ವಸ್ವಾಧ್ಯಾಯಾಧ್ಯಯನವಿಧಾಯಕಸ್ಯ ಅಪ್ಯಸ್ಯ ವಾಕ್ಯಸ್ಯ ಸ್ವಾಧ್ಯಾಯತ್ವರೂಪಸಾಮಾನ್ಯಾಕಾರೇಣ ಸ್ವವಿಷಯತ್ವವದೇತತ್ ಸೂತ್ರತ್ವೇನ ಶಾಸ್ತ್ರಾರಂಭಹೇತೋರಪ್ಯಸ್ಯ ಶಾಸ್ತ್ರತ್ವೇನ ಸ್ವವಿಷಯತ್ವ-ಸ್ಯಾಪ್ಯುಪಪನ್ನತ್ವಾದಿತ್ಯಾಹ – ಅಧ್ಯಯನೇತಿ ॥

"ಆಪ್ತತ್ವಂ ತು" – ನ್ಯಾಯಸ್ವರೂಪದಲ್ಲಿ ಅಥವಾ ನ್ಯಾಯಸಾಧ್ಯವಾದ ಪ್ರಮೇಯದಲ್ಲಿ ಅನ್ಯಥಾತ್ವಶಂಕೆಯನ್ನು ನಿರಾಸಮಾಡುವ ಮೂಲಕ ನ್ಯಾಯಕ್ಕೆ ಉಪೋದ್ಬಲಕವಾಗಿದೆ ಎಂದರ್ಥ. "ಅತ ಏವ" ವೇದಾರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕವಾದದ್ದೇ ಶಾಸ್ತ್ರವೆಂದು ಕರೆಸಿಕೊಳ್ಳುತ್ತದೆ. ಈ ಸೂತ್ರವೂ ಕೂಡ ಶಾಸ್ತ್ರವಾಗಿದೆ ಎಂದರ್ಥ. ಆದ್ದರಿಂದ ಈ ಪ್ರಥಮಸೂತ್ರಕ್ಕೆ ಶಾಸ್ತ್ರಬಹಿರ್ಭಾವವನ್ನು ಹೇಳಿದರೆ ಶಾಸ್ತ್ರಕ್ಕೆ ಆರಂಭಕತ್ವವನ್ನು ಸಮರ್ಥನೆ ಮಾಡುವ ಈ ಸೂತ್ರಕ್ಕೆ ಆರಂಭಕತ್ವವು ಸಿದ್ಧವಾಗುವುದಿಲ್ಲ. ಈ ಪ್ರಥಮಸೂತ್ರದ ಆರಂಭಕತ್ವಕ್ಕೆ ಮತ್ತೊಂದು ಉಪಪಾದಕವನ್ನು ಹೇಳಿದರ ಅನವಸ್ಥಾದೋಷಕ್ಕೂ ಕೂಡ ಈಗ ಅವಕಾಶವಿಲ್ಲ. ಏಕೆಂದರೆ, ಪ್ರಥಮಸೂತ್ರಕ್ಕೆ ಆರಂಭಕವಾಗಿ ಮತ್ತೊಂದು ಉಪಪಾದಕವನ್ನು ನಾವು ಅನ್ವೇಷಣೆ ಮಾಡುತ್ತಿಲ್ಲ. ಮತ್ತು ಸಮನ್ವಯಾಧ್ಯಾಯ ಮೊದ-ಲಾದ ಶಾಸ್ತ್ರಕ್ಕೆ ಉಪಪಾದಕವಾಗಿ ಯಾವ ಈ ಪ್ರಥಮಸೂತ್ರವಿದೆಯೋ ಇದರ ಆರಂಭಕ್ಕೆ ಸಮನ್ವಯ ಮೊದಲಾದ ಅಧ್ಯಾಯಗಳ ಅಪೇಕ್ಷೆಯು ಇರುವುದಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯದೋಷಕ್ಕೂ ಅವಕಾಶವಿಲ್ಲ. ಇದರಂತೆ ಪ್ರಥಮಸೂತ್ರದ ಆರಂಭಕ್ಕೆ ತನ್ನ ಅಪೇಕ್ಷೆಯು ಕೂಡ ಇರುವುದಿಲ್ಲ. ಆದ್ದರಿಂದ ಆತ್ಮಾಶ್ರಯದೋಷವೂ ಕೂಡ ಬರುವುದಿಲ್ಲ.

'ಸ್ವಾಧ್ಯಾಯೋ ಅಧ್ಯೇತವ್ಯಃ' ಈ ವಾಕ್ಯವು ವಾಕ್ಯತ್ವವೆಂಬ ವಿಶೇಷಾಕಾರದಿಂದ ಸಕಲ ಸ್ವಾಧ್ಯಾಯಗಳಿಗೆ ಅಧ್ಯಯನವನ್ನು ವಿಧಾನ ಮಾಡುತ್ತಿದೆ. ತಾನು ಸ್ವಾಧ್ಯಾಯದಲ್ಲೇ ಸೇರಿರುವುದರಿಂದ ಸ್ವಾಧ್ಯಾಯತ್ವವೆಂಬ ಸಾಮಾನ್ಯಾಕಾರದಿಂದ ಸ್ವವಿಷಯತ್ವವು ಇರುವಂತೆ ಈ ಪ್ರಥಮಸೂತ್ರಕ್ಕೂ ಶಾಸ್ತ್ರಾರಂಭವೆಂಬ ಪ್ರಯೋಜಕತ್ವವು ಇದ್ದರೂ ಕೂಡ ಶಾಸ್ತ್ರಾರಂಭಹೇತುಕತ್ವವು ಇರುತ್ತದೆ. ಆದ್ದರಿಂದ

ಶಾಸ್ತ್ರಕ್ಕೆ ಆರಂಭಕತ್ವವನ್ನು ಸಮರ್ಥಿಸುವ ಮೂಲಕ ತನಗೂ ಕೂಡ ಆರಂಭಕತ್ವವನ್ನು ಸಮರ್ಥಿಸುತ್ತಿದೆ. ಈ ವಿಷಯವನ್ನು ''ಅಧ್ಯಯನ'' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

## ಮತ್ತೊಂದು ಬಗೆಯಲ್ಲಿ ಅನವಸ್ಥಾದೋಷಪರಿಹಾರ

ವಾಕ್ಯಾರ್ಥಚಂದ್ರಿಕಾ– ಅತ್ರ ತಸ್ಮಾತ್ ಇತ್ಯಾರಭ್ಯ 'ದೋಷೋऽಪಿ' ಇತ್ಯಂತೇನೈವ ನನು ಬ್ರಹ್ಮಜ್ಞಾನಸ್ಯ ಇತ್ಯಾದಿನಾ ಶಂಕಿತಸ್ಯ ಸರ್ವಸ್ಯ ಪರಿಹಾರಃ ಉಚ್ಯತ ಇತ್ಯಾದಿಪೂರ್ವಗ್ರಂಥೇನ ತು ಪ್ರಸಂಗಾತ್ ಶಿಷ್ಯಶಿಕ್ಷಾಯೈ ಪ್ರವೃತ್ತೇಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಂ ವಿವಿಚ್ಯೋಪಪಾದಿತಮಿತಿ ದ್ರಷ್ಟವ್ಯಮ್ । ಅಥವಾ ಪ್ರವೃತ್ತೇಃ ಪ್ರಯೋಜನನಿಶ್ಚಯಸಾಪೇಕ್ಷತ್ವನಿಯಮಾತ್ ಶಾಸ್ತ್ರಪ್ರವೃತ್ತಿಪ್ರಯೋಜಕತಯಾऽऽದ್ಯಸೂತ್ರೇऽವಶ್ಯಂ ಪ್ರಯೋಜನಾದಿಕಮಭಿಧೇಯಮ್ । ನ ಚೈವಂ ಪ್ರಥಮಸೂತ್ರಪ್ರವೃತ್ತಿಪ್ರಯೋಜಕಪ್ರಯೋಜನಾದ್ಯಭಿಧಾಯಕವಾಕ್ಯಾಂತರಾನುಸರಣಪರಂಪರಯಾऽನವಸ್ಥೇತಿ ವಾಚ್ಯಮ್ । ಪುರುಷಾರ್ಥಸಾಧನಗೋಚರೇಚ್ಛಾಪ್ರಯತ್ನರೂಪಚಿತ್ತವೃತ್ತೇಃ ಪ್ರವೃತ್ತಿತ್ವೇನ ಪ್ರಯೋಜನನಿಶ್ಚಯಸಾಪೇಕ್ಷತ್ವೇऽಪಿ ಯತ್ಕಿಂಚಿದನುಭವಫಲೇಚ್ಛಾಪುರುಷಾನಪೇಕ್ಷಿತಸಾಧ್ಯಸಾಧನಭಾವಾನುಭವಾನಾಂ ಚಿತ್ತವೃತ್ತಿತ್ವೇऽಪಿ ಪ್ರವೃತ್ತಿತ್ವಾಭಾವಾತ್ । ಪ್ರಥಮಸೂತ್ರೇಣ ಚ ಸಾಧ್ಯಸಾಧನಭಾವಾನುಭವಮಾತ್ರಸ್ಯ ಜಾಯಮಾನತ್ವೇऽಪಿ ತಸ್ಯ ಪ್ರಯೋಜನಾದಿನಿಶ್ಚಯಾನಪೇಕ್ಷತಯಾ ವಾಕ್ಯಾಂತರಾನನುಸರಣೇನಾನವಸ್ಥಾऽಭಾವಾತ್ ।

'ತಸ್ಮಾತ್' ಎಂಬಲ್ಲಿಂದ ಪ್ರಾರಂಭಿಸಿ 'ದೋಷೋऽಪಿ' ಎಂಬಲ್ಲಿಯ ತನಕ ''ನನು ಬ್ರಹ್ಮಜ್ಞಾನಸ್ಯ'' ಇತ್ಯಾದಿ ವಾಕ್ಯಗಳಿಂದ ಆಶಂಕೆ ಮಾಡಿದ ಸಕಲಕ್ಕೂ ಕೂಡ ಪರಿಹಾರವನ್ನು ಮಾಡಲಾಗಿದೆ. ''ಉಚ್ಯತೇ'' ಇತ್ಯಾದಿ ಹಿಂದಿನ ಗ್ರಂಥದಿಂದ ಪ್ರಾಸಂಗಿಕವಾಗಿ ಶಿಷ್ಯಶಿಕ್ಷಣೆಗೋಸ್ಕರ ಪ್ರವೃತ್ತವಾಗಿರುವುದರಿಂದ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವವನ್ನು ವಿವೇಚನೆ ಮಾಡಿ ಉಪಪಾದಿಸಲಾಗಿದೆ ಎಂದು ತಿಳಿಯಬೇಕು.

ಅಥವಾ ಪ್ರವೃತ್ತಿಗೆ ಪ್ರಯೋಜನನಿಶ್ಚಯದ ಅಪೇಕ್ಷೆಯು ನಿಯಮೇನ ಇರುವುದರಿಂದ ಶಾಸ್ತ್ರಪ್ರವೃತ್ತಿಗೆ ಪ್ರಯೋಜಕವಾಗಿ ಪ್ರಥಮಸೂತ್ರದಲ್ಲಿ ಅವಶ್ಯವಾಗಿ ಪ್ರಯೋಜನಾದಿಗಳನ್ನು ಹೇಳಲೇ ಬೇಕು.

ಹಾಗಾದರೆ ಪ್ರಥಮಸೂತ್ರದಲ್ಲಿ ಪ್ರವೃತ್ತಿಮಾಡಲು ಪ್ರಯೋಜಕವಾಗಿ ಪ್ರಯೋಜನಾದಿಗಳನ್ನು ಹೇಳಬೇಕಾದ್ದರಿಂದ ಮತ್ತೊಂದು ವಾಕ್ಯವನ್ನು ಅನುಸರಿಸಬೇಕಾಗುತ್ತದೆ. ಆಗ ಅನವಸ್ಥಾದೋಷವು ಬರುತ್ತದಲ್ಲವೇ? ಎಂಬುದಾಗಿ ಪ್ರಶ್ನಿಸಬಾರದು. ಪುರುಷಾರ್ಥಕ್ಕೆ ಸಾಧನವಿಷಯವಾದ ಇಚ್ಛಾಪ್ರಯತ್ನ-

ಗಳೆಂಬ ಚಿತ್ತವೃತ್ತಿಗಳಷ್ಟೇ ಪ್ರವೃತ್ತಿ ಎಂದು ಕರೆಸಿಕೊಳ್ಳುವುದರಿಂದ ಪ್ರಯೋಜನನಿಶ್ಚಯದ ಅಪೇಕ್ಷೆಯು ಇದ್ದರೂ ಕೂಡ ಯತ್ಕಿಂಚಿದನುಭವ ಹಾಗೂ ಫಲೇಚ್ಛೆಗಳು ಪುರುಷಾನಪೇಕ್ಷಿತವಾದ ಸಾಧ್ಯಸಾಧನಭಾವ ಹಾಗೂ ಅನುಭವಗಳು ಚಿತ್ತವೃತ್ತಿಯಾಗಿದ್ದರೂ ಕೂಡ ಪ್ರವೃತ್ತಿ ಎಂದು ಕರೆಸಿಕೊಳ್ಳುವುದಿಲ್ಲ. ಪ್ರಥಮಸೂತ್ರದಿಂದ ಸಾಧ್ಯಸಾಧನಭಾವದ ಅನುಭವವು ಬಂದರೂ ಕೂಡ ಅದಕ್ಕೆ ಪ್ರಯೋಜನಾದಿನಿಶ್ಚಯದ ಅಪೇಕ್ಷೆಯು ಇಲ್ಲದೇ ಇರುವುದರಿಂದ ಮತ್ತೊಂದು ವಾಕ್ಯವನ್ನು ಅನುಸರಿಸಬೇಕಾಗಿಲ್ಲ. ಆದ್ದರಿಂದ ಅನವಸ್ಥಾದೋಷವು ಬರುವುದಿಲ್ಲ.

## ಪ್ರಥಮಸೂತ್ರಾನುಭವವು ಯತ್ನಸಾಧ್ಯವಲ್ಲ

ವಾಕ್ಯಾರ್ಥಚಂದ್ರಿಕಾ— ನ ಚ ತರ್ಹ್ಯನುಭವಸ್ಯೈವ ಶಾಸ್ತ್ರಫಲತ್ವೇನ ತದರ್ಥ-ಪ್ರಯೋಜನಾದಿನಿಶ್ಚಯಾನಪೇಕ್ಷತಯಾ ವಾಕ್ಯಾಂತರಾನನುಸರಣೇನಾನವಸ್ಥಾऽಭಾವಾತ್ । ನ ಚ ತರ್ಹ್ಯನುಭವಸ್ಯೈವ ಶಾಸ್ತ್ರಫಲತ್ವೇನ ತದರ್ಥಪ್ರಯೋಜನಾದ್ಯಭಿಧಾಯಕಪ್ರಥಮಸೂತ್ರ-ವೈಯರ್ಥ್ಯಮಿತಿ ವಾಚ್ಯಮ್ । ಪ್ರಥಮಸೂತ್ರತಃ ಸಾಧ್ಯಸಾಧನಭಾವಾನುಭವಸ್ಯ ಅಯತ್ನಸಾಧ್ಯತ್ವೇನ ಪುರುಷಾರ್ಥಸಾಧನಸ್ಯ ದ್ವಿತೀಯಸೂತ್ರಾದಿಶಾಸ್ತ್ರಾಕಲನಸ್ಯ ಪೂರ್ವಾಪರಪರಾಮರ್ಶತತ್ತದ-ವಿರೋಧಾದ್ಯವಗಮಸ್ಯ ಚ ಅತಿಪ್ರಯತ್ನಸಾಧ್ಯತಯಾ ಪ್ರಯತ್ನಸಾಧ್ಯೇ ಪ್ರಯೋಜನಾದಿನಿಶ್ಚಯಸ್ಯಾ-ವಶ್ಯಾಪೇಕ್ಷಿತತ್ವಾತ್ । ನ ಚ ಆದ್ಯಸೂತ್ರಾವಧಾರಣೇऽಪಿ ವಿರೋಧಶಂಕಾ ನಿಯತಾ ತೇನ ತನ್ನಿರಾಸಾಯ ಯತ್ನೋ ಯುಜ್ಯೇತ । ಸಂಭಾವನಾಮಾತ್ರಸ್ಯಾಪ್ರಯೋಜಕತ್ವಾತ್ । ನ ಚ ಶಾಸ್ತ್ರಾವಧಾರಣಾದಿಕಮಪಿ ಲೋಕೋತ್ತರಮತೇಃ ಕಸ್ಯಚಿತ್ ಸಂಭಾವ್ಯತ ಇತಿ ನ ತದರ್ಥಮಪಿ ಪ್ರಯೋಜನಾದ್ಯಭಿಧೇಯಮಿತಿ ವಾಚ್ಯಮ್ । ಕಸ್ಯಚಿತ್ ಪ್ರಯೋಜನಾನಪೇಕ್ಷಾಯಾಮಪಿ ಸರ್ವ-ಸ್ಯಾತಥಾತ್ವೇನ ತದರ್ಥಮೇವ ಪ್ರಯೋಜನಾದ್ಯಭಿಧಾನಾತ್ ಇತ್ಯಾಶಯೇನ ಚಿತ್ತವೃತ್ತಿವಿಭಾಗಂ ದರ್ಶಯನ್ನೇವ ಪ್ರವೃತ್ತ್ಯಪ್ರವೃತ್ತೀ ವಿವೇಚಯತಿ – ತ್ರಿವಿಧಾ ಹೀತ್ಯಾದಿನಾ ॥

ಪ್ರಶ್ನೆ – ಅನುಭವವೇ ಶಾಸ್ತ್ರಫಲವಾಗಿದೆ. ಇದಕ್ಕಾಗಿ ಪ್ರಯೋಜನಾದ್ಯಭಿಧಾಯಕವಾದ ಪ್ರಥಮಸೂತ್ರದ ಅವಶ್ಯಕತೆ ಏಕೆ?

ಉತ್ತರ – ಈ ಪ್ರಶ್ನೆ ತಪ್ಪು; ಪ್ರಥಮಸೂತ್ರದಿಂದ ಬರುವ ಸಾಧ್ಯಸಾಧನಭಾವದ ಅನುಭವವು ಅಯತ್ನಸಾಧ್ಯವಾಗಿದೆ. ಆದರೆ ಪುರುಷಾರ್ಥಸಾಧನವಾದ ದ್ವಿತೀಯಾದಿ ಸೂತ್ರಗಳಿಂದ ಪ್ರಾಪ್ತವಾಗುವ ಅನುಭವವು ಪೂರ್ವಾಪರ ಪರಾಮರ್ಶದಿಂದ ಕೂಡಿರುತ್ತದೆ. ಮತ್ತು ಪರಸ್ಪರವಿರೋಧಪರಿಹಾರ-

ರೂಪವಾಗಿರುತ್ತದೆ. ಆದ್ದರಿಂದ ಮಹಾಯಾಸಸಾಧ್ಯವಾಗಿದೆ. ಇಂಥ ಪ್ರಯತ್ನಸಾಧ್ಯವಾದ ದ್ವಿತೀಯಾದಿ ಸೂತ್ರಗಳ ಅನುಭವಕ್ಕೆ ಪ್ರಯೋಜನಾದಿ ನಿಶ್ಚಯದ ಅವಶ್ಯಕತೆಯು ಇದ್ದೇ ಇರುತ್ತದೆ.

ಪ್ರಶ್ನೆ – ಇದೇ ರೀತಿಯಲ್ಲಿ ಪ್ರಥಮಸೂತ್ರದ ಅವಧಾರಣದಲ್ಲೂ ವಿರೋಧದ ಆಶಂಕೆಯು ಬಂದೇ ಬರುತ್ತದೆ. ಆದ್ದರಿಂದ ಇದೂ ಕೂಡ ಪ್ರಯತ್ನಸಾಧ್ಯವೇ ಆಗಿದೆ. ಇದಕ್ಕಾಗಿ ಮತ್ತೊಂದು ಸೂತ್ರವು ಬೇಕಲ್ಲವೇ?

ಉತ್ತರ – ಪ್ರಥಮಸೂತ್ರದ ಅವಧಾರಣೆಯಲ್ಲಿ ವಿರೋಧಾಶಂಕೆಯು ನಿಯತವಾಗಿರುವುದಿಲ್ಲ. ಹಾಗಿದ್ದಲ್ಲಿ ಪ್ರಯತ್ನಸಾಧ್ಯವಾಗುತ್ತಿತ್ತು. ಕೇವಲ ಸಂಭಾವನೆಯು ಅಪ್ರಯೋಜಕವಾಗಿದೆ.

ಪ್ರಶ್ನೆ – 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಶಾಸ್ತ್ರದಿಂದ ಉಂಟಾಗುವ ಅನುಭವವೂ ಕೂಡ ಮಹಾಪ್ರಯತ್ನಸಾಧ್ಯವೆಂದು ಹೇಗೆ ಹೇಳುತ್ತೀರಿ? ಯಾರು ಅತ್ಯಂತ ಚಾಣಾಕ್ಷಮತಿಯಾಗಿದ್ದಾನೋ, ಲೋಕೋತ್ತರಮತಿಯುಳ್ಳವನೋ ಅವನಿಗೆ ಪೂರ್ವೋತ್ತರವಿರೋಧವಾಗಲೀ, ಪೂರ್ವಾಪರ-ಪರಾಮರ್ಶಗಳಾಗಲೀ ಇರುವುದಿಲ್ಲ. ಅನಾಯಾಸವಾಗಿ ಸಮಗ್ರ ಶಾಸ್ತ್ರಾರ್ಥವನ್ನು ಹೊಂದುತ್ತಾನೆ. ಆದ್ದರಿಂದ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳುವ ಅವಶ್ಯಕತೆಯೂ ಕೂಡ ಇರುವು-ದಿಲ್ಲ?

ಉತ್ತರ – ಹೀಗೆ ಪ್ರಶ್ನಿಸಬಾರದು. ಏಕೆಂದರೆ, ಯಾರೋ ಒಬ್ಬ ಲೋಕೋತ್ತರಮತಿಗೆ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲ. ಎಂದ ಮಾತ್ರಕ್ಕೆ ಎಲ್ಲಾ ಜಿಜ್ಞಾಸುಗಳಿಗೂ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲವೆಂದು ಹೇಳಲಾಗದು. ಅಂಥ ಸಾಧಾರಣ ಜಿಜ್ಞಾಸುವಿಗೆ ಪ್ರಯೋಜನಾದ್ಯಭಿ-ಧಾನದ ಅವಶ್ಯಕತೆಯು ಇರುತ್ತದೆ. ಈ ಅಭಿಪ್ರಾಯದಿಂದ ಚಿತ್ತವೃತ್ತಿಯ ವಿಭಾಗವನ್ನು ತೋರಿಸುವ ಮೂಲಕವೇ ಯಾವುದು ಪ್ರವೃತ್ತಿ ಯಾವುದು ಪ್ರವೃತ್ತಿಯಲ್ಲ ಎಂಬುದರ ವಿವೇಚನೆಯನ್ನು ಕೂಡ "ತ್ರಿವಿಧಾ ಹಿ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಿವರಣೆ – ಪೂರ್ವಪಕ್ಷಿಯು ಯಾವ ಅನವಸ್ಥಾದೋಷವನ್ನು ಆಕ್ಷೇಪಿಸಿದನೋ ಆ ಅನವಸ್ಥಾ-ದೋಷವು ತಸ್ಮಾತ್ ಎಂಬಲ್ಲಿಂದ ಪ್ರಾರಂಭಿಸಿ ದೋಷೋಽಪಿ ಎಂಬಲ್ಲಿಯ ತನಕ ಕೊನೆಯ ನಾಕು-ವಾಕ್ಯಗಳಿಂದ ಪರಿಹರಿಸಿದರು. ಇದಕ್ಕೆ ಉಪಯುಕ್ತವಾಗಿ ಮತ್ತು ಪ್ರಾಸಂಗಿಕವಾಗಿ ಶಿಷ್ಯಮತಿವೈಶದ್ಯ-ಕ್ಕೋಸ್ಕರ ಚಿತ್ತವೃತ್ತಿಗಳು ಎಷ್ಟು ವಿಧವಾಗಿವೆ? ಯಾವುದು ಪ್ರವೃತ್ತಿಯೆಂದು ಕರೆಸಿಕೊಳ್ಳುತ್ತದೆ; ಯಾವುದು ಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ? ಎಂಬುದನ್ನು ಇಲ್ಲಿಯ ತನಕ ವ್ಯಾಖ್ಯಾನವನ್ನು ಮಾಡಿದರು.

ಪ್ರಕೃತ 'ಅಥವಾ' ಇತ್ಯಾದಿ ವಾಕ್ಯದಿಂದ ಪ್ರಾರಂಭದಿಂದಲೇ ಅನವಸ್ಥಾದೋಷದ ಪರಿಹಾರಕ್ಕಾಗಿ-ಯೇ ವಾಕ್ಯಗಳು ಹೊರಟವೆ ಎಂದು ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ. ಯಾವುದು ಪ್ರವೃತ್ತಿಯೆಂದು ಕರೆಸಿಕೊಳ್ಳುತ್ತದೆ; ಯಾವುದು ಕರೆಸಿಕೊಳ್ಳುವುದಿಲ್ಲ? ಎಂಬು ವಿವೇಚನೆ ಮಾಡುವ ಸಂದರ್ಭದಲ್ಲಿ ಸಾಧನಗೋಚರವಾದ ಇಚ್ಛಾಪ್ರಯತ್ನಗಳಷ್ಟೇ ಪ್ರವೃತ್ತಿಯೆಂದು ಕರೆಸಿಕೊಳ್ಳುತ್ತವೆ. ಆದರೆ ಫಲೇಚ್ಛೆ, ಯತ್ಕಿಂಚಿದನುಭವ, ಪುರುಷಾನಪೇಕ್ಷಿತವಾದ ಸಾಧ್ಯಸಾಧನದ ಅನುಭವ ಇವುಗಳು ಚಿತ್ತವೃತ್ತಿಯೆಂದು ಕರೆಸಿಕೊಂಡರೂ ಕೂಡ ಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ. ಪ್ರಕೃತ ಪ್ರಥಮಸೂತ್ರದಿಂದ ಬ್ರಹ್ಮಜ್ಞಾನದಿಂದ ಮೋಕ್ಷವು ದೊರೆಯುತ್ತದೆ ಎಂಬ ಜ್ಞಾನವು ಬರುತ್ತಿದೆ. ಇದು ಪ್ರವೃತ್ತಿಯೆಂದು ಕರೆಸಿಕೊಳ್ಳುವುದೇ ಇಲ್ಲ. ಆದ್ದರಿಂದ ಪ್ರಥಮಸೂತ್ರದಿಂದ ಹುಟ್ಟುವ ಅನುಭವವು ಪ್ರವೃತ್ತಿಶಬ್ದವಾಚ್ಯ-ವಾಗದ ಕಾರಣ ಇದಕ್ಕಾಗಿ ಮತ್ತೊಂದು ಸೂತ್ರದ ಅವಶ್ಯಕತೆಯು ಇರುವುದಿಲ್ಲ. ಅರ್ಥಾತ್ ಪ್ರಥಮಸೂತ್ರದ ಪ್ರವೃತ್ತಿಗೋಸ್ಕರ ಮತ್ತೊಂದು ಸೂತ್ರವನ್ನು ಹೇಳುವ ಅವಶ್ಯಕತೆಯು ಇರುವುದಿಲ್ಲ.

ಹಾಗಾದರೆ ಪ್ರಥಮಸೂತ್ರವೇ ಬೇಡ. ಏಕೆಂದರೆ ಅನುಭವವು ಪ್ರವೃತ್ತಿಶಬ್ದವಾಚ್ಯವಾಗಿಲ್ಲ. ಇಂಥ ಅನುಭವಕ್ಕಾಗಿ ಪೂರ್ವದಲ್ಲಿ ಪ್ರಯೋಜನಾದಿಗಳ ನಿಶ್ಚಯವು ಬೇಡ ಎಂಬುದಾಗಿ ಹೇಳಿದರೆ 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಎಲ್ಲಾ ಸೂತ್ರಗಳಿಂದಲೂ ಕೂಡ ಶಾಸ್ತ್ರಾರ್ಥದ ಅನುಭವವೇ ಬರುತ್ತದೆ. ಅನುಭವ ಎಂದರೆ ಸ್ಮೃತಿವ್ಯತಿರಿಕ್ತವಾದ ಜ್ಞಾನ ಎಂದಷ್ಟೇ ಅರ್ಥ. ನೀವೇ ಹೇಳಿದಂತೆ ಅನುಭವವು ಪ್ರವೃತ್ತಿಶಬ್ದವಾಚ್ಯವಾಗಿರುವುದಿಲ್ಲ. ಅದಕ್ಕಾಗಿ ಪ್ರಯೋಜನಾದಿಗಳ ಅಪೇಕ್ಷೆಯು ಇರುವುದಿಲ್ಲ. ಆದ್ದರಿಂದ ಸಮಗ್ರಶಾಸ್ತ್ರಾರ್ಥದಿಂದ ಹುಟ್ಟುವ ಅನುಭವವು ಪ್ರವೃತ್ತಿಯೆಂದು ಕರೆಸಿಕೊಳ್ಳದಿದ್ದರೆ ಇಂಥ ಶಾಸ್ತ್ರಾರ್ಥಾನುಭವಕ್ಕಾಗಿ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿರುವುದು ಕೂಡ ಅನಾವಶ್ಯಕ.

'ಆತ್ಮನ್ಯೇವ ಆತ್ಮಾನಂ ಪಶ್ಯೇತ್' ಇತ್ಯಾದಿ ಶ್ರುತಿಗಳಲ್ಲಿ ಜ್ಞಾನವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ನಮ್ಮ ಸಿದ್ಧಾಂತದಲ್ಲಿ ಜ್ಞಾನವಿಧಿಯನ್ನು ಅಂಗೀಕರಿಸಲಾಗಿದೆ. ಆದರೆ ಅದ್ವೈತಿಗಳು ಜ್ಞಾನವಿಧಿ ಯನ್ನು ಅಂಗೀಕರಿಸುವುದಿಲ್ಲ. ಈ ಜ್ಞಾನವು ವಿಧೇಯವಾದ್ದರಿಂದ ಯತ್ನಸಾಧ್ಯವಾಗಿದೆ. ಕೃತಿಸಾಧ್ಯವಾದ ವಿಷಯಗಳಲ್ಲಿ ಮಾತ್ರ ವಿಧಿವಾಕ್ಯಗಳು ಪ್ರವೃತ್ತವಾಗುತ್ತವೆ. 'ನಾऽಶಕ್ಯೇ ಶಾಸ್ತ್ರಚೋದನಾ' ಎಂಬ ಮಾತಿನಂತೆ ಅಶಕ್ಯವಾದ ಕಾರ್ಯಗಳಲ್ಲಿ ಶಾಸ್ತ್ರವು ನಮ್ಮನ್ನು ವಿಧಾನ ಮಾಡುವುದಿಲ್ಲ. ಅಥವಾ ಎಲ್ಲಿ ರಾಗದ್ವೇಷಾದಿಗಳಿಂದ ನೇರವಾಗಿಯೇ ಪ್ರವೃತ್ತಿಯು ಉಂಟಾಗುತ್ತದೋ ಅಲ್ಲಿಯೂ ಕೂಡ ವಿಧಿ ವಾಕ್ಯವು ಅನಾವಶ್ಯಕ. ಪ್ರಕೃತದಲ್ಲಿ ಜ್ಞಾನಕ್ಕೆ ವಿಧಿಯನ್ನು ಅಂಗೀಕರಿಸಿದ್ದೇವೆ. ಈ ಜ್ಞಾನವು ಎರಡು

ವಿಧವಾಗಿದೆ. (೧) ಯತ್ನಸಾಧ್ಯವಾದ ಅನುಭವ (೨) ಯತ್ನಸಾಧ್ಯವಲ್ಲದ ಅನುಭವ ಎಂದು. ಪ್ರಥಮಸೂತ್ರದಿಂದ ಆಪಾತತಃ ಉಂಟಾಗುವ ಅನುಭವವು ಯತ್ನಸಾಧ್ಯವಾಗಿರುವುದಿಲ್ಲ. ಈ ಅನುಭವವು ಘನಗರ್ಜಿತನ್ಯಾಯದಿಂದ ತಾನಾಗಿಯೇ ಬರುತ್ತದೆ. ಇಂಥ ಅನುಭವವನ್ನು ಹೊಂದುವುದಕ್ಕೋಸ್ಕರ ಮತ್ತೊಂದು ವಿಧಿವಾಕ್ಯಬೇಕು. ಅದಕ್ಕಾಗಿ ಪ್ರಯೋಜನಾದಿಗಳ ನಿಶ್ಚಯವಿರಬೇಕು ಎಂಬುದಾಗಿ ಹೇಳುವ ಅವಶ್ಯಕತೆ ಇರುವುದಿಲ್ಲ. ಆದರೆ ಜನ್ಮಾದ್ಯಸ್ಯ ಯತಃ ಎಂದು ಪ್ರಾರಂಭಿಸಿ ಸಮಗ್ರಶಾಸ್ತ್ರದಿಂದ ಪ್ರಾಪ್ತವಾಗುವ ಅನುಭವವು ಅತ್ಯಂತ ಆಯಾಸಸಾಧ್ಯವಾಗಿದೆ. ಇಂಥ ಅತಿಪ್ರಯತ್ನಸಾಧ್ಯವಾದ ಅನುಭವಕ್ಕೆ ಪ್ರಯೋಜನಾದಿಗಳ ಅವಶ್ಯಕತೆಯು ಇದ್ದೇ ಇರುತ್ತದೆ. ಅದಕ್ಕಾಗಿ ಪ್ರಥಮಸೂತ್ರದ ಅವಶ್ಯಕತೆಯು ಇರುತ್ತದೆ.

## ಯಾವುದಕ್ಕೆ ಪ್ರಯೋಜನಾದಿಗಳ ಅವಶ್ಯಕತೆಯೇ ಇರುವುದಿಲ್ಲವೋ ಅದು ಪ್ರವೃತ್ತಿಯೇ ಅಲ್ಲ

ವಾಕ್ಯಾರ್ಥಚಂದ್ರಿಕಾ– ನನು ಕಿಮನೇನಾರ್ಧಜರತೀಯೇನ ಸರ್ವಚಿತ್ತವೃತ್ತೇಃ ಪ್ರವೃತ್ತಿತ್ವಮೇವ ಸ್ವೀಕೃತ್ಯ ಪ್ರಯೋಜನನಿಶ್ಚಯಸಾಪೇಕ್ಷತ್ವಸ್ಯ ಸರ್ವತ್ರ ತನ್ನಿರಪೇಕ್ಷತ್ವಸ್ಯ ವಾ ಸ್ವೀಕಾರ್ಯತ್ವೇನ ವೈಚಿತ್ರ್ಯೇ ನಿಯಾಮಕಾಭಾವಾದಿತ್ಯತೋ ಯತ್ಕಿಂಚಿದನುಭವಫಲೇಚ್ಛಾಸಾಧ್ಯಸಾಧನಭಾವಾನುಭಾವಾನಾಂ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಸ್ಯ ಬಾಧಿತತ್ವೇನ ಪುರುಷಾರ್ಥಸಾಧನೇಚ್ಛಾಪ್ರಯತ್ನಯೋಶ್ಚ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಸ್ಯ ಅನುಭವಸಿದ್ಧತಯಾ ವೈಚಿತ್ರ್ಯಕಲ್ಪನಸ್ಯ ಆವಶ್ಯಕತ್ವಮಿತ್ಯಾಶಯೇನಾಹ – ನ ಹೀತ್ಯಾದಿನಾ ॥ ತಸ್ಮಾದ್ ಯಾ ಪ್ರವೃತ್ತಿಃ ತಸ್ಯಾಃ ಪ್ರಯೋಜನಾದಿನಿಶ್ಚಯಸಾಪೇಕ್ಷತ್ವಂ ಯಸ್ಯಾಶ್ಚ ತನ್ನಾಸ್ತಿ ತಸ್ಯಾಃ ಪ್ರವೃತ್ತಿತ್ವಮೇವ ನೇತಿ ಯುಕ್ತಂ ಪ್ರಥಮಸೂತ್ರೇ ತದಭಿಧಾನಂ ನಾಪ್ಯನವಸ್ಥಾ ಇತ್ಯಾಶಯೇನಾಹ – ತಸ್ಮಾದಿತಿ ॥

ಪ್ರಶ್ನೆ – ಅರ್ಧಜರತೀಯನ್ಯಾಯವನ್ನೇಕೆ ಅನುಸರಿಸುತ್ತಿದ್ದೀರಿ. ಎಲ್ಲಾ ಚಿತ್ತವೃತ್ತಿಗಳನ್ನೂ ಪ್ರವೃತ್ತಿಯೆಂದೇ ಅಂಗೀಕರಿಸಬೇಕು. ಆಗ ಪ್ರತಿಯೊಂದಕ್ಕೂ ಕೂಡ ಪ್ರಯೋಜನನಿಶ್ಚಯದ ಅಪೇಕ್ಷೆಯು ಇರುತ್ತದೆಂದು ಹೇಳುವುದು ಸೂಕ್ತವಾಗಿದೆ. ಅಥವಾ ಎಲ್ಲಾ ಪ್ರವೃತ್ತಿಗಳಿಗೂ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲವೆಂದು ಸ್ವೀಕರಿಸಬಹುದು. ಇದನ್ನು ಬಿಟ್ಟು ಕೆಲವು ಚಿತ್ತವೃತ್ತಿಗಳಿಗೆ ಪ್ರಯೋಜನದ ಅಪೇಕ್ಷೆಯನ್ನು ಕೆಲವು ಚಿತ್ತವೃತ್ತಿಗಳಿಗೆ ಪ್ರಯೋಜನದ ನಿರಪೇಕ್ಷತೆಯನ್ನು ಹೇಳಲು ನಿಯಾಮಕವಿಲ್ಲ?

ಉತ್ತರ – ಇದು ತಪ್ಪು; ಯತ್ಕಿಂಚಿದನುಭವ (ತೃಣಾದ್ಯನುಭವ) ಹಾಗೂ ಫಲೇಚ್ಛಾ (ಮುಮುಕ್ಷುವಿಗೆ ಸ್ವರ್ಗಫಲದ ಅಪೇಕ್ಷೆ) ಮತ್ತು ಸಾಧ್ಯಸಾಧನಭಾವರೂಪವಾದ ಅನುಭವಗಳು. ಇವುಗಳಲ್ಲಿ ಪ್ರಯೋಜನಾದಿ ನಿಶ್ಚಯದ ಅಪೇಕ್ಷೆಯಿರುವುದು ಬಾಧಿತವಾಗಿದೆ. ಆದ್ದರಿಂದ ಪುರುಷಾರ್ಥಸಾಧನವಾದ ಇಚ್ಛೆ ಹಾಗೂ ಪ್ರಯತ್ನಗಳಲ್ಲಿ ಪ್ರಯೋಜನಾದಿ ನಿಶ್ಚಯದ ಅಪೇಕ್ಷೆಯಿರುವುದು ಅನುಭವಸಿದ್ಧವಾಗಿದೆ. ಹೀಗೆ ಕೆಲವೆಡೆ ಪ್ರಯೋಜನಾದಿನಿಶ್ಚಯವು ಆವಶ್ಯಕವಾಗಿದೆ. ಕೆಲವೆಡೆ ಆವಶ್ಯಕವಾಗಿರುವುದಿಲ್ಲ. ಆದ್ದರಿಂದ ವೈಚಿತ್ರ್ಯವನ್ನು ಕಲ್ಪನೆ ಮಾಡುವುದು ಅನಿವಾರ್ಯವಾಗಿದೆ. ಈ ಅಭಿಪ್ರಾಯದಿಂದ ''ನಹಿ'' ಇತ್ಯಾದಿ ಗ್ರಂಥವು ಹೊರಟಿದೆ.

ಆದ್ದರಿಂದ ಯಾವುದು ಪ್ರವೃತ್ತಿಯಾಗಿದೆಯೋ ಅದಕ್ಕೆ ಪ್ರಯೋಜನಾದಿ ನಿಶ್ಚಯದ ಅಪೇಕ್ಷೆಯು ಇದ್ದೇ ಇರುತ್ತದೆ. ಯಾವುದಕ್ಕೆ ಪ್ರಯೋಜನಾದಿ ನಿಶ್ಚಯದ ಅಪೇಕ್ಷೆ ಇರುವುದಿಲ್ಲವೋ ಅದಕ್ಕೆ ಪ್ರವೃತ್ತಿತ್ವವೇ ಇರುವುದಿಲ್ಲ. ಹಾಗಾಗಿ ಪ್ರಥಮಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದು ಸಾರ್ಥಕವಾಗಿದೆ. ಅನವಸ್ಥಾದೋಷವೂ ಕೂಡ ಬರುವುದಿಲ್ಲ. ಈ ಅಭಿಪ್ರಾಯದಿಂದ ''ತಸ್ಮಾತ್'' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ಎಲ್ಲಾ ಚಿತ್ತವೃತ್ತಿಗಳೂ ಕೂಡ ಪ್ರವೃತ್ತಿಯೇ ಆಗಿವೆ. ಮತ್ತು ಪ್ರಯೋಜನದ ಅಪೇಕ್ಷೆಯನ್ನು ಹೊಂದಿರುತ್ತವೆ ಎಂದು ಹೇಳಿರಿ. ಅಥವಾ ಎಲ್ಲಾ ಪ್ರವೃತ್ತಿಗಳೂ ಪ್ರಯೋಜನವನ್ನು ಅಪೇಕ್ಷಿಸುವುದಿಲ್ಲ ಎಂದು ಹೇಳಿರಿ. ಇದನ್ನು ಬಿಟ್ಟು ಅರ್ಧಜರತೀಯ ಮಾಡುವುದು ಯುಕ್ತವಲ್ಲ.

ಇದು ತಪ್ಪು; ಈ ಎಲ್ಲಾ ವಿಷಯದಲ್ಲಿ ಅನುಭವವೇ ಪ್ರಮಾಣವಾಗಿದೆ. ಸುಖವನ್ನು ಇಚ್ಛಿಸುವಾಗ ಮತ್ತೊಂದು ಪ್ರಯೋಜನವನ್ನು ನಾವು ಅಪೇಕ್ಷಿಸುವುದಿಲ್ಲ. ಅಥವಾ ಉದಾಸೀನವಾದ ತೃಣಾದಿಗಳ ಜ್ಞಾನದಲ್ಲೂ ಕೂಡ ಪ್ರಯೋಜನದ ಅಪೇಕ್ಷೆಯು ಇರುವುದಿಲ್ಲ. ಆದರೆ ಪುರುಷಾರ್ಥಸಾಧನದಲ್ಲಿ ಮಾಡುವ ಇಚ್ಛೆ ಅಥವಾ ಪ್ರಯತ್ನಗಳು ಪ್ರಯೋಜನದ ಅಪೇಕ್ಷೆ ಇಲ್ಲದೇ ಬರುವುದಿಲ್ಲ. ಭೋಜನಾದಿ ಸಾಧನಗಳಲ್ಲಿ ಮಾಡುವ ಇಚ್ಛೆ ಹಾಗೂ ಪ್ರಯತ್ನಗಳು ಪ್ರಯೋಜನಾದಿಗಳ ನಿಶ್ಚಯವಿಲ್ಲದೇ ಬರುವುದಿಲ್ಲ.

ಆದ್ದರಿಂದ ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ಯಾವ ಚಿತ್ತವೃತ್ತಿಯನ್ನು ಪ್ರವೃತ್ತಿ ಎಂದು ಕರೆದಿದ್ದೇವೋ ಅದಕ್ಕೆ ಪ್ರಯೋಜನಾದಿ ನಿಶ್ಚಯವು ಅವಶ್ಯ ಬೇಕು. ಯಾವ ಚಿತ್ತವೃತ್ತಿಗಳಿಗೆ ಪ್ರವೃತ್ತಿತ್ವವು ಇರುವುದಿಲ್ಲವೋ ಅದಕ್ಕೆ ಪ್ರಯೋಜನಾದಿಗಳ ನಿಶ್ಚಯವು ಅನಾವಶ್ಯಕ.

# ಪ್ರಥಮಸೂತ್ರಕ್ಕೆ ಉಪೋದ್ಘಾತತ್ವವೂ ಇದೆ; ಶಾಸ್ತ್ರಾಂತರ್ಭಾವವೂ ಇದೆ

ವಾಕ್ಯಾರ್ಥಚಂದ್ರಿಕಾ– ಏವಂ ಪ್ರಥಮಸೂತ್ರಸ್ಯ ಶಾಸ್ತ್ರೋಪೋದ್ಘಾತತ್ವಮಭ್ಯುಪಗಮ್ಯೈವ ಅನವಸ್ಥಾಂ ಪರಿಹೃತ್ಯ, ಅಧುನಾ ಶಾಸ್ತ್ರಾಂತರ್ಭಾವಮಂಗೀಕೃತ್ಯಾಪಿ ತಾಂ ಪರಿಜಿಹೀರ್ಷುಃ ಶಾಸ್ತ್ರಾಂತರ್ಭಾವಪ್ರಯೋಜಕಂ ವಕ್ತುಂ ತನ್ನಿವರ್ತ್ಯಾಂ ಶಂಕಾಂ ಪ್ರದರ್ಶ್ಯ ತತ್ರ ಕೇಷಾಂಚಿತ್ ಪ್ರಕಾರೇಣ ಪರಿಹಾರಂ ದೂಷಯಿತುಮನುವದತಿ – ಉಕ್ತಂ ಚೇತ್ಯಾದಿನಾ ॥ ನ ಚೈತದುಭಯಮೇಕತ್ರ ವಿರುದ್ಧಮಿತಿ ವಾಚ್ಯಮ್ । ಶಾಸ್ತ್ರಪ್ರವೃತ್ತಿಹೇತುಶಾಸ್ತ್ರೀಯಪ್ರಯೋಜನಾದಿಪ್ರತಿಪಾದಕತ್ವಮಾತ್ರವಿವಕ್ಷಯಾ ಉಪೋದ್ಘಾತತ್ವಸ್ಯ ನ್ಯಾಯೇನ ಶ್ರೌತಪ್ರಯೋಜನಾದಿನಿಶ್ಚಾಯಕತ್ವವಿವಕ್ಷಯಾ ಚ ತದಂತರ್ಭಾವಸ್ಯ ಚೋಪಪತ್ತೇಃ । ಶಾಸ್ತ್ರಾಂತರ್ಭಾವೇ ಪ್ರಯೋಜನಾದಿನಿಶ್ಚಯಸಾಪೇಕ್ಷತಯಾಽನವಸ್ಥಾದವಸ್ಥ್ಯಮಿತ್ಯತ ಆಹ – ಅಧ್ಯಯನವಿಧ್ಯಾದಿವತ್ ಇತಿ ॥

ಹೀಗೆ ಪ್ರಥಮಸೂತ್ರಕ್ಕೆ ಶಾಸ್ತ್ರೋಪೋದ್ಘಾತತ್ವವನ್ನು ಅಂಗೀಕರಿಸಿಯೇ ಅನವಸ್ಥಾ ದೋಷವನ್ನು ಇದುವರೆಗೆ ಪರಿಹರಿಸಲಾಯಿತು. ಪ್ರಕೃತ ಶಾಸ್ತ್ರಾಂತರ್ಭಾವವನ್ನು ಅಂಗೀಕರಿಸಿಯೂ ಕೂಡ ಆ ಅನವಸ್ಥಾವನ್ನು ಪರಿಹರಿಸುವ ಬಯಕೆಯನ್ನು ಹೊಂದಿದ್ದಾರೆ. ಅದಕ್ಕಾಗಿ ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವಪ್ರಯೋಜಕವನ್ನು ಹೇಳುತ್ತಿದ್ದಾರೆ. ಅದಕ್ಕಾಗಿ ಇದರಿಂದ ಪರಿಹಾರವಾಗುವ ಶ್ರದ್ಧೆಯಿಲ್ಲದಿರುವಿಕೆ ಮೊದಲಾದ ಶಂಕೆಯನ್ನು ತೋರಿಸಿ, ಅದಕ್ಕೆ ಕೆಲವರ ಪರಿಹಾರವನ್ನು ದೂಷಣೆ ಮಾಡಲು "ಉಕ್ತಂ ಚ" ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ.

ಶಾಸ್ತ್ರೋಪೋದ್ಘಾತತ್ವ ಹಾಗೂ ಶಾಸ್ತ್ರಾಂತರ್ಭಾವ ಇವೆರಡೂ ಒಂದರಲ್ಲಿ ವಿರುದ್ಧವಲ್ಲವೇ ಎಂದು ಪ್ರಶ್ನಿಸಬಾರದು. ಶಾಸ್ತ್ರಪ್ರವೃತ್ತಿಗೆ ಕಾರಣವಾದ ಶಾಸ್ತ್ರೀಯಪ್ರಯೋಜನಾದಿಗಳನ್ನು ಪ್ರತಿಪಾದನೆ ಮಾಡುವ ವಿವಕ್ಷೆಯಿಂದ ಪ್ರಥಮಸೂತ್ರಕ್ಕೆ ಉಪೋದ್ಘಾತತ್ವವಿದೆ. ಶ್ರುತವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ನಿಶ್ಚಯ ಮಾಡುವ ವಿವಕ್ಷೆಯಿಂದ ಶಾಸ್ತ್ರಾಂತರ್ಭಾವವು ಇರುತ್ತದೆ.

ಶಾಸ್ತ್ರಾಂತರ್ಭಾವವನ್ನು ಪ್ರಥಮಸೂತ್ರಕ್ಕೆ ಒಪ್ಪುವುದಾದರೆ ಪ್ರಯೋಜನಾದಿ ನಿಶ್ಚಯದ ಅಪೇಕ್ಷೆಯು ಪುನಃ ಪ್ರಥಮಸೂತ್ರಕ್ಕೆ ಪ್ರಾಪ್ತವಾಗುತ್ತದೆ. ಹಾಗಾಗಿ ಪುನಃ ಅನವಸ್ಥಾದೋಷವು ಬಂದಿತಲ್ಲವೇ? ಈ ಪ್ರಶ್ನೆಗೆ "ಅಧ್ಯಯನವಿಧ್ಯಾದಿವತ್" ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ – ಪ್ರಥಮಸೂತ್ರವು ಶಾಸ್ತ್ರದಿಂದ ಬಹಿರ್ಭೂತವೇ ಆಗಲಿ ಎಂಬ ಆಶಂಕೆಯನ್ನು ಈಗ

ಪರಿಹರಿಸುತ್ತಿದ್ದಾರೆ. ಶಾಸ್ತ್ರಾಂತರ್ಭಾವಪ್ರಯೋಜಕವಾದ ಕಾರಣವನ್ನು ಹೇಳುವುದಕ್ಕಾಗಿ ತನ್ನಿವರ್ತ್ಯವಾದ ಶಂಕೆಯನ್ನು ಪರಿಹರಿಸುತ್ತಿದ್ದಾರೆ. ಆ ಶಂಕೆಯು ಹೀಗಿದೆ – ಶ್ರದ್ಧೆಯು ಬರಬೇಕೆಂದರೆ ಬ್ರಹ್ಮ-ಮೀಮಾಂಸಾಶಾಸ್ತ್ರದಲ್ಲಿ ಪ್ರವೃತ್ತಿಯನ್ನು ಮಾಡುವುದಕ್ಕೆ ಸೂತ್ರಕಾರರು ಪ್ರಯೋಜನಾದಿಗಳನ್ನು ಹೇಳುತ್ತಾರೆ. ಅವರು ಹೇಳಿದ ಪ್ರಯೋಜನಾದಿಗಳನ್ನು ನಂಬಬೇಕೆಂದರೆ ಮೊದಲು ಜಿಜ್ಞಾಸುವಿಗೆ ಶ್ರದ್ಧೆಯು ಇರಬೇಕು. ಪ್ರಥಮಸೂತ್ರವು ಕೇವಲ ಉಪದೇಶರೂಪವಾಗಿರುವುದಿಲ್ಲ. ಶ್ರೌತವಾದ ಅರ್ಥವನ್ನು ನ್ಯಾಯದ ಮೂಲಕ ಉಪಪಾದನೆ ಮಾಡುತ್ತಿದೆ. ಆಗ ಪ್ರಥಮಸೂತ್ರಾರ್ಥದಲ್ಲಿ ಶ್ರದ್ಧೆಯು ಬಂದೇ ಬರುತ್ತದೆ. ಆಪ್ತತ್ವವಿಶ್ವಾಸವು ಇಲ್ಲದೇ ಇದ್ದರೂ ಕೂಡ ಪ್ರವೃತ್ತಿಯು ಉಂಟಾಗುತ್ತದೆ. ಆಪ್ತತ್ವನಿಶ್ಚಯವಿದ್ದರೆ ಅನಾಯಾಸವಾಗಿಯೇ ಪ್ರವೃತ್ತಿಯು ಉಂಟಾಗುತ್ತದೆ. ಆದ್ದರಿಂದ ಪ್ರಥಮಸೂತ್ರವು ಶಾಸ್ತ್ರದಲ್ಲಿ ಅಂತರ್ಭಾವವನ್ನು ಹೊಂದುತ್ತದೆ. ಸಮಗ್ರಶಾಸ್ತ್ರವು ಶ್ರುತಿಸಿದ್ಧವಾದ ಪ್ರಮೇಯವನ್ನು ಸಾಧಿಸುವುದಕ್ಕಾಗಿಯೇ ಹೊರಟಿದೆ. ಇದೇ ಕಾರಣಕ್ಕಾಗಿಯೇ ಪ್ರಥಮಸೂತ್ರವೂ ಕೂಡ ಹೊರಟಿರುವುದರಿಂದ ಶಾಸ್ತ್ರಾಂತರ್ಭಾವವು ಈ ಸೂತ್ರಕ್ಕೆ ಇರುತ್ತದೆಂದು ತಿಳಿಯಬೇಕು. ಹೀಗೆ ಪ್ರಥಮಸೂತ್ರಾರ್ಥದಲ್ಲಿ ಶ್ರದ್ಧೆಯು ಉಂಟಾಗಿ ಪ್ರವೃತ್ತಿಯು ಉಂಟಾಗುತ್ತದೆ.

ಶಾಸ್ತ್ರಾಂತರ್ಭಾವಪ್ರಯೋಜಕದಿಂದ ನಿವರ್ತ್ಯವಾದ ಶಂಕೆಯು ಹೀಗಿದೆ – ಶ್ರದ್ಧೆಯು ಇಲ್ಲದೇ ಇರುವುದು ತನ್ಮೂಲಕವಾಗಿ ಪ್ರವೃತ್ತಿಯು ಮಾಡಲು ಸಾಧ್ಯವಾಗದೇ ಇರುವಿಕೆ ಎಂದು. ಈ ಶಂಕೆಗೆ ಬೇರೆಯವರು ಹೇಳುವ ಪರಿಹಾರವನ್ನು ಅನುವಾದ ಮಾಡಿ ನಮ್ಮ ಪ್ರಕಾರ ಆಶಂಕೆಗೆ ಸಮಾಧಾನವನ್ನು ಹೇಳುವ ಮೂಲಕ ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವವನ್ನು ಸಮರ್ಥಿಸಿದ್ದಾರೆ.

ಪ್ರಥಮಸೂತ್ರಕ್ಕೆ ಮೊದಲು ಉಪೋದ್ಘಾತತ್ವವಿದೆಯೆಂದು ಅಂಗೀಕರಿಸಿ ಅನವಸ್ಥಾದೋಷವನ್ನು ಪರಿಹರಿಸಿದರು. ಈಗ ಶಾಸ್ತ್ರಾಂತರ್ಭಾವವಿದೆಯೆಂದು ಅಂಗೀಕರಿಸಿ ಅನವಸ್ಥಾದೋಷವನ್ನು ಪರಿಹರಿಸುತ್ತಿದ್ದಾರೆ. ಹಾಗಾದರೆ ಪ್ರಥಮಸೂತ್ರವು ಶಾಸ್ತ್ರಕ್ಕೆ ಉಪೋದ್ಘಾತವೋ ಅಥವಾ ಶಾಸ್ತ್ರದಲ್ಲಿ ಅಂತರ್ಭೂತವೋ. ಇವೆರಡೂ ಕೂಡ ಪರಸ್ಪರವಿರುದ್ಧವಾಗಿದೆಯಲ್ಲವೇ?

ಪ್ರಥಮಸೂತ್ರಕ್ಕೆ ಎರಡೂ ಕೂಡ ಇರುತ್ತವೆ. ಇದು ವಿರುದ್ಧವಲ್ಲ. ಶಾಸ್ತ್ರದಲ್ಲಿ ಪ್ರವೃತ್ತಿಯನ್ನು ಮಾಡಬೇಕೆಂದರೆ ಅದಕ್ಕೆ ಪ್ರಯೋಜಕವಾದ ಪ್ರಯೋಜನಾದಿಗಳನ್ನು ಪ್ರಥಮಸೂತ್ರವು ಹೇಳುತ್ತಿದೆ. ಇಷ್ಟುಮಾತ್ರದಿಂದ ಪ್ರಥಮಸೂತ್ರವು ಶಾಸ್ತ್ರಕ್ಕೆ ಉಪೋದ್ಘಾತವಾಗುತ್ತದೆ. ಆದರೆ ಈ ಪ್ರಯೋಜನಾದಿಗಳನ್ನು ನ್ಯಾಯದಿಂದ ಉಪಪಾದನೆ ಮಾಡುವ ಮೂಲಕ ಸಮರ್ಥಿಸುತ್ತದೆ. ಆದ್ದರಿಂದ ಶಾಸ್ತ್ರದಲ್ಲಿ

ಪ್ರಥಮಸೂತ್ರಕ್ಕೆ ಅಂತರ್ಭಾವವೂ ಕೂಡ ಇರುತ್ತದೆ. ಹಾಗಾದರೆ ಶಾಸ್ತ್ರದಲ್ಲಿ ಅಂತರ್ಭಾವವನ್ನು ಹೊಂದಿದರೆ ಅನವಸ್ಥಾ ಬರುತ್ತದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಪ್ರಾಮಾಣಿಕಸ್ಥಳದಲ್ಲಿ ಆತ್ಮಾಶ್ರಯವು ದೋಷವೇ ಆಗುವುದಿಲ್ಲ.

## ಕೇಚಿತ್ಕಾರರ ಪರಿಹಾರದ್ವಯಗಳಿಗೆ ದೋಷಕಥನ

ಯಾದುಪತ್ಯ– ತದೇತದಿತಿ ॥ ಪರಿಹಾರದ್ವಯಮಪಿ ಇತ್ಯರ್ಥಃ। ಇತ್ಯೇವ ಪರಿಹಾರ ಇತಿ ॥ ಅನೇನ ಬ್ರಹ್ಮಜ್ಞಾನಸ್ಯ ಮೋಕ್ಷಹೇತುತಾ ಶಾಸ್ತ್ರಪ್ರವೃತ್ತೇಃ ಪ್ರಾಗೇವ ಪ್ರಮಾಣಾಂತರಸಿದ್ಧಾ ಇತ್ಯೇತತ್ ಪಕ್ಷಃ ಸಮಾಹಿತೋ ಭವತಿ । ಪ್ರಮಾಣಾಂತರಸಿದ್ಧೇಽಪಿ ವಿಪ್ರತಿಪತ್ತ್ಯಾದಿನಿರಾಸಕನ್ಯಾಯಗ್ರಥನಾತ್ಮಕಸೂತ್ರೋಪದೇಶಸಾರ್ಥಕ್ಯಾದಿತಿ ಜ್ಞಾತವ್ಯಮ್ । ಅತ ಏವಾಸ್ಯ ಸೂತ್ರಸ್ಯೇತಿ ॥ ಶ್ರೌತಸ್ಯ ಪ್ರಯೋಜನಾದೇರ್ನ್ಯಾಯೇನ ಉಪಪಾದನಾರ್ಥತ್ವಾದೇವ ನ ಶ್ರುತ್ಯರ್ಥನಿರ್ಣಾಯಕನ್ಯಾಯಗ್ರಥನಾತ್ಮಕಶಾಸ್ತ್ರಬಹಿರ್ಭಾವ ಇತ್ಯರ್ಥಃ।

"ತದೇತತ್" – ಎರಡು ಬಗೆಯ ಪರಿಹಾರಗಳೂ ಕೂಡ ಎಂದರ್ಥ. "ಇತ್ಯೇವ ಪರಿಹಾರಃ" – ಹೀಗೆ ಹೇಳಿದ್ದರಿಂದ ಬ್ರಹ್ಮಜ್ಞಾನಕ್ಕೆ ಮೋಕ್ಷಹೇತುತ್ವವು ಶಾಸ್ತ್ರಪ್ರವೃತ್ತಿಗಿಂತ ಮೊದಲೇ ಪ್ರಮಾಣಾಂತರದಿಂದ ಸಿದ್ಧವಾಗಿದೆ ಎಂಬ ಪಕ್ಷಕ್ಕೆ ಸಮಾಧಾನವನ್ನು ನೀಡಿದಂತಾಯಿತು. ಪ್ರಮಾಣಾಂತರಸಿದ್ಧವಾಗಿದ್ದರೂ ಕೂಡ ವಿಪ್ರತಿಪತ್ತ್ಯಾದಿಗಳಿಗೆ ನಿರಾಸಕವಾಗಿ ನ್ಯಾಯಗ್ರಥನಾತ್ಮಕವಾದ ಸೂತ್ರೋಪದೇಶವು ಸಾರ್ಥಕವಾಗಿದೆಯೆಂದು ತಿಳಿಯಬೇಕು. "ಅತ ಏವಾಸ್ಯಸೂತ್ರಸ್ಯ" – ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುವುದರಿಂದ ಶ್ರುತ್ಯರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕವಾದ ಶಾಸ್ತ್ರದಿಂದ ಬಹಿರ್ಭಾವವು ಪ್ರಥಮಸೂತ್ರಕ್ಕೆ ಇರುವುದಿಲ್ಲ ಎಂದರ್ಥ.

## ಪ್ರಥಮಸೂತ್ರಕ್ಕೆ ಆರಂಭಣೀಯತ್ವವು ಹೇಗೆ ಸಿದ್ಧವಾಗುತ್ತದೆ?

ಯಾದುಪತ್ಯ– ನನ್ವೇವಂ ಯದಿ ಪ್ರಥಮಸೂತ್ರಸ್ಯ ವಿಷಯಾದಿಪ್ರತಿಪಾದನದ್ವಾರಾ ಶಾಸ್ತ್ರಾರಂಭೋಪಪಾದಕತಾ ತರ್ಹಿ ಸ್ವಸ್ಯ ಆರಂಭಣೀಯತಾ ಕೇನೋಪಪಾದಿತಾ? ನ ತಾವತ್ ಸ್ವೇನ । ಆತ್ಮಾಶ್ರಯತ್ವಪ್ರಸಂಗಾತ್ । ಅನ್ಯೇನ ಚೇತ್ ತಸ್ಯಾಪಿ ಆರಂಭಣೀಯತಾ, ಪುನರನ್ಯೇನ ಇತ್ಯವಸ್ಥಾಪಾತ ಇತ್ಯತ ಆಹ – ಅಧ್ಯಯನವಿಧ್ಯಾದಿವತ್ ಇತಿ ॥

ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುವುದ-ಕ್ಕಾಗಿಯೇ ಈ ಪ್ರಥಮಸೂತ್ರವು ವಿಷಯಾದಿ ಪ್ರತಿಪಾದನೆಯ ಮೂಲಕ ಶಾಸ್ತ್ರಾರಂಭಕವಾಗುವುದಾದರೆ ತನಗೆ ಆರಂಭಣೀಯತ್ವವು ಯಾವುದರಿಂದ ಸಿದ್ಧವಾಗುತ್ತದೆ? ತನ್ನಿಂದಲೇ ಸಿದ್ಧವಾಗುತ್ತದೆಂದರೆ ಆತ್ಮಾಶ್ರಯದೋಷವು ಬರುತ್ತದೆ. ಮತ್ತೊಂದರಿಂದ ಸಿದ್ಧವಾಗುವುದಾದರೆ ಅದಕ್ಕೆ ಆರಂಭಣೀಯತ್ವವು ಪುನಃ ಮತ್ತೊಂದರಿಂದ ಆಗುತ್ತದೆ ಎನ್ನಬೇಕು. ಆಗ ಅನವಸ್ಥಾದೋಷವು ಬರುತ್ತದಲ್ಲವೇ? ಈ ಆಕ್ಷೇಪಕ್ಕೆ ''ಅಧ್ಯಯನವಿಧ್ಯಾದಿವತ್'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

## ಸ್ವಾಧ್ಯಾಯವಿಧಿಯಂತೆ ಪ್ರಥಮಸೂತ್ರವನ್ನು ತಿಳಿಯಬೇಕು

ಯಾದುಪತ್ಯ– ಯಥಾ 'ಸ್ವಾಧ್ಯಾಯೋಽಧ್ಯೇತವ್ಯಃ' ಇತಿ ವಿಧಿವಾಕ್ಯಂ ಸ್ವಾಧ್ಯಾಯ-ತ್ವಾವಚ್ಛಿನ್ನಸ್ಯಾಧ್ಯಯನಂ ವಿದಧತ್ ಸ್ವಸ್ಯಾಪಿ ತದವಚ್ಛಿನ್ನತ್ವಾದಧ್ಯಯನಂ ವಿಧತ್ತೇ । ಏವಮಿದಂ ಸೂತ್ರಂ ಬ್ರಹ್ಮಮೀಮಾಂಸಾಶಾಸ್ತ್ರಸ್ಯಾವಚ್ಛಿನ್ನಸ್ಯ ಆರಂಭಣೀಯತೋಪಪಾದಕಂ ಸತ್ ಸ್ವಸ್ಯಾಪಿ ತದವಚ್ಛಿನ್ನತ್ವಾತ್ ಆರಂಭೋಪಪಾದಕಂ ಭವತಿ । ಆತ್ಮಾಶ್ರಯತ್ವಂ ತು ಪ್ರಾಮಾಣಿಕಮ್ । ಅತ ಏವ ನ ಕರ್ತೃಕರ್ಮಭಾವವಿರೋಧೋಽಪೀತಿ । ಆದಿಪದೇನಾಭಿಧೇಯತ್ವಾವಚ್ಛೇದೇನ ಪ್ರಮೇಯತ್ವ-ವಿಧಾಯಕಂ ಲೌಕಿಕಂ ವಾಕ್ಯಂ ಯಥಾ ಪ್ರಮೇಯಸ್ಯಾಪ್ಯಭಿಧೇಯತ್ವಾವಚ್ಛಿನ್ನತ್ವಾತ್ ಪ್ರಮೇಯತ್ವ-ವಿಧಾಯಕಂ ತಥೇತ್ಯಾದಿಕಂ ದ್ರಷ್ಟವ್ಯಮ್ ।

'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಿಧಿವಾಕ್ಯವು ಸ್ವಾಧ್ಯಾಯತ್ವಾವಚ್ಛಿನ್ನಕ್ಕೆ ಅಧ್ಯಯನವನ್ನು ವಿಧಾನ ಮಾಡುವ ಮೂಲಕ ತಾನೂ ಕೂಡ ಸ್ವಾಧ್ಯಾಯತ್ವದಲ್ಲಿ ಅವಚ್ಛಿನ್ನವಾಗಿರುವುದರಿಂದ ತನಗೂ ಅಧ್ಯಯನವನ್ನು ವಿಧಾನ ಮಾಡುತ್ತದೆ. ಇದೇ ರೀತಿಯಾಗಿ ಈ ಸೂತ್ರವು ಬ್ರಹ್ಮಮೀಮಾಂಸಾಶಾಸ್ತ್ರತ್ವಾ-ವಚ್ಛಿನ್ನತ್ವಕ್ಕೆ ಆರಂಭಣೀಯತ್ವವನ್ನು ಉಪಪಾದನೆ ಮಾಡುವ ಮೂಲಕ ತಾನೂ ಕೂಡ ಬ್ರಹ್ಮ-ಮೀಮಾಂಸಾಶಾಸ್ತ್ರತ್ವಾವಚ್ಛಿನ್ನವಾಗಿ ತನಗೆ ಆರಂಭಕತ್ವವನ್ನು ಸಮರ್ಥಿಸಿಕೊಳ್ಳುತ್ತದೆ. ಆತ್ಮಾಶ್ರಯವು ಪ್ರಾಮಾಣಿಕವೇ ಆಗಿದೆ. ಆದ್ದರಿಂದಲೇ ಕರ್ತೃಕರ್ಮಭಾವದ ವಿರೋಧಕ್ಕೆ ಅವಕಾಶವಿಲ್ಲ. ಆದಿಪದ-ದಿಂದ ಅಭಿಧೇಯತ್ವಾವಚ್ಛೇದೇನ ಪ್ರಮೇಯತ್ವಕ್ಕೆ ವಿಧಾಯಕವಾದ ಲೌಕಿಕವಾಕ್ಯವು ಪ್ರಮೇಯವಾಗಿ-ದ್ದರೂ ಕೂಡ ಅಭಿಧೇಯತ್ವಾವಚ್ಛಿನ್ನವಾಗಿರುವುದರಿಂದ ಪ್ರಮೇಯತ್ವಕ್ಕೆ ಹೇಗೆ ವಿಧಾಯಕವಾಗಿದೆಯೋ ಅದರಂತೆ ಎಂಬುದಾಗಿ ತಿಳಿಯಬೇಕು.

## ಸುಧಾಪರಿಮಳಸಾರ

ನೀವು ತಿಳಿಸಿದಂತೆ ಮೊದಲನೇ ಸೂತ್ರವು ಆಪ್ತವಾಕ್ಯವಾದ್ದರಿಂದ ಪ್ರಯೋಜನಾದಿಗಳ ನಿರೂಪಣೆಯು ಯುಕ್ತವೆನ್ನುವುದಾದರೆ ಈ ಸೂತ್ರವು ನ್ಯಾಯಸೂತ್ರವೆನಿಸಲಾರದು. ಏಕೆಂದರೆ ಆಪ್ತವಾಕ್ಯವು ಆಗಮರೂಪ. ಸೂತ್ರವಾದರೂ ಯುಕ್ತಿಗಳ ಬಗ್ಗೆ ವಿಚಾರ ಮಾಡುವ ತರ್ಕರೂಪವಾಗಿರುತ್ತದೆ. ಹೀಗಾಗಿ "ಆಪ್ತವಾಕ್ಯವಾದ್ದರಿಂದ' ಎಂಬ ಕಾರಣ ಕೊಟ್ಟರೆ ಸೂತ್ರತ್ವವು ವ್ಯಾಹತವಾಗುತ್ತದೆ. ಅಷ್ಟೇ ಅಲ್ಲದೆ ಸೂತ್ರಕಾರರನ್ನು ಆಪ್ತರೆಂದು ನಿರ್ಣಯಿಸುವುದು ವೇದವಾಕ್ಯಗಳು. ಅವುಗಳಿಂದಲೇ ಈ ಸೂತ್ರಗಳಲ್ಲಿರುವ ಪ್ರಯೋಜನಾದಿ ಅನುಬಂಧಚತುಷ್ಟಯವು ಸಿದ್ಧವಾಗುವುದರಿಂದ ಆ ಪ್ರಯೋಜನಾದಿಗಳ ಉಪಪಾದನೆಯು ವ್ಯರ್ಥವಾಗಬೇಕಾಗುತ್ತದೆ.

ಹಿಂದೆ ಆಪ್ತರೆಂದು ನಿಶ್ಚಯವಿಲ್ಲದಿದ್ದರೂ ಅರ್ಥಸಂದೇಹದಿಂದ ಪ್ರವೃತ್ತಿಯಾಗಬಹುದೆಂದು ಹೇಳಿದುದೂ ಸರಿಯಲ್ಲ. ಏಕೆಂದರೆ ಪ್ರಯೋಜನಾದಿಗಳ ಸಂದೇಹವಿದ್ದಲ್ಲಿ ಯಾರೂ ಪ್ರವೃತ್ತಿ ಮಾಡಿದುದು ಕಂಡಿಲ್ಲವಷ್ಟೇ! ಕೃಷಿಯೇ ಮೊದಲಾದವುಗಳಲ್ಲಿ ಕಂಡಿದೆಯೆಂದರೆ ಅಲ್ಪವಿತ್ತಸಾಧ್ಯವಾದ ಅಥವಾ ಅಲ್ಪಾಯಾಸದಿಂದ ಕೂಡಿದ ಕೆಲಸಗಳಲ್ಲಿ ಸಂದೇಹದಿಂದ ಪ್ರವೃತ್ತಿಯಾಗಬಹುದಾದರೂ ಬಹುಪ್ರಯಾಸಸಾಧ್ಯವಾದ ಹಾಗೂ ಬಹುವಿತ್ತವ್ಯಯದಿಂದಾಗುವ ಕೆಲಸಗಳಲ್ಲಿ ಅರ್ಥಸಂದೇಹದಿಂದ ಪ್ರವೃತ್ತಿಯು ಆಗಲಾರದಷ್ಟೇ!

ಹಾಗಾಗಿ ಈ ಸೂತ್ರವು ಪ್ರಯೋಜನಾದಿಗಳನ್ನು ಉಪಪಾದಿಸಲಷ್ಟೇ ಹೊರಟಿಲ್ಲ, ಹೊರತು ಶ್ರುತಿಯಿಂದ ತೀರ್ಮಾನಿತವಾದ ಪ್ರಯೋಜನಾದಿಗಳನ್ನು ಯುಕ್ತಿಗಳ ಮೂಲಕ ಉಪಪಾದಿಸುವುದೇ ಇದರ ಕಾರ್ಯ. ಹೀಗೆ ಹೇಳಿಯೇ ಹಿಂದಿನ ಶಂಕೆಗೆ ಪರಿಹಾರವನ್ನು ಕಾಣಬೇಕು.

ಸೂತ್ರಕಾರರು ಆಪ್ತರೆಂದು ನಿಶ್ಚಯವಾದರೆ ಅವರಿಂದ ಹೇಳಲ್ಪಟ್ಟ ನ್ಯಾಯಕ್ಕೆ ಫಲ ದೊರೆತಂತಾಗುತ್ತದೆ. ಈ ಕಾರಣದಿಂದಲೇ ಭಾಷ್ಯಕಾರರು ಆಪ್ತತ್ವವನ್ನು ಸಾಧನೆ ಮಾಡಿದುದೂ ಸಾರ್ಥಕವಾಗಿದೆ.

ಶ್ರುತಿಯಿಂದ ತೀರ್ಮಾನಿತವಾದ ಪ್ರಯೋಜನಾದಿಗಳನ್ನು ನ್ಯಾಯಮೂಲಕ ಉಪಪಾದನೆ ಮಾಡುವುದರಿಂದಲೇ ಈ ಸೂತ್ರಕ್ಕೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅಂತರ್ಭಾವಸಂಗತಿಯನ್ನು ಹೇಳಬಹುದು.

ಜಿಜ್ಞಾಸುಗಳಿಗೆ ಶಾಸ್ತ್ರಪ್ರವೃತ್ತಿಗಾಗಿ ಮೊದಲನೇ ಸೂತ್ರವೆನ್ನುವುದಾದರೆ ಮೊದಲನೇ ಸೂತ್ರದಲ್ಲಿ ಪ್ರವೃತ್ತಿಗಾಗಿ ಮತ್ತೊಂದು ಸೂತ್ರ ಹೇಳಬೇಕು. ಆ ಸೂತ್ರದಲ್ಲಿ ಪ್ರವೃತ್ತಿಗಾಗಿ ಮತ್ತೊಂದು ಸೂತ್ರ ಹೇಳಬೇಕು. ಹೀಗೆ ಅನವಸ್ಥಾದೋಷ ಬರುತ್ತದೆಂದರೆ, ಅದೂ ಸರಿಯಲ್ಲ. "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಾಕ್ಯವು ತನ್ನ ವಾಕ್ಯದ ಅಧ್ಯಯನದ ಜೊತೆಗೆ ಇತರ ಸಮಸ್ತವೇದಗಳ ಅಧ್ಯಯನವನ್ನೂ ಚೋದಿಸುವಂತೆ, ಮೊದಲನೇ ಸೂತ್ರವು ಶಾಸ್ತ್ರದಲ್ಲಿ ಪ್ರವೃತ್ತಿಗೆ ಕಾರಣವಾದ ಪ್ರಯೋಜನಾದಿಗಳನ್ನು ತಿಳಿಸುವಂತೆ ತನ್ನಲ್ಲಿ ಪ್ರವೃತ್ತಿಯನ್ನೂ ತಾನೇ ಸಮರ್ಥಿಸಿಕೊಳ್ಳುತ್ತದೆ. ಹೀಗಾಗಿ ಅನವಸ್ಥಾ ಮೊದಲಾದ ದೋಷಗಳಿಗೂ ಅವಕಾಶವಿಲ್ಲ.

# ನೆನೆಪಿಡಿ

* ಈ ಮೂಲದಲ್ಲಿ ಕೇಚಿತ್ಕಾರರ ಪರಿಹಾರವನ್ನು ನಿರಾಕರಣೆ ಮಾಡಿ ತಾವು ಸಿದ್ಧಾಂತದ ಪ್ರಕಾರ ಪರಿಹಾರವನ್ನು ಹೇಳುತ್ತಿದ್ದಾರೆ.

* ಪ್ರಥಮಸೂತ್ರವು ಕೇವಲ ಆಪ್ತವಾಕ್ಯವಾದ್ದರಿಂದ ಪ್ರಮಾಣವೆಂದು ಹೇಳಬಾರದು. ಹಾಗಾದಲ್ಲಿ ಇದಕ್ಕೆ ನ್ಯಾಯಸೂತ್ರತ್ವವೇ ಹಾನಿಯಾಗಬೇಕಾಗುತ್ತದೆ.

* ಅತ್ಯಂತ ಆಯಾಸಸಾಧ್ಯವಾದದ್ದರಲ್ಲಿ ಯಾರೊಬ್ಬನೂ ಕೂಡ ಸಂದೇಹದಿಂದ ಪ್ರವೃತ್ತಿ ಮಾಡಲಾರ. ಬ್ರಹ್ಮಮೀಮಾಂಸಾಶಾಸ್ತ್ರವು ಮಹಾಯಾಸಸಾಧ್ಯವಾದ್ದರಿಂದ ಜಿಜ್ಞಾಸು-ಗಳಿಗೆ ಮೊದಲು ಪ್ರಯೋಜನಾದಿಗಳ ನಿಶ್ಚಯವು ಅತ್ಯಂತ ಆವಶ್ಯಕವೇ ಆಗಿರುತ್ತದೆ.

* ಪ್ರಥಮಸೂತ್ರವು ಕೇವಲ ಉಪದೇಶರೂಪವಲ್ಲ. ಶ್ರುತಿಯಿಂದ ಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುತ್ತಿದೆ.

* ಸೂತ್ರಕಾರರಲ್ಲಿರುವ ಆಪ್ತತ್ವವು ಪ್ರಥಮಸೂತ್ರದ ನ್ಯಾಯಕ್ಕೆ ಕೇವಲ ಉಪೋ-ದ್ಬಲಕವಾಗಿದೆ.

* 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿವಾಕ್ಯಕ್ಕೆ ಹೇಗೆ ಆತ್ಮಾಶ್ರಯದೋಷವಿಲ್ಲವೋ 'ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಪ್ರಥಮಸೂತ್ರಕ್ಕೂ ಆತ್ಮಾಶ್ರಯವಿಲ್ಲ.

* ಅನುಭವವು ಎರಡು ವಿಧ – (1) ಯತ್ನಸಾಧ್ಯವಾದದ್ದು (2) ಯತ್ನಸಾಧ್ಯವಲ್ಲದ್ದು ಎಂದು. ಪ್ರಥಮಸೂತ್ರದ ಅನುಭವವು ಅಯತ್ನಸಾಧ್ಯವಾಗಿದೆ. ಉಳಿದ ಸೂತ್ರಾರ್ಥಗಳ ಅನುಭವವು ಯತ್ನಸಾಧ್ಯವಾಗಿದೆ.

* ಯಾರಿಗೆ ಸಮಸ್ತಶಾಸ್ತ್ರಾರ್ಥವು ಪ್ರಯತ್ನವಿಲ್ಲದೇ ತಿಳಿಯುತ್ತದೋ ಅಂಥವನಿಗೆ ಪ್ರಯೋಜನಾದಿಗಳನ್ನು ಹೇಳುವ ಉದ್ದೇಶ ಪ್ರಥಮಸೂತ್ರಕ್ಕೆ ಇರುವುದಿಲ್ಲ.

* ಯಾವುದು ಪ್ರವೃತ್ತಿಯೋ ಅದು ಪ್ರಯೋಜನಾದಿನಿಶ್ಚಯವನ್ನು ಅಪೇಕ್ಷಿಸಿಯೇ ತೀರುತ್ತದೆ. ಯಾವುದಕ್ಕೆ ಪ್ರಯೋಜನಾದಿನಿಶ್ಚಯದ ಅಪೇಕ್ಷೆಯಿರುವುದಿಲ್ಲವೋ ಅದು ಪ್ರವೃತ್ತಿ-ಯೆಂದೇ ಕರೆಸಿಕೊಳ್ಳುವುದಿಲ್ಲ.

* ಸಮಗ್ರಶಾಸ್ತ್ರವು ಶ್ರುತಿಸಿದ್ಧವಾದ ಪ್ರಮೇಯವನ್ನು ನ್ಯಾಯದ ಮೂಲಕ ಸಮರ್ಥಿ-ಸುತ್ತದೆ. ಪ್ರಥಮಸೂತ್ರವೂ ಕೂಡ ಶ್ರುತಿಸಿದ್ಧವಾದ ಅರ್ಥವನ್ನೇ ನ್ಯಾಯದ ಮೂಲಕ ಉಪ-

ಪಾದನೆ ಮಾಡುತ್ತಿದೆ. ಆದ್ದರಿಂದ ಪ್ರಥಮಸೂತ್ರವು ಶಾಸ್ತ್ರದಲ್ಲಿ ಅಂತರ್ಭೂತವಾಗಿದೆ. ಉಪೋದ್ಘಾತವಲ್ಲ.

* ಸಮಗ್ರಶಾಸ್ತ್ರದ ಪ್ರವೃತ್ತಿಗೆ ಪ್ರಯೋಜಕವಾದ ಪ್ರಯೋಜನಾದಿಗಳನ್ನು ಹೇಳುತ್ತ-ದೆಂದು ವಿವಕ್ಷಿಸುವುದಾದರೆ ಆಗ ಪ್ರಥಮಸೂತ್ರವು ಸಮಗ್ರಶಾಸ್ತ್ರಕ್ಕೆ ಉಪೋದ್ಘಾತವಾಗುತ್ತದೆ.

**ಶ್ರೀಮನ್ನ್ಯಾಯಸುಧಾ – ಕಃ ಪುನರಸ್ಯ ಸೂತ್ರಸ್ಯ ಪ್ರಸಂಗಃ । ಉಚ್ಯತೇ । ಪ್ರಾರಿ-ಪ್ಸಿತತಯಾ ಹಿ ಬುದ್ಧಿಸನ್ನಿಹಿತೇ ಶಾಸ್ತ್ರಂ ಸೂತ್ರಕಾರಸ್ಯ । ತತ್ರ ಸಂಶಯಃ – ಕಿಮಿದಮ್ ಆರಂಭಣೀಯಂ ನ ವಾ? ಇತಿ । ಉಪಲಭ್ಯಂತೇ ಖಲು ಉಭಯವಿಧಾನ್ಯಪಿ ವಾಕ್ಯಾನಿ । ವಾಕ್ಯಂ ಚೇದಮ್ । ನ ಚ ವಿಶೇಷೋ ದೃಶ್ಯತೇ । ಯೇನ ಅನ್ಯತರಪಕ್ಷನಿಶ್ಚಯಃ ಸ್ಯಾತ್ । ನನು ಕಸ್ಯಾಯಂ ಸಂಶಯಃ । ನ ತಾವತ್ ಸೂತ್ರಕಾರಸ್ಯ । ಅವಗತವಿಶೇಷತ್ವಾತ್ । ಅನ್ಯಥಾ ನಿರ್ಣಾಯಕಸೂತ್ರಪ್ರಣ-ಯನಾನುಪಪತ್ತೇಃ । ನಾಪಿ ಪರಸ್ಯ । ಪರೇಣ ಅದ್ಯಾಪಿ ಶಾಸ್ತ್ರಸ್ಯ ಅನುಪ-ಲಬ್ಧತ್ವಾತ್ । ಅನುಪಲಬ್ಧೇ ಚ ಸಮಾನಧರ್ಮದರ್ಶನಾದ್ಯಯೋಗೇನ ಸಂಶ-ಯೋತ್ಪಾದಾನುಪಪತ್ತೇಃ । ಮೈವಮ್ । ಯದೀದಂ ಶಾಸ್ತ್ರಂ ಪರೇಣೋಪ-ಲಭ್ಯೇತ ತದಾ ಉಕ್ತಸಂದೇಹಕಾರಣೋಪಪತ್ತೌ ಪ್ರಯೋಜನಾರ್ಥಿತ್ವೇನ ವಿಶೇಷಸ್ಮೃತಿಮತ್ತ್ವೈವಂ ಸಂದಿಹ್ಯೇತೇತಿ ಸೂತ್ರಕೃತ ಏವ ಪರಕೀಯಸಂಭಾವಿತ-ಸಂಶಯಾಹರಣೋಪಪತ್ತೇಃ ।**

ಪ್ರಥಮಸೂತ್ರಕ್ಕೆ ಪ್ರಸಂಜಕಗಳಾದ ಸಂದೇಹ ಮೊದಲಾದ ಅನುಬಂಧಗಳಾದರೂ ಕೂಡ ಯಾವವು?

ಉತ್ತರ ಹೀಗಿದೆ – ಈ ಶಾಸ್ತ್ರವನ್ನು ಪ್ರಾರಂಭ ಮಾಡಬೇಕು ಎಂಬುದಾಗಿ ಸೂತ್ರಕಾರ-ರಿಗೆ ಇಚ್ಛೆಯು ಇರುತ್ತದೆ. ಆದ್ದರಿಂದ ಸೂತ್ರಕಾರರ ಬುದ್ಧಿಯಲ್ಲಿ ಇರುವ ಶಾಸ್ತ್ರವು ವಿಷಯವಾಗುತ್ತದೆ. ಈ ಶಾಸ್ತ್ರವು ಆರಂಭಣೀಯವೋ ಅಲ್ಲವೋ? ಎಂಬ ಸಂಶಯವು

ಉಂಟಾಗುತ್ತದೆ. ಏಕೆಂದರೆ ಆರಂಭಿಸಲು ಯೋಗ್ಯವಾದ ಹಾಗೂ ಅಯೋಗ್ಯವಾದ ಎರಡೂ ಬಗೆಯ ವಾಕ್ಯಗಳನ್ನು ನಾವು ಕಾಣುತ್ತಿದ್ದೇವೆ. ಈ ಶಾಸ್ತ್ರವು ವಾಕ್ಯರೂಪವಾಗಿದೆ. ಯಾವುದೇ ನಿರ್ಣಾಯಕವಿಶೇಷವೂ ಕೂಡ ಇದರಲ್ಲಿ ಕಾಣಿಸುತ್ತಿಲ್ಲ. ಹಾಗೇನಾದರೂ ನಿರ್ಣಾಯಕವಿದ್ದಿದ್ದಲ್ಲಿ ಆರಂಭಣೀಯವೆಂಬ ಅಥವಾ ಅನಾರಂಭಣೀಯವೆಂಬ ಯಾವು-ದಾದರೂ ಒಂದು ಪಕ್ಷವನ್ನು ನಿಶ್ಚಯ ಮಾಡಬಹುದಿತ್ತು.

ಹಾಗಾದರೆ ಈ ಸಂಶಯ ಯಾರಿಗೆ ಬರುತ್ತಿದೆ? ಸೂತ್ರಕಾರರಿಗೆ ಸಂಶಯ ಬರಲು ಸಾಧ್ಯವಿಲ್ಲ. ಏಕೆಂದರೆ, ಅವರು ಪ್ರತಿಯೊಂದನ್ನು ವಿಶೇಷಧರ್ಮಪುರಸ್ಸರವಾಗಿಯೇ ತಿಳಿದಿರುತ್ತಾರೆ. ಹೀಗೊಪ್ಪದಿದ್ದರೆ ಸೂತ್ರಕಾರರಿಗೆ ನಿರ್ಣಾಯಕಗಳಾದ ಶಾಸ್ತ್ರವನ್ನು ರಚನೆ ಮಾಡುವ ಸಾಮರ್ಥ್ಯವಿದೆ ಎಂಬುದೇ ಅನುಪಪನ್ನವಾಗುತ್ತದೆ.

ಬೇರೆಯವರಿಗೆ ಸಂಶಯವಿದೆಯೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಏಕೆಂದರೆ, ಇತರರಿಗೆ ಈ ಶಾಸ್ತ್ರವು ಇನ್ನೂ ಸಹ ಉಪಲಬ್ಧವೇ ಆಗಿರುವುದಿಲ್ಲ. ಉಪಲಬ್ಧವಾಗದ ವಿಷಯದಲ್ಲಿ ಸಮಾನಧರ್ಮಜ್ಞಾನ ಮೊದಲಾದ ಸಂಶಯಜನಕಸಾಮಗ್ರಿಗಳು ಇಲ್ಲದ ಕಾರಣ ಸಂಶಯವೇ ಅನುಪಪನ್ನವಾಗುತ್ತದೆ.

ಈ ಆಶಂಕೆಯು ತಪ್ಪು. 'ಈ ಶಾಸ್ತ್ರವು ಒಂದು ವೇಳೆ ಪರನಿಗೆ ಅಥವಾ ಬೇರೆಯವನಿಗೆ ದೊರೆತಲ್ಲಿ ಆಗ ಹಿಂದೆ ತೋರಿಸಿದ ಸಂದೇಹಕಾರಣಗಳು ಉಪಪನ್ನವಾಗುತ್ತವೆ. ಆಗ ಪ್ರಯೋಜನದ ಅಪೇಕ್ಷೆಯು ಇರುವುದರಿಂದ ವಿಶೇಷಸ್ಮರಣೆಯುಳ್ಳ ಪರನು ಈ ಶಾಸ್ತ್ರವು ಆರಂಭಣೀಯವೋ ಅಲ್ಲವೋ? ಎಂಬುದಾಗಿ ಸಂದೇಹವನ್ನು ಹೊಂದುತ್ತಾನೆ. ಹೀಗೆ ಬೇರೆಯವನಿಗೆ ಪ್ರಾಪ್ತವಾಗುವ ಸಂಶಯವನ್ನು ಸೂತ್ರಕಾರರು ತೋರಿಸಿದ್ದಾರೆ. ಹೀಗೆ ಹೇಳಿದಾಗ ಹಿಂದಿನ ಯಾವುದೇ ಆಕ್ಷೇಪಕ್ಕೆ ಅವಕಾಶವಿಲ್ಲ.

* * * * *

## ಅನ್ಯಥಾತ್ವಶಂಕೆ ಇದ್ದಾಗ ಮಾತ್ರ ನ್ಯಾಯಗಳಿಗೆ ಪ್ರಸಕ್ತಿ

ಪರಿಮಳ – 'ಶ್ರೌತಸ್ಯ ಪ್ರಯೋಜನಾದೇರ್ನ್ಯಾಯೇನೋಪಪಾದನಾರ್ಥಮಿದಂ ಸೂತ್ರಮ್' ಇತ್ಯುಕ್ತಮಯುಕ್ತಮ್ । ಶ್ರೌತಸ್ಯಾನ್ಯಥಾತ್ವಪ್ರಸಕ್ತಾವೇವ ನ್ಯಾಯಾವಸರಾದಿತಿ ಭಾವೇನ ಪೃಚ್ಛತಿ – ಕಃ ಪುನರಿತಿ ॥ ಅಸ್ಯೇತಿ ॥ ಶ್ರೌತಪ್ರಯೋಜನಾದೇಃ ನ್ಯಾಯೇನೋ-ಪಪಾದನಪರಸ್ಯ ಸಂಶಯಾದಿರೂಪಪ್ರಸಂಜಕಮಿತ್ಯರ್ಥಃ।

ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುವುದ-ಕ್ಕೋಸ್ಕರ ಈ ಪ್ರಥಮಸೂತ್ರವು ಹೊರಟಿದೆ ಎಂಬುದಾಗಿ ಹೇಳಿದ್ದು ಅಯುಕ್ತವಾಗಿದೆ. ಶ್ರುತಿಸಿದ್ಧವಾದ ಅರ್ಥದಲ್ಲಿ ಅನ್ಯಥಾತ್ವಪ್ರಸಕ್ತಿ ಇದ್ದರೆ ಮಾತ್ರ ನ್ಯಾಯವು ಪ್ರವೃತ್ತವಾಗುತ್ತದ-ಲ್ಲವೇ? ಈ ಅಭಿಪ್ರಾಯದಿಂದ ಕಃ ಪುನಃ'' ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ. ''ಅಸ್ಯ'' – ಶ್ರುತಿಯಲ್ಲಿ ನಿರೂಪಿಸಲ್ಪಟ್ಟ ಪ್ರಯೋಜನಾದಿಗಳನ್ನು ನ್ಯಾಯದ ಮೂಲಕ ಉಪಪಾದನೆ ಮಾಡುವುದಕ್ಕಾಗಿ ಸಂಶಯಾದಿರೂಪವಾದ ಪ್ರಸಂಜಕವು ಯಾವುದು ಎಂಬುದು ಇದರ ಅರ್ಥ.

ವಿವರಣೆ – ಶ್ರುತಿಸಿದ್ಧವಾದ ಪ್ರಯೋಜನಾದಿಗಳನ್ನೇ ನ್ಯಾಯದ ಮೂಲಕ ಉಪಪಾದನೆ ಮಾಡಲು ಪ್ರಥಮಸೂತ್ರವು ಹೊರಟಿರುವುದು. ಶಾಸ್ತ್ರಾಂತರ್ಭಾವವು ಇರುತ್ತದೆ ಈ ಹಿಂದೆ ಹೇಳಲಾಯಿತು. ಇದರ ಮೇಲೆ ಆಕ್ಷೇಪಿಸಲಾಗಿದೆ. ಒಂದು ವೇಳೆ ಶ್ರುತಿಸಿದ್ಧವಾದ ಅರ್ಥದಲ್ಲಿ ಅನ್ಯಥಾತ್ವಶಂಕೆಯು ಬಂದರೆ ಅದರ ಪರಿಹಾರಕ್ಕಾಗಿ ನ್ಯಾಯವು ಹೊರಡುತ್ತದೆ. 'ಅಗ್ನಿರ್ಹಿಮಸ್ಯ ಭೇಷಜಮ್' ಎಂಬ ಶ್ರುತಿಸಿದ್ಧವಾದ ಅರ್ಥದಲ್ಲಿ ಅನ್ಯಥಾತ್ವಶಂಕೆಯೇ ಇರುವುದಿಲ್ಲ. ಇದರ ಪರಿಹಾರಕ್ಕಾಗಿ ನ್ಯಾಯಗಳು ಕೂಡ ಹೊರಟಿಲ್ಲ. ಇದರಂತೆ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ವಾಕ್ಯದ ವಿಷಯದಲ್ಲೂ ಕೂಡ ಅನ್ಯಥಾತ್ವಶಂಕೆಯೇ ಇರುವುದಿಲ್ಲ. ಹೀಗಿರುವಾಗ ಪ್ರಥಮಸೂತ್ರವು ನ್ಯಾಯದ ಮೂಲಕ ಏನನ್ನು ತಾನೇ ಉಪಪಾದನೆ ಮಾಡುತ್ತದೆ?

ಸಂಶಯ ಹಾಗೂ ಪೂರ್ವಪಕ್ಷಗಳನ್ನೇ ಅನ್ಯಥಾತ್ವಶಂಕೆಯೆಂದು ತಿಳಿದುಕೊಳ್ಳಬೇಕು. ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' ಇತ್ಯಾದಿ ಶ್ರುತಿಸಿದ್ಧವಾದ ಅರ್ಥದಲ್ಲಿ ಬ್ರಹ್ಮಶಬ್ದದಿಂದ ಜೀವನು ಪ್ರತಿಪಾದ್ಯನೋ? ವಿಷ್ಣುವೋ? ಎಂಬ ಸಂಶಯವು ಬಂದು ಜೀವನು ಪ್ರತಿಪಾದ್ಯನೆಂದು ಪೂರ್ವಪಕ್ಷವು

ಬರುತ್ತದೆ. ಇದನ್ನೇ ಅನ್ಯಥಾತ್ವಶಂಕೆಯೆಂದು ವಿವಕ್ಷಿಸಬೇಕು. ಇದರ ಪರಿಹಾರಕ್ಕಾಗಿ ನ್ಯಾಯವನ್ನು ಹೇಳುವ ಮೂಲಕ ಶ್ರುತ್ಯರ್ಥವನ್ನು ಪ್ರಥಮಸೂತ್ರವು ಉಪಪಾದನೆ ಮಾಡುತ್ತದೆ.

## ''ಕಃ ಪುನಃ'' ಇತ್ಯಾದಿ ಗ್ರಂಥಕ್ಕೆ ಮತ್ತೊಂದು ಅವತಾರಿಕೆ

**ಪರಿಮಳ– ಯದ್ವಾ 'ಜೀವವ್ಯತಿರಿಕ್ತೇಶ್ವರಾಭಾವಾತ್ ತಸ್ಯ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತಾ ಇತಿ ಪ್ರಾಪ್ತೇ' ಇತಿ ನ್ಯಾಯವಿವರಣೋಕ್ತಮತ್ರ ವಕ್ಷ್ಯಮಾಣದಿಶಾ ಅನೇಕಧಾ ಸೌತ್ರ-ಪದಾರ್ಥನಿರೂಪಣಾನನುರೂಪಮಿತಿ ಭಾವೇನ ಪೃಚ್ಛತಿ – ಕ ಇತಿ ॥**

ಅಥವಾ ''ಜೀವವ್ಯತಿರಿಕ್ತೇಶ್ವರಾಭಾವಾತ್ ತಸ್ಯ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತಾ ಇತಿ ಪ್ರಾಪ್ತೇ'' – 'ಜೀವನಿಗಿಂತ ಅತಿರಿಕ್ತನಾದ ಈಶ್ವರನೇ ಇಲ್ಲದಿರುವುದರಿಂದ ಆ ಜೀವನು ಪ್ರಕಾಶನಾಗಿರುವುದರಿಂದ ಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ' ಹೀಗೆ ಪೂರ್ವಪಕ್ಷ ಬರುತ್ತದೆ. ನ್ಯಾಯವಿವರಣದಲ್ಲಿ ಈ ಪೂರ್ವಪಕ್ಷವನ್ನು ತೋರಿಸಿದ್ದಾರೆ. ಆದರೆ ಇಲ್ಲಿ ಮುಂದೆ ಅನೇಕ-ಬಗೆಯಲ್ಲಿ ಸೂತ್ರಪದದಲ್ಲಿರುವ ಅರ್ಥಗಳನ್ನು ನಿರೂಪಣೆ ಮಾಡುತ್ತಾರೆ. ಈ ಅರ್ಥ ನ್ಯಾಯ-ವಿವರಣಕ್ಕೆ ಅನುರೂಪವಾಗಿರುವುದಿಲ್ಲ ಎಂಬ ಅಭಿಪ್ರಾಯದಿಂದ ''ಕಃ ಪರಃ'' ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ.

ವಿವರಣೆ – ''ಕಃ ಪುನರತ್ರ ಪ್ರಸಂಗಃ'' ಇತ್ಯಾದಿ ಟೀಕೆಗೆ ಮತ್ತೊಂದು ರೀತಿಯಲ್ಲಿ ಅವತಾರಿಕೆಯನ್ನು ಹೇಳುತ್ತಿದ್ದಾರೆ. ನ್ಯಾಯವಿವರಣದಲ್ಲಿ ಕೇವಲ ಒಂದೇ ಬಗೆಯಲ್ಲಿ ಪೂರ್ವಪಕ್ಷವನ್ನು ತೋರಿಸಿದ್ದಾರೆ. ಆದರೆ ಪ್ರಕೃತ ಅನುವ್ಯಾಖ್ಯಾನ ಹಾಗೂ ಸುಧಾಗ್ರಂಥಗಳಲ್ಲಿ ಅನೇಕರೀತಿಯ ಪೂರ್ವಪಕ್ಷಗಳನ್ನು ತೋರಿಸುತ್ತಿದ್ದಾರೆ. ಸೂತ್ರದಲ್ಲಿರುವ ಅತಃ ಎಂಬ ಪದಕ್ಕೆ ಐದು ಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ನ್ಯಾಯವಿವರಣದಲ್ಲಿ ಕೇವಲ ಒಂದೇ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಇಲ್ಲಿ ಮಾಡುವ ಸೂತ್ರವ್ಯಾಖ್ಯಾನವು ನ್ಯಾಯವಿವರಣೆಗೆ ಅನುಗುಣವಾಗಿರುವುದಿಲ್ಲ ಎಂಬ ಪ್ರಶ್ನೆಗೆ ''ಕಃ ಪುನಃ'' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

''ಕಃ ಪುನಃ'' ಎಂಬ ವಾಕ್ಯವು ಕೇವಲ ಪ್ರಶ್ನೆಯನ್ನಷ್ಟೇ ತಿಳಿಸುತ್ತಿಲ್ಲ; ಈ ಸೂತ್ರದಿಂದ ವ್ಯಾವರ್ತ್ಯ-ವಾದ ಪೂರ್ವಪಕ್ಷವನ್ನು ಆಚಾರ್ಯರು ನ್ಯಾಯವಿವರಣದಲ್ಲಿ ಏನು ತೋರಿಸಿದ್ದಾರೋ ಅದು ಇಲ್ಲಿ

ಮುಂದೆ ಹೇಳುವ ಅರ್ಥಕ್ಕೆ ಅನುಗುಣವಾಗಿರುವುದಿಲ್ಲ ಎಂಬುದನ್ನು ತಿಳಿಸುತ್ತಿದೆ. ಹೀಗೆ ಪೂರ್ವ-ಪಕ್ಷವನ್ನು ಮಾಡುವುದರಿಂದ ಮುಂದೆ ಹೇಳುವ ಎಲ್ಲ ಶಬ್ದಾರ್ಥಗಳಿಂದ ಯಾವುದು ವ್ಯಾವರ್ತ್ಯ-ವಾಗುತ್ತದೋ ಅಂಥ ಪೂರ್ವಪಕ್ಷವನ್ನೇ ಹೇಳಬೇಕು. ನ್ಯಾಯವಿವರಣದಲ್ಲಿ ಕೇವಲ ಒಂದು ಬಗೆಯ ಪೂರ್ವಪಕ್ಷವನ್ನು ತೋರಿಸಿದ್ದಾರೆ. ಇನ್ನೂ ಅನೇಕ ಬಗೆಯ ಪೂರ್ವಪಕ್ಷಗಳಿವೆ ಎಂಬ ಅಭಿಪ್ರಾಯವನ್ನು ಸೂಚಿಸಲು ಈ ಗ್ರಂಥವು ಹೊರಟಿದೆ.

## ಅಧಿಕರಣದ ಸಂಶಯಬೀಜ

ಪರಿಮಳ– ಸಂಶಯಬೀಜಮಾಹ – ಉಪಲಭ್ಯಂತ ಇತಿ ॥ 'ಕಾಕದಂತಪರೀಕ್ಷಾದಿ-ರೂಪವಾಕ್ಯಾನ್ಯನಾರಭ್ಯಾಣಿ ಇಷ್ಟಗೋಷ್ಠಿಪರವಾಕ್ಯಾನ್ಯಾರಭ್ಯಾಣ್ಯುಪಲಂಭಂತೇ' ಇತ್ಯನೇನ ವಾಕ್ಯತ್ವರೂಪಧರ್ಮಸ್ಯಾರಭ್ಯತ್ವಾನಾರಭ್ಯತ್ವರೂಪಕೋಟಿದ್ವಯಸಹಚಾರೋ ದರ್ಶಿತಃ। ಪುರೋವರ್ತಿನಿಷ್ಠತಾಮಾಹ – ವಾಕ್ಯಂ ಚೇತಿ ॥

ಸಂಶಯಬೀಜವನ್ನು "ಉಪಲಭ್ಯಂತೇ" ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಕಾಕದಂತ-ಪರೀಕ್ಷಾಗ್ರಂಥದಲ್ಲಿ ವಾಕ್ಯಗಳು ಅನಾರಂಭವಾಗಿವೆ. ಇಷ್ಟಗೋಷ್ಠಿಯಲ್ಲಿರುವ (ಮದುವೆ ಮೊದ-ಲಾದ ವಿಷಯಗಳ ಬಗ್ಗೆ ಗುಂಪುಕಟ್ಟಿಕೊಂಡು ಮಾತನಾಡುವುದು) ವಾಕ್ಯಗಳು ಆರಂಭಣೀ-ಯವಾಗಿರುವುದು ಕಂಡಿದೆ. ಎರಡೂ ಕಡೆ ವಾಕ್ಯತ್ವರೂಪವಾದ ಧರ್ಮವು ಇರುತ್ತದೆ. ಹೀಗೆ ವಾಕ್ಯತ್ವರೂಪವಾದ ಧರ್ಮಕ್ಕೆ ಆರಂಭಣೀಯತ್ವ ಹಾಗೂ ಅನಾರಂಭಣೀಯತ್ವವೆಂಬ ಎರಡು ಕೋಟಿಗಳ ಸಾಹಚರ್ಯವಿರುವುದು ಕಂಡಿದೆ. ಇದಕ್ಕೆ ಪುರೋವರ್ತಿನಿಷ್ಠತ್ವವನ್ನು "ವಾಕ್ಯಂ ಚ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ – ಜಿಜ್ಞಾಸಾಧಿಕರಣದಿಂದ ಸಂಶಯಕ್ಕೆ ಬೀಜವನ್ನು ಇಲ್ಲಿ ತಿಳಿಸುತ್ತಿದ್ದಾರೆ – ಊರ್ಧ್ವವಾದ ಸ್ಥಾಣುವು ಕಂಡಿದೆ. ಪುರುಷನೂ ಕಂಡಿದ್ದಾನೆ. ಈ ಪುರೋವರ್ತಿಯಾದ ವಸ್ತುವು ಊರ್ಧ್ವವಾಗಿದೆ. ಆದ್ದರಿಂದ ಪುರೋವರ್ತಿಯಾದ ವಸ್ತುವು ಸ್ಥಾಣುವೋ ಪುರುಷನೋ? ಎಂಬ ಸಂದೇಹವು ಬರುವಂತೆ ಆರಂಭಣೀಯವಾಕ್ಯಗಳೂ ಕೂಡ ಕಂಡಿವೆ, ಅನಾರಂಭಣೀಯವಾದ ವಾಕ್ಯಗಳೂ ಕಂಡಿವೆ. ಅರ್ಥಾತ್ ವಾಕ್ಯತ್ವವೆಂಬ ಧರ್ಮಕ್ಕೆ ಆರಂಭಣೀಯತ್ವ ಹಾಗೂ ಅನಾರಂಭಣೀಯತ್ವವೆಂಬ ಕೋಟಿದ್ವಯಗಳ

ಸಾಹಚರ್ಯವಿರುವುದು ಕಂಡಿದೆ. ಕೋಟಿದ್ವಯಸಹಚರಿತವಾದ ಧರ್ಮವೇ ಸಾಧಾರಣ-ಧರ್ಮವಾಗಿದೆ. ಕೋಟಿದ್ವಯಸಹಚರಿತವಾಗಿ ಸಂಶಯಧರ್ಮಿಯಾದ ಪುರೋವರ್ತಿಯಾದ ವಸ್ತು-ವಿನಲ್ಲಿ ಆ ಧರ್ಮವು ಇರಬೇಕು. ಅದನ್ನೇ ಸಾಧಾರಣಧರ್ಮ ಎಂಬುದಾಗಿ ಕರೆಯುತ್ತೇವೆ. ಪ್ರಕೃತ 'ಬ್ರಹ್ಮಮೀಮಾಂಸಾಶಾಸ್ತ್ರಮ್ ಆರಂಭಣೀಯಂ ವಾ ನ ವಾ?' ಎಂಬುದು ಸಂಶಯದ ಆಕಾರ.

## ಸಂಶಯವು ಹೇಗೆ ಉಂಟಾಗುತ್ತದೆ?

ಪರಿಮಳ– ಉಕ್ತೇತಿ ॥ ಧರ್ಮಿಜ್ಞಾನವಿಶೇಷಾದರ್ಶನರೂಪಸಂದೇಹಕಾರಣಾ ಇತ್ಯರ್ಥಃ । ವಿಶೇಷೇತಿ ॥ ಆರಂಭಣೀಯತ್ವಾದಿಕೋಟಿಸ್ಮೃತಿಮತಾ ಇತ್ಯರ್ಥಃ । ತತ್ರ ಹೇತುಃ 'ಪ್ರಯೋಜನೇತಿ' । 'ಅಸ್ಮಾತ್ ಪ್ರಯೋಜನಂ ಮಯಾ ಲಬ್ಧವ್ಯಮ್' ಇತಿ ಫಲ-ಕಾಮಿತ್ವೇನೇತ್ಯರ್ಥಃ।

''ಉಕ್ತಸಂದೇಹಕಾರಣ'' – ಧರ್ಮಿಯ ಜ್ಞಾನ, ವಿಶೇಷನಿರ್ಣಾಯಕಪ್ರಮಾಣದ ಅಭಾವ ಇವುಗಳು ಸಂಶಯಕ್ಕೆ ಕಾರಣಗಳು. ''ವಿಶೇಷಸ್ಮೃತಿಃ'' ಆರಂಭಣೀಯತ್ವ, ಅನಾರಂಭಣೀ-ಯತ್ವ ಕೋಟಿಗಳ ಸ್ಮರಣೆ. ಇವುಗಳಿದ್ದರೂ ಕೂಡ ಸಂಶಯದ ಮತ್ತೊಂದು ಕಾರಣಸಾಮಗ್ರಿ-ಯನ್ನು ''ಪ್ರಯೋಜನಾರ್ಥಿತ್ವೇನ'' ಎಂಬುದರಿಂದ ತಿಳಿಸಿದ್ದಾರೆ. 'ಈ ಶಾಸ್ತ್ರದಿಂದ ಫಲವನ್ನು ನಾನು ಪಡೆಯಬೇಕು' ಎಂಬುದಾಗಿ ಫಲಾಪೇಕ್ಷೆ ಇರುವುದೂ ಕೂಡ ಸಂಶಯಕ್ಕೆ ಕಾರಣ-ವಾಗಿದೆ. ಆದ್ದರಿಂದ ಸಂಶಯವು ಬರುತ್ತದೆಂದರ್ಥ.

ವಿವರಣೆ – ಸಂಶಯವು ಬರಬೇಕೆಂದರೆ ಮೊದಲು ಧರ್ಮಿಜ್ಞಾನ ಇರಬೇಕು. ಸಾಮಾನ್ಯಾ-ಕಾರದಿಂದ ಧರ್ಮಿಜ್ಞಾನವು ಬಂದ ಮೇಲೆ ಸಾಧಾರಣಧರ್ಮದರ್ಶನವು ಬೇಕು. ಮತ್ತು ವಿಶೇಷಾ-ದರ್ಶನವಿರಬೇಕು. ಅನ್ಯತರಕೋಟಿವ್ಯಾಪ್ಯಧರ್ಮವನ್ನು ನೋಡಿರಬಾರದು. ಅದೇ ಕಾಲದಲ್ಲಿ ಕೋಟಿ-ಸ್ಮೃತಿಯು ಇರಬೇಕು. ಆ ಕೋಟಿಸ್ಮೃತಿಯು ಬರಬೇಕೆಂದರೆ ಅರ್ಥಿತ್ವವು ಇರಬೇಕು. ಪ್ರಕೃತದಲ್ಲಿ ಶಾಸ್ತ್ರವು ಆರಂಭಣೀಯವೋ ಅಲ್ಲವೋ? ಎಂಬುದು ಕೋಟಿಸ್ಮರಣೆ ಎಂದು ಕರೆಸಿಕೊಳ್ಳುತ್ತದೆ. ಅರ್ಥಿತ್ವವೆಂದರೆ 'ಈ ಶಾಸ್ತ್ರದಿಂದ ಫಲವನ್ನು ನಾನು ಪಡೆಯಬೇಕು ಎಂಬುದು. ವೇದವ್ಯಾಸದೇವರಿಗೆ ಅನ್ಯತರಕೋಟಿಯ ನಿಶ್ಚಯವಿರುವುದರಿಂದ ಸಂಶಯಧರ್ಮಿಯಲ್ಲಿ ಆರಂಭಣೀಯತ್ವವೆಂಬ ಕೋಟಿ-

ಯನ್ನು ತದ್ವ್ಯಾಪ್ಯವಾದ ಧರ್ಮಗಳನ್ನು ನಿಶ್ಚಯವಾಗಿ ತಿಳಿದುಕೊಂಡಿದ್ದಾರೆ. ಆದ್ದರಿಂದ ಆರಂಭಣೀಯಂ ವಾ ನ ವಾ? ಎಂಬ ಸಂದೇಹವು ವೇದವ್ಯಾಸದೇವರಿಗೆ ಬರುವುದಿಲ್ಲ. ಮತ್ತೊಬ್ಬರಿಗೆ ಸಂಶಯವು ಬರಬೇಕೆಂದರೆ ಪರನು ಈ ಶಾಸ್ತ್ರವನ್ನು ಇನ್ನೂ ತಿಳಿದೇ ಇರುವುದಿಲ್ಲ. ಆದ್ದರಿಂದ ಸಂಶಯವು ಹೇಗೆ ಬರುತ್ತದೆ?

ಸೂತ್ರಕಾರರಿಗೆ ಸ್ವತಃ ಸಂದೇಹವಿಲ್ಲದ್ದರಿಂದ ಪರನಿಗೆ ಬರುವ ಸಂದೇಹವನ್ನು ವಿವಕ್ಷಿಸಿದ್ದಾರೆ. ಆದ್ದ-ರಿಂದ ಇದು ಆಹಾರ್ಯಸಂಶಯವಾಗಿದೆ.

## ವಿಷಯಸಂಶಯಾದಿಗಳೇ ಇಲ್ಲದಿರುವಾಗ ಪ್ರಥಮಸೂತ್ರವು ಹೇಗೆ ಹೊರಡುತ್ತದೆ?

ವಾಕ್ಯಾರ್ಥಚಂದ್ರಿಕಾ – ನನ್ವಧಿಕರಣಸ್ಯ ವಿಷಯಸಂಶಯಪೂರ್ವಪಕ್ಷಸಿದ್ಧಾಂತಪ್ರಯೋ-ಜನರೂಪಪಂಚಾಂಗತ್ವಾದಾರಂಭಣೀಯತಾಸಿದ್ಧಯೇ ಪ್ರೇಕ್ಷಾವತಃ ಪ್ರವರ್ತಯಿತುಮಿತ್ಯಾದಿ ಪೂರ್ವಗ್ರಂಥೇ ಶಾಸ್ತ್ರಾರಂಭಣೀಯತಾಸಿದ್ಧೇಃ ಪ್ರಯೋಜನೋಕ್ತಾವಪಿ ಶಾಸ್ತ್ರಸ್ಯ ವಿಷಯತ್ವಸಂಭವ ಏವ ತದಾರಂಭಣೀಯತ್ವಸಿದ್ಧೇಃ ಪ್ರಯೋಜನತ್ವಸಂಭವಾತ್ ಸಾಮಾನ್ಯತೋ ಜ್ಞಾತಸ್ಯ ವಿಶೇಷತಶ್ಚ ಸಂದಿಗ್ಧಸ್ಯೈವ ವಿಷಯತ್ವಾತ್ ಶಾಸ್ತ್ರಸ್ಯಾದ್ಯಾಪಿ ಅನುತ್ಪನ್ನತ್ವೇನ ಸಾಮಾನ್ಯತೋ ಜ್ಞಾನಾಸಂಭವಾದ್ ಧರ್ಮಿಜ್ಞಾನಾಭಾವೇನ ಆರಂಭಣೀಯತ್ವಾದಿಕೋಟಿಪ್ರಾಪಕಸ್ಯಾಪ್ಯಭಾವೇನ ವಿಶೇಷತಃ ಸಂದೇಹಾಸಂಭವಾದ್ ವಿಷಯಸಂಶಯಯೋಃ ಸತೋರೇವ ಸಂದಿಗ್ಧೇಽರ್ಥೇ ನ್ಯಾಯಃ ಪ್ರವರ್ತತ ಇತಿ ನ್ಯಾಯೇನ ವಿಪರೀತಯುಕ್ತ್ಯನುಸಂಧಾನಾತ್ಮಕಪೂರ್ವಪಕ್ಷಪ್ರವೃತ್ತೇರವತಾರಿಕಾಪೂರ್ವಪಕ್ಷಸ್ಯೈವ ಚ ಸಿದ್ಧಾಂತಸೂತ್ರಪ್ರಾಪಕತ್ವಾದಸ್ಯ ಚ ಸಿದ್ಧಾಂತಸೂತ್ರತ್ವಾತ್ ಪ್ರಸಂಜಕಾಭಾವೇ ಕಥಮಸ್ಯ ಸೂತ್ರಸ್ಯ ಪ್ರವೃತ್ತಿರಿತ್ಯಾಶಂಕತೇ – ಕಃ ಪುನರಿತಿ ॥

ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನಗಳೆಂಬ ಐದು ಅಂಗಗಳಿದ್ದರೆ ಅದನ್ನು ಅಧಿಕರಣ ಎಂದು ಕರೆಯುತ್ತಾರೆ. 'ಆರಂಭಣೀಯತ್ವವು ಸಿದ್ಧವಾಗಬೇಕೆಂದರೆ' ಮತ್ತು 'ಪ್ರೇಕ್ಷಾ-ವಂತರು ಪ್ರವೃತ್ತಿಮಾಡಬೇಕೆಂದರೆ' ಇತ್ಯಾದಿಯಾಗಿ ಹಿಂದಿನ ಗ್ರಂಥದಲ್ಲಿ ಶಾಸ್ತ್ರಕ್ಕೆ ಆರಂಭಣೀಯತ್ವವು ಸಿದ್ಧವಾಗಿದೆ. ಆದ್ದರಿಂದ ಪ್ರಯೋಜನವನ್ನು ಸಮರ್ಥಿಸಿದ್ದಾಯಿತು. ಆದರೆ ಉಳಿದ ನಾಕನ್ನು ಈ ಅಧಿ ಕರಣಕ್ಕೆ ಉಪಪಾದಿಸಲು ಸಾಧ್ಯವಿಲ್ಲ.

ಶಾಸ್ತ್ರವು ವಿಷಯವಾದರೆ ಮಾತ್ರ ಶಾಸ್ತ್ರಕ್ಕೆ ಆರಂಭಣೀಯತ್ವವು ಸಿದ್ಧವಾಗುತ್ತದೆ. ಆರಂಭಣೀ-ಯತ್ವವು ಸಿದ್ಧವಾದರೆ ಪ್ರಯೋಜನವು ಇದೆ ಎಂದು ಸಾಧಿಸಬಹುದು. ಆದರೆ ವಿಷಯವೇ ಶಾಸ್ತ್ರಕ್ಕೆ ಸಿದ್ಧವಾಗುವುದಿಲ್ಲ. ಏಕೆಂದರೆ ಸಾಮಾನ್ಯತಃ ಜ್ಞಾತವಾಗಿದ್ದು ವಿಶೇಷತಃ ಸಂದಿಗ್ಧವಾದದ್ದು ವಿಷಯವಾಗುತ್ತದೆ. ಶಾಸ್ತ್ರವು ಇನ್ನೂ ರಚಿತವೇ ಆಗದಕಾರಣ ಸಾಮಾನ್ಯಜ್ಞಾನವೂ ಕೂಡ ಇರುವುದಿಲ್ಲ. ಆದ್ದರಿಂದ ಧರ್ಮಿಜ್ಞಾನವೇ ಇಲ್ಲದಿದ್ದಾಗ ಆರಂಭಣೀಯತ್ವಾದಿ ಕೋಟಿಪ್ರಾಪಕವೇ ಇಲ್ಲದಂತಾಯಿತು. ಆದ್ದರಿಂದ ವಿಶೇಷತಃ ಸಂದೇಹವು ಬರುವುದಿಲ್ಲ. ವಿಷಯ ಮತ್ತು ಸಂಶಯಗಳಿದ್ದರೆ ಮಾತ್ರ ಸಂದಿಗ್ಧ-ವಾದ ಅರ್ಥದಲ್ಲಿ ನ್ಯಾಯವು ಪ್ರವೃತ್ತವಾಗುತ್ತದೆಂಬ ನ್ಯಾಯದಂತೆ ವಿಪರೀತಯುಕ್ತ್ಯನುಸಂಧಾನಾ-ತ್ಮಕವಾದ ಪೂರ್ವಪಕ್ಷವು ಪ್ರವೃತ್ತವಾಗುತ್ತದೆ. ಪ್ರಕೃತ ವಿಷಯ, ಸಂಶಯಗಳಿಲ್ಲದ ಕಾರಣ ಪೂರ್ವಪಕ್ಷವು ಪ್ರವೃತ್ತವಾಗುವುದಿಲ್ಲ. ಅವತಾರಿಕಾರೂಪವಾದ ಪೂರ್ವಪಕ್ಷವಷ್ಟೇ ಸಿದ್ಧಾಂತಕ್ಕೆ ಪ್ರಾಪಕವಾಗುತ್ತದೆ. ಇದು ಸಿದ್ಧಾಂತಸೂತ್ರವಾಗಿರುವುದರಿಂದ ಇದಕ್ಕೆ ಅವತಾರಿಕಾರೂಪವಾದ ಪ್ರಸಂಜಕವೆನಿಸಿದ ಪೂರ್ವಪಕ್ಷವೇ ಇರುವುದಿಲ್ಲ. ಹೀಗಿರುವಾಗ ಪ್ರಥಮಸೂತ್ರವು ಹೇಗೆ ಪ್ರವೃತ್ತವಾಗುತ್ತದೆ. "ಕಃ ಪುನಃ" ಇತ್ಯಾದಿ ಗ್ರಂಥದಿಂದ ಹೀಗೆ ಆಶಂಕಿಸುತ್ತಿದ್ದಾರೆ.

ವಿವರಣೆ– ಅಧಿಕರಣ ಎಂದು ಕರೆಸಿಕೊಳ್ಳಬೇಕೆಂದರೆ ವಿಷಯಸಂಶಯಾದಿ ಐದು ಇರಲೇ ಬೇಕು. ಇವುಗಳಲ್ಲಿ ಪ್ರಯೋಜನವನ್ನು "ಆರಂಭಣೀಯತಾಸಿದ್ಧಯೇ" ಇತ್ಯಾದಿ ವಾಕ್ಯದಿಂದ ಹೇಳಿದ್ದಾಗಿದೆ. 'ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂಬುದು ಈ ಅಧಿಕರಣದ ಸಿದ್ಧಾಂತವಾಗಿದೆ. ಈ ಶಾಸ್ತ್ರವು ಆರಂಭಣೀಯವಾಗಿದೆ ಎಂಬುದು ಪ್ರಯೋಜನವಾಗಿದೆ. ಆದ್ದರಿಂದ ಪ್ರಯೋಜನವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು.

ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಥಮಸೂತ್ರದ ವಿಷಯವಾಗಿದೆ. ಆರಂಭಣೀಯವೋ ಅಲ್ಲವೋ ಎಂಬುದು ಸಂಶಯ. ಆರಂಭಣೀಯವಲ್ಲವೆಂದು ಪೂರ್ವಪಕ್ಷ. ಆರಂಭಣೀಯವಾಗಿದೆ ಎಂಬುದು ಸಿದ್ಧಾಂತ. ಅಥವಾ ಬ್ರಹ್ಮಜಿಜ್ಞಾಸೆಯು ವಿಷಯವಾಗಿದೆ; ಕರ್ತವ್ಯವೋ ಅಲ್ಲವೋ ಎಂಬುದು ಸಂಶಯ; ನ ಕರ್ತವ್ಯಃ ಎಂಬುದು ಪೂರ್ವಪಕ್ಷ; ಕರ್ತವ್ಯವಾಗಿದೆ ಎಂಬುದು ಸಿದ್ಧಾಂತ. ಹೀಗೂ ಸಹ ಹೇಳಬಹುದು. ಹೀಗೆ ಹೇಳಿದರೂ ಕೂಡ ಶಾಸ್ತ್ರವು ಆರಂಭಣೀಯವೆಂದು ಹೇಳಬೇಕಾದರೆ ಶಾಸ್ತ್ರವೇ ಪ್ರಥಮಾಧಿಕರಣಕ್ಕೆ ವಿಷಯವೆಂದು ಹೇಳಬೇಕು. ಸಾಮಾನ್ಯತಃ ಜ್ಞಾತವಾಗಿದ್ದು ವಿಶೇಷತಃ ಅಜ್ಞಾತ-ವಾಗಿರುತ್ತದೋ ಅದೇ ವಿಷಯ ಎಂದು ಕರೆಸಿಕೊಳ್ಳುತ್ತದೆ. ಆದರೆ ಇಲ್ಲಿಯ ತನಕ ಶಾಸ್ತ್ರವನ್ನು ಬರೆದಿರುವುದಿಲ್ಲ. ಹೀಗಿರುವಾಗ ಸಾಮಾನ್ಯಜ್ಞಾನವು ಹೇಗೆ ಬರುತ್ತದೆ? ಯಾವಾಗ ಸಾಮಾನ್ಯತಃ

ಜ್ಞಾನವೇ ಇರುವುದಿಲ್ಲವೋ ಆಗ ಕೋಟಿವಿಶೇಷಗಳ ಪ್ರಾಪಕವಿಲ್ಲದೇ ಸಂದೇಹವು ಬರುವುದಿಲ್ಲ. ಹೀಗೆ ವಿಷಯ ಮತ್ತು ಸಂಶಯಗಳು ಇಲ್ಲದಿರುವುದರಿಂದಲೇ ಪೂರ್ವಪಕ್ಷವೂ ಕೂಡ ಬರುವುದಿಲ್ಲ. ವಿಪರೀತಯುಕ್ತ್ಯನುಸಂಧಾನವೇ ಪೂರ್ವಪಕ್ಷ ಎಂದು ಕರೆಸಿಕೊಳ್ಳುತ್ತದೆ. ಸಂದೇಹ ಬಂದರೆ ಮಾತ್ರ ನ್ಯಾಯವು ಪ್ರವೃತ್ತವಾಗುತ್ತದೆ. ಪೂರ್ವಪಕ್ಷವೇ ಇಲ್ಲದಿದ್ದರೆ ಸಿದ್ಧಾಂತವು ಕೂಡ ಬರುವುದಿಲ್ಲ. ಏಕೆಂದರೆ ಸಿದ್ಧಾಂತಕ್ಕೆ ಪೂರ್ವಪಕ್ಷವು ಅವತಾರಿಕಾ ರೂಪವಾಗಿರುತ್ತದೆ. ಹೀಗೆ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ ಯಾವುದೊಂದನ್ನೂ ಕೂಡ ಈ ಅಧಿಕರಣದಲ್ಲಿ ತೋರಿಸಲು ಸಾಧ್ಯವಿಲ್ಲ. ಅಧಿಕರಣವೆಂದು ಕರೆಸಿಕೊಳ್ಳಬೇಕೆಂದರೆ ಈ ಐದೂ ಇರಲೇ ಬೇಕು.

## ತತ್ವದೀಪನವ್ಯಾಖ್ಯಾನದಂತೆ ಇದಕ್ಕೆ ವ್ಯಾಖ್ಯಾನ ಮಾಡಬಾರದು

ವಾಕ್ಯಾರ್ಥಚಂದ್ರಿಕಾ – ಕೇಚಿತ್ತು 'ಕಃ ಪುನಃ' ಇತಿ ವಿವರಣವಾಕ್ಯಸ್ಯ ತತ್ತ್ವದೀಪನ-ವ್ಯಾಖ್ಯಾನಮನುಸೃತ್ಯೇದಂ ವಾಕ್ಯಂ ವ್ಯಾಚಕ್ಷತೇ । ತತ್ತು ವಿವರಣಪರಿಹಾರವಾಕ್ಯೇ ತಾದೃಗರ್ಥ-ಪ್ರತೀತೇಃ ತದ್ವ್ಯಾಖ್ಯಾನಸಂಭವೇಽಪಿ ಪ್ರಾರಿಪ್ಸಿತತಯಾ ಇತ್ಯಾದಿ ಪ್ರಕೃತಗ್ರಂಥಾನನುಸಾರಿತ್ವಾದ್ ವಿಚಾರಣೀಯಮ್ ॥ ಉಚ್ಯತ ಇತ್ಯಾದಿ ॥ ಅತ್ರ ಪ್ರಾರಿಪ್ಸಿತತಯಾ ಬುದ್ಧಿಸನ್ನಿಹಿತತ್ವಮಿತಿ ವಿಷಯಸ್ಯ ಸಾಮಾನ್ಯತೋ ಜ್ಞಾನಸಮರ್ಥನಂ ಸೂತ್ರಕಾರಸ್ಯೇತಿ ತದಸಂಭಾವನಾಪರಿಹಾರಃ । 'ಉಪಲಭ್ಯಂತೇ' ಇತ್ಯಾದಿನಾ ಸಂಶಯಪ್ರಾಪಕಸಮರ್ಥನಮ್ । 'ನನು' ಇತ್ಯಾದಿನಾ ಚ ಸಂಶಯಾನುಪಪತ್ತಿಪರಿಹಾರ ಇತಿ ದ್ರಷ್ಟವ್ಯಮ್ ॥

ಕೆಲವರು "ಕಃ ಪುನಃ" ಇತ್ಯಾದಿ ವಾಕ್ಯಕ್ಕೆ 'ಕಃ ಪುನಃ' ಇತ್ಯಾದಿ ವಿವರಣವಾಕ್ಯಕ್ಕೆ ತತ್ವದೀಪನದ ವಾಕ್ಯಕ್ಕೆ ಅನುಸಾರವಾಗಿ ವ್ಯಾಖ್ಯಾನ ಮಾಡುತ್ತಾರೆ. ಇದು ವಿವರಣಪರಿಹಾರವಾಕ್ಯದಲ್ಲಿ ಆ ಅರ್ಥವು ಪ್ರತೀತವಾಗುವುದರಿಂದ ಅಲ್ಲಿ ಮಾತ್ರ ಈ ವ್ಯಾಖ್ಯಾನವು ಯುಕ್ತವಾಗುತ್ತದೆ. ಆದರೆ ಪ್ರಾರಿಪ್ಸಿತತಯಾ ಇತ್ಯಾದಿ ಮುಂದಿನ ಗ್ರಂಥಕ್ಕೆ ಈ ವ್ಯಾಖ್ಯಾನವು ಅನುಸಾರಿಯಾಗುವುದಿಲ್ಲ. ಆದ್ದರಿಂದ ಇವರ ವ್ಯಾಖ್ಯಾನವನ್ನು ವಿಚಾರ ಮಾಡಬೇಕು.

"ಉಚ್ಯತೇ" ಪ್ರಾರಿಪ್ಸಿತತಯಾ ಬುದ್ಧಿಸನ್ನಿಹಿತವಾದ ವಿಷಯಕ್ಕೆ ಸಾಮಾನ್ಯತಃ ಸೂತ್ರಕಾರರಿಗೆ ಬುದ್ಧಿಸನ್ನಿಹಿತವಾಗಿರುವುದರಿಂದ ಇದು ವಿಷಯವಾಗುತ್ತದೆ. ಆದ್ದರಿಂದ ಸಾಮಾನ್ಯತಃ ಜ್ಞಾನವಿದೆಯೆಂದು ಸಮರ್ಥಿಸಿದಂತಾಯಿತು. "ಉಪಲಭ್ಯಂತೇ ಖಲು" ಇತ್ಯಾದಿ ವಾಕ್ಯದಿಂದ ಸಂಶಯಬೀಜವನ್ನು ಸಮರ್ಥಿಸಿದ್ದಾರೆ. ಸಂಶಯದ ಅನುಪಪತ್ತಿಯನ್ನು "ನನು" ಇತ್ಯಾದಿ ಗ್ರಂಥದಿಂದ ಪರಿಹರಿಸಿದ್ದಾರೆ.

ಶಾಸ್ತ್ರವು ವಿಷಯವಾದರೆ ಮಾತ್ರ ಶಾಸ್ತ್ರಕ್ಕೆ ಆರಂಭಣೀಯತ್ವವು ಸಿದ್ಧವಾಗುತ್ತದೆ. ಆರಂಭಣೀಯತ್ವವು ಸಿದ್ಧವಾದರೆ ಪ್ರಯೋಜನವು ಇದೆ ಎಂದು ಸಾಧಿಸಬಹುದು. ಆದರೆ ವಿಷಯವೇ ಶಾಸ್ತ್ರಕ್ಕೆ ಸಿದ್ಧವಾಗುವುದಿಲ್ಲ. ಏಕೆಂದರೆ ಸಾಮಾನ್ಯತಃ ಜ್ಞಾತವಾಗಿದ್ದು ವಿಶೇಷತಃ ಸಂದಿಗ್ಧವಾದದ್ದು ವಿಷಯವಾಗುತ್ತದೆ. ಶಾಸ್ತ್ರವು ಇನ್ನೂ ರಚಿತವೇ ಆಗದಕಾರಣ ಸಾಮಾನ್ಯಜ್ಞಾನವೂ ಕೂಡ ಇರುವುದಿಲ್ಲ. ಆದ್ದರಿಂದ ಧರ್ಮಿಜ್ಞಾನವೇ ಇಲ್ಲದಿದ್ದಾಗ ಆರಂಭಣೀಯತ್ವಾದಿ ಕೋಟಿಪ್ರಾಪಕವೇ ಇಲ್ಲದಂತಾಯಿತು. ಆದ್ದರಿಂದ ವಿಶೇಷತಃ ಸಂದೇಹವು ಬರುವುದಿಲ್ಲ. ವಿಷಯ ಮತ್ತು ಸಂಶಯಗಳಿದ್ದರೆ ಮಾತ್ರ ಸಂದಿಗ್ಧವಾದ ಅರ್ಥದಲ್ಲಿ ನ್ಯಾಯವು ಪ್ರವೃತ್ತವಾಗುತ್ತದೆಂಬ ನ್ಯಾಯದಂತೆ ವಿಪರೀತಯುಕ್ತ್ಯನುಸಂಧಾನಾತ್ಮಕವಾದ ಪೂರ್ವಪಕ್ಷವು ಪ್ರವೃತ್ತವಾಗುತ್ತದೆ. ಪ್ರಕೃತ ವಿಷಯ, ಸಂಶಯಗಳಿಲ್ಲದ ಕಾರಣ ಪೂರ್ವಪಕ್ಷವು ಪ್ರವೃತ್ತವಾಗುವುದಿಲ್ಲ. ಅವತಾರಿಕಾರೂಪವಾದ ಪೂರ್ವಪಕ್ಷವಷ್ಟೇ ಸಿದ್ಧಾಂತಕ್ಕೆ ಪ್ರಾಪಕವಾಗುತ್ತದೆ. ಇದು ಸಿದ್ಧಾಂತಸೂತ್ರವಾಗಿರುವುದರಿಂದ ಇದಕ್ಕೆ ಅವತಾರಿಕಾರೂಪವಾದ ಪ್ರಸಂಜಕವೆನಿಸಿದ ಪೂರ್ವಪಕ್ಷವೇ [illegible]ವುದಿಲ್ಲ. ಹೀಗಿರುವಾಗ ಪ್ರಥಮಸೂತ್ರವು ಹೇಗೆ ಪ್ರವೃತ್ತವಾಗುತ್ತದೆ. "ಕಃ ಪುನಃ" ಇತ್ಯಾದಿ ಗ್ರಂಥದಿಂದ ಹೀಗೆ ಆಶಂಕಿಸುತ್ತಿದ್ದಾರೆ.

ವಿವರಣೆ– ಅಧಿಕರಣ ಎಂದು ಕರೆಸಿಕೊಳ್ಳಬೇಕೆಂದರೆ ವಿಷಯಸಂಶಯಾದಿ ಐದು ಇರಲೇ ಬೇಕು. ಇವುಗಳಲ್ಲಿ ಪ್ರಯೋಜನವನ್ನು "ಆರಂಭಣೀಯತಾಸಿದ್ಧಯೇ" ಇತ್ಯಾದಿ ವಾಕ್ಯದಿಂದ ಹೇಳಿದ್ದಾಗಿದೆ. 'ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂಬುದು ಈ ಅಧಿಕರಣದ ಸಿದ್ಧಾಂತವಾಗಿದೆ. ಈ ಶಾಸ್ತ್ರವು ಆರಂಭಣೀಯವಾಗಿದೆ ಎಂಬುದು ಪ್ರಯೋಜನವಾಗಿದೆ. ಆದ್ದರಿಂದ ಪ್ರಯೋಜನವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು.

ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಥಮಸೂತ್ರದ ವಿಷಯವಾಗಿದೆ. ಆರಂಭಣೀಯವೋ ಅಲ್ಲವೋ ಎಂಬುದು ಸಂಶಯ. ಆರಂಭಣೀಯವಲ್ಲವೆಂದು ಪೂರ್ವಪಕ್ಷ. ಆರಂಭಣೀಯವಾಗಿದೆ ಎಂಬುದು ಸಿದ್ಧಾಂತ. ಅಥವಾ ಬ್ರಹ್ಮಜಿಜ್ಞಾಸೆಯು ವಿಷಯವಾಗಿದೆ; ಕರ್ತವ್ಯವೋ ಅಲ್ಲವೋ ಎಂಬುದು ಸಂಶಯ; ನ ಕರ್ತವ್ಯಃ ಎಂಬುದು ಪೂರ್ವಪಕ್ಷ; ಕರ್ತವ್ಯವಾಗಿದೆ ಎಂಬುದು ಸಿದ್ಧಾಂತ. ಹೀಗೂ ಸಹ ಹೇಳಬಹುದು. ಹೀಗೆ ಹೇಳಿದರೂ ಕೂಡ ಶಾಸ್ತ್ರವು ಆರಂಭಣೀಯವೆಂದು ಹೇಳಬೇಕಾದರೆ ಶಾಸ್ತ್ರವೇ ಪ್ರಥಮಾಧಿಕರಣಕ್ಕೆ ವಿಷಯವೆಂದು ಹೇಳಬೇಕು. ಸಾಮಾನ್ಯತಃ ಜ್ಞಾತವಾಗಿದ್ದು ವಿಶೇಷತಃ ಅಜ್ಞಾತವಾಗಿರುತ್ತದೋ ಅದೇ ವಿಷಯ ಎಂದು ಕರೆಸಿಕೊಳ್ಳುತ್ತದೆ. ಆದರೆ ಇಲ್ಲಿಯ ತನಕ ಶಾಸ್ತ್ರವನ್ನು ಬರೆದಿರುವುದಿಲ್ಲ. ಹೀಗಿರುವಾಗ ಸಾಮಾನ್ಯಜ್ಞಾನವು ಹೇಗೆ ಬರುತ್ತದೆ? ಯಾವಾಗ ಸಾಮಾನ್ಯತಃ

ಜ್ಞಾನವೇ ಇರುವುದಿಲ್ಲವೋ ಆಗ ಕೋಟಿವಿಶೇಷಗಳ ಪ್ರಾಪಕವಿಲ್ಲದೇ ಸಂದೇಹವು ಬರುವುದಿಲ್ಲ. ಹೀಗೆ ವಿಷಯ ಮತ್ತು ಸಂಶಯಗಳು ಇಲ್ಲದಿರುವುದರಿಂದಲೇ ಪೂರ್ವಪಕ್ಷವೂ ಕೂಡ ಬರುವುದಿಲ್ಲ. ವಿಪರೀತಯುಕ್ತ್ಯನುಸಂಧಾನವೇ ಪೂರ್ವಪಕ್ಷ ಎಂದು ಕರೆಸಿಕೊಳ್ಳುತ್ತದೆ. ಸಂದೇಹ ಬಂದರೆ ಮಾತ್ರ ನ್ಯಾಯವು ಪ್ರವೃತ್ತವಾಗುತ್ತದೆ. ಪೂರ್ವಪಕ್ಷವೇ ಇಲ್ಲದಿದ್ದರೆ ಸಿದ್ಧಾಂತವು ಕೂಡ ಬರುವುದಿಲ್ಲ. ಏಕೆಂದರೆ ಸಿದ್ಧಾಂತಕ್ಕೆ ಪೂರ್ವಪಕ್ಷವು ಅವತಾರಿಕಾ ರೂಪವಾಗಿರುತ್ತದೆ. ಹೀಗೆ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ ಯಾವುದೊಂದನ್ನೂ ಕೂಡ ಈ ಅಧಿಕರಣದಲ್ಲಿ ತೋರಿಸಲು ಸಾಧ್ಯವಿಲ್ಲ. ಅಧಿಕರಣವೆಂದು ಕರೆಸಿಕೊಳ್ಳಬೇಕೆಂದರೆ ಈ ಐದೂ ಇರಲೇ ಬೇಕು.

## ತತ್ವದೀಪನವ್ಯಾಖ್ಯಾನದಂತೆ ಇದಕ್ಕೆ ವ್ಯಾಖ್ಯಾನ ಮಾಡಬಾರದು

ವಾಕ್ಯಾರ್ಥಚಂದ್ರಿಕಾ – ಕೇಚಿತ್ತು 'ಕಃ ಪುನಃ' ಇತಿ ವಿವರಣವಾಕ್ಯಸ್ಯ ತತ್ತ್ವದೀಪನ-ವ್ಯಾಖ್ಯಾನಮನುಸೃತ್ಯೇದಂ ವಾಕ್ಯಂ ವ್ಯಾಚಕ್ಷತೇ । ತತ್ತು ವಿವರಣಪರಿಹಾರವಾಕ್ಯೇ ತಾದೃಗರ್ಥ-ಪ್ರತೀತೇಃ ತದ್ವ್ಯಾಖ್ಯಾನಸಂಭವೇಽಪಿ ಪ್ರಾರಿಪ್ಸಿತತಯಾ ಇತ್ಯಾದಿ ಪ್ರಕೃತಗ್ರಂಥಾನನುಸಾರಿತ್ವಾದ್ ವಿಚಾರಣೀಯಮ್ ॥ ಉಚ್ಯತ ಇತ್ಯಾದಿ ॥ ಅತ್ರ ಪ್ರಾರಿಪ್ಸಿತತಯಾ ಬುದ್ಧಿಸನ್ನಿಹಿತತ್ವಮಿತಿ ವಿಷಯಸ್ಯ ಸಾಮಾನ್ಯತೋ ಜ್ಞಾನಸಮರ್ಥನಂ ಸೂತ್ರಕಾರಸ್ಯೇತಿ ತದಸಂಭಾವನಾಪರಿಹಾರಃ । 'ಉಪಲಭ್ಯಂತೇ' ಇತ್ಯಾದಿನಾ ಸಂಶಯಪ್ರಾಪಕಸಮರ್ಥನಮ್ । 'ನನು' ಇತ್ಯಾದಿನಾ ಚ ಸಂಶಯಾನುಪಪತ್ತಿಪರಿಹಾರ ಇತಿ ದ್ರಷ್ಟವ್ಯಮ್ ॥

ಕೆಲವರು "ಕಃ ಪುನಃ" ಇತ್ಯಾದಿ ವಾಕ್ಯಕ್ಕೆ 'ಕಃ ಪುನಃ' ಇತ್ಯಾದಿ ವಿವರಣವಾಕ್ಯಕ್ಕೆ ತತ್ವದೀಪನದ ವಾಕ್ಯಕ್ಕೆ ಅನುಸಾರವಾಗಿ ವ್ಯಾಖ್ಯಾನ ಮಾಡುತ್ತಾರೆ. ಇದು ವಿವರಣಪರಿಹಾರವಾಕ್ಯದಲ್ಲಿ ಆ ಅರ್ಥವು ಪ್ರತೀತವಾಗುವುದರಿಂದ ಅಲ್ಲಿ ಮಾತ್ರ ಈ ವ್ಯಾಖ್ಯಾನವು ಯುಕ್ತವಾಗುತ್ತದೆ. ಆದರೆ ಪ್ರಾರಿಪ್ಸಿತತಯಾ ಇತ್ಯಾದಿ ಮುಂದಿನ ಗ್ರಂಥಕ್ಕೆ ಈ ವ್ಯಾಖ್ಯಾನವು ಅನುಸಾರಿಯಾಗುವುದಿಲ್ಲ. ಆದ್ದರಿಂದ ಇವರ ವ್ಯಾಖ್ಯಾನವನ್ನು ವಿಚಾರ ಮಾಡಬೇಕು.

"ಉಚ್ಯತೇ" ಪ್ರಾರಿಪ್ಸಿತತಯಾ ಬುದ್ಧಿಸನ್ನಿಹಿತವಾದ ವಿಷಯಕ್ಕೆ ಸಾಮಾನ್ಯತಃ ಸೂತ್ರಕಾರರಿಗೆ ಬುದ್ಧಿಸನ್ನಿಹಿತವಾಗಿರುವುದರಿಂದ ಇದು ವಿಷಯವಾಗುತ್ತದೆ. ಆದ್ದರಿಂದ ಸಾಮಾನ್ಯತಃ ಜ್ಞಾನವಿದೆಯೆಂದು ಸಮರ್ಥಿಸಿದಂತಾಯಿತು. "ಉಪಲಭ್ಯಂತೇ ಖಲು" ಇತ್ಯಾದಿ ವಾಕ್ಯದಿಂದ ಸಂಶಯಬೀಜವನ್ನು ಸಮರ್ಥಿಸಿದ್ದಾರೆ. ಸಂಶಯದ ಅನುಪಪತ್ತಿಯನ್ನು "ನನು" ಇತ್ಯಾದಿ ಗ್ರಂಥದಿಂದ ಪರಿಹರಿಸಿದ್ದಾರೆ.

**ವಿವರಣೆ** – ಶಂಕರಭಾಷ್ಯಕ್ಕೆ ಎರಡು ಟೀಕೆಗಳಿವೆ. (೧) ಸುರೇಶ್ವರಾಚಾರ್ಯವಿರಚಿತ ವಿವರಣ (೨) ವಾಚಸ್ಪತಿವಿರಚಿತ ಭಾಮತೀ. ಇವೆರಡರಲ್ಲಿ ವಿವರಣ ಗ್ರಂಥಕ್ಕೆ ತತ್ವದೀಪನ ಎಂಬ ವ್ಯಾಖ್ಯಾನವಿದೆ. ಈ ವಿವರಣ ಗ್ರಂಥದಲ್ಲಿ 'ಕಃ ಪುನಃ ಅಸ್ಯ ಸೂತ್ರಸ್ಯ ಪ್ರಸಂಗಃ' ಎಂಬ ವಾಕ್ಯವು ಇರುತ್ತದೆ. ಇದಕ್ಕೆ ತತ್ವದೀಪನದಲ್ಲಿ ಯಾವ ಕ್ರಮದಲ್ಲಿ ವ್ಯಾಖ್ಯಾನ ಮಾಡಿದ್ದಾರೋ ಅದೇ ವ್ಯಾಖ್ಯಾನವನ್ನು ನಮ್ಮಲ್ಲೇ ಕೆಲವರು ಈ ಟೀಕಾಪಂಕ್ತಿಗೆ ವ್ಯಾಖ್ಯಾನ ಮಾಡುತ್ತಾರೆ. ಇದು ಸ್ವೀಕಾರಾರ್ಹವಲ್ಲ. ಏಕೆಂದರೆ ವಿವರಣವಾಕ್ಯದ ಸಂದರ್ಭವೇ ಬೇರೆ. ಇಲ್ಲಿರುವ ವಾಕ್ಯಸಂದರ್ಭವೇ ಬೇರೆ. ತತ್ವದೀಪನವ್ಯಾಖ್ಯಾನದಲ್ಲಿ ಮಾಡಿದ ಆ ವಿವರಣ ವ್ಯಾಖ್ಯಾನವು ಅಲ್ಲಿಗೆ ಸರಿಹೊಂದುತ್ತದೆ. ಆದರೆ ಅದನ್ನು ಅನುಸರಿಸಿ ಇಲ್ಲಿಯೂ ಕೂಡ ವ್ಯಾಖ್ಯಾನವನ್ನು ತಿಳಿಯಲು ಸಾಧ್ಯವಿಲ್ಲ. 'ಪ್ರಾರಿಪ್ಸಿತತಯಾ' ಎಂಬ ಮುಂದಿನ ವಾಕ್ಯಸಂದರ್ಭಕ್ಕೆ ಈ ವ್ಯಾಖ್ಯಾನವು ಸಂಗತವಾಗುವುದಿಲ್ಲ.

ಯಾವುದು ಸಾಮಾನ್ಯತಃ ಜ್ಞಾತವಾಗಿ ವಿಶೇಷತಃ ಸಂದಿಗ್ಧವಾಗಿರುತ್ತದೋ ಅದೇ ವಿಷಯವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರವು ಇಲ್ಲಿ ವಿಷಯವಾಗಿದೆ. 'ಪ್ರಾರಿಪ್ಸಿತತಯಾ ಬುದ್ಧಿಸನ್ನಿಹಿತಂ' ಎಂದು ಹೇಳಿದ್ದರಿಂದ ವೇದವ್ಯಾಸದೇವರ ಬುದ್ಧಿಯಲ್ಲಿ ಸನ್ನಿಹಿತವಾಗಿರುವುದರಿಂದ ಸಾಮಾನ್ಯಜ್ಞಾನವನ್ನು ಸಮರ್ಥಿಸಿದಂತಾಯಿತು.

## ಪ್ರಸಂಗಶಬ್ದದ ಅರ್ಥ

**ಯಾದುಪತ್ಯ** – ಪ್ರಸಂಗ ಇತಿ ॥ ಅತ್ರ ಪ್ರಸಂಗಶಬ್ದೇನ 'ಪ್ರಸಜ್ಯತೇऽನೇನ' ಇತಿ ವ್ಯುತ್ಪತ್ತ್ಯಾ ಪ್ರಸಂಜಕಮುಚ್ಯತೇ । ತಥಾ ಚೈತತ್ ಸೂತ್ರಪ್ರವೃತ್ತೌ ಕೀದೃಶಂ ಸಂಶಯಪೂರ್ವಪಕ್ಷಾದಿಕಂ ನಿಮಿತ್ತಮಿತಿ ಪ್ರಶ್ನಾರ್ಥಃ।

ಪ್ರಸಂಗಶಬ್ದದಿಂದ ಪ್ರಸಜ್ಯತೇ ಅನೇನ ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ ಪ್ರಸಂಜಕ ಎಂಬರ್ಥವನ್ನು ಹೇಳಬೇಕು. ಆಗ ಈ ಪ್ರಥಮಸೂತ್ರವು ಪ್ರವೃತ್ತವಾಗಲು ಎಂಥ ಸಂಶಯಪೂರ್ವಪಕ್ಷಾದಿಗಳು ನಿಮಿತ್ತವಾಗಿದೆ ಎಂದು ಹೇಳಿದಂತಾಗುತ್ತದೆ.

## ಸುಧಾಪರಿಮಳಸಾರ

'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಮೊದಲನೆಯ ಸೂತ್ರಕ್ಕೆ ಪ್ರಸಕ್ತಿ ಹೇಗೆ? ಎಂದರೆ ಹೇಳುತ್ತೇವೆ. ಬ್ರಹ್ಮಮೀಮಾಂಸಾಶಾಸ್ತ್ರವು ಆದನ್ನು ಆರಂಭಿಸಬೇಕೆಂದು ಸೂತ್ರಕಾರರ ಬುದ್ಧಿಯಲ್ಲಿ ರೂಪ ತಾಳಿದೆ.

ಈ ಶಾಸ್ತ್ರದ ಬಗ್ಗೆ ಇದು ಆರಂಭಿಸಲು ಯೋಗ್ಯವೇ ಅಲ್ಲವೇ ಎಂಬ ಸಂಶಯವು ತಲೆದೋರುತ್ತದೆ. ಲೋಕದಲ್ಲಿ ಎರಡೂ ವಿಧವಾದ ವಾಕ್ಯಗಳನ್ನು ನಾವು ಕಾಣುತ್ತೇವೆ ತಾನೆ? ಈ ಶಾಸ್ತ್ರವೂ ವಾಕ್ಯರೂಪವಾಗಿದೆ. ವಾಕ್ಯರೂಪವಾದ ಈ ಶಾಸ್ತ್ರವು ಆರಂಭಣೀಯವಾಗಿದೆ. ಅಥವಾ ಅನಾರಂಭಣೀಯವಾಗಿದೆ ಎಂಬುದಾಗಿ ನಿರ್ಣಯಿಸುವ ಯಾವ ವಿಶೇಷವೂ ಕಂಡುಬರುತ್ತಿಲ್ಲ. ವಿಶೇಷವು ದೊರತಿದ್ದರೆ, ಈ ಶಾಸ್ತ್ರವು ಆರಂಭಾರ್ಹವಾಗಿದೆ, ಅಥವಾ ಆರಂಭಿಸಲು ಅನರ್ಹವಾಗಿದೆ ಎಂಬುದಾಗಿ ಯಾವುದಾದರೊಂದು ಪಕ್ಷವನ್ನು ನಿಶ್ಚಯಿಸಬಹುದಿತ್ತು.

ಈ ಸಂಶಯವು ಯಾರಿಗೆ? ಸೂತ್ರಕಾರರಿಗೆ ಈ ಸಂಶಯವು ಬರಲಾರದು. ಏಕೆಂದರೆ ಅವರು 'ಬ್ರಹ್ಮಸೂತ್ರಗಳು ಆರಂಭಣೀಯ' ಎಂಬೀ ವಿಶೇಷವನ್ನು ಬಲ್ಲವರಾಗಿದ್ದಾರೆ. ಇಲ್ಲದಿದ್ದರೆ ಶ್ರುತ್ಯರ್ಥನಿರ್ಣಾಯಕನ್ಯಾಯಗ್ರಥನಾತ್ಮಕವಾದ ಬ್ರಹ್ಮಸೂತ್ರಗಳ ರಚನೆ ಮಾಡಲಾರರು.

ಇನ್ನು ಬೇರೆಯವರಿಗೆ ಈ ಸಂಶಯವು ತಲೆದೋರಿದೆ ಎನ್ನಲು ಬರುವುದಿಲ್ಲ. ಏಕೆಂದರೆ ಈವರೆಗೆ ಬೇರೆಯವರಿಗೆ ಈ ಶಾಸ್ತ್ರವು ಉಪಲಬ್ಧವೇ ಆಗಿಲ್ಲ. ಉಪಲಬ್ಧವಾಗದಿದ್ದಾಗ ಸಮಾನಧರ್ಮಾದಿ ಜ್ಞಾನವೇ ಮುಂತಾದ ಸಂಶಯಜನಕಸಾಮಗ್ರಿಗಳು ಇಲ್ಲವಾದುದರಿಂದ ಸಂಶಯವು ಬರಲಾರದು. ಆದ್ದರಿಂದ ಸಂಶಯವು ಯಾರಿಗೆ?

ಈ ಆಕ್ಷೇಪ ಸರಿಯಲ್ಲ. ಸಂಶಯವನ್ನು ಹೀಗೆ ಕೂಡಿಸಬಹುದು.

ಈ ಶಾಸ್ತ್ರವು ಬೇರೆಯವರಿಗೆ ದೊರೆತಲ್ಲಿ ಹಿಂದೆ ಹೇಳಿದ ಸಂದೇಹಕಾರಣಗಳು ಇದ್ದಂತಾಗಿ ಪ್ರಯೋಜನದ ಅಪೇಕ್ಷೆಯೂ ಇರುವುದರಿಂದ ವಿಶೇಷಸ್ಮರಣವುಳ್ಳ ಅವರಿಗೆ ಈ ಶಾಸ್ತ್ರವು ಆರಂಭಣೀಯವೋ ಅಥವಾ ಅನಾರಂಭಣೀಯವೋ ಎಂಬ ಸಂಶಯವು ಬರಬಹುದು. ಎಂದು ಬೇರೆಯವರಿಗೆ ಬರಬಹುದಾದ ಸಂಶಯವನ್ನು ಸೂತ್ರಕಾರರು ಮನಸ್ಸಿಗೆ ತಂದುಕೊಳ್ಳುವುದು ಯುಕ್ತವಾಗುತ್ತದೆ.

## ನೆನೆಪಿಡಿ

* ಶ್ರುತಿಸಿದ್ಧವಾದ ಅರ್ಥದಲ್ಲಿ ಅನ್ಯಥಾತ್ವಶಂಕೆ ಬಂದರೆ ಮಾತ್ರ ನ್ಯಾಯದ ಮೂಲಕ ಸೂತ್ರವು ಶ್ರುತ್ಯರ್ಥವನ್ನು ನಿರ್ಣಯಿಸುತ್ತದೆ.

* ಅಧಿಕರಣದ ಸಂಶಯ ಹಾಗೂ ಪೂರ್ವಪಕ್ಷಗಳೇ ಅನ್ಯಥಾತ್ವಶಂಕೆಯೆಂದು ಕರೆಸಿಕೊಳ್ಳುತ್ತವೆ. ಇವುಗಳ ಪರಿಹಾರಕ್ಕಾಗಿ ಸೂತ್ರಗಳು ಹೊರಟವೆ ಎಂದಭಿಪ್ರಾಯ.

* ನ್ಯಾಯವಿವರಣದಲ್ಲಿ ಕೇವಲ ಒಂದು ಪೂರ್ವಪಕ್ಷ ತೋರಿಸಿದ್ದಾರೆ. ಇನ್ನೂ ಹಲವು ರೀತ್ಯಾ ಪೂರ್ವಪಕ್ಷಗಳನ್ನು ಇಲ್ಲಿ ಮುಂದೆ ತೋರಿಸುತ್ತಾರೆ.

* ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಈ ಐದೂ ಇದ್ದರೆ ಮಾತ್ರ ಅಧಿಕರಣ ಎನ್ನುತ್ತಾರೆ.

* ಈ ಪ್ರಥಮಸೂತ್ರದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರವು ವಿಷಯ; ಆರಂಭಣೀಯವೋ ಅಲ್ಲವೋ ಎಂಬುದು ಸಂಶಯ; ಅನಾರಂಭಣೀಯವಲ್ಲ ಎಂಬುದು ಪೂರ್ವಪಕ್ಷ; ಆರಂಭಣೀಯವೆಂಬುದು ಸಿದ್ಧಾಂತ; ಪ್ರೇಕ್ಷಾವತ್‌ಪ್ರವೃತ್ತಿಯು ಫಲ.

* ಇಲ್ಲಿಯ ತನಕ ಪ್ರೇಕ್ಷಾವತ್‌ಪ್ರವೃತ್ತಿಯನ್ನು ಸಮರ್ಥಿಸುವ ಮೂಲಕ ಪ್ರಯೋಜನವನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಸಂಶಯಕಾರಣವನ್ನು ಸಮರ್ಥಿಸುತ್ತಿದ್ದಾರೆ.

## ಬ್ರಹ್ಮಜಿಜ್ಞಾಸೆಗೆ ಕರ್ತವ್ಯತ್ವದ ಸಮರ್ಥನೆ

**ಶ್ರೀಮನ್ನ್ಯಾಯಸುಧಾ – ನನ್ವಿದಂ ಯುಕ್ತ್ಯನುಸಂಧಾನಾತ್ಮಕವಿಚಾರ-ಮೀಮಾಂಸಾಪರನಾಮಕಜಿಜ್ಞಾಸಾಂಗಭೂತನ್ಯಾಯನಿಬಂಧನಂ ಜಿಜ್ಞಾಸಾಯಾಃ ಕರ್ತವ್ಯತಾಯಾಮಾರಂಭಣೀಯಂ ಭವಿಷ್ಯತಿ । ನ ಹಿ ವಿಚಾರಃ ಕರ್ತವ್ಯಃ ತದ್ ದ್ವಾರಭೂತನ್ಯಾಯನಿಬಂಧನಂ ಚ ನಾರಂಭಣೀಯಮಿತಿ ಸಂಭವತಿ । ನಿಃಸಾಧನಸ್ಯ ವಿಚಾರಸ್ಯೈವಾನುತ್ಥಾನಾತ್ । ಅನ್ಯಥಾ ತು ನೇತಿ ಜಿಜ್ಞಾಸೈವ ವಿಚಾರಣೀಯಾ ।**

ಈ ಬ್ರಹ್ಮಮೀಮಾಂಸಾಶಾಸ್ತ್ರವು ಯುಕ್ತ್ಯನುಸಂಧಾನಾತ್ಮಕವಾಗಿದೆ. ವಿಚಾರ, ಮೀಮಾಂಸಾ, ಮನನ ಎಂಬ ಹೆಸರುಗಳನ್ನು ಹೊಂದಿದ ಜಿಜ್ಞಾಸೆ ಎಂಬುದು ಇದರ ಪರ್ಯಾಯಶಬ್ದ. ಈ ಜಿಜ್ಞಾಸೆಗೆ ನ್ಯಾಯನಿಬಂಧನೆಯು ಅಂಗಭೂತವಾಗಿದೆ. ಜಿಜ್ಞಾಸೆಗೆ ಯುಕ್ತಿಗಳೇ ಸಾಧನಗಳಾಗಿವೆ. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವೆಂದು ಸಿದ್ಧವಾದರೆ ವಿಚಾರದ ಅಂಗವಾದ ನ್ಯಾಯನಿಬಂಧನಾತ್ಮಕವಾದ ಈ ಶಾಸ್ತ್ರವು ಆರಂಭಣೀಯವೆಂದು ಸಿದ್ಧವಾಗುತ್ತದೆ. ಏಕೆಂದರೆ, ನ್ಯಾಯಾನುಸಂಧಾನರೂಪವಾದ ವಿಚಾರವು ಕರ್ತವ್ಯವಾಗಿದೆ. ಆದರ ಸಾಧನವಾದ ನ್ಯಾಯನಿಬಂಧನರೂಪವಾದ ಶಾಸ್ತ್ರವು ಆರಂಭಣೀಯವಲ್ಲ

ಎಂಬುದಾಗಿ ಹೇಳುವುದು ಯುಕ್ತವಾಗುತ್ತದೆ. ಏಕೆಂದರೆ ಸಾಧನವಿಲ್ಲದೇ ವಿಚಾರದ ಉದಯವಾಗುವುದೇ ಸಾಧ್ಯವಿಲ್ಲ. ವಿಚಾರವು ಕರ್ತವ್ಯವಲ್ಲ ಎಂದು ಹೇಳಿದರೆ ಶಾಸ್ತ್ರವು ಅನಾರಂಭಣೀಯವಾಗುತ್ತದೆ. ಆದ್ದರಿಂದ ಜಿಜ್ಞಾಸೆಯನ್ನು ಮಾಡಬೇಕೋ? ಬೇಡವೋ? ಎಂಬ ಜಿಜ್ಞಾಸೆಯ ವಿಷಯದಲ್ಲಿ ಕರ್ತವ್ಯಾಕರ್ತವ್ಯಸಂಶಯವನ್ನು ತೋರಿಸುವುದು ಯೋಗ್ಯವಾಗಿದೆ. ಇಷ್ಟು ಆಕ್ಷೇಪ.

**ಸತ್ಯಮ್ । ಏತಚ್ಛಾಸ್ತ್ರವ್ಯುತ್ಪಾದನೀಯನ್ಯಾಯಕರಣಿಕಾಯಾಂ ಜಿಜ್ಞಾಸಾಯಾಂ ಉಭಯವಿಧವ್ಯಾಪಾರದರ್ಶನಾದ್ ವಿಶೇಷಾದರ್ಶನಾಚ್ಚ ಸಂಶಯಃ ಕಿಂ ಕರ್ತವ್ಯಾ ನ ವೇತಿ ।**

ಉತ್ತರ ಹೀಗಿದೆ – ಹೌದು. ಈ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಯಾವ ನ್ಯಾಯಗಳು ವ್ಯುತ್ಪಾದಿಸಲ್ಪಟ್ಟವೆಯೋ ಆ ನ್ಯಾಯಗಳಿಂದ ತಿಳಿಯಲ್ಪಡುವ ವಿಚಾರದ ಬಗ್ಗೆ ಎರಡು ರೀತಿಯ ವ್ಯಾಪಾರಗಳಿರುವುದು ಕಂಡಿದೆ. ಮತ್ತು ವಿಶೇಷದರ್ಶನವೂ ಕೂಡ ಇರುವುದಿಲ್ಲ. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವೋ ಅಲ್ಲವೋ ಎಂಬುದಾಗಿ ಸಂಶಯವು ಬರುತ್ತದೆ.

**ನನು ಚ 'ತದ್ವಿಜಿಜ್ಞಾಸಸ್ವ' ಇತಿ ಜಿಜ್ಞಾಸಾಯಾಃ ಶ್ರುತಿವಿಹಿತತ್ವಾತ್ ಕಥಂ ವಿಶೇಷಾದರ್ಶನಾತ್ । ಮೈವಮ್ । ವಿನಾ ವಿಚಾರೇಣ ಶ್ರುತ್ಯರ್ಥಸ್ಯ ಅದ್ಯಾಪ್ಯನಿರ್ಣೀತತ್ವೇನ ಸಂಶಯಾಸ್ಪದತ್ವಾತ್ ।**

'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯು ಜಿಜ್ಞಾಸೆಯು ಕರ್ತವ್ಯವಾಗಿದೆ ಎಂದು ವಿಧಾನ ಮಾಡುತ್ತಿದೆ. ಹೀಗೆ ವಿಶೇಷಪ್ರಮಾಣವಿರುವುದರಿಂದ ವಿಶೇಷಪ್ರಮಾಣವಿಲ್ಲವೆಂದು ಹೇಗೆ ಹೇಳಿದಿರಿ? ಕರ್ತವ್ಯಾ ನ ವಾ? ಎಂಬ ಸಂಶಯವು ಹೇಗೆ ಹುಟ್ಟುತ್ತದೆ? ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ವಿಚಾರವು ಕರ್ತವ್ಯವೆಂಬುದಾಗಿ ಈ ಶ್ರುತಿಯು ಹೇಳುತ್ತಿದೆ

ಎಂಬುದೇ ಸಿದ್ಧವಾಗಿಲ್ಲ. ವಿಚಾರವಿಲ್ಲದೇ ಶ್ರುತ್ಯರ್ಥದ ನಿರ್ಣಯವು ಹೇಗೆ ತಾನೇ ಆಗಲು ಸಾಧ್ಯ ? ಆದ್ದರಿಂದ ಈ ಶ್ರುತಿಯು ವಿಶೇಷದರ್ಶನವೆಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಸಂಶಯವು ಬಂದೇ ಬರುತ್ತದೆ.

**ತತ್ರ, ತಾವತ್ ಜಿಜ್ಞಾಸಾ ನ ಕರ್ತವ್ಯಾ ಇತಿ ಪ್ರಾಪ್ತಮ್ । ಕುತಃ? ವಿಷಯ-ಪ್ರಯೋಜನಸಂಬಂಧಾಧಿಕಾರಿಲಕ್ಷಣಾನುಬಂಧವಿಧುರತ್ವಾತ್ । ಕರ್ತವ್ಯತಾ ಖಲು ವಿಷಯಾದಿಮತ್ತಯಾ ವ್ಯಾಪ್ತಾ । ಕೃಷ್ಯಾದಿಕಂ ಹಿ ಸತಿ ವಿಷಯಭೂತೇ ಭೂಮ್ಯಾದೌ, ಪ್ರಯೋಜನೇ ಚ ಸಸ್ಯಾಧಿಗಮಾದಾವಧಿಕಾರಿಣಿ ಚ ಕೃಷೀ-ವಲಾದೌ ಕರ್ತವ್ಯಮುಪಲಬ್ಧಮ್ । ಸಾ ಚ ವ್ಯಾಪಿಕಾ ವ್ಯಾವರ್ತಮಾನೇತೋ ವ್ಯಾಪ್ಯಾಮಪಿ ಕರ್ತವ್ಯತಾಂ ವ್ಯಾವರ್ತಯತೀತಿ ಪ್ರತಿಬಂಧಸಿದ್ಧಿಃ ।**

ಜಿಜ್ಞಾಸೆಯು ಕರ್ತವ್ಯವಲ್ಲವೆಂದು ಪೂರ್ವಪಕ್ಷ. ಏಕೆಂದರೆ ವಿಷಯ, ಸಂಬಂಧ, ಪ್ರಯೋಜನ, ಅಧಿಕಾರಿಗಳೆಂಬ ನಾಕು ಅನುಬಂಧಗಳು ಇರುವುದಿಲ್ಲ. ಯಾವುದು ಕರ್ತವ್ಯವೋ ಅದು ವಿಷಯಾದಿಗಳಿಂದ ವ್ಯಾಪ್ತವೇ ಆಗಿರುತ್ತದೆ. ಹೇಗೆಂದರೆ, ಕೃಷಿ ಎಂಬ ವ್ಯಾಪಾರದಲ್ಲಿ ಭೂಮಿಯು ವಿಷಯವಾಗಿದೆ. ಸಸ್ಯಪ್ರಾಪ್ತಿಯು ಪ್ರಯೋಜನವಾಗಿದೆ. ಕೃಷೀವಲನು ಅಧಿಕಾರಿಯಾಗಿದ್ದಾನೆ. ಹೀಗೆ ವಿಷಯ, ಪ್ರಯೋಜನ, ಅಧಿಕಾರಿಗಳಿರು-ವುದರಿಂದ ಕೃಷಿಯು ಕರ್ತವ್ಯವೆಂದು ಸಿದ್ಧವಾಗಿದೆ. ಆದ್ದರಿಂದ ಕರ್ತವ್ಯತ್ವವು ವಿಷಯಾದಿ-ಮತ್ವವನ್ನು ವ್ಯಾಪಿಸಿಯೇ ಇರುತ್ತದೆ. ಆದ್ದರಿಂದ ವ್ಯಾಪಕವಾದ ವಿಷಯಾದಿಗಳು ಇಲ್ಲದಿರುವುದರಿಂದ ವ್ಯಾಪ್ಯವಾದ ಕರ್ತವ್ಯತ್ವವು ಇಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ವಿಷಯಾದಿಗಳಿಗೂ ಕರ್ತವ್ಯತ್ವಕ್ಕೂ ವ್ಯಾಪ್ತಿಯನ್ನು ತಿಳಿಯಬೇಕು.

**ವಿಷಯಾದಿಸದ್ಭಾವೋ ಹಿ ಜಿಜ್ಞಾಸಾಯಾಃ ಕಾರಣಮ್ । ನ ಚ ಕಾರಣಾಭಾವೇ ಕಾರ್ಯಮುತ್ಪತ್ತುಮರ್ಹತಿ । ವಿಷಯಶೂನ್ಯತ್ವಾದ್ಧಿ ಸಮನಸ್ಕೇಂದ್ರಿಯಸನ್ನಿ-**

**ಕೃಷ್ಣಸ್ಯ ಸ್ಫೀತಾಲೋಕಮಧ್ಯವರ್ತಿನೋ ಘಟಸ್ಯ ನ ಜಿಜ್ಞಾಸಾ ಕ್ರಿಯತೇ । ಪ್ರಯೋಜನವಿಕಲತ್ವಾತ್ ಖಲು ಸಂದಿಗ್ಧಮಪಿ ವಾಯಸದಶನಾದಿಕಂ ನ ಜಿಜ್ಞಾಸ್ಯತೇ । ಸಂಬಂಧವೈಧುರ್ಯಾದ್ಧಿ ಸಪ್ರಯೋಜನಂ ಸವಿಷಯಮಪಿ ಶಬ್ದಜ್ಞಾನಮರ್ಥಯಮಾನೋ ನ ವೈದ್ಯಕೇ ಪ್ರವರ್ತತೇ । ಅಧಿಕಾರಿವಿರಹಾಚ್ಚ ನ ಮುಮುಕ್ಷೋರ್ವಾತ್ಸ್ಯಾಯನೇ ಪ್ರವೃತ್ತಿಃ ।**

ವಿಷಯಾದಿಗಳಿರುವುದೇ ಜಿಜ್ಞಾಸೆಗೆ ಕಾರಣವಾಗಿದೆ. ಕಾರಣವಿಲ್ಲದಿದ್ದರೆ ಕಾರ್ಯವು ಹುಟ್ಟಲು ಸಾಧ್ಯವೇ ಇಲ್ಲ. ವಿಷಯವಿಲ್ಲದ್ದರಿಂದ ಸ್ವಚ್ಛವಾದ ಬೆಳಕಿನಲ್ಲಿ ಹೊಳೆಯುತ್ತಿರುವ ಮನಸ್ಸಿನ ಸಂಪರ್ಕಹೊಂದಿದ ಚಕ್ಷುರಿಂದ್ರಿಯಕ್ಕೆ ಗೋಚರವಾಗುವ ಘಟಾದಿಗಳ ವಿಷಯದಲ್ಲಿ ಯಾರೊಬ್ಬನೂ ಕೂಡ ಜಿಜ್ಞಾಸೆಯನ್ನು ಮಾಡುವುದಿಲ್ಲ. ಸಂದೇಹವಿದ್ದರೂ ಕೂಡ ಕಾಕದಂತಾದಿಗಳಲ್ಲಿ ಜಿಜ್ಞಾಸೆಯನ್ನು ಯಾರೂ ಮಾಡುವುದಿಲ್ಲ. ಏಕೆಂದರೆ ಇವುಗಳ ಜಿಜ್ಞಾಸೆಯಿಂದ ಯಾವುದೇ ವಿಧದ ಪ್ರಯೋಜನವಿರುವುದಿಲ್ಲ. ವಿಷಯಪ್ರಯೋಜನಗಳಿದ್ದರೂ ಕೂಡ ಸಂಬಂಧವಿಲ್ಲದ್ದರಿಂದ ವೈದ್ಯಶಾಸ್ತ್ರದಲ್ಲಿ ವೈಯ್ಯಾಕರಣಿಯು ಪ್ರವೃತ್ತಿಯನ್ನು ಮಾಡುವುದಿಲ್ಲ. ಮುಮುಕ್ಷುವಾದವನು ಅನಧಿಕಾರಿಯಾದ್ದರಿಂದ ವಾತ್ಸ್ಯಾಯನಸೂತ್ರಾಧ್ಯಯನದಲ್ಲಿ ಪ್ರವೃತ್ತಿಯನ್ನು ಮಾಡುವುದಿಲ್ಲ.

## ಸಂಶಯವು ಸೂತ್ರಕ್ಕೆ ಅನನುಗುಣವಲ್ಲ

ಪರಿಮಳ – ಶಾಸ್ತ್ರಧರ್ಮಿಕಸಂಶಯಸ್ಯ ಜಿಜ್ಞಾಸಾಕರ್ತವ್ಯತ್ವೋಕ್ತಿಪರಸೂತ್ರಾನನುರೂಪತ್ವಭ್ರಮನಿರಾಸಾಯ ಸೌತ್ರಜಿಜ್ಞಾಸಾಕರ್ತವ್ಯತ್ವಾಕರ್ತವ್ಯತ್ವಯೋಃ ಶಾಸ್ತ್ರಾನಾರಂಭಾರಂಭೌ ಫಲೇ ಇತಿ ಶಂಕಾಮುಖೇನ ದರ್ಶಯತಿ – ನನ್ವಿತ್ಯಾದಿನಾ ॥

ಶಾಸ್ತ್ರಧರ್ಮಿಕವಾದ ಸಂಶಯವು ಜಿಜ್ಞಾಸೆಯು ಕರ್ತವ್ಯವಾಗಿದೆ ಎಂಬರ್ಥವುಳ್ಳ ಸೂತ್ರಕ್ಕೆ ಅನುರೂಪವಾಗಿರುವುದಿಲ್ಲ. ಈ ಭ್ರಮೆಯನ್ನು ನಿರಾಕರಣೆ ಮಾಡಲು ಸೂತ್ರದಲ್ಲಿರುವ

ಜಿಜ್ಞಾಸೆಯ ಕರ್ತವ್ಯತ್ವ ಹಾಗೂ ಅಕರ್ತವ್ಯತ್ವಗಳಿಗೆ ಕ್ರಮವಾಗಿ ಶಾಸ್ತ್ರಾನಾರಂಭಣೀಯತ್ವ ಆರಂಭಣೀಯತ್ವಗಳು ಫಲವಾಗಿವೆಯೆಂದು ತಿಳಿಸಬೇಕಾಗಿದೆ. ಇದನ್ನು ಆಕ್ಷೇಪದ ಮೂಲಕ ''ನನು'' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ವಿವರಣೆ – ನೀವು ಶಾಸ್ತ್ರಧರ್ಮಿಕವಾದ ಸಂಶಯವನ್ನು ತೋರಿಸುತ್ತಿದ್ದೀರಿ. ಆದರೆ ಸೂತ್ರವು ಜಿಜ್ಞಾಸಾಕರ್ತವ್ಯತ್ವವನ್ನು ಹೇಳುತ್ತಿದೆ. ಆದ್ದರಿಂದ ಸೂತ್ರಾರ್ಥವು ನೀವು ತೋರಿಸಿದ ಸಂಶಯಕ್ಕೆ ಅನು-ಗುಣವಾಗಿರುವುದಿಲ್ಲ. 'ಅಥಾತಃ ಶಾಸ್ತ್ರಮಾರಂಭಣೀಯಮ್' ಎಂಬುದಾಗಿ ಸೂತ್ರವು ಇರುವುದಿಲ್ಲ. ಜಿಜ್ಞಾಸಾ ಕರ್ತವ್ಯಾ ಎಂದು ಹೇಳಲಾಗಿದೆ. ಆದರೆ ನೀವು ಶಾಸ್ತ್ರಮ್ ಆರಂಭಣೀಯಂ ವಾ ನ ವಾ? ಎಂಬ ಸಂಶಯವನ್ನು ತೋರಿಸುತ್ತಿದ್ದೀರಿ. ಇದರಿಂದ ಸಂಶಯಕ್ಕೆ ಸೂತ್ರದ ಆನುಗುಣ್ಯವು ಇರುವುದಿಲ್ಲ ಎಂಬ ಭ್ರಮೆ ಬರುತ್ತದೆ.

ಈ ಭ್ರಮೆಯ ಪರಿಹಾರವನ್ನು ಹೀಗೆ ತಿಳಿಯಬೇಕು – ಸೂತ್ರದಲ್ಲಿ ಜಿಜ್ಞಾಸೆಯ ಕರ್ತವ್ಯತ್ವವನ್ನೇ ಹೇಳಿರುವುದು ಸತ್ಯ. ಆದರೆ ಈ ಕರ್ತವ್ಯತ್ವ ಹಾಗೂ ಅಕರ್ತವ್ಯತ್ವಗಳ ಫಲ ಏನು? ಎಂಬ ಪ್ರಶ್ನೆಗೆ ಜಿಜ್ಞಾಸೆಯ ಕರ್ತವ್ಯತ್ವಕ್ಕೆ ಶಾಸ್ತ್ರದ ಆರಂಭಣೀಯತ್ವವು ಫಲವಾಗಿದೆ. ಜಿಜ್ಞಾಸೆಯ ಅಕರ್ತವ್ಯತ್ವಕ್ಕೆ ಶಾಸ್ತ್ರದ ಅನಾರಂಭಣೀಯತ್ವವು ಫಲವಾಗಿದೆ. ಆದ್ದರಿಂದ ನಾವು ತೋರಿಸುವ ಸಂಶಯವು ಫಲಮುಖ-ವಾಗಿದೆ. ಸೂತ್ರಕಾರರು ಯಾವ ಪ್ರತಿಜ್ಞೆಯನ್ನು ಮಾಡಿದ್ದಾರೋ ಆ ಪ್ರತಿಜ್ಞೆಗೆ ಫಲೀಭೂತವಾದ ಯಾವ ಪ್ರಮೇಯವಿದೆಯೋ ತತ್ಕೋಟಿಕವಾದ ಸಂಶಯವನ್ನು ತೋರಿಸಿದ್ದೇವೆ. ಆದ್ದರಿಂದ ಸೂತ್ರದಿಂದ ಅನಾನುಗುಣ್ಯದೋಷವು ಬರುವುದಿಲ್ಲ.

## ಜಿಜ್ಞಾಸೆ ಎಂದರೆ ಮನನ

ಪರಿಮಳ– ಶಾಸ್ತ್ರಮಿದಂಶಬ್ದಾರ್ಥಃ। ಶಬ್ದಾನಾಂ ಭಿನ್ನಾರ್ಥತ್ವಭ್ರಮನಿರಾಸಾಯೋಕ್ತಂ ಯುಕ್ತ್ಯನುಸಂಧಾನಾತ್ಮಕೇತ್ಯಾದಿ । ಶ್ರವಣಾದ್ಯಾತ್ಮಕತ್ವೇ ಶಾಸ್ತ್ರಾರಂಭೇಣ ಹೇತುಹೇತು-ಮದ್ಭಾವಾಯೋಗಾದುಕ್ತಂ – ಯುಕ್ತ್ಯನುಸಂಧಾನೇತಿ ॥ ಭಾಷ್ಯಟೀಕಾಯಾಂ ಶ್ರವಣಾದಿ-ರೂಪತ್ವೋಕ್ತೇರ್ಭಾವಃ ಚಂದ್ರಿಕಾಯಾಂ ತು ವ್ಯಕ್ತಃ । ಇಚ್ಛಾಯಾಂ ಸನ್ನಿಧಾನಾತ್ ಕಥಮೇತತ್? ಇತ್ಯತೋ 'ರೂಢೋಽಯಂ ಜಿಜ್ಞಾಸಾಶಬ್ದಃ' ಇತಿ ಭಾವೇನೋಕ್ತಂ –

ಮೀಮಾಂಸೇತ್ಯಾದಿ ॥ ಜಿಜ್ಞಾಸಾಯಾಃ ಕರ್ತವ್ಯತಾಯಾಮಾರಂಭಣೀಯಂ ಭವಿಷ್ಯತಿ ಇತ್ಯಸ್ಯ ಅನ್ಯಥಾ ತು ನೇತಿ ಇತ್ಯನೇನಾನ್ವಯಃ । ಮಧ್ಯೇ ಹೇತುಹೇತುಮದ್ಭಾವಂ ವ್ಯನಕ್ತಿ – ನ ಹೀತಿ ॥

''ಇದಂ'' – ಈ ಶಾಸ್ತ್ರವು. ಜಿಜ್ಞಾಸಾ, ಮೀಮಾಂಸಾ, ಮನನ, ವಿಚಾರ ಈ ಶಬ್ದಗಳಿಗೆ ಬೇರೆ ಬೇರೆ ಅರ್ಥವಿಲ್ಲ. ಎಲ್ಲವೂ ಒಂದೇ ಅರ್ಥವುಳ್ಳವುಗಳು ಎಂಬುದನ್ನು ತಿಳಿಸುವುದಕ್ಕಾಗಿ ''ಯುಕ್ತ್ಯನುಸಂಧಾನಾತ್ಮಕ'' ಇತ್ಯಾದಿಯಾಗಿ ಹೇಳಿದ್ದಾರೆ.

ಜಿಜ್ಞಾಸೆಯು ಶ್ರವಣಾದ್ಯಾತ್ಮಕವೆಂದು ಹೇಳಿದರೆ ಶಾಸ್ತ್ರದ ಜೊತೆಗೆ ಹೇತುಹೇತು-ಮದ್ಭಾವವನ್ನು ಹೊಂದುವುದಿಲ್ಲ. ಆದ್ದರಿಂದ ''ಯುಕ್ತ್ಯನುಸಂಧಾನಾತ್ಮಕ'' ಎಂದು ಹೇಳಿದ್ದಾರೆ. ಭಾಷ್ಯ ಹಾಗೂ ಟೀಕೆಗಳಲ್ಲಿ ಶ್ರವಣಾದಿರೂಪಜಿಜ್ಞಾಸಾ ಎಂಬುದಾಗಿ ಜಿಜ್ಞಾಸೆಯು ಶ್ರವಣಾದಿ ರೂಪವೆಂದು ಹೇಳಿದ್ದಾರೆ. ಇದರ ಅಭಿಪ್ರಾಯವು ತಾತ್ಪರ್ಯಚಂದ್ರಿಕಾದಲ್ಲಿ ಸ್ಪಷ್ಟವಾಗಿರುತ್ತದೆ.

ಸನ್ ಪ್ರತ್ಯಯವು ಇಚ್ಛಾರ್ಥದಲ್ಲಿ ವಿಹಿತವಾಗಿದೆ. ಆದ್ದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರ ಎಂಬರ್ಥವು ಹೇಗೆ ದೊರೆಯುತ್ತದೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಜಿಜ್ಞಾಸಾ ಎಂಬ ಶಬ್ದವು ರೂಢವೇ ಆಗಿದೆ ಹೊರತು ಯೌಗಿಕವಲ್ಲ ಎಂದು ತಿಳಿಸಲು ''ಮೀಮಾಂಸಾ'' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಜಿಜ್ಞಾಸಾಯಾಃ ಕರ್ತವ್ಯತಾಯಾಂ ಆರಂಭಣೀಯಂ ಭವಿಷ್ಯತಿ' ಎಂಬ ವಾಕ್ಯಕ್ಕೆ 'ಅನ್ಯಥಾ ತು ನ' ಎಂಬ ಮುಂದಿನವಾಕ್ಯದ ಜೊತೆಗೆ ಅನ್ವಯವನ್ನು ತಿಳಿಯಬೇಕು. ಮಧ್ಯದ ವಾಕ್ಯಗಳು ಹೇತುಹೇತುಮದ್ಭಾವವನ್ನು ತಿಳಿಸುತ್ತವೆಂಬುದನ್ನು ''ನಹಿ ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ.

ವಿವರಣೆ – ಶಾಸ್ತ್ರವು ಯುಕ್ತಿಗ್ರಥನಾತ್ಮಕವಾಗಿದೆ. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವಾಗಿರುವುದ-ರಿಂದ ಶಾಸ್ತ್ರವು ಆರಂಭಣೀಯವಾಗಿದೆಯೆಂದು ಇಲ್ಲಿ ಹೇಳಲಾಗುತ್ತಿದೆ. ಇಲ್ಲಿರುವ ಜಿಜ್ಞಾಸಾ ಎಂಬ ಪದಕ್ಕೆ ಶ್ರವಣ, ನಿದಿಧ್ಯಾಸನ ಮೊದಲಾದ ಅರ್ಥಗಳನ್ನು ತಿಳಿಯಬಾರದು. ನ್ಯಾಯಗ್ರಥನಾತ್ಮಕವಾದ ಶಾಸ್ತ್ರದ ಆರಂಭಣೀಯತ್ವಕ್ಕೂ ನಿದಿಧ್ಯಾಸನದ ಕರ್ತವ್ಯತ್ವಕ್ಕೂ ನೇರವಾಗಿ ಸಂಬಂಧವು ಇರುವುದಿಲ್ಲ. ಏಕೆಂದರೆ ನ್ಯಾಯಗ್ರಥನಾತ್ಮಕವಾದ ಶಾಸ್ತ್ರದ ಆರಂಭಣೀಯತ್ವವು ನ್ಯಾಯಾನುಸಂಧಾನಾತ್ಮಕವಾದ

ವಿಚಾರದ ಕರ್ತವ್ಯತ್ವದ ಜೊತೆ ಮಾತ್ರ ಹೇತುಹೇತುಮದ್ಭಾವವನ್ನು ಹೊಂದಿದೆ ಹೊರತು ಶ್ರವಣ-ಮನನಾದಿಕರ್ತವ್ಯತಾಗಳ ಜೊತೆ ಹೇತುಹೇತುಮದ್ಭಾವವು ಇರುವುದಿಲ್ಲ. ಆದ್ದರಿಂದ 'ಮನನಾಪರನಾಮಕಜಿಜ್ಞಾಸಾ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಶ್ರವಣಂ ಕರ್ತವ್ಯಂ' 'ನಿದಿಧ್ಯಾಸನಂ ಕರ್ತವ್ಯಂ' ಎಂದು ಹೇಳಿದರೆ ಶಾಸ್ತ್ರಾರಂಭಣೀಯತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಸೂತ್ರದಲ್ಲಿರುವ ಜಿಜ್ಞಾಸಾ ಪದಕ್ಕೆ ಮನನ ಎಂಬರ್ಥವನ್ನೇ ವಿವಕ್ಷಿಸಬೇಕು. ಆದ್ದರಿಂದ ಭಾಷ್ಯ ಹಾಗೂ ಟೀಕೆಗಳಲ್ಲಿ ಶ್ರವಣ ಹಾಗೂ ನಿದಿಧ್ಯಾಸನಗಳನ್ನೂ ಕೂಡ ಸೇರಿಸಿದ್ದಾರಲ್ಲವೇ? ಎಂದರೆ ಈ ವಿರೋಧವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಪರಿಹರಿಸಿದ್ದಾರೆ. ಶ್ರವಣ ಹಾಗೂ ನಿದಿಧ್ಯಾಸನಶಬ್ದಗಳನ್ನು ಪ್ರಯೋಗಿಸಲು ಕಾರಣವೇನೆಂಬುದನ್ನೂ ಕೂಡ ಚಂದ್ರಿಕೆಯಲ್ಲಿಯೇ ಉಪಪಾದನೆ ಮಾಡಿದ್ದಾರೆ.

## ಅನುಬಂಧ ಎಂದರೇನು?

ಪರಿಮಳ– ನ್ಯಾಯೇತಿ ॥ ನ್ಯಾಯಾಃ ಕರಣಾನಿ ಯಸ್ಯಾಃ ಸಾ ನ್ಯಾಯಕರಣಿಕಾ ತಸ್ಯಾಮಿತ್ಯರ್ಥಃ । ವಿನಾ ವಿಚಾರೇಣೇತಿ ॥ 'ವಿಷಯಪ್ರಯೋಜನಾದಿಮತ್ತ್ವರೂಪನ್ಯಾಯಾನುಸಂಧಾನೇನ ವಿನಾ ಜಿಜ್ಞಾಸಾಕರ್ತವ್ಯತ್ವರೂಪಶ್ರುತ್ಯರ್ಥಸ್ಯ' ಇತ್ಯರ್ಥಃ । ಅನುಬಂಧೇತಿ ॥ ಅನುಬಧ್ಯತೇ ಪ್ರವರ್ತ್ಯತೇಽನೇನ ಪ್ರಣೇತಾ ಶ್ರೋತಾ ಚೇತ್ಯನುಬಂಧಃ ಪ್ರವರ್ತಕಃ, ತದ್ವಿಧುರಾದಿತ್ಯರ್ಥಃ । ವ್ಯತಿರೇಕಮುಖೇನ ವ್ಯಾಪ್ತಿಮಾಹ – ಕರ್ತವ್ಯತೇತಿ ॥ ಪ್ರತಿಬಂಧೇತಿ ॥ ವ್ಯಾಪ್ತಿಸಿದ್ಧಿಃ ಇತ್ಯರ್ಥಃ ।

"ನ್ಯಾಯಕರಣಿಕಾ" – ನ್ಯಾಯಗಳು ಕರಣವಾಗಿ ಉಳ್ಳ ಜಿಜ್ಞಾಸೆ ಎಂದರ್ಥ. "ವಿನಾ ವಿಚಾರೇಣ" - ವಿಷಯಪ್ರಯೋಜನಾದಿಮತ್ತ್ವವೆಂಬ ನ್ಯಾಯಾನುಸಂಧಾನವಿಲ್ಲದೇ ಜಿಜ್ಞಾಸಾಕರ್ತವ್ಯತ್ವರೂಪವಾದ ಶ್ರುತ್ಯರ್ಥಕ್ಕೆ ಎಂದರ್ಥ. "ಅನುಬಂಧಃ" – ಅನುಬಧ್ಯತೇ ಅನೇನ ಇತಿ ಎಂಬ ವ್ಯುತ್ಪತ್ತಿಯಿಂದ ಈ ಶಾಸ್ತ್ರದಲ್ಲಿ ಪ್ರಕೃತರಾದ ವಕ್ತೃ ಶ್ರೋತೃಗಳಿಬ್ಬರನ್ನೂ ಪ್ರವರ್ತಿಸುವವುಗಳು ಎಂದರ್ಥ. ಇದರಂತೆ ಪ್ರಯೋಜನ, ವಿಷಯ, ಸಂಬಂಧಗಳೂ ಕೂಡ ಶಾಸ್ತ್ರಕ್ಕೆ ಪ್ರವರ್ತಕಗಳಾಗಿವೆ. ವ್ಯತಿರೇಕವ್ಯಾಪ್ತಿಯ ಮೂಲಕ ಇದುವರೆಗೂ ಹೇಳಿದ್ದನ್ನು "ಕರ್ತವ್ಯತಾಕ" ಎಂಬ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. "ಪ್ರತಿಬಂಧಸಿದ್ಧಿಃ" ವ್ಯಾಪ್ತಿಸಿದ್ಧಿಯು ಎಂದರ್ಥ.

ವಿವರಣೆ – ನ್ಯಾಯಕರಣಿಕಾ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ನ್ಯಾಯಾಃ ಕರಣಾನಿ ಯಸ್ಯಾಃ ಸಾ ನ್ಯಾಯಕರಣಿಕಾ ತಸ್ಯಾಂ ನ್ಯಾಯಕರಣಿಕಾಯಾಂ' ಎಂಬ ವ್ಯುತ್ಪತ್ತಿಯನ್ನು ಇದಕ್ಕೆ ತಿಳಿಯಬೇಕು. ನ್ಯಾಯವೇ ಕರಣವಾಗಿ ಉಳ್ಳ ಜಿಜ್ಞಾಸೆಯಲ್ಲಿ ಎಂದರ್ಥ. ಜಿಜ್ಞಾಸೆಯನ್ನು ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಆದರೆ ಶ್ರುತ್ಯರ್ಥವನ್ನು ನಿರ್ಣಯ ಮಾಡಲು ಸಾಧ್ಯವಿಲ್ಲ. ಏಕೆಂದರೆ ವಿಷಯಾದಿಗಳಿದ್ದರೆ ಜಿಜ್ಞಾಸೆಯು ಕರ್ತವ್ಯವಾಗುತ್ತದೆ. ವಿಷಯಾದಿಗಳಿಲ್ಲದ ಪಕ್ಷದಲ್ಲಿ ಜಿಜ್ಞಾಸೆಯು ಕರ್ತವ್ಯವಾಗುವುದಿಲ್ಲ. ಹಾಗಾದರೆ ಶ್ರುತಿಗೆ ಏನು ಗತಿ? ಎಂಬ ಪ್ರಶ್ನೆಗೆ ಆ ಶ್ರುತಿಯು ಅಪ್ರಮಾಣವೆಂದೇ ಹೇಳಬೇಕು ಅಥವಾ ವಿಧಿಪ್ರತ್ಯಯಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ಆದ್ದರಿಂದ ವಿಷಯಾದಿಗಳಿರುವಿಕೆ ಎಂಬ ನ್ಯಾಯವನ್ನು ಅನುಸಂಧಾನ ಮಾಡಿದರೆ ಮಾತ್ರ ಜಿಜ್ಞಾಸೆಗೆ ಕರ್ತವ್ಯತ್ವವು ಸಿದ್ಧವಾಗುತ್ತದೆ.

ಅನುಬಂಧಶಬ್ದಕ್ಕೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಎಂದರ್ಥ. ಈ ನಾಕನ್ನು ಏಕೆ ಅನುಬಂಧ ಎಂದು ಕರೆಯುತ್ತಾರೆಂದರೆ ಶ್ರೋತೃ ಅಥವಾ ಪ್ರಣೇತೃವು ಯಾವುದರಿಂದ ಪ್ರವೃತ್ತಿಯನ್ನು ಮಾಡುತ್ತಾನೋ ಅದು ಅನುಬಂಧ ಎಂದು ಕರಸಿಕೊಳ್ಳುತ್ತದೆ. ಪ್ರಣೇತೃವು ಗ್ರಂಥದ ಪ್ರಣಯನದಲ್ಲಿ ಪ್ರವೃತ್ತಿ ಮಾಡುತ್ತಾನೆ. ಶ್ರೋತೃವು ಆ ಗ್ರಂಥದ ಶ್ರವಣದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಇವರಿಬ್ಬರ ಪ್ರವೃತ್ತಿಗೆ ವಿಷಯಪ್ರಯೋಜನಾದಿಗಳ ಇರುವಿಕೆಯೇ ಕಾರಣವಾಗಿದೆ. ಆದ್ದರಿಂದ 'ಅನುಬಧ್ಯತೇ ಪ್ರವರ್ತತೇ ಅನೇನ ಪ್ರಣೇತಾ ಶ್ರೋತಾ ಇತಿ ಅನುಬಂಧಃ' ಎಂಬ ವ್ಯುತ್ಪತ್ತಿಯಿಂದ ಅನುಬಂಧಶಬ್ದಕ್ಕೆ ವಿಷಯಪ್ರಯೋಜನಾದಿಗಳು ಎಂಬರ್ಥವು ದೊರೆಯುತ್ತದೆ.

'ಜಿಜ್ಞಾಸಾ ನ ಕರ್ತವ್ಯಾ ವಿಷಯಾದಿವೈಧುರ್ಯಾತ್' ಎಂಬ ಅನುಮಾನದಲ್ಲಿ ವ್ಯತಿರೇಕವ್ಯಾಪ್ತಿಯನ್ನು ಹೀಗೆ ತಿಳಿಯಬೇಕು. 'ಯತ್ರ ಕರ್ತವ್ಯತ್ವಂ ತತ್ರ ವಿಷಯಾದಿಮತ್ತ್ವಮ್' ಎಂದು. ಕರ್ತವ್ಯತ್ವಕ್ಕೆ ವಿಷಯಾದಿಮತ್ತ್ವವು ವ್ಯಾಪಕವಾಗಿದೆ. ಕರ್ತವ್ಯತ್ವಕ್ಕೂ ವಿಷಯಾದಿಮತ್ತ್ವಕ್ಕೂ ವ್ಯಾಪ್ತಿಯು ಇರುವುದರಿಂದ ವಿಷಯಾದಿವೈಧುರ್ಯಕ್ಕೂ ಅಕರ್ತವ್ಯತ್ವಕ್ಕೂ ವ್ಯಾಪ್ತಿಯು ಸಿದ್ಧವಾಗುತ್ತದೆ.

## ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧ್ಯಭಾವಾತ್ ಎಂಬಲ್ಲಿ ನಾಕು ಹೇತುಗಳಿವೆ

ಪರಿಮಳ– ಹೇತೋರಪ್ರಯೋಜಕತ್ವಂ ನಿರಾಹ – ವಿಷಯಾದೀತಿ ॥ ವಿಷಯಾದಿವೈಧುರ್ಯಂ ಪ್ರತ್ಯೇಕಂ ಹೇತುರಿತಿ ಭಾವೇನ ಹೇತುಚತುಷ್ಟಯೇ ಅನ್ವಯವ್ಯಾಪ್ತಿಂ

ದೃಷ್ಟಾಂತೋಕ್ತ್ಯಾ ವ್ಯನಕ್ತಿ – ವಿಷಯಶೂನ್ಯತ್ವಾದ್ದಿತಿ ॥ ಸಂದಿಗ್ಧಸ್ಯೈವ ವಿಷಯತ್ವೇನ ನಿಶ್ಚಿತಸ್ಯ ಅವಿಷಯತ್ವಾದಿತಿ ಭಾವಃ । ವಿಷಯಾಭಾವನಿಮಿತ್ತಮಜಿಜ್ಞಾಸ್ಯತ್ವಮತ್ರೇತಿ ಶಂಕಾವ್ಯ-ದಾಸಾಯೋಕ್ತಂ – ಸಂದಿಗ್ಧಮಪೀತಿ ॥ ಶಬ್ದಜ್ಞಾನಮ್ ॥ ಸುಶಬ್ದಾಪಶಬ್ದವಿವೇಕೇನ ಸಾಧುಶಬ್ದಜ್ಞಾನಮ್ ॥ ವಾತ್ಸ್ಯಾಯನೇ = ಕಾಮತಂತ್ರೇ ।

ಹೇತುವಿಗೆ ಅಪ್ರಯೋಜಕತ್ವವನ್ನು ವಿಷಯಾದಿ ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ವಿಷಯಾದಿವೈಧುರ್ಯವು ಪ್ರತ್ಯೇಕ ಹೇತುವಾಗಿದೆ. ಆದ್ದರಿಂದ ನಾಕು ಹೇತು-ಗಳಲ್ಲಿ ಅನ್ವಯವ್ಯಾಪ್ತಿಯನ್ನು ದೃಷ್ಟಾಂತಪುರಸ್ಸರವಾಗಿ 'ವಿಷಯಶೂನ್ಯತ್ವಾದ್ದಿ' ಇತ್ಯಾದಿ ಗ್ರಂಥ-ದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಸಂದಿಗ್ಧವಾದದ್ದಷ್ಟೇ ವಿಷಯವಾಗುತ್ತದೆ. ನಿಶ್ಚಿತವಾದದ್ದು ವಿಷಯ-ವಾಗುವುದಿಲ್ಲ ಎಂದಭಿಪ್ರಾಯ. ವಿಷಯಾಭಾವನಿಮಿತ್ತವಾದ ಅಜಿಜ್ಞಾಸ್ಯತ್ವವನ್ನು ಅರ್ಥಾತ್ ಕಾಕದಂತಾಜಿಜ್ಞಾಸೆಯು ಕರ್ತವ್ಯವಾಗದಿರುವುದರಲ್ಲಿ ವಿಷಯವಿಲ್ಲದಿರುವುದು ಕಾರಣವಾಗಿದೆ ಎಂಬ ಆಶಂಕೆಯನ್ನು ಪರಿಹರಿಸಲು 'ಸಂದಿಗ್ಧಮಪಿ' ಇತ್ಯಾದಿ ವಾಕ್ಯವು ಹೊರಟಿದೆ.

''ಶಬ್ದಜ್ಞಾನಮ್'' – ಸುಶಬ್ದ ಹಾಗೂ ಅಪಶಬ್ದಗಳ ವಿವೇಕದಿಂದ ಸಾಧುವಾದ ಶಬ್ದದ ಜ್ಞಾನವನ್ನು ಎಂದರ್ಥ. ''ವಾತ್ಸ್ಯಾಯನೇ'' – ಕಾಮಶಾಸ್ತ್ರದಲ್ಲಿ ಎಂದರ್ಥ.

ವಿವರಣೆ – ವಿಷಯಾದಿ ವೈಧುರ್ಯವಿದ್ದರೂ ಕೂಡ ಜಿಜ್ಞಾಸೆಗೆ ಕರ್ತವ್ಯತ್ವವೇ ಸಿದ್ಧವಾಗಲಿ ಎಂಬುದಾಗಿ ಅಪ್ರಯೋಜಕಾಶಂಕೆಯನ್ನು ಮಾಡಿದರೆ ''ವಿಷಯಾದಿ'' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ವಿಷಯಾದಿಮತ್ವವು ಜಿಜ್ಞಾಸೆಗೆ ಕಾರಣವಾಗಿದೆ. ಕಾರಣವಿಲ್ಲದೇ ಕಾರ್ಯವು ಹೇಗೆ ಉಂಟಾಗಲು ಸಾಧ್ಯ ? ಹಾಗಾದರೆ ಅಕಾರಣಕಾರ್ಯೋತ್ಪತ್ತಿಪ್ರಸಂಗವು ಬರುತ್ತದೆ. ಹೀಗೆ ವಿಪಕ್ಷೇ ಬಾಧಕತರ್ಕವಿರುವುದರಿಂದ ಅಪ್ರಯೋಜಕಾಶಂಕೆಯನ್ನು ಮಾಡಬಾರದು.

'ಜಿಜ್ಞಾಸಾ ನ ಕರ್ತವ್ಯಾ ವಿಷಯಾದ್ಯಭಾವಾತ್' ಎಂಬ ಅನುಮಾನದಲ್ಲಿ ವಿಷಯಪ್ರಯೋಜನಅಧಿ ಕಾರಿಸಂಬಂಧ್ಯಭಾವಾತ್ ಎಂಬುದನ್ನು ಒಂದೇ ಹೇತುವನ್ನಾಗಿ ತಿಳಿಯಬಾರದು. ವಿಷಯಾಭಾವಾತ್, ಪ್ರಯೋಜನಾಭಾವಾತ್, ಅಧಿಕಾರ್ಯಭಾವಾತ್, ಸಂಬಂಧ್ಯಭಾವಾತ್ ಎಂಬುದಾಗಿ ನಾಕು ಹೇತು-ಗಳಿಂದ ಜಿಜ್ಞಾಸೆಯ ಅಕರ್ತವ್ಯತ್ವವನ್ನು ಸಾಧಿಸಬೇಕು. ಸ್ಥಿತಾಲೋಕಮಧ್ಯವರ್ತಿಯಾದ ಸಮನಸ್ಕ-ಇಂದ್ರಿಯದಿಂದ ಸನ್ನಿಕೃಷ್ಟವಾದ ಘಟದ ಜಿಜ್ಞಾಸೆಯಲ್ಲಿ ವಿಷಯವೈಧುರ್ಯವಿದೆ. ಅಕರ್ತವ್ಯತ್ವವೂ

ಕೂಡ ಇದೆ. ಆದ್ದರಿಂದ ಮೊದಲನೆಯ ಹೇತುವಿಗೆ ಅನ್ವಯವ್ಯಾಪ್ತಿಯು ಸಿದ್ಧವಾಗುತ್ತದೆ. ವಾಯಸ-ದಶನಜಿಜ್ಞಾಸೆಯಲ್ಲಿ ಪ್ರಯೋಜನವೈಧುರ್ಯವಿದೆ ಮತ್ತು ಅಕರ್ತವ್ಯತ್ವವಿದೆ. ಆದ್ದರಿಂದ ಪ್ರಯೋ-ಜನಾದ್ಯಭಾವವೆಂಬ ಎರಡನೆಯ ಹೇತುವಿಗೆ ಅನ್ವಯವ್ಯಾಪ್ತಿಯು ಇದೆ. ವಾಯಸದಶನಜಿಜ್ಞಾಸೆಯಲ್ಲಿ ವಿಷಯವೈಧುರ್ಯವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ವಾಯಸದಶನಜಿಜ್ಞಾಸೆಗೆ ವಿಷಯವು ಇದ್ದೇ ಇದೆ. ವಿಷಯಾಭಾವದಿಂದ ಅಜಿಜ್ಞಾಸ್ಯತ್ವವು ಅಲ್ಲಿರುವುದಿಲ್ಲ. ಆದ್ದರಿಂದ ಪ್ರಯೋಜನಾಭಾವದಿಂದಲೇ ಅಜಿಜ್ಞಾಸ್ಯತ್ವವನ್ನು ಹೇಳಬೇಕು.

## ಜಿಜ್ಞಾಸೆಯು ಕರ್ತವ್ಯವಾದರೆ ಶಾಸ್ತ್ರವೇಕೆ ಆರಂಭಣೀಯವಾಗಬೇಕು

ವಾಕ್ಯಾರ್ಥಚಂದ್ರಿಕಾ— ಏವಂ ಸವಿಷಯಚಿಂತಾಮುಪಪಾದ್ಯ ಸೂತ್ರೋಕ್ತಕರ್ತವ್ಯತ್ವ-ಕೋಟಿಕಾಂ ಸವಿಷಯಾಂ ತದರ್ಥಚಿಂತಾಮುಪಪಾದಯಿತುಂ ತಸ್ಯಾಸ್ತಾದರ್ಥ್ಯಂ ಶಂಕಾಮುಖೇ-ನೋಪಪಾದಯತಿ – ನನ್ವಿತಿ ॥ ಯದ್ವಾ ಶಾಸ್ತ್ರಾರಂಭಣೀಯತ್ವಾನಾರಂಭಣೀಯತ್ವಯೋ-ರ್ಜಿಜ್ಞಾಸಾಕರ್ತವ್ಯತ್ವಾಕರ್ತವ್ಯತ್ವೇ ವಿಹಾಯ ಹೇತ್ವಂತರೇಣ ಪ್ರಾಪ್ತ್ಯಭಾವಾತ್ ತತ್ಕರ್ತವ್ಯತ್ವಾದೌ ಚ ಸ್ವತ ಏವ ತತ್ಸಿದ್ಧೇಃ ಸೂತ್ರಕಾರೇಣ ಯುಕ್ತಿಭಿರ್ಜಿಜ್ಞಾಸಾಕರ್ತವ್ಯತಾಯಾ ಏವ ಪ್ರತಿಪಾದನೀಯ-ತಯಾ ಜಿಜ್ಞಾಸಾಯಾ ಏವ ವಿಚಾರವಿಷಯತ್ವಾತ್ ತದ್ಧರ್ಮಿಕ ಏವ ಸಂಶಯೋ ವಕ್ತವ್ಯೋ ಶಾಸ್ತ್ರ-ಧರ್ಮಿಕತತ್ಕಥನಮಯುಕ್ತಮಿತ್ಯಾಶಂಕತೇ – ನನ್ವಿತಿ ॥

ವಿಷಯಸಹಿತವಾದ ಸಂಶಯವನ್ನು ಇಲ್ಲಿಯ ತನಕ ಉಪಪಾದನೆ ಮಾಡಿದ್ದಾಯಿತು. ಈಗ ಸೂತ್ರದಲ್ಲಿ ಹೇಳಿದ ಜಿಜ್ಞಾಸೆಯ ಕರ್ತವ್ಯತ್ವಕೋಟಿಕವಾದ ವಿಷಯಸಹಿತವಾದ ತದರ್ಥಚಿಂತೆಯನ್ನು ಉಪಪಾದನೆ ಮಾಡುವುದಕ್ಕಾಗಿ ತಾದರ್ಥ್ಯವನ್ನು ಶಂಕೆಯ ಮೂಲಕ "ನನು" ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ಅಥವಾ ಶಾಸ್ತ್ರಾರಂಭಣೀಯತ್ವ ಹಾಗೂ ಅನಾರಂಭಣೀಯತ್ವಗಳಲ್ಲಿ ಜಿಜ್ಞಾಸಾ ಕರ್ತವ್ಯತ್ವವನ್ನು ಹಾಗೂ ಅಕರ್ತವ್ಯತ್ವವನ್ನು ಬಿಟ್ಟು ಮತ್ತೊಂದು ಹೇತುವಿನಿಂದ ಉಪಪಾದನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಜಿಜ್ಞಾಸಾ ಕರ್ತವ್ಯತ್ವಾದಿಗಳು ಸಿದ್ಧವಾದರೆ ಸಹಜವಾಗಿಯೇ ಶಾಸ್ತ್ರಾರಂಭಣೀಯತ್ವವು ಸಿದ್ಧವಾಗುತ್ತದೆ. ಆದ್ದರಿಂದ ಸೂತ್ರಕಾರರು ಯುಕ್ತಿಗಳ ಮೂಲಕ ಜಿಜ್ಞಾಸೆಯ ಕರ್ತವ್ಯತ್ವವನ್ನೇ ಪ್ರತಿಪಾದನೆ ಮಾಡಿರುತ್ತಾರೆ. ಆದ್ದರಿಂದ ವಿಚಾರಕ್ಕೆ ಜಿಜ್ಞಾಸೆಯೇ ವಿಷಯವಾಗಿದೆ. ತದ್ಧರ್ಮಿಕವಾದ ಸಂಶಯವನ್ನೇ ತೋರಿಸಬೇಕು. ಆದರೆ ಶಾಸ್ತ್ರಧರ್ಮಿಕವಾದ ಸಂಶಯವನ್ನು ಈ ಹಿಂದೆ ತೋರಿಸಿದ್ದೀರಿ.

ಇದು ಅಯುಕ್ತವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ''ನನು'' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ವಿವರಣೆ – 'ಶಾಸ್ತ್ರಂ ಆರಂಭಣೀಯಂ ವಾ ನ ವಾ; ತದರ್ಥಂ ಜಿಜ್ಞಾಸಾ ಕರ್ತವ್ಯಾ ನ ವಾ?' ಎಂಬುದಾಗಿ ತದರ್ಥಚಿಂತೆಯನ್ನು ತೋರಿಸಬೇಕೆಂದರೆ ಜಿಜ್ಞಾಸಾಕರ್ತವ್ಯತ್ವ-ಅಕರ್ತವ್ಯತ್ವಗಳಿಗೂ ಶಾಸ್ತ್ರದ ಆರಂಭಣೀಯತ್ವ, ಅನಾರಂಭಣೀಯತ್ವಗಳಿಗೂ ಸಂಬಂಧವೇ ಇರುವುದಿಲ್ಲ. ಆದ್ದರಿಂದ ತದರ್ಥಚಿಂತೆಯನ್ನು ಹೇಗೆ ಉಪಪಾದನೆ ಮಾಡುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸಲು ''ನನು'' ಇತ್ಯಾದಿಯಾಗಿ ಆಕ್ಷೇಪ ಮಾಡುತ್ತಿದ್ದಾರೆ.

ಅಥವಾ ''ನನು'' ಇತ್ಯಾದಿ ಗ್ರಂಥಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆಯನ್ನು ತಿಳಿಯಬಹುದು. ಶಾಸ್ತ್ರದ ಆರಂಭಣೀಯತ್ವಕ್ಕೆ ಜಿಜ್ಞಾಸಾಕರ್ತವ್ಯತ್ವವೇ ಹೇತುವಾಗಿದೆ. ಶಾಸ್ತ್ರದ ಅನಾರಂಭಣೀಯತ್ವಕ್ಕೆ ಜಿಜ್ಞಾಸೆಯ ಅಕರ್ತವ್ಯತ್ವವೇ ಹೇತುವಾಗಿದೆ. ಇದನ್ನು ಬಿಟ್ಟು ಬೇರೆ ಹೇತು ಸರ್ವಥಾ ಇರುವುದಿಲ್ಲ. ಜಿಜ್ಞಾಸೆಯು ಕರ್ತವ್ಯವೆಂದು ಸಿದ್ಧವಾದರೆ ಶಾಸ್ತ್ರವು ಆರಂಭಣೀಯವೆಂದು ಸಹಜವಾಗಿಯೇ ಸಿದ್ಧ-ವಾಗುತ್ತದೆ. ಜಿಜ್ಞಾಸೆಯು ಅಕರ್ತವ್ಯವೆಂದು ಸಿದ್ಧವಾದರೆ ಶಾಸ್ತ್ರವು ಅನಾರಂಭಣೀಯವೆಂದೂ ಕೂಡ ಸಹಜವಾಗಿಯೇ ಸಿದ್ಧವಾಗುತ್ತದೆ. ಇದನ್ನು ಬಿಟ್ಟು ಬೇರೆ ಹೇತುವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜಿಜ್ಞಾಸಾಧರ್ಮಿಕವಾದ ಸಂಶಯವನ್ನು ನೀವು ತೋರಿಸಬೇಕಿತ್ತು. ಶಾಸ್ತ್ರಧರ್ಮಿಕವಾದ ಸಂಶಯವನ್ನು ಏಕೆ ತೋರಿಸಿದಿರಿ? ಎಂಬ ಆಶಂಕೆಯನ್ನು ''ನನು'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

## ಯುಕ್ತ್ಯನುಸಂಧಾನಾತ್ಮಕ ಇತ್ಯಾದಿ ವಿಶೇಷಣಗಳಿಗೆ ಕೃತ್ಯಚಿಂತನೆ

ವಾಕ್ಯಾರ್ಥಚಂದ್ರಿಕಾ– ಅತ್ರ ಶಾಸ್ತ್ರಜಿಜ್ಞಾಸಯೋಃ ಸ್ವರೂಪಕಥನಂ ಜಿಜ್ಞಾಸಾ-ಕರ್ತವ್ಯತ್ವಾದೇರಾರಂಭಣೀಯತ್ವಾದಿಸಾಧಕತ್ವಮುಪಪಾದಯಿತುಮಿತಿ ದ್ರಷ್ಟವ್ಯಮ್ । ಅತ್ರ 'ಮನನಾಪರನಾಮಕಾ' ಇತ್ಯುಕ್ತ್ಯಾ ಜಿಜ್ಞಾಸಾಸೂತ್ರಸ್ಯ ಮನನವಿಧಿಮೂಲತ್ವಮೇವ ನ ತು ಶ್ರವಣ-ವಿಧಿಮೂಲತ್ವಮಿತ್ಯರ್ಥಮ್ । 'ಮೀಮಾಂಸಾಪರನಾಮಿಕಾ' ಇತ್ಯುಕ್ತ್ಯಾ ಚ ವಿಚಾರಾರ್ಥಕಮಾನ್ ಧಾತೋಃ 'ಮಾನ್ ಬಧ' ಇತಿ ಸ್ವಾರ್ಥಸನ್ನಂತಾನ್ನಿಷ್ಪನ್ನಸ್ಯ ಮೀಮಾಂಸಾಶಬ್ದಸ್ಯ ವಿಚಾರರೂಢೇಃ ಸರ್ವಸಿದ್ಧತ್ವಾತ್ ಜಿಜ್ಞಾಸಾಶಬ್ದಸ್ಯಾಪಿ ವಿಚಾರರೂಢಿಂ ಯುಕ್ತ್ಯನುಸಂಧಾನಾತ್ಮಕಾ ಇತಿ ವಿಚಾರ-ಶಬ್ದವ್ಯಾಖ್ಯಾನಪೂರ್ವಂ ವಿಚಾರಶಬ್ದಪರ್ಯಾಯತ್ವೋಕ್ತ್ಯಾ ಚ ತರ್ಹಿ ಮಾನ್‌ಧಾತೋ-

ರ್ವಿಚಾರಾರ್ಥತ್ವೇऽಪಿ ವಿಚಾರಸ್ಯ ಶ್ರವಣರೂಪತ್ವಾನ್ಮೀಮಾಂಸಾಪರನಾಮಕತ್ವಂ ಮನನಾಪರನಾಮಕತ್ವಂ ಚ ವಿರುದ್ಧಮಿತಿ ಶಂಕಾಪರಿಹಾರಂ ಚ ಸೂಚಯತಿ – ವಿಚಾರಣೀಯೇತಿ ॥

ಶಾಸ್ತ್ರ ಹಾಗೂ ಜಿಜ್ಞಾಸೆಗಳ ಸ್ವರೂಪವನ್ನು ಹೇಳಿರುವುದು ಜಿಜ್ಞಾಸಾಕರ್ತವ್ಯತ್ವಾದಿಗಳಿಗೆ ಆರಂಭಣೀಯತ್ವಾದಿಗಳು ಸಾಧಕಗಳಾಗಿವೆ ಎಂಬುದನ್ನು ಉಪಪಾದನೆ ಮಾಡುವುದಕ್ಕೋಸ್ಕರ ಎಂದು ತಿಳಿಯಬೇಕು.

ಮನನಾಪರನಾಮಕ ಎಂದು ಹೇಳಿದ್ದರಿಂದ ಜಿಜ್ಞಾಸಾಸೂತ್ರಕ್ಕೆ ಮನನವಿಧಿಮೂಲತ್ವವೇ ಇದೆ ಶ್ರವಣವಿಧಿಮೂಲತ್ವವು ಇರುವುದಿಲ್ಲ ಎಂದು ತಿಳಿಸಿದ್ದಾರೆ. ಮೀಮಾಂಸಾಪರನಾಮಿಕಾ ಎಂದು ಹೇಳಿದ್ದರಿಂದ ವಿಚಾರಾರ್ಥದಲ್ಲಿರುವ ಮಾನ್ ಧಾತುವಿಗೆ 'ಮಾನ್ ಬಧ' ಇತ್ಯಾದಿ ಸೂತ್ರದಿಂದ ಸ್ವಾರ್ಥದಲ್ಲಿ ಸನ್‌ಪ್ರತ್ಯಯವು ಪ್ರಾಪ್ತವಾಗಿ ಮೀಮಾಂಸಾ ಎಂಬ ಶಬ್ದವು ನಿಷ್ಪನ್ನವಾಗಿದೆ. ಇದಕ್ಕೆ ವಿಚಾರ ಎಂಬರ್ಥದಲ್ಲಿ ರೂಢಿಯಿರುವುದು ಸರ್ವಸಿದ್ಧವಾಗಿದೆ. ಆದ್ದರಿಂದ ಜಿಜ್ಞಾಸಾಶಬ್ದಕ್ಕೂ ಕೂಡ ವಿಚಾರದಲ್ಲಿ ರೂಢಿಯನ್ನು ತಿಳಿಯಬೇಕೆಂದು ಸೂಚಿಸಿದ್ದಾರೆ. ಯುಕ್ತ್ಯನುಸಂಧಾನಾತ್ಮಕ ಎಂಬುದಾಗಿ ವಿಚಾರಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ವಿಚಾರಶಬ್ದದ ವ್ಯಾಖ್ಯಾನವನ್ನು ಮಾಡುವ ಮೂಲಕ ವಿಚಾರಶಬ್ದದ ಪರ್ಯಾಯತ್ವವನ್ನು ಹೇಳಿದ್ದಾರೆ. ಇದರಿಂದ ಮಾನ್ ಧಾತುವಿಗೆ ವಿಚಾರ ಎಂಬ ಅರ್ಥವಿದ್ದರೂ ಕೂಡ ವಿಚಾರವು ಶ್ರವಣರೂಪವಾದ್ದರಿಂದ ಮೀಮಾಂಸಾಪರನಾಮಕತ್ವವು ಹಾಗೂ ಮನನಾಪರನಾಮಕತ್ವವು ವಿರುದ್ಧವಾಗಿದೆಯಲ್ಲವೇ? ಎಂಬ ಶಂಕೆಗೆ ಪರಿಹಾರವನ್ನು ಸೂಚಿಸಿದ್ದಾರೆ.

ವಿವರಣೆ – ಜಿಜ್ಞಾಸೆಯ ಕರ್ತವ್ಯತ್ವವು ಶಾಸ್ತ್ರಾರಂಭಣೀಯತ್ವಕ್ಕೆ ಉಪಪಾದಕ ಎಂದು ಹೇಳಲು ಏನು ಕಾರಣ? ಜಿಜ್ಞಾಸಾಕರ್ತವ್ಯತ್ವಕ್ಕೂ ಶಾಸ್ತ್ರಾರಂಭಣೀಯತ್ವಕ್ಕೂ ಯಾವುದೇ ಸಂಬಂಧವು ಇರುವುದಿಲ್ಲ. ಆದ್ದರಿಂದ ಜಿಜ್ಞಾಸೆಯ ಸ್ವರೂಪವನ್ನು ಶಾಸ್ತ್ರದ ಸ್ವರೂಪವನ್ನು ಟೀಕೆಯಲ್ಲಿ ಹೇಳಿರುತ್ತಾರೆ. ಜಿಜ್ಞಾಸೆಯು ನ್ಯಾಯಗಳ ಅನುಸಂಧಾನಾತ್ಮಕವಾಗಿದೆ. ಶಾಸ್ತ್ರವು ನ್ಯಾಯನಿಬಂಧನಾತ್ಮಕವಾಗಿದೆ. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವೆಂದು ಸಿದ್ಧವಾದರೆ ಶಾಸ್ತ್ರವು ಆರಂಭಣೀಯವೆಂದು ಸಿದ್ಧವಾಗುತ್ತದೆ.

"ಅತ್ರ ಮನನಾಪರನಾಮಕೇತ್ಯುಕ್ತ್ಯಾ" ಇತ್ಯಾದಿ ವಾಕ್ಯದಲ್ಲಿರುವ "ಶ್ರವಣವಿಧಿಮೂಲತ್ವಮಿತ್ಯರ್ಥಂ" ಎಂಬುದಕ್ಕೆ ಸೂಚಯತಿ ಎಂಬಲ್ಲಿ ಅನ್ವಯ. ಮತ್ತು 'ವಿಚಾರರೂಢಿಂ' ಎಂಬುದಕ್ಕೂ ಕೂಡ ಸೂಚಯತಿ ಎಂಬಲ್ಲಿ ಅನ್ವಯ. ಟೀಕೆಯಲ್ಲಿ ಜಿಜ್ಞಾಸೆಯ ಬಗ್ಗೆ ಪರಿಚಯಿಸಬೇಕಾದರೆ ಮೀಮಾಂಸಾಪರನಾಮಕ ಎಂದು ಹೇಳಿದ್ದಾರೆ. ಮತ್ತು ಮನನಾಪರನಾಮಕ ಎಂದು ಹೇಳಿ ಯುಕ್ತ್ಯನು-

ಸಂಧಾನಾತ್ಮಕವಿಚಾರಾಪರನಾಮಕ ಎಂಬುದಾಗಿ ಮೂರು ಹೇತುಗಳನ್ನು ಹೇಳಿದ್ದಾರೆ. ಈ ಮೂರನ್ನೇ ಹೇಳಲು ಏನು ಕಾರಣ?

ಉತ್ತರ ಹೀಗಿದೆ – ವಿವರಣಕಾರರು ಜಿಜ್ಞಾಸಾಸೂತ್ರವು ಶ್ರವಣವಿಧಿಮೂಲಕ ಎಂದು ಹೇಳುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ 'ಮನನಾಪರನಾಮಕ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. (ನ್ಯಾಯಾಮೃತದ ತೃತೀಯಪರಿಚ್ಛೇದದಲ್ಲಿ ಇದನ್ನು ವಿಸ್ತಾರವಾಗಿ ಸಮರ್ಥಿಸಿದ್ದಾರೆ). ವಿವರಣಕಾರರು ಶ್ರವಣವನ್ನೇ ವಿಚಾರ ಎನ್ನುತ್ತಾರೆ. ವೇದವಾಕ್ಯಗಳ ತಾತ್ಪರ್ಯಾವಧಾರಣ ಎಂದರ್ಥ. ವಿಚಾರ ಮಾಡಿದರಷ್ಟೇ ತಾತ್ಪರ್ಯಾವಧಾರಣವು ಸಾಧ್ಯವಾಗುತ್ತದೆ. ಆದರೆ ಮನನವೇ ಬೇರೆ. ಅಸಂಭಾವನಾ ಮತ್ತು ವಿಪರೀತಶಂಕೆಗಳನ್ನು ಪರಿಹಾರಮಾಡುವುದನ್ನು ಮನನ ಎನ್ನುತ್ತಾರೆ. ಆದ್ದರಿಂದ ಶ್ರೋತವ್ಯಃ ಎಂಬ ಶ್ರವಣವಿಧಿಮೂಲಕವಾಗಿ ಅಥಾऽತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು ಹೊರಟಿದೆ.

ವಿವರಣಕಾರರ ಈ ಅಭಿಪ್ರಾಯವು ಅಯುಕ್ತವಾಗಿದೆ. ಏಕೆಂದರೆ, ಶ್ರವಣಕ್ಕೂ ಯುಕ್ತಿಗಳಿಗೂ ಯಾವುದೇ ರೀತಿಯಲ್ಲಿ ಸಂಬಂಧವೇ ಇರುವುದಿಲ್ಲ. ಗುರೂಪದೇಶದಿಂದ ಪ್ರಾಪ್ತವಾಗುವ ಜ್ಞಾನ-ಮಾತ್ರವನ್ನೇ ಶ್ರವಣ ಎಂಬುದಾಗಿ ಕರೆಯಬೇಕು. ಈ ಶ್ರವಣಕ್ಕೆ ಯುಕ್ತಿಗಳ ಅಪೇಕ್ಷೆಯು ಇರುವುದಿಲ್ಲ. ಆದ್ದರಿಂದ ಯುಕ್ತ್ಯನುಸಂಧಾನಾತ್ಮಕವಾದ ವಿಚಾರವನ್ನು ವಿಧಾನಮಾಡುವ ಈ ಸೂತ್ರವು ಶ್ರವಣವಿಧಿ ಮೂಲಕವಾಗಲು ಸಾಧ್ಯವಿಲ್ಲ. ಮನನವಿಧಿಮೂಲಕವೇ ಆಗಬೇಕು. ಇದನ್ನು ಸೂಚನೆ ಮಾಡುವು-ದಕ್ಕಾಗಿ ಟೀಕಾರಾಯರು "ಮನನಾಪರನಾಮಕ" ಎಂಬುದಾಗಿ ಹೇಳಿದ್ದಾರೆ.

"ಮೀಮಾಂಸಾಪರನಾಮಕ" ಎಂದು ಹೇಳಲು ಏನು ಕಾರಣ? ಎಂದರೆ ಮೀಮಾಂಸಾಶಬ್ದದ ನಿಷ್ಪತ್ತಿಯನ್ನು ಮೊದಲು ಹೀಗೆ ತಿಳಿಯಬೇಕು. 'ಮಾನ್ ಬಧ' ಇತ್ಯಾದಿಯಾದ ಸೂತ್ರದಲ್ಲಿ ಮಾನ್ ಧಾತುವಿಗೆ ಸ್ವಾರ್ಥದಲ್ಲಿ ಸನ್‌ಪ್ರತ್ಯಯವು ಬರುತ್ತದೆ. ಈ ಮಾನ್ ಧಾತುವಿಗೆ ವಿಚಾರ ಎಂದರ್ಥ. ಆದ್ದರಿಂದ ವಿಚಾರಾರ್ಥದಲ್ಲಿರುವ ಮಾನ್ ಧಾತುವಿಗೆ ಸ್ವಾರ್ಥದಲ್ಲಿ ಸನ್‌ಪ್ರತ್ಯಯವು ಪ್ರಾಪ್ತವಾಗಿ ಮೀಮಾಂಸಾ ಎಂಬ ಶಬ್ದವು ನಿಷ್ಪನ್ನವಾಗಿದೆ. ಇದು ವಿಚಾರ ಎಂಬರ್ಥದಲ್ಲಿ ರೂಢವಾಗಿದೆ. ಪ್ರಕೃತ ಗ್ರಂಥದಲ್ಲಿ ಮೀಮಾಂಸಾಪರನಾಮಕ ಎಂದು ಹೇಳಿದ್ದರಿಂದ ಮೀಮಾಂಸಾಶಬ್ದದಂತೆ ಜಿಜ್ಞಾಸಾಶಬ್ದವೂ ಕೂಡ ವಿಚಾರದಲ್ಲಿ ರೂಢವಾಗಿದೆ ಹೊರತು ಜ್ಞಾನೇಚ್ಛಾವಿಗೆ ವಾಚಕವೆಂದು ಹೇಳಬಾರದು. ಇದನ್ನು ಸೂಚನೆ ಮಾಡಿದ್ದಾರೆ.

'ವಿಚಾರಾಪರನಾಮಕ" ಎಂದು ಹೇಳಬೇಕಾದರೆ 'ಯುಕ್ತ್ಯನುಸಂಧಾನಾತ್ಮಕ' ಎಂಬ ವಿಶೇಷಣದ ಮೂಲಕ ವಿಚಾರಶಬ್ದದ ಅರ್ಥವನ್ನು ಹೇಳಿ 'ವಿಚಾರಾಪರನಾಮಕ' ಎಂಬುದಾಗಿ ಹೇಳಿದ್ದಾರೆ.

ವಿಚಾರಶಬ್ದದ ಅರ್ಥವನ್ನು ನಿರೂಪಣೆ ಮಾಡುವ ಮೂಲಕ ಜಿಜ್ಞಾಸೆಯು ವಿಚಾರಶಬ್ದದ ಪರ್ಯಾಯಪದವಾಗಿದೆ ಎಂದು ತಿಳಿಸಿದ್ದಾರೆ. ಇದರ ಉದ್ದೇಶವೇನೆಂದರೆ ಶಂಕೆಯನ್ನು ಪರಿಹರಿಸ-ಬೇಕಾಗಿದೆ. ಶಂಕೆಯು ಹೀಗಿದೆ –

ಜಿಜ್ಞಾಸೆಯು ಮನನಾಪರನಾಮಕ ಎಂಬುದಾಗಿ ಹೇಳಿದಿರಿ ಮತ್ತು ಮೀಮಾಂಸಾಪರನಾಮಕ ಎಂದು ಹೇಳಿದಿರಿ. ಇವೆರಡೂ ಕೂಡ ಪರಸ್ಪರ ವಿರುದ್ಧವಾಗಿದೆ. ಮೀಮಾಂಸಾ ಎಂಬ ಶಬ್ದಕ್ಕೆ ವಿಚಾರ ಎಂದರ್ಥ. ವಿಚಾರವು ಶ್ರವಣರೂಪವಾಗಿದೆ. ಆದ್ದರಿಂದ ಮೀಮಾಂಸಾಪರನಾಮಕ ಎಂದು ಹೇಳಿ-ದ್ದರಿಂದ ಜಿಜ್ಞಾಸಾಶಬ್ದಕ್ಕೆ ಶ್ರವಣರೂಪವಾದ ವಿಚಾರ ಎಂಬರ್ಥವನ್ನು ಹೇಳಿದಂತಾಯಿತು. ಪುನಃ ಮನನಾಪರನಾಮಕ ಎಂದು ಹೇಳಿದರೆ ವಿರುದ್ಧವಾಗುತ್ತದೆ.

ಇದು ತಪ್ಪು. ಮೀಮಾಂಸಾಪರನಾಮಕ ಎಂದು ಹೇಳಿದ್ದರಿಂದ ವಿಚಾರ ಎಂಬರ್ಥವನ್ನೇ ಹೇಳಿದಂತಾಯಿತು. ವಿಚಾರ ಎಂಬ ಶಬ್ದಕ್ಕೆ ಶ್ರವಣ ಎಂಬರ್ಥವು ಇರುವುದಿಲ್ಲ. ಮನನ ಎಂದೇ ಅರ್ಥ. ಆದ್ದರಿಂದ ಮನನಾಪರನಾಮಕ ಎಂಬುದರಿಂದ ವಿರೋಧವು ಬರುವುದಿಲ್ಲ. ವಿಚಾರವು ಯುಕ್ತ್ಯನುಸಂಧಾನಾತ್ಮಕವೆಂಬುದಾಗಿ ವ್ಯಾಖ್ಯಾನ ಮಾಡಿದ್ದರಿಂದ ವಿಚಾರವು ಮನನರೂಪವೇ ಆಗಿದೆ ಹೊರತು ಶ್ರವಣರೂಪವಾಗಿರುವುದಿಲ್ಲ ಎಂದು ತಿಳಿಸಿದ್ದಾರೆ. ಇದರಿಂದ ಮನನಾಪರನಾಮಕ ಎಂಬುದಕ್ಕೂ ಮೀಮಾಂಸಾಪರನಾಮಕ ಎಂಬುದಕ್ಕೂ ವಿರೋಧವನ್ನು ಪರಿಹರಿಸಿದಂತಾಯಿತು.

ವಾಕ್ಯಾರ್ಥಚಂದ್ರಿಕಾ– (ಗುಪ್ತಿಜ್‌ಕಿದ್ಭ್ಯಃ ಸನ್' । 'ಮಾನ್ ಬಧದಾನ್‌ಶಾನ್ಭ್ಯೋ ದೀರ್ಘ-ಶ್ಚಾಽಭ್ಯಾಸಸ್ಯ' । ಸೂತ್ರದ್ವಯೋಕ್ತೇಭ್ಯಃ ಸನ್ಪ್ರ್ಯನ್ತಾನಾದೀನಾಮಭ್ಯಾಸಸ್ಯೇಕಾರಸ್ಯ ದೀರ್ಘಶ್ಚ । ಮಾನೋಃ ಜಿಜ್ಞಾಸಾಯಾಮ್ । ಅಭ್ಯಾಸಸ್ಯ ವಿಕಾರ ಅಭ್ಯಾಸಃ ಸ ಚೇತ್ತಮೇವ । ತಥಾ ಹಿ ದೀರ್ಘಶ್ರುತ್ಯಾಽಚ ಇತ್ಯುಪಸ್ಥಿತಮ್ । ನ ಚ ಮಾನಾದೀನಾಮಭ್ಯಾಸಸ್ಯ ವಿಕಾರಭೂತೋಽಚ್ ಇಕಾರಾದನ್ಯಃ ಸಂಭವತಿ । ಯದಿ ತು ಹ್ರಸ್ವ ಇತ್ಯೇವ ಗೃಹ್ಯೇತತರ್ಹಿ ತದ್ಧಿತನಿರ್ದೇಶೋ ವ್ಯರ್ಥಃ ಸ್ಯಾತ್ । ಸಹ್ಯಭ್ಯಾಸೇ ಈಕಾರಶ್ರವಣಾರ್ಥಂ ಕ್ರಿಯತೇ । ಅನ್ಯಥಾಽಜಂತಸ್ಯಾಭ್ಯಾಸಸ್ಯ ವಿಧೀಯ-ಮಾನೋ ದೀರ್ಘೋ ಹಲಾದಿಶೇಷಮಾತ್ರಂ ಪ್ರತೀಕ್ಷತಾಂ ನ ತು ಸನ್ವದಿತ್ವಮಪಿ । ತದೇವಾಹ – ಇಕಾರಸ್ಯೇತಿ ॥ ಸನಾದ್ಯಂತಾ ಇತಿ ಧಾತುತ್ವಮ್ । 'ಸನ್ಯಜೋಃ' । ಸನ್ನಂತಸ್ಯ ಯಜಂತಸ್ಯ ಚ ಪ್ರಥಮಸ್ಯೈಕಾಚೋ ದ್ವಿತ್ವೋಽಜಾದೇಸ್ತು ದ್ವಿತೀಯಸ್ಯ । 'ಅಃ ಪ್ರತ್ಯಯಾತ್' । ಪ್ರತ್ಯಯಾಂತೇ-ಭ್ಯೋ ಧಾತುಭ್ಯಃ ಸ್ತ್ರಿಯಾಮಕಾರಪ್ರತ್ಯಯಃ ಸ್ಯಾತ್ । ಮೀಮಾಂಸಾ । ಕರ್ಮಣ್ಯನೀಯರ್ಕರ್ಮಣ್ಯ-

ನೀಯರಿತಿ । 'ತವ್ಯತ್ತವ್ಯಾನೀಯರಃ' । ಧಾತೋರೇತೇ ಪ್ರತ್ಯಯಾ ಭಾವಕರ್ಮಣೋಃ ಸ್ಯುಃ । ತಕಾರರೇಫೌ ಸ್ವರಾರ್ಥೌ । ಏಧಿತವ್ಯಮ್ । ಏಧನೀಯಂ ತ್ವಯಾ ಭಾವೇ ಔತ್ಸರ್ಗಿಕಮೇಕವಚನಂ ಕ್ಲೀಬತ್ವಂ ಚ । ಚೇತವ್ಯಶ್ಚಯನೀಯೋ ವಾ ಧರ್ಮಸ್ತ್ವಯೇತ್ಯಾದ್ಯುದಾಹರಣಾನಿ)[೧] ।

ತಥಾ ಚ ತದ್ ಧಾರ್ಮಿಕ ಏವ ಸಂಶಯಃ ಪ್ರದರ್ಶನೀಯ ಇತಿ ವಾಕ್ಯಶೇಷಃ । ಚಿಂತಾ-ಸಾಫಲ್ಯಾಯ ಶಾಸ್ತ್ರಧರ್ಮಿಕಾನಾರಂಭಣೀಯತ್ವಾದಿಕೋಟಿಕಸಂಶಯಪ್ರದರ್ಶನೇಽಪಿ ವಿಚಾರ್ಯ-ತ್ವಾತ್ ಜಿಜ್ಞಾಸಾಯಾಸ್ತದ್ಧರ್ಮಿಕ ಏವ ಸಂಶಯಃ ಪ್ರದರ್ಶ್ಯತ ಇತ್ಯಾಹ – ಸತ್ಯಮ್ ಇತಿ ॥

ಶಾಸ್ತ್ರಧರ್ಮಿಕವಾದ ಸಂಶಯವನ್ನು ತೋರಿಸಬೇಕು ಎಂಬ ವಾಕ್ಯಶೇಷವನ್ನು ಪೂರಣೆ ಮಾಡಿಕೊಳ್ಳಬೇಕು. ಸಂಶಯಕ್ಕೆ ಸಾಫಲ್ಯವನ್ನು ತಿಳಿಸುವುದಕ್ಕಾಗಿ ಶಾಸ್ತ್ರಧರ್ಮಿಕವಾದ ಅನಾರಂಭಣೀ-ಯತ್ವಾದಿಕೋಟಿಕವಾದ ಸಂಶಯವನ್ನು ತೋರಿಸಬೇಕು. ಆದರೂ ಕೂಡ ವಿಚಾರ್ಯವಾಗಿರುವು-ದರಿಂದ ಜಿಜ್ಞಾಸೆಗೆ ತದ್ಧರ್ಮಿಕವಾದ ಸಂಶಯವನ್ನೇ ತೋರಿಸಲಾಗಿದೆ ಎಂದು ''ಸತ್ಯಮ್'' ಇತ್ಯಾದಿ-ಯಾಗಿ ಹೇಳುತ್ತಿದ್ದಾರೆ.

ವಿವರಣೆ – ಜಿಜ್ಞಾಸಾ ಕರ್ತವ್ಯಾ ನ ವಾ? ಎಂಬ ವಿಚಾರವನ್ನು ಮಾಡಬೇಕೇ ಹೊರತು 'ಶಾಸ್ತ್ರಮಾರಂಭಣೀಯಂ ವಾ ನ ವಾ?' ಎಂಬ ವಿಚಾರವನ್ನು ಮಾಡಬೇಕಾಗಿಲ್ಲ. ಆದ್ದರಿಂದ 'ಶಾಸ್ತ್ರ-ಧರ್ಮಿಕ ಏವ ಸಂಶಯಃ ಪ್ರದರ್ಶನೀಯಃ' ಎಂಬ ವಾಕ್ಯವನ್ನು ಗ್ರಂಥದಲ್ಲಿ ಶೇಷಪೂರಣೆ ಮಾಡಿ-ಕೊಳ್ಳಬೇಕು.

ಜಿಜ್ಞಾಸಾಧರ್ಮಿಕವಾದ ಸಂಶಯವನ್ನು ತೋರಿಸಬೇಕೆಂಬುದು ಸತ್ಯ. ಅಂದ ಮಾತ್ರಕ್ಕೆ ಶಾಸ್ತ್ರ-ಧರ್ಮಿಕವಾದ ಸಂಶಯವನ್ನು ತೋರಿಸಬಾರದೆಂದೇನೂ ಇಲ್ಲ. ಏಕೆಂದರೆ, 'ಜಿಜ್ಞಾಸಾ ಕರ್ತವ್ಯಾ ನ ವಾ?' ಎಂಬ ಚಿಂತೆಯನ್ನು ಹೇಳಿದಾಗ ಇದರ ಫಲವೇನು? ಎಂಬುದನ್ನು ತಿಳಿದುಕೊಳ್ಳಲು ಶಾಸ್ತ್ರಂ ಆರಂಭಣೀಯಂ ವಾ ನ ವಾ? ಎಂಬ ಸಂಶಯವನ್ನು ತೋರಿಸಲೇ ಬೇಕು. ಶಾಸ್ತ್ರವು ಆರಂಭಣೀ-ಯವೋ ಅಲ್ಲವೋ ಎಂಬಲ್ಲಿ ವಿಚಾರ ಮಾಡುವ ಅವಶ್ಯಕತೆ ಇರುವುದಿಲ್ಲ. ಜಿಜ್ಞಾಸೆಯು ಕರ್ತವ್ಯ-ವೆಂದು ಸಿದ್ಧವಾದರೆ ಶಾಸ್ತ್ರವು ಆರಂಭಣೀಯವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಜಿಜ್ಞಾಸಾಧರ್ಮಿಕ-ವಾದ ಸಂಶಯವನ್ನೇ ತೋರಿಸಿದ್ದು ಯುಕ್ತವಾಗಿದೆ.

---

[೧] ಬ್ರಾಕೆಟ್ಟಿನಲ್ಲಿರುವ ವಿಷಯವು ವಾಕ್ಯಾರ್ಥಚಂದ್ರಿಕಾಟಿಪ್ಪಣಿಯಲ್ಲಿ ಸೇರಿದ್ದಲ್ಲವೆಂದು ವಿದ್ವಾಂಸರು ಅಭಿ-ಪ್ರಾಯ ಪಡುತ್ತಾರೆ. ಆದ್ದರಿಂದ ಇದಕ್ಕೆ ಅನುವಾದವನ್ನು ಇಲ್ಲಿ ಮಾಡಿಲ್ಲ.

## ಶ್ರುತಿಯು ವಿಶೇಷದರ್ಶನವಾಗುವುದಿಲ್ಲ

ವಾಕ್ಯಾರ್ಥಚಂದ್ರಿಕಾ– 'ಏತತ್ ಶಾಸ್ತ್ರೇ'ತ್ಯಾದಿನಾ ಜಿಜ್ಞಾಸಾಯಾ ವಿಷಯತ್ವಾಯ ಬುದ್ಧಿಸನ್ನಿಹಿತತ್ವೋಕ್ತಿಃ । 'ತದ್ ವಿಜಿಜ್ಞಾಸಸ್ವ' ಇತಿ ಶ್ರುತ್ಯಾ ಜಿಜ್ಞಾಸಾಯಾಃ ಕರ್ತವ್ಯತ್ವೇ ಪ್ರತಿಪಾದಿತೇಽಪಿ ಜ್ಞಾನೇಚ್ಛಯೋಶ್ಚ ವಿಧೇಯತ್ವಾಸಂಭವೇನ ವಿಚಾರವಿಧಾನಸ್ಯ ಚ ವಸ್ತುತಃ ಸಂಭವೇಽಪಿ ಪ್ರಕೃತಬ್ರಹ್ಮವಿಚಾರಕರ್ತವ್ಯತ್ವಂ ಶ್ರುತ್ಯುಕ್ತಮಪಿ ತಸ್ಯ ವಿಷಯಾದಿಮತ್ವೇ ಯುಕ್ತಂ, ತದಭಾವೇ ಚಾಯುಕ್ತಮಿತಿ ಸೂತ್ರೇ ವರ್ತಿಷ್ಯಮಾಣವಿಷಯಾದಿಮತ್ವವಿಚಾರಸಾಧ್ಯಸ್ಯ ಶ್ರುತ್ಯರ್ಥಭೂತವಿಚಾರಕರ್ತವ್ಯತಾಯಾ ಯುಕ್ತತ್ವಸ್ಯ ಸೂತ್ರಪ್ರವೃತ್ತೇಃ ಪೂರ್ವಂ ವಿಷಯಾದಿಸಂಶಯದಶಾಯಾಮನಿಶ್ಚಿತತ್ವೇನ ಶ್ರುತೇಃ ವಿಶೇಷದರ್ಶನತ್ವಾಸಂಭವ ಇತ್ಯಾಹ – ಮೈವಮಿತಿ ॥

''ಏತಚ್ಛಾಸ್ತ್ರ'' ಇತ್ಯಾದಿ ವಾಕ್ಯದಿಂದ ಜಿಜ್ಞಾಸೆಯು ವಿಷಯವಾಗಿರುವುದರಿಂದ ಬುದ್ಧಿಸನ್ನಿಹಿತವಾಗಿದೆ ಎಂಬುದಾಗಿ ಹೇಳಿರುತ್ತಾರೆ. 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯಿಂದ ಜಿಜ್ಞಾಸೆಗೆ ಕರ್ತವ್ಯತ್ವವು ಪ್ರತಿಪಾದಿತವಾಗಿದ್ದರೂ ಕೂಡ ಜ್ಞಾನ ಮತ್ತು ಇಚ್ಛೆಗಳು ವಿಧೇಯವಾಗಲು ಸಾಧ್ಯವಿಲ್ಲ. ವಿಚಾರವಿಧಾನವು ವಾಸ್ತವಿಕವಾಗಿ ಯುಕ್ತವಾದರೂ ಕೂಡ ಪ್ರಕೃತವಾದ ಬ್ರಹ್ಮವಿಚಾರಕರ್ತವ್ಯತ್ವವು ಶ್ರುತ್ಯುಕ್ತವಾಗಿದ್ದರೂ ಕೂಡ ವಿಷಯಾದಿಗಳಿದ್ದರೆ ಮಾತ್ರ ಯುಕ್ತವಾಗುತ್ತದೆ. ವಿಷಯಾದಿಗಳಿಲ್ಲದಿದ್ದರೆ ಯುಕ್ತವಾಗುವುದಿಲ್ಲ. ಆದ್ದರಿಂದ ಸೂತ್ರದಲ್ಲಿ ಮುಂದೆ ಪ್ರಸಕ್ತವಾಗುವ ವಿಷಯಾದಿಮತ್ವವೆಂಬ ವಿಚಾರದಿಂದ ಶ್ರುತ್ಯರ್ಥಭೂತವಿಚಾರಕರ್ತವ್ಯತ್ವಕ್ಕೆ ಯುಕ್ತತ್ವವು ಸಾಧ್ಯವಾಗಿದೆ. ಇದು ಸೂತ್ರಪ್ರವೃತ್ತಿಗಿಂತ ಮೊದಲು ವಿಷಯಾದಿಗಳ ಸಂಶಯದ ಸಂದರ್ಭದಲ್ಲಿ ಅನಿಶ್ಚಿತವಾಗಿರುತ್ತದೆ. ಆದ್ದರಿಂದ ಶ್ರುತಿಗೆ ವಿಶೇಷದರ್ಶನವು ಕೂಡುವುದಿಲ್ಲ. ಇದನ್ನು ''ಮೈವಮ್'' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ವಿವರಣೆ – ವಿಶೇಷಾದರ್ಶನವಿದ್ದರೆ ಸಂಶಯವು ಬರುತ್ತದೆ. ವಿಶೇಷದರ್ಶನವಿದ್ದಾಗ ಸಂಶಯವು ಬರುವುದಿಲ್ಲ. ಅನ್ಯತರವ್ಯಾಪ್ಯಕೋಟಿನಿಶ್ಚಯವು ಮಾತ್ರ ವಿಶೇಷದರ್ಶನ ಎಂಬುದಾಗಿ ಕರೆಸಿಕೊಳ್ಳುತ್ತದೆ. ಮತ್ತು ಅನ್ಯತರಕೋಟಿನಿಶ್ಚಾಯಕವಾದ ಪ್ರಮಾಣವೂ ಕೂಡ ವಿಶೇಷದರ್ಶನ ಎಂದು ಕರೆಸಿಕೊಳ್ಳುತ್ತದೆ. ಜಿಜ್ಞಾಸೆಯಲ್ಲಿ ಕರ್ತವ್ಯತ್ವಕೋಟಿಯು ಅನ್ಯತರಕೋಟಿ ಎನಿಸಿಕೊಳ್ಳುತ್ತದೆ. ಇದಕ್ಕೆ ನಿಶ್ಚಾಯಕವಾದದ್ದು ಶ್ರುತಿಯಾಗಿದೆ. ಈ ಶ್ರುತಿರೂಪವಾದ ವಿಶೇಷದರ್ಶನವು ಇರುವುದರಿಂದ ಸಂಶಯವು ಬರಲು ಸಾಧ್ಯವಿಲ್ಲ.

'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯು ಪ್ರಕೃತ್ಯರ್ಥವಾದ ಜ್ಞಾನವನ್ನು ವಿಧಾನ ಮಾಡುವುದಿಲ್ಲವೆಂದು

ಅದ್ವೈತಿಗಳು ಹೇಳುತ್ತಾರೆ. ಸನ್‌ಪ್ರತ್ಯಯಾರ್ಥವಾದ ಇಚ್ಛೆಯನ್ನೂ ಕೂಡ ವಿಧಾನ ಮಾಡುವುದನ್ನು ಒಪ್ಪಿರುವುದಿಲ್ಲ. ಇನ್ನು ರೂಢ್ಯರ್ಥದಿಂದ ಲಭ್ಯವಾಗುವ ವಿಚಾರವನ್ನು ವಿಧಾನ ಮಾಡಲಾಗಿದೆ ಎಂದು ಹೇಳಬೇಕು. ಆದರೆ ಮುಂದೆ ಹೇಳುವ ಪ್ರಕಾರ ವಿಷಯಾದಿಗಳು ಉಪಪನ್ನವಾದರೆ ಮಾತ್ರ ವಿಚಾರ-ವಿಧಿಯು ಯುಕ್ತವಾಗುತ್ತದೆ. ಆದ್ದರಿಂದ ಸೂತ್ರಕಾರರು ವಿಷಯಾದಿಗಳನ್ನು ಹೇಳಿದ ಮೇಲೆ ಶ್ರುತ್ಯರ್ಥವು ನಿಶ್ಚಯವಾಗುತ್ತದೆ.

ಸೂತ್ರಕಾರರು ಜಿಜ್ಞಾಸೆಗೆ ವಿಷಯಾದಿಗಳು ಇದೆಯೋ ಇಲ್ಲವೋ? ಎಂಬುದಾಗಿ ವಿಚಾರ ಮಾಡುತ್ತಿದ್ದಾರೆ. ಈ ವಿಚಾರದಿಂದ ಜಿಜ್ಞಾಸೆಗೆ ಕರ್ತವ್ಯತ್ವವು ಯುಕ್ತವಾಗುತ್ತದೆಂಬುದು ಸಿದ್ಧವಾಗುತ್ತದೆ. ಶ್ರುತಿಯಿಂದ ಜಿಜ್ಞಾಸೆಗೆ ಕರ್ತವ್ಯತ್ವವು ತಿಳಿಯುತ್ತಿದೆ. ಶ್ರುತ್ಯುಕ್ತವಾದ ಜಿಜ್ಞಾಸೆಯ ಕರ್ತವ್ಯತ್ವಕ್ಕೆ ಯುಕ್ತತ್ವವು ಸೂತ್ರಕಾರರು ವಿಷಯಾದಿಗಳನ್ನು ಸಮರ್ಥನೆ ಮಾಡಿದರೆ ಮಾತ್ರ ಸಿದ್ಧವಾಗುತ್ತದೆ. ಆದ್ದರಿಂದ ಸೂತ್ರದಲ್ಲಿ ಮುಂದೆ ಸಿದ್ಧವಾಗುವ ವಿಷಯಾದಿಮತ್ವದಿಂದ ಶ್ರುತ್ಯರ್ಥಭೂತವಿಚಾರ-ಕರ್ತವ್ಯತ್ವದ ಯುಕ್ತತ್ವವು ಸಾಧ್ಯವಾಗಿದೆ. ಸೂತ್ರಪ್ರವೃತ್ತಿಗಿಂತ ಮೊದಲು ಸಿದ್ಧವಾಗಿರುವುದಿಲ್ಲ. ಆದ್ದರಿಂದ ಶ್ರುತಿಯು ವಿಶೇಷದರ್ಶನರೂಪವಾಗಲು ಸಾಧ್ಯವಿಲ್ಲ.

## ನೇರವಾಗಿ ವಿಷಯವಾಕ್ಯವನ್ನೇಕೆ ಉಲ್ಲೇಖಿಸಿಲ್ಲ

ವಾಕ್ಯಾರ್ಥಚಂದ್ರಿಕಾ– ಶ್ರುತ್ಯರ್ಥಸ್ಯ ವಿಚಾರಕರ್ತವ್ಯತ್ವಸ್ಯಾದ್ಯಾಪಿ ವಿಷಯಾದಿ-ಸಂಶಯದಶಾಯಾಮಪಿ ಅನಿರ್ಣೀತತ್ವೇನ ಯುಕ್ತತಯಾಽನಿಶ್ಚಿತತ್ವೇನ । ಅನೇನ ಅಸ್ಮಿನ್ನಧಿಕರಣೇ ಅಸ್ಯ ವಿಷಯವಾಕ್ಯತ್ವಂ ಸೂಚಿತಮುಪಪಾದಿತಂ ಭವತಿ । ನ ಚೈವಂ 'ತದ್ ಬ್ರಹ್ಮ' ಇತ್ಯಾದಿಬ್ರಹ್ಮಶಬ್ದ ಇತ್ಯಾದ್ಯುತ್ತರಾಧಿಕರಣಾದಾವಿವ 'ತದ್ ವಿಜಿಜ್ಞಾಸಸ್ವ' ಇತಿ ಶ್ರುತ್ಯುಕ್ತಜಿಜ್ಞಾಸಾ ಕರ್ತವ್ಯಾ, ನ ವೇತಿ ಸಂದೇಹ ಇತಿ ಸಾಕ್ಷಾದೇವ ತಸ್ಯ ವಿಷಯವಾಕ್ಯತ್ವಸೂಚನಸಂಭವೇ ಸಂದೇಹಹೇತುವಿಶೇಷಾ-ದರ್ಶನೋಪಪಾದನಮುಖೇನ ತಸ್ಯ ವಿಷಯವಾಕ್ಯತ್ವಸೂಚನೋಪಪಾದನೇ ಕುತ ಇತಿ ವಾಚ್ಯಮ್ । 'ತದ್ ವಿಜಿಜ್ಞಾಸಸ್ವ' ಇತಿ ವಾಕ್ಯಾರ್ಥವಿಚಾರಪರಸ್ಯಾಪ್ಯಸ್ಯ ನ ತೇನ ರೂಪೇಣ ಪ್ರವೃತ್ತಿರಪಿ ತು ಶಾಸ್ತ್ರವ್ಯಾಪಾರವಿಚಾರಕರ್ತವ್ಯತಾಸಮರ್ಥನದ್ವಾರೇಣ ಶಾಸ್ತ್ರಾರಂಭಣೀಯತಾಪ್ರತಿಪಾದಕತ್ವ-ಮುಖೇನೇತಿ ದರ್ಶಯಿತುಂ ತಥಾ ಸೂಚನಮಿತಿ ದ್ರಷ್ಟವ್ಯಮ್ । ತತ್ರೋಕ್ತರೀತ್ಯಾ ವಿಷಯಸಂಶಯ-ಸಿದ್ಧೌ ತಸ್ಯಾಂ ನ್ಯಾಯವಿರೋಧಾಭಾವಾದ್ ಯುಕ್ತ್ಯಾ ಪೂರ್ವಪಕ್ಷಪ್ರಾಪ್ತಿರಿತ್ಯಾಹ – ತತ್ರೇತಿ ॥

ಶ್ರುತ್ಯರ್ಥಕ್ಕೆ ವಿಚಾರಕರ್ತವ್ಯತ್ವವು ಇನ್ನೂ ಸಹ ಸಿದ್ಧವಾಗಿರುವುದಿಲ್ಲ. ಆದ್ದರಿಂದ ವಿಷಯ ಹಾಗೂ ಸಂಶಯಗಳ ದಶೆಯಲ್ಲಿ ವಿಚಾರಕರ್ತವ್ಯತ್ವವು ಶ್ರುತ್ಯರ್ಥವಾಗಿದೆ ಎಂಬುದಾಗಿ ನಿರ್ಣಯವಾಗಿ-ರುವುದಿಲ್ಲ.

ಹೀಗೆ ವ್ಯಾಖ್ಯಾನ ಮಾಡಿರುವುದರಿಂದ ಈ ಅಧಿಕರಣದಲ್ಲಿ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬ ವಿಷಯವಾಕ್ಯವನ್ನು ಸೂಚಿಸಿದ್ದನ್ನು ಉಪಪಾದನೆ ಮಾಡಿದಂತಾಯಿತು. 'ತದ್ ಬ್ರಹ್ಮ ಇತ್ಯಾದಿ ಬ್ರಹ್ಮಶಬ್ದಃ' ಇತ್ಯಾದಿಯಾಗಿ ಜನ್ಮಾದ್ಯಧಿಕರಣದಲ್ಲಿ ಹೇಗೆ ನೇರವಾಗಿ ವಿಷಯವಾಕ್ಯವನ್ನು ಉಲ್ಲೇಖ ಮಾಡಿರು-ತ್ತಾರೋ ಅದರಂತೆ 'ತದ್ ವಿಜಿಜ್ಞಾಸಸ್ವ ಇತಿ ಶ್ರುತ್ಯುಕ್ತಜಿಜ್ಞಾಸಾ ಕರ್ತವ್ಯಾ ನ ವಾ' ಎಂಬುದಾಗಿಯೇ ಸಂದೇಹವನ್ನು ಇಲ್ಲಿ ತೋರಿಸಬಹುದಿತ್ತು. ಆಗ ನೇರವಾಗಿ ವಿಷಯವಾಕ್ಯವನ್ನು ಸೂಚನೆ ಮಾಡಿ-ದಂತಾಗುತ್ತಿತ್ತು. ಹೀಗೆ ಸಂದೇಹವನ್ನು ತೋರಿಸಲು ಬರುತ್ತಿರುವಾಗ ಸಂದೇಹಕ್ಕೆ ಕಾರಣವಾದ ವಿಶೇಷಾದರ್ಶನದ ಉಪಪಾದನೆಯ ಮೂಲಕ ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯು ವಿಷಯವಾಕ್ಯವಾಗಿದೆ ಎಂಬುದಾಗಿ ಸೂಚಿಸಿದ್ದಾರೆ ಎಂಬುದರ ಉಪಪಾದನೆಯನ್ನು ಏಕೆ ಮಾಡುತ್ತಿದ್ದೀರಿ? ಈ ಪ್ರಶ್ನೆಯು ಅಯುಕ್ತವಾಗಿದೆ. 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿವಾಕ್ಯದ ಅರ್ಥವಿಚಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದರೂ ಕೂಡ ಏತತ್ ಶ್ರುತ್ಯರ್ಥವಿಚಾರರೂಪದಿಂದ ಮಾತ್ರ ಈ ಅಧಿಕರಣದ ಪ್ರವೃತ್ತಿಯು ಇರುವುದಿಲ್ಲ. ಮತ್ತೇನೆಂದರೆ ಶಾಸ್ತ್ರವ್ಯಾಪಾರವಿಚಾರಕರ್ತವ್ಯತ್ವದ ಸಮರ್ಥನೆಯ ಮೂಲಕ ಶಾಸ್ತ್ರಾ-ರಂಭಣೀಯತ್ವವನ್ನು ಪ್ರತಿಪಾದನೆ ಮಾಡಲಾಗುತ್ತಿದೆ. ಇದನ್ನು ತಿಳಿಸಲು ಪರಂಪರೆಯಿಂದ ವಿಷಯ-ವಾಕ್ಯವನ್ನು ಸೂಚಿಸಿದ್ದಾರೆಂದು ತಿಳಿಯಬೇಕು.

ಹೀಗೆ ಅಧಿಕರಣದ ವಿಷಯ ಹಾಗೂ ಸಂಶಯಗಳು ಸಿದ್ಧವಾದ ಮೇಲೆ ಆ ವಿಷಯದಲ್ಲಿ ಯಾವುದೇ ನ್ಯಾಯವಿರೋಧವು ಇಲ್ಲದ ಕಾರಣ ಪೂರ್ವಪಕ್ಷವನ್ನು ಮಾಡಬಹುದು. ಆದ್ದರಿಂದ ''ತತ್ರ'' ಇತ್ಯಾದಿ ವಾಕ್ಯವು ಪೂರ್ವಪಕ್ಷವನ್ನು ಸಮರ್ಥಿಸುತ್ತಿದೆ.

ವಿವರಣೆ – ಬ್ರಹ್ಮಜಿಜ್ಞಾಸೆಗೆ ವಿಷಯಪ್ರಯೋಜನಮೊದಲಾದವುಗಳು ಇವೆಯೋ ಇಲ್ಲವೋ? ಎಂಬ ಸಂಶಯವಿರುವ ಸಂದರ್ಭದಲ್ಲಿ ಶ್ರುತ್ಯರ್ಥವಾದ ವಿಚಾರಕರ್ತವ್ಯತ್ವವು ಸಿದ್ಧವಾಗಿರುವುದಿಲ್ಲ. ಆದ್ದರಿಂದ ಶ್ರುತ್ಯರ್ಥವು ವಿಶೇಷದರ್ಶನವೆಂಬುದಾಗಿ ಕರೆಸಿಕೊಳ್ಳುವುದಿಲ್ಲ. ಅನ್ಯತರಕೋಟಿನಿರ್ಣಯ ಅಥವಾ ಅನ್ಯತರಕೋಟಿನಿರ್ಣಾಯಕವಾದ ಪ್ರಮಾಣವು ವಿಶೇಷದರ್ಶನ ಎಂಬುದಾಗಿ ಕರೆಸಿ-ಕೊಳ್ಳುತ್ತದೆ. 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯು ಕರ್ತವ್ಯತ್ವವೆಂಬ ಅನ್ಯತರಕೋಟಿಯ ನಿರ್ಣಯವನ್ನು

ಮಾಡಬೇಕು. ಆದರೆ ಶ್ರುತಿಯಲ್ಲಿ ಯಾವುದೇ ಜಿಜ್ಞಾಸಾಕರ್ತವ್ಯತ್ವವನ್ನು ಹೇಳಿದ್ದರೂ ಕೂಡ ಸಂಶಯ-ದಶೆಯಲ್ಲಿ ಯುಕ್ತವಾಗಿದೆಯೆಂದು ನಿರ್ಣಯ ಮಾಡಲು ಸಾಧ್ಯವಿಲ್ಲ.

ಪ್ರಥಮಸೂತ್ರಕ್ಕೆ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬುದು ವಿಷಯವಾಕ್ಯವಾಗಿದೆ ಎಂಬುದನ್ನು ಇದರಿಂದ ಉಪಪಾದನೆ ಮಾಡಿದಂತಾಯಿತು. ಯಾವ ಶ್ರುತ್ಯರ್ಥವನ್ನು ಯಾವ ಸೂತ್ರದಲ್ಲಿ ನಿರ್ಣಯ ಮಾಡಲಾಗುತ್ತದೋ ಅದೇ ಆ ಸೂತ್ರದ ವಿಷಯವಾಕ್ಯವೆನಿಸುತ್ತದೆ. ಈ ಸೂತ್ರದಲ್ಲಿ ವಿಷಯಾದಿ-ಗಳಿರುವುದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ ಎಂದು ಸಾಧನೆ ಮಾಡುವುದರಿಂದ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಜಿಜ್ಞಾಸಾಕರ್ತವ್ಯತ್ವವನ್ನು ನಿರ್ಣಯ ಮಾಡುತ್ತಿರುವುದರಿಂದ ಇದು ವಿಷಯ-ವಾಕ್ಯವೆಂದು ಉಪಪಾದನೆ ಮಾಡಿದಂತಾಯಿತು.

ಆಶಂಕೆ – ಎಲ್ಲಾ ಅಧಿಕರಣಗಳಲ್ಲಿ ನೇರವಾಗಿಯೇ ವಿಷಯವಾಕ್ಯಗಳನ್ನು ಹೇಳಿರುತ್ತಾರೆ. ಆದರೆ ಈ ಅಧಿಕರಣದಲ್ಲಿ ನೇರವಾಗಿ ವಿಷಯವಾಕ್ಯವನ್ನು ಹೇಳಿರುವುದಿಲ್ಲ. ಮುಂದಿನ ಜನ್ಮಾದ್ಯಧಿಕರಣದಲ್ಲಿ 'ತದ್ ಬ್ರಹ್ಮ ಇತ್ಯಾದಿ ಬ್ರಹ್ಮಶಬ್ದಃ ಜೀವವಿಷಯೋ ವಾ ವಿಷ್ಣುವಿಷಯೋ ವಾ' ಎಂಬುದಾಗಿ ಹೇಳಿರುತ್ತಾರೆ. ಅದೇ ರೀತಿಯಾಗಿ ಈ ಅಧಿಕರಣದಲ್ಲೂ ಕೂಡ 'ತದ್ವಿಜಿಜ್ಞಾಸಸ್ವೇತಿ ಶ್ರುತ್ಯುಕ್ತಜಿಜ್ಞಾಸಾ ಕರ್ತವ್ಯಾ ನ ವಾ' ಎಂಬುದಾಗಿ ಸ್ಪಷ್ಟವಾಗಿ ವಿಷಯವಾಕ್ಯವನ್ನು ಉಲ್ಲೇಖ ಮಾಡಿ ಸಂದೇಹವನ್ನು ತೋರಿಸ-ಬಹುದಿತ್ತು. ಆದರೆ ಹೀಗೆ ಸಂದೇಹವನ್ನು ಈ ಅಧಿಕರಣದಲ್ಲಿ ತೋರಿಸಿರುವುದಿಲ್ಲ. 'ಜಿಜ್ಞಾಸಾ ಕರ್ತವ್ಯಾ ನ ವಾ' ಎಂದಷ್ಟೇ ಸಂದೇಹವನ್ನು ತೋರಿಸಿದ್ದಾರೆ. ಅನ್ಯತರಕೋಟಿಯನ್ನು ಶ್ರುತಿಯು ನಿರ್ಣಯ ಮಾಡಿದೆ. ಆದ್ದರಿಂದ ವಿಶೇಷದರ್ಶನವು ಇರುವುದರಿಂದ ಸಂಶಯವು ಹೇಗೆ ಬರುತ್ತದೆ ಎಂಬುದಾಗಿ ಪ್ರಶ್ನಿಸಿಕೊಂಡು ಶ್ರುತ್ಯರ್ಥವು ಇನ್ನೂ ಸಹ ನಿರ್ಣಯವಾಗಿರುವುದಿಲ್ಲ. ಆದ್ದರಿಂದ ವಿಶೇಷದರ್ಶನವಾಗಿಲ್ಲ ಹೀಗೆ ಹೇಳುವ ಮೂಲಕ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬುದು ಈ ಅಧಿಕರಣದ ವಿಷಯವಾಕ್ಯವಾಗಿದೆ ಎಂಬುದಾಗಿ ಪರಂಪರೆಯಿಂದ ಹೇಳಿದ್ದಾರೆ. ನೇರವಾಗಿ ವಿಷಯವಾಕ್ಯವನ್ನು ಏಕೆ ಹೇಳಲಿಲ್ಲ?

ಸಮಾಧಾನ – ಪರಂಪರೆಯಿಂದ ವಿಷಯವಾಕ್ಯವನ್ನು ಉಲ್ಲೇಖ ಮಾಡುವುದಕ್ಕೆ ಪ್ರಬಲವಾದ ಕಾರಣವಿದೆ. ಜಿಜ್ಞಾಸಾ ಕರ್ತವ್ಯಾ ನ ವಾ? ಎಂಬ ಸಂಶಯವು ಪರಿಹಾರವಾದರೆ ಶಾಸ್ತ್ರವು ಆರಂಭಣೀ-ಯವೋ ಅಲ್ಲವೋ? ಎಂಬ ಸಂಶಯವು ಪರಿಹಾರವಾಗುತ್ತದೆ. ಕೇವಲ ಬ್ರಹ್ಮಜಿಜ್ಞಾಸೆಯ ಕರ್ತವ್ಯತ್ವ-ದಲ್ಲಿ ಪರ್ಯವಸಾನ ಮಾಡುವುದಷ್ಟೇ ಉದ್ದೇಶವಾಗಿರುವುದಿಲ್ಲ. ಶಾಸ್ತ್ರಾರಂಭಣೀಯತ್ವದಲ್ಲಿ

ಪರ್ಯವಸಾನವಾಗುವುದು ಮುಖ್ಯ ಉದ್ದೇಶವಾಗಿದೆ. ಆದ್ದರಿಂದ 'ಶಾಸ್ತ್ರಮಾರಂಭಣೀಯಂ ವಾ ನ ವಾ?' ಎಂಬ ಸಂಶಯವನ್ನು ಮೊದಲು ತೋರಿಸಿ, 'ತದರ್ಥಂ ಬ್ರಹ್ಮಜಿಜ್ಞಾಸಾ ಕರ್ತವ್ಯಾ ನ ವಾ?' ಎಂಬ ಸಂಶಯವನ್ನು ತೋರಿಸಿದ್ದಾರೆ. ಆದ್ದರಿಂದ ಬೇರೆ ಅಧಿಕರಣಗಳಿಗೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆ. ಉಳಿದ ಅಧಿಕರಣಗಳಲ್ಲಿ ಆಯಾ ವಿಷಯವಾಕ್ಯಗಳ ವಿಚಾರದಲ್ಲೇ ಅಧಿಕರಣದ ಸಿದ್ಧಾಂತವು ಪರ್ಯವಸಾನವಾಗುತ್ತದೆ. ಆದರೆ ಈ ಜಿಜ್ಞಾಸಾಧಿಕರಣದಲ್ಲಿ ಹಾಗಿರುವುದಿಲ್ಲ. ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬ ಶ್ರುತ್ಯರ್ಥವನ್ನಷ್ಟೇ ಇಲ್ಲಿ ವಿಚಾರ ಮಾಡುತ್ತಿಲ್ಲ. ಈ ಶ್ರುತಿಯಲ್ಲಿ ಹೇಳಲ್ಪಟ್ಟ ಜಿಜ್ಞಾಸೆಯ ಕರ್ತವ್ಯತ್ವವನ್ನು ಸಾಧಿಸುವುದರಲ್ಲಿ ಮಾತ್ರ ಪರ್ಯವಸಾನವನ್ನು ಮಾಡದೇ ಶಾಸ್ತ್ರಪ್ರವೃತ್ತ್ಯಾದಿತವಾದ ನ್ಯಾಯಕರಣಿಕವಾದ ಜಿಜ್ಞಾಸೆಯ ಕರ್ತವ್ಯತ್ವವನ್ನು ಸಮರ್ಥನೆ ಮಾಡಿ ತನ್ಮೂಲಕ ಶಾಸ್ತ್ರಾರಂಭಣೀಯತ್ವಪ್ರತಿಪಾದಕತ್ವವನ್ನು ಸಮರ್ಥನೆ ಮಾಡಬೇಕಾಗಿದೆ. ಆದ್ದರಿಂದ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ವಾಕ್ಯವನ್ನು ನೇರವಾಗಿ ವಿಷಯವಾಕ್ಯವನ್ನಾಗಿ ಉಲ್ಲೇಖ ಮಾಡಿರುವುದಿಲ್ಲ.

ವಿಷಯ ಹಾಗೂ ಸಂಶಯಗಳು ಸಿದ್ಧವಾದ ಮೇಲೆ ಪೂರ್ವಪಕ್ಷವನ್ನು ಮಾಡಲು ಪ್ರಾರಂಭಿಸುತ್ತಿದ್ದಾರೆ. ವಿಷಯ ಹಾಗೂ ಸಂಶಯಗಳು ಸಿದ್ಧವಾಗದೇ ಇದ್ದರೆ ಪೂರ್ವಪಕ್ಷವನ್ನು ಮಾಡಲು ಸಾಧ್ಯವಾಗುವುದಿಲ್ಲ. ವಿಪರೀತನ್ಯಾಯಾನುಸಂಧಾನವೇ ಪೂರ್ವಪಕ್ಷ ಎಂದು ಕರೆಸಿಕೊಳ್ಳುತ್ತದೆ. ನ್ಯಾಯಾನುಸಂಧಾನವು ಆಗಬೇಕೆಂದರೆ ಸಂದಿಗ್ಧವಾಗಿರಬೇಕು. 'ಸಂದಿಗ್ಧೇऽರ್ಥೇ ನ್ಯಾಯಃ ಪ್ರವರ್ತತೇ' ಎಂಬ ನಿಯಮದಂತೆ ವಿಷಯ ಹಾಗೂ ಸಂಶಯಗಳಿಲ್ಲದೇ ವಿಪರೀತನ್ಯಾಯವು ಪ್ರವೃತ್ತವಾಗುವುದೇ ಇಲ್ಲ. ಈಗ ವಿಷಯ ಹಾಗೂ ಸಂಶಯಗಳು ಸಿದ್ಧವಾಗಿರುವುದರಿಂದ ಪೂರ್ವಪಕ್ಷವನ್ನು ಮಾಡಬಹುದು. 'ಸಂದಿಗ್ಧೇऽರ್ಥೇ ನ್ಯಾಯಃ ಪ್ರವರ್ತತೇ' ಎಂಬ ನ್ಯಾಯದ ವಿರೋಧವು ಇರುವುದಿಲ್ಲ.

## ಹೇತುಶರೀರದಲ್ಲಿ ಅನುಬಂಧಗ್ರಹಣವೇಕೆ?

ವಾಕ್ಯಾರ್ಥಚಂದ್ರಿಕಾ– ತದ್ವಿದ್ಯಾಪ್ರಾಮಾಣ್ಯಶಾಸ್ತ್ರಾನಾರಂಭಣೀಯತ್ವಪ್ರಾಪ್ತ್ಯಪೇಕ್ಷಯಾ ತಾವಚ್ಛಬ್ದಃ । ಯದ್ವಾ ಸಿದ್ಧಾಂತಾಪೇಕ್ಷಯಾ ತಾವಚ್ಛಬ್ದ ಇತಿ ಧ್ಯೇಯಮ್ । ವಿಷಯೇತಿ ॥ ತತ್ರ ವಿಷಯಾದೀನಾಂ ವೈಧುರ್ಯಂ ಪ್ರತ್ಯೇಕಮೇವ ಹೇತುರ್ನ ತು ಮಿಲಿತಮ್ । ಪ್ರತ್ಯೇಕಂ ವ್ಯಭಿಚಾರಾಭಾವಾದಿತಿ ದ್ರಷ್ಟವ್ಯಮ್ । ಅನುಬಂಧಗ್ರಹಣಂ ಚ ಯತ್ರ ಕರ್ತವ್ಯತಾ ತತ್ರ ವಿಷಯಾದಿಕಮನುಬದ್ಧ್ಯತ ಏವ ಇತಿ ವ್ಯುತ್ಪತ್ತ್ಯಾ ऽನುಬಂಧಶಬ್ದಸ್ಯ ತತ್ರ ಪ್ರಸಿದ್ಧಿಸೂಚನದ್ವಾರಾ ವಿಷಯಾದಿಮತ್ತ್ವಸ್ಯ ಕರ್ತವ್ಯತಾವ್ಯಾಪಕತ್ವಸೂಚನೇನ ವಿಪಕ್ಷೇ ಬಾಧಕತ್ವಂ ಸೂಚಯಿತುಂ ನ ತು

ಹೇತ್ವಂತರ್ಗತಮ್ । ಅನುಬಂಧಶಬ್ದಾರ್ಥಮೇವ ವಿಶದಯನ್ ಕೃಷ್ಯಾದಿಕಮತ್ರ ವ್ಯತಿರೇಕದೃಷ್ಟಾಂತ ಇತಿ ಸೂಚಯತಿ – ಕರ್ತವ್ಯತೇತ್ಯಾದಿನಾ ॥

ಜಿಜ್ಞಾಸಾಕರ್ತವ್ಯತ್ವವನ್ನು ವಿಧಾನಮಾಡುವ ವಾಕ್ಯಕ್ಕೆ ಅಪ್ರಾಮಾಣ್ಯವು ಬರುವ ಮೂಲಕ ಶಾಸ್ತ್ರಕ್ಕೆ ಅನಾರಂಭಣೀಯತ್ವವು ಪ್ರಾಪ್ತವಾಗುತ್ತದೆ. ಇದನ್ನು ವಿವಕ್ಷಿಸಿ 'ತಾವತ್' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಅಥವಾ ಮುಂದೆ ಸಿದ್ಧಾಂತಪಕ್ಷವಿರುವುದರಿಂದ ಅದನ್ನು ವಿವಕ್ಷಿಸಿಯೂ 'ತಾವತ್' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು.

'ವಿಷಯಪ್ರಯೋಜಸಂಬಂಧಾಧಿಕಾರಿಲಕ್ಷಣಾನುಬಂಧವಿಧುರತ್ವಾತ್' – ಇಲ್ಲಿ ವಿಷಯಾದಿಗಳ ವೈಧುರ್ಯವನ್ನು ಪ್ರತ್ಯೇಕ ಹೇತುವನ್ನಾಗಿ ಪರಿಗಣಿಸಬೇಕು. ಮಿಲಿತವಾದದ್ದನ್ನು ಹೇತುವನ್ನಾಗಿ ಪರಿಗಣಿಸಬಾರದು. ಪ್ರತ್ಯೇಕವಾದ ವಿಷಯಾಭಾವಾದಿಗಳಿಗೆ ವ್ಯಭಿಚಾರದೋಷವು ಇಲ್ಲದೇ ಇರುವುದ-ರಿಂದ ಮಿಲಿತವಾದದ್ದನ್ನು ಹೇತುವೆನ್ನಲು ಕಾರಣವು ಇರುವುದಿಲ್ಲ.

ಹೇತುವಿನಲ್ಲಿ ಅನುಬಂಧಗ್ರಹಣವನ್ನು ಮಾಡಿದ್ದಾರೆ. ಏಕೆಂದರೆ ಎಲ್ಲಿ ಕರ್ತವ್ಯತ್ವವಿರುತ್ತದೋ ಅಲ್ಲಿ ವಿಷಯಾದಿಗಳು ಅನುಬದ್ಧವಾಗಿರುತ್ತವೆ. ಅರ್ಥಾತ್ ಸಂಬಂಧವನ್ನು ಹೊಂದಿರುತ್ತವೆ. ಆದ್ದರಿಂದ ಅನುಬಂಧಶಬ್ದಕ್ಕೆ 'ಅನುಬಧ್ಯತೇ ಏವ' ಎಂಬ ವ್ಯುತ್ಪತ್ತಿಯಿಂದ ವಿಷಯಾದಿಗಳಲ್ಲಿ ಪ್ರಸಿದ್ಧಿಯು ಇರುತ್ತದೆ. ಇದನ್ನು ಸೂಚಿಸುವ ಮೂಲಕ ವಿಷಯಾದಿಮತ್ತ್ವವು ಕರ್ತವ್ಯತ್ವಕ್ಕೆ ವ್ಯಾಪಕವಾಗಿದೆ ಎಂದು ಸೂಚಿಸಿದ್ದಾರೆ. ಇದರಿಂದ ವಿಪಕ್ಷೇ ಬಾಧಕತರ್ಕವನ್ನು ಸೂಚಿಸಿದಂತಾಯಿತು ಹೊರತು ಹೇತುಶರೀರದಲ್ಲಿ ಅನುಬಂಧವು ಅಂತರ್ಗತವಾಗಿದೆಯೆಂದು ತಿಳಿಯಬಾರದು. ಅನುಬಂಧಶಬ್ದದ ಅರ್ಥವನ್ನೇ ಸ್ಪಷ್ಟಪಡಿಸುತ್ತಾ ಕೃಷ್ಯಾದಿ-ಗಳು ಇಲ್ಲಿ ವ್ಯತಿರೇಕದೃಷ್ಟಾಂತವಾಗಿವೆ ಎಂಬುದನ್ನು ''ಕರ್ತವ್ಯತಾ'' ಇತ್ಯಾದಿ ಗ್ರಂಥದಿಂದ ಸೂಚಿಸುತ್ತಿ-ದ್ದಾರೆ.

ವಿವರಣೆ – ಗ್ರಂಥದಲ್ಲಿ 'ತತ್ರ ತಾವತ್ ಜಿಜ್ಞಾಸಾ ಕರ್ತವ್ಯೇತಿ ಪ್ರಾಪ್ತಮ್' ಎಂಬುದಾಗಿ ಹೇಳಿದ್ದಾರೆ. ಇಲ್ಲಿ ತಾವತ್ ಎಂಬ ಪದವನ್ನು ಏಕೆ ಪ್ರಯೋಗಿಸಿದ್ದಾರೆ ಎಂದರೆ 'ಜಿಜ್ಞಾಸಾ ನ ಕರ್ತವ್ಯಾ' ಎಂಬುದಾಗಿ ಮೊದಲು ಪೂರ್ವಪಕ್ಷ ಮಾಡಲಾಗುತ್ತಿದೆ. ಮುಂದೆ ಜಿಜ್ಞಾಸಾವಿಧಿಯು ಅಪ್ರಮಾಣ-ವೆಂದು ಪೂರ್ವಪಕ್ಷ ಮಾಡಲಾಗುತ್ತದೆ. ಅನಂತರ ಶಾಸ್ತ್ರವು ಅನಾರಂಭಣೀಯವೆಂದು ಪೂರ್ವಪಕ್ಷ ಮಾಡಲಾಗುತ್ತದೆ. ಉಳಿದ ವಿಚಾರವನ್ನು ಆಮೇಲೆ ಮಾಡುತ್ತಾರೆ. ಮೊದಲು ಜಿಜ್ಞಾಸೆಯು ಕರ್ತವ್ಯವಲ್ಲ ಎಂಬುದಾಗಿ ತಿಳಿಯಬೇಕೆಂದು ಹೇಳಲು 'ತಾವತ್' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಅಥವಾ

ಮುಂದೆ ಸಿದ್ಧಾಂತವನ್ನು ಮಾಡುತ್ತೇವೆಂಬುದನ್ನು ಉದ್ದೇಶ ಮಾಡಿಕೊಂಡು ತಾವತ್ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ.

'ಜಿಜ್ಞಾಸಾ ನ ಕರ್ತವ್ಯಾ ವಿಷಯಾಭಾವಾತ್' 'ಜಿಜ್ಞಾಸಾ ನ ಕರ್ತವ್ಯಾ ಪ್ರಯೋಜನಾಭಾವಾತ್' ಇತ್ಯಾದಿ ವಿಷಯಾಭಾವಾದಿ ಹೇತುಗಳಲ್ಲಿ ಅನುಬಂಧಶಬ್ದವನ್ನು ಉಲ್ಲೇಖ ಮಾಡಬೇಕಾಗಿಲ್ಲ. ಆದರೂ ಕೂಡ ಅನುಬಂಧಗ್ರಹಣವನ್ನು ಏಕೆ ಮಾಡಿದ್ದಾರೆಂದರೆ ವಿಪಕ್ಷೇ ಬಾಧಕತರ್ಕವನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು. 'ಅನುಬಧ್ಯತೇ ಏವ = ಸಂಬಧ್ಯತೇ ಏವ' ಎಂಬುದನ್ನು ಸೂಚನೆ ಮಾಡ-ಬೇಕಾಗಿದೆ. ಯಾವ ವ್ಯಾಪಾರದಲ್ಲಿ ಕರ್ತವ್ಯತ್ವವು ಇದ್ದೇ ಇರುತ್ತದೋ ಅಲ್ಲಿ ವಿಷಯಾದಿಗಳು ಇದ್ದೇ ಇರುತ್ತವೆಂದು ತಿಳಿಸುವುದಕ್ಕಾಗಿ ಅನುಬಂಧಗ್ರಹಣವನ್ನು ಮಾಡಿದ್ದಾರೆ. ಹೀಗೆ ಅನುಬಂಧಗ್ರಹಣದಿಂದ ಕರ್ತವ್ಯತ್ವವನ್ನು ಕುರಿತು ವಿಷಯಾದಿಮತ್ತ್ವಕ್ಕೆ ವ್ಯಾಪಕತ್ವವನ್ನು ಸೂಚಿಸಿದಂತಾಯಿತು. ಕರ್ತವ್ಯತ್ವವು ಇದ್ದರೆ ವಿಷಯಾದಿಗಳು ಇದ್ದೇ ಇರುತ್ತವೆ. ಹೀಗೆ ವ್ಯಾಪಕವು ನಿವೃತ್ತವಾದರೆ ವ್ಯಾಪ್ಯವು ನಿವೃತ್ತಿ-ಯಾಗಿಯೇ ಆಗುತ್ತದೆ. ವ್ಯಾಪ್ಯವ್ಯಾಪಕಭಾವವು ಭಂಗವಾದರೆ ಅನುಬಂಧಶಬ್ದದ ಪ್ರಸಿದ್ಧಿಯು ಇಲ್ಲದೇ ಹೋಗಬೇಕಾಗುತ್ತದೆ. 'ಜಿಜ್ಞಾಸಾ ನ ಕರ್ತವ್ಯಾ ವಿಷಯಾದಿವೈಧುರ್ಯಾತ್' ಎಂಬ ಅನುಮಾನದಲ್ಲಿ 'ವಿಷಯಾದಿವೈಧುರ್ಯಮಸ್ತು; ಕರ್ತವ್ಯತ್ವಾಭಾವಃ ಮಾಸ್ತು' ಎಂಬುದಾಗಿ ಅಪ್ರಯೋಜಕತ್ವವನ್ನು ಆಶಂಕಿಸಿದರೆ ವ್ಯಾಪಕವು ಇರುವುದು ಬೇಡ ವ್ಯಾಪ್ಯಮಾತ್ರ ಇರಲಿ ಎಂದು ಆಶಂಕಿಸಿದಂತಾಯಿತು. ವ್ಯಾಪಕವಿಲ್ಲದೇ ವ್ಯಾಪ್ಯವು ಇರುವುದಾದರೆ ಅನುಬಂಧಶಬ್ದವಾಚ್ಯತ್ವವೇ ಇಲ್ಲದೇ ಹೋಗಬೇಕಾಗುತ್ತದೆ. ಆದರೆ ವಿಷಯಾದಿಗಳನ್ನು ಎಲ್ಲರೂ ಕೂಡ ಅನುಬಂಧ ಎಂಬುದಾಗಿ ಕರೆಯುತ್ತಾರೆ. ವ್ಯಾಪಕವಾಗಿ-ರುವದರಿಂದಲೇ ವಿಷಯಾದಿಗಳನ್ನು ಅನುಬಂಧ ಎಂಬುದಾಗಿ ಎಲ್ಲರೂ ಕರೆಯುತ್ತಾರೆ. ಹೀಗೆ ವಿಪಕ್ಷೇ ಬಾಧಕತರ್ಕವನ್ನು ಸೂಚನೆ ಮಾಡುವುದಕ್ಕಾಗಿ ಅನುಬಂಧಗ್ರಹಣವನ್ನು ಗ್ರಂಥದಲ್ಲಿ ಮಾಡಿರುತ್ತಾರೆ.

## ಅಪ್ರಯೋಜಕತ್ವಾಶಂಕೆಗೆ ವಿಪಕ್ಷೇ ಬಾಧಕತರ್ಕವಿದೆ

ವಾಕ್ಯಾರ್ಥಚಂದ್ರಿಕಾ– ಸ್ಯಾದೇತದೇವಂ ಯದಿ ವಿಷಯಾದಿಮತ್ತ್ವಸ್ಯ ಕರ್ತವ್ಯತಾವ್ಯಾಪಕತ್ವಂ ಸ್ಯಾತ್ । ನ ಚೈವಮ್ । ವಿಪಕ್ಷಾಬಾಧಕಾಭಾವೇನ ತದನಿಶ್ಚಯಾದಿತ್ಯತಃ ಕರ್ತವ್ಯತಾಯಾಂ ವಿಷಯಾದಿಮತ್ತ್ವಸ್ಯಾಕಾರಣತ್ವೇಽಪಿ ಕರ್ತವ್ಯಜಿಜ್ಞಾಸಾಂ ಪ್ರತಿ ತತ್ಕಾರಣತ್ವಸ್ಯಾನ್ವಯವ್ಯತಿರೇಕಾಭ್ಯಾಂ ನಿಶ್ಚಿತತ್ವಾದ್ ವಿಷಯಾದ್ಯಭಾವೇಽಪಿ ಕರ್ತವ್ಯತಾಽಂಗೀಕಾರೇ ಕರ್ತವ್ಯಜಿಜ್ಞಾಸಾಯಾಃ ತದ-

ಭಾವೇऽಪಿ ಪ್ರಸಕ್ತ್ಯಾಽಕಾರಣಕಾರ್ಯೋತ್ಪತ್ತಿಪ್ರಸಂಗಸ್ಯೈವ ವಿಪಕ್ಷಬಾಧಕತ್ವಾದ್ ವ್ಯಾಪ್ತಿಸಿದ್ಧಿರಿತ್ಯಭಿ-ಪ್ರೇತ್ಯಾಹ – ವಿಷಯಾದೀತಿ ॥

ನೀವು ಹೇಳಿದ್ದನ್ನು ಅಂಗೀಕರಿಸಬಹುದಿತ್ತು. ಒಂದು ವೇಳೆ ವಿಷಯಾದಿಮತ್ವಕ್ಕೆ ಕರ್ತವ್ಯತ್ವವು ವ್ಯಾಪಕವಾಗಿದ್ದಲ್ಲಿ. ಆದರೆ ಹಾಗಿಲ್ಲ. ವಿಪಕ್ಷದಲ್ಲಿ ಯಾವುದೇ ಬಾಧಕವಿಲ್ಲದ ಕಾರಣ ವ್ಯಾಪ್ಯವ್ಯಾಪಕ-ಭಾವವನ್ನು ನಿಶ್ಚಯಮಾಡಲು ಸಾಧ್ಯವಾಗುವುದಿಲ್ಲ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು – ಕರ್ತವ್ಯತ್ವದಲ್ಲಿ ವಿಷಯಾದಿಮತ್ವಕ್ಕೆ ಕಾರಣತ್ವ-ವು ಇಲ್ಲದಿದ್ದರೂ ಕೂಡ ಕರ್ತವ್ಯವಾದ ಜಿಜ್ಞಾಸೆಗೆ ತತ್ಕಾರಣತ್ವವು ಅನ್ವಯವ್ಯತಿರೇಕಗಳಿಂದ ನಿಶ್ಚಿತ-ವಾಗಿದೆ. ಆದ್ದರಿಂದ ವಿಷಯವಿಲ್ಲದಿದ್ದರೂ ಕೂಡ ಕರ್ತವ್ಯತ್ವವನ್ನು ಅಂಗೀಕಾರ ಮಾಡಿದರೆ ಕರ್ತವ್ಯ-ವಾದ ಜಿಜ್ಞಾಸೆಯು ವಿಷಯವಿಲ್ಲದಿದ್ದರೂ ಕೂಡ ಉಂಟಾಗಬೇಕಾಗುತ್ತದೆ. ಹೀಗೆ ಅಕಾರಣ-ಕಾರ್ಯೋತ್ಪತ್ತಿಪ್ರಸಂಗವೆಂಬ ವಿಪಕ್ಷೇ ಬಾಧಕತರ್ಕವಿರುವ ಕಾರಣ ವ್ಯಾಪ್ತಿಯು ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದ "ವಿಷಯಾದಿ" ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ – ವಿಷಯಾದಿಮತ್ವವು ಕರ್ತವ್ಯತ್ವಕ್ಕೆ ವ್ಯಾಪಕವೆಂದು ಆಗುವುದಾದರೆ ಆಗ ವಿಷಯಾ-ದಿಮತ್ವಾಭಾವದಿಂದ ಕರ್ತವ್ಯತ್ವಾಭಾವವನ್ನು ಸಾಧನೆ ಮಾಡಬಹುದು. ಆದರೆ ಆ ವ್ಯಾಪಕತ್ವವನ್ನೇ ನಾವು ಅಂಗೀಕರಿಸುವುದಿಲ್ಲ. 'ವಿಷಯಾದಿಮತ್ವಂ ಅಸ್ತು; ಕರ್ತವ್ಯತ್ವಂ ಮಾಸ್ತು' ಎಂಬುದಾಗಿ ವ್ಯತಿರೇಕವ್ಯಾಪ್ತಿಯಲ್ಲಿ ಅಪ್ರಯೋಜಕತ್ವಾಶಂಕೆಯು ಬರುತ್ತದೆ. ವಿಪಕ್ಷೇ ಬಾಧಕತರ್ಕವು ಇಲ್ಲದ ಕಾರಣ ವ್ಯಾಪಕತ್ವದ ನಿಶ್ಚಯವೂ ಕೂಡ ಆಗುವುದಿಲ್ಲ.

'ಪರ್ವತಃ ಅಗ್ನಿಮಾನ್ ಧೂಮವತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಿದಾಗ 'ಧೂಮಃ ಅಸ್ತು; ವಹ್ನಿರ್ಮಾಸ್ತು' ಎಂಬುದಾಗಿ ಅಪ್ರಯೋಜಕತ್ವವನ್ನು ಆಶಂಕಿಸಿದರೆ 'ಯದಿ ನಿರಗ್ನಿಕಃ ಸ್ಯಾತ್ ತರ್ಹಿ ನಿರ್ಧೂಮೋऽಪಿ ಸ್ಯಾತ್' ಎಂಬುದಾಗಿ ವಿಪಕ್ಷೇ ಬಾಧಕತರ್ಕವನ್ನು ಹೇಳುತ್ತೇವೆ. ಇಲ್ಲಿಯೂ ಕೂಡ ಅಪ್ರಯೋಜಕತ್ವವನ್ನು ಆಶಂಕಿಸಬಹುದು. 'ನಿರ್ಧೂಮತ್ವಮಸ್ತು; ನಿರಗ್ನಿಕತ್ವಂ ಮಾಸ್ತು' ಹೀಗೆ ಎಲ್ಲಿ ವಿಪಕ್ಷೇ ಬಾಧಕತರ್ಕವಿರುತ್ತದೋ ಅಲ್ಲಿ ಎಲ್ಲೆಡೆಯೂ ಅಪ್ರಯೋಜಕತ್ವವನ್ನು ಆಶಂಕಿಸಬಹುದು. ಆದ್ದರಿಂದ ಅಕಾರಣಕಾರ್ಯೋತ್ಪತ್ತಿಪ್ರಸಂಗವಿದ್ದಾಗ ಸ್ವಕ್ರಿಯಾವಿರೋಧ, ಸ್ವನ್ಯಾಯವಿರೋಧ ಮೊದಲಾದವುಗಳಿದ್ದಾಗ ಪುನಃ ಆಶಂಕೆಯನ್ನು ಮಾಡಬಾರದು. 'ವ್ಯಾಘಾತಾವಧಿರಾಶಂಕಾ ತರ್ಕ-ಶ್ಶಂಕಾವಧಿರ್ಮತಾ' ಎಂಬಂತೆ ವ್ಯಾಘಾತಬರುವ ತನಕ ಆಶಂಕೆಯನ್ನು ಮಾಡಬಹುದು. ವ್ಯಾಘಾತ

ಬಂದ ಮೇಲೆ ಪುನಃ ಆಶಂಕೆಯನ್ನು ಮಾಡಬಾರದು. ಪ್ರಕೃತ ಅಗ್ನಿಯು ಇಲ್ಲದೇ ಇದ್ದಾಗ ಧೂಮವನ್ನು ಅಂಗೀಕಾರ ಮಾಡಿದರೆ ಕಾರಣ ಇಲ್ಲದೇ ಕಾರ್ಯದ ಉತ್ಪತ್ತಿಯನ್ನು ಆಶಂಕಿಸಿದಂತಾಯಿತು. ತೃಪ್ತಿಯ ಉದ್ದೇಶದಿಂದ ಭೋಜನದಲ್ಲಿ ಏಕೆ ಪ್ರವೃತ್ತಿಯನ್ನು ಮಾಡಬೇಕು. ಕಾರ್ಯದ ಉದ್ದೇಶದಿಂದ ಕಾರಣದಲ್ಲಿ ಪ್ರವೃತ್ತಿಯನ್ನು ಮಾಡುತ್ತಾ, ಈಗ ಕಾರಣವಿಲ್ಲದೇ ಕಾರ್ಯವು ಹುಟ್ಟಲಿ ಎಂಬಿದಾಗಿ ಹೇಳಿದರೆ ಸ್ವಕ್ರಿಯಾವಿರೋಧವು ಬರುತ್ತದೆ. ಹೀಗೆ ವ್ಯಾಘಾತದೋಷವನ್ನು ಹೇಳಿದ ಮೇಲೆ ಪುನಃ ಅಪ್ರಯೋಜಕತ್ವವನ್ನು ಆಶಂಕಿಸಲು ಸಾಧ್ಯವಿಲ್ಲ.

ಪ್ರಕೃತ 'ವಿಷಯಾದಿವೈಧುರ್ಯವಿದ್ದರೂ ಕೂಡ ಜಿಜ್ಞಾಸೆಯು ಕರ್ತವ್ಯವಾಗಲಿ' ಎಂಬುದಾಗಿ ಅಪ್ರಯೋಜಕತ್ವವನ್ನು ಆಶಂಕಿಸಿದರೆ ಅಕಾರಣಕಾರ್ಯೋತ್ಪತ್ತಿಪ್ರಸಂಗವೆಂಬ ಬಾಧಕವಿದೆ. ವಾಸ್ತವಿಕವಾಗಿ ಜಿಜ್ಞಾಸಾಕರ್ತವ್ಯತ್ವಕ್ಕೆ ವಿಷಯಾದಿಮತ್ವವು ಕಾರಣವಲ್ಲ. ಆದರೆ ಕರ್ತವ್ಯವಾದ ಜಿಜ್ಞಾಸೆಗೆ ವಿಷಯಾದಿಮತ್ವವು ಕಾರಣವಾಗಿದೆ. ಜಿಜ್ಞಾಸೆಯು ಧರ್ಮಿಯಾಗಿದೆ. ಕರ್ತವ್ಯತ್ವವು ಅದರಲ್ಲಿರುವ ಧರ್ಮವಾಗಿದೆ. ಕರ್ತವ್ಯತ್ವಕ್ಕೆ ವಿಷಯಾದಿಮತ್ವವು ಕಾರಣವಾಗಿಲ್ಲ. ಆದರೆ ಜಿಜ್ಞಾಸಾವನ್ನು ಕುರಿತು ವಿಷಯಾದಿಮತ್ವವು ಕಾರಣವಾಗಿದೆ. ಒಂದು ವೇಳೆ 'ವಿಷಯಾದಿಗಳು ಬೇಡ; ಆದರೆ ಜಿಜ್ಞಾಸೆಯು ಕರ್ತವ್ಯವೇ ಆಗಲಿ' ಎಂದು ಹೇಳುವುದಾದರೆ ಕಾರಣವೇ ಇಲ್ಲದೇ ಜಿಜ್ಞಾಸೆಯನ್ನು ಮಾಡೋಣವೆಂದು ಹೇಳಿದಂತಾಯಿತು. ಹೀಗೆ ಅಕಾರಣಕಾರ್ಯೋತ್ಪತ್ತಿಪ್ರಸಂಗವೆಂಬ ಬಾಧಕವಿದೆ.

ಕರ್ತವ್ಯತ್ವವನ್ನು ಕುರಿತು ವಿಷಯಾದಿಮತ್ವವು ಲಿಂಗವಾಗುತ್ತದೆ ಹೊರತು ಕಾರಣವಾಗುವುದಿಲ್ಲ. ಆದರೆ ಕರ್ತವ್ಯವಾದ ಜಿಜ್ಞಾಸೆಯನ್ನು ಕುರಿತು ವಿಷಯಾದಿಗಳೆಲ್ಲವೂ ಕಾರಣವೇ ಆಗಿರುತ್ತವೆ.

## ಜಿಜ್ಞಾಸಾಗ್ರಹಣವನ್ನೇಕೆ ಮಾಡಿದ್ದಾರೆ?

ವಾಕ್ಯಾರ್ಥಚಂದ್ರಿಕಾ– ಅತ್ರ ಕರ್ತವ್ಯತಾಮಾತ್ರಸ್ಯ ವಿಷಯಾದಿಮತ್ತ್ವವ್ಯಾಪ್ತಾವಪಿ ಪ್ರಕೃತತ್ವಾದ್ ದೃಷ್ಟಾಂತಸೌಲಭ್ಯಾಚ್ಚ ಜಿಜ್ಞಾಸಾಗ್ರಹಣಮ್ । ಅನ್ವಯಸ್ಯ ಸೌಲಭ್ಯಾತ್ ಕೃಷ್ಯಾದಿಗ್ರಹಣೇನ ಸೂಚಿತತ್ವಾಚ್ಚ ವ್ಯತಿರೇಕಮೇವ ಕಾರಣತೋನ್ನಾಹಕತ್ವೇನ ದರ್ಶಯತಿ – ವಿಷಯಾಭಾವಾದಿತಿ ॥ ಅತ್ರ ಪೂರ್ವದ್ವಯೇ ಸ್ವರೂಪೇಣ ನ ಜಿಜ್ಞಾಸ್ಯತ್ವಮ್, ಉತ್ತರದ್ವಯೇ ತು ಸ್ವರೂಪೇಣ ಜಿಜ್ಞಾಸ್ಯತ್ವೇಽಪಿ ಪುರುಷವಿಶೇಷೇಣಾಜಿಜ್ಞಾಸ್ಯತ್ವಮಿತಿ ವಿಶೇಷಸೂಚನಾಯ ಪೂರ್ವತ್ರ ನ ಜಿಜ್ಞಾಸ್ಯತ ಇತ್ಯುಕ್ತ್ವಾ, ಉತ್ತರತ್ರ ನ ಪ್ರವರ್ತತ ಇತ್ಯಾದ್ಯಾಹ ।

ಕೇವಲ ಕರ್ತವ್ಯತ್ವವು ವಿಷಯಾದಿಮತ್ವದಿಂದ ವ್ಯಾಪ್ತವಾಗಿದ್ದರೂ ಕೂಡ ಪ್ರಕೃತವಾಗಿರುವುದರಿಂದ ಜಿಜ್ಞಾಸಾಗ್ರಹಣವನ್ನು ಮಾಡಿದ್ದಾರೆ. ಇದರಿಂದ ದೃಷ್ಟಾಂತವೂ ಕೂಡ ಸುಲಭವಾಗಿ ದೊರೆಯುತ್ತದೆ. ಅನ್ವಯವ್ಯಾಪ್ತಿಯು ಸುಲಭವಾಗಿರುವುದರಿಂದ ಮತ್ತು ಕೃಷ್ಯಾದಿಗ್ರಹಣದಿಂದ ವ್ಯತಿರೇಕವ್ಯಾಪ್ತಿಯನ್ನು ಸೂಚನೆ ಮಾಡಿರುವುದರಿಂದಲೂ ವ್ಯತಿರೇಕವ್ಯಾಪ್ತಿಯನ್ನೇ ಕಾರಣತ್ವವನ್ನು ಉನ್ನಾಹ ಮಾಡುವ ಮೂಲಕ ತೋರಿಸುತ್ತಿದ್ದಾರೆ "ವಿಷಯಾಭಾವಾತ್" ಎಂಬುದಾಗಿ.

ಹಿಂದಿನ ಎರಡು ದೃಷ್ಟಾಂತಗಳಲ್ಲಿ ಸ್ವರೂಪತಃ ಜಿಜ್ಞಾಸ್ಯತ್ವವು ಇರುವುದಿಲ್ಲ. ಮುಂದಿನ ಎರಡು ದೃಷ್ಟಾಂತಗಳಲ್ಲಿ ಸ್ವರೂಪತಃ ಜಿಜ್ಞಾಸ್ಯತ್ವವು ಇದ್ದರೂ ಕೂಡ ಪುರುಷವಿಶೇಷದಿಂದ ಜಿಜ್ಞಾಸ್ಯತ್ವವು ಇರುವುದಿಲ್ಲ. ಹೀಗೆ ವಿಶೇಷವನ್ನು ಸೂಚನೆ ಮಾಡುವುದಕ್ಕಾಗಿ ಹಿಂದೆ 'ನ ಜಿಜ್ಞಾಸ್ಯತಾ' ಎಂಬುದಾಗಿ ಹೇಳಿ ಇಲ್ಲಿ 'ನ ಪ್ರವರ್ತತೇ' ಎಂಬುದಾಗಿ ಹೇಳಿದ್ದಾರೆ.

ವಿವರಣೆ – ಗ್ರಂಥದಲ್ಲಿ ಜಿಜ್ಞಾಸಾಕರ್ತವ್ಯತ್ವಕ್ಕೆ ವಿಷಯಾದಿಗಳು ಕಾರಣವೆಂದು ಹೇಳಬಹುದಿತ್ತು. ಇದನ್ನು ಬಿಟ್ಟು 'ಜಿಜ್ಞಾಸೆಗೆ ಕಾರಣ' ಎಂದು ಏಕೆ ಹೇಳಿದ್ದಾರೆ? ಎಂದರೆ ಕಾರಣ ಹೀಗಿದೆ –

ಯಾವುದೇ ಒಂದು ಕರ್ತವ್ಯತ್ವಕ್ಕೆ ವಿಷಯಾದಿಮತ್ವದಿಂದ ವ್ಯಾಪ್ತಿಯು ಇರುತ್ತದೆ. ಹೀಗಿದ್ದರೂ ಕೂಡ ಕರ್ತವ್ಯತ್ವಕ್ಕೆ ಕಾರಣವೆಂದು ಹೇಳದೇ ಜಿಜ್ಞಾಸೆಗೆ ಕಾರಣವೆಂದು ಏಕೆ ಹೇಳಿದ್ದಾರೆಂದರೆ ಜಿಜ್ಞಾಸೆಯೇ ಪ್ರಕೃತವಾಗಿರುವುದರಿಂದ ಅದನ್ನೇ ಗ್ರಹಣ ಮಾಡಿದ್ದಾರೆ. ಮತ್ತು ಮುಂದೆ ಹೇಳುವ ದೃಷ್ಟಾಂತಗಳಿಗೆ ಅನುಕೂಲವಾಗುವುದಕ್ಕಾಗಿಯೂ ಜಿಜ್ಞಾಸೆಯನ್ನು ಕಾರಣವೆಂದೇ ಹೇಳಿದ್ದಾರೆ.

'ವಿಷಯಾದಿಮತ್ವವು ಜಿಜ್ಞಾಸೆಗೆ ಕಾರಣವಾಗಿದೆ' ಎಂಬುದನ್ನು ಸಮರ್ಥಿಸಲು ಅನ್ವಯವ್ಯತಿರೇಕವ್ಯಾಪ್ತಿಯನ್ನು ಹೇಳಬೇಕು. ವಿಷಯಾದಿಗಳಿದ್ದರೆ ಜಿಜ್ಞಾಸೆಯು ಉಂಟಾಗುತ್ತದೆ. ವಿಷಯಾದಿಗಳು ಇಲ್ಲದಿದ್ದರೆ ಜಿಜ್ಞಾಸೆಯು ಕೂಡುವುದಿಲ್ಲ. ಅನ್ವಯವ್ಯಾಪ್ತಿಯು ಸುಲಭವಾಗಿರುವುದರಿಂದ ವ್ಯತಿರೇಕವ್ಯಾಪ್ತಿಯನ್ನೇ ಗ್ರಂಥದಲ್ಲಿ ತೋರಿಸಿದ್ದಾರೆ.

## ಜಿಜ್ಞಾಸಾಶಬ್ದಕ್ಕೆ ಜ್ಞಾನೇಚ್ಛೆ ಎಂದರ್ಥವಲ್ಲ

ಯಾದುಪತ್ಯ – ನನು ಜಿಜ್ಞಾಸಾಯಾಃ ಕರ್ತವ್ಯತ್ವಮೇವ ವಿಚಾರಣೀಯಂ ನ ಶಾಸ್ತ್ರಾರಂಭಣೀಯತ್ವಮ್ । ತಸ್ಯ ತದನ್ವಯವ್ಯತಿರೇಕಾನುವಿಧಾಯಿತ್ವಾತ್ ಇತ್ಯಭಿಪ್ರೇತ್ಯ ಶಂಕತೇ – ನನ್ವಿದಮಿತಿ ॥ ನನು ಸನ್ನಂತಜಿಜ್ಞಾಸಾಶಬ್ದವಾಚ್ಯೇಚ್ಛಾಯಾಂ ಕಥಂ ನ್ಯಾಯೋऽಂಗಭೂತ ಇತ್ಯತ ಉಕ್ತಮ್

– ವಿಚಾರಮೀಮಾಂಸಾಮನನಪರಪರ್ಯಾಯನಾಮಕೇತಿ ॥ ತತಶ್ಚ ಜಿಜ್ಞಾಸಾಶಬ್ದಸ್ಯ ವಿಚಾರಾದಿಶಬ್ದಾದಪರಪರ್ಯಾಯತ್ವಾನ್ನೇಚ್ಛಾಪರತ್ವಮತ್ರೇತಿ ಭಾವಃ।

ಜಿಜ್ಞಾಸೆಯ ಕರ್ತವ್ಯತ್ವವನ್ನಷ್ಟೇ ವಿಚಾರ ಮಾಡಬೇಕು. ಶಾಸ್ತ್ರವು ಆರಂಭಣೀಯವೋ ಅಲ್ಲವೋ ಎಂಬುದರ ಬಗ್ಗೆ ವಿಚಾರ ಮಾಡುವ ಆವಶ್ಯಕತೆಯು ಇರುವುದಿಲ್ಲ. ಏಕೆಂದರೆ, ಜಿಜ್ಞಾಸೆಯು ಕರ್ತವ್ಯವೆಂದಾದರೆ ಶಾಸ್ತ್ರವು ಆರಂಭಣೀಯವಾಗುತ್ತದೆ; ಜಿಜ್ಞಾಸೆಯು ಕರ್ತವ್ಯವಲ್ಲವೆಂಮ ಹೇಳಿದರೆ ಶಾಸ್ತ್ರವು ಆರಂಭಣೀಯವಾಗುವುದಿಲ್ಲ? ಈ ಆಶಂಕೆಯನ್ನು ''ನನ್ವಿದಂ'' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

ಜಿಜ್ಞಾಸಾ ಎಂಬ ಶಬ್ದವು ಸನ್ನಂತವಾದ ಜ್ಞಾ ಧಾತುವಿನಿಂದ ನಿಷ್ಪನ್ನವಾಗಿದೆ. ಜ್ಞಾನೇಚ್ಛೆಯು ಈ ಶಬ್ದದಿಂದ ಪ್ರತಿಪಾದ್ಯವಾಗಿದೆ. ಜ್ಞಾನೇಚ್ಛೆಗೆ ನ್ಯಾಯವು ಹೇಗೆ ತಾನೆ ಅಂಗವಾಗುತ್ತದೆ? ಈ ಪ್ರಶ್ನೆಗೆ ''ವಿಚಾರಮೀಮಾಂಸಾಮನನಾಪರಪರ್ಯಾಯನಾಮಕ'' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಆದ್ದರಿಂದ ಜಿಜ್ಞಾಸಾ ಎಂಬ ಶಬ್ದವು ವಿಚಾರ ಮೊದಲಾದ ಶಬ್ದಗಳ ಪರ್ಯಾಯವಾಗಿದೆ. ವಿಚಾರಾದಿ ಶಬ್ದಗಳಂತೆ ಜಿಜ್ಞಾಸಾಶಬ್ದವೂ ಕೂಡ ರೂಢವಾದ ಪದವೇ ಆಗಿದೆ. ಆದ್ದರಿಂದ ಜ್ಞಾನೇಚ್ಛೆ ಎಂಬರ್ಥವನ್ನು ಇಲ್ಲಿ ವಿವಕ್ಷಿಸುವುದೇ ಇಲ್ಲ.

## ವಿಚಾರ ಎಂದರೆ ನ್ಯಾಯಕರಣಕವಾದ ಅನುಸಂಧಾನ ಎಂದರ್ಥ

ಯಾದುಪತ್ಯ – ಸೂತ್ರನಿಬದ್ಧನ್ಯಾಯಾನಾಂ ಕ್ವಚಿದ್ ವಿಚಾರಾಂಗತ್ವಂ ಕ್ವಚಿತ್ ಮೀಮಾಂಸಾಂಗತ್ವಂ ಕ್ವಚಿನ್ಮನನಾಂಗತ್ವಂ ಶಾಸ್ತ್ರೇ ವ್ಯವಹೃತಮ್ । ಅತಸ್ತಸ್ಯ ಸರ್ವಸ್ಯ ಸಂಗ್ರಹಾಯ 'ವಿಚಾರ' ಇತ್ಯಾದ್ಯುಕ್ತಮ್ । ನನು ವಿಚಾರಾದಿರಪಿ ನ್ಯಾಯ ಏವಾತಸ್ತತ್ರ ಕಥಂ ನ್ಯಾಯೋಽಂಗಭೂತ ಆತ್ಮಾಶ್ರಯತ್ವಪ್ರಸಂಗಾದಿತ್ಯತ ಉಕ್ತಮ್ – ಯುಕ್ತ್ಯನುಸಂಧಾನಾತ್ಮಕೇತಿ ॥ 'ಯುಕ್ತಿಭಿರನುಸಂಧಾನಂ ಪೂರ್ವೋತ್ತರಪಕ್ಷಬಲಾಬಲಚಿಂತನಂ ತದಾತ್ಮಕೇ'ತ್ಯರ್ಥಃ । ಯಥಾ ಆಹುಃ – 'ಪೂರ್ವೋತ್ತರಪಕ್ಷಬಲಾಬಲಚಿಂತಾ ವಿಚಾರಃ' ಇತಿ । ತಥಾ ಚ ವಿಚಾರಶಬ್ದೋಽತ್ರ ನ ನ್ಯಾಯಪರ ಇತಿ ಭಾವಃ।

ಸೂತ್ರನಿಬದ್ಧವಾದ ನ್ಯಾಯಗಳು ಕೆಲವೆಡೆ ವಿಚಾರಕ್ಕೆ ಅಂಗವಾಗಿವೆ. ಕೆಲವೆಡೆ ಮೀಮಾಂಸಕ್ಕೆ ಅಂಗವಾಗಿವೆ. ಕೆಲವೆಡೆ ಮನನಕ್ಕೆ ಅಂಗವಾಗಿವೆ ಎಂಬುದಾಗಿ ಶಾಸ್ತ್ರದಲ್ಲಿ ವ್ಯವಹರಿಸಲಾಗುತ್ತದೆ. ಹಾಗಿದ್ದರೆ ನ್ಯಾಯಗಳು ಯಾವುದಕ್ಕೆ ಅಂಗವಾಗಿವೆ? ಎಂದರೆ ಇವೆಲ್ಲವನ್ನೂ ಸಂಗ್ರಹ ಮಾಡುವುದಕ್ಕಾಗಿ ''ವಿಚಾರ'' ಇತ್ಯಾದಿಯಾಗಿ ಹೇಳಿದ್ದಾರೆ.

ವಿಚಾರಾದಿಗಳೂ ಕೂಡ ನ್ಯಾಯವೇ ಆಗಿವೆ. ಆ ವಿಚಾರಕ್ಕೆ ನ್ಯಾಯವು ಅಂಗವೆಂದು ಹೇಳಿದರೆ ತನಗೆ ತಾನೇ ಅಂಗವೆಂದು ಹೇಳಿದಂತಾಗುವುದರಿಂದ ಆತ್ಮಾಶ್ರಯದೋಷವು ಬರುತ್ತದಲ್ಲವೇ? ಈ ಪ್ರಶ್ನೆಗೆ ''ಯುಕ್ತ್ಯನುಸಂಧಾನಾತ್ಮಕ'' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಯುಕ್ತ್ಯನುಸಂಧಾನ' ಎಂಬುದಕ್ಕೆ 'ಯುಕ್ತೀನಾಂ ಅನುಸಂಧಾನಂ' ಎಂದರ್ಥವಲ್ಲ. ಯುಕ್ತಿಭಿರನುಸಂಧಾನಂ ಎಂದರ್ಥ. ಅನುಸಂಧಾನ ಎಂಬ ಶಬ್ದಕ್ಕೆ ಪೂರ್ವಪಕ್ಷ ಹಾಗೂ ಉತ್ತರಪಕ್ಷಗಳ ಬಲಾಬಲಚಿಂತನೆಯನ್ನು ಯುಕ್ತಿಗಳಿಂದ ಮಾಡುವುದು ಎಂದರ್ಥ. ಇದನ್ನೇ 'ಪೂರ್ವೋತ್ತರಪಕ್ಷಬಲಾಬಲಚಿಂತಾ ವಿಚಾರಃ' ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ವಿಚಾರಶಬ್ದಕ್ಕೆ ನ್ಯಾಯ ಎಂದರ್ಥವಲ್ಲ. ನ್ಯಾಯಕರಣಕವಾದ ಅನುಸಂಧಾನವೇ ವಿಚಾರ ಎಂದು ಕರೆಸಿಕೊಳ್ಳುತ್ತದೆ.

## ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯನ್ನು ಮೊದಲೇ ನಿಶ್ಚಯಿಸಲಾಗದು

ಯಾದುಪತ್ಯ – ಅಸ್ಮಾಭಿರಪಿ ಜಿಜ್ಞಾಸಾಕರ್ತವ್ಯತೈವ ವಿಚಾರ್ಯತೇ । ಆರಂಭಣೀಯತ್ವವಿಚಾರಸ್ತು ತತ್ಫಲಭೂತೋಽತಃಪೂರ್ವಂ ಪ್ರದರ್ಶಿತ ಇತ್ಯಾಶಯವಾನಾಹ – ಸತ್ಯಮಿತಿ ॥ ಸಂಶಯಾಸ್ಪದತ್ವಾದಿತಿ ॥ ವಕ್ಷ್ಯಮಾಣರೀತ್ಯಾ ವಿಷಯಾದ್ಯಭಾವೇನ ಉಪಪತ್ತಿವಿರೋಧಾತ್ । 'ತದ್ ವಿಜಿಜ್ಞಾಸಸ್ವ' ಇತ್ಯಾದಿಕಂ ನ ಪ್ರಮಾಣತಯಾ ನಿಶ್ಚೇತುಂ ಶಕ್ಯಮಿತ್ಯಾಶಯಃ । ನಿಶ್ಚಿತಕಾರ್ಯಕಾರಣಭಾವಸೂಚಕತ್ವಾನ್ನಾತ್ರ ಅಪ್ರಯೋಜಕತಾಶಂಕಾ ಇತ್ಯಾಹ – ವಿಷಯಾದಿಸದ್ಭಾವ ಇತಿ ॥ ವಿಷಯಾದಿಸದ್ಭಾವಸ್ಯ ಜಿಜ್ಞಾಸಾಕಾರಣತ್ವಮುಪಪಾದಯತಿ – ವಿಷಯಶೂನ್ಯತ್ವಾದ್ಧಿ ಇತ್ಯಾದಿನಾ ॥ ವಾತ್ಸ್ಯಾಯನೇ = ಕೋಕಶಾಸ್ತ್ರೇ ।

ನಾವೂ ಸಹ ಜಿಜ್ಞಾಸಾಕರ್ತವ್ಯತ್ವವನ್ನೇ ವಿಚಾರ ಮಾಡುತ್ತಿದ್ದೇವೆ. ಆರಂಭಣೀಯತ್ವದ ವಿಚಾರವು ಇದರ ಫಲವಾಗಿದೆ. ಆದ್ದರಿಂದಲೇ ಮೊದಲು ತೋರಿಸಿದ್ದೇವೆ. ಇದನ್ನು ''ಸತ್ಯಮ್'' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

''ಸಂಶಯಾಸ್ಪದತ್ವಾತ್'' – ಮುಂದೆ ಹೇಳುವ ಪ್ರಕಾರ ವಿಷಯಾದ್ಯಭಾವದಿಂದ ಉಪಪತ್ತಿವಿರೋಧವಿರುವ ಕಾರಣ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯವು ಪ್ರಮಾಣವೆಂದು ನಿಶ್ಚಯಿಸಲು ಸಾಧ್ಯವಿಲ್ಲ. ನಿಶ್ಚಿತವಾದ ಕಾರ್ಯಕಾರಣಭಾವಕ್ಕೆ ವಿಘಟಕವಾಗಿರುವುದರಿಂದ ಅಪ್ರಯೋಜಕತ್ವಾ ಶಂಕೆಯನ್ನು ಮಾಡಬಾರದೆಂಬುದಾಗಿ ''ವಿಷಯಾದಿಸದ್ಭಾವೇ'' ಇತ್ಯಾದಿ ವಾಕ್ಯವು ಹೇಳುತ್ತಿದೆ. ವಿಷಯಾದಿಸದ್ಭಾವಕ್ಕೆ

ಜಿಜ್ಞಾಸಾಕಾರಣತ್ವವನ್ನು "ವಿಷಯಶೂನ್ಯತ್ವಾತ್" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ವಾತ್ಸ್ಯಾಯನೇ ಎಂದರೆ ಕಾಮಶಾಸ್ತ್ರದಲ್ಲಿ ಎಂದರ್ಥ.

ವಿವರಣೆ – ನಮ್ಮ ಸಿದ್ಧಾಂತದಲ್ಲೂ ಕೂಡ ಜಿಜ್ಞಾಸೆಯು ಕರ್ತವ್ಯವೋ ಅಲ್ಲವೋ ಎಂಬುದಾಗಿ ವಿಚಾರ ಮಾಡುತ್ತೇವೆ. ಹಾಗಾದರೆ ಶಾಸ್ತ್ರವು ಆರಂಭಣೀಯವೋ ಅಲ್ಲವೋ ಎಂಬ ವಿಚಾರವನ್ನು ಏಕೆ ತೋರಿಸುತ್ತೀರಿ? ಎಂದರೆ ಜಿಜ್ಞಾಸಾಕರ್ತವ್ಯತ್ವದ ವಿಚಾರದಿಂದ ದೊರೆಯುವ ಫಲವೆಂಬ ಉದ್ದೇಶದಿಂದ ಶಾಸ್ತ್ರಾರಂಭಣೀಯತ್ವದ ವಿಚಾರವನ್ನು ತೋರಿಸಿದ್ದೇವೆ. ಆದ್ದರಿಂದ ಮೊದಲೇ ಈ ಸಂಶಯವನ್ನು ತೋರಿಸಿದ್ದೇವೆ ಎಂಬುದಾಗಿ "ಸತ್ಯಮ್" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯಲ್ಲಿ ಜಿಜ್ಞಾಸೆಯ ವಿಧಿಯು ಕಂಡಿದ್ದರೂ ಕೂಡ ಅದನ್ನು ಪ್ರಮಾಣವೆಂದು ನಿಶ್ಚಯಿಸಲು ಸಾಧ್ಯವಿಲ್ಲ. ಏಕೆಂದರೆ, 'ಜಿಜ್ಞಾಸಾ ನ ಕರ್ತವ್ಯಾ ವಿಷಯಾದ್ಯಭಾವಾತ್' ಎಂಬ ಪ್ರಬಲವಾದ ಉಪಪತ್ತಿಯ ವಿರೋಧವು ಬರುವುದರಿಂದ ಶ್ರುತಿಯು ಪ್ರತೀತಾರ್ಥದಲ್ಲಿ ಪ್ರಮಾಣವಾಗುವುದಿಲ್ಲ. ಅಥವಾ ಪ್ರಮಾಣವೇ ಆಗುವುದಿಲ್ಲ. ಆದ್ದರಿಂದ ಜಿಜ್ಞಾಸಾ ಕರ್ತವ್ಯಾ ನ ವಾ? ಎಂಬ ಸಂದೇಹವು ಬಂದೇ ಬರುತ್ತದೆ.

'ಜಿಜ್ಞಾಸಾ ನ ಕರ್ತವ್ಯಾ ವಿಷಯಾದಿಶೂನ್ಯತ್ವಾತ್' ಎಂಬುದಾಗಿ ಅನುಮಾನವನ್ನು ಮಾಡಿದರೆ 'ವಿಷಯಾದಿಶೂನ್ಯತ್ವಮಸ್ತು ; ಜಿಜ್ಞಾಸಾಯಾಃ ಕರ್ತವ್ಯತ್ವಮೇವ ಅಸ್ತು' ಎಂಬುದಾಗಿ ಅಪ್ರಯೋಜಕಶಂಕಾ ಮಾಡಿದರೆ ನಿಶ್ಚಿತವಾದ ಕಾರ್ಯಕಾರಣಭಾವವು ವಿಘಟನವಾಗುತ್ತದೆ. ಏಕೆಂದರೆ, ಜಿಜ್ಞಾಸೆಗೆ ವಿಷಯಾದಿಗಳ ಇರುವಿಕೆಯೇ ಕಾರಣವಾಗಿದೆ. ವಿಷಯಾದಿಗಳ ಇರುವಿಕೆಯನ್ನು ಒಪ್ಪದೇ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದರೆ ಕಾರಣವಿಲ್ಲದೇ ಕಾರ್ಯವನ್ನು ಒಪ್ಪಿದಂತಾಯಿತು. ಹೀಗೆ ಲೋಕದಲ್ಲಿ ನಿಶ್ಚಿತವಾದ ಕಾರ್ಯಕಾರಣಭಾವವನ್ನು ವಿಘಟನ ಮಾಡುತ್ತಿರುವುದರಿಂದ ಅಪ್ರಯೋಜಕಾಶಂಕೆಯನ್ನು ಮಾಡಬಾರದು. ಇದನ್ನು "ವಿಷಯಾದಿಸದ್ಭಾವೇ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಕಾರ್ಯಕಾರಣಭಾವಕ್ಕೆ ಅನ್ವಯಕ್ಕಿಂತಲೂ ವ್ಯತಿರೇಕವ್ಯಾಪ್ತಿಯು ಮುಖ್ಯವಾಗಿದೆ. ವಿಷಯಾದಿಶೂನ್ಯವಾಗಿರುವುದರಿಂದ ಘಟಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಪ್ರಯೋಜನವಿಲ್ಲದ್ದರಿಂದ ಕಾಕದಂತದ ಜಿಜ್ಞಾಸೆಯನ್ನು ಮಾಡುವುದಿಲ್ಲ. ಸಂಬಂಧವು ಇಲ್ಲದ್ದರಿಂದ ಶಬ್ದಜ್ಞಾನವನ್ನು ಅಪೇಕ್ಷಿಸುವವನು ವೈದ್ಯ ಜಿಜ್ಞಾಸೆಯನ್ನು ಮಾಡುವುದಿಲ್ಲ. ಅಧಿಕಾರಿವೈಧುರ್ಯಾತ್ ಮುಮುಕ್ಷುವು ವಾತ್ಸ್ಯಾಯನದಲ್ಲಿ ವಿಚಾರವನ್ನು ಮಾಡುವುದಿಲ್ಲ. ಹೀಗೆ ವ್ಯತಿರೇಕಮುಖದಿಂದ ಕಾರಣತ್ವವು ಸಿದ್ಧವಾಗುತ್ತಿದೆ.

# ಸುಧಾಪರಿಮಳಸಾರ

ಯುಕ್ತ್ಯನುಸಂಧಾನಾತ್ಮಕವಾದುದು ಜಿಜ್ಞಾಸೆ. ಯುಕ್ತಿಗಳನ್ನು ಚಿಂತಿಸುವುದೇ ಅಂದರೆ ಈ ಜಿಜ್ಞಾಸೆಗೆ ವಿಚಾರ ಮೀಮಾಂಸಾ, ಮನನ ಎಂಬ ಸಮಾನಾರ್ಥಕವಾದ ಪದಗಳು ಇವೆ. ಇಂಥ ಜಿಜ್ಞಾಸೆಯು ಕರ್ತವ್ಯವೆಂದಾದರೆ ಈ ಜಿಜ್ಞಾಸೆಗೆ ಅಂಗಭೂತವಾದ ನ್ಯಾಯಸಂಕಲನರೂಪವಾದ ಈ ಶಾಸ್ತ್ರವು ಆರಂಭಣೀಯವಾಗಿದೆ ಎಂದು ಸಿದ್ಧಿಸುತ್ತದೆ. ವಿಚಾರಕ್ಕೆ ಸಾಧನವಾದ(ಅಂಗವಾದ) ನ್ಯಾಯನಿಬಂಧನರೂಪವಾದ ಈ ಶಾಸ್ತ್ರವು ಆರಂಭಣೀಯ ಅಲ್ಲ. ಆದರೆ ವಿಚಾರವು ಅವಶ್ಯಕರ್ತವ್ಯ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಸಾಧನವಿಲ್ಲದೇ ವಿಚಾರವೇ ಉದಯಿಸ-ಲಾರದು. ವಿಚಾರವು ಕರ್ತವ್ಯ ಅಲ್ಲ ಎಂದು ಸಿದ್ಧವಾದರೆ ಶಾಸ್ತ್ರವು ಅನಾರಂಭಣೀಯ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವೋ ಅಕರ್ತವ್ಯವೋ ಎಂಬುದಾಗಿ ಜಿಜ್ಞಾಸೆಯ ಬಗ್ಗೆ ಸಂಶಯವನ್ನು ನಿರೂಪಿಸುವುದು ಉಚಿತವೇ ಹೊರತು ಶಾಸ್ತ್ರವು ಆರಂಭಣೀಯವೋ ಅನಾರಂಭಣೀಯವೋ ಎಂಬುದಾಗಿ ಸಂಶಯವನ್ನು ನಿರೂಪಿಸುವುದು ಸೂಕ್ತವಲ್ಲ.

ಈ ಶಾಸ್ತ್ರದಿಂದ ತಿಳಿಸಲ್ಪಡುವ(ವ್ಯುತ್ಪಾದಿತವಾದ) ಯುಕ್ತಿಗಳಿಂದ ಸಾಧ್ಯವಾದ ವಿಚಾರದ ಬಗ್ಗೆ(ಜಿಜ್ಞಾಸೆಯ ಬಗ್ಗೆ) ಕರ್ತವ್ಯಾಕರ್ತವ್ಯರೂಪದ ಎರಡೂ ವಿಧವಾದ ವ್ಯಾಪಾರಗಳು ಕಂಡುಬರುವುದರಿಂದ ಇವೆರಡರಲ್ಲಿ ಒಂದು(ಕೋಟಿ) ಪಕ್ಷವನ್ನು ನಿರ್ಣಯಿಸಲು ಆವಶ್ಯಕವಾದ ವಿಶೇಷಪ್ರಮಾಣಗಳು ಇಲ್ಲದಿರುವುದರಿಂದ ಜಿಜ್ಞಾಸೆಯು ಕರ್ತವ್ಯವೇ ಅಲ್ಲವೇ ಎಂಬ ಸಂಶಯವು ಬರುತ್ತದೆ.

"ತದ್ವಿಜಿಜ್ಞಾಸಸ್ವ" ಎಂಬ ಶ್ರುತಿಯು ಜಿಜ್ಞಾಸೆಯು ಕರ್ತವ್ಯ ಎಂದು ತಿಳಿಸುತ್ತಿದೆ. ಹೀಗೆ ಜಿಜ್ಞಾಸಾವಿಧಾ-ಯಕವಾದ ಶ್ರುತಿಯು ಇರುವಾಗ ಕರ್ತವ್ಯ ಎಂಬ ವಿಷಯದಲ್ಲಿ ವಿಶೇಷಪ್ರಮಾಣವಿಲ್ಲ ಎಂದು ಹೇಳುವುದು ಸಮಂಜಸವೇ? ಸಂಶಯದ ಒಂದುಕೋಟಿಯನ್ನು ನಿಶ್ಚಯಿಸುವ ಈ ವೇದವಾಕ್ಯವಿರುವಾಗ ಜಿಜ್ಞಾಸೆಯು ಕರ್ತವ್ಯವೇ ಅಲ್ಲವೇ? ಎಂಬ ಸಂಶಯವು ಬರುವುದಾದರೂ ಹೇಗೆ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬಹುದು.

ವಿಚಾರ ಮಾಡಿದ ನಂತರ ಈ ಶ್ರುತಿಯ ಅರ್ಥವು ನಿರ್ಣಯವಾಗುತ್ತದೆ. ಆದ್ದರಿಂದ ವಿಚಾರವನ್ನು ಮಾಡದೇ ಈ ವೇದವಾಕ್ಯಕ್ಕೆ 'ವಿಚಾರ ಕರ್ತವ್ಯ' ಎಂಬೀ ಅರ್ಥವು ನಿರ್ಣಯವಾಗದಿರುವುದರಿಂದ ಈ ಶ್ರುತಿ-ವಾಕ್ಯವು ಒಂದು ಕೋಟಿಯನ್ನು ನಿಶ್ಚಯಿಸುವಲ್ಲಿ ಸಹಕಾರಿಯಾಗಲಾರದು. ಆದ್ದರಿಂದಲೇ ಇದು ವಿಶೇಷ-ಪ್ರಮಾಣವಾಗಲಾರದು. ಆದ್ದರಿಂದ ಜಿಜ್ಞಾಸೆಯು ಕರ್ತವ್ಯವೋ ಅಲ್ಲವೋ ಎಂಬ ಸಂಶಯವು ಯುಕ್ತವೇ ಆಗಿದೆ.

ಈ ಜಿಜ್ಞಾಸೆಯು ಕರ್ತವ್ಯ ಅಲ್ಲ. ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳೆಂಬ ಅನುಬಂಧಚತು-ಷ್ಟಯಗಳು ಇಲ್ಲ ಎಂದು ಪೂರ್ವಪಕ್ಷ. ಏಕೆಂದರೆ ಯಾವುದು ಕರ್ತವ್ಯವಾಗಿದೆಯೋ ಅಂದರೆ ಯಾವುದರಲ್ಲಿ ಕರ್ತವ್ಯತಾ ಇದೆಯೋ ಅಲ್ಲಿ ವಿಷಯಾದಿಗಳು ನಿಯಮೇನ ಇದ್ದೇ ಇರುತ್ತದೆ. ಉದಾಹರಣೆಗಾಗಿ, ಕರ್ತವ್ಯವೆನಿಸಿ-

ರುವ ಕೃಷಿ ಮುಂತಾದ(ಕರ್ಮ) ವ್ಯಾಪಾರದಲ್ಲಿ ಭೂಮಿಯು ವಿಷಯವಾಗಿದೆ. ಧಾನ್ಯಪ್ರಾಪ್ತಿಯು ಪ್ರಯೋಜನ-ವಾಗಿದೆ. ರೈತನು ಅಧಿಕಾರಿ ಆಗಿದ್ದಾನೆ ಮತ್ತು ಈ ವಿಷಯ, ಪ್ರಯೋಜನ, ಅಧಿಕಾರಿ ಇವುಗಳಿಗೆ ಪರಸ್ಪರ ಸಂಬಂಧವೂ ಇದೆ ಎಂದು ಕಂಡಿದೆ. ವ್ಯಾಪಕವಾದ ವಿಷಯಾದಿಗಳು ಇಲ್ಲವೆಂದಾದಲ್ಲಿ ವ್ಯಾಪ್ಯವಾದ ಕರ್ತವ್ಯತೆಯೂ ಇಲ್ಲವೆಂದಾಗುತ್ತದೆ. ಹೀಗೆ ವ್ಯಾಪ್ತಿ ಸಿದ್ಧವಾಗುತ್ತದೆ.

ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಎಂಬೀ ಅನುಬಂಧಚತುಷ್ಟಯಗಳ ಇರುವಿಕೆಯು ಜಿಜ್ಞಾಸೆಗೆ ಕಾರಣ. ಕಾರಣವು ಇಲ್ಲದೇ ಕಾರ್ಯವು ಹುಟ್ಟಲಾರದು. ಸ್ವಚ್ಛವಾದ ಬೆಳಕಿನ ಮಧ್ಯದಲ್ಲಿರುವ, ಮನಸ್ಸಿನಿಂದ ಕೂಡಿದ ಚಕ್ಷುರಿಂದ್ರಿಯದ ಸಂಬಂಧವುಳ್ಳ ಘಟದ ಬಗ್ಗೆ ಯಾರೂ ವಿಚಾರವನ್ನು ಮಾಡುವುದಿಲ್ಲ. ಏಕೆಂದರೆ ವಿಷಯವಿಲ್ಲ. ಕಾಗೆಯ ಹಲ್ಲುಗಳ ವಿಷಯದಲ್ಲಿ ಸಂದೇಹವಿದ್ದರೂ ಮುಂತಾದ ಜಿಜ್ಞಾಸೆಯಿಂದ ಪ್ರಯೋಜನ-ವಿಲ್ಲದಿರುವುದರಿಂದ ಅದರ ಜಿಜ್ಞಾಸೆಯನ್ನು ಯಾರೂ ಮಾಡುವುದಿಲ್ಲ. ವೈದ್ಯಶಾಸ್ತ್ರಕ್ಕೆ ವಿಷಯವಿದ್ದರೂ ಪ್ರಯೋ-ಜನವಿದ್ದರೂ, ತನ್ನಿಂದ ಅಪೇಕ್ಷಿತವಾದ ಶಬ್ದಜ್ಞಾನಕ್ಕೂ ಅದಕ್ಕೂ ಸಂಬಂಧವಿಲ್ಲದಿರುವುದರಿಂದ(ವೈಯಾಕರಣಿಯು) ಶಬ್ದಾರ್ಥಜ್ಞಾನವನ್ನು ಅಪೇಕ್ಷಿಸುವವನು ವೈದ್ಯಶಾಸ್ತ್ರದಲ್ಲಿ ಪ್ರವೃತ್ತನಾಗುವುದಿಲ್ಲ. ಅಧಿಕಾರವಿಲ್ಲದಿರುವುದರಿಂದ ಮೋಕ್ಷಾಪೇಕ್ಷಿಯು ವಾತ್ಸ್ಯಾಯನನ ಕಾಮಶಾಸ್ತ್ರದಲ್ಲಿ ಪ್ರವೃತ್ತನಾಗುವುದಿಲ್ಲ.

## ನೆನೆಪಿಡಿ

* ಜಿಜ್ಞಾಸಾ ಎಂಬ ಶಬ್ದಕ್ಕೆ ಜ್ಞಾನೇಚ್ಛೆ ಎಂದರ್ಥವಲ್ಲ; ವಿಚಾರ ಮೀಮಾಂಸಾ ಇತ್ಯಾದಿ ಶಬ್ದಗಳಂತೆ ಇದು ರೂಢವಾದ ಪದ.

* ವಿಚಾರ, ಮೀಮಾಂಸಾ, ಮನನ, ಜಿಜ್ಞಾಸಾ ಇವೆಲ್ಲವೂ ಪರ್ಯಾಯಶಬ್ದಗಳು.

* ಶ್ರವಣ, ಮನನ, ನಿದಿಧ್ಯಾಸನಗಳಲ್ಲಿ ಮನನವನ್ನು ಮಾತ್ರ ಜಿಜ್ಞಾಸೆಯೆನ್ನಬೇಕು. ಶ್ರವಣ ಹಾಗೂ ನಿದಿಧ್ಯಾಸನಗಳನ್ನು ಜಿಜ್ಞಾಸೆ ಎನ್ನಬಾರದು.

* ಜಿಜ್ಞಾಸೆಯು ಕರ್ತವ್ಯವಾದರೆ ಶಾಸ್ತ್ರವು ಆರಂಭಣೀಯವಾಗುತ್ತದೆ. ಜಿಜ್ಞಾಸೆಯು ಕರ್ತವ್ಯವಾಗದಿದ್ದರೆ ಶಾಸ್ತ್ರವು ಆರಂಭಣೀಯವಾಗುವುದಿಲ್ಲ. ಆದ್ದರಿಂದ ಜಿಜ್ಞಾಸಾಧರ್ಮಿಕ-ವಾದ ಸಂಶಯವನ್ನು ತೋರಿಸಿದರೆ ಸಾಕು ಶಾಸ್ತ್ರಧರ್ಮಿಕವಾದ ವಿಚಾರವು ಇದರಿಂದಲೇ ಸಿದ್ಧವಾಗುತ್ತದೆ. ಹೀಗಿರುವಾಗ ಶಾಸ್ತ್ರವು ಆರಂಭಣೀಯವೋ ಅಲ್ಲವೋ ಎಂಬ ಸಂಶಯವನ್ನು ತೋರಿಸಲು ಏನು ಕಾರಣ? ಎಂಬ ಪ್ರಶ್ನೆಗೆ ಈ ಮೂಲದಲ್ಲಿ ಉತ್ತರಿಸಲಾಗಿದೆ.

* ವಿವರಣಕಾರನು ಜಿಜ್ಞಾಸಾಸೂತ್ರವು ಶ್ರವಣವಿಧಿಮೂಲಕವಾಗಿದೆ ಎನ್ನುತ್ತಾನೆ. ಇವನ ನಿರಾಕರಣೆಗಾಗಿ ಮನನಾಪರನಾಮಕ ಎಂದು ಹೇಳಿದ್ದಾರೆ.

* ಮೀಮಾಂಸಾಶಬ್ದದಂತೆ ಜಿಜ್ಞಾಸಾಶಬ್ದವೂ ಕೂಡ ರೂಢವಾಗಿದೆ ಎಂಬುದನ್ನು ತೋರಿಸಲು ದೃಷ್ಟಾಂತತ್ವೇನ ಮೀಮಾಂಸಾಪರನಾಮಕ ಎಂದು ಹೇಳಿದ್ದಾರೆ.

* ವಿಚಾರವು ಶ್ರವಣರೂಪವಾಗಿರುವುದರಿಂದ ಮೀಮಾಂಸಾಪರನಾಮಕ ಎಂದು ಹೇಳಿದ್ದು ವಿರುದ್ಧವಾಗಿದೆ? ಎಂಬ ಶಂಕೆಗೆ ಉತ್ತರಿಸಲು ಯುಕ್ತ್ಯನುಸಂಧಾನಾತ್ಮಕ ಎಂಬುದಾಗಿ ವಿಚಾರಶಬ್ದವನ್ನು ವ್ಯಾಖ್ಯಾನ ಮಾಡಿದ್ದಾರೆ.

* ತದ್ವಿಜಿಜ್ಞಾಸಸ್ವ ಎಂಬ ಶ್ರುತಿಯು ಬ್ರಹ್ಮವಿಚಾರವನ್ನು ವಿಧಾನ ಮಾಡುತ್ತಿದೆ. ಹೀಗಿರುವಾಗ ಜಿಜ್ಞಾಸೆಯು ಕರ್ತವ್ಯವೋ ಅಲ್ಲವೋ ಎಂಬ ಸಂಶಯವನ್ನು ತೋರಿಸಲು ಹೇಗೆ ಸಾಧ್ಯ ?

* ಸೂತ್ರದ ವಿಷಯಪ್ರಯೋಜನಾದಿಗಳು ಸಿದ್ಧವಾದ ಮೇಲೆ ಶ್ರುತ್ಯರ್ಥವು ನಿರ್ಣಯವಾಗುತ್ತದೆ. ಆದ್ದರಿಂದ ತದ್ವಿಜಿಜ್ಞಾಸಸ್ವ ಎಂಬ ಶ್ರುತಿಗೆ ಜಿಜ್ಞಾಸಾಕರ್ತವ್ಯತ್ವ ಎಂಬ ಅರ್ಥವನ್ನು ನಿರ್ಣಯಿಸಲು ಸಾಧ್ಯವಿಲ್ಲ.

* ವಿಶೇಷದರ್ಶನವಿಲ್ಲದ ಕಾರಣ ಸಂಶಯವನ್ನು ಹೇಳಬಹುದು.

* ವಿಶೇಷಾದರ್ಶನವನ್ನು ತೋರಿಸುವ ಸಂದರ್ಭದಲ್ಲಿ ಜಿಜ್ಞಾಸಾಧಿಕರಣದ ವಿಷಯವಾಕ್ಯವನ್ನು ಗ್ರಂಥದಲ್ಲಿ ಹೇಳಿದ್ದಾರೆ. ಉಳಿದ ಅಧಿಕರಣಗಳಂತೆ ವಿಷಯವಾಕ್ಯವನ್ನು ನೇರವಾಗಿ ಹೇಳಿರುವುದಿಲ್ಲ.

* ಪರಂಪರೆಯಿಂದ ವಿಷಯವಾಕ್ಯವನ್ನು ಉಲ್ಲೇಖ ಮಾಡಿರುವುದರಿಂದ ಉಳಿದ ಅಧಿಕರಣಕ್ಕೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆ ಎಂಬುದನ್ನು ಸೂಚಿಸಿದ್ದಾರೆ.

* ಉಳಿದ ಅಧಿಕರಣಗಳಲ್ಲಿ ಆಯಾ ವಿಷಯವಾಕ್ಯಗಳ ಅರ್ಥನಿರ್ಣಯವಷ್ಟೇ ಉದ್ದೇಶವಾಗಿರುತ್ತದೆ. ಈ ಅಧಿಕರಣದಲ್ಲಿ ವಿಷಯವಾಕ್ಯದ ನಿರ್ಣಯದ ಮೂಲಕ ಶಾಸ್ತ್ರಾರಂಭಣೀಯತ್ವದ ಸಮರ್ಥನೆಯು ಉದ್ದೇಶವಾಗಿರುತ್ತದೆ. ಈ ವ್ಯತ್ಯಾಸವನ್ನು ಗಮನಿಸಬೇಕು.

* ವಿಷಯಪ್ರಯೋಜನಅಧಿಕಾರಿಸಂಬಂಧ್ಯಭಾವಾತ್ ಎಂಬುದನ್ನು ಮಿಲಿತವಾದ

ಹೇತುವನ್ನಾಗಿ ಪರಿಗಣಿಸಬಾರದು. ವಿಷಯಾಭಾವಾತ್, ಪ್ರಯೋಜನಾಭಾವಾತ್ ಇತ್ಯಾದಿ-ಯಾಗಿ ಪ್ರತ್ಯೇಕವಾದ ಹೇತುಗಳನ್ನಾಗಿ ಪರಿಗಣಿಸಬೇಕು.

* ಅನುಬಧ್ನತೇ ಪ್ರವರ್ತತೇ ಅನೇನ ಪ್ರಣೇತಾ ಶ್ರೋತಾ ಚ ಎಂಬ ನಿಷ್ಪತ್ತಿಯಿಂದ ಯಾವ ವಿಷಯಾದಿಗಳಿಂದ ಪ್ರಣೇತೃವು ಪ್ರಣಯನದಲ್ಲಿ ಶ್ರೋತೃವು ಶ್ರವಣದಲ್ಲಿ ಪ್ರವೃತ್ತಿ ಮಾಡುತ್ತಾನೋ ಅಂಥ ವಿಷಯಪ್ರಯೋಜನಾದಿಗಳು ಅನುಬಂಧ ಎಂದು ಕರೆಸಿಕೊಳ್ಳುತ್ತವೆ.

* ಅನುಬಂಧವಿಧುರತ್ವಾತ್ ಎಂಬಲ್ಲಿ ಅನುಬಂಧಶಬ್ದವು ಹೇತುಶರೀರದಲ್ಲಿ ಪ್ರವಿಷ್ಟ-ವಾಗಿರುವುದಿಲ್ಲ. ಕೇವಲ ವಿಪಕ್ಷೇ ಬಾಧಕತರ್ಕಕ್ಕೆ ಸೂಚಕವಾಗಿದೆ.

* ವಿಷಯ ಮತ್ತು ಸಂಶಯಗಳು ಸಿದ್ಧವಾದಮೇಲಷ್ಟೇ ಪೂರ್ವಪಕ್ಷವನ್ನು ಮಾಡಲು ಸಾಧ್ಯ. ಆದ್ದರಿಂದ ಮೊದಲು ವಿಷಯ ಮತ್ತು ಸಂಶಯಗಳನ್ನು ತೋರಿಸಿ ಅನಂತರ ಪೂರ್ವಪಕ್ಷವನ್ನು ಮಾಡಿರುತ್ತಾರೆ.

## ಜಿಜ್ಞಾಸೆಗೆ ವಿಷಯವಿಲ್ಲ

**ಶ್ರೀಮನ್ನ್ಯಾಯಸುಧಾ – ವಿಷಯಾದಿವೈಧುರ್ಯಮೇವಾತ್ರ ಕಥಮಿತಿ ಚೇತ್, ಇತ್ಥಮ್ – ನ ತಾವದನಾತ್ಮವಿಷಯೇಯಂ ಜಿಜ್ಞಾಸಾ । ತಸ್ಯ ತೃಣಾದಿಲಕ್ಷಣಸ್ಯ ಪ್ರತ್ಯಕ್ಷಾದಿನೈವ ನಿಶ್ಚಿತತ್ವಾತ್ । ಸಂದಿಗ್ಧಶ್ಚಾರ್ಥೋ ನ್ಯಾಯವಿಷಯೋ ಭವತಿ । ಯಥೋಕ್ತಮ್ । 'ಅವಿಜ್ಞಾತತತ್ತ್ವೇಽರ್ಥೇ ಕಾರಣೋಪಪತ್ತಿತಃ ತತ್ತ್ವಜ್ಞಾನಾ-ರ್ಥಮ್ ಊಹಸ್ತರ್ಕಃ' ಇತಿ ।**

ಈ ಶಾಸ್ತ್ರಕ್ಕೆ ವಿಷಯಾದಿಗಳು ಇರುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡಲಾಗು-ತ್ತಿದೆ. ಆದರೆ ವಿಷಯಾದಿಗಳ ಇಲ್ಲದಿರುವಿಕೆಯು ಹೇಗೆ ಸಿದ್ಧವಾಗುತ್ತದೆ?

ಈ ಪ್ರಶ್ನೆಗೆ ಉತ್ತರ ಹೀಗಿದೆ – ಜಿಜ್ಞಾಸೆಗೆ ಜಡಪದಾರ್ಥವು ವಿಷಯವಾಗುವುದಿಲ್ಲ. ಏಕೆಂದರೆ ತೃಣ ಮುಂತಾದ ಜಡಪದಾರ್ಥಗಳು ಪ್ರತ್ಯಕ್ಷದಿಂದಲೇ ನಿಶ್ಚಿತವಾಗಿರುತ್ತವೆ. ಸಂದಿಗ್ಧವಾದ ಅರ್ಥವೇ ನ್ಯಾಯಕ್ಕೆ ವಿಷಯವಾಗುತ್ತದೆ. ಇದನ್ನೇ 'ಅವಿಜ್ಞಾತತತ್ತ್ವೇಽರ್ಥೇ

ಕಾರಣೋಪಪತ್ತಿತಃ ತತ್ತ್ವಜ್ಞಾನಾರ್ಥಮ್ ಊಹಸ್ತರ್ಕಃ' 'ಸ್ವರೂಪದ ನಿರ್ಣಯವಿಲ್ಲದ ವಸ್ತುವಿನ ಬಗ್ಗೆ ಪ್ರಮಾಣದ ಮೂಲಕ ಅದರ ಯಥಾರ್ಥಸ್ವರೂಪವನ್ನು ತಿಳಿಯುವು-ದಕ್ಕಾಗಿ ಊಹಿಸುವುದೇ ತರ್ಕ ಎನಿಸುತ್ತದೆ' - ಹೀಗೆ ನ್ಯಾಯಸೂತ್ರವು ಹೇಳುತ್ತದೆ.

**ನಿಷ್ಪಾದಿತಕ್ರಿಯೇ ಚ ಕರ್ಮಣ್ಯವಿಶೇಷಾಧಾಯಿನಃ ಸಾಧನಸ್ಯ ಸಾಧನನ್ಯಾಯಾ-ತಿಪಾತಃ । ನಾಪ್ಯಸೌ ಜಿಜ್ಞಾಸಿತಃ ಕಸ್ಮೈಚನ ಪ್ರಯೋಜನಾಯ ಕಲ್ಪತೇ । ಏವಂವಿಧೇ ಚಾಧಿಕಾರೀ ದೂರೋತ್ಸಾರಿತಃ । ಯತಃ ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ ।**

ಮತ್ತು ಕ್ರಿಯೆಯು ನಿಷ್ಪನ್ನವಾದ ಮೇಲೆ ಆ ಕರ್ಮದಲ್ಲಿ ವಿಶೇಷವನ್ನು ಉಂಟು-ಮಾಡುವ ಸಾಧನವು ಸಾಧನವೆಂದೇ ಕರೆಸಿಕೊಳ್ಳುವುದಿಲ್ಲ. ಹಾಗೆ ಸಾಧನವೆನ್ನುವುದು ಯುಕ್ತಿವಿರುದ್ಧವಾಗುತ್ತದೆ. ಮತ್ತು ತೃಣ ಮೊದಲಾದ ಜಡಪದಾರ್ಥಗಳ ಜಿಜ್ಞಾಸೆಯಿಂದ ಯಾವುದೇ ರೀತಿಯ ಪ್ರಯೋಜನವನ್ನು ಹೊಂದಲು ಸಾಧ್ಯವಿಲ್ಲ. ಇಂಥ ವಸ್ತುವಿನ ವಿಚಾರವನ್ನು ಮಾಡಲು ಅಧಿಕಾರಿಯು ಸರ್ವಥಾ ಇರುವುದಿಲ್ಲ. ಏಕೆಂದರೆ ('ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ') ಸಮರ್ಥನು ಪ್ರಯೋಜನವನ್ನು ಅಪೇಕ್ಷಿಸುವವನು ವಿದ್ವಾಂಸನೇ ಅಧಿಕಾರಿಯೆಂದು ಕರೆಸಿಕೊಳ್ಳುತ್ತಾನೆ.

**ನ ಚ ಏತಾದೃಶೇಽರ್ಥೇ ಅರ್ಥಿತಾ ಸಂಭವತಿ । ಧರ್ಮಾದಿಲಕ್ಷಣಸ್ತು ಅನಾತ್ಮಾ ಶಾಸ್ತ್ರಾಂತರಾದಿನೈವ ನಿರ್ಣೀತಃ । ಆತ್ಮಾ ಚ ಶರೀರೇಂದ್ರಿಯಾದಿಸಂಘಾತ-ವ್ಯತಿರಿಕ್ತೋ ನಾಸ್ತ್ಯೇವ । ಶರೀರಾದಿಕಂ ಚ ಯಥಾಯಥಂ ಪ್ರತ್ಯಕ್ಷಾದಿನೈವ ನಿಶ್ಚಿತಮ್ ।**

ತೃಣ ಮೊದಲಾದ ಜಡಪದಾರ್ಥಗಳಲ್ಲಿ ಅರ್ಥಿತ್ವವು ಯಾರಿಗೂ ಕೂಡ ಹುಟ್ಟು-ವುದಿಲ್ಲ. ಇನ್ನು ಧರ್ಮ ಮೊದಲಾದ ಅತೀಂದ್ರಿಯವಾದ ಜಡಪದಾರ್ಥಗಳಲ್ಲಿ ಅರ್ಥಿತ್ವ-

ವಿದೆಯೆಂದು ಹೇಳಬೇಕು. ಆದರೆ ಈ ವಿಚಾರವು ಕರ್ಮಮೀಮಾಂಸಾ ಮೊದಲಾದ ಬೇರೆ ಶಾಸ್ತ್ರಗಳಿಂದಲೇ ನಿರ್ಣಯಿಸಲ್ಪಟ್ಟಿದೆ. ಶರೀರ, ಇಂದ್ರಿಯಾದಿಸಂಘಾತವನ್ನು ಬಿಟ್ಟು ಆತ್ಮನೊಬ್ಬನು ಇರುವುದಿಲ್ಲ. ಆ ಶರೀರಾದಿಗಳಂತೂ ಯಥಾಪ್ರಕಾರವಾಗಿ ಪ್ರತ್ಯಕ್ಷಾದಿಗಳಿಂದಲೇ ನಿಶ್ಚಿತವಾಗಿದೆ. ಆದ್ದರಿಂದ ಇವುಗಳೂ ಕೂಡ ಜಿಜ್ಞಾಸೆಗೆ ವಿಷಯವಾಗುವುದಿಲ್ಲ.

**ನನ್ವಾತ್ಮಾ ಶರೀರಾದಿವ್ಯತಿರಿಕ್ತೋಽಹಮಿತ್ಯಸಂದಿಗ್ಧಾವಿಪರ್ಯಸ್ತಾಪರೋಕ್ಷಾತ್-ಪ್ರತೀತ್ಯೈವ ನಿಶ್ಚೀಯತ ಇತಿ ಚೇತ್ । ಏವಂ ತರ್ಹಿ ತತ ಏವ ನ ಜಿಜ್ಞಾಸ್ಯಃ । ಅತ ಏವ ಅನಾದಿತಃ ತದೀಯತತ್ತ್ವಜ್ಞಾನೇ ವಿದ್ಯಮಾನೇಽಪಿ ಇಷ್ಟಾನಿಷ್ಟಪ್ರಾಪ್ತಿಪರಿಹಾರಯೋರದರ್ಶನಾತ್ ನಾಸೌ ಜಿಜ್ಞಾಸಿತಃ ಕಸ್ಯಚಿತ್ಪ್ರಯೋಜನಸ್ಯೇಷ್ಟೇ ।**

ಅಹಂ ಎಂಬ ಯಥಾರ್ಥವಾದ ಅನುಭವದಿಂದ ಶರೀರ ಮೊದಲಾದವುಗಳಿಗಿಂತ ಅತಿರಿಕ್ತನಾದ ಆತ್ಮನು ಇದ್ದಾನೆಂದು ತಿಳಿಯುತ್ತದೆ. ಈ ವಿಷಯದಲ್ಲಿ ಸಂದೇಹ ಹಾಗೂ ಭ್ರಮೆಗಳು ಇರುವುದಿಲ್ಲ? ಹಾಗಾದರೆ ಅಹಂ ಎಂಬ ಅನುಭವದಿಂದಲೇ ನಿಶ್ಚಯವಿದ್ದ ಮೇಲೆ ಪುನಃ ಆತ್ಮತತ್ವದ ಬಗ್ಗೆ ಜಿಜ್ಞಾಸೆಯು ಅನಾವಶ್ಯಕ. ಆದ್ದರಿಂದಲೇ ಇಂಥ ಆತ್ಮನ ತತ್ವವು ಅನಾದಿಕಾಲದಿಂದ ಇದ್ದರೂ ಕೂಡ ಇಷ್ಟಪ್ರಾಪ್ತಿಯಾಗಲೀ ಅನಿಷ್ಟನಿವೃತ್ತಿಯಾಗಲೀ ಆಗುವುದು ಕಂಡು ಬಂದಿಲ್ಲ.

ಆದ್ದರಿಂದ ಆತ್ಮನ ಜಿಜ್ಞಾಸೆಯಿಂದ ಯಾವುದೇ ಪ್ರಯೋ- ಜನವನ್ನು ಹೊಂದಲು ಸಾಧ್ಯವಿಲ್ಲ.

## ವಿಸ್ತಾರವಾದ ನಿರ್ವಿಷಯತ್ವಪೂರ್ವಪಕ್ಷ

ಪರಿಮಳ – ಸೌತ್ರಬ್ರಹ್ಮಾದಿಪದಾರ್ಥೋಕ್ತಿಪರಸ್ಯ 'ಓತತ್ವವಾಚೀ' ಇತ್ಯಾದೇ-ರ್ವ್ಯಾವರ್ತ್ಯಂ ನಿರ್ವಿಷಯತ್ವಂ ತಾವದ್ ವ್ಯಕ್ತೀಕುರ್ವನ್ನೈಂದ್ರಿಯಕಾನೈಂದ್ರಿಯಕರೂಪೇಣ ವಾ ಶ್ರೇಯೋಽಹೇತುತದ್ಧೇತುರೂಪೇಣ ವಾ ದ್ವಿವಿಧಾನಾತ್ಮನಾಂ ಸ್ವಾತ್ಮಪರಾತ್ಮಪರ-

ಮಾತ್ಮನಾಂ ಚ ವಿಷಯತ್ವಂ ಕ್ರಮೇಣ ನಿರಾಹ – ಅನಾತ್ಮೇತ್ಯಾದಿನಾ ಪ್ರಯೋಜನಂ ಚೇ-ಶ್ವರಜಿಜ್ಞಾಸಾಯಾ ಇತ್ಯತಃ ಪ್ರಾಕ್ತನಗ್ರಂಥೇನ । ತಾರ್ಕಿಕೋಕ್ತಮಾಹ – ಯಥೋಕ್ತಮಿತಿ ॥

ಸೂತ್ರದಲ್ಲಿರುವ ಬ್ರಹ್ಮ ಮೊದಲಾದ ಪದಗಳ ಅರ್ಥವನ್ನು ''ಓತತ್ವವಾಚೀ'' ಇತ್ಯಾದಿ ಅನುವ್ಯಾಖ್ಯಾನಶ್ಲೋಕವು ವ್ಯಾಖ್ಯಾನಮಾಡಲು ಹೊರಟಿದೆ. ಇದರಿಂದ ವಿಷಯವು ಇರುವುದಿಲ್ಲವೆಂಬ ಪೂರ್ವಪಕ್ಷವು ಪರಿಹಾರವಾಗುತ್ತದೆ. ಆದ್ದರಿಂದ ಶಾಸ್ತ್ರವು ನಿರ್ವಿಷಯ-ವಾಗಿದೆ ಎಂಬ ಪೂರ್ವಪಕ್ಷವನ್ನು ಸ್ಪಷ್ಟಪಡಿಸುವುದಕ್ಕಾಗಿ ಇಂದ್ರಿಯಗೋಚರವಾದ ಇಂದ್ರಿಯಕ್ಕೆ ಗೋಚರವಾಗದ ಎರಡೂ ಬಗೆಯ ಅನಾತ್ಮತತ್ವವು ವಿಷಯವಾಗುವುದಿಲ್ಲ; ಅಥವಾ ಉದಾ-ಸೀನವಾದ ಮತ್ತು ಪುರುಷಾರ್ಥರೂಪವಾದ ಎರಡು ಬಗೆಯ ಅನಾತ್ಮತತ್ವವು ವಿಷಯವಾ-ಗುವುದಿಲ್ಲ. ಇದರಂತೆ ಸ್ವಾತ್ಮ, ಪರಾತ್ಮ, ಪರಮಾತ್ಮ ಈ ಮೂರೂ ಬಗೆಯ ಆತ್ಮತತ್ವಗಳು ವಿಷಯವಾಗುವುದಿಲ್ಲ. ಹೀಗೆ ಕ್ರಮವಾಗಿ ವಿಷಯಗಳು ಇರುವುದಿಲ್ಲ ಎಂಬುದನ್ನು ''ನ ತಾವದಾತ್ಮಾ'' ಎಂಬುದರಿಂದ 'ಪ್ರಯೋಜನಂ ಚೇಶ್ವರಜಿಜ್ಞಾಸಾಯಾಃ'' ಎಂಬ ವಾಕ್ಯದ ತನಕ ಉಪಪಾದನೆ ಮಾಡುತ್ತಿದ್ದಾರೆ.

ತಾರ್ಕಿಕರ ಮಾತನ್ನು ''ಯಥೋಕ್ತಂ'' ಇತ್ಯಾದಿ ವಾಕ್ಯದಿಂದ ಉಲ್ಲೇಖ ಮಾಡಿದ್ದಾರೆ.

ವಿವರಣೆ – 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿ ಅನುವ್ಯಾಖ್ಯಾನಪದ್ಯದಿಂದ ಸೂತ್ರದಲ್ಲಿರುವ ಓಂಕಾರ ಹಾಗೂ ಬ್ರಹ್ಮಶಬ್ದಗಳ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಓಂ ಮತ್ತು ಬ್ರಹ್ಮಶಬ್ದಗಳು ಶಾಸ್ತ್ರದ ವಿಷಯಸೂಚಕಗಳಾಗಿವೆ.

ಇದರಿಂದ ವಿಷಯವೇ ಇಲ್ಲವೆಂಬ ಪೂರ್ವಪಕ್ಷವು ನಿರಾಕೃತವಾಗುತ್ತದೆ. ನಿರಾಕೃತವಾಗುವ ನಿರ್ವಿಷಯತ್ವಪೂರ್ವಪಕ್ಷವನ್ನು ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಣೆ ಮಾಡುತ್ತಿದ್ದಾರೆ.

ಜಿಜ್ಞಾಸೆಗೆ ಆತ್ಮನು ವಿಷಯನೋ, ಅಥವಾ ಅನಾತ್ಮವೋ? ಅನಾತ್ಮವೆಂದು ಹೇಳಿದರೆ ಇಂದ್ರಿಯಕ್ಕೆ ವಿಷಯವಾಗುವ ತೃಣಾದಿಗಳನ್ನು ವಿಷಯವೆನ್ನುತ್ತೀರೋ ಅಥವಾ ಅತೀಂದ್ರಿಯವಾದ ಧರ್ಮಾದಿಗಳನ್ನು ವಿಷಯವೆನ್ನುತ್ತೀರೋ? ಅಥವಾ ಶ್ರೇಯಸ್ಸಿಗೆ ಕಾರಣವಾಗದ ತೃಣಾದಿಗಳನ್ನು ವಿಷಯವೆನ್ನುತ್ತೀರೋ? ಶ್ರೇಯಸ್ಸಿಗೆ ಕಾರಣವಾಗುವ ಧರ್ಮಾದಿಗಳನ್ನು ವಿಷಯವೆನ್ನುತ್ತೀರೋ?

ಆತ್ಮನು ವಿಷಯನೆಂದು ಹೇಳಿದರೆ ಯಾವ ಆತ್ಮ? ಸ್ವಾತ್ಮನೋ, ಪರಾತ್ಮನೋ, ಪರಮಾತ್ಮನೋ? ಈ ಎಲ್ಲಾ ವಿಕಲ್ಪಗಳನ್ನು ಕ್ರಮವಾಗಿ ಈಗ ನಿರಾಕರಣೆ ಮಾಡುತ್ತಿದ್ದಾರೆ.

## ನ್ಯಾಯಸೂತ್ರದ ಅರ್ಥ

**ಪರಿಮಳ – ಕಾರಣೋಪಪತ್ತಿತ ಇತಿ ॥ ಕಾರಣಸ್ಯ ಪ್ರಮಾಕಾರಣಸ್ಯ ಪ್ರಮಾಣಸ್ಯೇತಿ ಯಾವತ್ । ಉಪಪತ್ತಿಃ ಅನುಗ್ರಹಃ । ತತಃ ಪ್ರಮಾಣಾನುಗ್ರಹಕರಣೇನ ತತ್ವಜ್ಞಾನ-ಸಂಪಾದಕೋ ಯ ಊಹಃ ಸ ತರ್ಕ ಇತಿ ನ್ಯಾಯಸೂತ್ರಾರ್ಥಃ । ನಿಶ್ಚಿತಾರ್ಥಕತ್ವೇಽಪಿ ಅಸ್ತು ಜಿಜ್ಞಾಸಾಯಾಸ್ತೃಣಾದಿವಿಷಯತ್ವಮಿತ್ಯತ ಆಹ – ನಿಷ್ಪಾದಿತಕ್ರಿಯೇ ಚೇತಿ ಬಹುವ್ರೀಹಿಃ । ಕರ್ಮಣಿ ಕರ್ಮಕಾರಕೇ । ಸಾಧನನ್ಯಾಯೋಽತಿಶಯಾಧಾಯಕತ್ವಂ ತಸ್ಯಾಪಗಮ ಇತ್ಯರ್ಥಃ ॥**

"ಕಾರಣೋಪಪತ್ತಿತಃ" – ಪ್ರಮಾಸಾಧನವಾದ ಪ್ರಮಾಣಕ್ಕೆ ಸಹಾಯ ಮಾಡುವುದು ಎಂದರ್ಥ. ಉಪಪತ್ತಿಶಬ್ದಕ್ಕೆ ಅನುಗ್ರಹ ಎಂದರ್ಥ. ಪ್ರಮಾಣಗಳಿಗೆ ಸಹಾಯವನ್ನು ಮಾಡುವುದರಿಂದ ತತ್ವಜ್ಞಾನವನ್ನು ಉಂಟುಮಾಡುವ ಊಹವು ತರ್ಕ ಎಂದು ಕರೆಸಿಕೊಳ್ಳುತ್ತದೆ. ಇದು ನ್ಯಾಯಸೂತ್ರದ ಅರ್ಥ. ಅರ್ಥನಿಶ್ಚಯವಿದ್ದರೂ ಕೂಡ ತೃಣಾದಿಗಳನ್ನು ಜಿಜ್ಞಾಸೆಯು ವಿಷಯೀಕರಿಸಬಾರದು ಎಂಬ ಪ್ರಶ್ನೆಗೆ "ನಿಷ್ಪಾದಿತಕ್ರಿಯೇ ಚ" ಎಂಬುದರಿಂದ ಉತ್ತರಿಸಿದ್ದಾರೆ. 'ನಿಷ್ಪಾದಿತಕ್ರಿಯಾ ಯಸ್ಮಿನ್' ಎಂಬುದಾಗಿ ಬಹುವ್ರೀಹಿಸಮಾಸವನ್ನು ತಿಳಿಯಬೇಕು. "ಕರ್ಮಣಿ" – ಕರ್ಮವೆಂಬ ಕ್ರಿಯಾಕಾರಕದಲ್ಲಿ ಎಂದರ್ಥ. "ಸಾಧನನ್ಯಾಯಾತಿಪಾತಃ" ಕರ್ಮಕಾರಕದಲ್ಲಿ ಅತಿಶಯವನ್ನು ಉಂಟುಮಾಡುವುದೆಂಬ ಸಾಧನದ ಸ್ವಭಾವವು ನಾಶವಾಗುವ ಪ್ರಸಂಗ ಬರುತ್ತದೆ.

## ಅತೀಂದ್ರಿಯಪದಾರ್ಥವು ಕೂಡ ವಿಷಯವಾಗುವುದಿಲ್ಲ

**ಪರಿಮಳ – ನಾಪ್ಯಸಾವಿತಿ ॥ ತೃಣಾದಿಃ ಇತ್ಯರ್ಥಃ । ಕಸ್ಮೈಚನೇತಿ ॥ ಚನಶಬ್ದೋಽಪ್ಯರ್ಥೇ ನಿಪಾತಃ । ಅರ್ಥೀ ॥ ಫಲೇ ತತ್ಸಾಧನೇ ವಾ ಕಾಮನಾವಾನ್ । ಸಮರ್ಥಃ =**

ಪಟುಕರಣಃ । ವಿದ್ವಾನ್ = ಕರ್ತವ್ಯೋಪಯುಕ್ತಜ್ಞಾನೀ । ಏತಾದೃಶ ಇತಿ ॥ ನಿಷ್ಫಲೇ ತೃಣಾದೌ । ಐಂದ್ರಿಯಕಸ್ಯಾವಿಷಯತ್ವಮುಪಪಾದ್ಯ ಅತೀಂದ್ರಿಯಸ್ಯಾಪಿ ತದುಪಪಾದಯತಿ – ಧರ್ಮಾದೀತಿ ॥ ಯದ್ವಾ ನಿಷ್ಫಲಸ್ಯಾವಿಷಯತ್ವಮುಪಪಾದ್ಯ ಸಫಲಸ್ಯಾನಾತ್ಮನಸ್ತದಾಹ – ಧರ್ಮಾದೀತಿ ॥

"ಅಸೌ" – ತೃಣಾದಿರೂಪವಾದ ವಿಷಯ ಎಂದರ್ಥ. "ಕಸ್ಮೈಚನ" – ಇಲ್ಲಿರುವ ಚನಶಬ್ದವು ಅಪಿ ಎಂಬುದರ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಅರ್ಥದಲ್ಲಿ ನಿಪಾತ ಅವ್ಯಯವಾದ ಶಬ್ದವಾಗಿದೆ. "ಅರ್ಥೀ" – ಫಲ ಅಥವಾ ಅದರ ಸಾಧನಗಳನ್ನು ಇಚ್ಛಿಸುವವನು. "ಸಮರ್ಥಃ" – ಕರಣಪಾಟವವುಳ್ಳವನು, "ವಿದ್ವಾನ್" ಕರ್ತವ್ಯಕರ್ಮಕ್ಕೆ ಅವಶ್ಯಕವಾದ ಜ್ಞಾನವನ್ನು ಹೊಂದಿರುವವನು, "ಏತಾದೃಶೇ" – ನಿಷ್ಫಲವಾದ ತೃಣಾದಿಗಳ ವಿಷಯದಲ್ಲಿ.

ಇಂದ್ರಿಯಗೋಚರವಾದ ಜಡವಸ್ತುಗಳು ವಿಷಯಗಳಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡಿ ಅತೀಂದ್ರಿಯವಾದ ಜಡವಸ್ತುಗಳೂ ಕೂಡ ವಿಷಯವಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ "ಧರ್ಮಾದಿಲಕ್ಷಣಸ್ತು" ಇತ್ಯಾದಿ ಗ್ರಂಥವು ಹೊರಟಿದೆ.

## ಅತೀಂದ್ರಿಯವಾದ ವಿಷಯಗಳು ಶಾಸ್ತ್ರಾಂತರಗಳಿಂದಲೇ ಸಿದ್ಧವಾಗಿದೆ

ಪರಿಮಳ – ಶಾಸ್ತ್ರಾಂತರಾದಿನೇತಿ ॥ ಕರ್ಮಮೀಮಾಂಸಯಾ ಧರ್ಮಾದಿಸ್ವರೂಪಸ್ಯ, ದೈವೀಮೀಮಾಂಸಾಯಾ ದೇವತಾದಿಸ್ವರೂಪಸ್ಯ , ಕಾಲಾದಿಸ್ವರೂಪಸ್ಯ ಜ್ಯೋತಿಃಶಾಸ್ತ್ರಾದಿನಾ ಸಿದ್ಧತ್ವಾದಿತಿ ಭಾವಃ ॥ ತತ ಏವೇತಿ ॥ ಸಾಕ್ಷಾತ್ ಪ್ರತೀತಿಸಿದ್ಧತ್ವಾದೇವ ಇತ್ಯರ್ಥಃ । ಸಂದಿಗ್ಧಾರ್ಥ ಏವ ನ್ಯಾಯವಿಷಯ ಇತಿ ಪ್ರಾಗುಕ್ತತ್ವಾದಿತಿ ಭಾವಃ । ಅತ ಏವ ಇತ್ಯಸ್ಯ ವಿವೃತಿಃ 'ಅದರ್ಶನಾತ್' ಇತ್ಯಂತೇನ ॥ ಪ್ರಯೋಜನಸ್ಯ ಇತ್ಯಧೀಗರ್ಥದಯೇಶಾಂ ಕರ್ಮಣೀತಿ ಷಷ್ಠೀ ।

ಅಥವಾ ನಿಷ್ಫಲವಾದದ್ದಕ್ಕೆ ವಿಷಯವಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡಿದ್ದಾಯಿತು. ಈಗ ಸಫಲವಾದ ಅನಾತ್ಮಪದಾರ್ಥಕ್ಕೆ ಅವಿಷಯತ್ವವನ್ನು ಉಪಪಾದನೆ ಮಾಡಲು ''ಧರ್ಮಾದಿಲಕ್ಷಣಸ್ತು'' ಎಂಬ ವಾಕ್ಯವು ಹೊರಟಿದೆ.

''ಶಾಸ್ತ್ರಾಂತರಾದಿನಾ'' – ಧರ್ಮದ ಸ್ವರೂಪವು ಕರ್ಮಮೀಮಾಂಸಾಶಾಸ್ತ್ರದಿಂದ ಸಿದ್ಧವಾಗುತ್ತದೆ. ದೇವತೆಗಳ ಸ್ವರೂಪವು ದೈವೀಮೀಮಾಂಸಾಶಾಸ್ತ್ರದಿಂದ ಸಿದ್ಧವಾಗುತ್ತದೆ. ಅದರಂತೆ ಕಾಲ ಮೊದಲಾದವುಗಳ ಸ್ವರೂಪವು ಜ್ಯೋತಿಃಶಾಸ್ತ್ರದಿಂದ ಸಿದ್ಧವಾಗುತ್ತದೆ ಎಂಬುದು ಈ ವಾಕ್ಯದ ಅಭಿಪ್ರಾಯ.

''ತತ ಏವ'' – ಪ್ರತೀತಿಯಲ್ಲಿ ಸಾಕ್ಷಾತ್ತಾಗಿಯೇ ಸಿದ್ಧವಾಗಿರುವುದರಿಂದ ಎಂದರ್ಥ. ಸಂದಿಗ್ಧವಾದ ವಿಷಯವೇ ವಿಚಾರ ಮಾಡಲು ಅರ್ಹವಾಗುತ್ತದೆಂಬುದನ್ನು ಹಿಂದೆ ನಿರೂಪಿಸಿದ್ದೇವೆ ಎಂದು ತಿಳಿಯಬೇಕು.

''ಅನಾದಿತಃ'' ಎಂಬಲ್ಲಿಂದ ''ಆದರ್ಶನಾತ್'' ಎಂಬಲ್ಲಿಯ ತನಕ ವಾಕ್ಯಭಾಗವು ''ಅತ ಏವ'' ಎಂಬ ಪದದ ಅರ್ಥವಾಗಿದೆ. ''ಪ್ರಯೋಜನಸ್ಯ'' – 'ಅಧೀಗರ್ಥದಯೇಶಾಂ' ಎಂಬ ಸೂತ್ರವನ್ನನುಸರಿಸಿ ಕರ್ಮಣಷಷ್ಠೀವಿಭಕ್ತಿಯು ಪ್ರಯೋಜನಸ್ಯ ಎಂಬಲ್ಲಿ ತಿಳಿಯಬೇಕು.

## ವಿಷಯಾಭಾವಪೂರ್ವಪಕ್ಷವೇ ಮೊದಲು ಸಂಗತವಾಗಿದೆ

ವಾಕ್ಯಾರ್ಥಚಂದ್ರಿಕಾ – ಏವಂ ಹೇತೋರ್ವ್ಯಾಪ್ತಿಮುಪಪಾದ್ಯಾಸಿದ್ಧಿಂ ಪರಿಹರ್ತುಂ ಶಂಕತೇ – ವಿಷಯಾದೀತಿ ॥ ಸೂತ್ರೇ ಅಧಿಕಾರಿಸಮರ್ಪಕಾಥಶಬ್ದಸ್ಯ ವಿಷಯಸಮರ್ಪಕಬ್ರಹ್ಮಶಬ್ದಾಪೇಕ್ಷಯಾಽಽದಿತ್ವೇನ ತನ್ನಿವರ್ತ್ಯಪೂರ್ವಪಕ್ಷಸ್ಯ ಪ್ರಥಮತಃ ಕಥನೀಯತ್ವೇಽಪಿ ವಿಷಯಸಮರ್ಪಕೋಂಶಬ್ದಸ್ಯ ತತೋಽಪಿ ಆದಿತ್ವಾದ್ ವಿಷಯಾಭಾವೋಕ್ತ್ಯಾಽಧಿಕಾರ್ಯಭಾವಸಿದ್ಧಿವದಧಿಕಾರ್ಯಭಾವೋಕ್ತ್ಯಾ ವಿಷಯಾಭಾವಸಿದ್ಧೇರಭಾವೇನ ಲಾಘವಾಚ್ಚ ಸೂತ್ರೇ ಓಂಬ್ರಹ್ಮಶಬ್ದಾಭ್ಯಾಂ ತದರ್ಥಕಥನಪರಾ 'ಓತತ್ವಾಚೀ ಹ್ಯೋಂಕಾರಃ' ಇತ್ಯನುವ್ಯಾಖ್ಯಾನೇನ ಚ ಸೂಚಿತಪೂರ್ವಪಕ್ಷ ಏವ ಪ್ರಥಮತೋ ವಕ್ತವ್ಯ ಇತ್ಯಭಿಪ್ರೇತ್ಯ ವಿಷಯೋಽಸ್ಯ ಶಾಸ್ತ್ರಸ್ಯ ಭವನ್ನಾನಾತ್ಮಾಽಽತ್ಮಾ ವಾ । ಆದ್ಯೇಽಪ್ಯಪೇಕ್ಷಣೀಯತ್ವೇನ ಸರ್ವಸಿದ್ಧಸ್ಫಣಾದಿರ್ವಾ । ಅತಥಾವಿಧೋ ಧರ್ಮಾದಿರ್ವಾ ।

ಪಟುಕರಣಃ । ವಿದ್ವಾನ್ = ಕರ್ತವ್ಯೋಪಯುಕ್ತಜ್ಞಾನೀ । ಏತಾದೃಶ ಇತಿ ॥ ನಿಷ್ಫಲೇ ತೃಣಾದೌ । ಐಂದ್ರಿಯಕಸ್ಯಾವಿಷಯತ್ವಮುಪಪಾದ್ಯ ಅತೀಂದ್ರಿಯಸ್ಯಾಪಿ ತದುಪಪಾದಯತಿ – ಧರ್ಮಾದೀತಿ ॥ ಯದ್ವಾ ನಿಷ್ಫಲಸ್ಯಾವಿಷಯತ್ವಮುಪಪಾದ್ಯ ಸಫಲಸ್ಯಾನಾತ್ಮನಸ್ತದಾಹ – ಧರ್ಮಾದೀತಿ ॥

"ಅಸೌ" – ತೃಣಾದಿರೂಪವಾದ ವಿಷಯ ಎಂದರ್ಥ. "ಕಸ್ಮೈಚನ" – ಇಲ್ಲಿರುವ ಚನಶಬ್ದವು ಅಪಿ ಎಂಬುದರ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಅರ್ಥದಲ್ಲಿ ನಿಪಾತ ಅವ್ಯಯವಾದ ಶಬ್ದವಾಗಿದೆ. "ಅರ್ಥೀ" – ಫಲ ಅಥವಾ ಅದರ ಸಾಧನಗಳನ್ನು ಇಚ್ಛಿಸುವವನು. "ಸಮರ್ಥಃ" – ಕರಣಪಾಟವವುಳ್ಳವನು, "ವಿದ್ವಾನ್" ಕರ್ತವ್ಯಕರ್ಮಕ್ಕೆ ಅವಶ್ಯಕವಾದ ಜ್ಞಾನವನ್ನು ಹೊಂದಿರುವವನು, "ಏತಾದೃಶೇ" – ನಿಷ್ಫಲವಾದ ತೃಣಾದಿಗಳ ವಿಷಯದಲ್ಲಿ.

ಇಂದ್ರಿಯಗೋಚರವಾದ ಜಡವಸ್ತುಗಳು ವಿಷಯಗಳಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡಿ ಅತೀಂದ್ರಿಯವಾದ ಜಡವಸ್ತುಗಳೂ ಕೂಡ ವಿಷಯವಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ "ಧರ್ಮಾದಿಲಕ್ಷಣಸ್ತು" ಇತ್ಯಾದಿ ಗ್ರಂಥವು ಹೊರಟಿದೆ.

## ಅತೀಂದ್ರಿಯವಾದ ವಿಷಯಗಳು ಶಾಸ್ತ್ರಾಂತರಗಳಿಂದಲೇ ಸಿದ್ಧವಾಗಿದೆ

ಪರಿಮಳ – ಶಾಸ್ತ್ರಾಂತರಾದಿನೇತಿ ॥ ಕರ್ಮಮೀಮಾಂಸಯಾ ಧರ್ಮಾದಿಸ್ವರೂಪಸ್ಯ, ದೈವೀಮೀಮಾಂಸಾಯಾ ದೇವತಾದಿಸ್ವರೂಪಸ್ಯ , ಕಾಲಾದಿಸ್ವರೂಪಸ್ಯ ಜ್ಯೋತಿಃಶಾಸ್ತ್ರಾದಿನಾ ಸಿದ್ಧತ್ವಾದಿತಿ ಭಾವಃ ॥ ತತ ಏವೇತಿ ॥ ಸಾಕ್ಷಾತ್ ಪ್ರತೀತಿಸಿದ್ಧತ್ವಾದೇವ ಇತ್ಯರ್ಥಃ । ಸಂದಿಗ್ಧಾರ್ಥ ಏವ ನ್ಯಾಯವಿಷಯ ಇತಿ ಪ್ರಾಗುಕ್ತತ್ವಾದಿತಿ ಭಾವಃ । ಅತ ಏವ ಇತ್ಯಸ್ಯ ವಿವೃತಿಃ 'ಅದರ್ಶನಾತ್' ಇತ್ಯಂತೇನ ॥ ಪ್ರಯೋಜನಸ್ಯ ಇತ್ಯರ್ಥೀಗರ್ಥದಯೇಶಾಂ ಕರ್ಮಣೇತಿ ಷಷ್ಠೀ ।

ಅಥವಾ ನಿಷ್ಫಲವಾದದ್ದಕ್ಕೆ ವಿಷಯವಾಗುವುದಿಲ್ಲ ಎಂಬುದನ್ನು ಉಪಪಾದನೆ ಮಾಡಿದ್ದಾಯಿತು. ಈಗ ಸಫಲವಾದ ಅನಾತ್ಮಪದಾರ್ಥಕ್ಕೆ ಅವಿಷಯತ್ವವನ್ನು ಉಪಪಾದನೆ ಮಾಡಲು ''ಧರ್ಮಾದಿಲಕ್ಷಣಸ್ತು'' ಎಂಬ ವಾಕ್ಯವು ಹೊರಟಿದೆ.

''ಶಾಸ್ತ್ರಾಂತರಾದಿನಾ'' – ಧರ್ಮದ ಸ್ವರೂಪವು ಕರ್ಮಮೀಮಾಂಸಾಶಾಸ್ತ್ರದಿಂದ ಸಿದ್ಧವಾಗುತ್ತದೆ. ದೇವತೆಗಳ ಸ್ವರೂಪವು ದೈವೀಮೀಮಾಂಸಾಶಾಸ್ತ್ರದಿಂದ ಸಿದ್ಧವಾಗುತ್ತದೆ. ಅದರಂತೆ ಕಾಲ ಮೊದಲಾದವುಗಳ ಸ್ವರೂಪವು ಜ್ಯೋತಿಃಶಾಸ್ತ್ರದಿಂದ ಸಿದ್ಧವಾಗುತ್ತದೆ ಎಂಬುದು ಈ ವಾಕ್ಯದ ಅಭಿಪ್ರಾಯ.

''ತತ ಏವ'' – ಪ್ರತೀತಿಯಲ್ಲಿ ಸಾಕ್ಷಾತ್ತಾಗಿಯೇ ಸಿದ್ಧವಾಗಿರುವುದರಿಂದ ಎಂದರ್ಥ. ಸಂದಿಗ್ಧವಾದ ವಿಷಯವೇ ವಿಚಾರ ಮಾಡಲು ಅರ್ಹವಾಗುತ್ತದೆಂಬುದನ್ನು ಹಿಂದೆ ನಿರೂಪಿಸಿದ್ದೇವೆ ಎಂದು ತಿಳಿಯಬೇಕು.

''ಅನಾದಿತಃ'' ಎಂಬಲ್ಲಿಂದ ''ಅದರ್ಶನಾತ್'' ಎಂಬಲ್ಲಿಯ ತನಕ ವಾಕ್ಯಭಾಗವು ''ಅತ ಏವ'' ಎಂಬ ಪದದ ಅರ್ಥವಾಗಿದೆ. ''ಪ್ರಯೋಜನಸ್ಯ'' – 'ಅಧೀಗರ್ಥದಯೇಶಾಂ' ಎಂಬ ಸೂತ್ರವನ್ನನುಸರಿಸಿ ಕರ್ಮಣಿಷಷ್ಠೀವಿಭಕ್ತಿಯು ಪ್ರಯೋಜನಸ್ಯ ಎಂಬಲ್ಲಿ ತಿಳಿಯಬೇಕು.

## ವಿಷಯಾಭಾವಪೂರ್ವಪಕ್ಷವೇ ಮೊದಲು ಸಂಗತವಾಗಿದೆ

ವಾಕ್ಯಾರ್ಥಚಂದ್ರಿಕಾ – ಏವಂ ಹೇತೋರ್ವ್ಯಾಪ್ತಿಮುಪಪಾದ್ಯಾಸಿದ್ಧಿಂ ಪರಿಹರ್ತುಂ ಶಂಕತೇ – ವಿಷಯಾದೀತಿ ॥ ಸೂತ್ರೇ ಅಧಿಕಾರಿಸಮರ್ಪಕಾಥಶಬ್ದಸ್ಯ ವಿಷಯಸಮರ್ಪಕಬ್ರಹ್ಮಶಬ್ದಾಪೇಕ್ಷಯಾಽಽದಿತ್ವೇನ ತನ್ನಿವರ್ತ್ಯಪೂರ್ವಪಕ್ಷಸ್ಯ ಪ್ರಥಮತಃ ಕಥನೀಯತ್ವೇಽಪಿ ವಿಷಯಸಮರ್ಪಕೋಂಶಬ್ದಸ್ಯ ತತೋಽಪಿ ಆದಿತ್ವಾದ್ ವಿಷಯಾಭಾವೋಕ್ತ್ಯಾಽಧಿಕಾರ್ಯಭಾವಸಿದ್ಧಿವದಧಿಕಾರ್ಯಭಾವೋಕ್ತ್ಯಾ ವಿಷಯಾಭಾವಸಿದ್ಧೇರಭಾವೇನ ಲಾಘವಾಚ್ಚ ಸೂತ್ರೇ ಓಂಬ್ರಹ್ಮಶಬ್ದಾಭ್ಯಾಂ ತದರ್ಥಕಥನಪರಾ 'ಓತತ್ವಾಚೀ ಹ್ಯೋಂಕಾರಃ' ಇತ್ಯನುವ್ಯಾಖ್ಯಾನೇನ ಚ ಸೂಚಿತಪೂರ್ವಪಕ್ಷ ಏವ ಪ್ರಥಮತೋ ವಕ್ತವ್ಯ ಇತ್ಯಭಿಪ್ರೇತ್ಯ ವಿಷಯೋಽಸ್ಯ ಶಾಸ್ತ್ರಸ್ಯ ಭವನ್ನಾನಾತ್ಮಾಽಽತ್ಮಾ ವಾ । ಆದ್ಯೇಽಪ್ಯಪೇಕ್ಷಣೀಯತ್ವೇನ ಸರ್ವಸಿದ್ಧಸ್ಪಣಾದಿರ್ವಾ । ಅತಥಾವಿಧೋ ಧರ್ಮಾದಿರ್ವಾ ।

ದ್ವಿತೀಯೇಽಪಿ ಜೀವ ಈಶ್ವರೋ ವಾ । ಆದ್ಯೇಽಪಿ ಸ್ವಾತ್ಮಾ ಪರಾತ್ಮಾ ವೇತಿ ವಿಕಲ್ಪಾನ್ ಮನಸಿ ನಿಧಾಯಾದ್ಯಂ ತಾವನ್ನಿರಾಕರೋತಿ – ನ ತಾವದಿತಿ ॥

ವಿಷಯಾದಿವೈಧುರ್ಯವೆಂಬ ಹೇತುವಿಗೆ ವ್ಯಾಪ್ತಿಯನ್ನು ಉಪಪಾದನೆ ಮಾಡಿದ್ದಾಯಿತು. ಈಗ ಅಸಿದ್ಧಿಯನ್ನು ಪರಿಹರಿಸಲು "ವಿಷಯಾದಿ" ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಸೂತ್ರದಲ್ಲಿ ಅಧಿಕಾರಿಸಮರ್ಪಕವಾದ 'ಅಥ'ಶಬ್ದವಾದ ಮೇಲೆ ವಿಷಯಸಮರ್ಪಕವಾದ ಬ್ರಹ್ಮಶಬ್ದವಿದೆ. ಈ ಬ್ರಹ್ಮಶಬ್ದಕ್ಕಿಂತಲೂ ಮೊದಲಿರುವ 'ಅತಃ'ಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ಮೊದಲು ಹೇಳಬೇಕಲ್ಲವೇ?

ಹೌದು; ಆದರೆ ಬ್ರಹ್ಮಶಬ್ದವಷ್ಟೇ ಅಲ್ಲದೆ ಓಂಕಾರವೂ ಕೂಡ ವಿಷಯಸಮರ್ಪಕವಾಗಿದೆ. ಇದು ಅತಶ್ಶಬ್ದಕ್ಕಿಂತಲೂ ಮೊದಲೇ ಪ್ರಯುಕ್ತವಾಗಿದೆ. ಆದ್ದರಿಂದ ಮೊದಲು ವಿಷಯಾಭಾವಪೂರ್ವಪಕ್ಷ ಮಾಡುತ್ತಿರುವುದು ಸೂತ್ರಕ್ರಮಕ್ಕೆ ಅನುಗುಣವಾಗಿದೆ.

ಅಥವಾ ವಿಷಯಾಭಾವವನ್ನು ಹೇಳುವುದರಿಂದ ಅಧಿಕಾರ್ಯಭಾವವು ಹೇಗೆ ಸಿದ್ಧವಾಗುತ್ತದೋ ಅದರಂತೆ ಅಧಿಕಾರ್ಯಭಾವವನ್ನು ಹೇಳುವುದರಿಂದ ವಿಷಯಾಭಾವವು ಸಿದ್ಧವಾಗುವುದಿಲ್ಲ. ಹೀಗೆ ಲಾಘವವಿರುವುದರಿಂದಲೂ ಮೊದಲು ವಿಷಯಾಭಾವಪೂರ್ವಪಕ್ಷವನ್ನು ಮಾಡಿರುತ್ತಾರೆ.

ಸೂತ್ರದಲ್ಲಿ ಓಂಕಾರ ಮತ್ತು ಬ್ರಹ್ಮಶಬ್ದಗಳಿಂದ ಇವುಗಳ ಅರ್ಥವನ್ನು ಹೇಳುವ 'ಓತತ್ವವಾಚೀ ಹ್ಯೋಂಕಾರಃ' ಎಂಬ ಅನುವ್ಯಾಖ್ಯಾನದಿಂದ ಸೂಚಿತವಾದ ಪೂರ್ವಪಕ್ಷವನ್ನೇ ಮೊದಲು ಹೇಳಬೇಕು ಎಂಬ ಅಭಿಪ್ರಾಯದಿಂದ ವಿಷಯಾಭಾವಪೂರ್ವಪಕ್ಷವನ್ನು ಮೊದಲು ಮಾಡುತ್ತಿರುವುದು ಸಮಂಜಸವಾಗಿದೆ. ಈ ಜಿಜ್ಞಾಸೆಗೆ ಯಾವುದು ವಿಷಯವೋ ಅದೇ ಶಾಸ್ತ್ರಕ್ಕೂ ಕೂಡ ವಿಷಯವಾಗಿದೆ. ಆ ವಿಷಯವು ಅನಾತ್ಮವೋ ಅಥವಾ ಆತ್ಮನೋ? ಮೊದಲನೆಯ ಪಕ್ಷದಲ್ಲಿ ಆ ಅನಾತ್ಮವಾದದ್ದು ಉಪೇಕ್ಷಣೀಯವೆಂದು ಎಲ್ಲರಿಗೂ ಸಿದ್ಧವಾದ ತೃಣಾದಿಗಳೋ? ಅಥವಾ ಉಪೇಕ್ಷಣೀಯವಲ್ಲದ ಧರ್ಮಾದಿಗಳೋ? ಎರಡನೆಯ ಪಕ್ಷದಲ್ಲೂ ಕೂಡ ಆ ಆತ್ಮನೆಂದರೆ ಜೀವಾತ್ಮನೋ? ಪರಮಾತ್ಮನೋ? ಜೀವಾತ್ಮನೆಂಬ ಮೊದಲನೆಯ ಪಕ್ಷದಲ್ಲೂ ಕೂಡ ಸ್ವಾತ್ಮನೋ? ಅಥವಾ ಪರಾತ್ಮನೋ?

ಈ ಎಲ್ಲಾ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಪಕ್ಷವನ್ನು "ನ ತಾವತ್" ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ.

ವಿವರಣೆ – 'ಜಿಜ್ಞಾಸಾ ನ ಕರ್ತವ್ಯಾ ವಿಷಯಾದಿವೈಧುರ್ಯಾತ್' ಎಂಬ ಅನುಮಾನದಲ್ಲಿ ವಿಷಯಾದಿವೈಧುರ್ಯಕ್ಕೂ ಜಿಜ್ಞಾಸೆಯ ಅಕರ್ತವ್ಯತ್ವಕ್ಕೂ ವ್ಯಾಪ್ತಿಯನ್ನು ಇಲ್ಲಿಯ ತನಕ ಉಪಪಾದನೆ ಮಾಡಿದ್ದಾಯಿತು. ಪ್ರಕೃತ ವಿಷಯಾದಿವೈಧುರ್ಯವೆಂಬ ಹೇತುವಿಗೆ ಅಸಿದ್ಧಿಯನ್ನು ಪರಿಹರಿಸಲು ಹೊರಟಿದ್ದಾರೆ.

ಸೂತ್ರದಲ್ಲಿ ಅಥ ಎಂಬ ಶಬ್ದವು ಮೊದಲಿದೆ. ಇದು ಅಧಿಕಾರಿಯನ್ನು ಹೇಳುತ್ತಿದೆ. ಇದಕ್ಕನು-ಗುಣವಾಗಿ ಅಧಿಕಾರ್ಯಭಾವ ಪೂರ್ವಪಕ್ಷವನ್ನೇ ಮೊದಲು ಮಾಡಬೇಕು. ಆದರೆ ಗ್ರಂಥದಲ್ಲಿ ಬ್ರಹ್ಮ-ಶಬ್ದದಿಂದ ಪರಿಹಾರವಾಗುವ ವಿಷಯಾಭಾವಪೂರ್ವಪಕ್ಷವನ್ನೇ ಮೊದಲು ಮಾಡಿರುತ್ತಾರೆ. ಇದು ತಪ್ಪಲ್ಲವೇ?

ಓಂಕಾರವೂ ಕೂಡ ವಿಷಯಸಮರ್ಪಕವಾಗಿದೆ. ಇದು ಅಧಿಕಾರಿಸೂಚಕವಾದ ಅಥ ಎಂಬ ಪದಕ್ಕಿಂತಲೂ ಕೂಡ ಮೊದಲು ಪ್ರಯುಕ್ತವಾಗಿದೆ. ಆದ್ದರಿಂದ ಸೂತ್ರಕ್ಕೆ ಅನುಗುಣವಾಗಿಯೇ ವಿಷಯಾಭಾವಪೂರ್ವಪಕ್ಷವನ್ನು ಮಾಡಿರುತ್ತಾರೆ. ಮತ್ತು ವಿಷಯಾಭಾವವು ಸಿದ್ಧವಾದರೆ ಅಧಿಕಾರ್ಯ-ಭಾವವು ತಾನಾಗಿಯೇ ಸಿದ್ಧವಾಗುತ್ತದೆ. ಆದರೆ ಅಧಿಕಾರ್ಯಭಾವವನ್ನು ಹೇಳಿದರೆ ವಿಷಯಾಭಾವವು ತಾನಾಗಿಯೇ ಸಿದ್ಧವಾಗುವುದಿಲ್ಲ. ಏಕೆಂದರೆ ವಿಷಯ ಹಾಗೂ ಪ್ರಯೋಜನಗಳು ಇಲ್ಲದಿದ್ದರೆ ಅಧಿ ಕಾರಿಯೂ ಕೂಡ ಇರುವುದಿಲ್ಲವೆಂಬುದು ಸಿದ್ಧವಾಗುತ್ತದೆ. ಆದರೆ ಅಧಿಕಾರಿ ಇಲ್ಲ ಎಂಬ ಮಾತ್ರಕ್ಕೆ ವಿಷಯವಿಲ್ಲವೆಂದು ಹೇಳಲಾಗದು.

ಜಿಜ್ಞಾಸೆಗೆ ಯಾವುದು ವಿಷಯವೋ ಶಾಸ್ತ್ರಕ್ಕೂ ಕೂಡ ಅದೇ ವಿಷಯವಾಗುತ್ತದೆ. ಉಪೇಕ್ಷಣೀಯವಾದ ತೃಣಾದಿಗಳು ವಿಷಯವೋ? ಉಪೇಕ್ಷಣೀಯವಲ್ಲದ ಧರ್ಮಾದಿಗಳು ವಿಷಯವೋ? ಆತ್ಮನು ವಿಷಯನೆಂದರೆ ಜೀವನೋ ಪರಮಾತ್ಮನೋ? ಜೀವನೆಂದು ಹೇಳಿದರೆ ಅವನು ಸ್ವಾತ್ಮನೋ ಅಥವಾ ಬೇರೆ ಆತ್ಮನೋ? ಎಲ್ಲ ವಿಕಲ್ಪಗಳನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಇಲ್ಲಿ ವಿಚಾರ ಮಾಡುತ್ತಿದ್ದಾರೆ.

## ಸೂಚೀಕಟಾಹನ್ಯಾಯದಿಂದ ಮೊದಲು ಅನಾತ್ಮಪಕ್ಷದ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – ಅತ್ರ ಅಭ್ಯರ್ಹಿತತ್ವಾದಾತ್ಮಪಕ್ಷಸ್ಯ ಪ್ರಥಮಂ ನಿರಾಕರ್ತವ್ಯತ್ವೇಽಪಿ ಸೂಚಿಕಟಾಹನ್ಯಾಯೇನ ಅನಾತ್ಮಪಕ್ಷನಿರಾಕರಣಮಾದೌ ಕೃತಮಿತಿ ಮಂತವ್ಯಮ್ । 'ಪ್ರತ್ಯಕ್ಷಾದಿನಾ'

ಇತ್ಯಾದಿಪದೇನ ಲೋಕಸಿದ್ಧಾನುಮಾನವಾಕ್ಯಯೋಃ ಸಂಗ್ರಹಃ । ಅವಿಜ್ಞಾತೇತಿ ॥ ಕಾರಣಂ ಪ್ರಮಾಣಂ ಚೋಪಪತ್ತಿಶ್ಚ ತಾಭ್ಯಾಮಿತ್ಯಸ್ಯ ಅವಿಜ್ಞಾತತತ್ತ್ವ ಇತ್ಯನೇನ ಸಂಬಂಧಃ । ಅತ್ರ ನ ವಿಶೇಷತೋ ಜ್ಞಾತಂ ತತ್ತ್ವಮಸ್ಯೇತಿ ವಿಶೇಷಜ್ಞಾನರಹಿತತ್ವೋಕ್ತ್ಯಾ ಸಂಶಯಕಾರಣೀಭೂತಧರ್ಮಿಜ್ಞಾನರೂಪಸಾಮಾನ್ಯಜ್ಞಾನಲಾಭೇನ ಸಂದಿಗ್ಧತ್ವಸೂಚನಾತ್ ಪ್ರಕೃತೋಪಯೋಗ ಇತಿ ಜ್ಞೇಯಮ್ ।

ಆತ್ಮಾ ಹಾಗೂ ಅನಾತ್ಮಗಳಲ್ಲಿ ಆತ್ಮನೇ ಶ್ರೇಷ್ಠನಾಗಿರುವುದರಿಂದ ಮೊದಲು ಆತ್ಮಪಕ್ಷವನ್ನು ನಿರಾಕರಣೆ ಮಾಡಬೇಕು. ಆದರೂ ಕೂಡ ಅನಾತ್ಮಪಕ್ಷದ ನಿರಾಕರಣೆಯು ಅತ್ಯಂತ ಸುಲಭವಾಗಿರುವುದರಿಂದ ಸೂಚೀ-ಕಟಾಹನ್ಯಾಯವನ್ನು ಅನುಸರಿಸಿ ಮೊದಲು ಅನಾತ್ಮಪಕ್ಷವನ್ನೇ ನಿರಾಕರಣೆ ಮಾಡಿದ್ದಾರೆಂದು ತಿಳಿಯಬೇಕು. "ಪ್ರತ್ಯಕ್ಷಾದಿನಾ" ಎಂಬಲ್ಲಿರುವ ಆದಿಪದದಿಂದ ಲೋಕಸಿದ್ಧವಾದ ಅನುಮಾನ ಮತ್ತು ವಾಕ್ಯಗಳನ್ನು ಸಂಗ್ರಹ ಮಾಡಬೇಕು.

"ಅವಿಜ್ಞಾತತತ್ತ್ವೇಽರ್ಥೇ" – ಕಾರಣಶಬ್ದಕ್ಕೆ ಪ್ರಮಾಣ ಎಂದರ್ಥ. ಪ್ರಮಾಣ ಮತ್ತು ಉಪಪತ್ತಿಗಳಿಂದ ಅವಿಜ್ಞಾತವಾದ ಯಾವ ತತ್ತ್ವವಿದೆಯೋ ತಾದೃಶವಾದ ಅರ್ಥದಲ್ಲಿ ಎಂಬುದಾಗಿ ಅನ್ವಯಾರ್ಥವನ್ನು ತಿಳಿಯಬೇಕು. ಇಲ್ಲಿ ತತ್ತ್ವವು ವಿಶೇಷವಾಗಿ ತಿಳಿಯಲ್ಪಟ್ಟಿಲ್ಲ ಎಂದು ಹೇಳಿದ್ದರಿಂದ ಸಂಶಯಕ್ಕೆ ಕಾರಣೀಭೂತವಾದ ಧರ್ಮಿಜ್ಞಾನವೆಂಬ ಸಾಮಾನ್ಯಜ್ಞಾನದ ಲಾಭವು ಆಗುವುದರಿಂದ ಸಂದಿಗ್ಧತ್ವವನ್ನು ಸೂಚನೆ ಮಾಡಿದಂತಾಯಿತು. ಇದು ಪ್ರಕೃತಕ್ಕೆ ಉಪಯುಕ್ತವಾಗಿದೆ ಎಂದು ತಿಳಿಯಬೇಕು.

## ನ್ಯಾಯಗಳಿಗೆ ಸಾಧನತ್ವವೇ ಇರುವುದಿಲ್ಲ

ವಾಕ್ಯಾರ್ಥಚಂದ್ರಿಕಾ – ನಿಶ್ಚಿತಸ್ಯ ನ್ಯಾಯವಿಷಯತ್ವಂ ಯುಕ್ತಿವಿರುದ್ಧಂ ಚೇತ್ಯಾಹ – ನಿಷ್ಪಾದಿತೇತಿ ॥ ನಿಷ್ಪಾದಿತಾ ಕ್ರಿಯಾ ಯಸ್ಮಿಂಸ್ತಸ್ಮಿನ್ ಕಾರಕೇ ಕ್ರಿಯಾರೂಪಂ ತದುಪಕಾರಕಂ ವಾ ವಿಶೇಷಮಕುರ್ವತಃ ಕ್ರಿಯಾಸಾಧಕತ್ವರೂಪಂ ಸಾಧನತ್ವಂ ನ ಸ್ಯಾದಿತ್ಯರ್ಥಃ । ನಿಷ್ಪಾದಿತಾ ಪ್ರಮಿತಿಲಕ್ಷಣಾ ಕ್ರಿಯಾ ಯಸ್ಯ ಕರ್ಮಣೋ ವಿಷಯಸ್ಯ ಸ ಇಹ ತಥೋಕ್ತ ಇತಿ ಕಲ್ಪತರುಃ ॥ ಅಸಾವಿತಿ ॥ ಉಪೇಕ್ಷಣೀಯ ಇತ್ಯರ್ಥಃ । ಏವಂವಿಧೇ ಚೇತಿ ॥ ಉಪೇಕ್ಷಣೀಯವಿಷಯಕ ಇತ್ಯರ್ಥಃ ।

ನಿಶ್ಚಿತವಾದದ್ದಕ್ಕೆ ನ್ಯಾಯವಿಷಯತ್ವವು ಯುಕ್ತಿವಿರುದ್ಧವೂ ಕೂಡ ಆಗಿದೆ ಎಂಬುದನ್ನು "ನಿಷ್ಪಾದಿತ" ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ನಿಷ್ಪನ್ನವಾದ ಯಾವ ಕ್ರಿಯೆಯಿದೆಯೋ ಅದು ಕರ್ಮಕಾರಕದಲ್ಲಿ ಕ್ರಿಯಾರೂಪವಾಗಬೇಕು ಅಥವಾ ಕ್ರಿಯೆಗೆ ಉಪಕಾರಕವಾಗಬೇಕು. ಇಂಥ

ಯಾವುದೇ ವಿಶೇಷವನ್ನು ಮಾಡದೇ ಇದ್ದರೆ ಕ್ರಿಯಾಸಾಧಕತ್ವರೂಪವಾದ ಸಾಧನತ್ವವು ಪ್ರಾಪ್ತವಾಗುವುದಿಲ್ಲ ಎಂದರ್ಥ. ಕಲ್ಪತರುವಿನಲ್ಲಿ ಕ್ರಿಯಾಪದಕ್ಕೆ ಪ್ರಮಿತಿ ಎಂಬರ್ಥವನ್ನು ವಿವಕ್ಷಿಸಿ ನಿಷ್ಪಾದಿತವಾದ ಪ್ರಮಿತಿರೂಪವಾದ ಯಾವ ಕ್ರಿಯೆಯಿದೆಯೋ ಆ ಪ್ರಮಿತಿರೂಪವಾದ ಕ್ರಿಯೆಯು ಮೊದಲೇ ಸಿದ್ಧವಾಗಿರುವುದರಿಂದ ಈ ನ್ಯಾಯಗಳಿಗೆ ಯಾವುದೇ ರೀತಿಯಲ್ಲಿ ಸಾಧನತ್ವವು ಬರುವುದಿಲ್ಲ ಎಂಬುದಾಗಿ ಕಲ್ಪತರುವಿನಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಅಸೌ'' ಎಂಬ ಪದಕ್ಕೆ ಉಪೇಕ್ಷಣೀಯವಾದದ್ದು ಎಂದರ್ಥ. ''ಏವಂವಿಧೇ'' ಉಪೇಕ್ಷಣೀಯವಾದದ್ದರಲ್ಲಿ ಅಧಿಕಾರಿಯು ಇರುವುದಿಲ್ಲ ಎಂದರ್ಥ.

ವಿವರಣೆ – ವೃಕ್ಷವು ಮೊದಲೇ ತುಂಡಾಗಿರುತ್ತದೆ. ಆಗ ಅಲ್ಲಿ ಕೊಡಲಿಗೆ ಛೇದನ ಮಾಡುವ ವ್ಯಾಪಾರವಿರುವುದಿಲ್ಲ. ಆಗ ಅದು ಸಾಧನವು ಕೂಡ ಆಗುವುದಿಲ್ಲ. ಇದರಂತೆ ಮೊದಲೇ ಜ್ಞಾನವು ನಿಷ್ಪನ್ನವಾಗಿದೆ. ಪುನಃ ನ್ಯಾಯಗಳಿಗೆ ಜ್ಞಾನವನ್ನು ಹುಟ್ಟಿಸುವ ವ್ಯಾಪಾರವು ಇರುವುದಿಲ್ಲ.

ವಾಕ್ಯಾರ್ಥಚಂದ್ರಿಕಾ – ಸಾಮಾನ್ಯವಿವಕ್ಷಯಾ ನಪುಂಸಕನಿರ್ದೇಶೋಽಯಮಿತಿ ಜ್ಞಾತವ್ಯಮ್ । ತೇನ ಜಿಜ್ಞಾಸಾಯಾ ವಿಶೇಷ್ಯತ್ವೇ ಸ್ತ್ರೀಲಿಂಗಾಪತ್ತೇಸ್ತೃಣಾದೇರರ್ಥಸ್ಯ ವಿಶೇಷ್ಯತ್ವೇ ತು ವಿಷಯಸ್ಯ ಕುತ್ರಾಪಿ ಸಾಧಿಕಾರಿತ್ವಾಭಾವಾದಪ್ರಸಕ್ತಪ್ರತಿಷೇಧಾಪತ್ತಿರಿತಿ ದೂಷಣಮಪಾಸ್ತಂ ಭವತಿ ॥ ನ ಚೈತಾದೃಶ ಇತಿ ॥ 'ಅರ್ಥೀ ಸಮರ್ಥಃ' ಇತ್ಯತ್ರ ಅರ್ಥತ ಇತ್ಯರ್ಥ್ಯತ ಇತಿ ವ್ಯುತ್ಪತ್ತಿಭ್ಯಾಂ ಕ್ರಮೇಣ ವಿಷಯಃ ಪ್ರಯೋಜನಂ ಚಾರ್ಥೌ ಜ್ಞೇಯತ್ವೇನ ವಿಷಯವತ್ತಾ ಕಾಮ್ಯತ್ವೇನ ಪ್ರಯೋಜನವತ್ತಾ ಚಾರ್ಥಿತಾ ವಿವಕ್ಷಿತಾ । ತತಶ್ಚ ಏತಾದೃಶೇ ನಿಶ್ಚಿತೇಽರ್ಥೇ ವಿಷಯೇಽರ್ಥಿತಾ ಜಿಜ್ಞಾಸ್ಯತ್ವೇನ ತದ್ವತ್ತಾ ಏತಾದೃಶೇ ಅವಿದ್ಯಮಾನೇಽರ್ಥೇ ಪ್ರಯೋಜನೇಽರ್ಥಿತಾ ಕಾಮ್ಯತ್ವೇನ ತದ್ವತ್ತಾ ಪುರುಷಸ್ಯ ನ ಹಿ ಸಂಭವತೀತ್ಯರ್ಥಃ ।

ಏವಂವಿಧೇ ಎಂಬುದು ಸಾಮಾನ್ಯವಿವಕ್ಷೆಯಿಂದ ನಪುಂಸಕನಿರ್ದೇಶಶಬ್ದವಾಗಿದೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಜಿಜ್ಞಾಸೆಯು ವಿಶೇಷ್ಯವಾಗುವುದಾದರೆ ಏವಂವಿಧಾಯಾಃ ಎಂಬುದಾಗಿ ಸ್ತ್ರೀಲಿಂಗನಿರ್ದೇಶವನ್ನು ಮಾಡಬೇಕಾಗುತ್ತದೆ. ಉದಾಸೀನವಾದ ತೃಣಾದಿಪದಾರ್ಥಗಳು ವಿಶೇಷ್ಯವಾಗುವುದಾದರೆ ವಿಷಯವು ಎಲ್ಲಿಯೂ ಕೂಡ ಅಧಿಕಾರಿ ಉಳ್ಳದ್ದಾಗುವುದಿಲ್ಲ. ಆಗ ಅಪ್ರಸಕ್ತಪ್ರತಿಷೇಧವನ್ನು ಮಾಡಿದಂತಾಗುತ್ತದೆ. ಈ ದೋಷವನ್ನು ಪರಿಹರಿಸಿದಂತಾಯಿತು.

''ನ ಚ ಏತಾದೃಶ'' – ಅರ್ಥೀ ಸಮರ್ಥಃ ಎಂಬಲ್ಲಿ ಅರ್ಯರ್ತೇ ಇತಿ ಎಂಬ ನಿಷ್ಪತ್ತಿಯಿಂದ ಹಾಗೂ ಅರ್ಥ್ಯತೇ ಇತಿ ಎಂಬ ನಿಷ್ಪತ್ತಿಯಿಂದ ವಿಷಯ ಮತ್ತು ಪ್ರಯೋಜನಗಳು ಹೇಳಲ್ಪಡುತ್ತವೆ. ಈ

ವಿಷಯಪ್ರಯೋಜನಗಳೆಂಬ ಎರಡು ಅರ್ಥಗಳು ಜ್ಞೇಯತ್ವೇನ ವಿಷಯವತ್ತ್ವವು ಕಾಮ್ಯತ್ವೇನ ಪ್ರಯೋಜನವತ್ತ್ವವು ಅರ್ಥಿತ್ವವೆಂದು ಕರೆಸಿಕೊಳ್ಳುತ್ತವೆ. ಆದ್ದರಿಂದ ಇಂಥ ನಿಶ್ಚಿತವಾದ ಅರ್ಥದಲ್ಲಿ ಜಿಜ್ಞಾಸ್ಯತ್ವೇನ ತದ್ವತ್ತಾ ಎಂಬುದು ಉದಾಸೀನವಾದ ತೃಣಾದಿಗಳಲ್ಲಿ ಯಾವುದೇ ಪ್ರಯೋಜನವು ಇರು- ವುದಿಲ್ಲವಾದ್ದರಿಂದ ಕಾಮ್ಯತ್ವೇನ ಅರ್ಥಿತ್ವವು ಯುಕ್ತವಾಗುವುದಿಲ್ಲ. ಪುರುಷನಲ್ಲಿ ಅಂಥ ಅರ್ಥಿತ್ವವು ಬರುವುದಿಲ್ಲ ಎಂದರ್ಥ.

ವಿವರಣೆ – ಏವಂವಿಧ ಎಂಬುದಕ್ಕೆ ಜಿಜ್ಞಾಸೆಯನ್ನು ವಿಶೇಷ್ಯವನ್ನಾಗಿ ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಜಿಜ್ಞಾಸಾ ಶಬ್ದವು ಸ್ತ್ರೀಲಿಂಗವಾಗಿದೆ. ಆಗ ಏವಂವಿಧಾಯಾಂ ಎಂದು ಹೇಳಬೇಕಾಗುತ್ತದೆ. ತೃಣಾದಿರೂಪವಾದ ಅರ್ಥವನ್ನು ವಿಶೇಷ್ಯವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ತೃಣಾದಿಗಳಿಗೆ ಯಾರೂ ಕೂಡ ಅಧಿಕಾರಿಗಳು ಇರುವುದಿಲ್ಲ. ತೃಣಾದಿಗಳ ಜಿಜ್ಞಾಸೆಗಷ್ಟೇ ಅಧಿಕಾರಿಯು ಪ್ರಸಕ್ತನಾ- ಗುತ್ತಾನೆ. ಅಧಿಕಾರಿಯೇ ಇಲ್ಲದಿರುವಾಗ ನಿಷೇಧ ಮಾಡಿದರೆ ಅಪ್ರಸಕ್ತನಿಷೇಧವನ್ನು ಮಾಡಿದಂತಾ- ಗುತ್ತದೆ. ಆದ್ದರಿಂದ ಜಿಜ್ಞಾಸೆಯನ್ನೇ ಇಲ್ಲಿ ವಿಶೇಷ್ಯವನ್ನಾಗಿ ವಿವಕ್ಷಿಸಬೇಕು. 'ಸಾಮಾನ್ಯೇ ನಪುಂಸಕಮ್' ಎಂಬಂತೆ ಸಾಮಾನ್ಯವಿವಕ್ಷೆಯಿಂದ ಏವಂವಿಧೇ ಎಂಬ ನಪುಂಸಕನಿರ್ದೇಶವು ಯುಕ್ತವಾಗುತ್ತದೆ. ಆದ್ದರಿಂದ ಉಪೇಕ್ಷಣೀಯವಿಷಯತೆ ಎಂಬುದು ಇದರ ಅರ್ಥ. ಇಂಥ ಉಪೇಕ್ಷಣೀಯಕ್ಕೆ ವಿಷಯ- ವಾದ ತೃಣಾದಿಗಳ ಬಗ್ಗೆ ಜಿಜ್ಞಾಸೆ ಮಾಡುವಾಗ ಎಂಬುದು ಇದರ ಅರ್ಥ.

'ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ' ಎಂಬಂತೆ ಅರ್ಥಿಯಾದವನೇ ಅಧಿಕಾರಿಯಾಗುತ್ತಾನೆ. ತೃಣಾದಿಗಳ ವಿಷಯದಲ್ಲಿ ಯಾರಿಗೂ ಕೂಡ ಅರ್ಥಿತ್ವವು ಇರುವುದಿಲ್ಲ. ಅರ್ಥೀ ಎಂಬುದಕ್ಕೆ ಅರ್ಥ್ಯತೇ ಇತಿ ಅರ್ಥೀ; ಅರ್ಯತೇ ಇತಿ ಅರ್ಥೀ ಎಂಬುದಾಗಿ ಎರಡು ಬಗೆಯ ವ್ಯುತ್ಪತ್ತಿಗಳು ಇರುತ್ತವೆ. ಅರ್ಥೀ ಎಂಬ ಪದಕ್ಕೆ ಪ್ರಯೋಜನ ಹಾಗೂ ವಿಷಯ ಎಂದು ಎರಡರ್ಥ. 'ಅರ್ಥ ಯಾಞ್ಚಾಯಾಂ' ಎಂಬ ನಿಷ್ಪನ್ನವಾದಾಗ ಅರ್ಥ್ಯತೇ ಇತಿ ಅರ್ಥೀ ಎಂಬುದಾಗಿ ವಿವಕ್ಷಿಸಿ ಪ್ರಯೋಜನ- ವೆಂಬ ಅರ್ಥವನ್ನು ಹೇಳಬೇಕು. ಅರ್ಯತೇ = ಜ್ಞಾಯತೇ ಎಂಬ ನಿಷ್ಪತ್ತಿಯನ್ನು ಮಾಡಿ ವಿಷಯ ಎಂಬರ್ಥವು ದೊರೆಯುತ್ತದೆ. 'ಋ ಗತೌ' ಧಾತುವಿಗೆ ಉಣಾದಿಕಪ್ರತ್ಯಯವನ್ನು ಮಾಡಿ ಅರ್ಥ ಎಂಬ ಶಬ್ದವು ನಿಷ್ಪನ್ನವಾಗುತ್ತದೆಂದು ಪ್ರಮಾಣಪದ್ಧತಿಯಲ್ಲಿ ತಿಳಿಸಿದ್ದಾರೆ. ಅರ್ಥೌ ಎಂದರೆ ವಿಷಯ- ಪ್ರಯೋಜನಗಳು ಎಂದರ್ಥ. 'ಅರ್ಥೌ ಅಸ್ಯ ಸ್ತಃ ಇತಿ ಅರ್ಥೀ' ಎಂಬುದಾಗಿ ನಿಷ್ಪನ್ನವಾಗಿದೆ. ಅಸ್ಯ ಎಂಬಲ್ಲಿರುವ ಷಷ್ಠಿಗೆ ವಿಷಯವನ್ನು ಜ್ಞೇಯತ್ವೇನ ಉಳ್ಳವನು; ಪ್ರಯೋಜನವನ್ನು ಕಾಮ್ಯತ್ವೇನ ಉಳ್ಳವನು ಎಂದರ್ಥ. ವಿಷಯದ ಜ್ಞಾನವನ್ನು ಯಾರು ಅಪೇಕ್ಷಿಸುತ್ತಾನೋ ಪ್ರಯೋಜನವನ್ನು ಯಾರು

ಕಾಮನೆ ಮಾಡುತ್ತಾನೋ ಅವನು ಅರ್ಥೀ ಎಂಬುದಾಗಿ ಕರೆಸಿಕೊಳ್ಳುತ್ತಾನೆ. ಜ್ಞಾತವ್ಯತ್ವೇನ ವಿಷಯವುಳ್ಳವನು ಯಾರೋ, ಕಾಮ್ಯತ್ವೇನ ಪ್ರಯೋಜನವುಳ್ಳವನು ಯಾರೋ ಅವನು ಅರ್ಥೀ ಎಂಬುದಾಗಿ ಕರೆಸಿಕೊಳ್ಳುತ್ತಾನೆ. ವಿಷಯವು ಮೊದಲೇ ಜ್ಞಾತವಾದರೆ ಜ್ಞಾತವ್ಯವಾಗಲು ಸಾಧ್ಯವಿಲ್ಲ. ಪ್ರಕೃತ ತೃಣಾದಿಗಳ ಜ್ಞಾನದಿಂದ ಯಾವುದೇ ಪ್ರಯೋಜನವು ಇರುವುದಿಲ್ಲ. ಅವಿದ್ಯಮಾನವಾದ ಪ್ರಯೋಜನವುಳ್ಳದ್ದರಲ್ಲಿ ಕಾಮ್ಯತ್ವೇನ ತದ್ವತ್ತಾ ಎಂಬುದು ಯುಕ್ತವಾಗುವುದಿಲ್ಲ.

## 'ಏವಂವಿಧೇ' ಎಂಬುದಕ್ಕೆ ಎರಡನೆಯ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ – ಯದ್ವಾ ನ ಚೈತಾದೃಶೇಽರ್ಥೇ ಇತಿ ವಕ್ಷ್ಯಮಾಣಮರ್ಥ ಇತ್ಯೇವಂವಿಧೇ ಚೇತ್ಯನೇನಾಪಿ ಸಂಬಧ್ಯತೇ । ಏವಂವಿಧೇ ಏತಾದೃಶ ಇತ್ಯನಯೋಃ ನಿಶ್ಚಿತೇ ನಿಷ್ಪ್ರಯೋಜನೇ ಚೇತ್ಯುಭಯಮಪ್ಯರ್ಥಃ । ಸತಿಸಪ್ತಮ್ಯೌ ಚೇಮೇ । ಸಪ್ತಮ್ಯಂತೋಽರ್ಥಶಬ್ದೋ ವಿಷಯಮಾತ್ರಪರಃ । ಅರ್ಥೀಶಬ್ದಸ್ತ್ವುಕ್ತರೀತ್ಯಾ ಉಭಯಪರಃ । ಏವಂ ಚ ನಿಷ್ಪ್ರಯೋಜನೇ ನಿಶ್ಚಿತೇ ಚ ವಿಷಯೇ ಸತ್ಯಧಿಕಾರೀ ದೂರೋತ್ಸಾರಿತೋ ಯತೋಽರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ । ನ ಚ ನಿಷ್ಪ್ರಯೋಜನೇ ನಿಶ್ಚಿತೇ ಚ ವಿಷಯೇ ಸತ್ಯುಕ್ತೋಭಯವಿಧಾರ್ಥಿತಾ ಸಂಭವತೀತ್ಯರ್ಥಃ ।

ಅಥವಾ ಮುಂದಿನ ವಾಕ್ಯದಲ್ಲಿರುವ ಅರ್ಥೇ ಎಂಬುದನ್ನು ಇಲ್ಲಿ ಅನ್ವಯ ಮಾಡಿಕೊಳ್ಳಬೇಕು. ಆಗ ಇಂಥ ಅರ್ಥವು ಇರುತ್ತಿರಲು ಎಂದರ್ಥ. ಏವಂವಿಧೇ ಹಾಗೂ ಏತಾದೃಶೇ ಎಂಬೆರೆಡು ಪದಗಳಿಗೆ ನಿಶ್ಚಿತವಾದ ಹಾಗೂ ನಿಷ್ಪ್ರಯೋಜನವಾದ ಎಂಬುದಾಗಿ ಎರಡೂ ಅರ್ಥಗಳಿರುತ್ತವೆ. ಇವೆರಡೂ ಸತಿಸಪ್ತಮ್ಯಂತವಾಗಿ ಪ್ರಯುಕ್ತವಾಗಿವೆ. ಸಪ್ತಮ್ಯಂತವಾದ ಅರ್ಥಶಬ್ದವು ಕೇವಲ ವಿಷಯಪರವಾಗಿದೆ. ಅರ್ಥೀ ಶಬ್ದವು ಹಿಂದೆ ಹೇಳಿದಂತೆ ಉಭಯಪರವಾಗಿದೆ. ಆದ್ದರಿಂದ ನಿಷ್ಪ್ರಯೋಜನವೆಂದು ನಿಶ್ಚಿತವಾದ ವಿಷಯವು ಇರುತ್ತಿರಲು ಅಧಿಕಾರಿಯು ದೂರೋತ್ಸಾರಿತನಾಗುತ್ತಾನೆ. ಏಕೆಂದರೆ ಅರ್ಥಿಯಾದವನು ಸಮರ್ಥನಾದ ವಿದ್ವಾಂಸನಷ್ಟೇ ಅಧಿಕಾರಿಯೆಂದು ಕರೆಸಿಕೊಳ್ಳುತ್ತಾನೆ. ನಿಷ್ಪ್ರಯೋಜನವೆಂದು ನಿಶ್ಚಿತವಾದ ವಿಷಯದಲ್ಲಿ ಹಿಂದೆ ಹೇಳಲ್ಪಟ್ಟ ಎರಡು ಬಗೆಯ ಅರ್ಥಿತ್ವವು ಸರ್ವಥಾ ಕೂಡುವುದಿಲ್ಲ.

ವಿವರಣೆ – 'ಏವಂವಿಧೇ ಚಾಧಿಕಾರೀ ದೂರೋತ್ಸಾರಿತಃ । ಯತಃ ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ । ನ ಚ ಏತಾದೃಶೇಽರ್ಥೇ ಅರ್ಥಿತಾ ಸಂಭವತಿ' – ಈ ಹಿಂದೆ ಏವಂವಿಧೇ ಎಂಬ ಪದಕ್ಕೆ ಉಪೇಕ್ಷಣೀಯವಾದ ತೃಣಾದಿವಿಷಯಕವಾದ ಜಿಜ್ಞಾಸೆಯಲ್ಲಿ ಎಂಬುದಾಗಿ ವ್ಯಾಖ್ಯಾನ ಮಾಡಲಾ-

ಯಿತು. ಪ್ರಕೃತ ಈ ಯಾವ ಅರ್ಥವನ್ನು ವಿವಕ್ಷಿಸದೇ ಅರ್ಥೇ ಎಂಬಲ್ಲಿ ಅನ್ವಯವನ್ನು ಮಾಡಿಕೊಂಡು ಮತ್ತೊಂದು ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ. ಮುಂದಿನ ವಾಕ್ಯದಲ್ಲಿರುವ ಅರ್ಥೀ ಎಂಬುದನ್ನು ಇಲ್ಲಿ ಆಕರ್ಷಣ ಮಾಡಿಕೊಳ್ಳಬೇಕು. ಇಲ್ಲಿರುವ ಅರ್ಥಶಬ್ದವು ಸತಿಸಪ್ತಮ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಹಿಂದೆ ಅರ್ಥಶಬ್ದದಿಂದ ಪ್ರಯೋಜನವನ್ನು ಸಹ ವಿವಕ್ಷಿಸಲಾಗಿತ್ತು. ಆದರೆ ಈಗ ವಿಷಯವನ್ನಷ್ಟೇ ಅರ್ಥ-ಶಬ್ದದಿಂದ ವಿವಕ್ಷಿಸಬೇಕು.

ಅರ್ಥಕ್ಕೆ ಅಧಿಕಾರಿಯು ಪ್ರಸಕ್ತನೇ ಆಗಿರುವುದಿಲ್ಲ. ಹೀಗಿರುವಾಗ ಹೇಗೆ ಅದನ್ನು ನಿರಾಕರಣೆ ಮಾಡುತ್ತೀರಿ? ಎಂದರೆ 'ಅರ್ಥೇ ಏವಂವಿಧೇ ಸತಿ ಅಧಿಕಾರೀ ದೂರೋತ್ಸಾರಿತಃ' 'ತೃಣಾದಿರೂಪ-ವಾದ ವಿಷಯವು ಈ ಪ್ರಕಾರವಾಗಿ ನಿಷ್ಪ್ರಯೋಜನವೆಂದು ನಿಶ್ಚಿತವಾಗುತ್ತಿರಲು ಅರ್ಥಿತ್ವವು ಕೂಡು-ವುದಿಲ್ಲ. ಅರ್ಥಿತ್ವಶಬ್ದಕ್ಕೆ ಹಿಂದೆ ಮಾಡಿದ ವ್ಯಾಖ್ಯಾನವನ್ನೇ ವಿವಿಕ್ಷಿಸಲಾಗಿದೆ. ಆದರೆ ಅರ್ಥಶಬ್ದಕ್ಕೆ ಮಾತ್ರ ವಿಷಯ ಎಂಬರ್ಥವನ್ನಷ್ಟೇ ವಿವಕ್ಷಿಸಬೇಕು. ಏವಂವಿಧೇ ಎಂಬುದನ್ನು ಸತಿಸಪ್ತಮ್ಯಂತವಾದ ಪದವೆಂದು ವಿವಕ್ಷಿಸಬೇಕು.

## 'ಧರ್ಮಾದಿ' ಎಂಬುದಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ – 'ಧರ್ಮಾದಿ' ಇತ್ಯಾದಿಪದೇನ ದೇವಾದಿಸ್ವರೂಪಮಶ್ವಲಕ್ಷಣಾದಿಕಂ ಚ ಗೃಹ್ಯತೇ। 'ಶಾಸ್ತ್ರಾಂತರಂ' = ಮೀಮಾಂಸಾಂತರಮ್ । 'ಆದಿ'ಪದೇನಾಶ್ವವಿದ್ಯಾದಿಸಂಗ್ರಹಃ।

ಧರ್ಮಾದಿ ಎಂಬಲ್ಲಿರುವ ಆದಿಪದದಿಂದ ದೇವತೆ ಮೊದಲಾದವರ ಸ್ವರೂಪ, ಅಶ್ವಲಕ್ಷಣ ಮೊದಲಾದವುಗಳನ್ನು ವಿವಕ್ಷಿಸಬೇಕು. "ಶಾಸ್ತ್ರಾಂತರಂ" ಎಂದರೆ ಮತ್ತೊಂದು ಮೀಮಾಂಸಾ ಶಾಸ್ತ್ರ ಎಂದರ್ಥ. ಆದಿಪದದಿಂದ ಅಶ್ವವಿದ್ಯಾದಿಗಳನ್ನು ಸಂಗ್ರಹ ಮಾಡಬೇಕು.

## ಆತ್ಮನು ವಿಷಯನೆಂಬ ಪಕ್ಷಕ್ಕೆ ದೋಷಕಥನ

ವಾಕ್ಯಾರ್ಥಚಂದ್ರಿಕಾ – ಆತ್ಮಪಕ್ಷಂ ದೂಷಯತಿ – ಆತ್ಮಾ ಚೇತಿ ॥ ಯಥಾ ಗೋಶಬ್ದಸ್ಯ ವ್ಯಕ್ತ್ಯಾಕೃತಿಜಾತಿಸನ್ನಿಧೌ ಪ್ರಯುಜ್ಯಮಾನಸ್ಯ ವಾಚ್ಯಂ ಕೈಶ್ಚಿದ್ ವ್ಯಕ್ತಿರಿತಿ ಕೈಶ್ಚಿದಾಕೃತಿರಿತಿ ಕೈಶ್ಚಿತ್ ತ್ರಿತಯಮಪೀತಿ ಪ್ರತಿಪನ್ನಂ ತಥಾ ಚೈತನ್ಯಕಾರ್ಯಕರಣಸಂಘಾತಸನ್ನಿಧಾವುತ್ಪದ್ಯಮಾನಾಹಂ-ಪ್ರತ್ಯಯಸ್ಯಾಲಂಬನಂ ಕೈಶ್ಚಿದ್ ದೇಹಾದಿಷ್ವೇಕೈಕಮೇವ ಪ್ರತಿಪನ್ನಂ ಕೈಶ್ಚಿಚ್ಚ ಸಂಘಾತ ಏವೇತಿ

ಪ್ರತಿಪನ್ನಮಿತಿ ಪಕ್ಷದ್ವಯಮತ್ರಾಭಿಪ್ರೇತಮ್ । ಅತ ಏವ ಗೀತಾಭಾಷ್ಯಟೀಕಾಯಾಂ ಪಕ್ಷದ್ವಯ-ಮಪ್ಯುದಾಹೃತ್ಯ ನಿರಾಕೃತಮ್ । ಏವಂ ಚ ಶರೀರೇಂದ್ರಿಯಾದಿಶ್ಚ ಸಂಘಾತಶ್ಚೇತಿ ವಿಗ್ರಹಃ। ಸಂಘಾತಶ್ಚ ಪ್ರಕೃತತ್ವಾತ್ ತೇಷಾಮೇವ। ಆದಿಪದೇನ ಚ ಮನೋಬುದ್ಧ್ಯೋರ್ಗ್ರಹಣಮ್ ।

ಆತ್ಮಪಕ್ಷವನ್ನು ದೂಷಣೆ ಮಾಡಲು "ಆತ್ಮಾ ಚ" ಇತ್ಯಾದಿ ಗ್ರಂಥವು ಹೊರಟಿದೆ. ಉದಾ – ಗೋಶಬ್ದವು ವ್ಯಕ್ತಿ, ಆಕೃತಿ, ಜಾತಿ ಇವುಗಳ ಸನ್ನಿಧಾನದಲ್ಲಿ ಪ್ರಯುಕ್ತವಾಗುತ್ತದೆ. ಇಲ್ಲಿ ಕೆಲವರು ಜಾತಿಯು ಗೋಶಬ್ದವಾಚ್ಯವೆನ್ನುತ್ತಾರೆ. ಕೆಲವರು ವ್ಯಕ್ತಿಯು ಗೋಶಬ್ದವಾಚ್ಯವೆಂದು ಇನ್ನು ಕೆಲವರು ಆಕೃತಿಯನ್ನು ಗೋಶಬ್ದವಾಚ್ಯವೆಂದು ಮತ್ತೆ ಕೆಲವರು ಈ ಮೂರೂ ಸಹ ಗೋಶಬ್ದವಾಚ್ಯವೆಂದು ಹೇಳುತ್ತಾರೆ. ಅದೇ ರೀತಿಯಾಗಿ ಚೈತನ್ಯ ಹಾಗೂ ಕಾರ್ಯಕಾರಣಸಂಘಾತಗಳ ಸನ್ನಿಧಾನದಲ್ಲಿ ಅಹಂ ಎಂಬ ಶಬ್ದವು ಪ್ರಯುಕ್ತವಾಗುತ್ತದೆ. ಇದಕ್ಕೆ ಆಲಂಬನವಾದದ್ದು ಆತ್ಮನೆಂದು ಕೆಲವರು ಹೇಳುತ್ತಾರೆ. ದೇಹ ಮೊದಲಾದ ಒಂದೊಂದೇ ಪದಾರ್ಥಗಳು ಆತ್ಮನಾಗಿರುವನೆಂದು ಹೇಳುತ್ತಾರೆ. ಕೆಲವರು ದೇಹೇಂದ್ರಿಯಾದಿಗಳ ಸಂಘಾತವೇ ಅಹಂಪ್ರತ್ಯಯಪ್ರತಿಪಾದ್ಯವೆಂದುಹೇಳುತ್ತಾರೆ. ಹೀಗೆ ಎರಡು ಪಕ್ಷ-ಗಳು ಪ್ರಕೃತ ವಿವಕ್ಷಿತವಾಗಿರುತ್ತವೆ. ಆದ್ದರಿಂದಲೇ ಗೀತಾಭಾಷ್ಯದ ಟೀಕೆಯಲ್ಲಿ ಈ ಎರಡೂ ಪಕ್ಷಗಳನ್ನು ಉದಾಹರಿಸಿ ನಿರಾಕರಣೆ ಮಾಡಿರುತ್ತಾರೆ. ಆದ್ದರಿಂದ 'ಶರೀರೇಂದ್ರಿಯಾದಿಶ್ಚ ಸಂಘಾತಶ್ಚ' ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಸಂಘಾತವು ಪ್ರಕೃತವಾಗಿರುವುದರಿಂದ ಶರೀರೇಂದ್ರಿಯಾದಿಗಳ ಸಂಘಾತ-ವನ್ನೇ ವಿವಕ್ಷಿಸಬೇಕು. ಆದಿಪದದಿಂದ ಮನಸ್ಸು ಮತ್ತು ಬುದ್ಧಿಗಳನ್ನು ವಿವಕ್ಷಿಸಬೇಕು.

ವಿವರಣೆ – ಇಲ್ಲಿಯ ತನಕ ಅನಾತ್ಮಪಕ್ಷವನ್ನು ನಿರಾಕರಣೆ ಮಾಡಿದ್ದಾಯಿತು. ಈಗ ಆತ್ಮಪಕ್ಷವನ್ನು ನಿರಾಕರಣೆ ಮಾಡುತ್ತಿದ್ದಾರೆ. ಆತ್ಮ ಎಂದಾಗಲೂ ಕೂಡ ಸ್ವಾತ್ಮನೋ, ಪರಾತ್ಮನೋ, ಪರಮಾತ್ಮನೋ? ಎಂದು. ಸ್ವಾತ್ಮಪಕ್ಷದಲ್ಲಿ ಈಗ ದೋಷವನ್ನು ಹೇಳುತ್ತಿದ್ದಾರೆ.

ಚಾರ್ವಾಕಮತದಲ್ಲಿ ಶರೀರೇಂದ್ರಿಯಾದಿಗಳ ಸಂಘಾತವೇ ಆತ್ಮ ಎನಿಸುತ್ತದೆ. ದೇಹಕ್ಕಿಂತ ಅತಿರಿಕ್ತ-ನಾದ ಜೀವಾತ್ಮನು ಇರುವುದಿಲ್ಲ ಎಂಬುದಾಗಿ ಹೇಳುತ್ತಾರೆ. ಕೆಲವರು ಶರೀರವನ್ನೇ ಆತ್ಮ ಎನ್ನುತ್ತಾರೆ. ಕೆಲವರು ಚಕ್ಷುರಾದಿ ಇಂದ್ರಿಯಗಳನ್ನು ಆತ್ಮ ಎನ್ನುತ್ತಾರೆ. ಕೆಲವರು ಮನಸ್ಸನ್ನು ಆತ್ಮ ಎನ್ನುತ್ತಾರೆ. ಕೆಲವರು ಬುದ್ಧಿಯನ್ನೇ ಆತ್ಮ ಎನ್ನುತ್ತಾರೆ. ಇವುಗಳ ಸಂಘಾತವೇ ಆತ್ಮ ಎಂದು ಇನ್ನು ಕೆಲವರು ಹೇಳು-ತ್ತಾರೆ. ಇಲ್ಲಿ ಪ್ರಧಾನವಾಗಿ ಶರೀರಾದ್ಯನ್ಯತಮವೇ ಆತ್ಮವೆಂದು ಒಂದು ಪಕ್ಷ. ಶರೀರಾದಿಗಳ ಸಂಘಾತವೇ ಆತ್ಮವೆಂಬುದು ಮತ್ತೊಂದು ಪಕ್ಷ. ಈ ಎರಡು ಪಕ್ಷಗಳು ಪ್ರಧಾನವಾಗಿವೆ.

ಒಂದೊಂದೂ ಸಹ ಆತ್ಮ ಎಂಬುದು ಒಂದು ಪಕ್ಷ; ಸಂಘಾತವು ಆತ್ಮ ಎಂಬುದು ಮತ್ತೊಂದು ಪಕ್ಷ. ಹೇಗೆಂದರೆ 'ಗಾಂ ಆನಯ' ಎಂದು ಹೇಳಿದಾಗ ಗೋಶಬ್ದವನ್ನು ಜಾತಿ, ಆಕೃತಿ, ವ್ಯಕ್ತಿ ಮೂರರಲ್ಲೂ ಕೂಡ ಪ್ರಯೋಗ ಮಾಡುತ್ತೇವೆ. ಗೋತ್ವ, ಗೋವ್ಯಕ್ತಿ, ಆಕೃತಿ ಮೂರರಲ್ಲಿ ಯಾವುದು ಗೋಶಬ್ದದಿಂದ ವಾಚ್ಯವಾಗುತ್ತದೆ ಎಂಬ ವಿಚಾರವು ಬಂದರೆ ಕೆಲವರು ಜಾತಿಯನ್ನು ವಾಚ್ಯವೆನ್ನುತ್ತಾರೆ. ಕೆಲವರು ಆಕೃತಿಯನ್ನು ವಾಚ್ಯವೆನ್ನುತ್ತಾರೆ; ಇನ್ನು ಕೆಲವರು ವ್ಯಕ್ತಿಯು ವಾಚ್ಯವೆನ್ನುತ್ತಾರೆ. ಮತ್ತೊಬ್ಬರು ಮೂರರ ಸಂಘಾತವೇ ವಾಚ್ಯವೆಂದು ಹೇಳುತ್ತಾರೆ. ಪ್ರಕೃತ ಅಹಂ ಎಂಬ ಪ್ರತ್ಯಯವೇ ಮುಖ್ಯ-ಪ್ರಮಾಣವಾಗಿದೆ. ಕಾರ್ಯಕಾರಣಸಂಘಾತಗಳಲ್ಲಿ ಅಹಂ ಪ್ರತ್ಯಯವು ಬರುತ್ತಿದೆ. ಈ ಅಹಂ ಪ್ರತ್ಯಯಕ್ಕೆ ಯಾರು ಆಲಂಬನನೋ ಅವನೇ ಆತ್ಮನಾಗಿದ್ದಾನೆ. ಈ ಆತ್ಮನನ್ನು ಕೆಲವರು ಶರೀರ ಎನ್ನುತ್ತಾರೆ. ಕೆಲವರು ಸಂಘಾತವನ್ನು ಆತ್ಮ ಎನ್ನುತ್ತಾರೆ.

## ಯಥಾಯಥಂ ಎಂಬ ಪದಕೃತ್ಯದ ವಿಚಾರ

ವಾಕ್ಯಾರ್ಥಚಂದ್ರಿಕಾ – ಅತ್ರಾತ್ಮಾ ನಾಸ್ತ್ಯೇವೇತ್ಯೇವಂ ವಿಶೇಷಣಪರಿತ್ಯಾಗೇನ ಅನ್ವಯಸ್ಯಾಭಿಪ್ರೇತತ್ವಾತ್ ಶೂನ್ಯಪಕ್ಷೋಽಪ್ಯತ್ರ ಶಂಕಿತಃ । ಏವಂ ಚೋತ್ತರವಾಕ್ಯೇ ಶೂನ್ಯಸ್ಯಾ-ಸತ್ವಾದೇವ ನ ವಿಷಯತ್ವಮಿತ್ಯಪಿ ದ್ರಷ್ಟವ್ಯಮ್ । ಶರೀರಾದೀನಾಂ ಪ್ರತ್ಯೇಕಂ ಸಂಘಾತಸ್ಯ ವಾ ಆತ್ಮತ್ವವಾದಿನಾಮಹಂಪ್ರತ್ಯಯವಿಷಯತ್ವೇನ ಶರೀರಾದೀನಾಂ ಪ್ರತ್ಯಕ್ಷತ್ವಸ್ಯ ಸಮ್ಮತತ್ವೇಽಪ್ಯಾದಿ-ಪದೇನಾನುಮಾನಾದಿಗ್ರಹಣಂ ಯಥಾಯಥಮಿತ್ಯುಕ್ತಿಶ್ಚ ವಿಷಯತ್ವಾಭಾವಪ್ರಯೋಜಕನಿಶ್ಚಿತತ್ವ-ಮುಪಪಾದಯತಾಮಸ್ಮಾಕಂ ಪರೇಣ ಪ್ರಮಾಣಾಂತರಸಿದ್ಧತ್ವೇಽಂಗೀಕೃತೇಽಪಿ ನ ಕ್ಷತಿರಿತಿ ಪ್ರದರ್ಶ-ಯಿತುಮಿತಿ ದ್ರಷ್ಟವ್ಯಮ್ ।

ಗ್ರಂಥದಲ್ಲಿ "ಆತ್ಮಾ ನಾಸ್ತ್ಯೇವ" ಎಂಬುದಾಗಿ 'ಶರೀರೇಂದ್ರಿಯಾದಿಸಂಘಾತವ್ಯತಿರಿಕ್ತಃ' ಎಂಬ ವಿಶೇಷಣವನ್ನು ಪರಿತ್ಯಾಗ ಮಾಡಿ ಅನ್ವಯವು ಅಭಿಪ್ರೇತವಾಗಿದೆ. ಆದ್ದರಿಂದ ಶೂನ್ಯಪಕ್ಷವೂ ಕೂಡ ಇಲ್ಲಿ ಶಂಕೆಗೆ ವಿಷಯವಾಗಿದೆ. ಆದ್ದರಿಂದ ಮುಂದಿನ ವಾಕ್ಯದಲ್ಲಿ ಶೂನ್ಯವು ಅಸತ್ತಾಗಿರುವುದರಿಂದಲೇ ವಿಷಯವಾಗುವುದಿಲ್ಲ ಎಂಬುದಾಗಿಯೂ ಕೂಡ ತಿಳಿಯಬೇಕು.

ಶರೀರಾದಿಗಳು ಪ್ರತ್ಯೇಕವಾಗಿ ಅಥವಾ ಸಂಘಾತರೂಪವಾಗಿ ಆತ್ಮತ್ವವಾದಿಗಳಿಗೆ ಅಹಂ-ಪ್ರತ್ಯಯವಿಷಯವಾಗಿದೆ. ಆದ್ದರಿಂದ ಶರೀರಾದಿಗಳಿಗೆ ಪ್ರತ್ಯಕ್ಷತ್ವವು ಸಮ್ಮತವಾಗಿದ್ದರೂ ಕೂಡ ಆದಿಪದದಿಂದ ಅನುಮಾನಾದಿಗಳನ್ನು ಗ್ರಹಣ ಮಾಡಿರುವುದು ಯಥಾಯಥಂ ಎಂಬ ಪದವನ್ನು

ಪ್ರಯೋಗಿಸಿರುವುದು ಅಯುಕ್ತವಲ್ಲ. ಏಕೆಂದರೆ ಜಿಜ್ಞಾಸೆಯ ವಿಷಯತ್ವಾಭಾವಕ್ಕೆ ಪ್ರಯೋಜಕವಾದ ಯಾವ ನಿಶ್ಚಿತತ್ವವಿದೆಯೋ ಅದನ್ನು ಉಪಪಾದನೆ ಮಾಡುವುದಷ್ಟೇ ನಮ್ಮ ಉದ್ದೇಶವಾಗಿದೆ. ಆದ್ದರಿಂದ ಪರವಾದಿಗಳು ಶರೀರಾದಿಗಳು ಅಹಂಪ್ರತ್ಯಯವೇದ್ಯವಾದ್ದರಿಂದ ಪ್ರಮಾಣಾಂತರಸಿದ್ಧವೆಂದು ಅಂಗೀಕ-ರಿಸಿದರೂ ಕೂಡ ಯಾವುದೇ ಹಾನಿಯು ಇರುವುದಿಲ್ಲ. ಈ ವಿಷಯವನ್ನು ತಿಳಿಸಲು ಆದಿಪದವನ್ನು ಮತ್ತು ಯಥಾಯಥಂ ಎಂಬ ಪದವನ್ನು ಗ್ರಂಥದಲ್ಲಿ ಪ್ರಯೋಗಿಸಿದ್ದಾರೆ.

ವಿವರಣೆ – 'ಆತ್ಮಾ ಚ ಶರೀರೇಂದ್ರಿಯಾದಿಸಂಘಾತವ್ಯತಿರಿಕ್ತೋ ನಾಸ್ತ್ಯೇವ' ಎಂಬುದು ಒಬ್ಬರ ಮತ. ಆತ್ಮಾ ಚ ನಾಸ್ತ್ಯೇವ ಎಂಬುದು ಮತ್ತೊಬ್ಬರ ಮತ. ಈ ವಾಕ್ಯದಲ್ಲಿ ಇಬ್ಬರ ಮತವನ್ನೂ ಕೂಡ ವಿವಕ್ಷಿಸಿದ್ದಾರೆ. ಆತ್ಮಾ ನಾಸ್ತ್ಯೇವ ಎಂಬುದಾಗಿ ವಿಶೇಷಣವನ್ನು ಪರಿತ್ಯಾಗ ಮಾಡಿ ಅನ್ವಯವನ್ನು ಮಾಡಿ-ದಾಗ ಶೂನ್ಯಪಕ್ಷವನ್ನು ಆಶಂಕಿಸಿದಂತಾಯಿತು. ಹೀಗೆ ಅನ್ವಯವನ್ನು ಮಾಡಿದಾಗ ಮುಂದಿನ ವಾಕ್ಯದಲ್ಲಿ ಶೂನ್ಯವು ಅಸತ್ಯವಾಗಿರುವುದರಿಂದ ವಿಷಯವಾಗುವುದಿಲ್ಲ ಎಂಬುದನ್ನೂ ಕೂಡ ವಿವಕ್ಷಿಸಬೇಕು. ಅತ್ಯಂತ ಅಸತ್ತಾದ ಶಶವಿಷಾಣವು ಹೇಗೆ ಜಿಜ್ಞಾಸೆಗೆ ವಿಷಯವಾಗುವುದಿಲ್ಲವೋ ಅದರಂತೆ ಆತ್ಮನೂ ಕೂಡ ವಿಷಯವಾಗುವುದಿಲ್ಲ.

ಗ್ರಂಥದಲ್ಲಿ 'ಯಥಾಯಥಂ ಪ್ರತ್ಯಕ್ಷಾದಿನಾ ಏವ ನಿಶ್ಚಿತಮ್' ಎಂಬುದಾಗಿ ಏಕೆ ಹೇಳಿದ್ದಾರೆ? 'ಶರೀರಾದಿಕಂ ಚ ಪ್ರತ್ಯಕ್ಷಾದಿನೈವ ನಿಶ್ಚಿತಮ್' ಎಂದಷ್ಟೇ ಹೇಳಿದರೆ ಸಾಕಾಗಿತ್ತು. ಆದಿಪದದಿಂದ ಅನುಮಾನಾದಿಪ್ರಮಾಣಾಂತರವನ್ನು ಪರಿಗ್ರಹಮಾಡಿ ಯಥಾಯಥಂ ಎಂಬುದಾಗಿಯೂ ಕೂಡ ಹೇಳಿದ್ದಾರೆ.

ವಾಸ್ತವಿಕವಾಗಿ ಸಿದ್ಧಾಂತದಲ್ಲಿ ಮನಸ್ಸು, ಬುದ್ಧಿ ಮೊದಲಾದವುಗಳು ಸಾಕ್ಷಿಸಿದ್ಧವಾಗಿದೆ. ಚಕ್ಷುರಾದಿ ಇಂದ್ರಿಯಗಳು ರೂಪದರ್ಶನಾದಿ ಲಿಂಗಗಳಿಂದ ಸಿದ್ಧವಾಗಿದೆ. ಶರೀರವು ಪ್ರತ್ಯಕ್ಷಾದಿ ದರ್ಶನದಿಂದ ಸಿದ್ಧವಾಗಿದೆ. ಆದ್ದರಿಂದ ಕೆಲವು ಪ್ರತ್ಯಕ್ಷದಿಂದ, ಕೆಲವು ಅನುಮಾನದಿಂದ, ಕೆಲವು ಸಾಕ್ಷಿಯಿಂದ ನಿಶ್ಚಿತವೇ ಆಗಿವೆ. ಆದರೆ ಯಾರು ಶರೀರೇಂದ್ರಿಯಾದಿಗಳ ಸಂಘಾತವೇ ಆತ್ಮ ಎಂಬುದಾಗಿ ಒಪ್ಪಿದ್ದಾರೋ, ಅಥವಾ ಪ್ರತ್ಯೇಕವಾಗಿ ಶರೀರೇಂದ್ರಿಯಾದಿಗಳನ್ನು ಆತ್ಮ ಎಂದು ಒಪ್ಪಿದ್ದಾರೋ ಅಹಂ ಎಂಬ ಪ್ರತ್ಯಯಕ್ಕೆ ಶರೀರೇಂದ್ರಿಯಾದಿಗಳೇ ವಿಷಯವೆಂದು ಹೇಳುತ್ತಾರೋ ಅವರ ಮತದಲ್ಲಿ ಎಲ್ಲವೂ ಕೂಡ ಪ್ರತ್ಯಕ್ಷಸಿದ್ಧವೇ ಆಯಿತು. ಶರೀರ ಇಂದ್ರಿಯ, ಮನಸ್ಸು, ಬುದ್ಧಿ ,ಇವುಗಳ ಸಂಘಾತ ಎಲ್ಲವೂ ಕೂಡ ಅಹಂ ಪ್ರತ್ಯಯಕ್ಕೆ ಆಲಂಬನವಾದ್ದರಿಂದ ಪ್ರತ್ಯಕ್ಷದಿಂದ ಸಿದ್ಧವಾಗಿವೆ. ಹಾಗಾಗಿ ಗ್ರಂಥದಲ್ಲಿ 'ಶರೀರಾದಿಕಂ ಚ ಪ್ರತ್ಯಕ್ಷಾದಿನೈವ ನಿಶ್ಚಿತಮ್' ಎಂದೇ ಹೇಳಬಹುದಿತ್ತು. ಆದಿಪದವನ್ನು ಗ್ರಹಣ ಮಾಡುವ ಅವಶ್ಯ-

ಕತೆಯು ಇರಲಿಲ್ಲ. ಯಥಾಯಥಂ ಎಂಬ ಪದವನ್ನು ಕೂಡ ಉಲ್ಲೇಖ ಮಾಡುವ ಅವಶ್ಯಕತೆಯು ಇರಲಿಲ್ಲ.

ಈ ಶಂಕೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಜಿಜ್ಞಾಸೆಗೆ ವಿಷಯವಿಲ್ಲ ಎಂಬುದನ್ನು ಪ್ರತಿಪಾದನೆ ಮಾಡುವುದೇ ಮುಖ್ಯ ಉದ್ದೇಶ. ಇದಕ್ಕೆ ಪ್ರಯೋಜಕವಾದದ್ದು ನಿಶ್ಚಿತತ್ವ. ಯಾವುದು ನಿಶ್ಚಿತವಾಗಿ-ರುತ್ತದೋ ಅದು ವಿಷಯವಾಗುವುದಿಲ್ಲ. ಆ ನಿಶ್ಚಯವು ಪ್ರತ್ಯಕ್ಷ ಅನುಮಾನ ಅಥವಾ ಆಗಮ ಯಾವುದರಿಂದಾದರೂ ಕೂಡ ಆಗಬಹುದು. ಬಾಧಕವಿಲ್ಲ. ಶರೀರಾದಿಗಳು ಯಾವ ಪ್ರಮಾಣದಿಂದ ಸಿದ್ಧವಾದರೂ ಕೂಡ ನಿಶ್ಚಿತವಾಗಿರುವುದಂತೂ ಅವಿಪ್ರತಿಪನ್ನವಾಗಿದೆ. ಆದ್ದರಿಂದ ಆದಿಪದವನ್ನು ಮತ್ತು ಯಥಾಯಥಂ ಎಂದು ಹೇಳಿದ್ದು ಅಯುಕ್ತವಲ್ಲ.

## ಕೆಲವರು ಶರೀರವನ್ನು ಆತ್ಮಾ ಎನ್ನುತ್ತಾರೆ;
## ಕೆಲವರು ಇಂದ್ರಿಯವನ್ನು ಆತ್ಮಾ ಎನ್ನುತ್ತಾರೆ

ವಾಕ್ಯಾರ್ಥಚಂದ್ರಿಕಾ – ತತ್ರ ದೇಹಸ್ಯ ತಾವದಾತ್ಮತ್ವಮಹಂ ಮನುಷ್ಯ ಇತ್ಯಾದ್ಯ-ನುಭವಸಿದ್ಧಮಿತಿ ಕಶ್ಚಿತ್ । ಅತ ಏವ ಗೀತಾಭಾಷ್ಯಟೀಕಾಯಾಂ 'ನ ಕೇವಲಮ್' ಇತ್ಯಾದಿನಾ ಏತದೇವೋಕ್ತಮ್ । ಸತ್ಯಪಿ ಶರೀರೇ ವಿಷಯಜ್ಞಾನಾನಾಮ್ ಇಂದ್ರಿಯೈರನ್ವಯವ್ಯತಿರೇಕವತ್ತ್ವಾತ್ ಕಾರಣತಯಾ ಅನ್ವಯವ್ಯತಿರೇಕಕಲ್ಪನಾದಾಶ್ರಯತಯಾ ಅನ್ವಯವ್ಯತಿರೇಕಕಲ್ಪನಸ್ಯಾಭ್ಯಹಿತತ್ವಾ-ಚ್ಛರೀರಮಹಮಿತಿಪ್ರತ್ಯಯಾಭಾವೇಽಪಿ ಮನುಷ್ಯತ್ವಾದಿಧರ್ಮವಿಶಿಷ್ಟಸ್ಯ ಅಹಂಪ್ರತ್ಯಯಾಲಂಬನ-ತ್ವವತ್ ಇಂದ್ರಿಯಮಹಮಿತಿ ಪ್ರತ್ಯಯಾಽಭಾವೇಽಪಿ 'ಕಾಣೋಽಹಂ' 'ಮೂಕೋಽಹಮ್' ಇತಿ ಧರ್ಮವಿಶಿಷ್ಟೇಂದ್ರಿಯಾಣಾಮಹಂತ್ವೇನ ಸಾಮಾನಾಧಿಕರಣ್ಯಸ್ಯ ಸತ್ತ್ವಾತ್ । ಶರೀರಸ್ಯ ಅಹಂಪ್ರತ್ಯ-ಯಾಲಂಬನತ್ವವಿಜ್ಞಾನಾನ್ವಯವ್ಯತಿರೇಕಯೋರಿಂದ್ರಿಯಾತ್ಮನಾಮಾಶ್ರಯತ್ವೇನಾಪಿ ಉಪಪತ್ತ್ಯಾ ಇಂದ್ರಿಯಾಣಾಮೇವ ವ್ಯಸ್ತಾನಾಮಾತ್ಮತ್ವಮಿತ್ಯಪರಃ।

ಕೆಲವರು ಶರೀರವನ್ನೇ ಆತ್ಮಾ ಎಂಬುದಾಗಿ ಹೇಳುತ್ತಾರೆ. 'ಅಹಂ ಮನುಷ್ಯಃ' ಎಂಬ ಅನು-ಭವವೇ ಇದಕ್ಕೆ ಪ್ರಮಾಣವನ್ನಾಗಿ ಹೇಳುತ್ತಾರೆ. ಆದ್ದರಿಂದಲೇ ಗೀತಾಭಾಷ್ಯಟೀಕೆಯಲ್ಲಿ 'ನ ಕೇವಲಂ' ಇತ್ಯಾದಿ ವಾಕ್ಯದಿಂದ ಅನುಭವಪ್ರಮಾಣವನ್ನು ಹೇಳುವ ಶರೀರಾತ್ಮವಾದವನ್ನು ಅನುವಾದ ಮಾಡಿರು-ತ್ತಾರೆ.

ಕೆಲವರು ಇಂದ್ರಿಯವನ್ನೇ ಆತ್ಮಾ ಎಂದು ಹೇಳುತ್ತಾರೆ. ಅದು ಹೀಗೆ – ಶರೀರವಿದ್ದರೂ ಕೂಡ ವಿಷಯಜ್ಞಾನಕ್ಕೂ ಇಂದ್ರಿಯಗಳಿಗೂ ಅನ್ವಯವ್ಯತಿರೇಕವಿರುತ್ತದೆ. ಕಾರಣತಯಾ ಅನ್ವಯವ್ಯತಿರೇಕವನ್ನು ಕಲ್ಪನೆ ಮಾಡುವುದಕ್ಕಿಂತ ಆಶ್ರಯತಯಾ ಅನ್ವಯವ್ಯತಿರೇಕಕಲ್ಪನೆಯು ಶ್ರೇಷ್ಠವಾಗಿದೆ. ಆದ್ದರಿಂದ ಆಶ್ರಯವಾದ ಇಂದ್ರಿಯಗಳೇ ಆತ್ಮಾ ಎಂಬುದಾಗಿ ಹೇಳಬೇಕು.

ಮತ್ತು ಅಹಂ ಶರೀರಮ್' ಎಂಬ ಪ್ರತೀತಿಯು ಇಲ್ಲದಿದ್ದರೂ ಕೂಡ ಮನುಷ್ಯತ್ವಾದಿ-ಧರ್ಮವಿಶಿಷ್ಟನಿಗೆ ಅಹಂಪ್ರತ್ಯಯಾಶ್ರಯತ್ವವು ಇರುವುದರಿಂದ ಶರೀರವನ್ನೇ ಆತ್ಮಾ ಎಂಬುದಾಗಿ ಹೇಗೆ ಕರೆಯುತ್ತೀರೋ ಅದರಂತೆ "ಇಂದ್ರಿಯಮಹಂ" ಎಂಬ ಪ್ರತ್ಯಯವು ಇಲ್ಲದಿದ್ದರೂ ಕೂಡ 'ಕಾಣೋऽಹಂ' 'ಮೂಕೋऽಹಂ' ಎಂಬುದಾಗಿ ಕಾಣತ್ವ ಮತ್ತು ಮೂಕತ್ವಧರ್ಮಗಳಿಂದ ವಿಶಿಷ್ಟ-ವಾದ ಇಂದ್ರಿಯಗಳಿಗೆ ಅಹಂತ್ವೇನ ಸಾಮಾನಾಧಿಕರಣ್ಯವು ಇರುತ್ತದೆ. ಆದ್ದರಿಂದ ಇಂದ್ರಿಯಗಳೇ ಆತ್ಮಾ ಎನ್ನಲು ಬಾಧಕವಿಲ್ಲ. ಮತ್ತು ಶರೀರವು ಅಹಂಪ್ರತ್ಯಯಕ್ಕೆ ಆಶ್ರಯವಾಗಿದೆ. ಜ್ಞಾನದ ಜೊತೆ ಅನ್ವಯ-ವ್ಯತಿರೇಕವನ್ನು ಹೊಂದಿರುತ್ತದೆ. ಅದರಂತೆ ಇಂದ್ರಿಯಗಳಿಗೆ ಶರೀರವು ಆಶ್ರಯವಾಗಿರುವುದರಿಂದಲೂ ಈ ಅನ್ವಯವ್ಯತಿರೇಕವು ಉಪಪನ್ನವಾಗುತ್ತದೆ. ಆದ್ದರಿಂದ ಇಂದ್ರಿಯಗಳೇ ಆತ್ಮಾ ಎಂದು ಹೇಳಲು ಬಾಧಕವಿಲ್ಲ. ಹೀಗೆ ಇನ್ನು ಕೆಲವರು ಹೇಳುತ್ತಾರೆ.

ವಿವರಣೆ – ಪರವಾದಿಗಳ ಎಲ್ಲಾ ಮತಗಳನ್ನೂ ಪ್ರತ್ಯೇಕವಾಗಿ ಸಮರ್ಥಿಸುತ್ತಿದ್ದಾರೆ. ಮೊದಲು ಶರೀರವೇ ಆತ್ಮಾ ಎಂದು ಹೇಳುವವರ ಪಕ್ಷವನ್ನು ಸಮರ್ಥಿಸುತ್ತಿದ್ದಾರೆ. ಮುಂದೆ ಇದರ ಖಂಡನೆಯನ್ನು ಕೂಡ ಮಾಡುತ್ತಾರೆ.

ಮನುಷ್ಯತ್ವವು ದೇಹದ ಧರ್ಮವಾಗಿದೆ. ತತ್ಸಮಾನಾಧಿಕರಣವಾಗಿ ಅಹಂತ್ವಪ್ರತ್ಯಯವು ಪ್ರತೀತ-ವಾಗುತ್ತಿದೆ. 'ಅಹಂ ಮನುಷ್ಯಃ' ಎಂಬ ಅನುಭವವು ಸರ್ವಾನುಭವದಿಂದ ಸಿದ್ಧವಾಗಿದೆ. ಆದ್ದರಿಂದ ದೇಹವನ್ನೇ ಅಹಂಪದವಾಚ್ಯವೆಂದು ಹೇಳಬೇಕು. ಈ ಪ್ರತೀತಿಯ ಬಲದಿಂದ ದೇಹವೇ ಆತ್ಮನೆಂದು ಸಿದ್ಧವಾಗುತ್ತದೆ. ದೇಹವೇ ಆತ್ಮಾ ಎನ್ನಲು ಅಹಂ ಮನುಷ್ಯಃ ಎಂಬ ಪ್ರತೀತಿಯು ಆಧಾರವಾಗಿರು-ವುದರಿಂದಲೇ ಗೀತಾಭಾಷ್ಯ ಟೀಕೆಯಲ್ಲಿ 'ನ ಕೇವಲಂ' ಇತ್ಯಾದಿ ವಾಕ್ಯವು ಹೊರಟಿದೆ. ಇದು ಕೆಲವರ ಮತ.

ಇಂದ್ರಿಯವೇ ಆತ್ಮಾ ಎಂದು ಇನ್ನು ಕೆಲವರು ಹೇಳುತ್ತಾರೆ. ಇವರ ಅಭಿಪ್ರಾಯ ಹೀಗಿದೆ –

ಇಂದ್ರಿಯಗಳಿದ್ದರಷ್ಟೇ ಜ್ಞಾನವು ಬರುತ್ತದೆ; ಇಂದ್ರಿಯಗಳಿಲ್ಲದಿದ್ದರೆ ಜ್ಞಾನವು ಬರುವುದಿಲ್ಲ. ಈ

ಅನ್ವಯವ್ಯತಿರೇಕದಿಂದ ಜ್ಞಾನಕ್ಕೆ ಇಂದ್ರಿಯಗಳು ಕಾರಣವೆಂದು ಸಿದ್ಧವಾಗುತ್ತದೆ. ಕಾರಣತ್ವೇನ ಅನ್ವಯ-ವ್ಯತಿರೇಕವನ್ನು ಉಪಪಾದನೆ ಮಾಡುವುದಕ್ಕಿಂತ ಆಶ್ರಯತ್ವೇನ ಅನ್ವಯವ್ಯತಿರೇಕದ ಉಪಪಾದನೆ ಮಾಡುವುದು ಉತ್ತಮವಾಗಿದೆ. ಮನೆಯಿದ್ದರೆ ಊಟ ಮಾಡಬಹುದು; ಮನೆಯಿಲ್ಲದಿದ್ದರೆ ಊಟ ಮಾಡಲು ಆಗುವುದಿಲ್ಲ. ಇಲ್ಲಿ ಮನೆಯು ಭೋಜನಾದಿಗಳಿಗೆ ಆಶ್ರಯವಾಗಿದೆ ಹೊರತು ಕಾರಣ-ವಾಗಿರುವುದಿಲ್ಲ. ಅದರಂತೆ ಇಲ್ಲಿಯೂ ಸಹ ಇಂದ್ರಿಯಗಳಿದ್ದರೆ ಜ್ಞಾನವು ಬರುತ್ತದೆ. ಇಂದ್ರಿಯಗಳಿಲ್ಲ-ದಿದ್ದರೆ ಜ್ಞಾನವು ಬರುವುದಿಲ್ಲ. ಆದ್ದರಿಂದ ಇಂದ್ರಿಯಗಳಿಗೆ ಜ್ಞಾನಾಶ್ರಯತ್ವವು ಸಿದ್ಧವಾಯಿತಾದ್ದರಿಂದ ಜ್ಞಾನಾಶ್ರಯವಾದ ಇಂದ್ರಿಯವನ್ನೇ ಆತ್ಮಾ ಎಂದು ಹೇಳಬೇಕು. ಕಾರಣವು ಬಹಿರಂಗವಾಗಿದೆ ಆಶ್ರಯವು ಅಂತರಂಗವಾಗಿದೆ. ಆತ್ಮಾ ಎಂಬ ಶಬ್ದಕ್ಕೆ ಜ್ಞಾನಾಶ್ರಯನಾದವನು ಎಂದರ್ಥ. ಇಂದ್ರಿಯಗಳೇ ಜ್ಞಾನಕ್ಕೆ ಆಶ್ರಯವಾಗಿರುವುದರಿಂದ ಇಂದ್ರಿಯಗಳಿಗೂ ಜ್ಞಾನಕ್ಕೂ ಅನ್ವಯವ್ಯತಿರೇಕಗಳು ಇರುವುದ-ರಿಂದ ಕಾರಣತ್ವೇನ ಅನ್ವಯವ್ಯತಿರೇಕಗಳನ್ನು ಕಲ್ಪನೆ ಮಾಡುವುದಕ್ಕಿಂತ ಆಶ್ರಯತ್ವೇನ ಅನ್ವಯವ್ಯತಿ-ರೇಕಗಳನ್ನು ಕಲ್ಪನೆ ಮಾಡುವುದು ಅಭ್ಯರ್ಹಿತವಾಗಿರುವುದರಿಂದ ಇಂದ್ರಿಯಗಳೇ ಆತ್ಮಾ ಎಂಬುದಾಗಿ ಹೇಳುತ್ತಾರೆ.

ಇಂದ್ರಿಯಗಳೇ ಆತ್ಮಾ ಎಂದು ಹೇಳುವುದಾದರೆ 'ಚಕ್ಷುರಹಂ' 'ಶ್ರೋತ್ರಮಹಂ' 'ಇಂದ್ರಿಯ-ಮಹಂ' ಎಂಬ ಪ್ರತೀತಿಯು ಬರಬೇಕಾಗುತ್ತದಲ್ಲವೇ? ಎಂದರೆ ಯಾರು ಶರೀರವನ್ನೇ ಆತ್ಮಾ ಎಂಬು-ದಾಗಿ ಹೇಳುತ್ತಾರೋ ಅವರ ಮತದಲ್ಲೂ ಕೂಡ ಈ ದೋಷವು ಸಮಾನವಾಗಿದೆ. ಏಕೆಂದರೆ 'ಶರೀರೋऽಹಂ' ಎಂಬ ಪ್ರತೀತಿಯು ಯಾರಿಗೂ ಕೂಡ ಬರುತ್ತಿಲ್ಲ. ಆದರೂ ಕೂಡ ಮನುಷ್ಯತ್ವದ ಸಮಾನಾಧಿಕರಣವಾಗಿ ಅಹಂತ್ವವು ತೋರುತ್ತಿದೆ ಎಂದು ಹೇಳುವಂತೆ 'ಇಂದ್ರಿಯಮಹಂ' ಎಂಬುದಾಗಿ ಯಾರಿಗೂ ಕೂಡ ಪ್ರತೀತಿಯು ಇರುವುದಿಲ್ಲ. ಆದರೆ ಇಂದ್ರಿಯಧರ್ಮಗಳಾಗಿರುವ ಕಾಣತ್ವ, ಮೂಕತ್ವ ಮೊದಲಾದವುಗಳು ಅಹಂತ್ವಸಮಾನಾಧಿಕರಣವಾಗಿ ಪ್ರತೀತವಾಗುತ್ತಿವೆ. 'ಕಾಣೋऽಹಂ' 'ನಾನು ಕುರುಡನಾಗಿದ್ದೇನೆ', 'ಮೂಕೋऽಹಂ 'ನಾನು ಮೂಕನಾಗಿದ್ದೇನೆ'. ಇಲ್ಲಿ ಕಾಣತ್ವ, ಮೂಕತ್ವ ಮೊದಲಾದವುಗಳು ಇಂದ್ರಿಯದ ಧರ್ಮಗಳಾಗಿವೆ. ಕಾಣತ್ವ, ಮೂಕತ್ವ ಮೊದಲಾದವುಗಳು ಅಹಂತ್ವಸಮಾನಾಧಿಕರಣವಾಗಿ ಪ್ರತೀತವಾಗುತ್ತಿವೆ. ಆದ್ದರಿಂದ ಇಂದ್ರಿಯಗಳೇ ಆತ್ಮಾ ಎಂಬುದಾಗಿ ಸಿದ್ಧವಾಗುತ್ತದೆ.

ಇಂದ್ರಿಯವೇ ಆತ್ಮಾ ಎಂಬುದಾಗಿ ಹೇಳುವುದಾದರೆ ಶರೀರಕ್ಕೂ ಜ್ಞಾನಕ್ಕೂ ಅನ್ವಯವ್ಯತಿರೇಕವಿದೆ. ಅಹಂ ಮನುಷ್ಯಃ ಎಂಬಲ್ಲಿ ಅಹಂಪ್ರತ್ಯಯಕ್ಕೆ ಶರೀರವು ಆಶ್ರಯವಾಗಿದೆ. ಇಂದ್ರಿಯವೇ ಆತ್ಮಾ ಎಂಬ ಪಕ್ಷದಲ್ಲಿ ಶರೀರಕ್ಕೆ ಅಹಂತ್ವೇನ ಪ್ರತೀತಿಯನ್ನು ಶರೀರಕ್ಕೂ ಜ್ಞಾನಕ್ಕೂ ಅನ್ವಯವ್ಯತಿರೇಕವನ್ನು ಹೇಗೆ

ನಿರ್ವಾಹ ಮಾಡುತ್ತೀರಿ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸುತ್ತಾರೆ. ಇಂದ್ರಿಯಕ್ಕೆ ಶರೀರವು ಆಶ್ರಯವಾಗಿದೆ. ಯಾವ ಪಕ್ಷದಲ್ಲಿ ಇಂದ್ರಿಯವೇ ಆತ್ಮಾ ಎನಿಸಿಕೊಳ್ಳುತ್ತದೋ ಆಗ ಆತ್ಮನಿಗೆ ಶರೀರವು ಆಶ್ರಯವಾಗುತ್ತದೆ. ಇಂದ್ರಿಯಕ್ಕೂ ಜ್ಞಾನಕ್ಕೂ ಅನ್ವಯವ್ಯತಿರೇಕವು ಇರುತ್ತದೆ. ಇಂದ್ರಿಯಕ್ಕೆ ಶರೀರವು ಆಶ್ರಯವಾಗಿರುವುದರಿಂದ ಇಂದ್ರಿಯಕ್ಕೂ ಜ್ಞಾನಕ್ಕೂ ಅನ್ವಯವ್ಯತಿರೇಕವಿದ್ದಮೇಲೆ ಶರೀರಕ್ಕೂ ಜ್ಞಾನಕ್ಕೂ ಅನ್ವಯವ್ಯತಿರೇಕವು ನಿರ್ವಾಹವಾಗುತ್ತದೆ. ಇದರಂತೆ ಅಹಂ ಮನುಷ್ಯಃ ಎಂಬ ಪ್ರತೀತಿಯು ಬರುತ್ತಿದೆ. ಮನುಷ್ಯತ್ವಕ್ಕೆ ಆಶ್ರಯವಾದ ಶರೀರವು ಅಹಂತ್ವೇನ ತೋರಿರುವುದಿಲ್ಲ. ಇಂದ್ರಿಯವೇ ಅಹಂತ್ವೇನ ತೋರಿರುತ್ತದೆ. ಆ ಇಂದ್ರಿಯಕ್ಕೆ ಆಶ್ರಯವಾಗಿರುವುದರಿಂದ ಶರೀರವನ್ನೂ ಕೂಡ ಅಹಂ ಎಂಬುದಾಗಿ ಹೇಳುತ್ತೇವೆ. 'ಅಯೋ ದಹತಿ' ಎಂದು ಹೇಳುವಾಗ ದಾಹಕತ್ವವು ಅಯಸ್ಸಿನಲ್ಲಿ ಇರುವುದಿಲ್ಲ. ದಾಹಕವಾದ ಅಗ್ನಿಗೆ ಆಶ್ರಯವಾಗಿರುವ ಅಯಸ್ಸನ್ನು ದಹತಿ ಎಂಬುದಾಗಿ ಹೇಳುವಂತೆ ಇಂದ್ರಿಯಗಳೇ ಅಹಂ ಪ್ರತ್ಯಯಕ್ಕೆ ಆಶ್ರಯವಾಗಿವೆ. ಆ ಇಂದ್ರಿಯರೂಪವಾದ ಆತ್ಮನಿಗೆ ಆಶ್ರಯವಾಗಿರುವುದರಿಂದ ಶರೀರವನ್ನೂ ಕೂಡ ಅಹಂ ಎಂಬುದಾಗಿ ಹೇಳುತ್ತೇವೆ. ಹೀಗೆ ಇಂದ್ರಿಯಗಳೇ ಆತ್ಮಾ ಎಂಬುದನ್ನು ಸಮರ್ಥಿಸಲು ಯಾವುದೇ ರೀತಿಯ ಬಾಧಕಗಳು ಇರುವುದಿಲ್ಲ.

## ಟೀಕೆಯಲ್ಲಿ ಹೇಳಿದ ಯುಕ್ತಿಯು ಸಾಧಾರಣಪ್ರಾಪಕವಾಗಿದೆ

ವಾಕ್ಯಾರ್ಥಚಂದ್ರಿಕಾ – ಏತೇನೇಂದ್ರಿಯಚೈತನ್ಯಪಕ್ಷೋऽಪಿ ನಿರಸ್ತ ಇತಿ ಗೀತಾಭಾಷ್ಯಟೀಕಾಯಾಮಿಯಮೇವ ತತ್ಪಕ್ಷಪ್ರಸಕ್ತಿರಭಿಮತಾ । ತತ್ಸನ್ನಿಧೌ ಈಕ್ಷಣದರ್ಶನಸ್ಯ ಶರೀರಾದಿಸರ್ವಸಾಧಾರಣತ್ವೇನ ಅಸ್ಯೈವ ವಿಶಿಷ್ಯಪ್ರಸಂಜಕತ್ವಾತ್ ತತ್ರೈವ ಪೂರ್ವತ್ರ ಶರೀರಪ್ರಾಣಜಠರಾನಲೇಂದ್ರಿಯಮನೋವಿಷಯಸನ್ನಿಧಾವೀಕ್ಷಣದರ್ಶನಾದೇಷಾಮನ್ಯತಮಃ ಕಿಂ ನ ಸ್ಯಾದಿತ್ಯುಕ್ತಿಸ್ತು ಸಾಧಾರಣಹೇತೋಸ್ತತ್ತತ್ ಪ್ರಾಪಕತ್ವಮಭಿಪ್ರೇತ್ಯ ನ ತು ತಸ್ಯೈವ ವಿಶೇಷಪ್ರಾಪಕತ್ವಮಿತ್ಯಭಿಪ್ರೇತ್ಯಾಸಂಭವಾದಿತಿ ದ್ರಷ್ಟವ್ಯಮ್ ।

ಹೀಗೆ ಹೇಳಿದ್ದರಿಂದ ಇಂದ್ರಿಯಚೈತನ್ಯಪಕ್ಷವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು ಎಂಬುದಾಗಿ ಗೀತಾಭಾಷ್ಯದ ಟೀಕೆಯಲ್ಲಿ ಹೇಳಿರುತ್ತಾರೆ. ಅದಕ್ಕೆ ನಾವು ಮಾಡಿದ ಇಂದ್ರಿಯಗಳಿಗೆ ಆತ್ಮತ್ವಪಕ್ಷದ ಪ್ರಸಕ್ತಿಯು ಅಭಿಮತವಾಗಿದೆ.

"ತತ್ಸನ್ನಿಧೌ ಈಕ್ಷಣದರ್ಶನಸ್ಯ" ಎಂಬುದಾಗಿ ಗ್ರಂಥಕಾರರು ಹೇಳಿದ ಯುಕ್ತಿಯು ಶರೀರ ಮೊದಲಾದ ಸಕಲಪಕ್ಷಗಳಿಗೆ ಸಾಧಾರಣವಾದ ಯುಕ್ತಿಯಾಗಿದೆ. ಆದ್ದರಿಂದ ನಾವು ಹೇಳಿದ ಯುಕ್ತಿಯೇ

ಆಯಾ ಪಕ್ಷಗಳಿಗೆ ಅಸಾಧಾರಣವಾದ ಪ್ರಾಪಕವಾಗಿದೆ. ಅದೇ ಪ್ರಮೇಯದೀಪಿಕಾದಲ್ಲಿ ಮೊದಲು ಹೀಗೆ ಹೇಳಿದ್ದಾರೆ. 'ಶರೀರಪ್ರಾಣಜಠರಾನಲೇಂದ್ರಿಯಮನೋವಿಷಯಸನ್ನಿಧೌ ಈಕ್ಷಣದರ್ಶನಾದೇಷಾಮನ್ಯ-ತಮಃ ಕಿಂ ನ ಸ್ಯಾತ್' ಎಂಬ ವಚನವು ಸಾಧಾರಣಹೇತುವಾಗಿದೆ. ಆದ್ದರಿಂದ ಪ್ರತಿಯೊಂದು ಪಕ್ಷಗಳಿಗೆ ಈ ಯುಕ್ತಿಯು ಪ್ರಾಪಕವಾಗಿದೆ ಎಂಬ ಅಭಿಪ್ರಾಯವನ್ನು ಇದಕ್ಕೆ ಹೇಳಬೇಕು. ಹೊರತು ಇದೊಂದೇ ಹೇತು ಎಂಬುದಾಗಿ ತಿಳಿಯಬಾರದು.

ವಿವರಣೆ – ಗೀತಾಭಾಷ್ಯದ ಪ್ರಮೇಯದೀಪಿಕಾದಲ್ಲಿ ಇಂದ್ರಿಯವೇ ಚೈತನ್ಯ ಎಂಬ ಪಕ್ಷವನ್ನು ನಿರಾಕರಣೆ ಮಾಡಿದ್ದಾರೆ. ಅದಕ್ಕೆ ಪ್ರಸಕ್ತಿಯನ್ನು ಇಲ್ಲಿ ನಾವು ಹೇಳಿದ್ದೇವೆ. ಪ್ರಮೇಯದೀಪಿಕಾಕಾರರಿಗೆ ಈ ಯುಕ್ತಿಗಳು ಅಭಿಪ್ರೇತವೆಂದು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಶರೀರ, ಇಂದ್ರಿಯ, ಪ್ರಾಣ, ಜಠರಾನಲ, ಮನಸ್ಸು ಹಾಗೂ ಬುದ್ಧಿ ಇವುಗಳ ಸನ್ನಿಧಾನದಲ್ಲಿ 'ಅಹಂ' ಎಂಬ ಪ್ರತೀತಿಯು ಬರುತ್ತಿದೆ. ಅಹಂಪ್ರತ್ಯಯಕ್ಕೆ ಇವುಗಳಲ್ಲಿ ಯಾವುದನ್ನು ಬೇಕಾದರೂ ಆಲಂಬನವೆಂದು ಹೇಳಬಹುದು. ಈ ವಿಷಯದಲ್ಲಿ 'ತತ್ಸನ್ನಿಧೌ ಈಕ್ಷಣಶ್ಚ' ಎಂಬ ಒಂದೇ ಯುಕ್ತಿಯನ್ನು ಗ್ರಂಥಕಾರರು ಹೇಳಿದ್ದಾರೆ. ಆದರೆ ನೀವು ಈ ಯುಕ್ತಿಯನ್ನು ಬಿಟ್ಟು ಬೇರೆ ಯುಕ್ತಿಯನ್ನೇ ಹೇಳುತ್ತಿದ್ದೀರಿ?

ಉತ್ತರವನ್ನು ಹೀಗೆ ತಿಳಿಯಬೇಕು – ಗ್ರಂಥಕಾರರು 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಹೇಳಿದ ಯುಕ್ತಿಯು ಸಾಧಾರಣ ಪ್ರಾಪಕವಾಗಿದೆ. ಎಲ್ಲಾ ಪಕ್ಷಗಳಿಗೂ ಈ ಯುಕ್ತಿಯು ಸಾಧಕವಾಗಿದೆ. ತತ್ತತ್ಪಕ್ಷಗಳಿಗೆ ಅಸಾಧಾರಣವಾಗಿ ಪ್ರಾಪಕವಾಗಿರುವುದಿಲ್ಲ. ನಾವು ಹೇಳಿದ ಯುಕ್ತಿಯೇ ತತ್ತತ್ ಪಕ್ಷಗಳಿಗೆ ಪ್ರಾಪಕವಾಗಿದೆ. ಪ್ರಮೇಯದೀಪಿಕಾದಲ್ಲಿ ಗ್ರಂಥಕಾರರು 'ಶರೀರಪ್ರಾಣಜಠರಾನಲೇಂದ್ರಿಯಮನೋ-ವಿಷಯಸನ್ನಿಧೌ ಈಕ್ಷಣದರ್ಶನಾದೇಷಾಮನ್ಯತಮಃ ಕಿಂ ನ ಸ್ಯಾತ್' ಎಂಬುದಾಗಿ ಹೇಳಿರುತ್ತಾರೆ. ಇದು ಸರ್ವಸಾಧಾರಣವಾದ ಪ್ರಾಪಕವಾಗಿದೆ. ಇದೂ ಸಹ ಒಂದು ಹೇತುವಾಗುತ್ತದೆ ಎಂಬುದು ಗ್ರಂಥಕಾರರ ಅಭಿಪ್ರಾಯ. ಇದೊಂದೇ ಹೇತುವೆಂಬುದು ಗ್ರಂಥಕಾರರ ಅಭಿಪ್ರಾಯವಲ್ಲ.

## ಮನಸ್ಸೇ ಆತ್ಮವೆಂಬ ಪಕ್ಷ

ವಾಕ್ಯಾರ್ಥಚಂದ್ರಿಕಾ – ಸ್ವಪ್ನೇ ಚಕ್ಷುರಾದ್ಯಭಾವೇಽಪಿ ಕೇವಲೇ ಮನಸಿ ವಿಜ್ಞಾನಾಲಂಬನ-ತ್ವಾಹಂಪ್ರತ್ಯಯವಿಷಯತ್ವಯೋರಬಾಧಿತಯೋರ್ದರ್ಶನಾದ್ ರೂಪಾದಿವಿಜ್ಞಾನಾನಾಂ ಚಕ್ಷು-ರಾದ್ಯಾಶ್ರಯತ್ವೇ ತದಭಾವೇ ಕೇವಲಂ ಮನಸಿ ಸ್ಮೃತ್ಯನುಪಪತ್ತೇರಾಶ್ರಯಾಂತರೇ ಚ ಸಿದ್ಧೇ ಚಕ್ಷು-

ರಾದೀನಾಂ ಜ್ಞಾನಾನ್ವಯವ್ಯತಿರೇಕಯೋಃ ಕರಣವಿಷಯತಯಾಽಪಿ ಉಪಪತ್ತೇಃ। ಅಹಂಪ್ರತ್ಯಯಸ್ಯ ಚ ದೇಹ ಇವ ಕರಣೇ ಕರ್ತೃತ್ವೋಪಚಾರಾತ್ ಸಿದ್ಧೇಶ್ಚಕ್ಷುರಾದಿಕರಣಂ ಶರೀರಾಧಾರಂ ಮನ ಏವಾತ್ಮೇತ್ಯನ್ಯೇ। ಪೂರ್ವವದಿದಮೇವ ಮನಃಪಕ್ಷವಿಶೇಷಪ್ರಸಂಜಕಂ ಟೀಕಾಭಿಮತಂ ದ್ರಷ್ಟವ್ಯಮ್।

ಸ್ವಪ್ನದಲ್ಲಿ ಚಕ್ಷುರಾದಿ ಇಂದ್ರಿಯಗಳು ಇರುವುದಿಲ್ಲ. ಮನಸ್ಸು ಮಾತ್ರ ಇರುತ್ತದೆ. ಅಂಥ ಸ್ವಪ್ನದಲ್ಲಿ ಅಹಂ ಎಂಬ ಜ್ಞಾನವು ಹಾಗೂ ಅನೇಕವಿಷಯಪದಾರ್ಥಗಳ ಜ್ಞಾನವು ಇರುತ್ತದೆ. ಈ ಜ್ಞಾನಕ್ಕೆ ಮನಸ್ಸನ್ನೇ ಆಶ್ರಯವೆಂದು ಹೇಳಬೇಕು. ಮತ್ತು ಅಹಂಪ್ರತ್ಯಯಕ್ಕೂ ಕೂಡ ಮನಸ್ಸನ್ನೇ ವಿಷಯವೆಂದು ಹೇಳಬೇಕು. ಅಬಾಧಿತವಾದ ಜ್ಞಾನವಿರುವುದರಿಂದ ರೂಪಾದಿಜ್ಞಾನಗಳಿಗೆ ಚಕ್ಷುರಾದಿ ಇಂದ್ರಿಯಗಳನ್ನು ಆಶ್ರಯವೆಂದು ಹೇಳಿದರೆ ಚಕ್ಷುರಾದಿ ಇಂದ್ರಿಯಗಳು ಇಲ್ಲದೇ ಇರುವಾಗ ಕೇವಲ ಮನಸ್ಸಿನಲ್ಲಿ ಸ್ಮೃತಿಯು ಅನುಪಪನ್ನವಾಗುತ್ತದೆ. ಬೇರೆ ಆಶ್ರಯವು ಸಿದ್ಧವಾದ ಮೇಲೆ ಚಕ್ಷುರಾದಿ ಇಂದ್ರಿಯಗಳಿಗೆ ಜ್ಞಾನದ ಜೊತೆ ಅನ್ವಯವ್ಯತಿರೇಕವು ಇರುವುದರಿಂದ ಕರಣವಿಷಯತ್ವವು ಕೂಡ ಉಪಪನ್ನವಾಗುತ್ತದೆ. ಅಹಂಪ್ರತ್ಯಯಕ್ಕೆ ದೇಹದಂತೆ ಕರಣವೂ ಕೂಡ ಆಶ್ರಯವಾಗುತ್ತದೆ. ಕರಣದಲ್ಲಿ ಕರ್ತೃತ್ವವು ಔಪ-ಚಾರಿಕವಾಗಿ ಪ್ರಾಪ್ತವಾಗುತ್ತದೆ. ಆದ್ದರಿಂದ ಚಕ್ಷುರಾದಿ ಕರಣವುಳ್ಳ ಶರೀರವೇ ಆಶ್ರಯವಾಗಿ ಉಳ್ಳ ಮನಸ್ಸೇ ಆತ್ಮನೆಂದು ಹೇಳಬೇಕು. ಹೀಗೆ ಇನ್ನು ಕೆಲವರು ಹೇಳುತ್ತಾರೆ.

ಹಿಂದಿನಂತೆ ಮನಸ್ಸೇ ಆತ್ಮನೆಂದು ಹೇಳುವ ಪಕ್ಷದಲ್ಲೂ ಕೂಡ 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿರುವುದು ಸಾಧಾರಣಹೇತುವಾಗಿದೆ. ನಾವು ಹೇಳಿರುವುದು ವಿಶೇಷ-ಹೇತುವಾಗಿದೆ. ಇದು ಟೀಕಾರಾಯರಿಗೆ ಅಭಿಮತವೆಂಬುದಾಗಿ ತಿಳಿಯಬೇಕು.

ವಿವರಣೆ – ಸ್ವಪ್ನದಲ್ಲಿ ಚಕ್ಷುರಾದಿ ಇಂದ್ರಿಯಗಳು ಇಲ್ಲದೇ ಇದ್ದರೂ ಕೂಡ ಕೇವಲ ಮನಸ್ಸು ಜ್ಞಾನಕ್ಕೆ ಆಶ್ರಯವಾಗಿರುವುದು ಕಂಡಿದೆ. ಅನುಭವವು ಸ್ಮೃತಿಗೆ ಜನಕವಾಗಿದೆ. ಈ ಸ್ಮೃತಿಗೆ ಮನಸ್ಸು ಆಶ್ರಯವಾಗಿದೆ. ಆದ್ದರಿಂದ ಅನುಭವರೂಪವಾದ ಜ್ಞಾನಕ್ಕೂ ಕೂಡ ಮನಸ್ಸೇ ಆಶ್ರಯವಾಗುತ್ತದೆ. ರೂಪಾದಿಜ್ಞಾನಗಳಿಗೆ ಆಯಾ ಇಂದ್ರಿಯಗಳು ಆಶ್ರಯವಾಗುವುದಾದರೆ ಚಕ್ಷುರಾದಿಗಳಲ್ಲೇ ಸ್ಮೃತಿಯು ಬರಬೇಕಾಗುತ್ತದೆ. ಆದರೆ ಮನಸ್ಸಿನಲ್ಲೇ ಸ್ಮೃತಿಯು ಬರುತ್ತಿದೆ. ಮತ್ತು ಚಕ್ಷುರಿಂದ್ರಿಯ ಇದ್ದಾಗ ಅನೇಕ ರೂಪಾದಿಜ್ಞಾನಗಳನ್ನು ಹೊಂದಿರುವ ವ್ಯಕ್ತಿಗೆ ಕಣ್ಣು ಹೋದನಂತರವೂ ರೂಪಾದಿಸ್ಮರಣೆಯು ಬರು-ತ್ತದೆ. ಅಥವಾ ಕಣ್ಣು ಇರುವವನಿಗೂ ಕಣ್ಣು ಮುಚ್ಚಿದಾಗ ರೂಪಾದಿಸ್ಮರಣೆಯು ಬರುತ್ತದೆ. ಆದ್ದರಿಂದ ಚಕ್ಷುರಿಂದ್ರಿಯವನ್ನು ಸ್ಮರಣೆಗೆ ಆಶ್ರಯವೆಂದು ಹೇಳಲು ಸಾಧ್ಯವಿಲ್ಲ. ಮನಸ್ಸೇ ಆಶ್ರಯವೆಂದು ಹೇಳಬೇಕು.

ಆಯಾ ಪಕ್ಷಗಳಿಗೆ ಅಸಾಧಾರಣವಾದ ಪ್ರಾಪಕವಾಗಿದೆ. ಅದೇ ಪ್ರಮೇಯದೀಪಿಕಾದಲ್ಲಿ ಮೊದಲು ಹೀಗೆ ಹೇಳಿದ್ದಾರೆ. 'ಶರೀರಪ್ರಾಣಜಠರಾನಲೇಂದ್ರಿಯಮನೋವಿಷಯಸನ್ನಿಧೌ ಈಕ್ಷಣದರ್ಶನಾದೇಷಾಮನ್ಯ-ತಮಃ ಕಿಂ ನ ಸ್ಯಾತ್' ಎಂಬ ವಚನವು ಸಾಧಾರಣಹೇತುವಾಗಿದೆ. ಆದ್ದರಿಂದ ಪ್ರತಿಯೊಂದು ಪಕ್ಷಗಳಿಗೆ ಈ ಯುಕ್ತಿಯು ಪ್ರಾಪಕವಾಗಿದೆ ಎಂಬ ಅಭಿಪ್ರಾಯವನ್ನು ಇದಕ್ಕೆ ಹೇಳಬೇಕು. ಹೊರತು ಇದೊಂದೇ ಹೇತು ಎಂಬುದಾಗಿ ತಿಳಿಯಬಾರದು.

ವಿವರಣೆ – ಗೀತಾಭಾಷ್ಯದ ಪ್ರಮೇಯದೀಪಿಕಾದಲ್ಲಿ ಇಂದ್ರಿಯವೇ ಚೈತನ್ಯ ಎಂಬ ಪಕ್ಷವನ್ನು ನಿರಾಕರಣೆ ಮಾಡಿದ್ದಾರೆ. ಅದಕ್ಕೆ ಪ್ರಸಕ್ತಿಯನ್ನು ಇಲ್ಲಿ ನಾವು ಹೇಳಿದ್ದೇವೆ. ಪ್ರಮೇಯದೀಪಿಕಾಕಾರರಿಗೆ ಈ ಯುಕ್ತಿಗಳು ಅಭಿಪ್ರೇತವೆಂದು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಶರೀರ, ಇಂದ್ರಿಯ, ಪ್ರಾಣ, ಜಠರಾನಲ, ಮನಸ್ಸು ಹಾಗೂ ಬುದ್ಧಿ ಇವುಗಳ ಸನ್ನಿಧಾನದಲ್ಲಿ 'ಅಹಂ' ಎಂಬ ಪ್ರತೀತಿಯು ಬರುತ್ತಿದೆ. ಅಹಂಪ್ರತ್ಯಯಕ್ಕೆ ಇವುಗಳಲ್ಲಿ ಯಾವುದನ್ನು ಬೇಕಾದರೂ ಆಲಂಬನವೆಂದು ಹೇಳಬಹುದು. ಈ ವಿಷಯದಲ್ಲಿ 'ತತ್ಸನ್ನಿಧೌ ಈಕ್ಷಣಾಚ್ಚ' ಎಂಬ ಒಂದೇ ಯುಕ್ತಿಯನ್ನು ಗ್ರಂಥಕಾರರು ಹೇಳಿದ್ದಾರೆ. ಆದರೆ ನೀವು ಈ ಯುಕ್ತಿಯನ್ನು ಬಿಟ್ಟು ಬೇರೆ ಯುಕ್ತಿಯನ್ನೇ ಹೇಳುತ್ತಿದ್ದೀರಿ?

ಉತ್ತರವನ್ನು ಹೀಗೆ ತಿಳಿಯಬೇಕು – ಗ್ರಂಥಕಾರರು 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಹೇಳಿದ ಯುಕ್ತಿಯು ಸಾಧಾರಣ ಪ್ರಾಪಕವಾಗಿದೆ. ಎಲ್ಲಾ ಪಕ್ಷಗಳಿಗೂ ಈ ಯುಕ್ತಿಯು ಸಾಧಕವಾಗಿದೆ. ತತ್ತತ್ಪಕ್ಷಗಳಿಗೆ ಅಸಾಧಾರಣವಾಗಿ ಪ್ರಾಪಕವಾಗಿರುವುದಿಲ್ಲ. ನಾವು ಹೇಳಿದ ಯುಕ್ತಿಯೇ ತತ್ತತ್ ಪಕ್ಷಗಳಿಗೆ ಪ್ರಾಪಕವಾಗಿದೆ. ಪ್ರಮೇಯದೀಪಿಕಾದಲ್ಲಿ ಗ್ರಂಥಕಾರರು 'ಶರೀರಪ್ರಾಣಜಠರಾನಲೇಂದ್ರಿಯಮನೋ-ವಿಷಯಸನ್ನಿಧೌ ಈಕ್ಷಣದರ್ಶನಾದೇಷಾಮನ್ಯತಮಃ ಕಿಂ ನ ಸ್ಯಾತ್' ಎಂಬುದಾಗಿ ಹೇಳಿರುತ್ತಾರೆ. ಇದು ಸರ್ವಸಾಧಾರಣವಾದ ಪ್ರಾಪಕವಾಗಿದೆ. ಇದೂ ಸಹ ಒಂದು ಹೇತುವಾಗುತ್ತದೆ ಎಂಬುದು ಗ್ರಂಥಕಾರರ ಅಭಿಪ್ರಾಯ. ಇದೊಂದೇ ಹೇತುವೆಂಬುದು ಗ್ರಂಥಕಾರರ ಅಭಿಪ್ರಾಯವಲ್ಲ.

## ಮನಸ್ಸೇ ಆತ್ಮವೆಂಬ ಪಕ್ಷ

ವಾಕ್ಯಾರ್ಥಚಂದ್ರಿಕಾ – ಸ್ವಪ್ನೇ ಚಕ್ಷುರಾದ್ಯಭಾವೇಽಪಿ ಕೇವಲೇ ಮನಸಿ ವಿಜ್ಞಾನಾಲಂಬನ-ತ್ವಾಹಂಪ್ರತ್ಯಯವಿಷಯತ್ವಯೋರಬಾಧಿತಯೋರ್ದರ್ಶನಾದ್ ರೂಪಾದಿವಿಜ್ಞಾನಾನಾಂ ಚಕ್ಷು-ರಾದ್ಯಾಶ್ರಯತ್ವೇ ತದಭಾವೇ ಕೇವಲಂ ಮನಸಿ ಸ್ಮೃತ್ಯನುಪಪತ್ತೇರಾಶ್ರಯಾಂತರೇ ಚ ಸಿದ್ಧೇ ಚಕ್ಷು-

**ರಾದೀನಾಂ ಜ್ಞಾನಾನ್ವಯವ್ಯತಿರೇಕಯೋಃ ಕರಣವಿಷಯತಯಾऽಪಿ ಉಪಪತ್ತೇಃ। ಅಹಂಪ್ರತ್ಯಯಸ್ಯ ಚ ದೇಹ ಇವ ಕರಣೇ ಕರ್ತೃತ್ವೋಪಚಾರಾತ್ ಸಿದ್ಧೇಶ್ಚಕ್ಷುರಾದಿಕರಣಂ ಶರೀರಾಧಾರಂ ಮನ ಏವಾತ್ಮೇತ್ಯನ್ಯಃ। ಪೂರ್ವವದಿದಮೇವ ಮನಃಪಕ್ಷವಿಶೇಷಪ್ರಸಂಜಕಂ ಟೀಕಾಭಿಮತಂ ದ್ರಷ್ಟವ್ಯಮ್।**

ಸ್ವಪ್ನದಲ್ಲಿ ಚಕ್ಷುರಾದಿ ಇಂದ್ರಿಯಗಳು ಇರುವುದಿಲ್ಲ. ಮನಸ್ಸು ಮಾತ್ರ ಇರುತ್ತದೆ. ಅಂಥ ಸ್ವಪ್ನದಲ್ಲಿ ಅಹಂ ಎಂಬ ಜ್ಞಾನವು ಹಾಗೂ ಅನೇಕವಿಷಯಪದಾರ್ಥಗಳ ಜ್ಞಾನವು ಇರುತ್ತದೆ. ಈ ಜ್ಞಾನಕ್ಕೆ ಮನಸ್ಸನ್ನೇ ಆಶ್ರಯವೆಂದು ಹೇಳಬೇಕು. ಮತ್ತು ಅಹಂಪ್ರತ್ಯಯಕ್ಕೂ ಕೂಡ ಮನಸ್ಸನ್ನೇ ವಿಷಯವೆಂದು ಹೇಳಬೇಕು. ಅಬಾಧಿತವಾದ ಜ್ಞಾನವಿರುವುದರಿಂದ ರೂಪಾದಿಜ್ಞಾನಗಳಿಗೆ ಚಕ್ಷುರಾದಿ ಇಂದ್ರಿಯಗಳನ್ನು ಆಶ್ರಯವೆಂದು ಹೇಳಿದರೆ ಚಕ್ಷುರಾದಿ ಇಂದ್ರಿಯಗಳು ಇಲ್ಲದೇ ಇರುವಾಗ ಕೇವಲ ಮನಸ್ಸಿನಲ್ಲಿ ಸ್ಮೃತಿಯು ಅನುಪಪನ್ನವಾಗುತ್ತದೆ. ಬೇರೆ ಆಶ್ರಯವು ಸಿದ್ಧವಾದ ಮೇಲೆ ಚಕ್ಷುರಾದಿ ಇಂದ್ರಿಯಗಳಿಗೆ ಜ್ಞಾನದ ಜೊತೆ ಅನ್ವಯವ್ಯತಿರೇಕವು ಇರುವುದರಿಂದ ಕರಣವಿಷಯತ್ವವು ಕೂಡ ಉಪಪನ್ನವಾಗುತ್ತದೆ. ಅಹಂಪ್ರತ್ಯಯಕ್ಕೆ ದೇಹದಂತೆ ಕರಣವೂ ಕೂಡ ಆಶ್ರಯವಾಗುತ್ತದೆ. ಕರಣದಲ್ಲಿ ಕರ್ತೃತ್ವವು ಔಪಚಾರಿಕವಾಗಿ ಪ್ರಾಪ್ತವಾಗುತ್ತದೆ. ಆದ್ದರಿಂದ ಚಕ್ಷುರಾದಿ ಕರಣವುಳ್ಳ ಶರೀರವೇ ಆಶ್ರಯವಾಗಿ ಉಳ್ಳ ಮನಸ್ಸೇ ಆತ್ಮನೆಂದು ಹೇಳಬೇಕು. ಹೀಗೆ ಇನ್ನು ಕೆಲವರು ಹೇಳುತ್ತಾರೆ.

ಹಿಂದಿನಂತೆ ಮನಸ್ಸೇ ಆತ್ಮನೆಂದು ಹೇಳುವ ಪಕ್ಷದಲ್ಲೂ ಕೂಡ 'ತತ್ಸನ್ನಿಧೌ ಈಕ್ಷಣದರ್ಶನಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿರುವುದು ಸಾಧಾರಣಹೇತುವಾಗಿದೆ. ನಾವು ಹೇಳಿರುವುದು ವಿಶೇಷಹೇತುವಾಗಿದೆ. ಇದು ಟೀಕಾರಾಯರಿಗೆ ಅಭಿಮತವೆಂಬುದಾಗಿ ತಿಳಿಯಬೇಕು.

ವಿವರಣೆ – ಸ್ವಪ್ನದಲ್ಲಿ ಚಕ್ಷುರಾದಿ ಇಂದ್ರಿಯಗಳು ಇಲ್ಲದೇ ಇದ್ದರೂ ಕೂಡ ಕೇವಲ ಮನಸ್ಸು ಜ್ಞಾನಕ್ಕೆ ಆಶ್ರಯವಾಗಿರುವುದು ಕಂಡಿದೆ. ಅನುಭವವು ಸ್ಮೃತಿಗೆ ಜನಕವಾಗಿದೆ. ಈ ಸ್ಮೃತಿಗೆ ಮನಸ್ಸು ಆಶ್ರಯವಾಗಿದೆ. ಆದ್ದರಿಂದ ಅನುಭವರೂಪವಾದ ಜ್ಞಾನಕ್ಕೂ ಕೂಡ ಮನಸ್ಸೇ ಆಶ್ರಯವಾಗುತ್ತದೆ. ರೂಪಾದಿಜ್ಞಾನಗಳಿಗೆ ಆಯಾ ಇಂದ್ರಿಯಗಳು ಆಶ್ರಯವಾಗುವುದಾದರೆ ಚಕ್ಷುರಾದಿಗಳಲ್ಲೇ ಸ್ಮೃತಿಯು ಬರಬೇಕಾಗುತ್ತದೆ. ಆದರೆ ಮನಸ್ಸಿನಲ್ಲೇ ಸ್ಮೃತಿಯು ಬರುತ್ತಿದೆ. ಮತ್ತು ಚಕ್ಷುರಿಂದ್ರಿಯ ಇದ್ದಾಗ ಅನೇಕ ರೂಪಾದಿಜ್ಞಾನಗಳನ್ನು ಹೊಂದಿರುವ ವ್ಯಕ್ತಿಗೆ ಕಣ್ಣು ಹೋದನಂತರವೂ ರೂಪಾದಿಸ್ಮರಣೆಯು ಬರುತ್ತದೆ. ಅಥವಾ ಕಣ್ಣು ಇರುವವನಿಗೂ ಕಣ್ಣು ಮುಚ್ಚಿದಾಗ ರೂಪಾದಿಸ್ಮರಣೆಯು ಬರುತ್ತದೆ. ಆದ್ದರಿಂದ ಚಕ್ಷುರಿಂದ್ರಿಯವನ್ನು ಸ್ಮರಣೆಗೆ ಆಶ್ರಯವೆಂದು ಹೇಳಲು ಸಾಧ್ಯವಿಲ್ಲ. ಮನಸ್ಸೇ ಆಶ್ರಯವೆಂದು ಹೇಳಬೇಕು.

ಮನಸ್ಸಿಗೂ ಜ್ಞಾನಕ್ಕೂ ಹೇಗೆ ಅನ್ವಯವ್ಯತಿರೇಕವಿದೆಯೋ ಅದರಂತೆ ಇಂದ್ರಿಯಗಳಿಗೂ ಜ್ಞಾನಕ್ಕೂ ಅನ್ವಯವ್ಯತಿರೇಕವು ಇದೆ. ಕಾರಣತಯಾ ಅನ್ವಯವ್ಯತಿರೇಕವನ್ನೇ ಹೇಳಬಹುದು. ಕಾರಣತ್ವೇನ ಅನ್ವಯವ್ಯತಿರೇಕವನ್ನು ಕಲ್ಪನೆ ಮಾಡುವುದಕ್ಕಿಂತ ಆಶ್ರಯತಯಾ ಅನ್ವಯವ್ಯತಿರೇಕದ ಕಲ್ಪನೆಯು ಲಘುಭೂತವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಮನೋರೂಪವಾದ ಆಶ್ರಯಾಂತರವು ಸಿದ್ಧವಾದ ಮೇಲೆ ಇಂದ್ರಿಯಕ್ಕಿರುವ ಅನ್ವಯವ್ಯತಿರೇಕವನ್ನು ಕರಣತಯಾ ನಿರ್ವಾಹ ಮಾಡಬಹುದು. ಏಕೆಂದರೆ ಸ್ವಪ್ನದ ಅನ್ಯಥಾನುಪಪತ್ತಿಯಿಂದ ಮನಸ್ಸು ಜ್ಞಾನಕ್ಕೆ ಆಶ್ರಯವಾಗಿದೆ ಎಂಬುದಾಗಿ ಸಿದ್ಧವಾಗಿದೆ. ಆದ್ದರಿಂದ ರೂಪಾದಿಜ್ಞಾನಗಳಿಗಿರುವ ಅನ್ವಯವ್ಯತಿರೇಕವನ್ನು ಕರಣತಯಾ ಪರ್ಯವಸಾನ ಮಾಡಬಹುದು.

ಜ್ಞಾನಕ್ಕೆ ಕರಣವಾದದ್ದು ಇಂದ್ರಿಯಗಳು. ಕರಣದಲ್ಲಿ ಕರ್ತೃತ್ವೋಪಚಾರದಿಂದ 'ಹಂತಾ ರಾಮಶರಃ' ಇತ್ಯಾದಿ ಪ್ರಯೋಗದಂತೆ ಕೂಡಿಸಬೇಕು.

## ವಿಜ್ಞಾನವೇ ಆತ್ಮಾ

ವಾಕ್ಯಾರ್ಥಚಂದ್ರಿಕಾ – ಶರೀರಾದೀನಾಂ ವಿಜ್ಞೇಯತಯಾ ಘಟಾದಿವಜ್ಜ್ಞಾನವ್ಯತಿರಿಕ್ತತ್ವೇನ ಅನಾತ್ಮತ್ವಾತ್ ಮನಸಶ್ಚ ಸಮನಂತರಪ್ರತ್ಯಯವ್ಯತಿರೇಕಿಣೋಽಭಾವಾಚ್ಚ ವಿಜ್ಞಾನಮೇವಾಹಂಪ್ರತ್ಯಯಾಲಂಬನಮಾತ್ಮೇತ್ಯಪರಃ।

ಶರೀರಾದಿಗಳು ಜ್ಞೇಯವಾಗಿರುವುದರಿಂದ ಘಟಾದಿಗಳಂತೆ ಜ್ಞಾನವ್ಯತಿರಿಕ್ತವಾಗಿವೆ. ಆದ್ದರಿಂದಲೇ ಅನಾತ್ಮ ಎನಿಸುತ್ತವೆ. ಮನಸ್ಸಾದರೂ ಸಮನಂತರಪ್ರತ್ಯಯಕ್ಕಿಂತ ವ್ಯತಿರಿಕ್ತವಲ್ಲ. ಹಾಗಾಗಿ ಅಹಂಪ್ರತ್ಯಯಕ್ಕೆ ಆಶ್ರಯವಾದ ಆತ್ಮನೆಂದು ಹೇಳಬೇಕು. ಹೀಗೆ ಕೆಲವು ಪಕ್ಷದವರು ಅಭಿಪ್ರಾಯಪಡುತ್ತಾರೆ.

ವಿವರಣೆ– ಶರೀರ, ಇಂದ್ರಿಯ, ಮನಸ್ಸು ಇವುಗಳಲ್ಲಿ ಯಾವುದೂ ಕೂಡ ಆತ್ಮನಲ್ಲ. ಇವುಗಳಿಂದ ಬರುವ ಜ್ಞಾನವೇ ಆತ್ಮನೆಂಬುದಾಗಿ ಇನ್ನು ಕೆಲವರು ಹೇಳುತ್ತಾರೆ. ಶರೀರ ಇಂದ್ರಿಯ ಮೊದಲಾದವುಗಳೆಲ್ಲ ಜ್ಞೇಯಪದಾರ್ಥಗಳಾಗಿರುತ್ತವೆ. ಜ್ಞೇಯವಾದದ್ದು ಜ್ಞಾನಕ್ಕಿಂತ ಭಿನ್ನವಾಗಿರುತ್ತದೆ. ಜ್ಞಾನಾತಿರಿಕ್ತವಾದ್ದರಿಂದಲೇ ಶರೀರಾದಿಗಳು ಆತ್ಮನೆಂದು ಕರೆಸಿಕೊಳ್ಳುವುದಿಲ್ಲ. ಸಮನಂತರಪ್ರತ್ಯಯವನ್ನೇ ಮನಸ್ಸೆಂದು ಕರೆಯುತ್ತೇವೆ. ಏತದತಿರಿಕ್ತವಾದ ಮನಸ್ಸೆಂಬ ಇಂದ್ರಿಯವೇ ಇರುವುದಿಲ್ಲ. ಆದ್ದರಿಂದ ಅಹಂ ಎಂಬ ಪ್ರತ್ಯಯಕ್ಕೆ ವಿಷಯವಾದ ವಿಜ್ಞಾನವೇ ಆತ್ಮ ಎಂಬುದಾಗಿ ಬೌದ್ಧರು ಹೇಳುತ್ತಾರೆ.

## ಸಂಘಾತವು ಆತ್ಮಾ ಅಥವಾ ಶೂನ್ಯವು ಆತ್ಮಾ ಎಂಬ ಪಕ್ಷ

ವಾಕ್ಯಾರ್ಥಚಂದ್ರಿಕಾ– ಸಂಘಾತಾವಲಂಬನೋऽಹಮಿತಿ ಪ್ರತ್ಯಯಃ ಸಂಘಾತಸನ್ನಿಧಾವಹಮಿತಿಪ್ರತ್ಯಯದರ್ಶನಾದಿತ್ಯನ್ಯ ಇತ್ಯುಕ್ತಮೇವ । ವಿಜ್ಞಾನವ್ಯತಿರಿಕ್ತಾನಾಮಾತ್ಮತ್ವಸ್ಯ ವಿಜ್ಞೇಯತ್ವೇನ ಪ್ರತ್ಯಾಖ್ಯಾನಾತ್ ಸುಷುಪ್ತೇ ಚ ವಿಜ್ಞಾನಲೇಶಸ್ಯಾಪ್ಯಭಾವೇನ ಸಮನಂತರಪ್ರತ್ಯಯರೂಪಕಾರಣಾಭಾವಾತ್ ಸ್ವೋಚಿತಕಾರಣಾಭಾವೇ ಚ ಸುಪ್ತೋತ್ಥಿತಸ್ಯ ಅಕಸ್ಮಾಜ್ಜಾಯಮಾನಾಹಂಪ್ರತ್ಯಯಸ್ಯ ಸದವಲಂಬನತ್ವಾನುಪಪತ್ತ್ಯಾ ಶೂನ್ಯಾಲಂಬನತ್ವಮೇವೇತ್ಯಪಿ ಕಶ್ಚಿತ್ ।

ಅಹಂ ಎಂಬ ಪ್ರತ್ಯಯಕ್ಕೆ ಸಂಘಾತವೇ ವಿಷಯವಾಗಿದೆ. ಸಂಘಾತದ ಸನ್ನಿಧಾನದಲ್ಲಿ ಮಾತ್ರ ಅಹಂ ಎಂಬ ಪ್ರತೀತಿ ಬರುವುದು ಅನುಭವಸಿದ್ಧವಾಗಿದೆ. ಹೀಗೆ ಇನ್ನು ಕೆಲವರು ಹೇಳುತ್ತಾರೆ. ಇದನ್ನು ಈಗಾಗಲೇ ಹೇಳಿದ್ದಾಗಿದೆ.

ವಿಜ್ಞಾನಕ್ಕಿಂತ ಅತಿರಿಕ್ತವಾದ ಆತ್ಮತ್ವಕ್ಕೆ ವಿಜ್ಞೇಯತ್ವವನ್ನು ನಿರಾಕರಣೆ ಮಾಡಲಾಗಿದೆ. ಸುಷುಪ್ತಿಯ ಕಾಲದಲ್ಲಿ ವಿಜ್ಞಾನದ ಲೇಶವೂ ಕೂಡ ಇರುವುದಿಲ್ಲ. ಸಮನಂತರಪ್ರತ್ಯಯವೆಂಬ ಕಾರಣವು ಕೂಡ ಇರುವುದಿಲ್ಲ. ತನಗೆ ಉಚಿತವಾದ ಕಾರಣವು ಇಲ್ಲದೇ ಸುಪ್ತೋತ್ಥಿತನಿಗೆ ಅಕಸ್ಮಾತ್ತಾಗಿ (ನಿಷ್ಕಾರಣಕವಾಗಿ) ಅಹಂ ಎಂಬ ಪ್ರತ್ಯಯವು ಬರುತ್ತಿದೆ. ಇದಕ್ಕೆ ಸತ್ಪದಾರ್ಥವು ಆಶ್ರಯವಾಗಲು ಸಾಧ್ಯವಿಲ್ಲ. ಆದ್ದರಿಂದ ಶೂನ್ಯವೇ ಆಶ್ರಯವೆಂದು ಹೇಳಬೇಕು. ಹೀಗೆ ಇನ್ನು ಕೆಲವರು ಶೂನ್ಯವನ್ನೇ ಆತ್ಮನೆಂದು ಹೇಳುತ್ತಾರೆ.

ವಿವರಣೆ – ಶರೀರ, ಇಂದ್ರಿಯ, ಮನಸ್ಸು, ಜ್ಞಾನ, ಬುದ್ಧಿ ಇವುಗಳೆಲ್ಲ ಒಟ್ಟಿಗೆ ಇದ್ದರೆ ಮಾತ್ರ 'ಅಹಂ' ಎಂಬ ಪ್ರತ್ಯಯವು ಬರುತ್ತದೆ. ಇಲ್ಲದಿದ್ದರೆ ಬರುವುದಿಲ್ಲ ಎಂಬುದಾಗಿ ಸಂಘಾತವೇ ಆತ್ಮಾ ಎಂಬುದಾಗಿ ಕೆಲವರು ಹೇಳುತ್ತಾರೆ.

ಶರೀರ, ಇಂದ್ರಿಯ, ಮನಸ್ಸು, ಬುದ್ಧಿ ಇವುಗಳಲ್ಲಿ ಯಾವುದೊಂದೂ ಕೂಡ ಆತ್ಮನಾಗಲು ಸಾಧ್ಯವಿಲ್ಲ. ಶರೀರಾದಿಗಳಿಗೆ ಆತ್ಮತ್ವಪಕ್ಷವನ್ನು ಹಿಂದಿನ ಪಕ್ಷದವರೇ ನಿರಾಕರಣೆ ಮಾಡಿದ್ದಾರೆ. ಏಕೆಂದರೆ, ಅವುಗಳೆಲ್ಲವೂ ಜ್ಞಾನಾತಿರಿಕ್ತವಾಗಿರುವುದರಿಂದ ಆತ್ಮನಾಗಲು ಸಾಧ್ಯವಿಲ್ಲ. ಇವುಗಳಿಂದ ಬರುವ ಜ್ಞಾನವನ್ನು ಹಾಗೂ ಸಮನಂತರಪ್ರತ್ಯಯವೇ ಮನಸ್ಸು ಎಂಬುದನ್ನು ಮಾತ್ರ ಇವರು ನಿರಾಕರಣೆ ಮಾಡುತ್ತಾರೆ. ವಿಜ್ಞಾನಾತಿರಿಕ್ತವಾದದ್ದೆಲ್ಲವೂ ಆತ್ಮನಾಗಲು ಸಾಧ್ಯವಿಲ್ಲವಾದ್ದರಿಂದ ಶರೀರಾದಿಗಳು ಆತ್ಮ ಎನಿಸುವುದಿಲ್ಲ. ಸುಷುಪ್ತಿಯಿಂದ ಎದ್ದ ಕೂಡಲೇ ಅಹಂ ಎಂಬ ಪ್ರತೀತಿಯು ಬರುತ್ತದೆ. ಇದಕ್ಕೆ

ಯಾರು ವಿಷಯ? ಎಂಬ ಪ್ರಶ್ನೆಗೆ ವಿಜ್ಞಾನವನ್ನು ಆಶ್ರಯವೆಂದು ಹೇಳಲಾಗದು. ಸುಷುಪ್ತಿಯಲ್ಲಿ ವಿಜ್ಞಾನವೇ ಇರುವುದಿಲ್ಲ. ಯಾವುದು ಜ್ಞಾನಕ್ಕೆ ವಿಷಯವೋ ಅದು ಜ್ಞಾನಕ್ಕಿಂತ ಪೂರ್ವದಲ್ಲಿ ಇರಬೇಕು. ಸುಪ್ತಿಕಾಲದಲ್ಲಿ ಬರುವ ಅಹಂಜ್ಞಾನಕ್ಕೆ ವಿಜ್ಞಾನವನ್ನು ಆಶ್ರಯವೆಂದು ಹೇಳಲಾಗದ ಕಾರಣ ವಿಜ್ಞಾನವು ಆತ್ಮ ಎನಿಸುವುದಿಲ್ಲ. ಸಮನಂತರಪ್ರತ್ಯಯವನ್ನು ಮನಸ್ಸೆಂದು ಹೇಳಿದ್ದೂ ಸಹ ತಪ್ಪು. ಸುಷುಪ್ತಿಕಾಲದಲ್ಲಿ ಸಮನಂತರಪ್ರತ್ಯಯವು ಕೂಡ ಇರುವುದಿಲ್ಲ. ಆದ್ದರಿಂದ ಜ್ಞಾನವು ಶೂನ್ಯ-ವಿಷಯಕವೆಂದೇ ಹೇಳಬೇಕು. ಸುಪ್ತೋತ್ಥಿತನಿಗೆ ಬರುವ ಅಹಂಪ್ರತ್ಯಯಕ್ಕೆ ಮನಸ್ಸೂ ಕೂಡ ಆಶ್ರಯ-ವಾಗುವುದಿಲ್ಲ. ಏಕೆಂದರೆ, ಸುಷುಪ್ತಿಯಲ್ಲಿ ಯಾವುದೇ ಜ್ಞಾನವು ಇಲ್ಲದ್ದರಿಂದ ಸಮನಂತರಪ್ರತ್ಯಯವೂ ಕೂಡ ಇರುವುದಿಲ್ಲ. ಸಮನಂತರಪ್ರತ್ಯಯವನ್ನೇ ಮನಸ್ಸೆಂದು ನೀವು ಹೇಳುತ್ತಿದ್ದೀರಿ. ಆದ್ದರಿಂದ ಮನಸ್ಸು ಎಂಬ ಕಾರಣ ಇಲ್ಲದೇ ಅಹಂ ಎಂಬ ಜ್ಞಾನವು ಬರುತ್ತಿದೆ. ಈ ಅಹಂಪ್ರತ್ಯಯವು ನಿಷ್ಕಾ-ರಣಕವಾಗಿದೆ ಎಂಬುದು ಸಿದ್ಧವಾಯಿತು. ನಿಷ್ಕಾರಣಕವಾದ ಈ ಪ್ರತ್ಯಯಕ್ಕೆ ವಿಷಯವೂ ಕೂಡ ಯಾವುದೂ ಇಲ್ಲ ಎಂದೇ ಹೇಳಬೇಕು.

## ಶೂನ್ಯವೇ ಆತ್ಮನೆಂಬ ಪಕ್ಷದ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – 'ನನು' ಇತ್ಯುತ್ತರವಾಕ್ಯೇನ ಚ ಸರ್ವ ಏತೇ ಪಕ್ಷಾ ನಿರಾಕ್ರಿಯಂತೇ। ತತ್ರ ಚಾತ್ಮಾऽಸಂದಿಗ್ಧಾವಿಪರ್ಯಸ್ತಸಾಕ್ಷಾತ್ಪ್ರತೀತ್ಯೈವ ನಿಶ್ಚೀಯತ ಇತ್ಯೇತಾವನ್ಮಾತ್ರೇಣ ಶೂನ್ಯಪಕ್ಷನಿರಾಕರಣಮ್ । ಅತ್ರ ಚ ಯ ಏವಾಹಂ ಪೂರ್ವೇದ್ಯುರ್ಹಸ್ತಿನಮದ್ರಾಕ್ಷಂ ಸ ಏವಾಹಂ ಸಂಪ್ರತಿ ತುರಗಮುಪಲಭ ಇತ್ಯೇವಮಾದಿಪ್ರತ್ಯಭಿಜ್ಞಾ ಸಾಕ್ಷಾತ್ ಪ್ರತೀತಿರಭಿಪ್ರೇತಾ । ತದ್ವಶಾಚ್ಚ ಸುಪ್ತಾವಾತ್ಮನಃ ಸತ್ವಮಾಸ್ಥೇಯಮಿತಿ।

"ನನು" ಇತ್ಯಾದಿ ಮುಂದಿನ ವಾಕ್ಯದಿಂದ ಗ್ರಂಥದಲ್ಲಿ ಈ ಎಲ್ಲಾ ಪಕ್ಷಗಳನ್ನು ನಿರಾಕರಿಸು-ತ್ತಿದ್ದಾರೆ. 'ಆತ್ಮಾ ಅಸಂದಿಗ್ಧಅವಿಪರ್ಯಸ್ತಸಾಕ್ಷಾತ್ಪ್ರತೀತ್ಯೈವ ನಿಶ್ಚೀಯತೇ' ಎಂಬುದರಿಂದ ಶೂನ್ಯಪಕ್ಷವು ನಿರಾಕೃತವಾಯಿತು. 'ಯಾವ ನಾನು ಹಿಂದಿನ ದಿವಸ ಆನೆಯನ್ನು ನೋಡಿರುವೆನೋ ಅಂಥ ನಾನೇ ಈಗ ಕುದುರೆಯನ್ನು ನೋಡಿರುವೆನು' ಹೀಗೆ ಪ್ರತ್ಯಭಿಜ್ಞೆಯು ಬರುತ್ತದೆ.

ಇದರಿಂದ ಸಾಕ್ಷಾತ್ ಪ್ರತೀತಿಯು ಅಭಿಪ್ರೇತವಾಗಿದೆ. ಇದರ ಆಧಾರದಿಂದ ಸುಷುಪ್ತಿಯಲ್ಲಿ ಆತ್ಮನು ಸತ್ಯಭೂತನಾಗಿದ್ದಾನೆಂದು ನಿಶ್ಚಯವಾಗುತ್ತದೆ.

ವಿವರಣೆ – ಈ ಎಲ್ಲ ಪಕ್ಷಗಳನ್ನು "ನನು" ಇತ್ಯಾದಿ ಮುಂದಿನ ವಾಕ್ಯದಿಂದ ಗ್ರಂಥದಲ್ಲಿ ನಿರಾಕರಣೆ ಮಾಡಿದ್ದಾರೆ. ಹೇಗೆ ಎಂದರೆ – ಅಹಂ ಎಂಬ ಸಾಕ್ಷಾತ್ಕಾರಕ್ಕೆ ವಿಷಯವಾದದ್ದು ಶೂನ್ಯವೆಂದು ಹೇಳುವುದು ಅಯುಕ್ತವಾಗುತ್ತದೆ. ಈ ಅಹಂ ಎಂಬ ಸಾಕ್ಷಾತ್ಕಾರವು ಭ್ರಮೆಯಲ್ಲ. ಅನೇಕ ಕೋಟಿಯಲ್ಲದ್ದರಿಂದ ಸಂಶಯಜ್ಞಾನವಲ್ಲ; ಬಾಧಜ್ಞಾನವಿಲ್ಲದ್ದರಿಂದ ಭ್ರಮೆಯಲ್ಲ. ಆದ್ದರಿಂದ ಪ್ರಮಾರೂಪವೆಂದೇ ಹೇಳಬೇಕು. ಈ ಅಹಂ ಪ್ರತ್ಯಯಕ್ಕೆ ಆಲಂಬನಾದವನು ೬ ತ್ಮನೇ ಆಗುತ್ತಾನೆ. ಶೂನ್ಯವಾಗಲು ಸಾಧ್ಯವಿಲ್ಲ. ಆದ್ದರಿಂದ 'ಅಸಂದಿಗ್ಧಅವಿಪರ್ಯಸ್ತಸಾಕ್ಷಾತ್ಪ್ರತೀತ್ಯೈವ ನಿಶ್ಚೀಯತೇ' ಎಂಬುದರಿಂದಲೇ ಶೂನ್ಯಪಕ್ಷವು ನಿರಾಕೃತವಾಯಿತು. ಮತ್ತು ಸುಷುಪ್ತಿಯಲ್ಲಿ ಯಾವದೂ ಇಲ್ಲ ಎಂದು ಹೇಳಿದ್ದು ಅಯುಕ್ತವಾಗಿದೆ. ಸುಷುಪ್ತಿಯಲ್ಲಿ ಆತ್ಮನೇ ಇರುತ್ತಾನೆ. ಪ್ರತ್ಯಭಿಜ್ಞಾಬಲದಿಂದ ನಿನ್ನೆ ಇರುವ ಆತ್ಮನಿಗೂ ಇವತ್ತು ಇರುವ ಆತ್ಮನಿಗೂ ಐಕ್ಯವು ತಿಳಿಯುತ್ತದೆ. ಸುಷುಪ್ತಿಯಲ್ಲಿಯೂ ಕೂಡ ಅದೇ ಆತ್ಮನಿದ್ದಾನೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ಶೂನ್ಯವೇ ಆತ್ಮಾ ಎಂಬ ಪಕ್ಷವು ಅಯುಕ್ತವಾಯಿತು.

## ಉಳಿದೆಲ್ಲ ಪಕ್ಷಗಳ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – ವಿಶಿಷ್ಟೇನ ವಾಕ್ಯೇನ ತು ಪಕ್ಷಾಂತರನಿರಾಕರಣಮ್ । ತಸ್ಯ ಚ ಸ್ವಪ್ನೇ ಶರೀರಾನವಭಾಸೇಽಪಿ ಚಕ್ಷುರಾದಿವ್ಯಾಪಾರಾಭಾವೇಽಪಿ ಚಾಹಮಿತಿ ಸಾಕ್ಷಾತ್ ಪ್ರತೀತೇಃ ಸುಪ್ತೇ ಚ ಶರೀರೇಂದ್ರಿಯಾಣಾಂ ಮನೋಬುದ್ಧ್ಯೋಶ್ಚ ವ್ಯಾಪಾರಾಭಾವೇಽಪಿ 'ಏತಾವಂತಂ ಕಾಲಂ ಸುಖಮಸ್ವಾಪ್ಸಮ್' ಇತ್ಯುತ್ಥಿತಪರಾಮರ್ಶಾನುರೋಧೇನ ಅಹಮಿತಿ ಪ್ರತೀತೇಃ ಸುಪ್ತಿದಶಾಯಾಮಪಿ ಸಿದ್ದೇಸ್ತಸ್ಯಾಃ ಶರೀರಾದಿಭಿನ್ನವಿಷಯತ್ವಮಿತಿ । ಶರೀರಾದೇರ್ಮಮೇತಿಪ್ರತೀತಿವಿಷಯತ್ವಾಸಂಭವಾತ್ ಅಹಮಿತಿಪ್ರತೀತೇಃ ಶರೀರಾದಿವ್ಯತಿರಿಕ್ತವಿಷಯಕತ್ವಮಿತ್ಯಪ್ಯರ್ಥಃ । ಏವಂ ಚಾನೇನ ಸರ್ವಪಕ್ಷನಿರಾಕರಣಮ್ ।

ವಿಶಿಷ್ಟವಾದ ವಾಕ್ಯದಿಂದ ಉಳಿದೆಲ್ಲ ಪಕ್ಷಗಳನ್ನು ನಿರಾಕರಣೆ ಮಾಡಿದ್ದಾರೆ. ಸ್ವಪ್ನದಲ್ಲಿ ಶರೀರವು ಪ್ರತೀತವಾಗುತ್ತಿಲ್ಲ. ಮತ್ತು ಚಕ್ಷುರಾದಿ ಇಂದ್ರಿಯಗಳ ವ್ಯಾಪಾರವೂ ಕೂಡ ಇರುವುದಿಲ್ಲ. ಆದರೂ ಕೂಡ ಅಹಂ ಎಂಬ ಪ್ರತೀತಿಯು ಸಾಕ್ಷಾತ್ತಾಗಿ ಇರುತ್ತದೆ. ಸುಪ್ತ್ಯವಸ್ಥೆಯಲ್ಲಿ ಶರೀರ ಹಾಗೂ ಇಂದ್ರಿಯಗಳಿಗೆ ಮನಸ್ಸು ಮತ್ತು ಬುದ್ಧಿಗಳಿಗೆ ವ್ಯಾಪಾರವು ಇಲ್ಲದಿದ್ದರೂ ಕೂಡ ಎದ್ದ ಮೇಲೆ ಏತಾವಂತಂ ಕಾಲಂ ಸುಖಮಸ್ವಾಪ್ಸಮ್' 'ಇಲ್ಲಿಯ ತನಕ ಸುಖವಾಗಿ ಮಲಗಿದ್ದೆ' ಎಂಬುದಾಗಿ ಎದ್ದವನಿಗೆ ಪರಾಮರ್ಶವು ಬರುತ್ತಿದೆ. ಇದನ್ನು ಅನುಸರಿಸಿ ಅಹಂ ಎಂಬ ಪ್ರತೀತಿಯು ಸುಷುಪ್ತಿಯ ಅವಸ್ಥೆಯಲ್ಲೂ ಕೂಡ ಇರುತ್ತದೆಂದು ಸಿದ್ಧವಾಗುತ್ತದೆ. ಇದಕ್ಕೆ ಶರೀರಾದಿಭಿನ್ನವಿಷಯಕವೆಂದೇ ಹೇಳಬೇಕು.

ಶರೀರಾದಿಗಳಲ್ಲಿ ಮಮ ಎಂಬ ಪ್ರತೀತಿವಿಷಯವೇ ಬರುತ್ತಿದೆ. ಹೀಗಿರುವಾಗ ಶರೀರಾದಿಗಳಲ್ಲಿ ಅಹಂ ಎಂಬ ಪ್ರತೀತಿವಿಷಯತ್ವವು ಅಸಂಭಾವಿತವಾಗಿದೆ. ಅಹಂ ಎಂಬ ಪ್ರತೀತಿಗೆ ಶರೀರಾದಿವ್ಯತಿರಿಕ್ತ-ವಿಷಯಕತ್ವವು ಇದರಿಂದ ಸಿದ್ಧವಾಗುತ್ತದೆ. ಹೀಗೆ ವಿಶಿಷ್ಟವಾದ ವಾಕ್ಯದಿಂದ ಎಲ್ಲಾ ಪಕ್ಷಗಳನ್ನೂ ನಿರಾಕರಣೆ ಮಾಡಿದಂತಾಯಿತು.

ವಿವರಣೆ – 'ಆತ್ಮಾ ಶರೀರಾದಿವ್ಯತಿರಿಕ್ತೋऽಹಮಿತ್ಯಸಂದಿಗ್ಧಾವಿಪರ್ಯಸ್ತಸಾಕ್ಷಾತ್‌ಪ್ರತೀತ್ಯೈವ ನಿಶ್ಚೀಯತೇ' ಎಂಬ ವಿಶಿಷ್ಟವಾಕ್ಯದಿಂದ ಉಳಿದೆಲ್ಲ ಪಕ್ಷಗಳನ್ನು ನಿರಾಕರಣೆ ಮಾಡಿದ್ದಾರೆ. ಅದು ಹೀಗೆ – ಸ್ವಪ್ನದಲ್ಲಿ ಸ್ಥೂಲಶರೀರವು ಕಾಣಿಸುವುದಿಲ್ಲ. ಯಾವ ಸ್ಥೂಲಶರೀರವನ್ನು ಆತ್ಮನೆಂದು ಹೇಳುತ್ತಾರೋ ಅದು ಸ್ವಪ್ನದಲ್ಲಿ ಇದ್ದರೂ ಸಹ ಕಾಣಿಸುತ್ತಿಲ್ಲ. ಚಕ್ಷುರಾದಿ ವ್ಯಾಪಾರಗಳೂ ಕೂಡ ಇರುವುದಿಲ್ಲ. ಆದರೂ ಕೂಡ ಅಹಂ ಎಂಬ ಪ್ರತೀತಿಯು ಬರುತ್ತಿದೆ. ಆದ್ದರಿಂದ ಅಹಂ ಎಂಬ ಪ್ರತ್ಯಯಕ್ಕೆ ಶರೀರ ಹಾಗೂ ಚಕ್ಷುರಾದಿ ಇಂದ್ರಿಯಗಳು ವಿಷಯವಾಗುವುದಿಲ್ಲವೆಂದು ತಿಳಿಯುತ್ತದೆ. ಮನಸ್ಸು, ಬುದ್ಧಿಗಳು ಸುಷುಪ್ತಿಯಲ್ಲಿ ಉಪರತವಾಗಿರುವುದರಿಂದ ಆಗ ಬರುವ ಅಹಂ ಪ್ರತ್ಯಯಕ್ಕೆ ಇವುಗಳು ವಿಷಯ-ವಾಗುವುದಿಲ್ಲ. ಎದ್ದ ಮೇಲೆ ಬರುವ ಪರಾಮರ್ಶದಿಂದ ಸುಷುಪ್ತಿಕಾಲದಲ್ಲಿ ಅಹಂ ಎಂಬ ಪ್ರತೀತಿಯು ಇರುತ್ತದೆಂದು ನಿಶ್ಚಯವಾಗುತ್ತದೆ. ಮತ್ತು ಶರೀರ, ಮನಸ್ಸು, ಇಂದ್ರಿಯಗಳಲ್ಲಿ ಮಮ ಎಂಬು-ದಾಗಿಯೇ ಅನುಭವವು ಬರುತ್ತಿದೆ. ಇದಕ್ಕೆ ವಿರುದ್ಧವಾಗಿ ಅಹಂ ಎಂಬ ಪ್ರತೀತಿಗೆ ವಿಷಯವಾಗುವುದು ಅಸಂಭಾವಿತವಾಗಿದೆ.

## ಜಿಜ್ಞಾಸ್ಯತ್ವಕ್ಕೆ ನಿಶ್ಚಿತತ್ವ ಹೇಳುವುದಷ್ಟೇ ನಮ್ಮ ಉದ್ದೇಶ

ವಾಕ್ಯಾರ್ಥಚಂದ್ರಿಕಾ – ಗೀತಾಭಾಷ್ಯೇ ತು ಪ್ರಕಾರಾಂತರೇಣೈಷಾಂ ಪಕ್ಷಾಣಾಂ ನಿರಾಕರಣಮಿತಿ ದ್ರಷ್ಟವ್ಯಮ್ । ಏವಂ ತರ್ಹಿ ನಾತ್ಮಾಭಾವೇ ತಸ್ಯ ಶರೀರಾದ್ಯಭೇದೇ ವಾ ಅಸ್ಮಾಕಂ ತಾತ್ಪರ್ಯಂ ಕಿಂತು ತಸ್ಯ ನಿಶ್ಚಿತತ್ವೇ । ತದರ್ಥಂ ಚ ತಸ್ಯ ಶರೀರಾಭೇದಾದ್ಯುಕ್ತಿಃ । ಏವಂ ಚ ಶರೀರಾದ್ಯತಿರಿಕ್ತತಯಾऽಪ್ಯಾತ್ಮನೋ ನಿಶ್ಚಯಾಂಗೀಕಾರೇ ತಾವತೈವಾಜಿಜ್ಞಾಸ್ಯತ್ವರೂಪಾಸ್ಮದಭಿಮತ-ಸಿದ್ಧಿರಿತ್ಯಾಹ – ಏವಂ ತರ್ಹೀತಿ ॥

ಗೀತಾಭಾಷ್ಯದಲ್ಲಿ ಮತ್ತೊಂದು ಪ್ರಕಾರದಿಂದ ಈ ಪಕ್ಷಗಳನ್ನು ನಿರಾಕರಣೆ ಮಾಡಿದ್ದಾರೆಂದು ತಿಳಿಯಬೇಕು.

ಹಾಗಾದರೆ ಆತ್ಮನೇ ಇಲ್ಲವೆಂಬ ಪಕ್ಷದಲ್ಲಿ ಅಥವಾ ಆತ್ಮನು ಶರೀರಾದಿಗಳಿಗಿಂತ ಭಿನ್ನನಾಗಿ-ದ್ದಾನೆಂಬ ಪಕ್ಷದಲ್ಲಿ ನಮಗೆ ತಾತ್ಪರ್ಯವು ಇರುವುದಲ್ಲ ಕಿಂತು ವಿಷಯವು ನಿಶ್ಚಿತವಾಗಿದೆ ಎಂಬುದ-ರಲ್ಲಷ್ಟೇ ನಮಗೆ ತಾತ್ಪರ್ಯವಿದೆ. ಅದಕ್ಕಾಗಿ ಮಾತ್ರ ಆತ್ಮನಿಗೆ ಶರೀರಾದ್ಯಭೇದವನ್ನು ಹೇಳಲಾಗಿದೆ. ಆದ್ದರಿಂದ ಶರೀರಾದ್ಯತಿರಿಕ್ತತಯಾ ಆತ್ಮನು ನಿಶ್ಚಿತನಾಗಿದ್ದಾನೆಂದು ಅಂಗೀಕಾರ ಮಾಡಿದರೆ ಇದರಿಂದಲೇ ಅಜಿಜ್ಞಾಸ್ಯತ್ವ ಎಂಬ ನಮ್ಮ ಇಷ್ಟಾರ್ಥವು ಸಿದ್ಧವಾಗುತ್ತದೆಂಬುದನ್ನು "ಏವಂ ತರ್ಹಿ" ಎಂಬ ವಾಕ್ಯದಿಂದ ಹೇಳುತ್ತಾರೆ.

## ಕಾರಣೋಪಪತ್ತಿತಃ ಎಂಬುದಕ್ಕೆ ಎರಡುಬಗೆಯ ವ್ಯಾಖ್ಯಾನ

**ಯಾದುಪತ್ಯ – ಅವಿಜ್ಞಾತತತ್ತ್ವೇಽರ್ಥ ಇತಿ ॥ ಅವಿಜ್ಞಾತತತ್ತ್ವೇಽನಿಶ್ಚಿತಸ್ವರೂಪೇ ಸಂದಿಗ್ಧ ಇತಿ ಯಾವತ್ । ಅನೇನ ತರ್ಕವಿಷಯೋ ದರ್ಶಿತಃ । ಉತ್ತರೇಣ ಪಂಚಮ್ಯಂತೇನ ಕಾರಣಂ ಕಾರಣ-ಸ್ಯಾಹಾರ್ಯಲಿಂಗಸ್ಯೋಪಪತ್ತಿಃ ಸದ್ಭಾವಸ್ತಸ್ಮಾದಿತಿ । ಕಾರಣಸ್ಯ ಪ್ರಮಾಣಸ್ಯೋಪಪತ್ತಿಃ ಸಂಭಾವನಾ ಪ್ರಮಾಣವಿಷಯಾಭ್ಯನುಜ್ಞಾನಮಿತಿ ಯಾವತ್ । ತದುಪಲಕ್ಷಿತಮಿತಿ ಇತ್ಥಂಭಾವಲಕ್ಷಣ-ತೃತೀಯಾಂತತ್ವಮಂಗೀಕೃತ್ಯ ತರ್ಕವ್ಯಾಪಾರನಿರ್ದೇಶ ಇತಿ ಕೇಚಿತ್ ।**

"ಅವಿಜ್ಞಾತತತ್ತ್ವೇಽರ್ಥೇ' – ಅನಿಶ್ಚಿತಸ್ವರೂಪವುಳ್ಳ ಸಂದಿಗ್ಧವಾದ ಅರ್ಥದಲ್ಲಿ ಎಂದರ್ಥ. ಇದರಿಂದ ತರ್ಕದ ವಿಷಯವನ್ನು ತೋರಿಸಿದಂತಾಯಿತು. ಮುಂದಿರುವ ಪಂಚಮ್ಯಂತದಿಂದ ಕಾರಣ-ವನ್ನು ತೋರಿಸಿದಂತಾಯಿತು.

"ಕಾರಣೋಪಪತ್ತಿತಃ" ಎಂಬುದಕ್ಕೆ ಆಹಾರ್ಯಲಿಂಗವು ಇರುವುದರಿಂದ ಎಂದರ್ಥ

'ಕಾರಣೋಪಪತ್ತಿತಃ' ಎಂಬುದಕ್ಕೆ ಕೆಲವರ ವ್ಯಾಖ್ಯಾನ ಹೀಗಿದೆ– ಕಾರಣ ಎಂದರೆ ಪ್ರಮಾಣದ ಎಂದರ್ಥ. ಇದರ ಉಪಪತ್ತಿ ಎಂಬುದಕ್ಕೆ ಸಂಭಾವನೆ ಎಂದರ್ಥ. ಪ್ರಮಾಣವಿಷಯದಲ್ಲಿ ಅಭ್ಯನು-ಜ್ಞೆಯು ಇದೆಯೋ ಅದೇ ಕಾರಣೋಪಪತ್ತಿ ಎಂಬುದಾಗಿ ಕರೆಸಿಕೊಳ್ಳುತ್ತದೆ. ಇಲ್ಲಿರುವ ತಸಿ ಪ್ರತ್ಯಯವು ತೃತೀಯಾವಿಭಕ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇತ್ಥಂಭಾವರೂಪವಾದ ತೃತೀಯಾಂತವಾದದ್ದೆಂದು ಅಂಗೀ-ಕರಿಸಿ ತರ್ಕವ್ಯಾಪಾರವನ್ನು ಇದರಿಂದ ನಿರ್ದೇಶಿಸಿದ್ದಾರೆ. ಆದ್ದರಿಂದ ಕಾರಣೋಪಪತ್ತಿಯಿಂದ ಉಪ-ಲಕ್ಷಿತವಾದ ಊಹೆಯನ್ನೇ ತರ್ಕ ಎಂಬುದಾಗಿ ತಿಳಿಯಬೇಕು.

ವಿವರಣೆ – 'ಅವಿಜ್ಞಾತತತ್ತ್ವೇಽರ್ಥೇ' – 'ಅನಿಶ್ಚಿತವಾದ ಸ್ವರೂಪವನ್ನು ಹೊಂದಿರುವ ಅರ್ಥದಲ್ಲಿ' ಎಂದರ್ಥ. ಸಂದಿಗ್ಧವಾದ ವಸ್ತುವೇ ತರ್ಕಕ್ಕೆ ವಿಷಯವಾಗುತ್ತದೆ.

ಕಾರಣೋಪಪತ್ತಿತಃ ಎಂಬುದಕ್ಕೆ ಪರಿಮಳದಲ್ಲಿ ಹೇಳಿದ ಅರ್ಥಕ್ಕಿಂತ ಬೇರೆ ರೀತಿಯ ಅರ್ಥವನ್ನು ಇಲ್ಲಿ ಹೇಳಲಾಗಿದೆ – ತರ್ಕಕ್ಕೆ ಸಂದಿಗ್ಧವಾದದ್ದು ವಿಷಯವಾಗುತ್ತದೆಂದು ಹೇಳಿದ್ದಾಯಿತು. ಈಗ ತರ್ಕಕ್ಕೆ ಕಾರಣವನ್ನು ಹೇಳುತ್ತಿದ್ದಾರೆ. ಕಾರಣೋಪಪತ್ತಿತಃ ಎಂಬಲ್ಲಿರುವ ಪಂಚಮೀವಿಭಕ್ತಿಯು ಈ ತರ್ಕದ ಕಾರಣವನ್ನು ಹೇಳುತ್ತಿದೆ. ಪರಿಮಳದಲ್ಲಿ ಕಾರಣಸ್ಯ ಎಂಬುದಕ್ಕೆ ಪ್ರಮಾಣಾನುಗ್ರಹಕರಣೇನ ಎಂಬರ್ಥ-ವನ್ನು ಹೇಳಲಾಯಿತು. ಪ್ರಕೃತ ಕಾರಣ ಎಂಬುದಕ್ಕೆ ಆಹಾರ್ಯಲಿಂಗ ಎಂದರ್ಥ. ಆಪಾದಕವಾದದ್ದನ್ನೇ ಆಹಾರ್ಯಲಿಂಗ ಎನ್ನುತ್ತಾರೆ. ಯದಿ ನಿರಗ್ನಿಕಃ ಸ್ಯಾತ್ ತರ್ಹಿ ನಿರ್ಧೂಮಕಃ ಸ್ಯಾತ್ ಎಂಬಲ್ಲಿ ನಿರಗ್ನಿಕತ್ವವು ಆಹಾರ್ಯಲಿಂಗವಾಗಿದೆ. ಇಂಥ ಆಹಾರ್ಯಲಿಂಗವು ಇರುವುದನ್ನೇ ಕಾರಣೋಪಪತ್ತಿ ಎನ್ನುತ್ತಾರೆ.

ಪರಿಮಳದಲ್ಲಿ ಹೇಳಿದ ಅರ್ಥವನ್ನು ಇಲ್ಲಿ ಕೇಚಿತ್ ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ – ಕಾರಣ ಎಂಬುದಕ್ಕೆ ಪ್ರಮಾಣ ಎಂದರ್ಥ. ಆ ಪ್ರಮಾಣಕ್ಕೆ ಉಪಪತ್ತಿ ಎಂದರೆ ಅನುಗ್ರಹ ಎಂದರ್ಥ. ತದ್ವಿಷಯಕವಾದ ಸಂಭಾವನಾ ಎಂದರ್ಥ. ಸಂಭಾವನಾ ಎಂದರೆ ಪ್ರಮಾಣದ ವಿಷಯದಲ್ಲಿ ಅಭ್ಯನುಜ್ಞಾ ನೀಡುವುದು ಎಂದರ್ಥ. ಆದ್ದರಿಂದ ಅನುಗ್ರಹ ಎಂಬ ಶಬ್ದಕ್ಕೆ ಸಂಭಾವನೆ ಎಂದರ್ಥ. ಅನುಮಿತಿಯು ತರ್ಕದ ಫಲವಾದರೆ ಮಧ್ಯದಲ್ಲಿರುವ ವ್ಯಾಪಾರ ಎಂದರೆ ಕಾರಣೋಪಪತ್ತಿಯೇ ಆಗಿದೆ. ಕಾರಣೋಪಪತ್ತಿತಃ ಎಂಬಲ್ಲಿರುವ ತಸಿ ಎಂಬ ಪ್ರತ್ಯಯವು ಸರ್ವವಿಭಕ್ತ್ಯರ್ಥದಲ್ಲಿ ಕೂಡ ಪ್ರಾಪ್ತವಾಗುತ್ತದೆ. ಪ್ರಕೃತ ತೃತೀಯಾವಿಭಕ್ತಿಯನ್ನು ವಿವಕ್ಷಿಸಿ ಇತ್ಥಂಭಾವಲಕ್ಷಣದಲ್ಲಿ ತೃತೀಯಾರ್ಥವನ್ನು ವಿವಕ್ಷಿಸಬೇಕು. ಆದ್ದರಿಂದ ಕಾರಣೋಪಪತ್ತಿಯಿಂದ ಉಪಲಕ್ಷಿತವಾದ ಊಹವೇ ತರ್ಕ ಎಂಬುದಾಗಿ ಕರೆಸಿಕೊಳ್ಳುತ್ತದೆ. ಹೀಗೆ ಕೆಲವರು ವ್ಯಾಖ್ಯಾನ ಮಾಡುತ್ತಾರೆ.

## ತರ್ಕದ ಲಕ್ಷಣ

ಯಾದುಪತ್ಯ – ತತ್ತ್ವಜ್ಞಾನಾರ್ಥಮಿತಿ ಪ್ರಯೋಜನಮ್ । ಊಹ ಇತಿ ಲಕ್ಷಣಮ್ । ಊಹಶಬ್ದೇನ ಪ್ರಸಂಗಾಭಿಧಾನಾದಿತಿ ಗೌತಮಸೂತ್ರಾರ್ಥಃ । ತೃಣಾದಿರೂಪೇ ಕರ್ಮಣಿ ಜಿಜ್ಞಾಸಾರೂಪಸಾಧನಸ್ಯ ಪ್ರಮಾರೂಪಕ್ರಿಯಾಯಾಃ ಪ್ರತ್ಯಕ್ಷಾದಿಸಾಧನಾಂತರಸಾಧ್ಯತ್ವೇನಾಫಲ-ತಯಾ ಅನ್ಯಸ್ಯ ಕರ್ತವ್ಯಸ್ಯ ಕ್ರಿಯಾವಿಶೇಷಣಸ್ಯ ಅನುಪಲಂಭೇನ ಸಾಧನತ್ವಮೇವಾಪಗತಮಿತ್ಯಾಹ – ನಿಷ್ಪಾದಿತಕ್ರಿಯೇ ಚೇತಿ ॥ ನಿಷ್ಪಾದಿತಾ ಪ್ರಮಿತಿಲಕ್ಷಣಾ ಕ್ರಿಯಾ ಯಸ್ಯ ಕರ್ಮಣೋ ವಿಷಯಸ್ಯ ಸ

ಇಹ ತಥೋಕ್ತ: । ಸಾಧನನ್ಯಾಯಃ = ಸಾಧನರೀತಿಃ । ಅತಿಪಾತೋऽತಿಕ್ರಮಃ । ಸಾಧನತ್ವೇನ ಅಭಿಮತೇ ತಸ್ಮಿನ್ ಫಲಾಭಾವಾತ್ ಸಾಧನರೀತಿರಪಗತಾ ಇತಿ ಭಾವಃ।

'ತತ್ವಜ್ಞಾನಾರ್ಥಂ' ಎಂಬುದಾಗಿ ಪ್ರಯೋಜನವನ್ನು ಹೇಳಿದ್ದಾರೆ. ಊಹಃ ಎಂಬುದು ತರ್ಕದ ಲಕ್ಷಣವಾಗಿದೆ. ಊಹ ಶಬ್ದದಿಂದ ಪ್ರಸಂಗವನ್ನು ಹೇಳಬೇಕೆಂದು ಗೌತಮಸೂತ್ರದ ಅರ್ಥವಾಗಿದೆ.

ತೃಣಾದಿರೂಪವಾದ ಕರ್ಮದಲ್ಲಿ ಜಿಜ್ಞಾಸಾಸಾಧನಕ್ಕೆ ಪ್ರಮಾ ಎಂಬುದು ಕ್ರಿಯೆಯಾಗಿದೆ. ಇದು ಪ್ರತ್ಯಕ್ಷ ಮೊದಲಾದ ಬೇರೆ ಸಾಧನಗಳಿಂದಲೇ ಸಿದ್ಧವಾಗಿದೆ. ಆದ್ದರಿಂದ ಜಿಜ್ಞಾಸೆಯ ಫಲವಾಗಲು ಸಾಧ್ಯವಿಲ್ಲ. ಬೇರೆ ಕ್ರಿಯಾವಿಶೇಷವು ಕಾಣಸುತ್ತಿಲ್ಲ. ಆದ್ದರಿಂದ ಜಿಜ್ಞಾಸೆಗೆ ಸಾಧನತ್ವವೇ ನಾಶವಾಗುತ್ತದೆಂಬುದನ್ನು "ನಿಷ್ಪಾದಿತಕ್ರಿಯೇ ಚ" ಎಂಬುದರಿಂದ ಹೇಳುತ್ತಿದ್ದಾರೆ. 'ನಿಷ್ಪಾದಿತಕ್ರಿಯೇ' ಎಂಬಲ್ಲಿ 'ನಿಷ್ಪಾದಿತಾ ಕ್ರಿಯಾ ಯಸ್ಯ ಸಃ' ಎಂಬ ವ್ಯುತ್ಪತ್ತಿಯನ್ನು ಅಂಗೀಕರಿಸಿ ಯಾವ ಕರ್ಮಕ್ಕೆ ಪ್ರಮಿತಿ-ರೂಪವಾದ ಕ್ರಿಯೆಯು ವಿಷಯವಾಗಿದೆಯೋ ಅದು ಎಂದರ್ಥ. ಸಾಧನನ್ಯಾಯಃ ಎಂಬುದಕ್ಕೆ ಸಾಧನ-ಪ್ರಕಾರವಾದದ್ದು ಎಂಬರ್ಥ. ಅತಿಪಾತ ಶಬ್ದಕ್ಕೆ ಅತಿಕ್ರಮ ಎಂದರ್ಥ. ಸಾಧನತ್ವೇನ ಅಭಿಮತವಾದದ್ದರಲ್ಲಿ ಫಲವು ಇಲ್ಲದ ಕಾರಣ ಸಾಧನಪ್ರಕಾರವು ನಾಶವಾಯಿತು ಎಂದರ್ಥ.

ವಿವರಣೆ – "ತತ್ವಜ್ಞಾನಾರ್ಥಂ" ಎಂಬುದರಿಂದ ತತ್ವಜ್ಞಾನವೇ ತರ್ಕದ ಪ್ರಯೋಜನವಾಗಿದೆ ಎಂಬುದನ್ನು ತಿಳಿಸಿದ್ದಾರೆ. ತರ್ಕ ಎಂದರೆ ಊಹ ಎಂದರ್ಥ. 'ಊಹಶಬ್ದೇನ ಪ್ರಸಂಗಾಭಿಧಾನಾತ್' ಎಂಬುದಾಗಿ ಗೌತಮಸೂತ್ರದ ಅರ್ಥ. ತರ್ಕಶಬ್ದಕ್ಕೆ ಊಹ ಎಂದಷ್ಟೇ ಅರ್ಥ. ಅವಿಜ್ಞಾತತತ್ತ್ವೇऽರ್ಥೇ ಎಂಬುದು ತರ್ಕದ ವಿಷಯವಾಗಿದೆ. 'ಕಾರಣೋಪಪತ್ತಿತಃ' ಎಂಬುದು ತರ್ಕದ ಕಾರಣವಾಗಿದೆ. 'ತತ್ವ-ಜ್ಞಾನಾರ್ಥಂ' ಎಂಬುದು ತರ್ಕದ ಫಲ. ಹೀಗೆ ತರ್ಕದ ವಿಷಯ, ಪ್ರಯೋಜನ, ಕಾರಣಗಳನ್ನು ಹೇಳಿ ತರ್ಕ ಎಂದರೇನು? ಎಂಬ ಪ್ರಶ್ನೆಗೆ ಊಹ ಎಂಬರ್ಥವನ್ನು ವಿವಕ್ಷಿಸಬೇಕು ಎಂಬುದಾಗಿ ಹೇಳುತ್ತಿದ್ದಾರೆ. ಗೌತಮರ ಸೂತ್ರದಲ್ಲಿ ಪ್ರಸಂಗವನ್ನೇ ಊಹ ಎಂದಿದ್ದಾರೆ. 'ಯದಿ ನಿರಗ್ನಿಕಃ ಸ್ಯಾತ್ ತರ್ಹಿ ನಿರ್ಧೂಮೋऽಪಿ ಸ್ಯಾತ್' ಎಂಬಲ್ಲಿ ನಿರಗ್ನಿಕಃ ಸ್ಯಾತ್ ಎಂಬುದು ಆಹಾರ್ಯಲಿಂಗವಾಗಿದೆ. ನಿರ್ಧೂ-ಮೋऽಪಿ ಸ್ಯಾತ್ ಎಂಬುದು ಪ್ರಸಂಜನವಾಗಿದೆ. ಅನಿಷ್ಟವ್ಯಾಪನವಾದದ್ದೇ ಪ್ರಸಂಜನ ಎಂದು ಕರೆಸಿ-ಕೊಳ್ಳುತ್ತದೆ. ಗೌತಮಸೂತ್ರಕ್ಕೆ ಈ ಅರ್ಥವನ್ನು ತಿಳಿಯಬೇಕು.

ತೃಣಾದಿರೂಪವಾದ ಕರ್ಮದಲ್ಲಿ ಜಿಜ್ಞಾಸಾ ಎಂಬ ಸಾಧನವನ್ನು ಹೇಳಿದಾಗ ಪ್ರಮಾರೂಪವಾದ ಕ್ರಿಯೆಯು ಪ್ರತ್ಯಕ್ಷಾದಿಸಾಧನಾಂತರದಿಂದ ನಿಷ್ಪಾದಿತವಾಗಿದೆ. ಆದ್ದರಿಂದ ಪ್ರಮಾ ಎಂಬುದು ಫಲ-

ವಾಗಲು ಸಾಧ್ಯವಿಲ್ಲ. ಪ್ರಮಾ ಬಿಟ್ಟು ಬೇರೆ ಯಾವುದೇ ಫಲವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜಿಜ್ಞಾಸೆಗೆ ಸಾಧನತ್ವವೇ ನಾಶವಾಗುತ್ತದೆ.

## ಸುಧಾಪರಿಮಳಸಾರ

ವಿಷಯ, ಪ್ರಯೋಜನ, ಅಧಿಕಾರ, ಸಂಬಂಧ ಇವುಗಳು ಇಲ್ಲಿ ಇಲ್ಲ ಎಂಬುದಾಗಿ ಹೇಗೆ ಹೇಳಲು ಸಾಧ್ಯ? ಎಂದರೆ ಹೀಗೆ ಜಡವು ಜಿಜ್ಞಾಸೆಗೆ ವಿಷಯವೆನಿಸದು. ಏಕೆಂದರೆ ಹುಲ್ಲು ಮೊದಲಾದ ಅನಾತ್ಮಗಳು ಪ್ರತ್ಯಕ್ಷಾದಿ-ಪ್ರಮಾಣಗಳಿಂದಲೇ ನಿಶ್ಚಿತವಾಗಿವೆ. ಸಂದಿಗ್ಧವಾದ ಪದಾರ್ಥವೇ ಜಿಜ್ಞಾಸೆಗೆ ವಿಷಯವೆನಿಸಲರ್ಹ. ಈ ವಿಷಯವನ್ನು ನ್ಯಾಯಸೂತ್ರದಲ್ಲಿ ಹೀಗೆ ನಿರೂಪಿಸಲಾಗಿದೆ.

"ಸ್ವರೂಪನಿರ್ಣಯವಿಲ್ಲದಿರುವ ವಸ್ತುವಿನ ಬಗ್ಗೆ ಆ ವಸ್ತುವಿನ ನಿಜಸ್ವರೂಪವನ್ನು ತಿಳಿಯಲು ಪ್ರಮಾಣಗಳ ಸಹಾಯದಿಂದ ಊಹಿಸುವುದೇ ತರ್ಕವೆನಿಸುತ್ತದೆ."

ಮತ್ತು ಒಂದು ವಸ್ತುವಿನಲ್ಲಿ ಕ್ರಿಯೆಯು ಹುಟ್ಟಿದ ನಂತರ ಆ ವಸ್ತುವಿನಲ್ಲಿ ವಿಶೇಷವನ್ನುಂಟು ಮಾಡದ ಸಾಧನವು ಸಾಧನವಾಗಲಾರದು. ಸಾಧನವೆಂದು ಕರೆಸಿಕೊಳ್ಳಲು ಅದಕ್ಕೆ ಅರ್ಹತೆ ಇಲ್ಲ.

ಇಂಥ ತೃಣಾದಿಗಳ ಜಿಜ್ಞಾಸೆಯಿಂದ ಯಾರಿಗೂ ಏನೂ ಪ್ರಯೋಜನವಾಗಲಾರದು. ಇಂಥ ಜಿಜ್ಞಾಸೆಯನ್ನು ಮಾಡುವ ಅಧಿಕಾರಿಯಂತೂ ಸರ್ವಥಾ ಸಿಗುವುದೇ ಇಲ್ಲ.

ಏಕೆಂದರೆ ಪ್ರಸ್ತುತ ಜಿಜ್ಞಾಸೆಗೆ ಸಂಬಂಧಿಸಿದ ಪ್ರಯೋಜನವನ್ನು ಅಪೇಕ್ಷಿಸುವವನೂ, ಸಮರ್ಥನೂ, ವಿದ್ಯಾವಂತನೂ ಜಿಜ್ಞಾಸೆಗೆ ಅಧಿಕಾರಿಯು ಎನಿಸುವನು. ಇಂಥ ತೃಣಾದಿಗಳ ವಿಷಯಕವಾದ ಜಿಜ್ಞಾಸೆಯಲ್ಲಿ ಪ್ರಯೋಜನಾಪೇಕ್ಷೆ ಯಾರಿಗೂ ಹುಟ್ಟುವುದಿಲ್ಲ.

ಧರ್ಮ ಮುಂತಾದ ಅನಾತ್ಮವಿಷಯಗಳು ಧರ್ಮಮೀಮಾಂಸಾ ಮುಂತಾದ ಬೇರೆ ಶಾಸ್ತ್ರಗಳಿಂದಲೇ ಸಿದ್ಧ-ವಾಗುವುದರಿಂದ ಪ್ರಸ್ತುತ ಜಿಜ್ಞಾಸೆಗೆ ವಿಷಯವೆನಿಸವು.

ಶರೀರ ಮತ್ತು ಇಂದ್ರಿಯಾದಿಗಳ ಸಮೂಹವೇ ಆತ್ಮಾ ಇದಕ್ಕಿಂತ ವ್ಯತಿರಿಕ್ತನಾದ ಆತ್ಮನು ಇಲ್ಲವೇ ಇಲ್ಲ. ಇಂಥ ಆತ್ಮನು ಜಿಜ್ಞಾಸೆಗೆ ವಿಷಯನಾಗುವುದಿಲ್ಲ. ಏಕೆಂದರೆ ಶರೀರ ಇಂದ್ರಿಯ ಇವುಗಳ ನಿಶ್ಚಯಾತ್ಮಕ ಜ್ಞಾನವು ಪ್ರತ್ಯಕ್ಷಾದಿಪ್ರಮಾಣಗಳಿಂದಲೇ ಸಿದ್ಧವಾಗುತ್ತದೆ.

'ಅಹಂ' 'ಅಹಂ' ಎಂಬ ಜ್ಞಾನವು ಎಲ್ಲರಿಗೂ ಅನುಭವಸಿದ್ಧವಾಗಿದೆ; ಈ ಜ್ಞಾನವು ಸಂದೇಹರೂಪವೂ ಅಲ್ಲದ ಭ್ರಾಂತಿಯೂ ಅಲ್ಲದ ಯಥಾರ್ಥಜ್ಞಾನ. ಇಂಥ ಅಪರೋಕ್ಷಪ್ರತೀತಿಯಿಂದ ದೇಹಕ್ಕಿಂತ ವ್ಯತಿರಿಕ್ತನಾದ

ಆತ್ಮನು ಸಿದ್ಧನಾಗುತ್ತಾನೆ. ಆದುದರಿಂದ ಆತ್ಮನು ಕೇವಲ ಶರೀರಾದಿಸಮೂಹರೂಪನಲ್ಲ. ಇಂಥ ಆತ್ಮನು ಜಿಜ್ಞಾಸೆಗೆ ವಿಷಯನಾಗಬಹುದಲ್ಲವೇ? ಎನ್ನುವುದಾದರೆ ಅಹಂ ಎಂಬ ನಿಶ್ಚಯಾತ್ಮಕವಾದ ಜ್ಞಾನವಿಷಯನಾದುದರಿಂದಲೆ ಶರೀರಾದ್ಯತಿರಿಕ್ತ ಆತ್ಮನು ಜಿಜ್ಞಾಸೆಗೆ ವಿಷಯನಾಗುವುದಿಲ್ಲ. ಆದ್ದರಿಂದಲೇ ಅನಾದಿಕಾಲದಿಂದ ಆತ್ಮನಿಗೆ ನಾನು ನಾನು ಎಂಬುದಾಗಿ ತನ್ನ ತತ್ತ್ವಜ್ಞಾನವು ಇರುವಾಗಲೂ ತನ್ನ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಗಳು ಕಾಣದಿರುವುದರಿಂದ ಇಂಥ ಆತ್ಮನ ಜಿಜ್ಞಾಸೆಯಿಂದ ಯಾವ ಪ್ರಯೋಜನವೂ ಆಗಲಾರದು.

## ನೆನೆಪಿಡಿ

* ವಿಷಯಪ್ರಯೋಜನಅಧಿಕಾರಿಸಂಬಂಧ್ಯಭಾವಾತ್ ಎಂಬಲ್ಲಿ ವಿವಕ್ಷಿತವಾದ ನಾಕು ಹೇತುಗಳಲ್ಲಿ ಮೊದಲನೆಯ ಹೇತುವನ್ನು ಇಲ್ಲಿ ಉಪಪಾದನೆ ಮಾಡಿದ್ದಾರೆ.

* ಅಧಿಕಾರಿಸಮರ್ಪಕವಾದ ಅಥಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನೇಕೆ ಮೊದಲು ಹೇಳಲಿಲ್ಲ. ಎಂಬ ಆಕ್ಷೇಪಕ್ಕೆ ಅಥಶಬ್ದಕ್ಕಿಂತಲೂ ಮೊದಲಿರುವ ಓಂಕಾರಾರ್ಥದಿಂದ ನಿವೃತ್ತಿಯಾಗುವ ಪೂರ್ವಪಕ್ಷವನ್ನು ಮೊದಲು ಹೇಳಿದ್ದಾರೆ ಎಂದು ಉತ್ತರ.

* ವಿಷಯಾಭಾವಪೂರ್ವಪಕ್ಷವು ಓಂಕಾರ ಮತ್ತು ಬ್ರಹ್ಮಶಬ್ದಾರ್ಥಗಳಿಂದ ಪರಿಹಾರ-ವಾಗುತ್ತದೆ.

* ಸೂಚೀಕಟಾಹನ್ಯಾಯದಿಂದ ಅನಾತ್ಮವು ವಿಷಯವೆಂದು ಮೊದಲು ನಿರಾಕರಿಸಿ ಕಠಿಣವಾದ ಆತ್ಮನು ವಿಷಯನಾಗುತ್ತಾನೆ ಎಂಬುದನ್ನು ಅನಂತರ ನಿರಾಕರಿಸುತ್ತಿದ್ದಾರೆ.

* 'ಅವಿಜ್ಞಾತತತ್ತ್ವೇಽರ್ಥೇ ಕರಣೋಪಪತ್ತಿತಃ ತತ್ವಜ್ಞಾನಾರ್ಥಂ ಊಹಃ ತರ್ಕಃ' ಎಂಬುದು ಗೌತಮಸೂತ್ರವಾಗಿದೆ.

* ತತ್ವಜ್ಞಾನಾರ್ಥಂ ಎಂಬುದು ತರ್ಕದ ಪ್ರಯೋಜನ. ಅವಿಜ್ಞಾತತತ್ತ್ವೇಽರ್ಥೇ ಎಂಬುದು ತರ್ಕದ ವಿಷಯ. ಕಾರಣೋಪಪತ್ತಿತಃ ಎಂಬುದು ತರ್ಕದ ಕಾರಣವಾಗಿದೆ. ಆದ್ದ-ರಿಂದ ಊಹಃ ಎಂಬುದಷ್ಟೇ ತರ್ಕದ ಲಕ್ಷಣವೆಂದು ಗೌತಮಸೂತ್ರದಲ್ಲಿ ತಿಳಿಯಬೇಕು.

* ಕೆಲವರು ಶರೀರವನ್ನೇ ಆತ್ಮ ಎನ್ನುತ್ತಾರೆ, ಕೆಲವರು ಇಂದ್ರಿಯವನ್ನು ಆತ್ಮ ಎನ್ನುತ್ತಾರೆ, ಕೆಲವರು ಶರೀರೇಂದ್ರಿಯಗಳ ಸಂಘಾತವನ್ನು ಆತ್ಮ ಎನ್ನುತ್ತಾರೆ, ಕೆಲವರು ಮನಸ್ಸನ್ನು ಆತ್ಮ ಎನ್ನುತ್ತಾರೆ, ಕೆಲವರು ಬುದ್ಧಿಯನ್ನು ಆತ್ಮ ಎನ್ನುತ್ತಾರೆ, ಕೆಲವರು ವಿಜ್ಞಾನವನ್ನು ಆತ್ಮ ಎನ್ನುತ್ತಾರೆ, ಕೆಲವರು ಶೂನ್ಯವನ್ನು ಆತ್ಮ ಎನ್ನುತ್ತಾರೆ.

* ಈ ಎಲ್ಲ ಪಕ್ಷಗಳನ್ನು 'ಆತ್ಮಾಚ ಶರೀರೇಂದ್ರಿಯಸಂಘಾತವ್ಯತಿರಿಕ್ತೋ ನಾಸ್ತ್ಯೇವ' ಎಂಬ ವಾಕ್ಯದಿಂದ ಟೀಕಾರಾಯರು ಸಂಗ್ರಹಿಸಿದ್ದಾರೆ.

* ಜಡವಾದ ಶರೀರಾದಿಗಳು ಪ್ರತ್ಯಕ್ಷದಿಂದ ನಿಶ್ಚಿತವಾದ ಕಾರಣ ವಿಷಯವಾಗು-ವುದಿಲ್ಲ. ಆತ್ಮನು ಸಾಕ್ಷಿಸಿದ್ಧನಾಗಿರುವುದರಿಂದ ವಿಷಯನಾಗುವುದಿಲ್ಲ. ಆದ್ದರಿಂದ ವಿಷಯಾ-ಭಾವವೆಂಬ ಹೇತುವು ಸಿದ್ಧವಾಗುತ್ತದೆ.

## ಜಿಜ್ಞಾಸೆಗೆ ಯಾರು ವಿಷಯ

**ಶ್ರೀಮನ್ನ್ಯಾಯಸುಧಾ – ನನ್ವಯಂ ಕರ್ತಾ ಭೋಕ್ತಾ ದೋಷಸಂಸರ್ಗೀ ಚಾಹಂ-ಪ್ರತ್ಯಯೇ ಪ್ರಕಾಶತೇ । ತದ್ವಿಪರೀತಸ್ತು ಶ್ರುತಿಪ್ರತಿಪಾದಿತಃ ಪ್ರತಿಪತ್ತವ್ಯೋಽತೋ ಜಿಜ್ಞಾಸ್ಯೇತಿ ಚೇತ್ ।**

ಪ್ರಶ್ನೆ – 'ಅಹಂ ಸುಖೀ' 'ಅಹಂ ದುಃಖೀ' 'ಅಹಂ ಕರ್ತಾ' 'ಅಹಂ ಭೋಕ್ತಾ' ಇವೇ ಮೊದಲಾದ ಅನುಭವಗಳಿಂದ ಆತ್ಮನಲ್ಲಿ ಸುಖದುಃಖಾದಿದೋಷಗಳ ಸಂಸರ್ಗವು ಕಾಣ-ಸುತ್ತಿದೆ. ಆದರೆ ಶ್ರುತಿಗಳು ಈ ಅನುಭವಕ್ಕೆ ವಿರುದ್ಧವಾಗಿ ಆತ್ಮನನ್ನು ತಿಳಿಸುತ್ತಿವೆ. ಶ್ರುತಿ-ಗಳಲ್ಲಿ ತಿಳಿಸಿದಂತೆ ಸುಖದುಃಖಾದಿದೋಷಗಳ ಸಂಪರ್ಕವಿಲ್ಲದ ಶುದ್ಧವಾದ ಆತ್ಮಸ್ವರೂಪ-ವನ್ನು ತಿಳಿದುಕೊಳ್ಳಬೇಕು. ಅದಕ್ಕಾಗಿ ಆತ್ಮಜಿಜ್ಞಾಸೆಯು ಕರ್ತವ್ಯವಾಗಿದೆಯಲ್ಲವೇ?

## ಆತ್ಮನು ಜಿಜ್ಞಾಸ್ಯನಲ್ಲ

**ಏವಂ ತರ್ಹಿ ಜರದ್ಗವಾದಿವಾಕ್ಯವತ್ ಪಾವಕಶೈತ್ಯಾನುಮಾನವಚ್ಚ ಪ್ರತೀತಿ-ವಿರೋಧೇನ ಶ್ರುತಿಜಿಜ್ಞಾಸಯೋರಾಭಾಸತಾಪಾತಃ । ಅತ ಏವ ನ ಪರಾತ್ಮಾ ಜಿಜ್ಞಾಸ್ಯಃ । ತಸ್ಯ ಪ್ರಾಣಾದಿಲಿಂಗೈರವಗತತ್ವಾತ್ ।**

ಈ ಪ್ರಶ್ನೆಯು ಸಮಂಜಸವಲ್ಲ. ಹಾಗಾದರೆ ಜರದ್ಗವಾದಿವಾಕ್ಯಗಳಂತೆ ಮತ್ತು 'ಅಗ್ನಿಯು ತಣ್ಣಗಿದೆ' ಎಂಬುದಾಗಿ ಸಾಧಿಸುವ ಅನುಮಾನದಂತೆ ಪ್ರತ್ಯಕ್ಷವಿರುದ್ಧವಾದ

ವಿಷಯವನ್ನು ತಿಳಿಸುವ ಶ್ರುತಿಯು ಹಾಗೂ ಅದರ ಅರ್ಥವಿಚಾರವು ಅಪ್ರಮಾಣವಾಗುವ ಪ್ರಸಂಗ ಬರುತ್ತದೆ. ಆದ್ದರಿಂದಲೇ ಮತ್ತೊಬ್ಬನ ಶರೀರದಲ್ಲಿರುವ ಆತ್ಮನು ಬೇರೆ ಪ್ರಮಾಣದಿಂದ ಸಿದ್ಧನಾಗಿರುವ ಕಾರಣ ಜಿಜ್ಞಾಸ್ಯನಾಗುವುದಿಲ್ಲ. ಏಕೆಂದರೆ ಪ್ರಾಣಾದಿ ಲಿಂಗಗಳಿಂದ ಅವನ ಜ್ಞಾನವು ಪ್ರಾಪ್ತವಾಗುತ್ತದೆ.

## ಪರಾತ್ಮನು ಜಿಜ್ಞಾಸ್ಯನಾಗಲಾರ

**ಸೈವ ಜಿಜ್ಞಾಸೇತಿ ಚೇನ್ನ । ತಸ್ಯಾ ಲೌಕಿಕಪ್ರವೇದನೀಯತ್ವೇನ ಶಾಸ್ತ್ರಾವ್ಯುತ್ಪಾದನೀಯತ್ವಾತ್ । ನ ಖಲು ಬಾಲಕಃ ಸ್ತನಪಾನೇಷ್ಟಸಾಧನತ್ವಾನುಮಾನೇ ಶಾಸ್ತ್ರವ್ಯುತ್ಪಾದನಮಪೇಕ್ಷತೇ ।**

ಪ್ರಶ್ನೆ – ಪ್ರಾಣಾದಿಲಿಂಗಗಳಿಂದ ಆ ಪರಾತ್ಮನನ್ನು ತಿಳಿಯುವುದೇ ಜಿಜ್ಞಾಸೆ ಎನಿಸುತ್ತದಲ್ಲವೇ?

ಉತ್ತರ – ಇದು ತಪ್ಪು. ಏಕೆಂದರೆ, ಪ್ರಾಣಾದಿಲಿಂಗಗಳಿಂದ ಸಿದ್ಧನಾಗುವ ಪರಾತ್ಮನು ಲೋಕದೃಷ್ಟಾಂತದಿಂದ ಸಿದ್ಧವಾಗುವ ಅನುಮಾನಗಳಿಂದಲೇ ತಿಳಿಯಲ್ಪಡುತ್ತಾನೆ. ಇದಕ್ಕಾಗಿ ಶಾಸ್ತ್ರವಿಚಾರದ ಅವಶ್ಯಕತೆಯು ಇರುವುದಿಲ್ಲ. ಏಕೆಂದರೆ ತನಗೆ ಸ್ತನ್ಯಪಾನವು ಇಷ್ಟಸಾಧನವಾಗಿದೆ ಎಂಬುದಾಗಿ ಸಾಧಿಸುವ ಅನುಮಾನದಲ್ಲಿ ಶಾಸ್ತ್ರದ ಅಪೇಕ್ಷೆಯನ್ನು ಬಾಲಕನು ಹೊಂದುವುದಿಲ್ಲ.

## ಈಶ್ವರಜಿಜ್ಞಾಸೆಯೇ ಅಯುಕ್ತ

**ಯತ್ ಕ್ವಚಿತ್ಶಾಸ್ತ್ರೇಽಪಿ ಲೌಕಿಕಪ್ರವೇದನೀಯಾರ್ಥವ್ಯುತ್ಪಾದನಮನುವಾದೋಽಸೌ ನ ಪುನಃ ಸ ಏವ ಪ್ರಧಾನವ್ಯಾಪಾರಃ । ಈಶ್ವರವಿಷಯಾ ಜಿಜ್ಞಾಸಾ ಭವತೀತಿ ಚೇನ್ನ । ತಸ್ಯೈವಾಭಾವಾತ್ ।**

ಶಾಸ್ತ್ರದಲ್ಲಿ ಎಲ್ಲಿಯಾದರೂ ಕೆಲವೆಡೆ ಲೋಕನ್ಯಾಯದಿಂದ ನಿಶ್ಚಿತವಾದ ಅರ್ಥವನ್ನು ವ್ಯುತ್ಪಾದನೆ ಮಾಡಿದ್ದರೆ ಅದನ್ನು ಕೇವಲ ಅನುವಾದವೆಂದು ತಿಳಿದುಕೊಳ್ಳಬೇಕು. ಹೊರತು ಅದೇ ಶಾಸ್ತ್ರದ ಮುಖ್ಯವ್ಯಾಪಾರವೆಂದು ತಿಳಿದುಕೊಳ್ಳಬಾರದು.

ಪ್ರಶ್ನೆ – ಈಶ್ವರವಿಷಯಕವಾದ ಜಿಜ್ಞಾಸೆಯನ್ನು ಮಾಡಬಹುದಲ್ಲವೇ?

ಉತ್ತರ – ಈಶ್ವರನೇ ಇರುವುದಿಲ್ಲ.

## ಈಶ್ವರಶಬ್ದಕ್ಕೆ ಜೀವ ಎಂದರ್ಥ

**ನ ಚೈವಮೀಶ್ವರಾದಿಪದಾನಾಮಾನರ್ಥಕ್ಯೇನಾಪದತ್ವಪ್ರಸಂಗ ಇತಿ ವಾಚ್ಯಮ್ । ತೇಷಾಂ ಕಥಂಚಿಜ್ಜೀವವಿಷಯತೋಪಪತ್ತೇಃ ಸೋಽಪಿ ಹಿ ಸ್ವಶರೀರೇಂದ್ರಿಯಾ-ದೀನಾಮೀಷ್ಟೇ । ಪ್ರತೀತಾರ್ಥತ್ವೋಪಪತ್ತೌ ಅಪ್ರತೀತಾರ್ಥತ್ವಕಲ್ಪನಾಯಾಂ ಗೌರವಪ್ರಸಂಗಾತ್ ।**

ಪ್ರಶ್ನೆ – ಈಶ್ವರನೇ ಇಲ್ಲದಿದ್ದರೆ 'ಈಶ್ವರ' ಎಂಬ ಪದಕ್ಕೆ ಅರ್ಥವೇ ಇಲ್ಲ ಎಂದಂತಾಯಿತು?

ಉತ್ತರ – ಬೇರೆ ಪ್ರವೃತ್ತಿನಿಮಿತ್ತವನ್ನು ಒಪ್ಪಿ, ಆ ಈಶ್ವರಶಬ್ದವು ಜೀವವಿಷಯವೆಂದು ಹೇಳಬಹುದು. ಈ ಜೀವನೂ ಕೂಡ ತನ್ನ ಶರೀರ, ಇಂದ್ರಿಯ ಮೊದಲಾದವುಗಳಿಗೆ ಒಡೆಯನಾಗಿರುತ್ತಾನೆ. (ಆದ್ದರಿಂದ ಈಶ್ವರನೆನಿಸುತ್ತಾನೆ).

ಹೀಗೆ ಈಶ್ವರ ಎಂಬ ಪದಕ್ಕೆ ಪ್ರಸಿದ್ಧನಾದ ಜೀವ ಎಂಬರ್ಥವನ್ನೇ ಹೇಳಲು ಬರುತ್ತಿರುವಾಗ ಅಪ್ರಸಿದ್ಧವಾದ ಅರ್ಥವನ್ನು ಕಲ್ಪನೆ ಮಾಡಿದರೆ ಗೌರವದೋಷವು ಬರುತ್ತದೆ.

## ಆ ಜೀವನು ನಿತ್ಯಸಿದ್ಧ

**ಜೀವಸ್ಯ ಚಾಹಮಿತಿ ಸ್ವಪ್ರಕಾಶತಯಾ ಸ್ವಪ್ರಕಾಶಜ್ಞಾನಾಶ್ರಯತಯಾ ಮಾನಸ-ಪ್ರತ್ಯಕ್ಷವೇದ್ಯತಯಾ ವಾ ಸಿದ್ಧತ್ವೇನ ನ ಜಿಜ್ಞಾಸಾವಿಷಯತ್ವಮಿತ್ಯುಕ್ತಮ್ ।**

ಜೀವನಾದರೂ ಸಹ ಅಹಂ ಎಂಬುದಾಗಿ ಸ್ವಪ್ರಕಾಶಸಿದ್ಧನಾಗಿದ್ದಾನೆ. ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿರುವುದರಿಂದ ಅಥವಾ ಮಾನಸಪ್ರತ್ಯಕ್ಷದಿಂದ ವೇದ್ಯನಾಗಿರು-ವುದರಿಂದ ಸಿದ್ಧನಾಗಿದ್ದಾನೆ. ಅಂಥ ಜೀವನ ಬಗ್ಗೆ ಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ. ಇದನ್ನು ಈ ಹಿಂದೆಯೇ ಹೇಳಿದ್ದೇವೆ.

## ಮಾಯಾವಾದಿಗಳ ಪ್ರಕಾರವೂ ಕೂಡ ವಿಷಯತ್ವವನ್ನು ಉಪಪಾದಿಸಲಾಗದು

ಪರಿಮಳ – ಮಾಯಾವಾದಿರೀತ್ಯಾ ವಿಷಯತ್ವಸಂಭವಮಾಶಂಕ್ಯ ಅಕ್ಷಪ್ರಾಬಲ್ಯೇನ ನಿರಾಹ – ನನ್ವಯಮಿತಿ ॥ ಅಹಂಧೀವಿಷಯ ಇತ್ಯರ್ಥಃ । ಶ್ರುತೀತಿ ॥ 'ನಿಷ್ಕಲಂ ನಿಷ್ಕ್ರಿಯಮ್' 'ನಿರನಿಷ್ಟೋ ನಿರವದ್ಯಃ' ಇತ್ಯಾದಿಶ್ರುತೀತ್ಯರ್ಥಃ । ಪ್ರತಿಪತ್ತವ್ಯ ಇತಿ ॥ ಜಿಜ್ಞಾಸಯಾ ಇತಿ ಯೋಜ್ಯಮ್ । ಜರದ್ಗವೇತಿ ॥ 'ಜರದ್ಗವಃ ಪಾದುಕಕಂಬಲಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ' ಇತಿವಾಕ್ಯವದಿತಿ ಶ್ರುತಿರಯಂ ದೃಷ್ಟಾಂತಃ । ಜರದ್ಗವೋ = ವೃದ್ಧಬಲೀವರ್ದಃ । ಪಾವಕಶೈತ್ಯಾನುಮಾನವದಿತಿ ನ್ಯಾಯಚಿಂತಾರೂಪಜಿಜ್ಞಾಸಾಯಾಃ ದೃಷ್ಟಾಂತಃ ।

ಮಾಯಾವಾದಿಗಳ ಪ್ರಕಾರ ಜಿಜ್ಞಾಸೆಗೆ ವಿಷಯತ್ವವು ಸಂಭವಿಸುತ್ತದೆಂಬುದಾಗಿ ಆಶಂಕಿಸಿ ಅದನ್ನು ಪ್ರತ್ಯಕ್ಷಪ್ರಾಬಲ್ಯಯುಕ್ತಿಯಿಂದ ''ನನ್ವಯಂ'' ಇತ್ಯಾದಿ ವಾಕ್ಯದ ಮೂಲಕ ನಿರಾಕರಣೆ ಮಾಡುತ್ತಿದ್ದಾರೆ. ಅಯಂ ಎಂದರೆ ಅಹಂ ಎಂಬ ಬುದ್ಧಿಯಲ್ಲಿ ವಿಷಯನಾದವನು ಎಂದರ್ಥ. ''ಶ್ರುತಿ'' – 'ನಿಷ್ಕಲಂ ನಿಷ್ಕ್ರಿಯಂ' 'ನಿರನಿಷ್ಟೋ ನಿರವದ್ಯಃ' ಇವೇ ಮೊದಲಾದ ಶ್ರುತಿಗಳು

ಎಂದರ್ಥ. ''ಪ್ರತಿಪತ್ತವ್ಯಃ'' ಜಿಜ್ಞಾಸೆಯಿಂದ ತಿಳಿಯಲ್ಪಡಬೇಕು ಎಂದರ್ಥ. 'ಜಿಜ್ಞಾಸೆಯ' ಎಂಬ ಪದವನ್ನು ಯೋಜನೆ ಮಾಡಿಕೊಳ್ಳಬೇಕು.

'''ಜರದ್ಗವಃ ಪಾದುಕಕಂಬಲಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ'

ಎಂಬ ವಾಕ್ಯವು ವೇದವನ್ನು ಅಪ್ರಮಾಣವೆಂದು ಸಾಧಿಸಲು ಉದಾಹರಣೆಯಾಗಿದೆ. ಜರದ್ಗವಃ ಎಂಬ ಶಬ್ದಕ್ಕೆ ವಯಸ್ಸಾದ ಎತ್ತು ಎಂದರ್ಥ. ''ಪಾವಕಶೈತ್ಯಾನುಮಾನವತ್'' – ನ್ಯಾಯಮತದ ಪ್ರಕಾರ ಇದನ್ನು ದೃಷ್ಟಾಂತವನ್ನಾಗಿ ಹೇಳಿದ್ದಾರೆ.

ವಿವರಣೆ – ಭಾಮತಿಯಲ್ಲಿ ಯಾವುದನ್ನು ಸಿದ್ಧಾಂತ ಮಾಡಲಾಗಿದೆಯೋ ಅದನ್ನು ಇಲ್ಲಿ ಪೂರ್ವಪಕ್ಷತ್ವೇನ ಉಪಸ್ಥಾಪನೆ ಮಾಡುತ್ತಿದ್ದಾರೆ. 'ಜೀವಾತ್ಮನು ನಿಷ್ಕಲನಾಗಿದ್ದಾನೆ. ನಿಷ್ಕ್ರಿಯನಾಗಿದ್ದಾನೆ' ಇತ್ಯಾದಿಯಾಗಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಇದಕ್ಕೆ ವಿರುದ್ಧವಾಗಿ ಪ್ರತ್ಯಕ್ಷವು ಕರ್ತೃತ್ವ-ಭೋಕ್ತೃತ್ವವಿಶಿಷ್ಟನನ್ನಾಗಿ ತಿಳಿಸುತ್ತಿದೆ. ಶ್ರುತಿಪ್ರತಿಪಾದಿತನಾದ ಜೀವಾತ್ಮನ ಬಗ್ಗೆ ತಿಳುವಳಿಕೆಯು ನಮಗೆ ಇರುವುದಿಲ್ಲ. ಅದಕ್ಕಾಗಿ ಜಿಜ್ಞಾಸೆಯನ್ನು ಮಾಡಬೇಕು. ಹೀಗೆ ಭಾಮತಿಯಲ್ಲಿ ಶುದ್ಧಾತ್ಮನು ಸಿದ್ಧನಾಗಿಲ್ಲ-ವೆಂದು ಸಿದ್ಧಾಂತಮಾಡಲಾಗಿದೆ.

'ಜರದ್ಗವಃ ಪಾದುಕಕಂಬಲಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ ।
ತಂ ಬ್ರಾಹ್ಮಣೀ ಪೃಚ್ಛತಿ ಪುತ್ರ(ರಂತು)ಕಾಮಾ ರಾಜನ್ ರುಮಾಯಾಂ ಲಶುನಸ್ಯ ಕೋಽರ್ಥಃ ॥'

ವಯಸ್ಸಾದ ಒಂದು ಎತ್ತು ಪಾದುಕೆ ಹಾಗೂ ಕಂಬಳಿಗಳಿಂದ ಕೂಡಿ ಬಾಗಿಲಲ್ಲಿ ನಿಂತಿದೆ. ಮಂಗಳವಾಗಲಿ ಎಂದು ಹಾಡುತ್ತಿದೆ. ಆಗ ಬ್ರಾಹ್ಮಣ ಸ್ತ್ರೀಯು ಅದರ ಜೊತೆ ವಿಹಾರ ಮಾಡುವ ಅಪೇಕ್ಷೆಯಿಂದ ಪ್ರಶ್ನಿಸುತ್ತಾಳೆ. ಓ ರಾಜನೇ ಸಂತೆಯಲ್ಲಿ ಬೆಳ್ಳುಳ್ಳಿಗೆ ಎಷ್ಟು ಬೆಲೆಯಿದೆ.

ಈ ವಾಕ್ಯದಲ್ಲಿ ಪರಸ್ಪರ ಅರ್ಥಗಳಿಗೆ ಅನ್ವಯವೇ ಇರುವುದಿಲ್ಲ. ಯಾವುದು ಜರದ್ಗವವೋ ಅದಕ್ಕೆ ಏನನ್ನೂ ಕೂಡ ಮಾಡಲು ಸಾಮರ್ಥ್ಯವಿರುವುದಿಲ್ಲ. ಪಾದುಕೆ ಹಾಗೂ ಕಂಬಳಿಗಳನ್ನು ಹೊದ್ದಿಕೊಳ್ಳು-ವುದಂತೂ ದೂರತೋಪಾಸ್ತ. ಬಾಗಿಲಲ್ಲಿ ನಿಂತು ಭದ್ರವಾಚಕಶಬ್ದಗಳನ್ನು ಅದು ಹೇಳುವುದು ಕೂಡ ಸಾಧ್ಯವಿಲ್ಲ. ಪುತ್ರಾರ್ಥಿಯಾದ ಬ್ರಾಹ್ಮಣಿಯು ಅದರ ಬಳಿ ಹೇಗೆ ಮಾತನಾಡುತ್ತಾಳೆ? ಅದನ್ನು ರಾಜನೆಂದು ಹೇಗೆ ಸಂಬೋಧಿಸುತ್ತಾಳೆ? ಮತ್ತು ಸಂತೆಯಲ್ಲಿ ಬೆಳ್ಳುಳ್ಳಿಯ ಬೆಲೆಯ ಬಗ್ಗೆ ಇಲ್ಲೇಕೆ ಪ್ರಸಕ್ತಿ ಬರುತ್ತದೆ. ಹೀಗೆಲ್ಲಾ ವಿಚಾರ ಮಾಡಿದಾಗ ಈ ವಾಕ್ಯವು ಅಪ್ರಮಾಣವೆಂದೇ ಸಿದ್ಧವಾಗುತ್ತದೆ.

ಮತ್ತು ಪಾವಕಶೈತ್ಯಾನುಮಾನವನ್ನು ಅಪ್ರಮಾಣವೆಂದು ತಾರ್ಕಿಕರೇ ಒಪ್ಪಿದ್ದಾರೆ. 'ಅಗ್ನಿಃ ಅನುಷ್ಣಃ ಪದಾರ್ಥತ್ವಾತ್' ಎಂಬ ಅನುಮಾನವು ಪ್ರತ್ಯಕ್ಷಬಾಧದೋಷವನ್ನು ಹೊಂದಿದೆ. ಈ ಅನುಮಾನವು ಪ್ರತ್ಯಕ್ಷವಿರುದ್ಧವಾದ್ದರಿಂದ ಆಭಾಸವಾದಂತೆ ಪ್ರತ್ಯಕ್ಷವಿರೋಧವನ್ನು ಹೊಂದಿರುವ ಶ್ರುತಿಯಲ್ಲಿ ವಿಷಯನಾದ ಆತ್ಮಸ್ವರೂಪವನ್ನು ಸಾಧನೆ ಮಾಡುವ ನ್ಯಾಯಚಿಂತಾರೂಪವಾದ ಜಿಜ್ಞಾಸೆಯು ಆಭಾಸವಾಗುತ್ತದೆಂದು ತಿಳಿಯಬೇಕು.

## ಚೇಷ್ಟಾಲಿಂಗದ ವ್ಯಾಖ್ಯಾನ

ಪರಿಮಳ– ಅತ ಏವೇತಿ ॥ ಉಪಾಯಾಂತರಸಿದ್ಧತ್ವಾದೇವ ಇತ್ಯರ್ಥಃ । ಪರಾತ್ಮಾ = ಪರಶರೀರಸ್ಥಜೀವಃ । ಪ್ರಾಣಾದೀತಿ ॥ 'ಹಿತಾಹಿತಪ್ರಾಪ್ತಿಪರಿಹಾರಾನುಕೂಲಚೇಷ್ಟಾದಿಲಿಂಗೈಃ' ಇತ್ಯರ್ಥಃ । 'ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ' ಇತ್ಯುಪಾಧಿಖಂಡನೋಕ್ತೇಃ । ಪ್ರಾಣವಾಯ್ವಾದಿಮತ್ವಲಿಂಗೇನೇತಿ ವಾಽರ್ಥಃ । ಲೌಕಿಕಪ್ರವೇದನೀಯಾರ್ಥೇತಿ ॥ ಧೂಮಾಗ್ನ್ಯಾದಿವ್ಯಾಪ್ತ್ಯಾದಿವ್ಯುತ್ಪಾದನಮಿತ್ಯರ್ಥಃ । ಅನುವಾದೋ ದೃಷ್ಟಾಂತಾರ್ಥಮಿತಿ ಭಾವಃ।

''ಅತ ಏವ'' – ಬೇರೆ ಉಪಾಯದಿಂದ ಸಿದ್ಧವಾಗಿರುವ ಕಾರಣದಿಂದಲೇ ಎಂದರ್ಥ. ''ಪರಾತ್ಮಾ'' – ಮತ್ತೊಬ್ಬರ ಶರೀರದಲ್ಲಿರುವ ಜೀವನು ಎಂದರ್ಥ. ''ಪ್ರಾಣಾದಿಲಿಂಗೈಃ'' – ಹಿತಪ್ರಾಪ್ತಿಗೆ ಅನುಕೂಲವಾಗುವ ವ್ಯಾಪಾರಗಳಿಂದ; ಅನಿಷ್ಟನಿವೃತ್ತಿಗೆ ಅನುಕೂಲವಾದ ಚೇಷ್ಟೆಗಳಿಂದ ಎಂದರ್ಥ. ಅಥವಾ ಚೇಷ್ಟೆ ಮುಂತಾದ ಲಿಂಗಗಳಿಂದ ಮತ್ತೊಬ್ಬನ ದೇಹದಲ್ಲಿರುವ ಆತ್ಮನನ್ನು ಸಾಧಿಸಬಹುದು. 'ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ' ಎಂಬ ಉಪಾಧಿಖಂಡನದ ಮಾತಿನಂತೆ ಪ್ರಾಣವಾಯು ಮುಂತಾದ ಲಿಂಗಗಳಿರುವುದರಿಂದ ಎಂದೂ ಸಹ ಅರ್ಥವನ್ನು ಹೇಳಬಹುದು.

''ಲೌಕಿಕಪ್ರವೇದನೀಯಾರ್ಥೇ'' – ಧೂಮವು ಅಗ್ನಿಯನ್ನು ಬಿಟ್ಟು ಇರುವುದಿಲ್ಲ. ಹೀಗೆ ವ್ಯುತ್ಪಾದನೆ ಮಾಡುವಿಕೆ ಎಂದರ್ಥ. ಈ ಅನುವಾದವು ದೃಷ್ಟಾಂತವನ್ನು ತಿಳಿಸುವುದಕ್ಕೋಸ್ಕರ ಇರುತ್ತದೆಂದು ತಿಳಿಯಬೇಕು.

ವಿವರಣೆ – ಸ್ವಾತ್ಮನು ವಿಷಯನಾಗದಿದ್ದರೂ ಕೂಡ ಪರಾತ್ಮನು ವಿಷಯನಾಗಬಹುದಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. 'ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ' ಎಂಬುದಾಗಿ ಹೇಳಿದಂತೆ ಶರೀರದಲ್ಲಿರುವ ಶ್ವಾಸೋಚ್ಛ್ವಾಸ ಮೊದಲಾದ ಲಿಂಗಗಳನ್ನು ಕಂಡು ಮತ್ತೊಬ್ಬನ ದೇಹದಲ್ಲಿ ಆತ್ಮನಿದ್ದಾನೆಂದು ಸಾಧಿಸಬಹುದು. ಹೀಗೆ ಲಿಂಗಗಳಿಂದಲೇ ಪರಾತ್ಮನು ಸಿದ್ಧನಾಗುತ್ತಿರುವಾಗ ಜಿಜ್ಞಾಸೆಯನ್ನು ಮಾಡುವ ಅವಶ್ಯಕತೆಯು ಇರುವುದಿಲ್ಲ.

ಜಡಪದಾರ್ಥಗಳಲ್ಲೂ ಕೂಡ ಚೇಷ್ಟೆಯು ಪ್ರತ್ಯಕ್ಷಸಿದ್ಧವಾಗಿದೆ. ಈ ಚೇಷ್ಟೆಯಿಂದ ಆ ಜಡ-ಪದಾರ್ಥಗಳಲ್ಲಿ ಆತ್ಮನನ್ನು ಸಾಧಿಸಲು ಬರುವುದಿಲ್ಲ. ಆದ್ದರಿಂದ ಹಿತಾಹಿತಪ್ರಾಪ್ತಿಪರಿಹಾರಾನು-ಕೂಲವಾದ ಚೇಷ್ಟೆಯನ್ನು ಇಲ್ಲಿ ವಿವಕ್ಷಿಸಬೇಕು. ಹಿತಪ್ರಾಪ್ತಿಗೆ ಅನುಕೂಲವಾದ ಚೇಷ್ಟೆ, ಅಹಿತನಿವೃತ್ತಿಗೆ ಅನುಕೂಲವಾದ ಚೇಷ್ಟೆಯನ್ನು ವಿವಕ್ಷಿಸಬೇಕು. ಜಡಪದಾರ್ಥಗಳಲ್ಲಿ ಹಿತಪ್ರಾಪ್ತಿ ಹಾಗೂ ಅಹಿತ-ನಿವೃತ್ತಿಗೆ ಬೇಕಾದ ಚೇಷ್ಟೆಯು ಸರ್ವಥಾ ಇರುವುದಿಲ್ಲ.

ಅಥವಾ ಪ್ರಾಣಶಬ್ದಕ್ಕೆ ಚೇಷ್ಟೆ ಎಂದರ್ಥವಲ್ಲ. ಪ್ರಾಣವಾಯು ಎಂದರ್ಥ. ಇದರಿಂದಲೂ ಮತ್ತೊಬ್ಬನಲ್ಲಿ ಆತ್ಮನಿದ್ದಾನೆಂದು ಸಾಧಿಸಬಹುದು ಎಂದಭಿಪ್ರಾಯ.

## ಅರ್ಥವತ್ ಆದರೆ ಮಾತ್ರ ಪದಸಂಜ್ಞೆ ಬರುತ್ತದೆ.

**ಪರಿಮಳ**– ಅಪದತ್ವೇತಿ ॥ 'ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್' ಇತ್ಯ-ರ್ಥವತ್ತ್ವೇನ ಪ್ರಾತಿಪದಿಕಸಂಜ್ಞಾಯಾಂ ತತ್ರ 'ಪ್ರಾತಿಪದಿಕಾತ್' ಇತ್ಯಧಿಕೃತ್ಯ 'ಸ್ವೌಜಸ-ಮೌಟ್' ಇತಿಸೂತ್ರೋಕ್ತಸುಪ್‌ಪ್ರತ್ಯಯೇ ಸತಿ ಸುಪ್ತಿಙಂತಮಿತಿ ಪದಸಂಜ್ಞಾವಿಧಾನಾ-ದರ್ಥವತ್ತ್ವಾಭಾವೇ ಪ್ರಾತಿಪದಿಕಸಂಜ್ಞಾಽಭಾವೇನ ಸುಪ್‌ಪ್ರತ್ಯಯಾನುತ್ಪತ್ತ್ಯಾ ಪದತ್ವಂ ನ ಸ್ಯಾದಿತ್ಯರ್ಥಃ। ಈಷ್ಟೇ ಈಶೋ ಭವತಿ।

''ಅಪದತ್ವಪ್ರಸಂಗಃ'' – ಪ್ರತ್ಯಯ ಮತ್ತು ಪ್ರತ್ಯಯಾಂತಗಳಿಂದ ಭಿನ್ನವಾದ ಧಾತುವಿಗಿಂತ ಭಿನ್ನವಾದ ಅರ್ಥವನ್ನು ತಿಳಿಸುವ ಶಬ್ದವು ಪ್ರಾತಿಪದಿಕ ಎನಿಸುತ್ತದೆ. ಇದನ್ನು 'ಅರ್ಥವದಧಾತು-ರಪ್ರತ್ಯಯಃ ಪ್ರಾತಿಪದಿಕಮ್' ಎಂಬ ಸೂತ್ರವು ಹೇಳುತ್ತಿದೆ. ಯಾವುದು ಅರ್ಥವತ್ತಾಗಿರು-ತ್ತದೋ ಅದಷ್ಟೇ ಪ್ರಾತಿಪದಿಕಸಂಜ್ಞೆಯನ್ನು ಹೊಂದುತ್ತದೆ. ಪ್ರಾತಿಪದಿಕಸಂಜ್ಞೆಯನ್ನು ಹೊಂದಿದ

ಶಬ್ದಗಳಿಗೆ ಸು, ಔ, ಜಸ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಅಥವಾ ತಿ ಮೊದಲಾದ ಪ್ರತ್ಯಯಗಳು ಬರುತ್ತವೆ. ಇಂಥ ಪ್ರತ್ಯಯಾಂತವಾದ ಶಬ್ದವಷ್ಟೇ ಪದ ಎಂಬುದಾಗಿ ಕರೆಸಿಕೊಳ್ಳುತ್ತದೆ. ಪದಸಂಜ್ಞೆಯನ್ನು 'ಸುಪ್ ತಿಙಂತಂ ಪದಂ' ಎಂಬ ಪಾಣಿನೀಸೂತ್ರವು ವಿಧಾನ ಮಾಡುತ್ತದೆ. ಆದ್ದರಿಂದ ಈಶ್ವರ ಮೊದಲಾದ ಪದಗಳಿಗೆ ಅರ್ಥವೇ ಇಲ್ಲವಾದರೆ ಪ್ರಾತಿಪದಿಕ-ಸಂಜ್ಞೆಯೇ ಬರುವುದಿಲ್ಲ. ಆಗ ಸು ಮೊದಲಾದ ಪ್ರತ್ಯಯಗಳೂ ಕೂಡ ಬರುವುದಿಲ್ಲ. ಆದ್ದರಿಂದಲೇ ಪದಸಂಜ್ಞೆಯು ಕೂಡ ಬರುವುದಿಲ್ಲ ಎಂದಭಿಪ್ರಾಯ. ''ಈಷ್ಟೇ'' - ಒಡೆಯನಾಗುತ್ತಾನೆ.

ವಿವರಣೆ – ಈಶ್ವರನೇ ಇಲ್ಲದ ಕಾರಣ ಈಶ್ವರನು ವಿಷಯನಾಗುವುದಿಲ್ಲ ಎಂದು ಹೇಳಿದರೆ ಈಶ್ವರ ಎಂಬ ಪದಕ್ಕೆ ಪದಸಂಜ್ಞೆಯೇ ಕೂಡುವುದಿಲ್ಲ ಎಂಬುದಾಗಿ ಗ್ರಂಥದಲ್ಲಿ ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ –

'ಸುಪ್ತಿಙಂತಂ ಪದಮ್' ಎಂಬ ಸೂತ್ರವು ಸುಬಂತವಾದ ಮತ್ತು ತಿಙಂತವಾದ ಶಬ್ದಸ್ವರೂಪಕ್ಕೆ ಪ್ರಾತಿಪದಿಕಸಂಜ್ಞೆಯನ್ನು ವಿಧಾನ ಮಾಡುತ್ತದೆ. ಪ್ರಾತಿಪದಿಕಾತ್ ಎಂಬುದು ಅಧಿಕಾರಸೂತ್ರವಾಗಿದೆ. ಇದರಿಂದ ತಿಳಿಯುವ ಪ್ರಾತಿಪದಿಕಸಂಜ್ಞೆಯುಳ್ಳ ಪದಗಳಿಗೆ 'ಸು ಔ ಜಸ್' ಇತ್ಯಾದಿ ಸೂತ್ರದಿಂದ ಸ್ವಾದಿಪ್ರತ್ಯಯವನ್ನು ವಿಧಿಸಲಾಗಿದೆ. ಅರ್ಥವತ್ ಆಗಿದ್ದರೆ ಮಾತ್ರ ಪ್ರಾತಿಪದಿಕಸಂಜ್ಞೆಯು ಬರುತ್ತದೆ. ಧಾತು, ಪ್ರತ್ಯಯ, ಪ್ರತ್ಯಯಾಂತಕ್ಕಿಂತ ಭಿನ್ನವಾದ ಅರ್ಥವತ್ತಾದ ಶಬ್ದಸ್ವರೂಪಕ್ಕೆ ಪ್ರಾತಿಪದಿಕಸಂಜ್ಞೆಯನ್ನು ಸೂತ್ರವು ಹೇಳುತ್ತದೆ. ಪ್ರಕೃತ ಈಶ್ವರ ಎಂಬ ಶಬ್ದಕ್ಕೆ ಅರ್ಥವೇ ಇಲ್ಲದಿದ್ದರೆ ಈ ಶಬ್ದಕ್ಕೆ ಪ್ರಾತಿಪದಿಕಸಂಜ್ಞೆಯು ಬರುವುದಿಲ್ಲ. ಪ್ರಾತಿಪದಿಕಸಂಜ್ಞೆಯು ಬಾರದಿದ್ದಾಗ ಪದಸಂಜ್ಞೆಯು ಕೂಡ ಬರುವುದಿಲ್ಲ.

## ಓಂ ಮತ್ತು ಬ್ರಹ್ಮಪದಗಳ ಯೌಗಿಕಾರ್ಥದಿಂದ ಪರಿಹಾರವಾಗುವ ಪೂರ್ವಪಕ್ಷಗಳು

ಪರಿಮಳ– ಓಂಪದಬ್ರಹ್ಮಪದಯೋಃ ಯೌಗಿಕತ್ವೋಕ್ತೇಃ ವ್ಯಾವರ್ತ್ಯಮಾಹ – ಪ್ರತೀತೇತಿ ॥ ಜೀವತ್ಯಾಗೇನೇಶ್ವರರೂಪಾಪ್ರತೀತಾರ್ಥಕತ್ವಕಲ್ಪನಾಯಾಮಿತ್ಯರ್ಥಃ । ತೇಷಾಮಿತ್ಯನುಕರ್ಷಃ । ಅಸ್ತು ಜೀವ ಏವ ವಿಷಯ ಇತ್ಯತ ಆಹ – ಜೀವಸ್ಯ ಚೇತಿ ॥

ನ್ಯಾಯವಿವರಣರೀತ್ಯಾಽಽಹ – ಸ್ವಪ್ರಕಾಶತಯೇತಿ ॥ ಪ್ರಾಭಾಕರರೀತ್ಯಾ ಆಹ – ಸ್ವಪ್ರಕಾಶಜ್ಞಾನೇತಿ ॥ ತಾರ್ಕಿಕರೀತ್ಯಾ ಆಹ – ಮಾನಸೇತಿ ॥ ಅತ್ರ ಭಾಷ್ಯಟೀಕಾದ್ಯ-ವಿರೋಧಶ್ಚಂದ್ರಿಕಾಯಾಂ ವ್ಯಕ್ತಃ । ಉಕ್ತಮಿತಿ ॥ ಸಂದಿಗ್ಧಶ್ಚಾರ್ಥೋ ನ್ಯಾಯವಿಷಯ ಇತ್ಯಾದಿನೋಕ್ತಮಿತ್ಯರ್ಥಃ।

'ಓಂ' 'ಬ್ರಹ್ಮ' ಈ ಎರಡು ಪದಗಳು ಯೌಗಿಕವಾಗಿವೆ ಎಂಬುದಾಗಿ ಹೇಳಿದ್ದರಿಂದ ಯಾವ ಪೂರ್ವಪಕ್ಷವು ಪರಿಹಾರವಾಗುತ್ತದೋ ಅದನ್ನು ''ಪ್ರತೀತ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ''ಅಪ್ರತೀತಾರ್ಥಕಲ್ಪನಾ''– ಜೀವವೆಂಬ ಅರ್ಥವನ್ನು ಪರಿತ್ಯಾಗಮಾಡಿ ಅಪ್ರತೀತವಾದ ಅರ್ಥ-ವನ್ನು ಕಲ್ಪನೆ ಮಾಡುವಿಕೆ ಎಂದರ್ಥ.

ಜಿಜ್ಞಾಸೆಗೆ ಜೀವನೇ ವಿಷಯವಾಗಲಿ ಎಂಬ ಆಶಂಕೆಗೆ ಸಮಾಧಾನವನ್ನು ''ಜೀವಸ್ಯ ಚ'' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ. ಜೀವನು ಸ್ವಪ್ರಕಾಶನಾಗಿರುವುದರಿಂದ ನಿತ್ಯಸಿದ್ಧನಾಗಿ-ದ್ದಾನೆ. ಹೀಗೆ ಹೇಳುವ ''ಸ್ವಪ್ರಕಾಶತಯಾ'' ಎಂಬ ಗ್ರಂಥದ ವಾಕ್ಯವು ನ್ಯಾಯವಿವರಣಗ್ರಂಥ-ವನ್ನು ಅನುಸರಿಸಿ ಹೊರಟಿದೆ.

ಸ್ವಪ್ರಕಾಶಜ್ಞಾನಕ್ಕೆ ಆಶ್ರಯನಾಗಿರುವುದರಿಂದ ಸಿದ್ಧನಾಗಿರುವನೆಂದು ತಿಳಿಸುವ ''ಸ್ವಪ್ರಕಾಶ-ಜ್ಞಾನಾಶ್ರಯತಯಾ'' ಎಂಬ ಗ್ರಂಥದ ವಾಕ್ಯವು ಪ್ರಾಭಾಕರಮತವನ್ನು ಅನುಸರಿಸಿ ಹೊರಟಿದೆ. ಮಾನಸಪ್ರತ್ಯಕ್ಷದಿಂದ ಜೀವನು ಸಿದ್ಧನಾಗಿದ್ದಾನೆಂದು ತಿಳಿಸುವ ''ಮಾನಸಪ್ರತ್ಯಕ್ಷವೇದ್ಯತಯಾ'' ಎಂಬ ಮಾತು ತಾರ್ಕಿಕಮತವನ್ನು ಅನುಸರಿಸಿ ಹೊರಟಿದೆ. ಈ ವಿಷಯದಲ್ಲಿ ಭಾಷ್ಯ , ಟೀಕೆ ಹಾಗೂ ಸುಧಾವಾಕ್ಯಗಳಿಗೆ ಆಪಾತತಃ ತೋರುವ ವಿರೋಧದ ಪರಿಹಾರವನ್ನು ತಾತ್ಪರ್ಯ-ಚಂದ್ರಿಕಾಗ್ರಂಥದಲ್ಲಿ ವಿವರವಾಗಿ ಮಾಡಿದ್ದಾರೆ. ''ಉಕ್ತಮ್'' – 'ಸಂದಿಗ್ಧವಾದ ವಿಷಯದಲ್ಲಿ ಮಾತ್ರ ನ್ಯಾಯವು ಪ್ರವೃತ್ತವಾಗುತ್ತದೆ' ಇತ್ಯಾದಿ ವಾಕ್ಯಗಳಿಂದ ಹೇಳಲಾಗಿದೆ ಎಂದರ್ಥ.

ವಿವರಣೆ – ಈಶ್ವರ ಎಂಬ ಪದದಿಂದ ಜೀವನನ್ನೇ ವಿವಕ್ಷಿಸಬಹುದು. ಏಕೆಂದರೆ, ತನ್ನ ಶರೀರಾದಿಗಳಿಗೆ ಜೀವನು ಒಡೆಯನಾಗಿದ್ದಾನೆ. ಈಶ್ವರಶಬ್ದದ ಯೌಗಿಕಾರ್ಥವು ಜೀವನಲ್ಲಿ ಉಪಪನ್ನ-ವಾಗುತ್ತದೆ. ಇದೊಂದು ಕಾರಣ. ಮತ್ತೊಂದು ಕಾರಣ ಹೀಗಿದೆ – ಪ್ರತೀತಾರ್ಥವನ್ನು ವಿವಕ್ಷಿಸಲು

ಬರುವಾಗ ಅಪ್ರತೀತಾರ್ಥವನ್ನು ಕಲ್ಪಿಸಿದರೆ ಗೌರವದೋಷವು ಬರುತ್ತದೆ. ಸೂತ್ರದಲ್ಲಿರುವ ಓಂ ಮತ್ತು ಬ್ರಹ್ಮಪದಗಳು ಯೌಗಿಕವಾಗಿವೆ ಎಂಬುದಾಗಿ ಹೇಳುತ್ತಾರೆ. ಯೋಗಾರ್ಥವನ್ನು ಹೇಳುವುದರಿಂದ ಈಗ ಹೇಳುತ್ತಿರುವ ಪೂರ್ವಪಕ್ಷವು ನಿರಾಕೃತವಾಗುತ್ತದೆ. ಅರ್ಥಾತ್ ಪ್ರತೀತಾರ್ಥವನ್ನು ಸ್ವೀಕರಿಸಲು ಬರುತ್ತಿರುವಾಗ ಅಪ್ರತೀತಾರ್ಥವನ್ನು ಕಲ್ಪನೆ ಮಾಡುವುದು ಗೌರವದೋಷಗ್ರಸ್ತವಾಗಿದೆ. ಹೀಗೆ ಪೂರ್ವಪಕ್ಷಿಯು ಹೇಳಿದರೆ, ಓಂ ಮತ್ತು ಬ್ರಹ್ಮಶಬ್ದಗಳು ರೂಢವಾದ ಪದಗಳಲ್ಲ; ಯೌಗಿಕವಾಗಿವೆ; ಗುಣಪೂರ್ಣತ್ವವೆಂಬ ಅರ್ಥವನ್ನು ಈಶಬ್ದಗಳು ಹೇಳುತ್ತಿವೆ. ಜೀವನಲ್ಲಿ ಈ ಅರ್ಥವು ಅಸಂಭಾವಿತವಾಗಿದೆ. ಇದರಿಂದ ಈಗ ಮಾಡುತ್ತಿರುವ ಪೂರ್ವಪಕ್ಷಿಯ ಆಕ್ಷೇಪವು ಪರಿಹಾರವಾಗುತ್ತದೆ.

ಜೀವನೆಂಬ ಧರ್ಮಿಯು ಕ್ಲೃಪ್ತನಾಗಿದ್ದಾನೆ. ಅವನಿಗೆ ಈಶ್ವರಶಬ್ದವಾಚ್ಯತ್ವವನ್ನಷ್ಟೇ ಕಲ್ಪನೆ ಮಾಡಬೇಕು. ಆದರೆ ನೀವು ಈಶ್ವರ ಎಂಬ ಧರ್ಮಿಯನ್ನು ಕಲ್ಪನೆ ಮಾಡಿ ಅವನಲ್ಲಿ ಈಶ್ವರಶಬ್ದವಾಚ್ಯತ್ವವನ್ನು ಕೂಡ ಕಲ್ಪನೆ ಮಾಡಬೇಕು. ನೀವು ಧರ್ಮಿ ಮತ್ತು ಧರ್ಮ ಎರಡನ್ನೂ ಕೂಡ ಕಲ್ಪನೆ ಮಾಡಬೇಕಾಗುತ್ತದೆ. ಆದರೆ ನಾವು ಧರ್ಮವನ್ನಷ್ಟೇ ಕಲ್ಪನೆ ಮಾಡಿದರೆ ಸಾಕು. ಆದ್ದರಿಂದ ಧರ್ಮಿಕಲ್ಪನೆ ಮಾಡಿದರೆ ಗೌರವದೋಷ ಬರುತ್ತದೆಂದಭಿಪ್ರಾಯ.

ಜೀವಾತಿರಿಕ್ತನಾದ ಈಶ್ವರನನ್ನು ಒಪ್ಪುವುದು ಬೇಡ ಆ ಜೀವನೇ ವಿಷಯನಾಗಲಿ. ಅವನ ಜಿಜ್ಞಾಸೆಯನ್ನೇ ಮಾಡುತ್ತೇವೆಂದು ಪ್ರಶ್ನಿಸಿದರೆ ಈಗಾಗಲೇ ಜೀವನ ಜಿಜ್ಞಾಸೆಯು ಕೂಡುವುದಿಲ್ಲವೆಂದು ಸಮರ್ಥಿಸಿದ್ದೇವೆ. ಜೀವನು ನಮ್ಮ ಸಿದ್ಧಾಂತದ ಪ್ರಕಾರ ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆ. ನ್ಯಾಯವಿವರಣದಲ್ಲಿ ಜೀವನಿಗೆ ಸ್ವಪ್ರಕಾಶತ್ವವನ್ನು ಭಾಷ್ಯಕಾರರು ಹೇಳಿದ್ದಾರೆ. ಪ್ರಾಭಾಕರರ ಮತದ ಪ್ರಕಾರ ಜೀವನು ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿದ್ದಾನಾದ್ದರಿಂದ ನಿಶ್ಚಿತನಾಗಿದ್ದಾನೆಂದು ತಿಳಿಯಬೇಕು. ಮಾನಸಪ್ರತ್ಯಕ್ಷದಿಂದ ಜೀವನು ನಿಶ್ಚಿತನಾಗಿದ್ದಾನೆಂಬುದನ್ನು ತಾರ್ಕಿಕಮತದ ಪ್ರಕಾರ ತಿಳಿಯಬೇಕು.

ಜೀವನು (೧) ಸ್ವಪ್ರಕಾಶತಯಾ (೨) ಸ್ವಪ್ರಕಾಶಜ್ಞಾನಾಶ್ರಯತಯಾ (೩) ಮಾನಸಪ್ರತ್ಯಕ್ಷವೇದ್ಯತಯಾ ನಿಶ್ಚಿತನಾಗಿದ್ದಾನೆಂದು ಮೂರು ಪಕ್ಷಗಳನ್ನು ಇಲ್ಲಿ ಹೇಳಲಾಗಿದೆ. ಆದರೆ ತತ್ವಪ್ರಕಾಶಿಕೆಯಲ್ಲಿ ಸ್ವಪ್ರಕಾಶಜ್ಞಾನಾಶ್ರಯತ್ವಪಕ್ಷವನ್ನು ಹಾಗೂ ಮಾನಸಪ್ರತ್ಯಕ್ಷವೇದ್ಯತ್ವಪಕ್ಷವನ್ನು ನಿರಾಕರಣೆ ಮಾಡಿ ಸ್ವಪ್ರಕಾಶತ್ವಪಕ್ಷವನ್ನಷ್ಟೇ ಸಮರ್ಥಿಸಿದ್ದಾರೆ. ಪ್ರಾಭಾಕರರಿಗೆ ಅನವಸ್ಥಾ ಮೊದಲಾದ ದೋಷಗಳನ್ನು ತಾರ್ಕಿಕರಿಗೆ ಸುಷುಪ್ತಿಯ ಅನುಭವವಿರೋಧವನ್ನು ಹೇಳುವ ಮೂಲಕ ನಿರಾಕರಣೆ ಮಾಡಿದ್ದಾರೆ. ಆದ್ದರಿಂದ ನ್ಯಾಯಸುಧಾಗ್ರಂಥಕ್ಕೂ ತತ್ವಪ್ರಕಾಶಿಕೆಗೂ ವಿರೋಧ ಬರುತ್ತದಲ್ಲವೇ?

ತಾತ್ಪರ್ಯಚಂದ್ರಿಕಾದಲ್ಲಿ ಇದಕ್ಕೆ ಹೀಗೆ ಪರಿಹಾರವನ್ನು ಹೇಳಿದ್ದಾರೆ – ಸಿದ್ಧತ್ವೇನ ಜಿಜ್ಞಾಸ್ಯತ್ವವು ಇರುವುದಿಲ್ಲ ಎಂಬುದರಲ್ಲಷ್ಟೇ ತಾತ್ಪರ್ಯ. ಸಿದ್ಧತ್ವದ ಪ್ರಕಾರದಲ್ಲಿ ನೈರ್ಭರ್ಯವು ಇರುವುದಿಲ್ಲ. ಇದು ಸುಧಾವಾಕ್ಯದ ಅಭಿಪ್ರಾಯ.

ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಸ್ವಪ್ರಕಾಶತ್ವಪಕ್ಷವು ವಸ್ತುಸ್ಥಿತಿಯಾಗಿದೆ. ಇದನ್ನು ಶಿಷ್ಯರಿಗೆ ತಿಳಿಸ-ಬೇಕು. ಎಲ್ಲಾ ಪಕ್ಷಗಳನ್ನು ಒಟ್ಟಿಗೆ ಹೇಳಿದರೆ ಶಿಷ್ಯರಿಗೆ ಯಾವುದು ಸರಿಯೆಂಬ ಯಥಾರ್ಥಜ್ಞಾನವು ಬರುವುದಿಲ್ಲ. ತತ್ವಪ್ರಕಾಶಿಕೆಯಲ್ಲಿ ಉಳಿದೆರಡು ಪಕ್ಷಗಳನ್ನು ನಿರಾಕರಣೆ ಮಾಡಿ ಸ್ವಪ್ರಕಾಶತ್ವಪಕ್ಷವನ್ನು ಸಮರ್ಥಿಸಿದ್ದಾರೆ. ಆದ್ದರಿಂದ ತತ್ವಪ್ರಕಾಶಿಕಾ ನ್ಯಾಯಸುಧಾಗ್ರಂಥಗಳಿಗೆ ಪರಸ್ಪರವಿರೋಧವಿಲ್ಲ.

## ಜೀವನಿಗೆ ಜಿಜ್ಞಾಸ್ಯತ್ವವು ಯುಕ್ತವಾಗುತ್ತದೆ

**ವಾಕ್ಯಾರ್ಥಚಂದ್ರಿಕಾ – ನನ್ವಾತ್ಮನಃ ಶರೀರಾದ್ಯತಿರಿಕ್ತತಯಾ ಅಸಂದಿಗ್ಧಾವಿಪರ್ಯಸ್ತಸಾಕ್ಷಾತ್ ಪ್ರತೀತಿನಿಶ್ಚಿತತ್ವೇಽಪಿ ತಸ್ಯ ಜಿಜ್ಞಾಸ್ಯತಾ ನ ತೇನ ರೂಪೇಣಾಪಿ ತು ಶ್ರುತಿಪ್ರತಿಪಾದಿತಕರ್ತೃತ್ವಾದಿ-ಶೂನ್ಯತ್ವರೂಪೇಣೈವ । ಫಲಾರ್ಥಂ ತಾದೃಶಸ್ಯೈವ ಪ್ರತಿಪತ್ತವ್ಯತ್ವಾತ್ । ನ ಚ ಪ್ರತ್ಯಕ್ಷಂ ತದ್ರೂಪ-ನಿಶ್ಚಾಯಕಂ ಪ್ರತ್ಯುತ ವಿಪರೀತಮಿತಿ ತಸ್ಯ ಜಿಜ್ಞಾಸ್ಯತಾಸಿದ್ಧಿರಿತ್ಯಾಶಂಕತೇ – ನನ್ವಿತಿ ॥**

ಆತ್ಮನು ಶರೀರಾದ್ಯತಿರಿಕ್ತನಾಗಿದ್ದಾನೆ. ಇವನು 'ಅಹಂ' ಎಂಬ ಪ್ರತೀತಿಯಿಂದ ನಿಶ್ಚಿತನಾಗಿದ್ದಾನೆ. ಈ ಪ್ರತೀತಿಯು ಸಂದೇಹರಹಿತವಾಗಿದೆ. ವಿಪರೀತಜ್ಞಾನದಿಂದಲೂ ಕೂಡ ರಹಿತವಾಗಿದೆ. ಅಂದ ಮಾತ್ರಕ್ಕೆ ಆತ್ಮನ ಜಿಜ್ಞಾಸೆಯು ಅಯುಕ್ತವೆಂದಲ್ಲ. ಏಕೆಂದರೆ, ಅಹಂತ್ವೇನ ರೂಪೇಣ ಆತ್ಮನಿಗೆ ಜಿಜ್ಞಾಸ್ಯ-ತ್ವವನ್ನು ನಾವು ಹೇಳುತ್ತಿಲ್ಲ. ಶ್ರುತಿಪ್ರತಿಪಾದಿತವಾದ ಕರ್ತೃತ್ವಾದಿಶೂನ್ಯತ್ವರೂಪೇಣ ಜಿಜ್ಞಾಸ್ಯತ್ವವನ್ನು ಆತ್ಮನಿಗೆ ಹೇಳುತ್ತಿದ್ದೇವೆ. ಇಂಥ ಆತ್ಮನ ಜಿಜ್ಞಾಸೆ ಮಾಡಿದರಷ್ಟೇ ಮೋಕ್ಷಫಲವು ದೊರೆಯಲು ಸಾಧ್ಯವಾಗುತ್ತದೆ. ಪ್ರತ್ಯಕ್ಷವು ಜೀವನನ್ನು ಈ ರೂಪದಿಂದ ನಿಶ್ಚಯವಾಗಿ ತಿಳಿಸುತ್ತಿಲ್ಲ. ಮತ್ತೇನೆಂದರೆ ಶ್ರುತಿಪ್ರತಿಪಾದ್ಯವಾದ ಅರ್ಥಕ್ಕೆ ವಿಪರೀತವಾಗಿಯೇ ತಿಳಿಸುತ್ತಿದೆ. ಆದ್ದರಿಂದ ಜೀವನಿಗೆ ಜಿಜ್ಞಾಸ್ಯತ್ವವು ಯುಕ್ತವಾಗುತ್ತದೆಂಬುದನ್ನು "ನನು" ಇತ್ಯಾದಿಗ್ರಂಥದಿಂದ ಆಶಂಕಿಸುತ್ತಿದ್ದಾರೆ.

## ವಿಷಯವಿಲ್ಲ ಎನ್ನುವುದರಲ್ಲಷ್ಟೇ ನಮಗೆ ನೈರ್ಭರ್ಯ

**ವಾಕ್ಯಾರ್ಥಚಂದ್ರಿಕಾ – ಏವಂ ತರ್ಹಿ ಮಾಸ್ತು ಪ್ರತ್ಯಕ್ಷನಿಶ್ಚಿತತ್ವೇನಾವಿಷಯತ್ವಾದಜಿಜ್ಞಾಸ್ಯತಾ**

ಪ್ರತ್ಯಕ್ಷವಿರುದ್ಧತಾಪ್ರಯುಕ್ತಾವಿಷಯತ್ವಾದಿನಿಮಿತ್ತಿಕಾ ತು ಸಾ ಭವಿಷ್ಯತಿ । ಕಥಮಪಿ ಜಿಜ್ಞಾಸಾ-ಪ್ರಯೋಜಕವಿಷಯಾಭಾವೇ ಹ್ಯಸ್ಮಾಕಂ ತಾತ್ಪರ್ಯಂ ನ ತು ನಿಶ್ಚಿತತ್ವೇನಾವಿಷಯತ್ವ ಇತ್ಯಾಹ – ಏವಂ ತರ್ಹೀತಿ ॥ ಜರದ್ಗವಾದಿವಾಕ್ಯವದಿತಿ ॥ ತದ್ ವಾಕ್ಯಂ ಚ ಪ್ರಸಿದ್ಧಮ್ । ಆದಿಪದೇನ 'ಶಂಖಃ ಕದಲ್ಯಾಂ ಕದಲೀ ಚ ಭೇರ್ಯಾಂ ಭೇರ್ಯಾಂ ಮಹಚ್ಚಾವಿರಭೂದ್ ವಿಮಾನಮ್' ಇತಿ ವಾಕ್ಯ-ಮುಚ್ಯತೇ । ಯಥಾಸಂಖ್ಯಂ ಚ ವಾಕ್ಯಾನುಮಾನಯೋಃ ಶ್ರುತಿಜಿಜ್ಞಾಸೇ ಪ್ರತಿ ನಿದರ್ಶನತ್ವಮ್ ।

ಹಾಗಾದರೆ ಪ್ರತ್ಯಕ್ಷನಿಶ್ಚಿತತ್ವೇನ ವಿಷಯನಾಗದಿರುವುದರಿಂದ ಜೀವನು ಅಜಿಜ್ಞಾಸ್ಯನಾಗಿ-ದ್ದಾನೆಂದು ನಾವು ಹೇಳುವುದಿಲ್ಲ. ಪ್ರತ್ಯಕ್ಷವಿರುದ್ಧತ್ವಪ್ರಯುಕ್ತವಾದ ಅವಿಷಯತ್ವವಿರುವುದರಿಂದ ಜಿಜ್ಞಾಸ್ಯನಾಗಿದ್ದಾನೆಂದು ಹೇಳುತ್ತೇವೆ. ಜಿಜ್ಞಾಸಾಪ್ರಯೋಜಕವಾದ ವಿಷಯವಿಲ್ಲ ಎಂಬುದರಲ್ಲಷ್ಟೇ ನಮಗೆ ನೈರ್ಭರ್ಯವಿದೆ. ನಿಶ್ಚಿತತ್ವೇನ ವಿಷಯಾಭಾವದ ಪ್ರತಿಪಾದನೆಯಲ್ಲಿ ನಮಗೆ ನೈರ್ಭರ್ಯವು ಇರುವುದಿಲ್ಲ ಎಂಬುದನ್ನು "ಏವಂ ತರ್ಹಿ" ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

"ಜರದ್ಗವಾದಿವಾಕ್ಯವತ್" – ಈ ವಾಕ್ಯವು ಪ್ರಸಿದ್ಧವಾಗಿದೆ. ಆದಿಪದದಿಂದ ಇದನ್ನು ವಿವಕ್ಷಿಸ-ಬೇಕು –

'ಶಂಖಃ ಕದಲ್ಯಾಂ ಕದಲೀ ಚ ಭೇರ್ಯಾಂ ಭೇರ್ಯಾಂ ಮಹಚ್ಚಾವಿರಭೂದ್ ವಿಮಾನಮ್'

'ಶಂಖವು ಬಾಳೆಹಣ್ಣಿನಲ್ಲಿ, ಬಾಳೆಹಣ್ಣು ಭೇರಿಯಲ್ಲಿ, ಭೇರಿಯಲ್ಲಿ ದೊಡ್ಡದಾದ ವಿಮಾನವು ಸೇರಿದೆ' ಎಂಬ ವಾಕ್ಯವು ಅಪ್ರಮಾಣವಾದಂತೆ ತಿಳಿಯಬೇಕು. ವಾಕ್ಯವು ಶ್ರುತಿ ಅಪ್ರಾಮಾಣ್ಯಕ್ಕೆ ಉದಾ-ಹರಣೆಯಾಗಿದೆ. ಅನುಮಾನವು ಜಿಜ್ಞಾಸೆಯ ಅಪ್ರಾಮಾಣ್ಯಕ್ಕೆ ಉದಾಹರಣೆಯಾಗಿದೆ.

## ಲೋಕಸಿದ್ಧವಾದದ್ದನ್ನು ಶಾಸ್ತ್ರಹೇಳುವ ಅವಶ್ಯಕತೆ ಇಲ್ಲ

ವಾಕ್ಯಾರ್ಥಚಂದ್ರಿಕಾ – ನನ್ವೇವಂ ಬಂಧಸತ್ಯತ್ವಾದೇರ್ಲೋಕಪ್ರವೇದನೀಯಾರ್ಥಸ್ಯ ಅತಃಶಬ್ದಾರ್ಥವಾಕ್ಯಾನುಮಾನಯೋಃ ಶ್ರುತಿಜಿಜ್ಞಾಸೇ ಪ್ರತಿ ನಿದರ್ಶನತ್ವಮ್ । ನನ್ವೇವಂ ಬಂಧ-ಸತ್ಯತ್ವಾದೇರ್ಲೋಕಪ್ರವೇದನೀಯಾರ್ಥಸ್ಯ ಅತಃಶಬ್ದಾರ್ಥತಯಾ ಭಾಷ್ಯಕಾರೀಯಂ ವ್ಯುತ್ಪಾದನ-ಮಯುಕ್ತಂ ಸ್ಯಾದಿತ್ಯತ ಆಹ – ಯತ್ಕ್ವಚಿದಿತಿ ॥ ಅತ ಏವ 'ಪ್ರತ್ಯಕ್ಷೇಕ್ಷಾಕ್ಷಮ' ಇತ್ಯನು-ವ್ಯಾಖ್ಯಾನಾವಸರೇ ಯೋ ಹಿ ಲೋಕಪ್ರವೇದನೀಯಮಿತ್ಯಾದಿನಾ ಬಂಧಸ್ಯ ಸತ್ಯತ್ವಾದೇರ್ಲೌಕಿಕ-ವ್ಯುತ್ಪಾದನೀಯತ್ವಂ ವಕ್ಷ್ಯತಿ ।

ದುಃಖಾದಿಬಂಧವು ಅನುಭವಸಿದ್ಧವಾಗಿದೆ. ಆದ್ದರಿಂದ ಬಂಧಸತ್ಯತ್ವವು ಲೋಕಸಿದ್ಧವಾಗಿದೆ. ಇಂಥ ಲೋಕಪ್ರವೇದನೀಯವಾದ ಅರ್ಥವನ್ನೇ ಅತಃ ಎಂಬ ಶಬ್ದದ ಅರ್ಥವನ್ನಾಗಿ ಭಾಷ್ಯಕಾರರು ಮುಂದೆ ಹೇಳುತ್ತಾರೆ. ನಿಮ್ಮ ಪ್ರಕಾರ ಇದು ಅಯುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ''ಯತ್ ಕ್ವಚಿತ್'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಆದ್ದರಿಂದಲೇ 'ಪ್ರತ್ಯಕ್ಷೇಕ್ಷಮಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಮಾಡುವ ಸಂದರ್ಭದಲ್ಲಿ 'ಯೋ ಹಿ ಲೌಕಿಕಪ್ರವೇದನೀಯಮ್' ಇತ್ಯಾದಿ ವಾಕ್ಯದಿಂದ ಬಂಧದ ಸತ್ಯತ್ವವು ಲೌಕಿಕವ್ಯುತ್ಪಾದನೀಯವೆಂಬುದಾಗಿ ಹೇಳುತ್ತಾರೆ.

ವಿವರಣೆ – ಬಂಧಮಿಥ್ಯಾತ್ವದ ವಿಚಾರ, ಕಾರ್ಯತಾವಾದ, ಅನ್ಯಥಾಖ್ಯಾತಿವಾದ ಇವೆಲ್ಲವೂ ಅತ್ಯಂತ ವಿಶದವಾಗಿವೆ. ಇದನ್ನು ಸೂತ್ರಕಾರರು ಅತಃ ಎಂಬ ಎರಡೇ ಅಕ್ಷರಗಳಿಂದ ನಿರಾಕರಿಸಿದ್ದಾರೆ. ವಿಸ್ತಾರವಾಗಿ ಏಕೆ ನಿರಾಕರಣೆ ಮಾಡಲಿಲ್ಲ? ಎಂಬ ಪ್ರಶ್ನೆಗೆ ಅನೇಕಕಾರಣಗಳನ್ನು ಗ್ರಂಥಕಾರರು ತಿಳಿಸುತ್ತಾರೆ. ಅನುಭವಕ್ಕೆ ವಿರುದ್ಧವಾಗಿರುವುದರಿಂದ ಈ ಎಲ್ಲಾ ಪಕ್ಷಗಳು ವಿವರವಾಗಿ ನಿರಾಕರಣೆಗೆ ಅರ್ಹವಾಗಿರುವುದಿಲ್ಲ. ಮತ್ತೊಂದು ಕಾರಣ ಹೀಗಿದೆ – ನಾವು ಮಾಡುವ ಬ್ರಹ್ಮಜಿಜ್ಞಾಸೆಯು ಪ್ರಮೇಯಜಿಜ್ಞಾಸೆಯಾಗಿದೆ. ತರ್ಕಶಾಸ್ತ್ರದಲ್ಲಷ್ಟೇ ಪ್ರಮಾಣಮೀಮಾಂಸೆಯನ್ನು ಮಾಡಬೇಕು. ಬ್ರಹ್ಮತರ್ಕದಲ್ಲಿ ಇದರ ವಿಸ್ತಾರವಾದ ನಿರಾಕರಣೆ ಇರುವುದರಿಂದ ಇಲ್ಲಿ ಸಂಕ್ಷೇಪವಾಗಿ ನಿರಾಕರಣೆ ಮಾಡಿದ್ದಾರೆ. ಮತ್ತೊಂದು ಕಾರಣ ಹೀಗಿದೆ – ಪ್ರತ್ಯಕ್ಷ ಹಾಗೂ ಅನುಭವಕ್ಕೆ ವಿರುದ್ಧವಾದ ದುರ್ಬಲ-ವಾದ ಈ ಪಕ್ಷಗಳನ್ನು ವಿವರವಾಗಿ ನಿರಾಕರಣೆ ಮಾಡಿದರೆ ತತ್ವವಾದಿಗಳಾದ ನಮಗೆ ಮಹತ್ವವು ಕಮ್ಮಿಯಾಗುತ್ತದೆಂಬ ಉದ್ದೇಶದಿಂದ ಅತಃ ಎಂಬ ಎರಡೇ ಅಕ್ಷರಗಳಿಂದ ಸೂತ್ರಕಾರರು ನಿರಾಕರಣೆ ಮಾಡಿದ್ದಾರೆ. ಹೀಗೆ ಹೇಳುವ ಸಂದರ್ಭದಲ್ಲಿ ಗ್ರಂಥಕಾರರು ಯಾರು ಲೌಕಿಕಜ್ಞಾನವನ್ನು ಹೊಂದಿರು-ವುದಿಲ್ಲವೋ ಅವನು ಶಾಸ್ತ್ರದಲ್ಲಿ ಪರೀಕ್ಷಕನಾಗಲು ಹೇಗೆ ಅರ್ಹನಾಗುತ್ತಾನೆ? ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಬಂಧಸತ್ಯತ್ವಾದಿಗಳು ಲೌಕಿಕಪ್ರವೇದನೀಯವಾಗಿದೆ ಎಂಬುದನ್ನು ಗ್ರಂಥಕಾರರು ಮುಂದೆ ಹೇಳುತ್ತಾರೆ.

## ಜೀವನು ನಿತ್ಯಸಿದ್ಧನಾಗಿದ್ದರಿಂದ ವಿಷಯನಾಗುವುದಿಲ್ಲ

ವಾಕ್ಯಾರ್ಥಚಂದ್ರಿಕಾ – ನನ್ವೇವಂ ತತ್ಪದಾನಾಂ ಮುಖ್ಯಾರ್ಥಪರಿತ್ಯಾಗ ಏವ ದೋಷ ಇತ್ಯತೋ ಬಾಧಕೇ ಸತಿ ತಸ್ಯಾದೋಷತ್ವಮಾಹ – ಪ್ರತೀತೇತಿ ॥ ಏವಂ ಚೇಶ್ವರಾದಿಶಬ್ದಾನಾಮ-ಪೂರ್ವಾರ್ಥವಿಷಯಕತ್ವಾಭಾವೇ ಈಶ್ವರವಿಷಯಾ ಜಿಜ್ಞಾಸಾ ಇತ್ಯನೇನ ಜೀವವಿಷಯೇತ್ಯುಕ್ತಂ

ಸ್ಯಾತ್ । ತಸ್ಯ ಚ ಸಿದ್ಧತ್ವಾನ್ನ ವಿಷಯತ್ವಮಿತ್ಯಭಿಪ್ರೇತ್ಯ ವಿಶೇಷಂ ವಿವಕ್ಷನ್ನುಕ್ತಂ ಸ್ಮಾರಯತಿ – ಜೀವಸ್ಯ ಚೇತಿ ॥ ಸ್ವಪ್ರಕಾಶತ್ವಮಾನಸವೇದ್ಯತಾಪಕ್ಷಯೋರಹಮಿತ್ಯೇತಾವನ್ಮಾತ್ರಮುಲ್ಲೇಖಃ ಸ್ವಪ್ರಕಾಶ-ಜ್ಞಾನಾಶ್ರಯಪಕ್ಷೇ ತು 'ಅಹಮಿದಂ ಜಾನಾಮಿ' ಇತಿ ಜ್ಞಾನಸ್ಯ ಏಕದೇಶೋಲ್ಲೇಖೋಽಯಮಿತಿ ಜ್ಞಾತವ್ಯಮ್ ।

ಈಶ್ವರ ಮೊದಲಾದ ಪದಗಳಿಗೆ ಮುಖ್ಯಾರ್ಥವನ್ನು ಪರಿತ್ಯಾಗಮಾಡಿದ ದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಬಾಧಕವಿದ್ದಾಗ ದೋಷವಾಗುವುದಿಲ್ಲ' ಎಂಬುದನ್ನು "ಪ್ರತೀತ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ಈಶ್ವರ ಮೊದಲಾದ ಶಬ್ದಗಳು ಅಪೂರ್ವವಾದ ಅರ್ಥವನ್ನು ಹೇಳದೇ ಇರುವುದರಿಂದ ಈಶ್ವರವಿಷಯಕಜಿಜ್ಞಾಸಾ ಎಂಬುದರಿಂದ ಜೀವವಿಷಯಕಜಿಜ್ಞಾಸೆ ಎಂಬುದಾಗಿ ಹೇಳಿದಂತಾಯಿತು. ಜೀವನು ನಿತ್ಯಸಿದ್ಧನಾಗಿರುವುದರಿಂದ ಶಾಸ್ತ್ರಕ್ಕೆ ವಿಷಯನಾಗುವುದಿಲ್ಲ. ಈ ಅಭಿಪ್ರಾಯದಿಂದ "ಜೀವಸ್ಯ ಚ" ಇತ್ಯಾದಿ ವಾಕ್ಯವು ಹಿಂದೆ ಹೇಳಿದ್ದನ್ನು ಪುನಃ ಸ್ಮರಣೆಗೆ ತಂದುಕೊಡುತ್ತಿದೆ.

ಸ್ವಪ್ರಕಾಶತ್ವಪಕ್ಷ ಹಾಗೂ ಮಾನಸವೇದ್ಯತ್ವಪಕ್ಷಗಳಲ್ಲಿ ಅಹಂ ಎಂಬುದು ನೇರವಾಗಿ ಅನ್ವಯವನ್ನು ಹೊಂದುತ್ತದೆ. ಸ್ವಪ್ರಕಾಶಜ್ಞಾನಾಶ್ರಯತ್ವಪಕ್ಷದಲ್ಲಿ ಅಹಮಿದಂ ಜಾನಾಮಿ ಎಂಬ ಜ್ಞಾನದ ಏಕದೇಶದ ಉಲ್ಲೇಖಮಾತ್ರವೆಂದು ತಿಳಿಯಬೇಕು.

ವಿವರಣೆ – ಈಶ್ವರ ಮೊದಲಾದ ಪದಗಳಿಗೆ ನೈರರ್ಥಕ್ಯದೋಷವನ್ನು ಪರಿಹರಿಸುವುದಕ್ಕಾಗಿ ಜೀವಪರತ್ವವನ್ನು ಒಪ್ಪಿದರೆ ಅಮುಖ್ಯಾರ್ಥವನ್ನು ಹೇಳಿದಂತಾಗುತ್ತದಲ್ಲವೇ ಎಂದರೆ ಬಾಧಕವಿದ್ದಾಗ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಕಲ್ಪನಾಗೌರವವೆಂಬ ಬಹು ದೊಡ್ಡ ಬಾಧಕವು ಇರುವುದರಿಂದ ಕಥಂಚಿತ್ ಜೀವವಿಷಯತ್ವವನ್ನು ಈಶ್ವರಾದಿಶಬ್ದಗಳಿಗೆ ಅಂಗೀಕರಿಸುತ್ತೇವೆ. ಆದ್ದರಿಂದ ಈಶ್ವರ-ವಿಷಯಕಜಿಜ್ಞಾಸಾ ಎಂದರೆ ಜೀವವಿಷಯಕಜಿಜ್ಞಾಸಾ ಎಂದರ್ಥ. ಅಂಥ ಜೀವನು ಹೇಗೆ ಸಿದ್ಧನಾಗಿದ್ದಾನೆಂದರೆ ಸ್ವಪ್ರಕಾಶತ್ವಾದಿಗಳಿಂದ ಸಿದ್ಧನಾಗಿದ್ದಾನೆಂದು ಹೇಳಿದ್ದಾರೆ.

'ಜೀವಸ್ಯ ಚಾಹಮಿತಿ ಸ್ವಪ್ರಕಾಶತಯಾ ಸ್ವಪ್ರಕಾಶಜ್ಞಾನಾಶ್ರಯತಯಾ ಮಾನಸಪ್ರತ್ಯಕ್ಷವೇದ್ಯತಯಾ ವಾ ಸಿದ್ಧತ್ವೇನ ನ ಜಿಜ್ಞಾಸಾವಿಷಯತ್ವಮ್' ಈ ವಾಕ್ಯದಲ್ಲಿ ಅಹಂ ಎಂಬುದನ್ನು ಮೊದಲನೆಯ ಪಕ್ಷದಲ್ಲಿ ಹಾಗೂ ಮೂರನೆಯ ಪಕ್ಷದಲ್ಲಿ ನೇರವಾಗಿ ಅನ್ವಯ ಮಾಡಬಹುದು – 'ಅಹಮಿತಿ ಸ್ವಪ್ರಕಾಶತಯಾ ಎಂದು ಹೇಳಬಹುದು. ಮತ್ತು 'ಅಹಮಿತಿ ಮಾನಸಪ್ರತ್ಯಕ್ಷವೇದ್ಯತಯಾ' ಎಂದೂ ಕೂಡ ಹೇಳಬಹುದು. ಆದರೆ 'ಸ್ವಪ್ರಕಾಶಜ್ಞಾನಾಶ್ರಯತಯಾ' ಎಂಬಲ್ಲಿ ಅಹಮಿತಿ ಎಂಬುದಾಗಿ

ವಿವಕ್ಷಿಸಲು ಸಾಧ್ಯವಿಲ್ಲ. ಪ್ರಾಭಾಕರರ ಮತದಲ್ಲಿ 'ಅಯಂ ಘಟಃ' 'ಅಯಂ ಪಟಃ' ಎಂಬ ಜ್ಞಾನಾಕಾರವನ್ನು ಒಪ್ಪುವುದೇ ಇಲ್ಲ. 'ಅಹಂ ಘಟಂ ಜಾನಾಮಿ' ಎಂಬುದಾಗಿಯೇ ಜ್ಞಾನವು ಬರುತ್ತದೆ. ಅಯಂ ಘಟಃ ಎಂಬುದು ವ್ಯವಸಾಯವಾಗಿದೆ. ಅಯಂ ಘಟ ಇತಿ ಜಾನಾಮಿ ಎಂಬುದು ಅನುವ್ಯವಸಾಯವಾಗಿದೆ ಎಂಬುದಾಗಿ ನಾವು ಹೇಳುತ್ತೇವೆ. ಆದರೆ ಪ್ರಾಭಾಕರರು ಅಯಂ ಘಟಃ ಎಂಬ ಜ್ಞಾನವೇ ಬರುವುದಿಲ್ಲ. ಅಹಂ ಘಟಂ ಜಾನಾಮಿ ಎಂಬುದಾಗಿಯೇ ಜ್ಞಾನವು ಬರುತ್ತದೆನ್ನುತ್ತಾರೆ. ಆದ್ದರಿಂದ ಇವರನ್ನು ತ್ರಿಪುಟಿಪ್ರತ್ಯಕ್ಷವಾದಿಗಳೆಂದು ಕರೆಯುತ್ತಾರೆ. ''ಜ್ಞಾನ ಎಂಬುದು ವೇದನಾಂಶ; ಅಹಂ ಎಂಬುದು ಆತ್ಮಾಂಶ; ಘಟಂ ಎಂಬುದು ವೇದ್ಯಾಂಶವಾಗಿದೆ. ಆದ್ದರಿಂದ ಸರ್ವಜ್ಞಾನಗಳು ತ್ರಿಪುಟಿಪ್ರತ್ಯಕ್ಷರೂಪವಾಗಿವೆ'' ಎಂಬುದಾಗಿ ಹೇಳುತ್ತಾರೆ. ಮತ್ತು ಇವರ ಮತದಲ್ಲಿ ಎಲ್ಲವೂ ಕೂಡ ಯಥಾರ್ಥಜ್ಞಾನವೇ ಆಗಿರುತ್ತದೆ. ಪ್ರಕೃತ ಜೀವನು ಅಹಂ ಎಂಬುದಾಗಿ ಸಿದ್ಧನಾಗಿದ್ದಾನೆಂದು ಇವರ ಮತದ ಪ್ರಕಾರ ಹೇಳಲು ಸಾಧ್ಯವಿಲ್ಲ. 'ಅಹಂ ಘಟಂ ಜಾನಾಮಿ' ಎಂಬುದಾಗಿಯೇ ಜೀವನು ಸಿದ್ಧನಾಗಿದ್ದಾನೆ. ಈ ಸಮಗ್ರಜ್ಞಾನದಲ್ಲಿ ಅಹಂ ಎಂಬುದು ಏಕದೇಶೋತ್ಕೀರ್ತನವಾಗಿದೆ ಎಂಬುದಾಗಿ ತಿಳಿದುಕೊಳ್ಳಬೇಕು.

## ನ್ಯಾಯವಿವರಣದಲ್ಲಿ ಸ್ವಪ್ರಕಾಶತ್ವಪಕ್ಷವನ್ನೇಕೆ ಆಶ್ರಯಿಸಿದ್ದಾರೆ?

ವಾಕ್ಯಾರ್ಥಚಂದ್ರಿಕಾ – ಅತ್ರ ಚ 'ಅಹಮ್' ಇತಿ ಪ್ರತ್ಯಕ್ಷೇಣ ಜೀವಸಿದ್ಧಿಂ ವದತಾ ಪೂರ್ವಪಕ್ಷಿಣಾಹಮಿತಿ ಸಿದ್ಧಾಂತ್ಯಭಿಪ್ರೇತಂ ಜೀವವಿಷಯಕಪ್ರಕಾಶಸ್ಯ ಜೀವರೂಪತ್ವರೂಪಂ ಸ್ವಪ್ರಕಾಶತ್ವಮೇವ ವಕ್ತವ್ಯಮಿತಿ ನ ನಿಯಮಃ । ಅಹಮ್ ಇತ್ಯಸ್ಯ ಮಾನಸವೇದನತ್ವೇನ ವಾ ಸ್ವಪ್ರಕಾಶಜ್ಞಾನಾಶ್ರಯಸಮರ್ಪಕತ್ವೇನ ವಾಽಂಗೀಕಾರೇಽಪಿ ಜೀವಸಿದ್ಧೇರವಿಘಾತಾತ್ । ತಥಾ ಚ ತಸ್ಯ ಚ ಸ್ವಪ್ರಕಾಶತ್ವಾದಿತಿ ನ್ಯಾಯವಿವರಣಮುಪಲಕ್ಷಣಮ್ ಇತ್ಯಭಿಪ್ರೇತ್ಯ ಪ್ರಭಾಕರವೈಶೇಷಿಕಮತಮಪ್ಯುಪನ್ಯಸ್ತಮ್ । ಅತ ಏವ ನ್ಯಾಯವಿವರಣಟೀಕಾಯಾಂ ತದುಪಲಕ್ಷಣತ್ವಮುಕ್ತಮ್ । ತತ್ವಪ್ರಕಾಶಿಕಾಯಾಂ ತು ಸಿದ್ಧಾಂತರೀತ್ಯೈವ ಸಿದ್ಧಿಸಂಭವೇ ಕಿಂ ರೀತ್ಯಂತರಗವೇಷಣೇನ ಇತ್ಯನುಪಲಕ್ಷಣತ್ವಪಕ್ಷಮಾಶ್ರಿತ್ಯ ಸ್ವಶಬ್ದೇನಾನುಪಾದಾನೇ ಬೀಜತ್ವೇನ ವಾ ವಸ್ತುಸ್ಥಿತಿಪ್ರದರ್ಶನಮಿತ್ಯವಧೇಯಮ್ ।

'ಅಹಂ ಎಂಬ ಪ್ರತ್ಯಕ್ಷದಿಂದ ಜೀವನು ಸಿದ್ಧನಾಗಿದ್ದಾನೆ' ಎಂಬುದಾಗಿ ಪೂರ್ವಪಕ್ಷಿಯು ಹೇಳುತ್ತಿದ್ದಾನೆ. ಇವನಿಗೆ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಜೀವವಿಷಯಪ್ರಕಾಶವೇ ಜೀವಸ್ವರೂಪ-

ವಾಗಿದೆ. ಜೀವನು ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆಂದೇ ಹೇಳಬೇಕು ಎಂಬ ನೈರ್ಭರ್ಯವು ಇರುವುದಿಲ್ಲ. ಜೀವನು ಸಿದ್ಧನಾಗಿದ್ದಾನೆಂದು ಹೇಳುವುದರಲ್ಲಷ್ಟೇ ನೈರ್ಭರ್ಯವಿರುತ್ತದೆ. ಇಂಥ ಪೂರ್ವಪಕ್ಷಿಗೆ ಅಹಂ ಎಂಬುದು ಮಾನಸವೇದ್ಯವಾಗಿದೆ ಅಥವಾ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯವಾಗಿದೆ ಎಂಬುದಾಗಿ ಅಂಗೀಕರಿಸಿದರೂ ಕೂಡ ಜೀವನು ಸಿದ್ಧನಾಗಿದ್ದಾನೆಂದು ಹೇಳುವುದಕ್ಕೆ ಯಾವುದೇ ವಿಘ್ನವು ಇರುವುದಿಲ್ಲ. ಆದ್ದರಿಂದ ಪ್ರಕೃತ ನ್ಯಾಯಸುಧಾಗ್ರಂಥದಲ್ಲಿ 'ಸ್ವಪ್ರಕಾಶತ್ವಾತ್ ಎಂದು ನ್ಯಾಯವಿವರಣದಲ್ಲಿ ಹೇಳಿದ ಆಚಾರ್ಯರ ಮಾತು ಉಪಲಕ್ಷಣವಾಗಿದೆ' ಎಂಬ ಅಭಿಪ್ರಾಯವನ್ನು ಹೊಂದಿ ಪ್ರಾಭಾಕರರ ಮತವನ್ನು ಹಾಗೂ ವೈಶೇಷಿಕರ ಮತವನ್ನು ಉಲ್ಲೇಖ ಮಾಡಿದ್ದಾರೆ. ಆದ್ದರಿಂದಲೇ ನ್ಯಾಯವಿವರಣದ ಟೀಕೆಯಲ್ಲಿ ಸ್ವಪ್ರಕಾಶತ್ವಾತ್ ಎಂಬುದನ್ನು ಉಪಲಕ್ಷಣವೆಂಬುದಾಗಿ ಗ್ರಂಥಕಾರರು ಹೇಳಿದ್ದಾರೆ.

ತತ್ತ್ವಪ್ರಕಾಶಿಕೆಯಲ್ಲಿ ಉಳಿದೆರಡು ಪಕ್ಷಗಳನ್ನೇಕೆ ಉಲ್ಲೇಖ ಮಾಡಿರುವುದಿಲ್ಲ? ಎಂದರೆ ಸಿದ್ಧಾಂತದ ಪ್ರಕಾರವೇ ಆತ್ಮನು ಸಿದ್ಧನಾಗಿದ್ದಾನೆಂದು ಹೇಳಲು ಬರುತ್ತಿರುವಾಗ ಮತ್ತೊಂದು ಪ್ರಕಾರವನ್ನು ಅನ್ವೇಷಣೆ ಮಾಡುವುದು ಅನಾವಶ್ಯಕ. ಆದ್ದರಿಂದ ನ್ಯಾಯವಿವರಣದ ಮಾತನ್ನು ಉಪಲಕ್ಷಣವೆಂದು ವಿವಕ್ಷಿಸಬೇಕಾಗಿಲ್ಲ. ಹೀಗೆ ತತ್ತ್ವಪ್ರಕಾಶಿಕೆಯಲ್ಲಿ ಅನುಪಲಕ್ಷಣತ್ವಪಕ್ಷವನ್ನು ಆಶ್ರಯಿಸಿದ್ದಾರೆ. ಅಥವಾ ಉಪಲಕ್ಷಣವೆಂದು ವಿವಕ್ಷಿಸುವುದಾದರೆ ಶ್ರೀಮದಾಚಾರ್ಯರು ನ್ಯಾಯವಿವರಣದಲ್ಲಿ ಸ್ವಪ್ರಕಾಶತ್ವಪಕ್ಷವನ್ನಷ್ಟೇ ಉಲ್ಲೇಖಿಸಿ ಉಳಿದೆರಡು ಪಕ್ಷಗಳನ್ನು ನೇರಮಾತಿನಿಂದ ಏಕೆ ಉಲ್ಲೇಖ ಮಾಡಿರುವುದಿಲ್ಲ ಎಂಬ ಪ್ರಶ್ನೆಗೆ ವಸ್ತುಸ್ಥಿತಿಪ್ರದರ್ಶನಕ್ಕಾಗಿ ಉಲ್ಲೇಖ ಮಾಡಿರುವುದಿಲ್ಲ ಎಂಬುದು ತತ್ತ್ವಪ್ರಕಾಶಿಕೆಯ ಅಭಿಪ್ರಾಯ. ಸಿದ್ಧಾಂತದ ಪ್ರಕಾರ ಆತ್ಮನು ಸ್ವಪ್ರಕಾಶತ್ವೇನ ಸಿದ್ಧನಾಗಿದ್ದಾನೆಂದೇ ವಿವಕ್ಷಿಸಲು ಬರುವಾಗ ಉಳಿದೆರಡು ಪಕ್ಷಗಳನ್ನೇಕೆ ಭಾಷ್ಯಕಾರರು ಉಲ್ಲೇಖ ಮಾಡಬೇಕು? ಎಂಬುದು ತತ್ತ್ವಪ್ರಕಾಶಿಕಾವಾಕ್ಯದ ಅಭಿಪ್ರಾಯವಾಗಿದೆ.

## ಶ್ರುತ್ಯಾಭಾಸಕ್ಕೆ ಹಾಗೂ ಜಿಜ್ಞಾಸಾಭಾಸಕ್ಕೆ ಉದಾಹರಣೆಗಳು

ಯಾದುಪತ್ಯ – ಜರದ್ಗವಾದಿವಾಕ್ಯಂ ಶ್ರುತ್ಯಾಭಾಸತಾಯಾಂ ನಿದರ್ಶನಂ ಪಾವಕಶೈತ್ಯಾನುಮಾನಂ ಚ ಜಿಜ್ಞಾಸಾಭಾಸತಾಯಾಮಿತಿ ದ್ರಷ್ಟವ್ಯಮ್ ।

'ಜರದ್ಗವಃ ಪಾದುಕಕಂಬಲಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ ।
ತಂ ಬ್ರಾಹ್ಮಣೀ ಪೃಚ್ಛತಿ ಪುತ್ರಕಾಮಾ ರಾಜನ್ ರುಮಾಯಾಂ ಲಶುನಸ್ಯ ಕೋಽರ್ಘಃ ॥'

ಇತ್ಯೇತದ್ ಜರದ್ಗವವಾಕ್ಯಶಬ್ದೇನ ಗೃಹ್ಯತೇ । 'ಶಂಖಃ ಕದಲ್ಯಾಂ ಕದಲೀ ಚ ಭೇರ್ಯಾಂ ಭೇರ್ಯಾಂ ಮಹಚ್ಚಾವಿರಭೂದ್ ವಿಮಾನಮ್' ಇತ್ಯೇತದಾದಿಶಬ್ದೇನೋಚ್ಯತೇ । ಯತ್ಕ್ವಚಿದಿತಿ ॥ 'ಅಗ್ನಿರ್ಹಿಮಸ್ಯ ಭೇಷಜಮ್' ಇತ್ಯಾದೌ । 'ಸ್ವಪ್ರಕಾಶತಯಾ' ಇತ್ಯಾದಿ ಕ್ರಮಾದ್ ವೇದಾಂತಿ-ಪ್ರಾಭಾಕರವೈಶೇಷಿಕಾದಿಮತಮಾಶ್ರಿತ್ಯ ಉಕ್ತಮಿತ್ಯವಗಂತವ್ಯಮ್ ॥

ಶ್ರುತಿಯು ಆಭಾಸವಾಗಿದೆ ಎನ್ನಲು ಜರದ್ಗವವಾಕ್ಯವು ಉದಾಹರಣೆಯಾಗಿದೆ. ಪಾವಕಶೈತ್ಯಾನು-ಮಾನವು ಜಿಜ್ಞಾಸೆಯು ಆಭಾಸವಾಗಿದೆ ಎನ್ನಲು ಉದಾಹರಣೆಯಾಗಿದೆ.

'ಜರದ್ಗವಃ ಪಾದುಕಕಂಬಲಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ ।
ತಂ ಬ್ರಾಹ್ಮಣೀ ಪೃಚ್ಛತಿ ಪುತ್ರ(ರಂತು)ಕಾಮಾ ರಾಜನ್ ರುಮಾಯಾಂ ಲಶುನಸ್ಯ ಕೋಽರ್ಘಃ ॥'

ವಯಸ್ಸಾದ ಒಂದು ಎತ್ತು ಪಾದುಕೆ ಹಾಗೂ ಕಂಬಳಿಗಳಿಂದ ಕೂಡಿ ಬಾಗಿಲಲ್ಲಿ ನಿಂತಿದೆ. ಮಂಗಳವಾಗಲಿ ಎಂದು ಹಾಡುತ್ತಿದೆ. ಆಗ ಬ್ರಾಹ್ಮಣ ಸ್ತ್ರೀಯು ಅದರ ಜೊತೆ ವಿಹಾರ ಮಾಡುವ ಅಪೇಕ್ಷೆಯಿಂದ ಪ್ರಶ್ನಿಸುತ್ತಾಳೆ. ಓ ರಾಜನೇ ಸಂತೆಯಲ್ಲಿ ಬೆಳ್ಳುಳ್ಳಿಗೆ ಎಷ್ಟು ಬೆಲೆಯಿದೆ.

ಈ ಶ್ಲೋಕವನ್ನು ಗ್ರಂಥದಲ್ಲಿರುವ ಜರದ್ಗವವಾಕ್ಯಶಬ್ದದಿಂದ ಸಂಗ್ರಹಿಸಬೇಕು.

'ಶಂಖಃ ಕದಲ್ಯಾಂ ಕದಲೀಚ ಭೇರ್ಯಾಂ ಭೇರ್ಯಾಂ ಮಹಚ್ಚಾವಿರಭೂದ್ ವಿಮಾನಮ್' ಶಂಖದಲ್ಲಿ ಬಾಳೆಯ ಹಣ್ಣಿದೆ; ಬಾಳೆಯ ಹಣ್ಣಿನಲ್ಲಿ ಭೇರಿಯಿದೆ; ಭೇರಿಯಲ್ಲಿ ದೊಡ್ಡದಾದ ವಿಮಾನ-ವಿದೆ' ಎಂಬುದನ್ನು ಆದಿಶಬ್ದದಿಂದ ವಿವಕ್ಷಿಸಬೇಕು.

"ಯತ್ ಕ್ವಚಿತ್" – 'ಅಗ್ನಿರ್ಹಿಮಸ್ಯ ಭೇಷಜಮ್' ಇತ್ಯಾದಿ ವಿಷಯದಲ್ಲಿ ಪ್ರತ್ಯಕ್ಷದಿಂದ ಸಿದ್ಧವಾಗಿದ್ದರೂ ಕೂಡ ಶ್ರುತಿಪ್ರತಿಪಾದಿತತ್ವವು ಕಾಣಸುತ್ತಿದೆ ಎಂದರ್ಥ.

"ಸ್ವಪ್ರಕಾಶತಯಾ" ಇತ್ಯಾದಿ ವಾಕ್ಯವು ಕ್ರಮವಾಗಿ ವೇದಾಂತಿಗಳ ಪ್ರಾಭಾಕರರ ಹಾಗೂ ವೈಶೇಷಿಕರ ಮತವನ್ನು ಆಶ್ರಯಿಸಿ ಹೇಳಿದ್ದಾರೆಂದು ತಿಳಿಯಬೇಕು.

## ಸುಧಾಪರಿಮಳಸಾರ

ಅಹಂ ಕರ್ತಾ, ಅಹಂ ಭೋಕ್ತಾ, ಅಹಂ ಸುಖೀ, ಅಹಂ ದುಃಖೀ ಮುಂತಾದ ಅನುಭವದಲ್ಲಿ ಆತ್ಮನು ಕರ್ತೃತ್ವಾದಿಗಳುಳ್ಳವನಾಗಿ ತೋರುತ್ತಾನೆ. ವೇದವಾಕ್ಯಗಳಿಂದ ಆತ್ಮನು ಶುದ್ಧಜ್ಞಾನಸ್ವರೂಪನಾಗಿ ಪ್ರತಿಪಾದಿತ-

ನಾಗಿದ್ದಾನೆ. ಆದ್ದರಿಂದ ಶುದ್ಧಜ್ಞಾನಸ್ವರೂಪನಾದ ಆತ್ಮತತ್ತ್ವಜ್ಞಾನಕ್ಕೋಸ್ಕರ ಆತ್ಮ ಜಿಜ್ಞಾಸೆಯು ಯುಕ್ತವಾಗಬಹು-ದಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸುತ್ತಾರೆ—

ಹಾಗಾದರೆ ಜರದ್ಗವಾದಿವಾಕ್ಯಗಳಂತೆ, ಅಗ್ನಿಯು ಶೀತವಾಗಿದೆ ಎಂಬ ಅನುಮಾನದಂತೆ, ಪ್ರತ್ಯಕ್ಷವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ವೇದವಾಕ್ಯವೂ, ಅದರ ಅರ್ಥವಿಚಾರರೂಪವಾದ ಜಿಜ್ಞಾಸೆಯೂ ಅಪ್ರಮಾಣವಾಗ-ಬೇಕಾದೀತು.

ನಿಶ್ಚಿತನಾಗಿರುವುದರಿಂದಲೇ ಪರಾತ್ಮನೂ ಜಿಜ್ಞಾಸಾವಿಷಯನಾಗುವುದಿಲ್ಲ. ಏಕೆಂದರೆ ಪರಾತ್ಮನು ಪ್ರಾಣಾದಿ-ಲಿಂಗಗಳಿಂದ ನಿಶ್ಚಿತನಾಗಿದ್ದಾನೆ. ಪ್ರಾಣಾದಿಲಿಂಗಗಳಿಂದ ಅವನನ್ನೂ ತಿಳಿಯುವುದೇ ಜಿಜ್ಞಾಸೆ. ಆದ್ದರಿಂದ ಪರಾತ್ಮನು ಜಿಜ್ಞಾಸಾವಿಷಯನಾಗಿದ್ದಾನೆ ಎಂದು ಹೇಳಬಾರದು. ಏಕೆಂದರೆ ಪರಾತ್ಮನು ಲೌಕಿಕದೃಷ್ಟಾಂತಗಳಿಂದ ಸಹಕೃತವಾದ ಅನುಮಾನಗಳಿಂದಲೇ ಸಿದ್ಧನಾಗುತ್ತಾನೆ. ಆದ್ದರಿಂದ ಅವನನ್ನು ತಿಳಿಯಲು ಶಾಸ್ತ್ರವಿಚಾರದ ಅಗತ್ಯ ಇಲ್ಲ. ಬಾಲಕನು ಸ್ತನಪಾನವು ತನಗೆ ಇಷ್ಟಸಾಧನವಾಗಿದೆ ಎಂಬ ವಿಷಯವನ್ನು ಅನುಮಾನದಿಂದ ತಿಳಿಯುತ್ತಾನೆ. ಶಾಸ್ತ್ರದ ಯುಕ್ತಿಪ್ರತಿ-ಪಾದನೆಯನ್ನು ಅವಲಂಬಿಸುವುದಿಲ್ಲವಷ್ಟೇ.

ಕೆಲವೊಮ್ಮೆ ಶಾಸ್ತ್ರಗಳಲ್ಲಿಯೂ ಲೌಕಿಕವಿಷಯವನ್ನು ಹೇಳುವುದು ಉಂಟು. ಆದರೆ ಅದು ಅನುವಾದವೇ ಹೊರತು ಅದೇ ಶಾಸ್ತ್ರದ ಪ್ರಧಾನವ್ಯಾಪಾರ ಅಲ್ಲ.

ಈಶ್ವರ ಜಿಜ್ಞಾಸೆಗೆ ವಿಷಯನೆನ್ನುವುದೂ ಸರಿಯಲ್ಲ. ಏಕೆಂದರೆ ಈಶ್ವರನೇ ಇಲ್ಲ. ಹಾಗಾದರೆ 'ಈಶ್ವರ' ಮುಂತಾದ ಪದಗಳಿಗೆ ಅರ್ಥವೇ ಇಲ್ಲದಿರುವುದರಿಂದ ಅವುಗಳು ಪದವಲ್ಲವೆಂದಾದೀತು ಎನ್ನಕೂಡದು. ಈಶ್ವರ ಮೊದಲಾದ ಶಬ್ದಗಳು ಜೀವರನ್ನೇ ತಿಳಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಆ ಶಬ್ದಗಳು ಪದವಾಗಬಹುದು. ಏಕೆಂದರೆ ಜೀವನೂ ತನ್ನ ಶರೀರ ಇಂದ್ರಿಯ ಮುಂತಾದವುಗಳಿಗೆ ಈಶ್ವರ(ನಿಯಾಮಕ)ನಾಗಿದ್ದಾನಷ್ಟೇ. ಹೀಗೆ ಈಶ್ವರ ಮುಂತಾದ ಪದಗಳಿಗೆ ಪ್ರಸಿದ್ಧವಾದ ಸಮರ್ಥನಾದ ಜೀವ ಎಂಬ ಅರ್ಥವನ್ನು ಹೇಳಲು ಬರುತ್ತಿರುವಾಗ ಅದನ್ನು ಬಿಟ್ಟು ಅಪ್ರಸಿದ್ಧವಾದ ಈಶ್ವರನನ್ನು ಅರ್ಥವೆಂದು ಕಲ್ಪಿಸಿದರೆ ಕಲ್ಪನಾಗೌರವಕ್ಕೆ ಎಡೆ ಮಾಡಿಕೊಟ್ಟಂತಾಯಿತು.

ಜೀವನು, 'ಅಹಂ' ಎಂದು ಸ್ವಪ್ರಕಾಶನಾಗಿ, ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿ ಅಥವಾ ಮಾನಸ-ಪ್ರತ್ಯಕ್ಷಕ್ಕೆ ವಿಷಯನಾಗಿ ಸಿದ್ಧನಾಗಿರುವುದರಿಂದ ಅವನು ಜಿಜ್ಞಾಸೆಗೆ ವಿಷಯನೆನಿಸಲಾರ. ಈ ವಿಷಯವನ್ನು ಹಿಂದೆ ನಿರೂಪಿಸಲಾಗಿದೆ.

* * * * *

## ನೆನಪಿಡಿ

* ಭಾಮತಿಯಲ್ಲಿ ಶುದ್ಧಾತ್ಮನು ಪ್ರತ್ಯಕ್ಷದಿಂದ ಸಿದ್ಧನಾಗಿರುವುದಿಲ್ಲ ಎಂದು ಹೇಳ-ಲಾಗಿದೆ. ಅದನ್ನೇ ಇಲ್ಲಿ ಪೂರ್ವಪಕ್ಷವನ್ನಾಗಿ ಉಲ್ಲೇಖಿಸಿದ್ದಾರೆ.

* ಶ್ರುತಿಪ್ರತಿಪಾದಿತವಾದ ಕರ್ತೃತ್ವಾದಿಶೂನ್ಯತ್ವರೂಪದಿಂದ ಆತ್ಮನ ಜಿಜ್ಞಾಸೆಯೇ ಮೋಕ್ಷದಾಯಕವಾಗಿದೆ. ಇದು ಪ್ರತ್ಯಕ್ಷಸಿದ್ಧವಾಗಿರುವುದಿಲ್ಲ.

* ಜರದ್ಗವವಾಕ್ಯವು ಶ್ರುತ್ಯಾಭಾಸಕ್ಕೆ ಉದಾಹರಣೆಯಾಗಿದೆ. ಪಾವಕಶೈತ್ಯಾನುಮಾನವು ಜಿಜ್ಞಾಸಾಭಾಸಕ್ಕೆ ಉದಾಹರಣೆಯಾಗಿದೆ.

* ಈಶ್ವರಶಬ್ದಕ್ಕೆ ಪರಮಾತ್ಮನೆಂಬ ಅರ್ಥವನ್ನು ಒಪ್ಪದಿದ್ದರೆ ನಿರರ್ಥಕವಾಗುವುದರಿಂದ ಪ್ರಾತಿಪದಿಕಸಂಜ್ಞೆಯೇ ಬರುವುದಿಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಜೀವಪರತ್ವವನ್ನು ಒಪ್ಪು-ತ್ತೇವೆಂದು ಸಮರ್ಥಿಸಲಾಗಿದೆ.

* ಓಂ ಮತ್ತು ಬ್ರಹ್ಮಪದಗಳಿಂದ ಯಾವ ಯೌಗಿಕಾರ್ಥವು ಸಿದ್ಧವಾಗುತ್ತದೋ ಇದ-ರಿಂದ ಈಶ್ವರಶಬ್ದಕ್ಕೆ ಜೀವನೆಂಬ ಯೌಗಿಕಾರ್ಥದ ಪೂರ್ವಪಕ್ಷವು ಪರಿಹಾರವಾಗುತ್ತದೆ.

* ಸಿದ್ಧಾಂತದಲ್ಲಿ ಜೀವನು ಸ್ವಪ್ರಕಾಶತ್ವೇನ ಸಿದ್ಧವಾಗಿದ್ದಾನೆಂದು, ಪ್ರಾಭಾಕರರ ಮತದಲ್ಲಿ ಸ್ವಪ್ರಕಾಶಜ್ಞಾನಾಶ್ರಯತ್ವೇನ ಸಿದ್ಧನಾಗಿದ್ದಾನೆಂದು, ತಾರ್ಕಿಕರ ಮತದಲ್ಲಿ ಮಾನಸ-ಪ್ರತ್ಯಕ್ಷವೇದ್ಯತ್ವನಾಗಿ ಸಿದ್ಧನಾಗಿದ್ದಾನೆಂದು ಅಂಗೀಕರಿಸಲಾಗಿದೆ.

* ತತ್ವಪ್ರಕಾಶಿಕೆಯಲ್ಲಿ ಸಿದ್ಧಾಂತದ ಪಕ್ಷವನ್ನಷ್ಟೇ ಅವಲಂಬಿಸಿ, ಉಳಿದೆರಡು ಪಕ್ಷಗಳನ್ನು ನಿರಾಕರಿಸಿದ್ದಾರೆ. ನ್ಯಾಯಸುಧಾ ಗ್ರಂಥದಲ್ಲಿ ಮೂರು ಪಕ್ಷಗಳನ್ನು ವಿವಕ್ಷಿಸಿದ್ದರೂ ಸಹ 'ಜೀವನು ಸಿದ್ಧನಾಗುತ್ತಾನೆ' ಎಂದಷ್ಟೇ ಪೂರ್ವಪಕ್ಷಿಯ ನೈರ್ಭರ್ಯವನ್ನು ತಿಳಿಸಿದ್ದಾರೆ.

* * * * *

## ಈಶ್ವರನು ಪ್ರಮಿತನೋ ಅಲ್ಲವೋ?

**ಶ್ರೀಮನ್ನ್ಯಾಯಸುಧಾ – ಕಿಂ ಚೇಶ್ವರಃ ಪ್ರಮಿತೋ ನ ವಾ । ನೋಭಯಥಾಽಪಿ ಜಿಜ್ಞಾಸಾ ಸಂಭವತಿ । ನೇತಿ ಪಕ್ಷೇ ಅನುಗ್ರಾಹ್ಯಪ್ರಮಾಣಾಭಾವೇನ ಜಿಜ್ಞಾಸಾಯಾಸ್ತರ್ಕತ್ವವ್ಯಾಘಾತಾತ್ । 'ಕಾರಣೋಪಪತ್ತಿತಃ' ಇತಿ ಹಿ ಉಕ್ತಮ್ । ಪ್ರಮಾಕರಣಸ್ಯ ಪ್ರಮಾಣಸ್ಯೋಪಪತ್ತಿರನುಗ್ರಹಸ್ತತ್ಕರಣೇನೇತ್ಯರ್ಥಃ । ನ ಚ ಬುದ್ಧಾವನಾರೂಢಂ ಶಕ್ಯಂ ಜಿಜ್ಞಾಸಿತುಮ್ ।**

ಮತ್ತು ಈಶ್ವರನು ಪ್ರಮಾಣದಿಂದ ಪ್ರಮಿತನಾಗಿದ್ದಾನೋ ಇಲ್ಲವೋ? ಈ ಎರಡು ವಿಕಲ್ಪಗಳನ್ನು ಅಂಗೀಕರಿಸಿದರೂ ಕೂಡ ಈಶ್ವರನ ಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಏಕೆಂದರೆ ಈಶ್ವರನು ಪ್ರಮಾಣಪ್ರಮಿತನಾಗಿರುವುದಿಲ್ಲ ಎಂಬ ಪಕ್ಷದಲ್ಲಿ ವಿಚಾರದಿಂದ ನಿರ್ಣಯ ಮಾಡಲ್ಪಡಬೇಕಾದ ಪ್ರಮಾಣವೇ ಇರುವುದಿಲ್ಲವಾದ್ದರಿಂದ ಜಿಜ್ಞಾಸೆಗೆ ತರ್ಕತ್ವವೇ ವ್ಯಾಹತವಾಗುತ್ತದೆ. ಏಕೆಂದರೆ ''ಕಾರಣೋಪಪತ್ತಿತಃ'' ಎಂಬುದಾಗಿ ಹೇಳಿರುತ್ತಾರೆ. ಇದಕ್ಕೆ ಹೀಗರ್ಥ – ಯಥಾರ್ಥಜ್ಞಾನಕ್ಕೆ ಯಾವುದು ಕರಣವಾಗಿದೆಯೋ ಅದು ಪ್ರಮಾಣವಾಗುತ್ತದೆ. ಅದಕ್ಕೆ ಸಹಾಯ ಮಾಡುವುದರಿಂದ ಕಾರಣೋಪಪತ್ತಿ ಎಂದು ಕರೆಸಿಕೊಳ್ಳುತ್ತದೆ. ಮತ್ತು ಬುದ್ಧಿಯಲ್ಲಿ ವಿಷಯವಾಗದ ವಸ್ತುವಿನ ಬಗ್ಗೆ ವಿಚಾರ ಮಾಡಲು ಸಾಧ್ಯವಾಗುವುದಿಲ್ಲ.

**ಪ್ರಮಿತತ್ವೇ ತು ನಿಶ್ಚಿತತ್ವಾದೇವ । ನ ಚೈವಂ ಸಕಲತರ್ಕಾನುಪಪತ್ತಿಪ್ರಸಂಗೇನ ವ್ಯಾಘಾತಃ । ಸಾಮಾನ್ಯತಃ ಪ್ರತೀತೌ ವಿಶೇಷೇ ತದವಕಾಶಾತ್ । ನ ಚಾತ್ರ ತಥಾತ್ವಂ ಪಶ್ಯಾಮಃ ।**

ಈಶ್ವರನು ಪ್ರಮಿತನಾಗಿದ್ದಾನೆಂಬ ಪಕ್ಷದಲ್ಲಿ ಈಶ್ವರನು ಪ್ರಮಾಣಗಳಿಂದ ನಿಶ್ಚಿತನಾಗಿರುವ ಕಾರಣದಿಂದಲೇ ವಿಷಯನಾಗುವುದಿಲ್ಲ.

ಈ ಕ್ರಮದಲ್ಲಿ ವಿಕಲ್ಪಗಳನ್ನು ಮಾಡಿ ದೋಷವನ್ನು ಹೇಳಿದರೆ ಎಲ್ಲಾ ತರ್ಕಗಳೂ ಕೂಡ ಅನುಪಪನ್ನವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ವ್ಯಾಘಾತದೋಷವು ಬರುತ್ತದೆ. ಹೀಗೆ ಆಶಂಕಿಸಬಾರದು. ಏಕೆಂದರೆ ಸಾಮಾನ್ಯವಾಗಿ ಪ್ರತೀತವಾದ ವಿಷಯದಲ್ಲಿ ವಿಶೇಷಸ್ವರೂಪದಿಂದ ತಿಳಿದುಕೊಳ್ಳಲು ತರ್ಕಕ್ಕೆ ಅವಕಾಶವಿರುತ್ತದೆ. ಆದ್ದರಿಂದ ಉಳಿದ ತರ್ಕಗಳಲ್ಲಿ ಹೀಗೆ ವಿಕಲ್ಪದಿಂದ ದೂಷಣೆ ಮಾಡಲು ಅವಕಾಶವಿರುವುದಿಲ್ಲ. ಆದರೆ ಪ್ರಕೃತ ಈಶ್ವರನ ವಿಷಯದಲ್ಲಿ ಸಾಮಾನ್ಯಪ್ರತೀತಿಯೇ ಇರುವುದಿಲ್ಲ. ವಿಶೇಷಾಕಾರದಿಂದ ವಿಚಾರ ಮಾಡುವ ಅಂಶಗಳೂ ಕೂಡ ಅವನಲ್ಲಿರುವುದಿಲ್ಲ.

## ಈಶ್ವರನಲ್ಲಿ ಪ್ರಮಾಣವಿಕಲ್ಪ

**ಕಿಂಚೇಶ್ವರೇ ಪ್ರಮಾಣಂ ಭವನ್ನ ತಾವತ್ ಪ್ರತ್ಯಕ್ಷಮ್ । ತಸ್ಯಾಪಾತತ-ಸ್ತದಭಾವಾವೇದಕತ್ವಾತ್ । ನಾಪ್ಯನುಮಾನಮ್ । ತತ್ ಪ್ರತಿಬದ್ಧಲಿಂಗಾ-ಭಾವಾತ್ । ಆಗಮಸ್ತು ಕಾರ್ಯನಿಷ್ಠೋ ನ ನಿಷ್ಪನ್ನಸ್ವರೂಪಮೀಶ್ವರಂ ಶಕ್ನೋತ್ಯ-ವಗಮಯಿತುಮ್ । ನ ಚಾನ್ಯತ್ ಪ್ರಮಾಣಮಸ್ತಿ ಯನ್ಮೀಮಾಂಸಯಾ ಅನು-ಗೃಹ್ಯೇತ ।**

ಮತ್ತು ಈಶ್ವರನನ್ನು ತಿಳಿಸುವ ಪ್ರಮಾಣವು ಪ್ರತ್ಯಕ್ಷವಾಗಲು ಸಾಧ್ಯವಿಲ್ಲ. ಏಕೆಂದರೆ ಆ ಪ್ರತ್ಯಕ್ಷವು ಸಾಮಾನ್ಯವಾಗಿ ಈಶ್ವರನಿಲ್ಲವೆಂದೇ ತಿಳಿಸುತ್ತಿದೆ. ಅನುಮಾನವೂ ಕೂಡ ಈಶ್ವರನ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ ಈಶ್ವರನ ಜೊತೆ ನಿಯತವಾದ ಹೇತುವು ಇರುವುದಿಲ್ಲ. ಆಗಮವು ಕೇವಲ ಕಾರ್ಯಬೋಧಕವಾಗಿ ಪ್ರಮಾಣವಾಗುತ್ತದೆ. ಸಿದ್ಧಸ್ವರೂಪನಾದ ಈಶ್ವರನನ್ನು ತಿಳಿಸುವುದರಲ್ಲಿ ಅಪ್ರಮಾಣವಾಗಿದೆ. ಈ ಮೂರು ಪ್ರಮಾಣಗಳನ್ನು ಬಿಟ್ಟು ಬೇರೆ ಪ್ರಮಾಣಗಳು ಇರುವುದಿಲ್ಲ. ಹಾಗೇನಾದರೂ ಬೇರೆ ಪ್ರಮಾಣಗಳಿದ್ದರೆ ಅದನ್ನೇ ಯುಕ್ತಿಗಳಿಂದ ಸಹಾಯಹೊಂದುವ ಪ್ರಮಾಣವೆಂದು ಹೇಳ-ಬಹುದಿತ್ತು.

**ಕಿಂಚಾಗಮೋಽಪಿ ಭವನ್ ವೇದ ಏವ ವಕ್ತವ್ಯಃ । ಅನ್ಯಸ್ಯ ಅನಾಶಂಕನೀಯತ್ವಾತ್ ಪಾರತಂತ್ರ್ಯಾಚ್ಚ । ವೇದಸ್ಯ ಪೌರುಷೇಯತ್ವಾಪೌರುಷೇಯತ್ವಯೋಃ ಕಾರಣಾಭಾವೇನ ಪ್ರಾಮಾಣ್ಯಮೇವ ದುರ್ಲಭಮ್ । ಸ್ವತಃ ಪ್ರಾಮಾಣ್ಯಾಂಗೀಕಾರೇ ತು ವೇದವಿರುದ್ಧಾನಾಮಪಿ ಶಾಕ್ಯಾದಿವಚಸಾಂ ತಥಾತ್ವಾಪಾತೇನ ಪುನರ್ವೇದಾಪ್ರಾಮಾಣ್ಯತಾದವಸ್ಥ್ಯಮ್ ।**

ಮತ್ತು ಈಶ್ವರನ ವಿಷಯದಲ್ಲಿ ಆಗಮಪ್ರಮಾಣವಿದೆಯೆಂದರೆ ಅದು ವೇದವೇ ಆಗಬೇಕು. ಉಳಿದೆಲ್ಲ ಪ್ರಮಾಣಗಳು ವೇದವನ್ನು ಅವಲಂಬಿಸಿಯೇ ಪ್ರಮಾಣವಾಗುತ್ತವೆ. ಮತ್ತು ಪಾಶುಪತಾದ್ಯಾಗಮಗಳು ವೇದವಿರುದ್ಧವಾಗಿರುವುದರಿಂದ ಅವುಗಳನ್ನು ಪ್ರಮಾಣ-ವೆಂದು ಆಶಂಕಿಸಲು ಸಾಧ್ಯವಿಲ್ಲ. ವೇದವು ಆಪ್ತೋಕ್ತತ್ವವೆಂಬ ಗುಣವನ್ನು ಹೊಂದದ ಕಾರಣ ಪೌರುಷೇಯರೂಪವಾಗಿ ಪ್ರಮಾಣವಾಗಲು ಸಾಧ್ಯವಿಲ್ಲ. ಅಪೌರುಷೇಯತ್ವೇನ ಸ್ವತಃಪ್ರಾಮಾಣ್ಯವನ್ನು ಒಪ್ಪಿದರೆ ವೇದವಿರುದ್ಧವಾದ ಶಾಕ್ಯಾದ್ಯಾಗಮಗಳಿಗೂ ಕೂಡ ಪ್ರಾಮಾಣ್ಯವು ಸಮಾನನ್ಯಾಯದಿಂದ ಪ್ರಾಪ್ತವಾಗುತ್ತದೆ. ಮತ್ತು ಅಂಥ ಆಗಮಗಳಿಂದ ವಿರುದ್ಧವಾದ ಕಾರಣ ವೇದವೇ ಅಪ್ರಮಾಣವಾಗುತ್ತದೆ.

**ಕಿಂಚ ಶಬ್ದಸ್ಯೈವ ಪ್ರಾಮಾಣ್ಯಂ ದುರ್ಘಟಮರ್ಥಸಂಸ್ಪರ್ಶಶೂನ್ಯತ್ವಾತ್ । ವಾಕ್ಯಾರ್ಥಪ್ರತ್ಯಾಯನಪ್ರಕಾರಾನಿರೂಪಣಾಚ್ಚ । ಕುತಸ್ತದ್ವಿಶೇಷಸ್ಯ ವೇದಸ್ಯ ।**

ಮತ್ತು ಶಬ್ದಗಳಿಂದ ವಾಕ್ಯಾರ್ಥಜ್ಞಾನವು ಯಾವ ಪ್ರಕಾರದಿಂದ ಹುಟ್ಟುತ್ತದೋ ಅದನ್ನು ನಿರೂಪಣೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಶಬ್ದಗಳಲ್ಲಿ ಅವಾಂತರವಿಶೇಷ-ವಾದ ವೇದಪ್ರಾಮಾಣ್ಯವು ಹೇಗೆ ತಾನೆ ಸಿದ್ಧವಾಗುತ್ತದೆ?

* * * * *

## ವೇದಪ್ರಾಮಾಣ್ಯಸಮರ್ಥನೆಯಿಂದ ಪರಿಹಾರವಾಗುವ ಪೂರ್ವಪಕ್ಷ

ಪರಿಮಳ– ಬ್ರಹ್ಮಣಿ ವೇದರೂಪಪ್ರಮಾಣೋಕ್ತಿಪರತಯಾ ಓಂಕಾರಸ್ಯ ವ್ಯಾಖ್ಯಾನ-ಪರಂ 'ಸ ಏವ ಭರ್ಗಶಬ್ದಾರ್ಥಃ' ಇತ್ಯಾದಿ । ತದ್ ವ್ಯಾವರ್ತ್ಯಂ ವ್ಯನಕ್ತಿ – ಕಿಂಚೇತಿ ॥ ತತ್ಕರಣೇನೇತಿ ॥ ಅನುಗ್ರಹಕರಣೇನೇತ್ಯರ್ಥಃ । ನಿಶ್ಚಿತತ್ವಾದೇವ ಇತಿ ॥ ನ ಜಿಜ್ಞಾಸಿತುಂ ಶಕ್ಯಮಿತ್ಯನ್ವಯಃ । ನ ಚಾತ್ರೇತಿ ॥ ಈಶ್ವರವಿಷಯೇ ಸಾಮಾನ್ಯತಃ ಪ್ರಮಿತತ್ವಂ ವಿಶೇಷೇಣಾ-ಪ್ರಮಿತತ್ವಂ ಚ ನ ಪಶ್ಯಾಮ ಇತ್ಯರ್ಥಃ । ಅತೋ ನೇಶ್ವರೋಽಪಿ ವಿಷಯ ಇತಿ ಭಾವಃ ।

ಬ್ರಹ್ಮನಲ್ಲಿ ವೇದರೂಪವಾದ ಪ್ರಮಾಣವನ್ನು ಹೇಳುವ ಓಂಕಾರಕ್ಕೆ 'ಸ ಏವ ಭರ್ಗ-ಶಬ್ದಾರ್ಥಃ' ಇತ್ಯಾದಿ ವ್ಯಾಖ್ಯಾನವು ಹೊರಟಿದೆ. ಇದರಿಂದ ಪರಿಹಾರವಾಗುವ ಪೂರ್ವಪಕ್ಷ-ವನ್ನು "ಕಿಂಚ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. "ತತ್ಕರಣೇನ" – ಅನುಗ್ರಹವನ್ನು ಮಾಡುವುದರಿಂದ; "ನಿಶ್ಚಿತತ್ವಾದೇವ" – ಜಿಜ್ಞಾಸೆ ಮಾಡಲು ಸಾಧ್ಯವಿಲ್ಲ ಎಂಬುದಾಗಿ ಇದಕ್ಕೆ ಅನ್ವಯ. "ನ ಚಾತ್ರ ತಥಾತ್ವಂ" – ಈಶ್ವರನ ವಿಷಯದಲ್ಲಿ ಸಾಮಾನ್ಯತಃ ಪ್ರತಿಪತ್ತಿಯು ವಿಶೇಷತಃ ಅಪ್ರತಿಪತ್ತಿಯು ಎಂಬೆರಡು ಬಗೆಯನ್ನು ಕಾಣಲು ಸಾಧ್ಯವಿಲ್ಲ ಎಂದರ್ಥ. ಆದ್ದರಿಂದ ಈಶ್ವರನೂ ಕೂಡ ಜಿಜ್ಞಾಸೆಗೆ ವಿಷಯನಾಗುವುದಿಲ್ಲ ಎಂದಭಿಪ್ರಾಯ.

ವಿವರಣೆ – ಓಂಕಾರ ಹಾಗೂ ಬ್ರಹ್ಮಶಬ್ದಗಳು ಗುಣಪೂರ್ಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ. ಇದರಿಂದ ಅಲ್ಪಗುಣವುಳ್ಳ ಜೀವನ ದೆಸೆಯಿಂದ ಬ್ರಹ್ಮನಿಗೆ ಭೇದವಿದೆ ಎಂಬುದಾಗಿ ತಿಳಿಸುತ್ತಿವೆ. ಇದರಿಂದ ಪರಿಹಾರವಾಗುವ ಪೂರ್ವಪಕ್ಷವೇನೆಂದರೆ ಬ್ರಹ್ಮನು ಜೀವನಿಗಿಂತ ಅಭಿನ್ನನಾಗಿದ್ದಾನೆ. ಇವನು ನಿತ್ಯಸಿದ್ಧನಾಗಿರುವುದರಿಂದ ಇವನ ಜಿಜ್ಞಾಸೆಯು ಅನಾವಶ್ಯಕ ಎಂದು. ಇದೇ ಓಂಕಾರವನ್ನು ವೇದವೆಂಬ ಪ್ರಮಾಣೋಕ್ತಿಪರವಾಗಿ ಮುಂದೆ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಇದರಿಂದ ಪರಿಹಾರವಾಗುವ ಪೂರ್ವಪಕ್ಷವನ್ನು "ಕಿಂಚ" ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ಹಿಂದೆ ಗೌತಮಸೂತ್ರದಲ್ಲಿ 'ಕಾರಣೋಪಪತ್ತಿತಃ' ಎಂಬಶಬ್ದವು ಪ್ರಸಕ್ತವಾಗಿತ್ತು. ಇಲ್ಲಿರುವ 'ಕಾರಣ'ಶಬ್ದಕ್ಕೆ ಪ್ರಮಾಕಾರಣ = ಪ್ರಮಾಣ ಎಂದರ್ಥ. ಉಪಪತ್ತಿತಃ ಎಂದರೆ ಅನುಗ್ರಹಕರಣೇನ ಎಂದರ್ಥ. ಪ್ರಮಾಣಗಳಿಗೆ ಅನುಗ್ರಹವನ್ನು ಮಾಡುವುದರಿಂದ ಎಂಬುದು ಒಟ್ಟು ಇದರ ಅರ್ಥ.

## ಕಿಂಚ ಈಶ್ವರೇ ಎಂಬುದರಿಂದ ಸೂಚಿತವಾದ ಪೂರ್ವಪಕ್ಷಗಳು

ಪರಿಮಳ – ಏವಂ ಓಂಕಾರಬ್ರಹ್ಮಪದವ್ಯಾಖ್ಯಾನಪರೌತತ್ವವಾಚೇತ್ಯಾದಿಸಪಾದ-ಶ್ಲೋಕದ್ವಯವ್ಯಾವರ್ತ್ಯಂ ಪ್ರಮೇಯಾರೋಪಿತಾನ್ಯಥಾಕಾರಮೂಲಚೋದ್ಯಮುಕ್ತ್ವಾ ಅಧುನಾ ಯದತಃಪದಸ್ಯ ವೇದಾನಾಂ ಸಿದ್ಧಾರ್ಥಪರತ್ವಾತ್ ಇತಿ ವ್ಯಾಖ್ಯಾನಂ ಕಾರ್ಯತಾ ಚೇತ್ಯಾದಿನಾ ಕ್ರಿಯತೇ, ಯಚ್ಚ ವೇದಸ್ಯ ಪ್ರಾಮಾಣ್ಯಮಾತ್ರಸ್ಯ ಸ್ವತಸ್ತ್ವಾದಿತಿ ವ್ಯಾಖ್ಯಾನಂ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಮ್'' ಇತ್ಯಾದಿನಾ ಕ್ರಿಯತೇ ತದುಭಯವ್ಯಾವರ್ತ್ಯಂ ಪ್ರಮಾಣೇ ಆರೋಪಿತಾನ್ಯಥಾಕಾರಮೂಲಚೋದ್ಯಂ ಕ್ರಮೇಣಾಹ – ಕಿಂಚೇಶ್ವರ ಇತ್ಯಾದಿನಾ ॥ ತತ್ಪತ್ತಿಬದ್ಧಲಿಂಗೇತಿ ॥ ಕಾರ್ಯತ್ವಾದಿಕಂ ಶಾಸ್ತ್ರಯೋನಿಸೂತ್ರೇ ನಿರಸಿಷ್ಯತ ಇತಿ ಭಾವಃ।

ಓಂ ಮತ್ತು ಬ್ರಹ್ಮಪದಗಳನ್ನು ''ಓತತ್ವವಾಚೇ'' ಇತ್ಯಾದಿ ಎರಡೂಕಾಲು ಶ್ಲೋಕವು ವ್ಯಾಖ್ಯಾನ ಮಾಡುತ್ತಿದೆ. ಇದರಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷ ಹೀಗಿದೆ – ಬ್ರಹ್ಮ ಎಂಬ ಪ್ರಮೇಯವು ವಿಷಯವಾಗುವುದಿಲ್ಲ. ಏಕೆಂದರೆ, ಬ್ರಹ್ಮನು ಜೀವನಿಗಿಂತ ಅಭಿನ್ನನಾಗಿದ್ದಾನೆ. ಮತ್ತು ಜ್ಞಾತನೂ ಕೂಡ ಆಗಿದ್ದಾನೆ ಎಂದು. ಈ ಪೂರ್ವಪಕ್ಷವು 'ಸ ಏವ ಭರ್ಗಶಬ್ದಾರ್ಥಃ' ಇತ್ಯಾದಿ ಅನುವ್ಯಾಖ್ಯಾನಶ್ಲೋಕದಿಂದ ಪರಿಹಾರವಾಗುತ್ತದೆ. ಹೀಗೆ ಪ್ರಮೇಯದಲ್ಲಿ ಅನ್ಯಥಾ-ಕಾರರೂಪವಾದ ಪೂರ್ವಪಕ್ಷವನ್ನು ಹೇಳಿ ಅನಂತರ ಪ್ರಕೃತಪ್ರಮೇಯದಲ್ಲಿ ಅನ್ಯಥಾಕಾರವನ್ನು ಆರೋಪಮಾಡಿ ತನ್ಮೂಲಕವಾಗಿ ಪ್ರಾಪ್ತವಾಗುವ ಪೂರ್ವಪಕ್ಷವನ್ನು ತಿಳಿಸುತ್ತಿದ್ದಾರೆ. ಮತ್ತು ಅತಃ ಎಂಬ ಪದಕ್ಕೆ ವೇದಗಳಿಗೆ ಸಿದ್ಧಾರ್ಥಪರತ್ವವಿರುವುದರಿಂದ ಎಂಬರ್ಥವನ್ನೂ 'ಕಾರ್ಯತಾ ಚ' ಇತ್ಯಾದಿ ಅನುವ್ಯಾಖ್ಯಾನ ಪದ್ಯದಲ್ಲಿ ಹೇಳುತ್ತಾರೆ. ಮತ್ತು ವೇದಕ್ಕೆ ಪ್ರಾಮಾಣ್ಯ ಹಾಗೂ ಪ್ರಾಮಾಣ್ಯದ ಸ್ವತಸ್ತ್ವವು ಇರುವುದರಿಂದ ಎಂಬುದಾಗಿ 'ಪ್ರತ್ಯಕ್ಷವಚ್ಚ' ಇತ್ಯಾದಿ ಶ್ಲೋಕದಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಈ ಎರಡೂ ವ್ಯಾಖ್ಯಾನಗಳಿಂದ ಪ್ರಮಾಣದಲ್ಲಿ ಕಾರ್ಯ-ಬೋಧಕತ್ವ, ಅಪ್ರಾಮಾಣ್ಯ ಹಾಗೂ ಪರತಃ ಪ್ರಾಮಾಣ್ಯ ಮೊದಲಾದ ಅನ್ಯಥಾಕಾರಗಳನ್ನು ಕಲ್ಪನೆ ಮಾಡಿ ತನ್ಮೂಲಕವಾಗಿ ಪ್ರಾಪ್ತವಾಗುವ ಪೂರ್ವಪಕ್ಷವು ಪರಿಹಾರವಾಗುತ್ತದೆ. ಇಂಥ ಪ್ರಮಾಣಾರೋಪಿತವಾದ ವಿಪರೀತಾಕಾರಮೂಲಕವಾದ ಪೂರ್ವಪಕ್ಷಗಳನ್ನು ಕ್ರಮವಾಗಿ ತೋರಿಸಲು ''ಕಿಂಚ ಈಶ್ವರೇ'' ಇತ್ಯಾದಿ ಗ್ರಂಥವು ಹೊರಟಿದೆ.

"ತತ್ತ್ರಿಬದ್ಧಲಿಂಗಾಭಾವಾತ್'' – ಈಶ್ವರನನ್ನು ನಿಶ್ಚಿತಸ್ವರೂಪದಲ್ಲಿ ಜ್ಞಾಪಿಸುವ ಲಿಂಗಗಳು ಇರುವುದಿಲ್ಲ ಎಂದರ್ಥ. ಕಾರ್ಯತ್ವ ಮೊದಲಾದ ಯುಕ್ತಿಗಳಿಂದ ಈಶ್ವರನು ತಿಳಿಯುತ್ತಾನೆಂಬುದನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿ ನಿರಾಕರಣೆ ಮಾಡುವವರಿದ್ದಾರೆ ಎಂದಭಿಪ್ರಾಯ.

ವಿವರಣೆ – ಪ್ರಮೇಯಾರೋಪಿತವಾದ ಅನ್ಯಥಾಕಾರ ಹಾಗೂ ಪ್ರಮಾಣಾರೋಪಿತವಾದ ಅನ್ಯಥಾಕಾರ ಎಂಬುದಾಗಿ ಎರಡು ಕ್ರಮಗಳಿವೆ. ಬ್ರಹ್ಮನಲ್ಲಿ ಆರೋಪಿತವಾದದ್ದು ಜೀವಾಭೇದ. ಪ್ರಮೇಯನಾದ ಬ್ರಹ್ಮನಲ್ಲಿ ಆರೋಪಿತವಾದ ಅನ್ಯಥಾಕಾರ ಎಂದರೆ ಜೀವಾಭೇದ. ಆ ಜೀವನು ನಿಶ್ಚಿತನಾಗಿರುವುದರಿಂದ ಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಇದನ್ನು ಪ್ರಮೇಯಾರೋಪಿತವಾದ ಅನ್ಯಥಾಕಾರದ ಚೋದ್ಯವೆಂದು ಕರೆಯುತ್ತಾರೆ.

ಪ್ರಮಾಣವೆಂದರೆ ವೇದ. ವೇದದಿಂದ ಆರೋಪಿತವಾದ ಅನ್ಯಥಾಕಾರವೆಂದರೆ ಕಾರ್ಯಪರತ್ವ ಹಾಗೂ ಅಪ್ರಾಮಾಣ್ಯ . ಈ ಅನ್ಯಥಾಕಾರಮೂಲವಾದ ಚೋದ್ಯವನ್ನು ಮುಂದೆ ಹೇಳುವವರಿದ್ದಾರೆ. 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿಯಾದ ಎರಡೂಕಾಲು ಶ್ಲೋಕದಿಂದ ಪರಿಹಾರವಾಗುವ ಪ್ರಮೇಯಾರೋಪಿತ ಅನ್ಯಥಾಕಾರ ಪೂರ್ವಪಕ್ಷವನ್ನು ಇಲ್ಲಿಯ ತನಕ ಹೇಳಿದ್ದಾಯಿತು. ಮುಂದೆ ಅತಃಶಬ್ದಕ್ಕೆ ವ್ಯಾಖ್ಯಾನ ಮಾಡುವಾಗ 'ವೇದಾನಾಂ ಸಿದ್ಧಪರತ್ವಾತ್' ಮತ್ತು 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಇತ್ಯಾದಿ ವಾಕ್ಯಗಳಿಂದ ಯಾವ ವೇದಪ್ರಾಮಾಣ್ಯವನ್ನು ಸಮರ್ಥಿಸುತ್ತಾರೋ ಇದರಿಂದ ಪ್ರಮಾಣಾರೋಪಿತವಾದ ಅನ್ಯಥಾಕಾರವು ಪರಿಹಾರವಾಗುತ್ತದೆ.

## ಎಲ್ಲವೂ ವೇದವನ್ನೇ ಅವಲಂಬಿಸಿವೆ

ಪರಿಮಳ – ಕಾರ್ಯೇತಿ ॥ ಪ್ರಾಭಾಕರರೀತ್ಯಾ ಯಾಗಾದಿಜನ್ಯಾಪೂರ್ವಲಕ್ಷಣಕಾರ್ಯಪರ ಇತ್ಯರ್ಥಃ । ತತ್ಪರತ್ವಪ್ರಕಾರಶ್ಚ ಕಾರ್ಯತಾ ಚ ಇತ್ಯೇತದವತಾರಿಕಾಯಾಮಗ್ರೇ ಸ್ಫುಟೀಕರಿಷ್ಯತ ಇತಿ ಭಾವಃ । ನ ಚಾನ್ಯತ್ ಪ್ರಮಾಣಮಿತಿ ಪಾಶುಪತಾದಿಕಂ ತು ನ ಪ್ರಮಾಣಮಿತಿ ಭಾವಃ ॥ ಪಾರತಂತ್ರ್ಯಾಚ್ಚೇತಿ ॥ ವೇದಮೂಲಪಂಚರಾತ್ರಾದೇರ್ವೇದಪ್ರಾಮಾಣ್ಯಪರತಂತ್ರತ್ವಾದಿತ್ಯರ್ಥಃ । ಕಾರಣೇತಿ ॥ ಆಪ್ತೋಕ್ತತ್ವಲಕ್ಷಣಗುಣರೂಪಪ್ರಾಮಾಣ್ಯಕಾರಣಭಾವೇನೇತ್ಯರ್ಥಃ । ಪೌರುಷೇಯತ್ವೇಽಪಿ ಅವಿಪ್ರಲಂಭಸ್ತಜ್ಞಾನಮ್ ಇತಿ ವಕ್ಷ್ಯಮಾಣದಿಶಾಽಽಪ್ತಸಂಭವಾತ್ ಇತಿ ಭಾವಃ ।

''ಕಾರ್ಯೇತಿ'' – ಪ್ರಾಭಾಕರರು ಹೇಳುವಂತೆ ಯಾಗಾದಿಗಳಿಂದ ಜನ್ಯವಾದ ಅಪೂರ್ವವೆಂಬ ಕಾರ್ಯವು ಎಂಬುದು ಇದರ ಅರ್ಥ. ಅರ್ಥಾತ್ ಯಾಗಾದಿಗಳಿಂದ ಅದೃಷ್ಟವೆಂಬ ಕಾರ್ಯವಾಗುತ್ತದೆ. ಇದನ್ನು ತಿಳಿಸಲು ವೇದವು ಹೊರಟಿದೆ ಎಂಬುದು ಪ್ರಾಭಾಕರರ ಅಭಿಪ್ರಾಯ. ಇವರ ಮತವನ್ನು ಅನುಸರಿಸಿ ಈ ವಾಕ್ಯವು ಹೊರಟಿದೆ. ವೇದವು ಯಾಗಾದಿಕ್ರಿಯಾಭಾವ್ಯವಾದ ಕಾರ್ಯಗಳನ್ನಷ್ಟೇ ಪ್ರತಿಪಾದನೆ ಮಾಡುತ್ತದೆ. ಇದರ ಬಗ್ಗೆ ''ಕಾರ್ಯತಾ ಚ'' ಎಂಬ ಅನುವ್ಯಾಖ್ಯಾನಕ್ಕೆ ಅವತಾರಿಕೆ ನೀಡುವ ಸಂದರ್ಭದಲ್ಲಿ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾರೆ.

''ನ ಚ ಅನ್ಯತ್ ಪ್ರಮಾಣಂ'' – ವೇದವಿರುದ್ಧವಾದ ಪಾಶುಪತ ಮೊದಲಾದ ಆಗಮಗಳು ಪ್ರಮಾಣವಾಗುವುದಿಲ್ಲವೆಂಬುದು ಅಭಿಪ್ರಾಯ. ''ಪಾರತಂತ್ರ್ಯಾಚ್ಚ'' – ವೇದ ಮೂಲಕವಾಗಿರುವ ಪಂಚರಾತ್ರಾದ್ಯಾಗಮಗಳು ವೇದಪ್ರಾಮಾಣ್ಯವನ್ನು ಅವಲಂಬಿಸಿ ಪ್ರಮಾಣವಾಗಿವೆ ಎಂದರ್ಥ. ''ಕಾರಣಾಭಾವೇನ'' ಪ್ರಾಮಾಣ್ಯವು ಬರಬೇಕೆಂದರೆ ಆಪ್ತೋಕ್ತತ್ವವೆಂಬ ಕಾರಣವಿರಬೇಕು. ಇಂಥ ಕಾರಣವು ಇಲ್ಲದೇ ಇರುವುದರಿಂದ ಎಂದರ್ಥ. ವೇದವು ಅಪೌರುಷೇಯವಾಗಿದೆ ಎಂಬುದಾಗಿ ಹೇಳಿದರೆ 'ಅವಿಪ್ರಲಂಭಸ್ತತ್ಜ್ಞಾನಂ' ಎಂಬ ಅನುವ್ಯಾಖ್ಯಾನದಲ್ಲಿ ಮುಂದೆ ಹೇಳುವಂತೆ ಗೌರವದೋಷವು ಬರುತ್ತದೆ. ಆದ್ದರಿಂದ ಆಪ್ತೋಕ್ತತ್ವ ಮೊದಲಾದ ಪ್ರಾಮಾಣ್ಯಕ್ಕೆ ಯಾವ ಕಾರಣಗಳಿವೆಯೋ ಅವುಗಳು ಅಸಂಭಾವಿತಗಳಾಗಿವೆ ಎಂದರ್ಥ.

## ಮುಂದಿನ ಅನುವ್ಯಾಖ್ಯಾನಪದ್ಯಗಳಿಂದ ಪರಿಹಾರವಾಗುವ ಪೂರ್ವಪಕ್ಷಗಳು

ಪರಿಮಳ– 'ಅಪ್ರಾಮಾಣ್ಯಂ ತಥಾऽನ್ಯತಃ' ಇತ್ಯೇತದ್ ವ್ಯಾವರ್ತ್ಯಮಾಹ – ಸ್ವತ ಇತಿ ॥ ಗುಣಮನಪೇಕ್ಷ್ಯ ಜ್ಞಾನಜನಕಾದೇವ ಪ್ರಾಮಾಣ್ಯಜನ್ಮಾಂಗೀಕಾರ ಇತ್ಯರ್ಥಃ । ಅರ್ಥಸಂಸ್ಪರ್ಶಶೂನ್ಯತ್ವಾದಿತಿ ॥ ಏತಚ್ಚ 'ಪ್ರತ್ಯಕ್ಷವಚ್ಚ' ಇತ್ಯತ್ರ ವ್ಯಕ್ತೀಕರಿಷ್ಯಾಮ ಇತಿ ಭಾವಃ । 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಇತ್ಯಾದಿನಾ ಅತಃಪದಸ್ಯ ಅನ್ವಿತಾಭಿಧಾಯಕತ್ವಾದಿತಿ ವ್ಯಾಖ್ಯಾ ಕ್ರಿಯತೇ । ತದ್ ವ್ಯಾವರ್ತ್ಯಮಾಹ – ವಾಕ್ಯಾರ್ಥೇತಿ ॥ ಏತದಪಿ ಶಕ್ತಿಶ್ಚೈವಾನ್ವಿತೇ ಸ್ವಾರ್ಥ ಇತ್ಯೇತದವತಾರಿಕಾಯಾಂ ವ್ಯಕ್ತೀಭವಿಷ್ಯತಿ ।

''ಅಪ್ರಾಮಾಣ್ಯಂ ತಥಾಽನ್ಯತಃ'' ಎಂಬ ಅನುವ್ಯಾಖ್ಯಾನದ ಮಾತಿನಿಂದ ನಿವಾರಣೆಯಾಗುವ ಪೂರ್ವಪಕ್ಷವನ್ನು 'ಸ್ವತಃ ಪ್ರಾಮಾಣ್ಯಾಂಗೀಕಾರೇ'' ಎಂಬ ವಾಕ್ಯದಿಂದ ಉಪಸ್ಥಾಪನೆ ಮಾಡುತ್ತಿದ್ದಾರೆ. ಆಪ್ತೋಕ್ತತ್ವವೆಂಬ ಗುಣವಿದ್ದರೂ ಕೂಡ ಜ್ಞಾನಜನಕವಾದ ಇಂದ್ರಿಯಾದಿ ಸಾಮಗ್ರಿಗಳಿಂದಲೇ ಪ್ರಾಮಾಣ್ಯವು ಹುಟ್ಟುತ್ತದೆಂದು ಅಂಗೀಕಾರ ಮಾಡಿದರೆ ಎಂದರ್ಥ. ''ಅರ್ಥಸಂಸ್ಪರ್ಶಶೂನ್ಯತ್ವಾತ್'' – 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಎಂಬ ಅನುವ್ಯಾಖ್ಯಾನಪದ್ಯಕ್ಕೆ ವ್ಯಾಖ್ಯಾನಮಾಡುವ ಪ್ರಸಂಗದಲ್ಲಿ ಶಬ್ದಕ್ಕೆ ಅರ್ಥಸಂಬಂಧವಿಲ್ಲವೆಂಬುದನ್ನು ಕಾರಣಪುರಸ್ಸರವಾಗಿ ಗ್ರಂಥಕಾರರೇ ನಿರೂಪಣೆ ಮಾಡುವವರಿದ್ದಾರೆ ಎಂದು ತಿಳಿಯಬೇಕು. 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಇತ್ಯಾದಿ ಪದ್ಯದಿಂದ ಅತಃ ಎಂಬ ಪದಕ್ಕೆ 'ಅನ್ವಿತಾಭಿಧಾಯಿಕತ್ವಾತ್' ಅನ್ವಿತವಾದ ಅರ್ಥವನ್ನು ಹೇಳುವುದರಿಂದ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನದಿಂದ ಯಾವ ಪೂರ್ವಪಕ್ಷವು ಪರಿಹಾರವಾಗುತ್ತದೋ ಅದನ್ನು 'ವಾಕ್ಯಾರ್ಥಪ್ರತ್ಯಾಯನಪ್ರಕಾರಾನಿರೂಪಣಾಚ್ಚ' ಎಂಬುದರಿಂದ ಉಪಸ್ಥಾಪನೆ ಮಾಡುತ್ತಿದ್ದಾರೆ. 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಎಂಬ ಅನುವ್ಯಾಖ್ಯಾನಕ್ಕೆ ಅವತಾರಿಕೆಯನ್ನು ನೀಡುವಾಗ ಈ ಪೂರ್ವಪಕ್ಷವನ್ನು ಮತ್ತಷ್ಟು ವಿವರಿಸುತ್ತಾರೆ.

## ಸಂಬಂಧಾಭಾವಪೂರ್ವಪಕ್ಷ

ವಾಕ್ಯಾರ್ಥಚಂದ್ರಿಕಾ – ಏವಮ್ ಓಂಕಾರಬ್ರಹ್ಮಶಬ್ದಾಭ್ಯಾಂ ಸಾಕ್ಷಾನ್ನಿವರ್ತ್ಯಂ ವಿಷಯಾಭಾವಪ್ರಯುಕ್ತಜಿಜ್ಞಾಸಾಽಸಂಭವಪೂರ್ವಪಕ್ಷಮಭಿಧಾಯ ನನು ಯೌಗಿಕೋಂಕಾರಬ್ರಹ್ಮಶಬ್ದಪ್ರಯೋಗಾನ್ಯಥಾಽನುಪಪತ್ತಿಪ್ರಮಾಣಕತ್ವೇನ ಅಪೂರ್ವಾರ್ಥಕಲ್ಪನಾಭಾವಾತ್ ಕ್ವಚಿನ್ಮುಖ್ಯಸ್ಯೈವ ಶಬ್ದಸ್ಯ ಕ್ವಚಿದಮುಖ್ಯತ್ವೇನ ಸರ್ವಥಾಽಮುಖ್ಯಾರ್ಥಶಬ್ದಾಭಾವಾತ್ ಮುಖ್ಯಾರ್ಥೇ ಚ ತಾದೃಶೇ ವಸ್ತುನಿ ಸ್ವೀಕೃತೇ ತಚ್ಛಬ್ದಾನಾಂ ತದ್ವಿಷಯತ್ವಾಂಗೀಕಾರೇ ಗೌರವಾಖ್ಯಬಾಧಕಾಭಾವಾಚ್ಚ ನೇಯಮನುಪಪತ್ತಿರಿತ್ಯತೋ ವ್ಯಾಹೃತೀನಾಂ ಚ ಇತ್ಯಾದ್ಯನುವ್ಯಾಖ್ಯಾನೋಪಪಾದಿತೋಂಕಾರಪ್ರಯೋಕ್ತೃಸೂತ್ರಕೃದಭಿಪ್ರೇತಾರ್ಥನಿವರ್ತ್ಯಂ ತಥಾಽಪಿ ನ ಜಿಜ್ಞಾಸಾಸಂಭವೋಽನುಗ್ರಾಹ್ಯಪ್ರಮಾಣಾಭಾವೇನ ಶಾಸ್ತ್ರಸ್ಯ ವಿಷಯಸಂಬಂಧಾಭಾವಾದಿತ್ಯೇವಂರೂಪಂ ಪೂರ್ವಪಕ್ಷಂ ದರ್ಶಯತಿ – ಕಿಂಚೇತಿ ॥

ಇಲ್ಲಿಯ ತನಕ ಓಂಕಾರ ಮತ್ತು ಬ್ರಹ್ಮಶಬ್ದಗಳಿಂದ ಸಾಕ್ಷಾತ್ತಾಗಿ ಪರಿಹಾರವಾಗುವ ವಿಷಯಾಭಾವಪ್ರಯುಕ್ತವಾದ ಜಿಜ್ಞಾಸಾಸಂಭವಪೂರ್ವಪಕ್ಷವನ್ನು ಹೇಳಿದ್ದಾಯಿತು. ಪ್ರಕೃತ ಓಂಕಾರವನ್ನು ಪ್ರಯೋಗ ಮಾಡಿದ ಸೂತ್ರಕಾರರಿಗೆ ಅಭಿಪ್ರೇತವಾದ ಓಂಕಾರಾರ್ಥದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ– ಸೂತ್ರಕಾರರು ಓಂಕಾರ ಮತ್ತು ಬ್ರಹ್ಮಶಬ್ದಗಳನ್ನು ಪ್ರಯೋಗ ಮಾಡಿದ್ದಾರೆ. ಇವೆರಡೂ ಕೂಡ ಯೌಗಿಕವಾದ ಶಬ್ದಗಳಾಗಿವೆ. ಇವುಗಳ ಅನ್ಯಥಾನುಪಪತ್ತಿಯಿಂದ ಅಪೂರ್ವಾರ್ಥವನ್ನು ಕಲ್ಪನೆ ಮಾಡಬೇಕು. ಅಪೂರ್ವಾರ್ಥವನ್ನು ಕಲ್ಪನೆ ಮಾಡದೇ ಪ್ರತ್ಯಕ್ಷಸಿದ್ಧನಾದ ಜೀವನಲ್ಲಿ ಓಂಕಾರ ಮತ್ತು ಬ್ರಹ್ಮಶಬ್ದಗಳಿಗೆ ಅಮುಖ್ಯಾರ್ಥವನ್ನು ಕಲ್ಪನೆ ಮಾಡಿಯೇ ಈ ಶಬ್ದಪ್ರಯೋಗಗಳನ್ನು ಕೂಡಿಸಬಹುದು. ಯೌಗಿಕವೆಂದೂ ಕೂಡ ಉಪಪಾದಿಸಬಹುದು. ಅಪೂರ್ವಾರ್ಥವನ್ನೇಕೆ ಕಲ್ಪನೆ ಮಾಡಬೇಕು? ಎಂಬ ಪ್ರಶ್ನೆ ತಪ್ಪು. ಏಕೆಂದರೆ ಮುಖ್ಯಾರ್ಥವಾದ ವಸ್ತುವೊಂದನ್ನು ಸ್ವೀಕರಿಸಿದರೆ ಮಾತ್ರ ಆ ಶಬ್ದಗಳಿಗೆ ಅಮುಖ್ಯಾರ್ಥವನ್ನು ಕಲ್ಪನೆ ಮಾಡಲು ಸಾಧ್ಯವಾಗುತ್ತದೆ. ಮುಖ್ಯಾರ್ಥವೇ ಇಲ್ಲದಿದ್ದಾಗ ನೇರವಾಗಿ ಅಮುಖ್ಯಾರ್ಥವನ್ನು ಕಲ್ಪನೆ ಮಾಡಿದರೆ ಗೌರವದೋಷವು ಬರುತ್ತದೆ. ಆದ್ದರಿಂದ ಅಪೂರ್ವವಾದ ಅರ್ಥವನ್ನು ಓಂಕಾರ ಮತ್ತು ಬ್ರಹ್ಮಶಬ್ದಗಳಿಗೆ ಅಂಗೀಕಾರ ಮಾಡಿದಾಗ ಗೌರವವೆಂಬ ಬಾಧಕವು ಕೂಡ ಇರುವುದಿಲ್ಲ. ಆದ್ದರಿಂದ ವಿಷಯವಿಲ್ಲವೆಂಬ ಪೂರ್ವಪಕ್ಷವು ಅನುಪಪನ್ನವಾಗಿದೆ. ಈಶ್ವರವಿಷಯತ್ವವನ್ನು ಅಂಗೀಕಾರ ಮಾಡಿದರೆ ಯಾವುದೇ ಅನುಪಪತ್ತಿಯು ಇರುವುದಿಲ್ಲ?

ಈ ಪ್ರಶ್ನೆಗೆ ''ವ್ಯಾಹೃತೀನಾಂ ಚ'' ಇತ್ಯಾದಿ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನಮಾಡಲ್ಪಟ್ಟ ಓಂಕಾರವನ್ನು ಪ್ರಯೋಗ ಮಾಡಿದ ಸೂತ್ರಕಾರರಿಗೆ ಅಭಿಪ್ರೇತವಾದ ಯಾವ ಅರ್ಥವಿದೆಯೋ ಅದರಿಂದ ನಿವರ್ತ್ಯವಾಗುವ ಪೂರ್ವಪಕ್ಷವನ್ನು ''ಕಿಂಚ'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಮೇಲೆ ಹೇಳಿದಂತೆ ಒಪ್ಪಿದರೂ ಕೂಡ ಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಏಕೆಂದರೆ ಅನುಗ್ರಾಹ್ಯವಾದ ಪ್ರಮಾಣವೇ ಇಲ್ಲದಿರುವುದರಿಂದ ಶಾಸ್ತ್ರಕ್ಕೆ ವಿಷಯಸಂಬಂಧಗಳು ಇರುವುದಿಲ್ಲ. ಹೀಗೆ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ.

ಮೀಮಾಂಸಾಶಾಸ್ತ್ರಕ್ಕೆ ಬ್ರಹ್ಮನು ವಿಷಯನಾಗಬೇಕಾದರೆ ಬ್ರಹ್ಮವಿಷಯಕವಾದ ಯಾವುದಾದರೂ ಒಂದು ಪ್ರಮಾಣಕ್ಕೆ ಈ ಮೀಮಾಂಸೆಯು ಅನುಗ್ರಾಹಕವಾಗಬೇಕು. ಆಗ ಮಾತ್ರ ಶಾಸ್ತ್ರಕ್ಕೂ ವಿಷಯಕ್ಕೂ ಸಂಬಂಧವು ಪ್ರಾಪ್ತವಾಗುತ್ತದೆ. ಶಾಸ್ತ್ರಕ್ಕೂ ಬ್ರಹ್ಮನಿಗೂ ಸರ್ವಾಧಿಕಾರಿಕವಾದ ಸಂಬಂಧವು ಏನೆಂದರೆ 'ತತ್ಪ್ರತಿಪಾದಕಪ್ರಮಾಣಾನುಗ್ರಾಹಕತ್ವ'. ಅನುಗ್ರಾಹ್ಯಪ್ರಮಾಣವು ಇಲ್ಲದಿದ್ದರೆ ಈ ಸಂಬಂಧವನ್ನು

ಹೇಳಲು ಸಾಧ್ಯವಾಗುವುದಿಲ್ಲ. ಹೀಗೆ ವಿಷಯವಿದ್ದರೂ ಕೂಡ ಸಂಬಂಧವು ಇಲ್ಲದಿದ್ದರೆ ಅನುಬಂಧ-ಚತುಷ್ಟಯಗಳಲ್ಲಿ ಸಂಬಂಧವೆಂಬುದು ಇಲ್ಲದ ಕಾರಣ ಗ್ರಂಥವು ಅನಾರಂಭಣೀಯವಾಗುತ್ತದೆಂಬುದಾಗಿ ಇಲ್ಲಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ.

ವಿವರಣೆ – ಜಿಜ್ಞಾಸೆಗೆ ವಿಷಯವೇ ಇರುವುದಿಲ್ಲ. ವಿಷಯನಾಗುವುದಾದರೆ ಈಶ್ವರನಾಗಬೇಕು. ಅವನು ಜೀವನೇ ಆಗಿರುವುದರಿಂದ ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಈಶ್ವರನೂ ಕೂಡ ವಿಷಯನಾಗುವುದಿಲ್ಲವೆಂದು ಹೇಳಿದ್ದಾಯಿತು.

ಈಶ್ವರಶಬ್ದಕ್ಕೆ ಕ್ಲೃಪ್ತನಾದ ಜೀವನೆಂಬರ್ಥವನ್ನು ಹೇಳಲು ಬರುತ್ತಿರುವಾಗ ಈಶ್ವರನನ್ನು ಕಲ್ಪನೆ ಮಾಡುವುದು ಗೌರವದೋಷಗ್ರಸ್ತವಾಗಿದೆ ಎಂಬುದಾಗಿ ಈ ಹಿಂದೆ ಹೇಳಲಾಗಿತ್ತು. ಆದರೆ ಇದು ತಪ್ಪು. ಏಕೆಂದರೆ ಓಂ ಮತ್ತು ಬ್ರಹ್ಮಶಬ್ದಗಳನ್ನು ಸೂತ್ರದಲ್ಲಿ ಪ್ರಯೋಗಿಸಿದ್ದಾರೆ. ಶ್ರುತಿಗಳಲ್ಲಿ ಇದೇ ಓಂಕಾರ ಮತ್ತು ಬ್ರಹ್ಮಶಬ್ದಗಳು ಜಿಜ್ಞಾಸ್ಯವಾದ ವಸ್ತುವಿನಲ್ಲಿ ಪ್ರಯೋಗಿಸಲ್ಪಟ್ಟವೆ – 'ಓಮಿತ್ಯೇತದಕ್ಷರ-ಮುದ್ಗೀಥಮುಪಾಸೀತ' 'ತದ್ವಿಜಿಜ್ಞಾಸಸ್ವ' ಇವೇ ಮೊದಲಾದ ಶ್ರುತಿಗಳ ಅನ್ಯಥಾನುಪಪತ್ತಿಯಿಂದ ಅಪೂರ್ವಾರ್ಥವನ್ನು ಕಲ್ಪನೆ ಮಾಡಿದರೆ ಕಲ್ಪನಾಗೌರವದೋಷವು ಬರುವುದಿಲ್ಲ. ಜೀವನನ್ನು ಏತಚ್ಛಬ್ದಗಳಿಂದ ಪ್ರತಿಪಾದ್ಯನೆಂದು ಹೇಳದೇ ಅಪೂರ್ವವಾದ ಅರ್ಥವನ್ನು ಕಲ್ಪನೆ ಮಾಡುವುದಕ್ಕೆ ಯೌಗಿಕಶಬ್ದದ ಅನ್ಯಥಾನುಪಪತ್ತಿಯೇ ಪ್ರಮಾಣವಾಗಿದೆ. ಶ್ರುತಿಯಲ್ಲಿ ಎಲ್ಲೆಡೆಯೂ ಕೇವಲ ಈಶ್ವರ ಎಂಬ ಶಬ್ದವನ್ನು ಪ್ರಯೋಗ ಮಾಡದೇ 'ಓಂ' 'ಬ್ರಹ್ಮ' 'ಆತ್ಮಾ' ಮೊದಲಾದ ಯೌಗಿಕಶಬ್ದಗಳನ್ನು ಪ್ರಯೋಗ ಮಾಡಿರುವುದರಿಂದಲೇ ಜೀವಾತಿರಿಕ್ತನಾದ ಅಪೂರ್ವಾರ್ಥವು ಸಿದ್ಧವಾಗುತ್ತದೆ.

ಜಿಜ್ಞಾಸ್ಯನಲ್ಲಿ ಪ್ರಯೋಗಮಾಡಲ್ಪಟ್ಟ ಓಂ ಮೊದಲಾದ ಯಾವುದೇ ಶಬ್ದಗಳಿದ್ದರೂ ಕೂಡ ಅವುಗಳ ಯೌಗಿಕಾರ್ಥವನ್ನು ಜೀವನಲ್ಲಿ ಉಪಪಾದನೆ ಮಾಡಬಹುದು.

ಇದು ತಪ್ಪು. ಯೌಗಿಕವಾದ ಓಂ ಬ್ರಹ್ಮ ಮೊದಲಾದ ಶಬ್ದಗಳಿಗೆ ಜೀವನಲ್ಲಿ ನೀವು ಅಮು-ಖ್ಯಾರ್ಥವನ್ನೇ ಹೇಳಬೇಕು. ಯಾವುದೇ ಒಂದು ಶಬ್ದ ಅಮುಖ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡಬೇಕಾದರೆ ಎಲ್ಲಿಯಾದರೋ ಒಂದು ಕಡೆ ಮುಖ್ಯಾರ್ಥವನ್ನು ಪ್ರತಿಪಾದನೆ ಮಾಡಲೇಬೇಕು. ಒಂದು ಕಡೆ ಆ ಶಬ್ದಕ್ಕೆ ಮುಖ್ಯಾರ್ಥವನ್ನು ಒಪ್ಪಿದ ಮೇಲೆ ಆ ಮುಖ್ಯಾರ್ಥವನ್ನೇ ಸ್ವೀಕರಿಸಲು ಬರು-ವಾಗ ಅಮುಖ್ಯಾರ್ಥವನ್ನು ಶ್ರುತಿಗೆ ಒಪ್ಪುವ ಅವಶ್ಯಕತೆಯು ಇರುವುದಿಲ್ಲ. ಈಶ್ವರಪರತ್ವವನ್ನು ಒಪ್ಪುವ ನಮಗೆ ಗೌರವದೋಷ ಬರಲು ಸಾಧ್ಯವೇ ಇಲ್ಲ.

ಹಿಂದಿನ ಪೂರ್ವಪಕ್ಷದ ಮೇಲೆ ಈ ಉತ್ತರವನ್ನು ಮುಂದೆ ಗ್ರಂಥಕಾರರೇ ಹೇಳುವವರಿದ್ದಾರೆ. ಇದನ್ನು ವಾಕ್ಯಾರ್ಥಚಂದ್ರಿಕಾಕಾರರು ಸಂಗ್ರಹಮಾಡಿ ಶಿಷ್ಯರ ಬುದ್ಧಿಗೆ ಅನುಕೂಲವಾಗುವುದಕ್ಕಾಗಿ ಇಲ್ಲಿ ಹೇಳಿದ್ದಾರೆ.

ಇದರ ಮೇಲೆ ಪೂರ್ವಪಕ್ಷಿಗಳ ಸಮರ್ಥನೆ ಹೀಗಿದೆ – ವ್ಯಾಹೃತೀನಾಂ ಚ ಭೂಮತಃ ಇತ್ಯಾದಿಯಾಗಿ ಹೇಳಿದಂತೆ ಅನುಗ್ರಾಹ್ಯಪ್ರಮಾಣವನ್ನು ಸೂತ್ರಕಾರರು 'ಓಂ' ಎಂಬುದಾಗಿ ಹೇಳಿದ್ದಾರೆ. ಇದರಿಂದ ನಿವರ್ತ್ಯವಾಗುವ ಪೂರ್ವಪಕ್ಷವನ್ನು ಇಲ್ಲಿ ತೋರಿಸುತ್ತಿದ್ದಾರೆ. ಸೂತ್ರಕಾರರು ಬ್ರಹ್ಮನಲ್ಲಿ ಓಂಕಾರವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ಸಮಗ್ರವೇದವು ಬ್ರಹ್ಮಪರವೆಂದು ಸಿದ್ಧವಾಗುತ್ತದೆ. ಓಂಕಾರದ ವ್ಯಾಖ್ಯಾನವಾದ ವ್ಯಾಹೃತಿ, ಅದರ ವ್ಯಾಖ್ಯಾನವಾದ ಗಾಯತ್ರೀ, ಅದರ ವ್ಯಾಖ್ಯಾನವಾದ ಪುರುಷಸೂಕ್ತ, ಅದರ ವ್ಯಾಖ್ಯಾನವಾದ ವೇದಗಳು ಬ್ರಹ್ಮಪರವಾಗಿವೆ ಎಂದು ಸಮರ್ಥಿಸಿದ್ದಾರೆ. ಹೀಗೆ ಓಂಕಾರದಿಂದ ನಿವೃತ್ತಿಯಾಗುವ ಪೂರ್ವಪಕ್ಷವನ್ನು ಇಲ್ಲಿ ''ಕಿಂಚ'' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

## ಸ್ವನ್ಯಾಯವಿರೋಧದ ಪರಿಹಾರ

ವಾಕ್ಯಾರ್ಥಚಂದ್ರಿಕಾ – ಇತ್ಯರ್ಥ ಇತಿ ॥ ಇದಂ ಚ ಪೂರ್ವೋಕ್ತಾತ್ ಸೂತ್ರಸ್ಯಾರ್ಥಾಂತರಮಿತಿ ದ್ರಷ್ಟವ್ಯಮ್ । ಪ್ರಮಿತತ್ವಾಪ್ರಮಿತತ್ವಯೋರೀಶ್ವರಸ್ಯ ಬಾಧಕತಯಾ ತ್ವಯೋಚ್ಯಮಾನಸ್ಯಾಪಿ ತರ್ಕತ್ವಾತ್ ತದ್ವಿಷಯಸ್ಯಾಪ್ರಮಿತತ್ವೇ ಬುದ್ಧ್ಯನಾರೂಢವಿಷಯಕತ್ವೇನ ಪ್ರಮಿತತ್ವೇ ತು ನಿಶ್ಚಿತವಿಷಯಕತ್ವೇನ ತರ್ಕತ್ವಾನುಪಪತ್ತಿರೂಪತರ್ಕಸಾಮಾನ್ಯದೂಷಣಸ್ಯ ತತ್ರಾಪಿ ಆಪತ್ತ್ಯಾ ತರ್ಕಸಾಮಾನ್ಯಂ ತರ್ಕೇಣ ನಿರಾಕುರ್ವತೋ ವ್ಯಾಘಾತ ಇತ್ಯಾಶಂಕ್ಯ ನಿಷೇಧತಿ – ನ ಚೈವಮಿತಿ ॥

''ಇತ್ಯರ್ಥಃ'' – ಇಲ್ಲಿ ಹೇಳಿದ ನ್ಯಾಯಸೂತ್ರದ ಅರ್ಥವು ಹಿಂದೆ ಹೇಳಿದ ಅರ್ಥಕ್ಕಿಂತ ಬೇರೆಯೇ ಆಗಿದೆ. ಪ್ರಮಿತತ್ವಾಪ್ರಮಿತತ್ವಪಕ್ಷಗಳ ಮೂಲಕ ಈಶ್ವರನಿಗೆ ಯಾವುದನ್ನು ಬಾಧಕವನ್ನಾಗಿ ನೀನು ಹೇಳುತ್ತಿರುವಿಯೋ ಅದೂ ಕೂಡ ತರ್ಕವೇ ಆಗಿದೆ. ಈ ತರ್ಕಕ್ಕೆ ವಿಷಯವಾದದ್ದು ಅಪ್ರಮಿತವಾದರೆ ಬುದ್ಧ್ಯನಾರೂಢವಿಷಯಕವಾಗುತ್ತದೆ. ಪ್ರಮಿತವಾದರೆ ನಿಶ್ಚಿತವಿಷಯವಾಗುವುದರಿಂದ ತರ್ಕತ್ವವು ಅನುಪಪನ್ನವಾಗುತ್ತದೆ. ಹೀಗೆ ತರ್ಕಸಾಮಾನ್ಯದೂಷಣವು ನಿನ್ನ ತರ್ಕಕ್ಕೂ ಕೂಡ ಸಮಾನವಾಗಿ ಪ್ರಾಪ್ತವಾಗುವುದರಿಂದ ತರ್ಕಸಾಮಾನ್ಯವನ್ನು ತರ್ಕದಿಂದ ನಿರಾಕರಣೆ ಮಾಡಲು ಹೊರಟಿರುವ

ನಿನಗೆ ಸ್ವನ್ಯಾಯವಿರೋಧವೆಂಬ ವ್ಯಾಘಾತದೋಷವು ಬರುತ್ತದೆ. ಈ ಆಶಂಕೆಯನ್ನು 'ನ ಚೈವಂ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

ವಿವರಣೆ – ''ಕಾರಣೋಪಪತ್ತಿತಃ'' ಎಂಬುದಕ್ಕೆ ಹಿಂದೆ ಗೌತಮಸೂತ್ರವನ್ನು ಉಲ್ಲೇಖ ಮಾಡಿದಾಗ ಯಾವ ಅರ್ಥವನ್ನು ಹೇಳಿದ್ದರೋ ಆ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಗ್ರಂಥದಲ್ಲಿ ಹೇಳುತ್ತಿದ್ದಾರೆ. 'ಗೌತಮಸೂತ್ರಕ್ಕೆ ಅನೇಕಾರ್ಥಗಳಿವೆ; ಹಿಂದೆ ಹೇಳಿದ ಅರ್ಥವೇ ಬೇರೆ ಈಗ ಹೇಳುತ್ತಿರುವ ಅರ್ಥವೇ ಬೇರೆ' ಎಂಬುದಾಗಿ ತಿಳಿದುಕೊಳ್ಳಬೇಕು.

'ಈಶ್ವರನು ಪ್ರಮಿತನಾದರೆ ನಿಶ್ಚಿತತ್ವಾದೇವ ವಿಚಾರಕ್ಕೆ ವಿಷಯನಾಗುವುದಿಲ್ಲ. ಅಪ್ರಮಿತನಾದರೆ ಬುದ್ಧ್ಯನಾರೂಢನಾಗುವುದರಿಂದಲೇ ವಿಚಾರಕ್ಕೆ ವಿಷಯನಾಗುವುದಿಲ್ಲ' ಎಂಬ ಯಾವ ಬಾಧಕವಿದೆಯೋ ಇದೂ ಕೂಡ ತರ್ಕವೇ ಆಗಿದೆ. ಈ ವಿಕಲ್ಪವನ್ನು ಎಲ್ಲಾ ತರ್ಕದಲ್ಲೂ ಮಾಡಬಹುದಾದ್ದರಿಂದ ನೀವು ಹೇಳಿದ ತರ್ಕದಿಂದ ಈ ಪ್ರಮಿತತ್ವಾಪ್ರಮಿತತ್ವಗಳ ಮೂಲಕ ಹೇಳುವ ಬಾಧಕವು ಸಮಾನವಾಗಿದೆ. ಆದ್ದರಿಂದ ನಿನಗೆ ಸ್ವನ್ಯಾಯವಿರೋಧವು ಬರುತ್ತದೆ.

## ತರ್ಕವಿಷಯತ್ವಕ್ಕೆ ಪ್ರಯೋಜಕವಾದ ಧರ್ಮ

ವಾಕ್ಯಾರ್ಥಚಂದ್ರಿಕಾ – ನ ಚಾತ್ರೇತಿ ॥ ಸಾಮಾನ್ಯತಃ ಪ್ರತ್ಯಾಯಕಸ್ಯ ವಿಶೇಷತೋಽಪ್ರತ್ಯಾಯಕಸ್ಯೇಶ್ವರೇ ಪ್ರಮಾಣ್ಯಸ್ಯಾಭಾವೇನ ಸಾಮಾನ್ಯತಃ ಪ್ರಮಿತತ್ವೇ ಸತಿ ವಿಶೇಷತೋಽಪ್ರಮಿತತ್ವರೂಪತರ್ಕವಿಷಯತಾಪ್ರಯೋಜಕಸ್ಯ ತರ್ಕಾಂತರ ಇವಾತ್ರಾಭಾವಾನ್ನ ವ್ಯಾಘಾತ ಇತಿ ಭಾವಃ।

ತರ್ಕವಿಷಯತ್ವಕ್ಕೆ ಪ್ರಯೋಜಕವಾದದ್ದು 'ಸಾಮಾನ್ಯತಃ ಪ್ರಮಿತತ್ವೇ ಸತಿ ವಿಶೇಷತಃ ಅಪ್ರಮಿತತ್ವಮ್' ಇದು ನಾವು ಹೇಳುವ ತರ್ಕದಲ್ಲಿ ಇರುತ್ತದೆ. ಆದರೆ ಈಶ್ವರನು ಸಾಮಾನ್ಯತಃ ಪ್ರಮಾಣದಿಂದ ಪ್ರಮಿತನಾಗಿದ್ದಾನೆ; ವಿಶೇಷತಃ ಅಪ್ರಮಿತನಾಗಿದ್ದಾನೆ ಎನ್ನಲು ಯಾವುದೇ ಪ್ರಮಾಣಗಳಿರುವುದಿಲ್ಲ. ಆದ್ದರಿಂದ ನಾವು ಹೇಳುವ ಮಾತಿಗೆ ಸ್ವನ್ಯಾಯವಿರೋಧದೋಷವು ಬರುವುದಿಲ್ಲ.

## ಅತಃ ಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷ

ವಾಕ್ಯಾರ್ಥಚಂದ್ರಿಕಾ – ಏವಂ ಸಾಮಾನ್ಯತೋಽನುಗ್ರಾಹ್ಯಪ್ರಮಾಣನಿರಾಕರಣಮುಖೇನ ಶಾಸ್ತ್ರವಿಷಯಸಂಬಂಧಾನುಪಪತ್ತಿರೂಪಪೂರ್ವಪಕ್ಷಮೋಂಕಾರಪ್ರಯೋಗಸೂಚಿತಾ-

ಭಪ್ರಾಯನಿವರ್ತ್ಯಮುಪಪಾದ್ಯ ನನು ಪ್ರತ್ಯಕ್ಷಾದೀನಾಮೇವ ತಥಾತ್ವೇನ ನಾನುಗ್ರಾಹ್ಯ-ಪ್ರಮಾಣಾಭಾವೋ ಯೇನ ಬುದ್ಧ್ಯನಾರೂಢವಿಷಯಕತ್ವೇನ ಜಿಜ್ಞಾಸಾಯಾ ಅಶಕ್ಯತ್ವಂ ಸ್ಯಾತ್ ನಾಪಿ ನಿಶ್ಚಿತವಿಷಯಕತ್ವಂ ವಿಪ್ರತಿಪತ್ತ್ಯಾದಿಪ್ರತಿಬಂಧಕನಿರಾಸಾರ್ಥತ್ವಸಂಭವಾದಿತ್ಯತೋ ವಿಶೇಷತಃ ಅನು-ಗ್ರಾಹ್ಯಪ್ರಮಾಣನಿರಾಕರಣೇನಾಪಿ ಶಾಸ್ತ್ರವಿಷಯಸಂಬಂಧಾನುಪಪತ್ತಿರೂಪಂ ಕಾರ್ಯತಾ ಚೇತ್ಯಾ-ದ್ಯನುವ್ಯಾಖ್ಯಾನೇ ಸಿದ್ಧವ್ಯುತ್ಪತ್ತಿಸಮರ್ಪಕತಯಾ ವ್ಯಾಖ್ಯಾತಾತಃಶಬ್ದನಿವರ್ತ್ಯಂ ಪೂರ್ವಪಕ್ಷಮಾಹ – ಕಿಂಚೇತಿ ॥

ಇಲ್ಲಿಯ ತನಕ ಅನುಗ್ರಾಹ್ಯಪ್ರಾಮಾಣ್ಯವನ್ನು ಸಾಮಾನ್ಯತಃ ನಿರಾಕರಣೆ ಮಾಡುವ ಮೂಲಕ ಶಾಸ್ತ್ರವಿಷಯಕ್ಕೆ ಸಂಬಂಧವು ಅನುಪಪನ್ನವಾಗಿದೆ ಎಂಬ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಇದು ಸೂತ್ರಕಾರರ ಓಂಕಾರಪ್ರಯೋಗದಿಂದ ಸೂಚಿತವಾದ ಅಭಿಪ್ರಾಯದಿಂದ ಪರಿಹಾರವಾಗುತ್ತದೆ.

ಪ್ರತ್ಯಕ್ಷಾದಿಪ್ರಮಾಣಗಳು ಅನುಗ್ರಾಹ್ಯಪ್ರಮಾಣಗಳಾಗಿವೆ. ಹೀಗಿರುವಾಗ ಅನುಗ್ರಾಹ್ಯ-ಪ್ರಮಾಣವೇ ಇಲ್ಲವೆಂದು ಹೇಗೆ ಹೇಳುತ್ತೀರಿ? ಹಾಗಾಗಿದ್ದಲ್ಲಿ ಬುದ್ಧಿಯಲ್ಲಿ ಆರೂಢವಾಗದೇ ಜಿಜ್ಞಾಸೆಯು ಅಶಕ್ಯವಾಗುತ್ತಿತ್ತು. ಈಶ್ವರನು ಪ್ರಮಾಣಗಳಿಂದ ನಿಶ್ಚಿತನಾದರೆ ನಿಶ್ಚಿತವಿಷಯಕತ್ವೇನ ಹೇಗೆ ಜಿಜ್ಞಾಸೆಯು ಯುಕ್ತವಾಗುತ್ತದೆ ಎಂಬ ಪ್ರಶ್ನೆಗೂ ಅವಕಾಶವಿಲ್ಲ. ವಿಪ್ರತಿಪತ್ತಿ ಮೊದಲಾದ ಪ್ರತಿಬಂಧಕ-ಗಳ ನಿರಾಕರಣೆಗೋಸ್ಕರ ಸಾರ್ಥಕವಾಗಿದೆ. ಆದ್ದರಿಂದ ವಿಶೇಷತಃ ಅನುಗ್ರಾಹ್ಯಪ್ರಮಾಣದ ನಿರಾ-ಕರಣೆಯ ಮೂಲಕ ಶಾಸ್ತ್ರದ ವಿಷಯಕ್ಕೆ ಸಂಬಂಧಾನುಪಪತ್ತಿರೂಪವಾದ 'ಕಾರ್ಯತಾ ಚ' ಇತ್ಯಾದಿ ಅನುವ್ಯಾಖ್ಯಾನದಲ್ಲಿ ಸಿದ್ಧದಲ್ಲಿ ವ್ಯುತ್ಪತ್ತಿಯನ್ನು ಸಮರ್ಥನೆ ಮಾಡುವುದರಿಂದ ಇದು ಪರಿಹಾರವಾ-ಗುತ್ತದೆ. ಅತಃಶಬ್ದದಿಂದ ಪರಿಹಾರವಾಗುವ ಈ ಪೂರ್ವಪಕ್ಷವನ್ನು "ಕಿಂಚ" ಇತ್ಯಾದಿ ಗ್ರಂಥದಿಂದ ಉಪಸ್ಥಾಪನೆ ಮಾಡುತ್ತಿದ್ದಾರೆ.

ವಿವರಣೆ – ಇಲ್ಲಿಯ ತನಕ ಅನುಗ್ರಾಹ್ಯಪ್ರಾಮಾಣ್ಯವನ್ನು ಸಾಮಾನ್ಯತಃ ನಿರಾಕರಣೆ ಮಾಡಿ-ದ್ದಾಯಿತು. ಮುಂದೆ ವಿಶೇಷತಃ ನಿರಾಕರಣೆಯನ್ನು ಮಾಡುತ್ತಾರೆ. ಈ ಪೂರ್ವಪಕ್ಷವು ಮುಂದೆ ಸೂತ್ರಕಾರರ ಓಂಕಾರಪ್ರಯೋಗದಿಂದ ಸೂಚಿತವಾದ ಅಭಿಪ್ರಾಯದಿಂದ ಪರಿಹಾರವಾಗುತ್ತದೆ. ಪ್ರಕೃತ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಅತಃ ಎಂಬ ಶಬ್ದದಿಂದ ನಿವೃತ್ತಿಯಾಗುವ ಪೂರ್ವಪಕ್ಷವನ್ನು ಪ್ರಾರಂಭ ಮಾಡುತ್ತಿದ್ದಾರೆ. ಅನುಗ್ರಾಹ್ಯಪ್ರಮಾಣವು ಇಲ್ಲವೆಂದು ಹೇಳಲಾಗದು. ಏಕೆಂದರೆ ಪ್ರತ್ಯಕ್ಷಾದಿಗಳು ಅನುಗ್ರಾಹ್ಯಪ್ರಮಾಣಗಳಾಗಿವೆ. ಒಂದು ವೇಳೆ ಅನುಗ್ರಾಹ್ಯಪ್ರಮಾಣವು ಇಲ್ಲದಿದ್ದಲ್ಲಿ ಬುದ್ಧ್ಯನಾರೂಢವಿಷಯಕತ್ವೇನ ಜಿಜ್ಞಾಸೆಯು ಅಶಕ್ಯವಾಗುತ್ತಿತ್ತು. ಈಶ್ವರನು ನಿಶ್ಚಿತನಾಗಿರುವುದರಿಂದ

ಜಿಜ್ಞಾಸೆಯು ಕೂಡುವುದಿಲ್ಲವೆಂದು ಹೇಳಬಾರದು. ಏಕೆಂದರೆ ವಿಪ್ರತಿಪತ್ತಿ ಮೊದಲಾದ ಪ್ರತಿಬಂಧಕದ ನಿರಾಕರಣೆಗೋಸ್ಕರ ಜಿಜ್ಞಾಸೆಯು ಯುಕ್ತವಾಗುತ್ತದೆ. ಆದ್ದರಿಂದ ವಿಶೇಷತಃ ಅನುಗ್ರಾಹ್ಯಪ್ರಮಾಣವನ್ನು ನಿರಾಕರಣೆ ಮಾಡುವ ಮೂಲಕ ಮತ್ತು ಶಾಸ್ತ್ರವಿಷಯದ ಸಂಬಂಧಕ್ಕೆ ಅನುಪಪತ್ತಿರೂಪವಾದ ಪೂರ್ವಪಕ್ಷವನ್ನು ಈಗ ಮಾಡುತ್ತಿದ್ದಾರೆ. ಇದು 'ಕಾರ್ಯತಾ ಚ' ಇತ್ಯಾದಿ ಅನುವ್ಯಾಖ್ಯಾನಶ್ಲೋಕದಿಂದ ಪರಿಹಾರವಾಗುತ್ತದೆ.

## ಈಶ್ವರನ ವಿಷಯದಲ್ಲಿ ಯಾವುದೇ ಪ್ರಾಮಾಣ್ಯವಿಲ್ಲ

ವಾಕ್ಯಾರ್ಥಚಂದ್ರಿಕಾ – ಯೋಗ್ಯಪ್ರತಿಯೋಗಿತ್ವೇನಾಭಾವಸ್ಯ ಯೋಗ್ಯತಯಾ ಪ್ರತ್ಯಕ್ಷ-ಸ್ಯೇಶ್ವರಾಭಾವಾವೇದಕತಯಾಽವಕ್ತವ್ಯತ್ವೇಽಪಿ ಈಶ್ವರಸ್ಯ ಪ್ರತ್ಯಕ್ಷತ್ವಾದಿನಾಽಯೋಗ್ಯತಾಯಾ ವಕ್ತುಮಶಕ್ಯತ್ವೇನ ತಂ ಪ್ರತಿ ತದಭಾವೇ ಪ್ರತ್ಯಕ್ಷೋಕ್ತಿರ್ಯುಕ್ತಾ ಇತ್ಯಭಿಪ್ರೇತ್ಯ "ಆಪಾತತಃ" ಇತ್ಯುಕ್ತಮ್ । ನಾಪೀತಿ । ಕಾರ್ಯತ್ವಾದೇಃ ಪ್ರತಿಪಕ್ಷಗ್ರಸ್ತತ್ವಾದಿತಿ ಭಾವಃ । ಅರ್ಥಾಪತ್ತ್ಯಾದೇರನು-ಮಾನಾನತಿರೇಕಾದ್ ಉಪಮಾನಾಭಾವಯೋರ್ನಿಯತವಿಷಯಕತ್ವಾಚ್ಚ ನ ಪ್ರಮಾಣಾಂತರ-ಸಂಭಾವನಾ ಇತ್ಯಾಹ – ನ ಚೇತಿ ॥

ಪ್ರತಿಯೋಗಿಯು ಯೋಗ್ಯವಾಗದೇ ಇರುವುದರಿಂದ ಈಶ್ವರಾಭಾವವಿಷಯದಲ್ಲಿ ಪ್ರತ್ಯಕ್ಷವನ್ನು ಪ್ರಮಾಣವೆಂದು ಹೇಳಲು ಬರುವುದಿಲ್ಲ? ಈ ಪ್ರಶ್ನೆ ತಪ್ಪು. ಏಕೆಂದರೆ ಯಾವ ವಾದಿಯು ಈಶ್ವರನು ಪ್ರತ್ಯಕ್ಷಕ್ಕೆ ಯೋಗ್ಯನಾಗಿದ್ದಾನೆಂದು ಹೇಳುತ್ತಾನೋ ಅವನನ್ನು ಕುರಿತು ಈಶ್ವರಾಭಾವವು ಪ್ರತ್ಯಕ್ಷಕ್ಕೆ ಯೋಗ್ಯವೆಂದು ಹೇಳಬಹುದು. ಈ ಅಭಿಪ್ರಾಯದಿಂದ "ಆಪಾತತಃ" ಎಂಬುದಾಗಿ ಗ್ರಂಥದಲ್ಲಿ ಹೇಳಿ-ದ್ದಾರೆ. "ನಾಪಿ" – ಕಾರ್ಯತ್ವ ಮೊದಲಾದ ಅನುಮಾನಗಳು ಈಶ್ವರನ ವಿಷಯದಲ್ಲಿ ಪ್ರಮಾಣ-ವಾಗುವುದಿಲ್ಲ. ಏಕೆಂದರೆ ಸತ್ಪ್ರತಿಪಕ್ಷದೋಷದಿಂದ ದುಷ್ಟವಾಗಿವೆ. ಅರ್ಥಾಪತ್ತಿಪ್ರಮಾಣವು ಅನು-ಮಾನಕ್ಕಿಂತ ಭಿನ್ನವೇ ಅಲ್ಲ. ಉಪಮಾನ ಹಾಗೂ ಅಭಾವಗಳು ನಿಯತವಿಷಯಕವಾಗಿರುವುದರಿಂದ ಪ್ರಮಾಣಾಂತರವೆಂದೇ ಪರಿಗಣಿಸಲು ಸಾಧ್ಯವಿಲ್ಲ. ಈ ವಿಷಯವನ್ನು "ನಚ" ಇತ್ಯಾದಿಗ್ರಂಥದಿಂದ ತಿಳಿಸಿದ್ದಾರೆ.

ವಿವರಣೆ – ಈಶ್ವರನು ಇಲ್ಲವೆನ್ನಲು ಪ್ರತ್ಯಕ್ಷವು ಪ್ರಮಾಣವೆಂದು ಹೇಳಲಾಗದು. ಏಕೆಂದರೆ, ಯೋಗ್ಯಪ್ರತಿಯೋಗಿತ್ವವು ಇದ್ದರೆ ಮಾತ್ರ ಅಭಾವಪ್ರತ್ಯಕ್ಷವು ಸಿದ್ಧವಾಗುತ್ತದೆ. ಪ್ರತಿಯೋಗಿಪ್ರತ್ಯಕ್ಷವೇ ಇಲ್ಲದೇ ಇರುವುದರಿಂದ ಈಶ್ವರಾಭಾವವು ಪ್ರತ್ಯಕ್ಷಸಿದ್ಧವಾಗುವುದಿಲ್ಲ. ಆದರೂ ಕೂಡ ಆಪಾತತಃ

ಪ್ರತ್ಯಕ್ಷಯೋಗ್ಯವೆಂದು ಹೇಳಬಹುದು. ಈಶ್ವರನ ವಿಷಯದಲ್ಲಿ ಯಾರು ಪ್ರತ್ಯಕ್ಷವು ಪ್ರಮಾಣವಾಗಿದೆ ಎಂಬುದಾಗಿ ಹೇಳುತ್ತಾನೋ ಅವನಿಗೆ ಈಶ್ವರನ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಲ್ಲ ಎಂದು ಹೇಳಬಹುದು. ಪರವಾದಿಯು ಈಶ್ವರನಿಗೆ ಪ್ರತ್ಯಕ್ಷಯೋಗ್ಯತ್ವವನ್ನು ಒಪ್ಪಿರುವುದರಿಂದ ಈಶ್ವರಾಭಾವಕ್ಕೆ ಪ್ರತ್ಯಕ್ಷಯೋಗ್ಯತ್ವವನ್ನು ಹೇಳಬಹುದು. ಈಶ್ವರನು ಶಾಸ್ತ್ರೈಕಸಮಧಿಗಮ್ಯ ಎಂದು ಹೇಳಿದಾಗ ಹೇಳಲು ಬಾರದಿದ್ದರೂ ಕೂಡ ಪ್ರತ್ಯಕ್ಷಯೋಗ್ಯನಾಗಿದ್ದಾನೆಂಬ ಪಕ್ಷದಲ್ಲಿ ಈಶ್ವರಾಭಾವವನ್ನು ಪ್ರತ್ಯಕ್ಷ-ಯೋಗ್ಯವೆಂದು ಹೇಳಬಹುದು.

## ವಿಶೇಷತಃ ಆಗಮದ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – ಏವಂ ಸಾಮಾನ್ಯತ ಆಗಮನಿರಾಕರಣಮುಖೇನ ಅನು-ಗ್ರಾಹ್ಯಪ್ರಮಾಣಾಭಾವಪೂರ್ವಪಕ್ಷಮುಪಪಾದ್ಯ ನನು ನಾಗಮಸ್ಯ ಕಾರ್ಯನಿಷ್ಠತ್ವಂ ವ್ಯುತ್ಪತ್ತಿ-ಗ್ರಾಹಕವ್ಯವಹಾರಾದೇಃ ಸಿದ್ಧವಿಷಯತ್ವಾದಿತ್ಯತಃ 'ಸ್ವತ ಏವ ಆಗಮಸ್ಯ ಹಿ ಮಿಥ್ಯಾಜ್ಞಪ್ತಿಃ' ಇತ್ಯಾ-ದ್ಯನುವ್ಯಾಖ್ಯಾವ್ಯಾಖ್ಯಾನಪ್ರತಿಪಾದಿತಾರ್ಥಕಾತಃಶಬ್ದನಿವರ್ತ್ಯಂ ವಿಶೇಷತೋಽಪ್ಯಾಗಮನಿರಾ-ಕರಣೇನಾನುಗ್ರಾಹ್ಯಪ್ರಮಾಣಾಭಾವಪೂರ್ವಪಕ್ಷಂ ದರ್ಶಯತಿ – ಕಿಂಚೇತಿ ॥

ಇಲ್ಲಿಯ ತನಕ ಆಗಮನಿರಾಕರಣೆಯನ್ನು ಸಾಮಾನ್ಯವಾಗಿ ಮಾಡಿ ಅನುಗ್ರಾಹ್ಯಪ್ರಮಾಣ-ವಿಲ್ಲವೆಂಬ ಪೂರ್ವಪಕ್ಷವನ್ನು ಉಪಪಾದನೆ ಮಾಡಿದರು. ಆಗಮವು ಕಾರ್ಯಬೋಧಕವಾಗಲು ಸಾಧ್ಯ-ವಿಲ್ಲ. ಏಕೆಂದರೆ, ವ್ಯುತ್ಪತ್ತಿಗ್ರಾಹಕವಾದ ವ್ಯವಹಾರಾದಿಗಳು ಸಿದ್ಧವಿಷಯಕವಾಗಿವೆ. ಈ ಪ್ರಶ್ನೆಗೆ ''ಸ್ವತ ಏವ ಆಗಮಸ್ಯ ಹಿ । ಮಿಥ್ಯಾಜ್ಞಪ್ತಿ' ಇತ್ಯಾದಿ ಅನುವ್ಯಾಖ್ಯಾನ ವ್ಯಾಖ್ಯಾನದಲ್ಲಿ ಪ್ರತಿಪಾದಿತವಾದ ಯಾವ ಅತಃಶಬ್ದದ ಅರ್ಥವಿದೆಯೋ ಇದರಿಂದ ಪರಿಹಾರವಾಗುವ ವಿಶೇಷತಃ ಆಗಮನಿರಾಕರಣೆಯ ಮೂಲಕ ಅನುಗ್ರಾಹ್ಯಪ್ರಮಾಣವಿಲ್ಲವೆಂಬ ಪೂರ್ವಪಕ್ಷವನ್ನು ''ಕಿಂಚ'' ಇತ್ಯಾದಿಗ್ರಂಥದಿಂದ ನಿರಾಕರಣೆ ಮಾಡು-ತ್ತಿದ್ದಾರೆ.

ವಿವರಣೆ – ಅನುಗ್ರಾಹ್ಯಪ್ರಮಾಣವನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಯಿತು. ಪ್ರತ್ಯಕ್ಷಾದಿ ಪ್ರಮಾಣಗಳಿಲ್ಲ ಎಂಬುದಾಗಿ ವಿಶೇಷವಾಗಿಯೂ ಕೂಡ ನಿರಾಕರಣೆ ಮಾಡಿದರು. ಈಗ ಆಗಮದಲ್ಲಿ ವಿಶೇಷವಿಕಲ್ಪವನ್ನು ಮಾಡುತ್ತಿದ್ದಾರೆ. ಆಗಮವೆಂದರೆ ವೇದವೋ ಬೇರೆ ಆಗಮವೋ? ವೇದವೆಂದರೆ ಪೌರುಷೇಯವೋ ಅಪೌರುಷೇಯವೋ? ಎರಡೂ ಪಕ್ಷಗಳಲ್ಲಿಯೂ ಕೂಡ ದೋಷವು ತಪ್ಪಿದ್ದಲ್ಲ.

ಜಿಜ್ಞಾಸೆಯು ಕೂಡುವುದಿಲ್ಲವೆಂದು ಹೇಳಬಾರದು. ಏಕೆಂದರೆ ವಿಪ್ರತಿಪತ್ತಿ ಮೊದಲಾದ ಪ್ರತಿಬಂಧಕದ ನಿರಾಕರಣೆಗೋಸ್ಕರ ಜಿಜ್ಞಾಸೆಯು ಯುಕ್ತವಾಗುತ್ತದೆ. ಆದ್ದರಿಂದ ವಿಶೇಷತಃ ಅನುಗ್ರಾಹ್ಯಪ್ರಮಾಣವನ್ನು ನಿರಾಕರಣೆ ಮಾಡುವ ಮೂಲಕ ಮತ್ತು ಶಾಸ್ತ್ರವಿಷಯದ ಸಂಬಂಧಕ್ಕೆ ಅನುಪಪತ್ತಿರೂಪವಾದ ಪೂರ್ವಪಕ್ಷವನ್ನು ಈಗ ಮಾಡುತ್ತಿದ್ದಾರೆ. ಇದು 'ಕಾರ್ಯತಾ ಚ' ಇತ್ಯಾದಿ ಅನುವ್ಯಾಖ್ಯಾನಶ್ಲೋಕದಿಂದ ಪರಿಹಾರವಾಗುತ್ತದೆ.

## ಈಶ್ವರನ ವಿಷಯದಲ್ಲಿ ಯಾವುದೇ ಪ್ರಾಮಾಣ್ಯವಿಲ್ಲ

ವಾಕ್ಯಾರ್ಥಚಂದ್ರಿಕಾ – ಯೋಗ್ಯಪ್ರತಿಯೋಗಿತ್ವೇನಾಭಾವಸ್ಯ ಯೋಗ್ಯತಯಾ ಪ್ರತ್ಯಕ್ಷ-ಸ್ಯೇಶ್ವರಾಭಾವಾವೇದಕತಯಾಽವಕ್ತವ್ಯತ್ವೇಽಪಿ ಈಶ್ವರಸ್ಯ ಪ್ರತ್ಯಕ್ಷತ್ವಾದಿನಾಽಯೋಗ್ಯತಾಯಾ ವಕ್ತುಮಶಕ್ಯತ್ವೇನ ತಂ ಪ್ರತಿ ತದಭಾವೇ ಪ್ರತ್ಯಕ್ಷೋಕ್ತಿರ್ಯುಕ್ತಾ ಇತ್ಯಭಿಪ್ರೇತ್ಯ "ಆಪಾತತಃ" ಇತ್ಯುಕ್ತಮ್ । ನಾಪೀತಿ । ಕಾರ್ಯತ್ವಾದೇಃ ಪ್ರತಿಪಕ್ಷಗ್ರಸ್ತತ್ವಾದಿತಿ ಭಾವಃ । ಅರ್ಥಾಪತ್ತ್ಯಾದೇರನು-ಮಾನಾನತಿರೇಕಾದ್ ಉಪಮಾನಾಭಾವಯೋರ್ನಿಯತವಿಷಯಕತ್ವಾಚ್ಚ ನ ಪ್ರಮಾಣಾಂತರ-ಸಂಭಾವನಾ ಇತ್ಯಾಹ – ನ ಚೇತಿ ॥

ಪ್ರತಿಯೋಗಿಯು ಯೋಗ್ಯವಾಗದೇ ಇರುವುದರಿಂದ ಈಶ್ವರಾಭಾವವಿಷಯದಲ್ಲಿ ಪ್ರತ್ಯಕ್ಷವನ್ನು ಪ್ರಮಾಣವೆಂದು ಹೇಳಲು ಬರುವುದಿಲ್ಲ? ಈ ಪ್ರಶ್ನೆ ತಪ್ಪು. ಏಕೆಂದರೆ ಯಾವ ವಾದಿಯು ಈಶ್ವರನು ಪ್ರತ್ಯಕ್ಷಕ್ಕೆ ಯೋಗ್ಯನಾಗಿದ್ದಾನೆಂದು ಹೇಳುತ್ತಾನೋ ಅವನನ್ನು ಕುರಿತು ಈಶ್ವರಾಭಾವವು ಪ್ರತ್ಯಕ್ಷಕ್ಕೆ ಯೋಗ್ಯವೆಂದು ಹೇಳಬಹುದು. ಈ ಅಭಿಪ್ರಾಯದಿಂದ "ಆಪಾತತಃ" ಎಂಬುದಾಗಿ ಗ್ರಂಥದಲ್ಲಿ ಹೇಳಿ-ದ್ದಾರೆ. "ನಾಪಿ" – ಕಾರ್ಯತ್ವ ಮೊದಲಾದ ಅನುಮಾನಗಳು ಈಶ್ವರನ ವಿಷಯದಲ್ಲಿ ಪ್ರಮಾಣ-ವಾಗುವುದಿಲ್ಲ. ಏಕೆಂದರೆ ಸತ್ಪ್ರತಿಪಕ್ಷದೋಷದಿಂದ ದುಷ್ಟವಾಗಿವೆ. ಅರ್ಥಾಪತ್ತಿಪ್ರಮಾಣವು ಅನು-ಮಾನಕ್ಕಿಂತ ಭಿನ್ನವೇ ಅಲ್ಲ. ಉಪಮಾನ ಹಾಗೂ ಅಭಾವಗಳು ನಿಯತವಿಷಯಕವಾಗಿರುವುದರಿಂದ ಪ್ರಮಾಣಾಂತರವೆಂದೇ ಪರಿಗಣಿಸಲು ಸಾಧ್ಯವಿಲ್ಲ. ಈ ವಿಷಯವನ್ನು "ನಚ" ಇತ್ಯಾದಿಗ್ರಂಥದಿಂದ ತಿಳಿಸಿದ್ದಾರೆ.

ವಿವರಣೆ – ಈಶ್ವರನು ಇಲ್ಲವೆನ್ನಲು ಪ್ರತ್ಯಕ್ಷವು ಪ್ರಮಾಣವೆಂದು ಹೇಳಲಾಗದು. ಏಕೆಂದರೆ, ಯೋಗ್ಯಪ್ರತಿಯೋಗಿತ್ವವು ಇದ್ದರೆ ಮಾತ್ರ ಅಭಾವಪ್ರತ್ಯಕ್ಷವು ಸಿದ್ಧವಾಗುತ್ತದೆ. ಪ್ರತಿಯೋಗಿಪ್ರತ್ಯಕ್ಷವೇ ಇಲ್ಲದೇ ಇರುವುದರಿಂದ ಈಶ್ವರಾಭಾವವು ಪ್ರತ್ಯಕ್ಷಸಿದ್ಧವಾಗುವುದಿಲ್ಲ. ಆದರೂ ಕೂಡ ಆಪಾತತಃ

ಪ್ರತ್ಯಕ್ಷಯೋಗ್ಯವೆಂದು ಹೇಳಬಹುದು. ಈಶ್ವರನ ವಿಷಯದಲ್ಲಿ ಯಾರು ಪ್ರತ್ಯಕ್ಷವು ಪ್ರಮಾಣವಾಗಿದೆ ಎಂಬುದಾಗಿ ಹೇಳುತ್ತಾನೋ ಅವನಿಗೆ ಈಶ್ವರನ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಲ್ಲ ಎಂದು ಹೇಳಬಹುದು. ಪರವಾದಿಯು ಈಶ್ವರನಿಗೆ ಪ್ರತ್ಯಕ್ಷಯೋಗ್ಯತ್ವವನ್ನು ಒಪ್ಪಿರುವುದರಿಂದ ಈಶ್ವರಾಭಾವಕ್ಕೆ ಪ್ರತ್ಯಕ್ಷಯೋಗ್ಯತ್ವವನ್ನು ಹೇಳಬಹುದು. ಈಶ್ವರನು ಶಾಸ್ತ್ರೈಕಸಮಧಿಗಮ್ಯ ಎಂದು ಹೇಳಿದಾಗ ಹೇಳಲು ಬಾರದಿದ್ದರೂ ಕೂಡ ಪ್ರತ್ಯಕ್ಷಯೋಗ್ಯನಾಗಿದ್ದಾನೆಂಬ ಪಕ್ಷದಲ್ಲಿ ಈಶ್ವರಾಭಾವವನ್ನು ಪ್ರತ್ಯಕ್ಷ-ಯೋಗ್ಯವೆಂದು ಹೇಳಬಹುದು.

## ವಿಶೇಷತಃ ಆಗಮದ ನಿರಾಕರಣೆ

ವಾಕ್ಯಾರ್ಥಚಂದ್ರಿಕಾ – ಏವಂ ಸಾಮಾನ್ಯತ ಆಗಮನಿರಾಕರಣಮುಖೇನ ಅನು-ಗ್ರಾಹ್ಯಪ್ರಮಾಣಾಭಾವಪೂರ್ವಪಕ್ಷಮುಪಪಾದ್ಯ ನನು ನಾಗಮಸ್ಯ ಕಾರ್ಯನಿಷ್ಠತ್ವಂ ವ್ಯುತ್ಪತ್ತಿ-ಗ್ರಾಹಕವ್ಯವಹಾರಾದೇಃ ಸಿದ್ಧವಿಷಯತ್ವಾದಿತ್ಯತಃ 'ಸ್ವತ ಏವ ಆಗಮಸ್ಯ ಹಿ ಮಿಥ್ಯಾಜ್ಞಪ್ತಿಃ' ಇತ್ಯಾ-ದ್ಯನುವ್ಯಾಖ್ಯಾವ್ಯಾಖ್ಯಾನಪ್ರತಿಪಾದಿತಾರ್ಥಕಾತಃಶಬ್ದನಿವರ್ತ್ಯಂ ವಿಶೇಷತೋಽಪ್ಯಾಗಮನಿರಾ-ಕರಣೇನಾನುಗ್ರಾಹ್ಯಪ್ರಮಾಣಾಭಾವಪೂರ್ವಪಕ್ಷಂ ದರ್ಶಯತಿ – ಕಿಂಚೇತಿ ॥

ಇಲ್ಲಿಯ ತನಕ ಆಗಮನಿರಾಕರಣೆಯನ್ನು ಸಾಮಾನ್ಯವಾಗಿ ಮಾಡಿ ಅನುಗ್ರಾಹ್ಯಪ್ರಮಾಣ-ವಿಲ್ಲವೆಂಬ ಪೂರ್ವಪಕ್ಷವನ್ನು ಉಪಪಾದನೆ ಮಾಡಿದರು. ಆಗಮವು ಕಾರ್ಯಬೋಧಕವಾಗಲು ಸಾಧ್ಯ-ವಿಲ್ಲ. ಏಕೆಂದರೆ, ವ್ಯುತ್ಪತ್ತಿಗ್ರಾಹಕವಾದ ವ್ಯವಹಾರಾದಿಗಳು ಸಿದ್ಧವಿಷಯಕವಾಗಿವೆ. ಈ ಪ್ರಶ್ನೆಗೆ ''ಸ್ವತ ಏವ ಆಗಮಸ್ಯ ಹಿ। ಮಿಥ್ಯಾಜ್ಞಪ್ತಿ' ಇತ್ಯಾದಿ ಅನುವ್ಯಾಖ್ಯಾನ ವ್ಯಾಖ್ಯಾನದಲ್ಲಿ ಪ್ರತಿಪಾದಿತವಾದ ಯಾವ ಅತಃಶಬ್ದದ ಅರ್ಥವಿದೆಯೋ ಇದರಿಂದ ಪರಿಹಾರವಾಗುವ ವಿಶೇಷತಃ ಆಗಮನಿರಾಕರಣೆಯ ಮೂಲಕ ಅನುಗ್ರಾಹ್ಯಪ್ರಮಾಣವಿಲ್ಲವೆಂಬ ಪೂರ್ವಪಕ್ಷವನ್ನು ''ಕಿಂಚ'' ಇತ್ಯಾದಿಗ್ರಂಥದಿಂದ ನಿರಾಕರಣೆ ಮಾಡು-ತ್ತಿದ್ದಾರೆ.

ವಿವರಣೆ – ಅನುಗ್ರಾಹ್ಯಪ್ರಮಾಣವನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಯಿತು. ಪ್ರತ್ಯಕ್ಷಾದಿ ಪ್ರಮಾಣಗಳಿಲ್ಲ ಎಂಬುದಾಗಿ ವಿಶೇಷವಾಗಿಯೂ ಕೂಡ ನಿರಾಕರಣೆ ಮಾಡಿದರು. ಈಗ ಆಗಮದಲ್ಲಿ ವಿಶೇಷವಿಕಲ್ಪವನ್ನು ಮಾಡುತ್ತಿದ್ದಾರೆ. ಆಗಮವೆಂದರೆ ವೇದವೋ ಬೇರೆ ಆಗಮವೋ? ವೇದವೆಂದರೆ ಪೌರುಷೇಯವೋ ಅಪೌರುಷೇಯವೋ? ಎರಡೂ ಪಕ್ಷಗಳಲ್ಲಿಯೂ ಕೂಡ ದೋಷವು ತಪ್ಪಿದ್ದಲ್ಲ.

## ಪಂಚರಾತ್ರಾದ್ಯಾಗಮಗಳು ಕೂಡ ಪ್ರಮಾಣವಾಗುವುದಿಲ್ಲ

ವಾಕ್ಯಾರ್ಥಚಂದ್ರಿಕಾ – ಅನ್ಯಸ್ಯೋದಾಸೀನಲೌಕಿಕವಾಕ್ಯಸ್ಯ ಭಿನ್ನವಿಷಯತ್ವೇನ ವಿರೋಧಿ-ಪಾಶುಪತಾದೇರ್ವಿಪರೀತವಿಷಯತ್ವೇನ ಏತದನುಗ್ರಾಹ್ಯತ್ವೇನ ಅನಾಶಂಕನೀಯತ್ವಾತ್ ಸಮಾನ-ವಿಷಯಕಪಂಚರಾತ್ರಾದೇಸ್ತು ಮೂಲಭೂತವೇದಪರತಂತ್ರತ್ವೇನ ಸ್ವತೋಽನುಗ್ರಾಹ್ಯತ್ವಾ-ಸಂಭವಾದ್ ನಾನ್ಯಸಂಭಾವನಾ ಇತ್ಯಾಹ – ಅನ್ಯಸ್ಯೇತಿ ॥ ಕಾರಣಾಭಾವೇನೇತಿ ॥ ಪೌರುಷೇಯತ್ವೇ ನಿಶ್ಚಾಯಕಾಭಾವೇನಾಪ್ತಿರೂಪವಿಶೇಷಣಾಭಾವೇನ ಅಪೌರುಷೇಯತ್ವೇ ಚ ವಿಶೇಷ್ಯಾಭಾವೇನಾ-ಪ್ತವಕ್ತೃತ್ವಗುಣರೂಪಕಾರಣಾಭಾವೇನೇತ್ಯರ್ಥಃ।

ಉಳಿದ ಉದಾಸೀನವಾದ ಲೌಕಿಕವಾಕ್ಯಗಳು ಭಿನ್ನವಿಷಯಕವಾಗಿರುವುದರಿಂದ ಅಪ್ರಮಾಣ-ವಾಗಿವೆ. ಪಾಶುಪತಾದಿ ಆಗಮಗಳು ವೇದವಿರುದ್ಧವಾಗಿರುವುದರಿಂದ ವಿಪರೀತವಿಷಯಕವಾಗಿ ಅನು-ಗ್ರಹವಾಗುತ್ತದೆಂಬ ಶಂಕೆಯನ್ನೇ ಮಾಡಲು ಸಾಧ್ಯವಿಲ್ಲ. ಪಂಚರಾತ್ರಾದಿಗಳು ಸಮಾನವಿಷಯಕವಾಗಿ-ರುವುದರಿಂದ ಇದಕ್ಕೆ ಮೂಲವಾದ ವೇದಾರ್ಥದ ಅಧೀನವಾಗಿವೆ. ಆದ್ದರಿಂದ ಸ್ವತಂತ್ರವಾಗಿ ಅನು-ಗ್ರಾಹ್ಯವಾಗುವುದಿಲ್ಲ. ಉಳಿದ ಪ್ರಮಾಣಗಳನ್ನು ಹೇಳಲು ಬರುವುದಿಲ್ಲ. ಈ ವಿಷಯವನ್ನು "ಅನ್ಯಸ್ಯ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

"ಕಾರಣಾಭಾವೇನ" – ವೇದವನ್ನು ಪೌರುಷೇಯವೆಂದು ಹೇಳಿದರೆ ನಿಶ್ಚಾಯಕವಾದ ಪ್ರಮಾಣವಿಲ್ಲದ್ದರಿಂದ ಆಪ್ತಿ ಎಂಬ ವಿಶೇಷಣವು ಇಲ್ಲದ್ದರಿಂದ ಸಿದ್ಧವಾಗುವುದಿಲ್ಲ. ಆಪ್ತವಕ್ತೃತ್ವ ಎಂಬ ವಿಶಿಷ್ಟದಲ್ಲಿ ಆಪ್ತಿ ಎಂಬ ವಿಶೇಷಣವಿಲ್ಲದ್ದರಿಂದ ವಿಶಿಷ್ಟವು ಬರುವುದಿಲ್ಲ. ಅಪೌರುಷೇಯವೆಂದು ಹೇಳಿ-ದರೆ ವಕ್ತೃತ್ವವೆಂಬ ವಿಶೇಷ್ಯವೇ ಇಲ್ಲದ್ದರಿಂದ ವಿಶಿಷ್ಟವು ಬರುವುದಿಲ್ಲ. ಆದ್ದರಿಂದ ಆಪ್ತವಕ್ತೃತ್ವವೆಂಬ ಗುಣರೂಪಕಾರಣಾಭಾವವು ಬರುತ್ತದೆ ಎಂದರ್ಥ.

## ವೇದವು ಅನುಗ್ರಾಹ್ಯಪ್ರಮಾಣವಾಗುವುದಿಲ್ಲ

ವಾಕ್ಯಾರ್ಥಚಂದ್ರಿಕಾ – ನನು ಪ್ರಾಮಾಣ್ಯಸ್ಯ ಸ್ವತಸ್ತ್ವೇನ ಗುಣಜನ್ಯತ್ವಾತ್ ತದಭಾ-ವೇಽಪಿ ಪ್ರಾಮಾಣ್ಯಂ ಯುಕ್ತಮಿತ್ಯತೋ ವಿಶಿಷ್ಯ ಪ್ರಾಮಾಣ್ಯಸ್ವತಸ್ತ್ವಪ್ರತಿಪಾದಕಾತಃಶಬ್ದಸೂಚಿತಾ ಪ್ರಾಮಾಣ್ಯಸ್ವತಸ್ತ್ವವತ್ ಅತಃಶಬ್ದೇನ ಸಾಕ್ಷಾದಭಿಹಿತಾ ವಾ 'ಅಪ್ರಾಮಾಣ್ಯಂ ತಥಾಽನ್ಯತಃ' ಇತ್ಯನುವ್ಯಾಖ್ಯಾನಪ್ರತಿಪಾದಿತಾ ವಾ ಅಪ್ರಾಮಾಣ್ಯಪರತಸ್ತ್ವರೂಪಾ ಯಾ ಯುಕ್ತಿಸ್ತನ್ನಿವರ್ತ್ಯಾಂ ಯುಕ್ತಿಮಾಹ – ಸ್ವತ ಇತಿ ॥ ನನು ಶಾಕ್ಯಾದಿವಚಸಾಂ ಪ್ರಾಮಾಣ್ಯೇಽಪಿ ವೇದಸ್ಯಾನು-

ಗ್ರಾಹ್ಯಪ್ರಮಾಣತ್ವಾಭಾವರೂಪಪ್ರಕೃತಸ್ಯ ನ ಸಿದ್ಧಿರಿತ್ಯತಃ ಶಾಕ್ಯಾದಿವಾಕ್ಯಪ್ರಾಮಾಣ್ಯಸ್ಯ ವೇದ-ಪ್ರಾಮಾಣ್ಯವಿಘಾತಕತ್ವಾತ್ ಪ್ರಕೃತಸಿದ್ಧಿರಿತ್ಯಾಹ – ತಥಾತ್ವಾಪಾತೇನ ಪುನರಿತಿ ॥

ನನು ಪ್ರಾಮಾಣ್ಯಸ್ಯ ಸ್ವತಸ್ತ್ವಾದಪ್ರಾಮಾಣ್ಯಸ್ಯ ಚ ಪರತಸ್ತ್ವಾನ್ನೇದಂ ದೂಷಣಂ ಯುಕ್ತ-ಮಿತ್ಯತೋ ಮಾಽಸ್ತ್ವನೇನ ಪ್ರಕಾರೇಣ ವೇದಸ್ಯಾನುಗ್ರಾಹ್ಯಪ್ರಮಾಣತ್ವಾಭಾವಸಿದ್ಧಿಃ ಕೈಮುತ್ಯೇನ ತು ಸ ಸಿದ್ಧ್ಯೇತ್ಯೇವ ಇತ್ಯಭಿಪ್ರೇತ್ಯ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಇತ್ಯನು-ವ್ಯಾಖ್ಯಾವ್ಯಕ್ತತ್ವಾದಿತಾರ್ಥಕಾತಃಶಬ್ದನಿವರ್ತ್ಯಂ ಪೂರ್ವಪಕ್ಷಮಾಹ – ಕಿಂಚೇತಿ ॥

'ಪ್ರಾಮಾಣ್ಯಂ ಸ್ವತಃ' ಎಂದು ಹೇಳಿದ್ದರಿಂದ ಪ್ರಾಮಾಣ್ಯವು ಗುಣಜನ್ಯವಾಗಿರುವುದಿಲ್ಲ. ಆದ್ದರಿಂದ ಆಪ್ತವಕ್ತೃತ್ವವೆಂಬ ಗುಣವಿಲ್ಲದಿದ್ದರೂ ಕೂಡ ಪ್ರಾಮಾಣ್ಯವು ವೇದಕ್ಕೆ ಪ್ರಾಪ್ತವಾಗುತ್ತದೆ. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು 'ಅತಃ' ಎಂಬ ಶಬ್ದವು ಪ್ರತಿಪಾದನೆ ಮಾಡುತ್ತದೆ. ಅತಃ ಎಂಬ ಶಬ್ದವು ನೇರವಾಗಿ ಪ್ರಾಮಾಣ್ಯಸ್ವತಸ್ತ್ವವನ್ನು ಪ್ರತಿಪಾದನೆ ಮಾಡುತ್ತಿದೆ. ಇದರಿಂದ ಅರ್ಥಾತ್ ಸಿದ್ಧವಾಗುವ ಅಪ್ರಾಮಾಣ್ಯಪರತಸ್ತ್ವವನ್ನು ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಅಥವಾ ಸೂತ್ರ-ದಲ್ಲಿರುವ ಅತಃ ಎಂಬ ಶಬ್ದದಿಂದಲೇ ಅಪ್ರಾಮಾಣ್ಯದ ಪರತಸ್ತ್ವವೂ ಕೂಡ ಹೇಳಲ್ಪಟ್ಟಿದೆ. ಇದರಿಂದ ನಿವೃತ್ತವಾಗುವ ಯುಕ್ತಿಯನ್ನು ಸ್ವತಃ ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

'ಪ್ರಾಮಾಣ್ಯಂ ಸ್ವತಃ' ಎಂಬುದಾಗಿ ಹೇಳುವುದಾದರೆ ಶಾಕ್ಯಾದಿ(ಬೌದ್ಧರ) ಮಾತುಗಳು ಕೂಡ ಪ್ರಮಾಣವಾಗುತ್ತವೆ. ಶಾಕ್ಯಾದಿ ಮಾತುಗಳು ಪ್ರಮಾಣವಾದರೆ ವೇದಗಳು ಪ್ರಮಾಣವಾಗುವುದಿಲ್ಲ. ಪರಸ್ಪರವಿರುದ್ಧವಾದದ್ದರಲ್ಲಿ ಒಂದು ಪ್ರಮಾಣವಾದರೆ ಮತ್ತೊಂದು ಅಪ್ರಮಾಣವಾಗಬೇಕು. ಆದ್ದರಿಂದ ಶಾಕ್ಯಾದಿ ವಾಕ್ಯಪ್ರಾಮಾಣ್ಯವು ವೇದಪ್ರಾಮಾಣ್ಯಕ್ಕೆ ವಿಘಾತ ಮಾಡುವುದರಿಂದ ಅನುಗ್ರಾಹ್ಯಪ್ರಮಾಣವು ನಾಶವಾಗುತ್ತದೆ. ಇದನ್ನು ''ತಥಾತ್ವಾಪಾತೇನ ಪುನಃ'' ಎಂಬ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

'ಪ್ರಾಮಾಣ್ಯಂ ಸ್ವತಃ; ಅಪ್ರಾಮಾಣ್ಯಂ ಪರತಃ' ಎಂಬುದಾಗಿ ನಾವು ಒಪ್ಪುತ್ತೇವೆ. ಗುಣ-ವಿರುವುದರಿಂದ ವೇದಕ್ಕೆ ಪ್ರಾಮಾಣ್ಯವನ್ನು ಹೇಳುವುದಿಲ್ಲ. ಸಾಕ್ಷಾತ್ತಾಗಿಯೇ ಸ್ವತಃಪ್ರಾಮಾಣ್ಯವನ್ನು ಹೇಳುತ್ತೇವೆ. ಶಾಕ್ಯಾದಿಮಾತುಗಳಲ್ಲಿ ದೋಷವಿರುವುದರಿಂದ ಅಪ್ರಾಮಾಣ್ಯವು ಬರುತ್ತದೆಂದು ಹೇಳು-ತ್ತೇವೆ ?

ಈ ಪ್ರಶ್ನೆಗೆ ಶಬ್ದಕ್ಕೆ ಪ್ರಾಮಾಣ್ಯವು ಇರುವುದಿಲ್ಲ. ಶಬ್ದವಿಶೇಷವಾದ ವೇದಕ್ಕೆ ಪ್ರಾಮಾಣ್ಯವು ಇರುವುದಿಲ್ಲವೆಂಬುದು ಕೈಮುತ್ಯನ್ಯಾಯದಿಂದಲೇ ಸಿದ್ಧವಾಗಿದೆ. ಈ ಅಭಿಪ್ರಾಯದಿಂದ 'ಪ್ರತ್ಯಕ್ಷವಚ್ಚ

ಪ್ರಾಮಾಣ್ಯಂ' ಮತ್ತು 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಎಂಬ ಅನುವ್ಯಾಖ್ಯಾನದಿಂದ ವ್ಯಾವೃತ್ತಿತವಾದ ಅತಃಶಬ್ದಾರ್ಥದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು "ಕಿಂಚ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

## ಶಬ್ದಕ್ಕೆ ಪ್ರಾಮಾಣ್ಯವಿಲ್ಲವೆನ್ನಲು ಅನೇಕ ಹೇತುಗಳು

ವಾಕ್ಯಾರ್ಥಚಂದ್ರಿಕಾ – ಅತ್ರ ಯದ್ಯಪಿ ಪ್ರಥಮಭಾವಿಪ್ರತ್ಯಕ್ಷವಚ್ಚ ಇತ್ಯನುವ್ಯಾಖ್ಯಾನನಿರಸನೀಯೈತತ್ಪೂರ್ವಪಕ್ಷಾನಂತರಭಾವಿತ್ವಂ ಸ್ವತ ಏವಾಗಮಸ್ಯ ಹಿ ಮಿಥ್ಯಾಜ್ಞಪ್ತೀಃ ಇತ್ಯುತ್ತರಾನುವ್ಯಾಖ್ಯಾನಿರಸನೀಯಪೂರ್ವಪಕ್ಷಸ್ಯ ಯುಕ್ತಮ್ । ತಥಾಽಪಿ ಶಕ್ತಿಶ್ಚೈವಾನ್ವಿತೇ ಸ್ವಾರ್ಥ ಇತಿ ಪೂರ್ವೋತ್ತರಭಾವ್ಯನುವ್ಯಾಖ್ಯಾನೇನಾಪಿ ನಿರಸನೀಯತ್ವಾದ್ಧೇತುದ್ವಯಸಿದ್ಧತ್ವೇನ ಪ್ರಬಲತ್ವಾಚ್ಚಾಸ್ಯ ಪೂರ್ವಪಕ್ಷಸ್ಯ ಸರ್ವಾಂತಿಮತಾ ಇತಿ ದ್ರಷ್ಟವ್ಯಮ್ । ಅರ್ಥಸಂಸ್ಪರ್ಶಶೂನ್ಯತ್ವಾದಿತಿ ॥ ಅತ್ರ ಅರ್ಥಶೂನ್ಯತ್ವಾತ್ ಸಂಸ್ಪರ್ಶಶೂನ್ಯತ್ವಾತ್ ಇತಿ ಹೇತುದ್ವಯಂ ವಿವಕ್ಷಿತಮ್ । ಸಂಸ್ಪರ್ಶಶ್ಚ ಸನ್ನಿಧಾನಾದರ್ಥೇನ ಏವ । ಏವಂ ಚ ವಕ್ಷ್ಯಮಾಣೋ ವಿಷಯಾಭಾವರೂಪೋ ಹೇತುರಪ್ಯನೇನ ಸಂಗೃಹೀತೋ ಭವತಿ । ಉಪಲಕ್ಷಣಂ ಚೈತತ್ । ಅವಿಜ್ಞಾನಾತ್ಮಕತ್ವಾದೀನಾಮಪರೋಕ್ಷವಿಷಯಸ್ಯ ಪ್ರತ್ಯಕ್ಷಸಿದ್ಧತ್ವಾತ್ ಪರೋಕ್ಷಸ್ಯ ಅನುಮಾನವೇದ್ಯತ್ವಾತ್ ಶಬ್ದಾರ್ಥಯೋರ್ವಕ್ಷ್ಯಮಾಣರೀತ್ಯಾ ತಾದಾತ್ಮ್ಯಸಂಯೋಗಸಮವಾಯಾನಾಮಸಂಭವಾದ್ಧೇತುದ್ವಯಸಿದ್ಧಿರಿತಿ ದ್ರಷ್ಟವ್ಯಮ್ । ವಾಕ್ಯಾರ್ಥೇತಿ ॥ ವರ್ಣಪದಪದಾರ್ಥತದನುಭವಸ್ಮೃತೀನಾಂ ಪ್ರತ್ಯೇಕಂ ಸಮುದಿತಾನಾಂ ಚೋಪಾಯತ್ವಾಸಂಭವಾದಿತಿ ಭಾವಃ ।

ವಾಸ್ತವಿಕವಾಗಿ ಇಲ್ಲಿ ಮೊದಲು ಪ್ರಸಕ್ತವಾದ 'ಪ್ರತ್ಯಕ್ಷವಚ್ಚ' ಎಂಬ ಅನುವ್ಯಾಖ್ಯಾನದಿಂದ ನಿರಾಕೃತವಾಗುವ ಪೂರ್ವಪಕ್ಷವನ್ನು ಹೇಳಿ ಅನಂತರ 'ಸ್ವತ ಏವ ಆಗಮಸ್ಯ ಹಿ । ಮಿಥ್ಯಾಜ್ಞಪ್ತಿ' ಎಂಬ ಅನುವ್ಯಾಖ್ಯಾನದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ಹೇಳಬೇಕು. ಆದರೂ ಕೂಡ 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಎಂಬ ಪೂರ್ವೋತ್ತರಭಾವಿಯಾದ ಅನುವ್ಯಾಖ್ಯಾನದಿಂದಲೂ ಕೂಡ ಈ ಪೂರ್ವಪಕ್ಷವು ನಿರಾಕೃತವಾಗುತ್ತದೆ. ಮತ್ತು ಹೇತುದ್ವಯಸಿದ್ಧವಾಗಿರುವುದರಿಂದ ಅತ್ಯಂತಪ್ರಬಲವಾದ ಕಾರಣ ಈ ಪೂರ್ವಪಕ್ಷವನ್ನು ಕೊನೆಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

"ಅರ್ಥಸಂಸ್ಪರ್ಶಶೂನ್ಯತ್ವಾತ್" – ಅರ್ಥಶೂನ್ಯತ್ವಾತ್, ಸಂಸ್ಪರ್ಶಶೂನ್ಯತ್ವಾತ್ ಎಂಬ ಎರಡು ಹೇತುಗಳನ್ನು ಇಲ್ಲಿ ವಿವಕ್ಷಿಸಬೇಕು. ಸಂಸ್ಪರ್ಶ ಎಂದರೆ ಸಂಬಂಧ ಎಂದರ್ಥ. ಸನ್ನಿಧಾನದಿಂದ ಅರ್ಥದ

ಜೊತೆ ಸಂಬಂಧವೆಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಮುಂದೆ ಹೇಳಲ್ಪಡುವ ವಿಷಯಾಭಾವರೂಪವಾದ ಹೇತುವನ್ನು ಇದರಿಂದ ಸಂಗ್ರಹಮಾಡಿದಂತಾಯಿತು. ''ಅವಿಜ್ಞಾನಾತ್ಮಕತ್ವಾತ್'' ಎಂಬುದನ್ನೂ ಕೂಡ ಉಪಲಕ್ಷಣಯಾ ಹೇತುವನ್ನಾಗಿ ವಿವಕ್ಷಿಸಬೇಕು.

ಅರ್ಥಶೂನ್ಯತ್ವ ಎಂಬುದರ ಅರ್ಥ ಹೀಗಿದೆ – ಅಪರೋಕ್ಷವಿಷಯವು ಪ್ರತ್ಯಕ್ಷಸಿದ್ಧವಾಗಿದೆ. ಪರೋಕ್ಷವಿಷಯವು ಅನುಮಾನವೇದ್ಯವಾಗಿದೆ. ಆದ್ದರಿಂದ ಆಗಮಕ್ಕೆ ಅರ್ಥವೇ ಇರುವುದಿಲ್ಲ. ಸಂಸರ್ಗಶೂನ್ಯತ್ವ ಎಂಬುದಕ್ಕೆ ಹೀಗರ್ಥ – ಶಬ್ದ ಮತ್ತು ಅರ್ಥಗಳಿಗೆ ಮುಂದೆ ಹೇಳುವಂತೆ ತಾದಾತ್ಮ್ಯಸಂಬಂಧ, ಸಂಯೋಗಸಂಬಂಧ ಹಾಗೂ ಸಮವಾಯಸಂಬಂಧಗಳು ಸರ್ವಥಾ ಕೂಡುವುದಿಲ್ಲ. ಆದ್ದರಿಂದ ಅರ್ಥಶೂನ್ಯತ್ವ ಹಾಗೂ ಸಂಸರ್ಗಶೂನ್ಯತ್ವ ಎಂಬ ಹೇತುದ್ವಯಗಳು ಸಿದ್ಧವಾಗುತ್ತವೆಂದು ತಿಳಿಯಬೇಕು.

''ವಾಕ್ಯಾರ್ಥಪ್ರತ್ಯಾಯನಪ್ರಕಾರಾನಿರೂಪಣಾಚ್ಚ'' – ವಾಕ್ಯಾರ್ಥವನ್ನು ತಿಳಿಯಲು ವರ್ಣವಾಗಲೀ, ಪದವಾಗಲೀ, ಪದಾರ್ಥವಾಗಲೀ, ತದನುಭವವಾಗಲೀ, ಅವುಗಳ ಸ್ಮೃತಿಯಾಗಲೀ ಪ್ರತ್ಯೇಕವಾಗಿಯೂ ಕಾರಣವಾಗುವುದಿಲ್ಲ. ಸಮುದಿತವಾಗಿಯೂ ಕಾರಣವಾಗುವುದಿಲ್ಲ ಎಂದಭಿಪ್ರಾಯ.

ವಿವರಣೆ – ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಎಂಬಲ್ಲಿ ಮೊದಲು ಶಬ್ದಪ್ರಾಮಾಣ್ಯವನ್ನು ಸಮರ್ಥಿಸಿ, ಅನಂತರ ಸ್ವತಃಪ್ರಾಮಾಣ್ಯವನ್ನು ಅನುವ್ಯಾಖ್ಯಾನದಲ್ಲಿ ಸಮರ್ಥಿಸಿದ್ದಾರೆ. ಆದರೆ ಟೀಕಾರಾಯರು ಮೊದಲು ಸ್ವತಃಪ್ರಾಮಾಣ್ಯವನ್ನು ಸಮರ್ಥಿಸಿ ಅನಂತರ ಶಬ್ದಪ್ರಾಮಾಣ್ಯವನ್ನು ಹೇಳಿದ್ದಾರೆ. ಮಿಥ್ಯಾಜ್ಞಪ್ತಿಪ್ರಲಂಬಾದೇಃ'' ಇತ್ಯಾದಿ ಸುಧಾವಾಕ್ಯದಿಂದ ಅಪೌರುಷೇಯವನ್ನು ಅನಂತರವೇ ಸಮರ್ಥಿಸಿದ್ದಾರೆ. ಮೊದಲು ಶಬ್ದಪ್ರಾಮಾಣ್ಯವನ್ನು ಹೇಳಬೇಕು. ಅನಂತರ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೇಳಬೇಕು; ಕೊನೆಯಲ್ಲಿ ವೇದಾಪೌರುಷೇಯತ್ವವನ್ನು ಹೇಳಬೇಕು. 'ಶಬ್ದಸ್ಯೈವ ಪ್ರಾಮಾಣ್ಯಂ ದುರ್ಲಭಂ' ಎಂಬುದು 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಎಂಬುದರಿಂದ ಪರಿಹಾರವಾಗುತ್ತದೆ. ಅನಂತರ 'ಸ್ವತ ಏವ ಆಗಮಸ್ಯ ಹಿ' ಎಂಬ ಮುಂದಿನ ಅನುವ್ಯಾಖ್ಯಾನದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ಹೇಳಬೇಕಿತ್ತು. ಆದರೆ ಗ್ರಂಥಕಾರರು ಏಕೆ ವ್ಯತ್ಯಾಸವನ್ನು ಮಾಡಿದ್ದಾರೆ.

ಹೌದು; ಆದರೂ ಕೂಡ ಶಬ್ದಕ್ಕೆ ಪ್ರಾಮಾಣ್ಯವು ಇರುವುದಿಲ್ಲವೆನ್ನಲು ಕಾರಣವನ್ನು ಅರ್ಥಸಂಸರ್ಗಶೂನ್ಯತ್ವವೆಂಬ ಯುಕ್ತಿಯಿಂದ ಬೌದ್ಧರು ಹೇಳುತ್ತಾರೆ. ವಾಕ್ಯಾರ್ಥಪ್ರತ್ಯಾಯನ ಅನಿರೂಪಣವೆಂಬುದು ಮತ್ತೊಂದು ಯುಕ್ತಿಯಾಗಿದೆ. ಶಬ್ದಪ್ರಾಮಾಣ್ಯವನ್ನು ನಿರಾಕರಿಸಲು ಇವೆರಡು ಯುಕ್ತಿಗಳು

ಕಾರಣವಾಗಿವೆ. 'ಶಬ್ದಸ್ಯೈವ ಪ್ರಾಮಾಣ್ಯಂ ದುರ್ಲಭಮ್' ಎಂಬ ಪೂರ್ವಪಕ್ಷಕ್ಕೆ ಎರಡು ಯುಕ್ತಿಗಳಿರುವುದರಿಂದ ಅತ್ಯಂತ ಬಲಿಷ್ಠವಾಗಿದೆ. ಆದ್ದರಿಂದ ಕೊನೆಯಲ್ಲಿಯೇ ಈ ಪೂರ್ವಪಕ್ಷವನ್ನು ಗ್ರಂಥಕಾರರು ಹೇಳಿದ್ದಾರೆ.

ಶಬ್ದಕ್ಕೆ ಪರೋಕ್ಷವಾದದ್ದು ವಿಷಯವೋ? ಅಪರೋಕ್ಷವಾದದ್ದು ವಿಷಯವೋ? ಅಪರೋಕ್ಷವಾದದ್ದು ಪ್ರತ್ಯಕ್ಷಕ್ಕೆ ವಿಷಯವಾಗಿದೆ. ಪರೋಕ್ಷವಾದದ್ದು ಅನುಮಾನಕ್ಕೆ ವಿಷಯವಾಗಿದೆ. ಆದ್ದರಿಂದ ಶಬ್ದಕ್ಕೆ ವಿಷಯವೇ ಇಲ್ಲದಂತಾಗುತ್ತದೆ ಎಂಬುದು ''ಅರ್ಥಶೂನ್ಯತ್ವಾತ್'' ಎಂಬುದರ ಅರ್ಥ. ಒಂದು ವೇಳೆ ವಿಷಯವಿದ್ದರೂ ಕೂಡ ಆ ಶಬ್ದಕ್ಕೂ ಅರ್ಥಕ್ಕೂ ಯಾವುದೇ ಸಂಬಂಧವಿಲ್ಲ ''ಸಂಸ್ಪರ್ಶಶೂನ್ಯತ್ವಾತ್'' ಎಂಬುದಕ್ಕೆ ಅರ್ಥ. ಈ ಅರ್ಥಶೂನ್ಯತ್ವ ಹಾಗೂ ಸಂಸ್ಪರ್ಶಶೂನ್ಯತ್ವಗಳನ್ನು ಬೌದ್ಧಮತದ ಪ್ರಕಾರವೇ ತಿಳಿಯಬೇಕು.

'ಉಪಲಕ್ಷಣಂ ಚೈತತ್ ಅವಿಜ್ಞಾನಾತ್ಮಕತ್ವಾದೀನಾಂ' ಎಂಬುದು ಒಂದೇ ವಾಕ್ಯವಾಗಿದೆ. ಅರ್ಥಶೂನ್ಯತ್ವ ಹಾಗೂ ಸಂಸ್ಪರ್ಶಶೂನ್ಯತ್ವ ಅವಿಜ್ಞಾನಾತ್ಮಕತ್ವ ಮೊದಲಾದ ಅನೇಕ ಯುಕ್ತಿಗಳಿಂದ ಆಗಮಕ್ಕೆ ಅಪ್ರಾಮಾಣ್ಯವನ್ನು ತಿಳಿಯಬೇಕು ಎಂಬುದು ಇದರ ಅಭಿಪ್ರಾಯ.

## ವಿಷಯವಿಷಯೀಭಾವವೆಂಬ ಸಂಬಂಧದ ನಿರಾಕರಣೆ

ಯಾದುಪತ್ಯ– ನಿಶ್ಚಿತತ್ವಾದಿತಿ ॥ ತಥಾ ಚ ನೇಶ್ವರಜಿಜ್ಞಾಸ್ಯಯೋರ್ವಿಷಯವಿಷಯಿಭಾವಃ ಸಂಬಂಧಃ ಸಂಭವತೀತಿ ಭಾವಃ। ನ ಚೈವಂ ಸಕಲೇತಿ ॥ ಯದ್ಯಗ್ನಿರ್ನ ಸ್ಯಾದಿತ್ಯಾದಾವಪಿ ವಿಷಯೀಭೂತಾಗ್ನಿಮತ್ತ್ವಾದಿನಾ ಪರ್ವತಾದಿನಿಶ್ಚಯೇ ನಿಶ್ಚಿತತ್ವಾದೇವಾನಿಶ್ಚಯೇ ಚ ಬುದ್ಧಾವನಾರೂಢಂ ನ ಶಕ್ಯಂ ಜಿಜ್ಞಾಸಿತುಮಿತಿ ಉಕ್ತರೀತ್ಯಾ ತರ್ಕಾವತಾರಾನುಪಪತ್ತಿಪ್ರಸಂಗೇನ ಇತ್ಯರ್ಥಃ।

''ನಿಶ್ಚಿತತ್ವಾತ್'' – ಈಶ್ವರ ಹಾಗೂ ಜಿಜ್ಞಾಸೆಗಳಿಗೆ ವಿಷಯವಿಷಯಿಭಾವರೂಪವಾದ ಸಂಬಂಧವು ಕೂಡುವುದಿಲ್ಲ. ಸಂಬಂಧ ನಿರಾಕರಣೆಯನ್ನು ಪ್ರತ್ಯೇಕವಾಗಿ ಮಾಡಿರುವುದಿಲ್ಲ. ಇವುಗಳ ನಿರಾಕರಣೆಯಿಂದಲೇ ಸಂಬಂಧನಿರಾಕರಣೆಯೂ ಕೂಡ ಅರ್ಥಾತ್ ಸಿದ್ಧವಾಗುತ್ತದೆ.

''ನ ಚೈವಂ ಸಕಲ'' – ಯದಿ ಅಗ್ನಿರ್ನಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾತ್ ಎಂಬಲ್ಲಿಯೂ ಕೂಡ ಅಗ್ನಿಮತ್ತ್ವೇನ ರೂಪೇಣ ಪರ್ವತವು ನಿಶ್ಚಯವಾಗಿದೆಯೋ ಇಲ್ಲವೋ? ನಿಶ್ಚಯವಾಗಿದೆ ಎಂದು ಹೇಳಿದರೆ ತರ್ಕವನ್ನು ಹೇಳುವ ಆವಶ್ಯಕತೆಯೇ ಇರುವುದಿಲ್ಲ. ನಿಶ್ಚಿತವಾಗಿಲ್ಲ ಎಂದು ಹೇಳಿದರೆ ಬುದ್ಧಿ-

ಯಲ್ಲಿ ಆರೂಢವಾಗದೇ ಇರುವುದರಿಂದಲೇ ಜಿಜ್ಞಾಸೆಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಹೀಗೆ ಹಿಂದೆ ಹೇಳಿದಂತೆ ತರ್ಕದ ಅವತಾರವೇ ಅನುಪಪನ್ನವಾಗುತ್ತದೆ ಎಂದರ್ಥ.

''ವ್ಯಾಘಾತಃ'' – 'ತರ್ಕವಿಷಯಃ ಯದಿ ನಿಶ್ಚಿತಃ ತರ್ಹಿ ಜಿಜ್ಞಾಸ್ಯತ್ವಂ ನ ಸ್ಯಾತ್, ತರ್ಕವಿಷಯಃ ಯದಿ ಅನಿಶ್ಚಿತಃ ತರ್ಹಿ ಬುದ್ಧಾ ಅನಾರೂಢತ್ವಾತ್ ಜಿಜ್ಞಾಸ್ಯತ್ವಂ ನ ಸ್ಯಾತ್' ಎಂಬುದೂ ಕೂಡ ಒಂದು ತರ್ಕವೇ ಆಗಿದೆ. ಈ ತರ್ಕದ ವಿಷಯವು ನಿಶ್ಚಿತವೋ ಅನಿಶ್ಚಿತವೋ ಎಂಬುದಾಗಿ ವಿಕಲ್ಪಮಾಡಿ ನಿರಾಕರಣೆ ಮಾಡಲು ಸಾಧ್ಯವಿದೆ. ಹೀಗೆ ಸಕಲತರ್ಕಗಳನ್ನೂ ನಿರಾಕರಣೆ ಮಾಡಲು ಯಾವ ತರ್ಕವನ್ನು ಹೇಳುತ್ತೀರೋ ಆ ತರ್ಕವೂ ಕೂಡ ಅದೇ ನ್ಯಾಯದಿಂದಲೇ ನಿರಾಕೃತವಾಗುತ್ತದೆ. ಆದ್ದರಿಂದ ಸ್ವನ್ಯಾಯವಿರೋಧವು ಬರುತ್ತದೆ.

## ಬೌದ್ಧರ ಪ್ರಕಾರ ಪೂರ್ವಪಕ್ಷ

ಯಾದುಪತ್ಯ– ವ್ಯಾಘಾತ ಇತಿ ॥ ನಿಶ್ಚಿತತ್ವೇಽನಿಶ್ಚಿತತ್ವೇ ವಾ ಜಿಜ್ಞಾಸ್ಯತ್ವಂ ನ ಸ್ಯಾದಿತಿ ಪ್ರಕೃತತರ್ಕವಿಷಯೇಽಪಿ ಪ್ರಮಿತತ್ವಾಪ್ರಮಿತತ್ವವಿಕಲ್ಪತದ್ದೂಷಣಯೋಃ ಪ್ರಸಂಗೇನೇತ್ಯರ್ಥಃ । ಸಾಮಾನ್ಯತ ಇತಿ ॥ ಪರ್ವತತ್ವಾದಿನಾ ಸಾಮಾನ್ಯರೂಪೇಣ ಧರ್ಮಿಣೋ ನಿಶ್ಚಿತತ್ವಂ ನ ತು ತರ್ಕವಿಷಯೀಭೂತತ್ವೇನ ವಹ್ನಿಮತ್ ಪರ್ವತತ್ವಾದಿವಿಶೇಷರೂಪೇಣಾಪಿ ಯೇನ ತರ್ಕಾನವತಾರ ಇತಿ ಭಾವಃ । ನ ಚ ತತ್ರೇತಿ ॥ ವಕ್ಷ್ಯಮಾಣರೀತ್ಯಾ ಈಶ್ವರಾಖ್ಯಧರ್ಮಿಣಃ ಸಾಮಾನ್ಯತೋಽಪ್ಯುಪಸ್ಥಾಪಕಪ್ರಮಾಣಾಭಾವಾದಿತಿ ಭಾವಃ । ನನು ಪ್ರತ್ಯಕ್ಷೇಣ ಕಥಮೀಶ್ವರಾಭಾವಜ್ಞಾನಂ ತಸ್ಯಾತೀಂದ್ರಿಯತ್ವೇನ ತದಯೋಗ್ಯತ್ವಾದಿತ್ಯತ ಆಹ – ಆಪಾತತ ಇತಿ ॥ ತಸ್ಯ ಅತೀಂದ್ರಿಯತ್ವಾದಿವಿಚಾರಾಭಾವದಶಾಯಾಮಿತ್ಯರ್ಥಃ । ತದ್ವಿಚಾರಾನಂತರಂ ತು ನ ಪ್ರತ್ಯಕ್ಷಂ ತತ್ರೋಪನ್ಯಾಸಾರ್ಹಮಿತ್ಯಭಿಸಂಧಿಃ । ಪಾರತಂತ್ರ್ಯಚ್ಚೇತಿ ॥ ವೇದಸಂವಾದಾಧೀನಪ್ರಾಮಾಣ್ಯನಿಶ್ಚಾಯಕತ್ವಾದಿತ್ಯರ್ಥಃ । ಪೌರುಷೇಯತ್ವಾಪೌರುಷೇಯತ್ವಯೋರಿತಿ ॥ ಪೌರುಷೇಯತ್ವೇ ಆಪ್ತಿನಿಶ್ಚಾಯಕತ್ವಾಭಾವೇನ ಅಪೌರುಷೇಯತ್ವೇ ಆಪ್ತಸ್ಯೈವಾಭಾವೇನಾಪ್ತೋಕ್ತತ್ವರೂಪಗುಣಲಕ್ಷಣಕಾರಣಾಭಾವೇನೇತ್ಯರ್ಥಃ । ಶಾಕ್ಯಾದಿವಚಸಾಂ = ಬೌದ್ಧಾದಿವಚಸಾಮ್ । ಸಂಸ್ಪರ್ಶಃ ಸಂಬಂಧಃ । ಶಬ್ದಸ್ಯಾರ್ಥೇನ ಸಂಯೋಗಸಮವಾಯಯೋರಸಂಭವಾದನ್ಯಸ್ಯ ಚಾಸಂಬದ್ಧತ್ವಾದಿತಿ ಭಾವಃ । ವಾಕ್ಯಾರ್ಥೇತಿ ॥ ಪದಾನಾಮರ್ಥ ಇವ ವಾಕ್ಯಾರ್ಥೇಽಪಿ ಶಕ್ತ್ಯಾದ್ಯಭಾವಾದಿತಿ ಭಾವಃ ॥

''ಸಾಮಾನ್ಯತಃ'' – ಪರ್ವತತ್ವ ಮೊದಲಾದ ಸಾಮಾನ್ಯರೂಪದಿಂದ ಧರ್ಮಿಯು ನಿಶ್ಚಿತ-

ವಾಗಿದೆ. ತರ್ಕಕ್ಕೆ ವಿಷಯೀಭೂತವಾದ ವಹ್ನಿಮತ್‌ಪರ್ವತತ್ವಾದಿವಿಶೇಷರೂಪದಿಂದ ನಿಶ್ಚಿತವಾಗಿರುವುದಿಲ್ಲ. ಆದ್ದರಿಂದ ತರ್ಕಕ್ಕೆ ಅವಕಾಶವಿಲ್ಲವೆಂದು ಹೇಳಲು ಸಾಧ್ಯವಿಲ್ಲ ಎಂದರ್ಥ.

"ನ ಚ ತತ್ರ" – ಮುಂದೆ ಹೇಳುವಂತೆ ಈಶ್ವರನೆಂಬ ಧರ್ಮಿಗೆ ಸಾಮಾನ್ಯತಃ ಕೂಡ ಉಪಸ್ಥಾಪಕವಾದ ಪ್ರಮಾಣವು ಇರುವುದಿಲ್ಲ ಎಂದಭಿಪ್ರಾಯ. ಪ್ರತ್ಯಕ್ಷದಿಂದ ಈಶ್ವರಾಭಾವಜ್ಞಾನವು ಹೇಗೆ ಬರುತ್ತದೆ? ಆ ಈಶ್ವರನು ಅತೀಂದ್ರಿಯನಾಗಿರುವುದರಿಂದ ತದಭಾವವು ಪ್ರತ್ಯಕ್ಷಕ್ಕೆ ಅಯೋಗ್ಯವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ "ಆಪಾತತಃ" ಎಂಬುದರಿಂದ ಉತ್ತರಿಸಿದ್ದಾರೆ.

"ಪಾರತಂತ್ರ್ಯಾಚ್ಚ"– ವೇದಸಂವಾದಾಧೀನವಾದ ಪ್ರಾಮಾಣ್ಯನಿಶ್ಚಯವುಳ್ಳವುಗಳಾಗಿವೆ ಎಂದು ಅರ್ಥ.

"ಪೌರುಷೇಯತ್ವಾಪೌರುಷೇಯತ್ವಯೋಃ" – ವೇದವು ಪೌರುಷೇಯವೆಂದು ಹೇಳಿದರೆ ಆಪ್ತನಿಶ್ಚಾಯಕ ಹೇಳಲು ಆಗುವುದಿಲ್ಲ. ಅಪೌರುಷೇಯವೆಂದು ಹೇಳಿದರೆ ಆಪ್ತನೇ ಇಲ್ಲದ ಕಾರಣ ಆಪ್ತೋಕ್ತತ್ವವೆಂಬ ಗುಣಲಕ್ಷಣದ ಕಾರಣವು ಇರುವುದಿಲ್ಲ ಎಂದರ್ಥ.

"ಶಾಕ್ಯಾದಿವಚಸಾಂ" – ಎಂದರೆ ಬೌದ್ಧಾದಿಗಳ ಮಾತು ಎಂದರ್ಥ. "ಸಂಸರ್ಶ" ಎಂಬ ಶಬ್ದಕ್ಕೆ ಸಂಬಂಧ ಎಂದರ್ಥ. ಶಬ್ದಕ್ಕೆ ಅರ್ಥದ ಜೊತೆ ಸಂಯೋಗ, ಸಮವಾಯಗಳು ಅಸಂಭಾವಿತವಾಗಿವೆ. ಬೇರೆ ಸಂಬಂಧಗಳೂ ಕೂಡ ಇರುವುದಿಲ್ಲ ಎಂದರ್ಥ. "ವಾಕ್ಯಾರ್ಥ" – ಪದಗಳಿಗೆ ಅರ್ಥದ ಜೊತೆ ಸಂಬಂಧವಿರುವದಂತೆ ವಾಕ್ಯಾರ್ಥದಲ್ಲೂ ಕೂಡ ಶಕ್ತ್ಯಾದಿಗಳು ಇರುವುದಿಲ್ಲ. ಪದಗಳಿಗೆ ಅರ್ಥದಲ್ಲಷ್ಟೇ ಶಕ್ತಿಯಿರುತ್ತದೆ. ವಾಕ್ಯಾರ್ಥದಲ್ಲಿ ಶಕ್ತಿಯಿರುವುದಿಲ್ಲ ಎಂದಭಿಪ್ರಾಯ.

## ಸುಧಾಪರಿಮಳಸಾರ

ಈಶ್ವರನು ಪ್ರಮಾಣಗಳಿಂದ ಸಿದ್ಧನೋ ಅಥವಾ ಅಲ್ಲವೋ? ಈ ಎರಡೂ ಪಕ್ಷಗಳಲ್ಲಿಯೂ ಈಶ್ವರನು ಜಿಜ್ಞಾಸೆಗೆ ವಿಷಯನಾಗಲಾರನು. ಅದು ಹೇಗೆಂದರೆ – ಈಶ್ವರನು ಪ್ರಮಾಣಗಳಿಂದ ಪ್ರಮಿತನಲ್ಲ(ಪ್ರಮಾಣಗಳಿಂದ ತಿಳಿಯಲ್ಪಟ್ಟಿಲ್ಲ) ಎಂಬ ಎರಡನೆಯ ಪಕ್ಷವನ್ನು ಅಂಗೀಕರಿಸಿದರೆ ಅನುಗ್ರಾಹ್ಯಪ್ರಮಾಣಾಭಾವೇನ(ವಿಚಾರದಿಂದ) ಜಿಜ್ಞಾಸೆಯಿಂದ ನಿರ್ಣಯಿಸಲ್ಪಡಬೇಕಾದ ಪ್ರಮಾಣವು ಇಲ್ಲದಿರುವುದರಿಂದ ಜಿಜ್ಞಾಸೆಯು ತರ್ಕ(ಯುಕ್ತಿ)ರೂಪವಾಗದಿರುವ ಸಂಭವವು ಉಂಟಾದೀತು. "ಕರಣೋಪಪತ್ತಿತಃ" ಎಂದು ಹಿಂದೆ ಹೇಳಲಾಗಿದೆ. ಆ ಶಬ್ದದ ಅರ್ಥವು ಹೀಗಿದೆ. ಯಥಾರ್ಥಜ್ಞಾನಸಾಧನವಾದುದು ಪ್ರಮಾಣ. ಅಂಥ ಪ್ರಮಾಣಕ್ಕೆ ಅನುಗ್ರಾಹಕ ಅಂದರೆ ನಿರ್ಣಾಯಕವಾದುದು ಜಿಜ್ಞಾಸಾ ಎಂದು. ಇಷ್ಟೇ ಅಲ್ಲದೆ ಬುದ್ಧಿಯಲ್ಲಿ ಆರೂಢವಾಗದ ಅಂದರೆ ಸ್ವಲ್ಪವೂ ತಿಳಿಯಲ್ಪಡದೇ

ಇರುವ ವಸ್ತುವಿನ ಜಿಜ್ಞಾಸೆಯು ಕೂಡಲಾರದು. ಈಶ್ವರನು ಪ್ರಮಾಣದಿಂದ ಪ್ರಮಿತನಾಗಿದ್ದಾನೆ ಎಂಬ ಮೊದಲನೆಯ ಪಕ್ಷವನ್ನು ಒಪ್ಪಿದರೆ ಈಶ್ವರನು ಪ್ರಮಾಣಪ್ರಮಿತನಾದುದರಿಂದಲೇ ಜಿಜ್ಞಾಸೆಗೆ ವಿಷಯನಾಗಲಾರನು.

ಹೀಗೆ ವಿಕಲ್ಪಿಸಿ ಎರಡೂ ಪಕ್ಷಗಳಲ್ಲಿ ಈಶ್ವರನು ಜಿಜ್ಞಾಸೆಗೆ ವಿಷಯನಲ್ಲ. ಎಂದು ವಾದಿಸಿದರೆ ಎಲ್ಲ ತರ್ಕಗಳೂ ಅನುಪಪನ್ನವಾಗುವ ಪ್ರಸಂಗವು ಬರುವುದರಿಂದ ವ್ಯಾಘಾತವು ಬಂದೀತು ಎಂದು ಆಕ್ಷೇಪಿಸಬಾರದು.

ಸಾಮಾನ್ಯವಾಗಿ ತಿಳಿದ ವಸ್ತುವನ್ನು ವಿಶೇಷವಾಗಿ ತಿಳಿಯಲು ತರ್ಕವು ಸಹಕಾರಿ ಆಗುತ್ತದೆ. ಆದ್ದರಿಂದ ಎಲ್ಲ ತರ್ಕಗಳೂ ಅನುಪಪನ್ನವಾಗುತ್ತವೆ ಎಂಬ ಆರೋಪಕ್ಕೆ ಅವಕಾಶವಿಲ್ಲ.

ಆದರೆ ಪ್ರಕೃತ ಈಶ್ವರನ ವಿಷಯದಲ್ಲಿ ಸಾಮಾನ್ಯಪ್ರತೀತಿಯಾಗಲೀ ವಿಶೇಷರೂಪದಿಂದ ವಿಚಾರಣೀಯ-ವಾದ ಅಂಶವಾಗಲೀ ಕಂಡುಬರುವುದಿಲ್ಲ. ಆದ್ದರಿಂದ ಈಶ್ವರನು ಜಿಜ್ಞಾಸೆಗೆ ವಿಷಯ ಆಗಲಾರನು.

ಈಶ್ವರನನ್ನು ತಿಳಿಸುವ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲಾರದು. ಏಕೆಂದರೆ ಪ್ರತ್ಯಕ್ಷವು ಸಾಮಾನ್ಯ-ವಾಗಿ ಈಶ್ವರನ ಅಭಾವವನ್ನೇ ತಿಳಿಸುತ್ತದೆ. ಅನುಮಾನವೂ ಈಶ್ವರನನ್ನು ತಿಳಿಸುವ ವಿಷಯದಲ್ಲಿ ಪ್ರಮಾಣವಾಗ-ಲಾರದು. ಏಕೆಂದರೆ ಈಶ್ವರವ್ಯಾಪ್ತವಾದ ಹೇತು ಇರುವುದಿಲ್ಲ. ಹೇತುವೇ ಇಲ್ಲದೇ ಅನುಮಾನವು ಪ್ರವೃತ್ತವಾಗ-ಲಾರದು.

ಇನ್ನು ಆಗಮವಾದರೋ ಕಾರ್ಯವನ್ನೇ ತಿಳಿಸುವುದರಿಂದ ಸಿದ್ಧನಾದ ಈಶ್ವರನನ್ನು ಅದು ತಿಳಿಸಲಾರದು.

ಈ ಮೂರು ಪ್ರಮಾಣಗಳನ್ನು ಬಿಟ್ಟು ಈಶ್ವರನನ್ನು ತಿಳಿಸುವ ಪ್ರಮಾಣವು ಯಾವುದೂ ಇಲ್ಲ. ಒಂದು ವೇಳೆ ಪ್ರಮಾಣವು ಇದ್ದಿದ್ದರೆ ಅದನ್ನೇ ಯುಕ್ತ್ಯನುಸಂಧಾನರೂಪವಾದ ಜಿಜ್ಞಾಸೆಯಿಂದ ಬೆಂಬಲಿಸಲ್ಪಡುವ ಪ್ರಮಾಣವೆಂದು ಹೇಳಬಹುದಿತ್ತು.

ಆಗಮವು ಈಶ್ವರನನ್ನು ತಿಳಿಸುತ್ತದೆ ಎಂದು ಹೇಳುವ ಸಂದರ್ಭದಲ್ಲಿ ವೇದರೂಪವಾದ ಆಗಮವೇ ಈಶ್ವರನನ್ನು ಬೋಧಿಸುತ್ತದ ಎಂದು ಹೇಳಬೇಕು. (ವೇದವ್ಯತಿರಿಕ್ತವಾದ) ಇತರ ಆಗಮುಗಳಲ್ಲಿ ವೇದವಿರುದ್ಧವಾದ ಪಾಶುಪತಾದಿ ಆಗಮಗಳನ್ನು ಪ್ರಮಾಣವೆಂದು ಶಂಕಿಸಲೂ ಬರುವುದಿಲ್ಲ. ವೇದಾನುಕೂಲವಾದ ಪಾಂಚರಾತ್ರಾದಿ ಆಗಮಗಳು ಪರತಂತ್ರ ಆಗಿವೆ. ಆದ್ದರಿಂದ ವೇದವೇ ಈಶ್ವರನನ್ನು ತಿಳಿಸುತ್ತದೆ ಎಂದು ಹೇಳಬೇಕು.

ಆದರೆ ಆ ವೇದವು ಪೌರುಷೇಯ ಮತ್ತು ಅಪೌರುಷೇಯ ಎಂಬ ಎರಡೂ ಪಕ್ಷಗಳಲ್ಲಿಯೂ ''ಆಪ್ತೋಕ್ತತ್ವ'' ಮುಂತಾದ ಕಾರಣವಿಲ್ಲದಿರುವುದರಿಂದ ಅದು ಪ್ರಮಾಣ ಎಂಬುದೇ ನಿಶ್ಚಯ ಆಗಿಲ್ಲ. ಹೀಗೆ ವೇದವು ಪ್ರಮಾಣವೇ ಆಗದಿರುವಾಗ ಅದು ಈಶ್ವರನನ್ನು ತಿಳಿಸುವುದು ಹೇಗೆ? ತಿಳಿಸಲಾರದು.

ವೇದವು ಸ್ವತಃಪ್ರಮಾಣ ಎಂದು ಅಂಗೀಕರಿಸಲು ಬರುವಂತಿಲ್ಲ. ಏಕೆಂದರೆ ವೇದವು ಸ್ವತಃಪ್ರಮಾಣ ಎಂದು ಅಂಗೀಕರಿಸಿದರೆ ವೇದವಿರುದ್ಧವಾದ ಶಾಕ್ಯಾದಿ ಆಗಮವಾಕ್ಯಗಳಿಗೂ ಅಂಗೀಕರಿಸಬೇಕಾಗುವುದರಿಂದ ಅಂಥ

ಪ್ರಮಾಣಭೂತ ಶಾಕ್ಯಾದಿ ಆಗಮವಿರುದ್ಧವಾದ ವೇದಗಳು ಅಪ್ರಮಾಣಗಳೇ ಆಗುತ್ತವೆ. ಆದ್ದರಿಂದ ಅಪ್ರಮಾಣಗಳಾದ ವೇದಗಳು ಈಶ್ವರನನ್ನು ಸಾಧಿಸಿಕೊಡಲಾರವು. ಆದ್ದರಿಂದಲೇ ಈಶ್ವರನು ಜಿಜ್ಞಾಸೆಗೆ ವಿಷಯನಾಗಲಾರ.

ಶಬ್ದವು ಅರ್ಥದೊಡನೆ ಸಂಬಂಧವನ್ನು ಹೊಂದಿಲ್ಲವಾದುದರಿಂದ ಅದು ಅರ್ಥಪ್ರಮಾಪಕ ಎಂದು ಹೇಳಲು ಬರುವುದಿಲ್ಲ. ಮತ್ತು ಶಬ್ದಗಳಿಂದ ವಾಕ್ಯದ ಅರ್ಥವು ಹೇಗೆ ತಿಳಿಸಲ್ಪಡುತ್ತದೆ ಎಂಬುದನ್ನು ನಿರೂಪಿಸಲೂ ಬರುವುದಿಲ್ಲ. ಹೀಗಿರುವಾಗ ಶಬ್ದವೇ ಪ್ರಮಾಣ ಆಗದಿರುವಾಗ ಶಬ್ದವಿಶೇಷವಾದ ವೇದವು ಹೇಗೆ ಪ್ರಮಾಣವಾದೀತು.

## ನೆನೆಪಿಡಿ

* ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳಲ್ಲಿ ವಿಷಯಾಭಾವಪೂರ್ವಪಕ್ಷವನ್ನು ತೋರಿಸಿದಂತಾಯಿತು. ಈಗ ಸಂಬಂಧಾಭಾವಪೂರ್ವಪಕ್ಷಗಳನ್ನು ತೋರಿಸುತ್ತಿದ್ದಾರೆ.

* ಓಂ ಮತ್ತು ಬ್ರಹ್ಮಶಬ್ದಗಳಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸಿ ಈಗ ಅತಃ ಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

* ಪ್ರತಿಯೋಗಿಪ್ರತ್ಯಕ್ಷವಿದ್ದರೆ ಮಾತ್ರ ತದಭಾವವು ಪ್ರತ್ಯಕ್ಷದಿಂದ ತಿಳಿಯುತ್ತದೆ. ಈಶ್ವರನು ಪ್ರತ್ಯಕ್ಷದಿಂದ ತಿಳಿಯದ ಕಾರಣ ಈಶ್ವರಾಭಾವವು ಪ್ರತ್ಯಕ್ಷಗಮ್ಯವಲ್ಲ.

* ಈಶ್ವರನು ಅನುಮಾನ ಹಾಗೂ ಆಗಮಗಳಿಂದಲೂ ಕೂಡ ಗಮ್ಯನಲ್ಲ; ಆದ್ದರಿಂದ ಅನುಗ್ರಾಹಕಪ್ರಮಾಣವೇ ಇರುವುದಿಲ್ಲ.

* 'ಅಪ್ರಾಮಾಣ್ಯಂ ತಥಾನ್ಯತಃ' ಎಂಬ ಅನುವ್ಯಾಖ್ಯಾನದಿಂದ ಅಪ್ರಾಮಾಣ್ಯಪರತಸ್ತ್ವವನ್ನು ಸಮರ್ಥಿಸಿದ್ದಾರೆ. ಇದರಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ಇಲ್ಲಿ ಹೇಳಿದ್ದಾರೆ.

* 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಮತ್ತು 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಎಂಬ ಅನುವ್ಯಾಖ್ಯಾನದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ಶಬ್ದಕ್ಕೆ ಪ್ರಾಮಾಣ್ಯವೇ ಇಲ್ಲವೆಂಬುದಾಗಿ ಹೇಳಿರುತ್ತಾರೆ.

* ಹೀಗೆ ಅನುಗ್ರಾಹಕಪ್ರಾಮಾಣ್ಯವೇ ಇಲ್ಲದ ಕಾರಣ ಬ್ರಹ್ಮಜಿಜ್ಞಾಸೆಯು ಕರ್ತವ್ಯವಲ್ಲ.

* * * * * * * *

## ಶ್ರೀಪದ್ಮನಾಭತೀರ್ಥಪೂಜ್ಯಚರಣವಿರಚಿತಾ
## ಶ್ರೀಸನ್ನ್ಯಾಯರತ್ನಾವಳೀ

### ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯಸಮರ್ಥನೆ

ಸನ್ನ್ಯಾಯರತ್ನಾವಳಿ – ನನು ಸೂತ್ರಾಣಾಂ ಪ್ರಾಮಾಣ್ಯೇ ಸಿದ್ಧೇ ಸಿದ್ಧಂ ವ್ಯಾಖ್ಯೇಯತ್ವಮ್ । ತಚ್ಚ ಕಥಮ್? ಇತ್ಯಾಶಂಕ್ಯಾಹ – ಗುರುರ್ಗುರೂಣಾಮ್ ಇತಿ ॥ ಗುರೂಣಾಂ ಬ್ರಹ್ಮಾದೀನಾಂ ಜ್ಞಾನಪ್ರದಾತಾ ಮಹಾಭಾರತಾದಿಶಾಸ್ತ್ರಾಣಾಂ ಕರ್ತಾ ಬಾದರಾಯಣೋ ಯತಃ, ಅತಃ ಅಜಾದಿಭ್ಯಃ ಶ್ರೋತೃಭ್ಯೋಽರ್ಥಾಯೋಕ್ತಮ್ । ಸಂಶಯವಿಪರ್ಯಯಾದಿರಹಿತತ್ವಾತ್ । ಬ್ರಹ್ಮಸೂತ್ರಾಖ್ಯಂ ಶಾಸ್ತ್ರಂ ಪ್ರಮಾಣಮ್ ॥೪॥

ಸೂತ್ರಗಳಿಗೆ ಮೊದಲು ಪ್ರಾಮಾಣ್ಯವು ಸಿದ್ಧವಾಗಬೇಕು. ಅನಂತರ ವ್ಯಾಖ್ಯಾನ ಮಾಡಲು ಯೋಗ್ಯವಾಗುತ್ತವೆ. ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಹೇಗೆ ಸಿದ್ಧವಾಗುತ್ತದೆ? ಈ ವಿಷಯದಲ್ಲಿ ಬರುವ ಆಶಂಕೆಯನ್ನು ಗುರುರ್ಗುರೂಣಾಂ ಎಂಬುದರಿಂದ ಪರಿಹರಿಸಿದ್ದಾರೆ. ಗುರೂಣಾಂ = ಬ್ರಹ್ಮಾದಿ ದೇವತೆಗಳಿಗೆ, ಗುರುಃ = ಜ್ಞಾನೋಪದೇಶಕನು, ಮಹಾಭಾರತಾದಿ ಶಾಸ್ತ್ರಗಳ ಕರ್ತೃವು ಆಗಿರುತ್ತಾರೆ. ಯಾವ ಕಾರಣದಿಂದ ವೇದವ್ಯಾಸದೇವರು ಹೀಗೆ ಜ್ಞಾನೋಪದೇಶಕರಾಗಿದ್ದಾರೋ ಆದ್ದರಿಂದ ಚತುರ್ಮುಖಾದಿ ದೇವತೆಗಳಿಗೆ ಮೋಕ್ಷಪ್ರಯೋಜನಕ್ಕೋಸ್ಕರ ಈ ಶಾಸ್ತ್ರವನ್ನು ರಚನೆ ಮಾಡಿದ್ದಾರೆ. ಸಂಶಯವಿಪರ್ಯಯಾದಿಗಳಿಂದ ರಹಿತವಾಗಿರುವುದರಿಂದ ಬ್ರಹ್ಮಸೂತ್ರವೆಂಬ ಶಾಸ್ತ್ರವು ಪ್ರಮಾಣವಾಗಿದೆಯೆಂದು ತಿಳಿಯಬೇಕು.

ವಿವರಣೆ – ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡಬೇಕೆಂದರೆ ಮೊದಲು ಅದರಲ್ಲಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡಬೇಕು. ಅದಕ್ಕಾಗಿ ಗುರುರ್ಗುರೂಣಾಂ ಎಂಬ ನಾಲ್ಕನೆಯ ಶ್ಲೋಕವು ಹೊರಟಿದೆ. ಸಮಸ್ತಜಗತ್ತಿಗೂ ತತ್ತ್ವೋಪದೇಶಕರಾದ ಬ್ರಹ್ಮಾದಿದೇವತೆಗಳಿಗೂ ವೇದವ್ಯಾಸದೇವರು ಗುರುಗಳಾಗಿದ್ದಾರೆ. ಮಹಾಭಾರತಾದಿ ಶಾಸ್ತ್ರಗಳ ನಿರ್ಮಾತೃಗಳಾಗಿದ್ದಾರೆ. ಇಂಥ ವೇದವ್ಯಾಸದೇವರು

ಚತುರ್ಮುಖಾದಿ ದೇವತೆಗಳಿಗೆ ಮೋಕ್ಷಪ್ರಯೋಜನಕ್ಕೋಸ್ಕರ ಈ ಶಾಸ್ತ್ರವನ್ನು ಉಪದೇಶ ಮಾಡಿದ್ದಾರೆ. ಚತುರ್ಮುಖಾದಿ ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಈ ಶಾಸ್ತ್ರದ ಮೂಲಕ ತತ್ವಜ್ಞಾನವನ್ನು ಉಪದೇಶಿಸಿದ್ದಾರೆ. ಆದ್ದರಿಂದ ಈ ಶಾಸ್ತ್ರವು ಸಂಶಯವಿಪರ್ಯಯಾದಿಗಳಿಂದ ರಹಿತವಾಗಿದೆ. ಮೋಕ್ಷವೇ ಪ್ರಯೋಜನವುಳ್ಳದ್ದಾಗಿದೆ. ಆದ್ದರಿಂದ ಪರಮಪ್ರಮಾಣವೆಂದು ಸಿದ್ಧವಾಗುತ್ತದೆ.

## ಐದರಿಂದ ಏಳನೆಯ ಶ್ಲೋಕಗಳ ವ್ಯಾಖ್ಯಾನ

ಸನ್ನ್ಯಾಯರತ್ನಾವಳಿ– ನನು ಪೌರುಷೇಯವಾಕ್ಯಾನಾಮ್ ಆಪ್ತೋಕ್ತತ್ವೇನ ಪ್ರಾಮಾಣ್ಯಮವಧೃತಮ್ । ಆಪ್ತೋಕ್ತತ್ವಂ ಚ ಕಥಮಿತ್ಯತ ಆಹ – ವಕ್ತೃಶ್ರೋತೃಪ್ರಸಕ್ತೀನಾಮಿತಿ ॥ ಇದಮೇವ ಹ್ಯಾಪ್ತೋಕ್ತತ್ವಂ ಯದ್ ವಕ್ತೃಶ್ರೋತೃಪ್ರಸಕ್ತ್ಯಾನುಕೂಲ್ಯಮ್ । ವಕ್ತ್ರಾನುಕೂಲ್ಯಂ ತಾವದ್ ಭಗವತೋ ವೇದವ್ಯಾಸಸ್ಯ ವಕ್ತೃತ್ವಾದ್ ಅಸ್ಯೇವ ಸೂತ್ರಾಣಾಮ್ । ಶ್ರೋತ್ರಾನುಕೂಲ್ಯಂ ಚ ಬ್ರಹ್ಮಾದೀನಾಂ ಶ್ರೋತೃತ್ವಾತ್ । ಪ್ರಸಂಗಾನುಕೂಲ್ಯಂ ಚ ಅಜ್ಞಾನನಿರ್ಹರಣಾರ್ಥೇನ ಪ್ರವೃತ್ತೇಃ । ತತ್ರ ಏಕೈಕಾನುಕೂಲ್ಯಾಭಾವೇಽಪಿ ಅನಾಪ್ತತ್ವಮ್ । ಯಥಾ ಜೈನವಾಕ್ಯೇಷು ವಕ್ತ್ರಾನುಕೂಲ್ಯಾಭಾವಾದ್ ಆಪ್ತಿಶೂನ್ಯತ್ವಮ್ । ಯಥಾ ಶ್ರೋತ್ರಾನುಕೂಲ್ಯಾಭಾವಾತ್ ಆಪ್ತಿಶೂನ್ಯತ್ವಂ ಬುದ್ಧವಾಕ್ಯೇಷು । ಯಥಾ ಚ ಪ್ರಸಂಗಾನುಕೂಲ್ಯಾಭಾವಾತ್ ಆಪ್ತಿಶೂನ್ಯತ್ವಂ ನರ್ಮಾದಿವಾಕ್ಯೇಷು । ತಚ್ಚೋಕ್ತಂ ಭಾರತೇ –

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥ ಇತಿ ।

ನ ಕೇವಲಮಾಪ್ತೋಕ್ತತ್ವಾತ್ ಪ್ರಾಮಾಣ್ಯಮಪಿ ತು ಶ್ರುತಿಮೂಲತ್ವಾದ್ ಯುಕ್ತಿಮೂಲತ್ವಾಚ್ಚ । ಅತಃ ತ್ರಿವಿಧಂ ಪ್ರಾಮಾಣ್ಯಂ ಬ್ರಹ್ಮಸೂತ್ರಾಣಾಮ್ । ಜೈಮಿನ್ಯಾದಿವಾಕ್ಯೇಷು ತ್ವೇಕೈಕಥಾ ಪ್ರಾಮಾಣ್ಯಮ್ । ಅತೋ ಬ್ರಹ್ಮಸೂತ್ರಸದೃಶಂ ನ ಪ್ರಮಾಣತಮಮಸ್ತಿ ಅತಃ ಪ್ರಮಾಣತಮತ್ವಾದ್ ವ್ಯಾಖ್ಯೇಯಮ್ । ಯದ್ಯಪಿ ಭಾಷ್ಯರೂಪೇಣ ವ್ಯಾಖ್ಯಾತಮಿದಂ ಶಾಸ್ತ್ರಮ್; ತಥಾಽಪಿ ಅಸ್ಪಷ್ಟಸ್ಪಷ್ಟೀಕರಣಾಯ ವ್ಯಾಖ್ಯಾಯತ ಇತ್ಯದೋಷಃ ॥೫-೭॥

ಪೌರುಷೇಯವಾಕ್ಯಗಳಿಗೆ ಆಪ್ತೋಕ್ತತ್ವದಿಂದಲೇ ಪ್ರಾಮಾಣ್ಯವನ್ನು ಹೇಳಬೇಕೆಂಬುದು ಸಿದ್ಧವಾದ ವಿಷಯ. ಈ ಬ್ರಹ್ಮಮೀಮಾಂಸಾಶಾಸ್ತ್ರವು ಪೌರುಷೇಯವಾಕ್ಯವಾಗಿರುವುದರಿಂದ ಆಪ್ತೋಕ್ತತ್ವವನ್ನು ಹೇಗೆ ಹೇಳುವುದು? ಈಪ್ರಶ್ನೆಗೆ ''ವಕ್ತೃಶ್ರೋತೃಪ್ರಸಕ್ತೀನಾಂ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳಿರುವುದನ್ನೇ ಆಪ್ತೋಕ್ತತ್ವ ಎಂದು ಕರೆಯುತ್ತಾರೆ. ಬ್ರಹ್ಮಾದಿಗಳು ಶ್ರೋತೃಗಳಾಗಿರುವುದರಿಂದ ಈ ಶಾಸ್ತ್ರಕ್ಕೆ ವಕ್ತ್ರಾನುಕೂಲ್ಯವಿದೆ. ಅಜ್ಞಾನದ ಪರಿಹಾರಕ್ಕಾಗಿ ಈ ಶಾಸ್ತ್ರವು ಹೊರಟಿರುವುದರಿಂದ ಪ್ರಸಂಗಾನುಕೂಲ್ಯವಿದೆ. ಈ ಮೂರರಲ್ಲಿ ಒಂದೊಂದು ಆನುಕೂಲ್ಯಗಳು ಇಲ್ಲದಿದ್ದರೂ ಕೂಡ ಆಪ್ತತ್ವವು ಬರುವುದಿಲ್ಲ. ಉದಾಹರಣೆ – ಜೈನವಾಕ್ಯವು ಆಪ್ತವಾಕ್ಯವಲ್ಲ; ಏಕೆಂದರೆ ವಕ್ತೃವು ಅಪ್ರಾಮಾಣಿಕನಾದ್ದರಿಂದ ವಕ್ತ್ರಾನುಕೂಲ್ಯವು ಇರುವುದಿಲ್ಲ. ಕೇಳುವವರು ತತ್ವಜ್ಞಾನಕ್ಕೆ ಅಯೋಗ್ಯರಾಗಿರುವುದರಿಂದ ಬೌದ್ಧವಾಕ್ಯದಲ್ಲಿ ಶ್ರೋತ್ರಾನುಕೂಲ್ಯವು ಇರುವುದಿಲ್ಲ. ಆದ್ದರಿಂದ ಅಲ್ಲೂ ಕೂಡ ಆಪ್ತಿಯು ಇರುವುದಿಲ್ಲ. ನರ್ಮಾದಿವಾಕ್ಯಗಳು ಪ್ರಸಂಗಾನುಕೂಲ್ಯವನ್ನು ಹೊಂದದ ಕಾರಣ ಅನಾಪ್ತವಾಕ್ಯಗಳಾಗಿವೆ.

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

ಹಾಸ್ಯಕ್ಕಾಗಿ, ಸ್ತ್ರೀಯರ ಮಧ್ಯದಲ್ಲಿ, ವಿವಾಹಕಾಲದಲ್ಲಿ, ಪ್ರಾಣಾಂತಿಕದಲ್ಲಿ, ಸರ್ವಧನದ ಅಪಹಾರದಲ್ಲಿ ಸುಳ್ಳನ್ನು ಹೇಳಿದರೆ ಪಾಪ ಬರುವುದಿಲ್ಲ ಎಂಬುದಾಗಿ ಮಹಾಭಾರತವು ಹೇಳುತ್ತಿದೆ.

ಕೇವಲ ಆಪ್ತವಾಕ್ಯವಾಗಿರುವುದರಿಂದ ಬ್ರಹ್ಮಸೂತ್ರಗಳು ಪ್ರಾಮಾಣ್ಯವನ್ನು ಹೊಂದಿ–ರುತ್ತವೆ ಎಂದಷ್ಟೇ ಅಲ್ಲ. ಶ್ರುತಿಮೂಲತ್ವ, ಯುಕ್ತಿಮೂಲಗಳಿರುವುದರಿಂದಲೂ ಇದು ಪ್ರಮಾಣವಾಗಿದೆ. ಹೀಗೆ ಆಪ್ತವಾಕ್ಯತ್ವ ಶ್ರುತಿಮೂಲತ್ವ ಯುಕ್ತಮೂಲತ್ವವೆಂಬ ಮೂರು

ಚತುರ್ಮುಖಾದಿ ದೇವತೆಗಳಿಗೆ ಮೋಕ್ಷಪ್ರಯೋಜನಕ್ಕೋಸ್ಕರ ಈ ಶಾಸ್ತ್ರವನ್ನು ಉಪದೇಶ ಮಾಡಿದ್ದಾರೆ. ಚತುರ್ಮುಖಾದಿ ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಈ ಶಾಸ್ತ್ರದ ಮೂಲಕ ತತ್ವಜ್ಞಾನವನ್ನು ಉಪದೇಶಿಸಿದ್ದಾರೆ. ಆದ್ದರಿಂದ ಈ ಶಾಸ್ತ್ರವು ಸಂಶಯವಿಪರ್ಯಯಾದಿಗಳಿಂದ ರಹಿತವಾಗಿದೆ. ಮೋಕ್ಷವೇ ಪ್ರಯೋಜನವುಳ್ಳದ್ದಾಗಿದೆ. ಆದ್ದರಿಂದ ಪರಮಪ್ರಮಾಣವೆಂದು ಸಿದ್ಧವಾಗುತ್ತದೆ.

## ಐದರಿಂದ ಏಳನೆಯ ಶ್ಲೋಕಗಳ ವ್ಯಾಖ್ಯಾನ

ಸನ್ನ್ಯಾಯರತ್ನಾವಳಿ– ನನು ಪೌರುಷೇಯವಾಕ್ಯಾನಾಮ್ ಆಪ್ತೋಕ್ತತ್ವೇನ ಪ್ರಾಮಾಣ್ಯಮವಧೃತಮ್ । ಆಪ್ತೋಕ್ತತ್ವಂ ಚ ಕಥಮಿತ್ಯತ ಆಹ – ವಕ್ತೃಶ್ರೋತೃಪ್ರಸಕ್ತೀನಾಮಿತಿ ॥ ಇದಮೇವ ಹ್ಯಾಪ್ತೋಕ್ತತ್ವಂ ಯದ್ ವಕ್ತೃಶ್ರೋತೃಪ್ರಸಕ್ತ್ಯಾನುಕೂಲ್ಯಮ್ । ವಕ್ತ್ರಾನುಕೂಲ್ಯಂ ತಾವದ್ ಭಗವತೋ ವೇದವ್ಯಾಸಸ್ಯ ವಕ್ತೃತ್ವಾದ್ ಅಸ್ಯೇವ ಸೂತ್ರಾಣಾಮ್ । ಶ್ರೋತ್ರಾನುಕೂಲ್ಯಂ ಚ ಬ್ರಹ್ಮಾದೀನಾಂ ಶ್ರೋತೃತ್ವಾತ್ । ಪ್ರಸಂಗಾನುಕೂಲ್ಯಂ ಚ ಅಜ್ಞಾನನಿರ್ಹರಣಾರ್ಥೇನ ಪ್ರವೃತ್ತೇಃ । ತತ್ರ ಏಕೈಕಾನುಕೂಲ್ಯಾಭಾವೇಽಪಿ ಅನಾಪ್ತತ್ವಮ್ । ಯಥಾ ಜೈನವಾಕ್ಯೇಷು ವಕ್ತ್ರಾನುಕೂಲ್ಯಾಭಾವಾದ್ ಆಪ್ತಿಶೂನ್ಯತ್ವಮ್ । ಯಥಾ ಶ್ರೋತ್ರಾನುಕೂಲ್ಯಾಭಾವಾತ್ ಆಪ್ತಿಶೂನ್ಯತ್ವಂ ಬುದ್ಧವಾಕ್ಯೇಷು । ಯಥಾ ಚ ಪ್ರಸಂಗಾನುಕೂಲ್ಯಾಭಾವಾತ್ ಆಪ್ತಿಶೂನ್ಯತ್ವಂ ನರ್ಮಾದಿವಾಕ್ಯೇಷು । ತಚ್ಚೋಕ್ತಂ ಭಾರತೇ –

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥ ಇತಿ ।

ನ ಕೇವಲಮಾಪ್ತೋಕ್ತತ್ವಾತ್ ಪ್ರಾಮಾಣ್ಯಮಪಿ ತು ಶ್ರುತಿಮೂಲತ್ವಾದ್ ಯುಕ್ತಿಮೂಲತ್ವಾಚ್ಚ । ಅತಃ ತ್ರಿವಿಧಂ ಪ್ರಾಮಾಣ್ಯಂ ಬ್ರಹ್ಮಸೂತ್ರಾಣಾಮ್ । ಜೈಮಿನ್ಯಾದಿವಾಕ್ಯೇಷು ತ್ವೇಕೈಕಧಾ ಪ್ರಾಮಾಣ್ಯಮ್ । ಅತೋ ಬ್ರಹ್ಮಸೂತ್ರಸದೃಶಂ ನ ಪ್ರಮಾಣತಮಮಸ್ತಿ ಅತಃ ಪ್ರಮಾಣತಮತ್ವಾದ್ ವ್ಯಾಖ್ಯೇಯಮ್ । ಯದ್ಯಪಿ ಭಾಷ್ಯರೂಪೇಣ ವ್ಯಾಖ್ಯಾತಮಿದಂ ಶಾಸ್ತ್ರಮ್; ತಥಾಽಪಿ ಅಸ್ಪಷ್ಟಸ್ಪಷ್ಟೀಕರಣಾಯ ವ್ಯಾಖ್ಯಾಯತ ಇತ್ಯದೋಷಃ ॥೫-೭॥

ಪೌರುಷೇಯವಾಕ್ಯಗಳಿಗೆ ಆಪ್ತೋಕ್ತತ್ವದಿಂದಲೇ ಪ್ರಾಮಾಣ್ಯವನ್ನು ಹೇಳಬೇಕೆಂಬುದು ಸಿದ್ಧವಾದ ವಿಷಯ. ಈ ಬ್ರಹ್ಮಮೀಮಾಂಸಾಶಾಸ್ತ್ರವು ಪೌರುಷೇಯವಾಕ್ಯವಾಗಿರುವುದರಿಂದ ಆಪ್ತೋಕ್ತತ್ವವನ್ನು ಹೇಗೆ ಹೇಳುವುದು? ಈಪ್ರಶ್ನೆಗೆ ''ವಕ್ತೃಶ್ರೋತೃಪ್ರಸಕ್ತೀನಾಂ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯಗಳಿರುವುದನ್ನೇ ಆಪ್ತೋಕ್ತತ್ವ ಎಂದು ಕರೆಯುತ್ತಾರೆ. ಬ್ರಹ್ಮಾದಿಗಳು ಶ್ರೋತೃಗಳಾಗಿರುವುದರಿಂದ ಈ ಶಾಸ್ತ್ರಕ್ಕೆ ವಕ್ತ್ರಾನುಕೂಲ್ಯವಿದೆ. ಅಜ್ಞಾನದ ಪರಿಹಾರಕ್ಕಾಗಿ ಈ ಶಾಸ್ತ್ರವು ಹೊರಟಿರುವುದರಿಂದ ಪ್ರಸಂಗಾನುಕೂಲ್ಯವಿದೆ. ಈ ಮೂರರಲ್ಲಿ ಒಂದೊಂದು ಆನುಕೂಲ್ಯಗಳು ಇಲ್ಲದಿದ್ದರೂ ಕೂಡ ಆಪ್ತತ್ವವು ಬರುವುದಿಲ್ಲ. ಉದಾಹರಣೆ – ಜೈನವಾಕ್ಯವು ಆಪ್ತವಾಕ್ಯವಲ್ಲ; ಏಕೆಂದರೆ ವಕ್ತೃವು ಅಪ್ರಾಮಾಣಿಕನಾದ್ದರಿಂದ ವಕ್ತ್ರಾನುಕೂಲ್ಯವು ಇರುವುದಿಲ್ಲ. ಕೇಳುವವರು ತತ್ವಜ್ಞಾನಕ್ಕೆ ಅಯೋಗ್ಯರಾಗಿರುವುದರಿಂದ ಬೌದ್ಧವಾಕ್ಯದಲ್ಲಿ ಶ್ರೋತ್ರಾನುಕೂಲ್ಯವು ಇರುವುದಿಲ್ಲ. ಆದ್ದರಿಂದ ಅಲ್ಲೂ ಕೂಡ ಆಪ್ತಿಯು ಇರುವುದಿಲ್ಲ. ನರ್ಮಾದಿವಾಕ್ಯಗಳು ಪ್ರಸಂಗಾನುಕೂಲ್ಯವನ್ನು ಹೊಂದದ ಕಾರಣ ಅನಾಪ್ತವಾಕ್ಯಗಳಾಗಿವೆ.

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

ಹಾಸ್ಯಕ್ಕಾಗಿ, ಸ್ತ್ರೀಯರ ಮಧ್ಯದಲ್ಲಿ, ವಿವಾಹಕಾಲದಲ್ಲಿ, ಪ್ರಾಣಾಂತಿಕದಲ್ಲಿ, ಸರ್ವಧನದ ಅಪಹಾರದಲ್ಲಿ ಸುಳ್ಳನ್ನು ಹೇಳಿದರೆ ಪಾಪ ಬರುವುದಿಲ್ಲ ಎಂಬುದಾಗಿ ಮಹಾಭಾರತವು ಹೇಳುತ್ತಿದೆ.

ಕೇವಲ ಆಪ್ತವಾಕ್ಯವಾಗಿರುವುದರಿಂದ ಬ್ರಹ್ಮಸೂತ್ರಗಳು ಪ್ರಾಮಾಣ್ಯವನ್ನು ಹೊಂದಿ–ರುತ್ತವೆ ಎಂದಷ್ಟೇ ಅಲ್ಲ. ಶ್ರುತಿಮೂಲತ್ವ, ಯುಕ್ತಿಮೂಲಗಳಿರುವುದರಿಂದಲೂ ಇದು ಪ್ರಮಾಣವಾಗಿದೆ. ಹೀಗೆ ಆಪ್ತವಾಕ್ಯತ್ವ ಶ್ರುತಿಮೂಲತ್ವ ಯುಕ್ತಮೂಲತ್ವವೆಂಬ ಮೂರು

ಬಗೆಯ ಕಾರಣಗಳಿಂದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಜೈಮಿನ್ಯಾದಿ ವಾಕ್ಯಗಳಲ್ಲಿ ಒಂದೊಂದು ಬಗೆಯ ಪ್ರಾಮಾಣ್ಯವಿದೆ. ಆದರೆ ಬ್ರಹ್ಮಸೂತ್ರಗಳಿಗೆ ಮೂರೂ ಬಗೆಯ ಪ್ರಾಮಾಣ್ಯವಿದೆ ಮತ್ತು ಆ ಪ್ರಾಮಾಣ್ಯವು ನಿರತಿಶಯವಾಗಿದೆ. ಈ ಕಾರಣದಿಂದ ಬ್ರಹ್ಮಸೂತ್ರಕ್ಕೆ ಸದೃಶವಾದ ಮತ್ತೊಂದು ಪ್ರಮಾಣತಮಗ್ರಂಥವು ಇರುವುದಿಲ್ಲ. ಆದ್ದರಿಂದ ಪ್ರಮಾಣತಮತ್ವವು ಬ್ರಹ್ಮಸೂತ್ರಗಳಿಗೆ ಸಿದ್ಧವಾಗುತ್ತದೆ. ಆದ್ದರಿಂದ ಈ ಬ್ರಹ್ಮಸೂತ್ರಗಳು ವ್ಯಾಖ್ಯಾನಮಾಡಲು ಯೋಗ್ಯವಾಗಿವೆ.

ವಾಸ್ತವಿಕವಾಗಿ ಶ್ರೀಮದಾಚಾರ್ಯರು ಬ್ರಹ್ಮಸೂತ್ರಭಾಷ್ಯ ಎಂಬ ಗ್ರಂಥದಿಂದ ಈ ಬ್ರಹ್ಮಸೂತ್ರಗಳಿಗೆ ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಆದರೂ ಕೂಡ ಅದರಲ್ಲಿದ್ದ ಕೆಲವು ಅಸ್ಪಷ್ಟವಿಷಯಗಳನ್ನು ಸ್ಪಷ್ಟಪಡಿಸುವುದಕ್ಕಾಗಿ ಪುನಃ ಈ ಗ್ರಂಥದ ಮೂಲಕ ಮತ್ತೊಮ್ಮೆ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ.

## ಎಂಟನೆಯ ಶ್ಲೋಕದ ವ್ಯಾಖ್ಯಾನ

ತತ್ರ ವ್ಯಾಖ್ಯೇಯಸ್ಯ ಶಾಸ್ತ್ರಸ್ಯ ಇದಮ್ ಆದಿಸೂತ್ರಮ್ – ಓಂ ಅಥಾತೋ ಬ್ರಹ್ಮಜಿಜ್ಞಾಸೇತಿ ॥ ತತ್ರ ಓಂಕಾರಶ್ಚಾಥಶಬ್ದಶ್ಚ ಮಂಗಲಾರ್ಥತ್ವಾದಾದಿತಃ ಪ್ರಯೋಕ್ತವ್ಯೌ । ಓಂಕಾರಸ್ತು 'ಪ್ರವತ್ಯನೋಂಕೃತಂ ಬ್ರಹ್ಮ' ಇತ್ಯಾದಿ ವಚನಾತ್ ಪ್ರತ್ಯಧಿಕರಣಾವರ್ತಮಾನತ್ವಾತ್ ಪೃಥಗುಚ್ಚಾರಿತೋ ವೇದಿತವ್ಯೋ ನಾತ್ರಾಥಶಬ್ದವತ್ಸೂತ್ರೋಪನಿಬದ್ಧಃ ॥೮॥

ವ್ಯಾಖ್ಯೇಯವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮೊದಲನೆಯ ಸೂತ್ರ ಹೀಗಿದೆ – ಅಥಾತೋ ಬ್ರಹ್ಮಜಿಜ್ಞಾಸಾ ಎಂದು. ಓಂಕಾರ ಮತ್ತು ಅಥಶಬ್ದಗಳು ಮಂಗಳಕರವಾಗಿವೆ. ಆದ್ದರಿಂದ ಗ್ರಂಥಾರಂಭದಲ್ಲಿ ಉಚ್ಚರಿಸಲು ಯೋಗ್ಯವಾಗಿವೆ. ಪ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ಮೊದಲಾದ ಪ್ರಮಾಣವಚನಗಳ ಆಧಾರದಿಂದ ಓಂಕಾರವು ಪ್ರತಿಯೊಂದು ಸೂತ್ರಗಳ ಪ್ರಾರಂಭದಲ್ಲಿ ಆವೃತ್ತಿಯನ್ನು ಮಾಡಿಕೊಳ್ಳಲು ಯೋಗ್ಯ-

ವಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಓಂಕಾರವನ್ನು ಉಚ್ಚರಿಸಿದ್ದಾರೆಂದು ತಿಳಿಯಬೇಕು. ಅಥಶಬ್ದದಂತೆ ಓಂಕಾರವು ಸೂತ್ರನಿಬದ್ಧವಾಗಿರುವುದಿಲ್ಲ.

## ಒಂಬತ್ತು ಹತ್ತನೆಯ ಶ್ಲೋಕಗಳ ವ್ಯಾಖ್ಯಾನ

ಇದಾನೀಮ್ ಓಂಕಾರಾದ್ಯಖಿಲವೇದಾರ್ಥಭೂತಶಾಸ್ತ್ರಸ್ಯ ವಿಷಯಂ ದರ್ಶಯಿತುಮಾಹ – ಓತತ್ವವಾಚೇತಿ ॥ ಓಂಕಾರಾರ್ಥೋ ವಿಷ್ಣುರೇವ ಗುಣಬೃಂಹಿತೋ ಬೃಹತ್ವಾತ್ ಬ್ರಹ್ಮಶಬ್ದಾರ್ಥಃ । ಸ ಏವ ನಾರಾಯಣೋ ಗುಣನಾಮಯನತ್ವಾತ್ ನಾರಾಯಣಪದೋದಿತಃ । ಸ ಏವ ಗಾಯತ್ರೀಪ್ರತಿಪಾದ್ಯೋ ಭರಣಗಮನಯೋಗಾತ್ ಭರ್ಗಶಬ್ದಾರ್ಥಃ । ಭೂರಾದಿವ್ಯಾಹೃತೀನಾಂ ತಿಸ್ರಣಾಂ ಭೂಮತ್ವಾತ್ ಭಾವಯಿತೃತ್ವಾತ್ ಪ್ರಷ್ಟೃತ್ವೇನ ವೃತ್ತೇಃ ಸ ಏವಾರ್ಥಃ । ಸ ಏವ ಪುರುಷಸೂಕ್ತಪ್ರತಿಪಾದ್ಯಃ । ಪೂರ್ಣಷಡ್ಗುಣತ್ವಾತ್ ಪುರುಷಃ । ಸ ಏವ ಓಂಕಾರಾದಿ ಪಂಚರೂಪಾಣಾಂ ವೇದಾನಾಮರ್ಥಃ ॥೯॥೧೦॥

ಏವಂಭೂತೋ ನಾರಾಯಣಃ ಸರ್ವವೇದಾರ್ಥೋಽಪಿ ತತ್ತತ್ಕುಬುದ್ಧಿಭಿಃ ಅನ್ಯಥಾ ಪ್ರತಿಪನ್ನತ್ವಾತ್ ಜಿಜ್ಞಾಸ್ಯೋ ವಿಧೀಯತೇ।

ಓಂಕಾರಾದಿ ಸಕಲವೇದಾರ್ಥವನ್ನು ಬ್ರಹ್ಮಮೀಮಾಂಸಾಶಾಸ್ತ್ರವು ಪ್ರತಿಪಾದನೆ ಮಾಡುತ್ತಿದೆ. ಇಂಥ ಬ್ರಹ್ಮಮೀಮಾಂಸಾಶಾಸ್ತ್ರದ ವಿಷಯವನ್ನು ತಿಳಿಸುವುದಕ್ಕಾಗಿ "ಓತತ್ವವಾಚೇ" ಇತ್ಯಾದಿಯಾಗಿ ವಾಕ್ಯವು ಹೊರಟಿದೆ.

ವಿಷ್ಣುವೇ ಓಂಕಾರದ ಅರ್ಥವಾಗಿದ್ದಾನೆ. ಅನಂತಗುಣಪರಿಪೂರ್ಣನಾಗಿರುವುದರಿಂದ ಆ ವಿಷ್ಣುವೇ ಬ್ರಹ್ಮಶಬ್ದದ ಪ್ರತಿಪಾದ್ಯನಾಗಿದ್ದಾನೆ. ಆ ನಾರಾಯಣನೇ ಅಪ್ರಾಕೃತವಾದ ಅನಂತಕಲ್ಯಾಣಗುಣಗಳಿಗೆ ಆಶ್ರಯನಾಗಿರುವುದರಿಂದ ನಾರಾಯಣಪದದಿಂದ ಪ್ರತಿಪಾದ್ಯನಾಗಿದ್ದಾನೆ. ಅವನೇ ಮಹಾವಿಷ್ಣು ಎನಿಸಿದ್ದಾನೆ.

ಆ ಓಂಕಾರದಿಂದ ಪ್ರತಿಪಾದ್ಯನಾದ ನಾರಾಯಣನೇ ಗಾಯತ್ರೀಮಂತ್ರದಿಂದ ಪ್ರತಿಪಾದ್ಯನಾಗಿದ್ದಾನೆ. ಭರಣ ಮತ್ತು ಗಮನಗಳಿಂದ ಭರ್ಗಶಬ್ದಾರ್ಥನಾಗಿದ್ದಾನೆ. ಭೂಃ, ಭುವಃ, ಸ್ವಃ ಎಂಬ ಮೂರು ವ್ಯಾಹೃತಿಗಳಿಗೆ ಭೂಮತ್ವ, ಭಾವಯಿತೃತ್ವ, ಸ್ವಪ್ರವೃತ್ತ್ವ ಎಂಬ ಅರ್ಥಗಳಿರುವುದರಿಂದ ನಾರಾಯಣನು ಪೂರ್ಣನಾಗಿರುವುದರಿಂದ ಸರ್ವೋತ್ಕೃಷ್ಟನಾಗಿರುವುದರಿಂದ ಸೃಷ್ಟಿಕರ್ತನಾಗಿರುವುದರಿಂದ ವ್ಯಾಹೃತಿಗಳ ಅರ್ಥನೆನಿಸಿದ್ದಾನೆ. ಅವನೇ ನಾರಾಯಣನೆನಿಸಿದ್ದಾನೆ. ಮತ್ತು ಆ ನಾರಾಯಣನೇ ಪುರುಷಸೂಕ್ತದಿಂದ ಪ್ರತಿಪಾದ್ಯನಾಗಿದ್ದಾನೆ. ಪೂರ್ಣವಾದ ಷಡ್ಗುಣೈಶ್ವರ್ಯಸಂಪನ್ನನಾಗಿರುವುದರಿಂದ ಅವನನ್ನು ಪುರುಷ ಎನ್ನುತ್ತಾರೆ. ಹೀಗೆ ಆ ನಾರಾಯಣನೇ ಓಂಕಾರ, ವ್ಯಾಹೃತಿ, ಗಾಯತ್ರೀ, ಪುರುಷಸೂಕ್ತ, ಋಗಾದಿವೇದ ಹೀಗೆ ಪಂಚರೂಪಾತ್ಮಕವಾದ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ.

ಹೀಗೆ ನಾರಾಯಣನು ಸರ್ವವೇದಾರ್ಥಪ್ರತಿಪಾದ್ಯನಾಗಿದ್ದರೂ ಕೂಡ ಆಯಾ ಕಾಲಕ್ಕೆ ಹುಟ್ಟುವ ಕುಬುದ್ಧಿಗಳಿಂದ ಮತ್ತು ಮಿಥ್ಯಾಜ್ಞಾನಿಗಳಿಂದ ಅನ್ಯಥಾ ಪ್ರತಿಪನ್ನನಾಗುತ್ತಾನೆ. ಆದ್ದರಿಂದ ಇವನ ಜಿಜ್ಞಾಸೆಯನ್ನು ಇಲ್ಲಿ ವಿಧಿಸಲಾಗಿದೆ.

* * * * * * *

ಶ್ರೀಮತ್ಕವಿಕುಲತಿಲಕ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯಸುತ
ಶ್ರೀಮನ್ನಾರಾಯಣಪಂಡಿತಾಚಾರ್ಯ ವಿರಚಿತ

# ನಯಚಂದ್ರಿಕಾ

## ನಾಕನೆಯ ಪದ್ಯದ ವ್ಯಾಖ್ಯಾನ

ಸೂತ್ರಾಣಾಂ ಪ್ರಾಮಾಣ್ಯಂ ಸಾಧಯಿತುಮ್ ಆಪ್ತಿಮೂಲತ್ವಾದಿಕಂ ದರ್ಶಯತಿ – ಪ್ರಾದುರ್ಭೂತ ಇತಿ ॥ ಬ್ರಹ್ಮಾದೀನಾಂ ಶಾಸ್ತ್ರಗುರೂಣಾಂ ಗುರುತ್ವಾತ್ ಅಸ್ಯ ತದ್ವಚನ-ವಿರೋಧೋ ನಾಸ್ತಿ । ಪ್ರಾತಿಕೂಲ್ಯೇ ಸ್ವಗುರುವಿರೋಧಾತ್ ತಸ್ಯೈವ ಅಪ್ರಾಮಾಣ್ಯ-ಪ್ರಾಪ್ತೇಃ । ಶಾಸ್ತ್ರಾಣಾಂ ಭಾರತಾದೀನಾಂ ಪ್ರಭವತ್ವಾತ್ ಅಸ್ಯ ನ ತದ್ವಿರೋಧೋಽಪಿ । ಏವಂಭೂತೋ ಬಾದರಾಯಣಃ ಇತಿ ಯತಃ, ಅತಃ ತದುದಿತಮ್ ಆಪ್ತಿಮೂಲತ್ವೇನ ಮಾನಮ್ । ತದರ್ಥತಃ = ತತ್ತ್ವಯೋಜನಾಯ । ತಥಾ ಹಿ । ಹರಿರೇವ ವ್ಯಾಸರೂಪೋ ವಕ್ತಾ । ಜ್ಞಾನವಕ್ತೃಭಾವಾದ್ ಆಪದಿ ವಿರಿಂಚಾದೀನಾಮ್ ಅರ್ಥನಾಪ್ರಸಂಗಃ, ತತ ಏವ ಅಜಾದಯಃ ಶ್ರೋತಾರೋಽಪಿ ॥

ಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧನೆ ಮಾಡುವುದಕ್ಕಾಗಿ ಆಪ್ತಿಮೂಲತ್ವಾದಿ-ಗಳನ್ನು ತೋರಿಸಲು "ಪ್ರಾದುರ್ಭೂತಃ" ಎಂಬ ಮೂರನೆಯ ಪದ್ಯವು ಹೊರಟಿದೆ. ಬ್ರಹ್ಮಾದಿಗಳು ಶಾಸ್ತ್ರಗುರುಗಳಿಗೂ ಗುರುಗಳಾಗಿದ್ದಾರೆ. ಅವರ ಮಾತುಗಳ ವಿರೋಧವು ವ್ಯಾಸರ ಗ್ರಂಥಕ್ಕೆ ಬರುತ್ತದೆ ಎಂದು ತಿಳಿಯಬಾರದು. ಹಾಗೇನಾದರೂ ವಿರೋಧ ಬಂದರೆ ಸ್ವಗುರುವಿರೋಧವಾಗುವುದರಿಂದ ಆ ಬೇರೆ ಗುರುಗಳ ಮಾತುಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ.

ಶಾಸ್ತ್ರವೆಂದರೆ ಮಹಾಭಾರತ ಎಂದರ್ಥ. ಮಹಾಭಾರತಕ್ಕೆ ನಿರ್ಮಾತೃಗಳಾಗಿರುವು-ದರಿಂದ ಆ ಮಹಾಭಾರತಾದಿಗಳಿಂದಲೂ ಈ ಶಾಸ್ತ್ರಕ್ಕೆ ವಿರೋಧವು ಬರುವುದಿಲ್ಲ.

ಇಂಥ ಬಾದರಾಯಣರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆ. ಆದ್ದರಿಂದ ಆಪ್ತಿಮೂಲಕವಾಗಿದೆ ಎಂದು ತಿಳಿಯಬೇಕು. ಆಪ್ತಿಮೂಲಕವಾಗಿರುವುದರಿಂದ ಪ್ರಮಾಣವಾಗಿದೆ ಎಂದು ತಿಳಿಯಬೇಕು.

ತದರ್ಥತಃ ಎಂದರೆ ಮೋಕ್ಷಪ್ರಯೋಜನಕ್ಕೋಸ್ಕರ ಎಂದರ್ಥ. ಅದು ಹೀಗೆ – ಶ್ರೀಹರಿಯೇ ವೇದವ್ಯಾಸರೂಪದಿಂದ ಉಪದೇಶಕನಾಗಿದ್ದಾನೆ. ತತ್ತ್ವಜ್ಞಾನವನ್ನು ತಿಳಿದವರು, ತತ್ತ್ವಜ್ಞಾನವನ್ನು ಉಪದೇಶ ಮಾಡುವವರು ಲೋಕದಲ್ಲಿ ಯಾರೂ ಇಲ್ಲದಿದ್ದಾಗ ಆಪತ್ಕಾಲವು ಪ್ರಾಪ್ತವಾಗುತ್ತದೆ. ಆ ಕಾಲದಲ್ಲಿ ಚತುರ್ಮುಖಾದಿ ದೇವತೆಗಳು ಭಗವಂತನನ್ನು ಪ್ರಾರ್ಥನೆ ಮಾಡುತ್ತಾರೆ. ಇಂಥ ಪ್ರಸಂಗದಲ್ಲಿ ಆ ಚತುರ್ಮುಖಾದಿಗಳು ಕೂಡ ಶ್ರೋತೃಗಳೇ ಆಗಿದ್ದಾರೆ. ಇದರಿಂದ ಪ್ರಸಂಗಾನುಕೂಲ್ಯ ವಕ್ತ್ರಾನುಕೂಲ್ಯ ಹಾಗೂ ಶ್ರೋತ್ರಾನುಕೂಲ್ಯಗಳನ್ನು ಈ ಗ್ರಂಥಕ್ಕೆ ತಿಳಿಯಬೇಕು. ಇದರಿಂದ ಆಪ್ತಿಮೂಲಕತ್ವವನ್ನು ತಿಳಿದು ಶಾಸ್ತ್ರದಲ್ಲಿ ಪ್ರಾಮಾಣ್ಯವನ್ನು ಸಾಧನೆ ಮಾಡಬೇಕು.

## ಬ್ರಹ್ಮಸೂತ್ರಕ್ಕೆ ಆಪ್ತಿಮೂಲತ್ವಸಮರ್ಥನೆ

ನನು ಭಗವತಾಽಜಾದ್ಯರ್ಥನಾಪ್ರಸಂಗೇ ತೇಭ್ಯಃ ಉದಿತಮ್ ಇತ್ಯೇತಾವತಾ ಕಥಮಾಪ್ತಿಮೂಲತ್ವಮಿತ್ಯತ ಆಹ – ವಕ್ತ್ರೀತಿ ॥ ವಕ್ತೃಶ್ರೋತೃಪ್ರಸಕ್ತೀನಾಮನುಕೂಲತಾಽಽಪ್ತಿರಿತಿ ಯತ್ ತಸ್ಮಾದೇವ । 'ಅನುಕೂಲತಾಽಽಪ್ತಿಃ' ಇತ್ಯುಕ್ತೇಃ 'ಅನುಕೂಲತಯಾಽಽಪ್ತಿಃ' ಇತ್ಯರ್ಥಃ । 'ಸ ವೈ ಬಲಂ ಬಲಿನಾಂ ಚಾಪರೇಷಾಮ್' ಇತಿವತ್ ನಿಮಿತ್ತನೈಮಿತ್ತಿಕಯೋರಭೇದವ್ಯವಹಾರಸಂಭವಾದ್ ವಕ್ತ್ರಾದೀನಾಮೇಕತಮಸ್ಯಾಪಿ ಅನನುಕೂಲತ್ವೇಽಪಿ ಆಪ್ತಿರ್ನ ಸಂಗಚ್ಛತೇ । ಜಿನಾದಿವಕ್ತೃವಾಕ್ಯಾನಾಮಪ್ರಾಮಾಣ್ಯೋಪಲಬ್ಧೇಃ। ನರ್ಮಾದಿ ಸ್ತ್ರೀಜನೇ ಶ್ರೋತರಿ ವಾಽನೃತವಚನಸ್ಯಾದೂಷಣತ್ವಾಚ್ಚ।

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

ಇತಿ ಭಾರತೋಕ್ತನ್ಯಾಯೇನ ಆಪ್ತವಾಕ್ಯತಯಾ ಶ್ರುತಿಭಿರ್ಲಿಂಗೈಶ್ಚ ಅರ್ಥನಿರ್ಣಾಯಕತ್ವಾತ್ ಶ್ರುತಿಮೂಲತಯಾ ಚೈಕಧಾನ್ಯತ್ರ ಗೌತಮಾದಿಸೂತ್ರೇಷು ಸ್ವಯಂ ಕೃತಾಪಿ ತದ್ವ್ಯಾಖ್ಯಾ ಭಾಷ್ಯರೂಪೇಣ ತತ್ರ ನ ಕಿಂಚಿದಪ್ಯನುಕ್ತಮ್ । ತಥಾಽಪಿ ಪುನಃ ಕ್ರಿಯತೇ ಸ್ಪಷ್ಟಾರ್ಥತಃ ಸ್ಪಷ್ಟತ್ವಪ್ರಯೋಜನಾಯ ।

ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಬ್ರಹ್ಮಾದಿದೇವತೆಗಳು ಪ್ರಾರ್ಥನೆ ಮಾಡಿದ ಸಂದರ್ಭದಲ್ಲಿ ಈ ಶಾಸ್ತ್ರವನ್ನು ಉಪದೇಶಿಸಿದ್ದಾನೆ. ಅಂದ ಮಾತ್ರಕ್ಕೆ ಆಪ್ತಿಮೂಲತ್ವವು ಹೇಗೆ ಸಿದ್ಧವಾಗುತ್ತದೆ? ಈ ಪ್ರಶ್ನೆಗೆ 'ವಕ್ತೃಶ್ರೋತೃಪ್ರಸಕ್ತೀನಾಂ' ಎಂಬುದರಿಂದ ಉತ್ತರಿಸಿದ್ದಾರೆ. ವಕ್ತೃಶ್ರೋತೃಪ್ರಸಕ್ತಿಗಳ ಆನುಕೂಲ್ಯವೇ ಆಪ್ತಿಯೆಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಈ ಮೂರೂ ಕೂಡ ಈ ಶಾಸ್ತ್ರದಲ್ಲಿ ಇರುವ ಕಾರಣ ಆಪ್ತಿಮೂಲಕವಾಗಿದೆ ಎಂದು ತಿಳಿಯಬೇಕು. 'ಅನುಕೂಲತಾ ಆಪ್ತಿಃ' ಎಂಬುದಕ್ಕೆ 'ಅನುಕೂಲತಯಾ ಆಪ್ತಿಃ' ಎಂದರ್ಥ. 'ಸ ವೈ ಬಲಂ ಬಲಿನಾಂ ಚಾಪರೇಷಾಮ್' ಎಂಬಂತೆ ನಿಮಿತ್ತ ಹಾಗೂ ನೈಮಿತ್ತಿಕಗಳಿಗೆ ಅಭೇದವ್ಯವಹಾರವನ್ನು ಮಾಡುವುದು ತಪ್ಪಾಗುವುದಿಲ್ಲ. ವಕ್ತ್ರಾದ್ಯಾನುಕೂಲ್ಯಗಳಲ್ಲಿ ಒಂದು ಇಲ್ಲದಿದ್ದರೂ ಕೂಡ ಆಪ್ತಿಯನ್ನು ಸಮರ್ಥಿಸಲಾಗದು. ಜಿನಾದಿವಕ್ತೃವಾಕ್ಯಗಳಲ್ಲಿ ಆದ್ದರಿಂದಲೇ ಅಪ್ರಾಮಾಣ್ಯವು ಇರುತ್ತದೆ. ನರ್ಮಾದಿಪ್ರಸಕ್ತಿಯಲ್ಲಿ ಸ್ತ್ರೀಜನರು ಶ್ರೋತೃಗಳಾದಾಗ ಸುಳ್ಳುಹೇಳುವುದು ತಪ್ಪಾಗುವುದಿಲ್ಲ.

ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ನ ರಾಜನ್ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥

ನರ್ಮಪ್ರಸಂಗದಲ್ಲಿ, ಸ್ತ್ರೀಯರ ಮಧ್ಯದಲ್ಲಿ, ವಿವಾಹಕಾಲದಲ್ಲಿ, ಪ್ರಾಣಹೋಗುವ ಸಂದರ್ಭದಲ್ಲಿ, ಸರ್ವಸಂಪತ್ತು ನಾಶವಾಗುವ ಕಾಲದಲ್ಲಿ ಈ ಐದು ಸಂದರ್ಭದಲ್ಲಿ ಸುಳ್ಳುಹೇಳುವುದರಿಂದ ಪಾಪವು ಬರುವುದಿಲ್ಲ. ಹೀಗೆ ಮಹಾಭಾರತವು

ಹೇಳುತ್ತಿದೆ. ಈ ನ್ಯಾಯದಿಂದ ನರ್ಮಾದಿವಾಕ್ಯಗಳಲ್ಲಿ ಪ್ರಸಂಗಾನುಕೂಲ್ಯವು ಇರುವುದಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಆಪ್ತವಾಕ್ಯತ್ವವಿದೆ. ಶ್ರುತಿ ಹಾಗೂ ಲಿಂಗಗಳಿಂದ ಅರ್ಥನಿರ್ಣಯ ಮಾಡುತ್ತಿರುವುದರಿಂದ, ಶ್ರುತಿಮೂಲಕತ್ವ ಹಾಗೂ ಯುಕ್ತಿಮೂಲಕತ್ವಗಳಿರುತ್ತವೆ. ಗೌತಮಾದಿ ಸೂತ್ರಗಳಲ್ಲಿ ಈ ಮೂರರಲ್ಲಿ ಒಂದೊಂದು ಇದ್ದರೂ ಕೂಡ ವ್ಯಾಖ್ಯಾನ ಮಾಡಿರುವುದು ಕಾಣಿಸುತ್ತಿದೆ. ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮೂರು ಕೂಡ ಇರುವುದರಿಂದ ಪರಮಪ್ರಮಾಣವಾಗಿದೆ. ಆದ್ದರಿಂದಲೇ ವ್ಯಾಖ್ಯಾನಮಾಡಲು ಅತ್ಯಂತಯೋಗ್ಯವಾಗಿದೆ. ಬ್ರಹ್ಮಸೂತ್ರಭಾಷ್ಯರೂಪದಿಂದ ಒಮ್ಮೆ ವ್ಯಾಖ್ಯಾನ ಮಾಡಿದ್ದರೂ ಕೂಡ ಪುನಃ ಸ್ಪಷ್ಟತೆಗಾಗಿ ಅನುವ್ಯಾಖ್ಯಾನರೂಪದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

## ನಾರಾಯಣನೇ ಜಿಜ್ಞಾಸ್ಯನು

ಅಥಾತೋ ಬ್ರಹ್ಮಜಿಜ್ಞಾಸಾ ಇತ್ಯಾದಿ ಸೂತ್ರಂ ವ್ಯಾಖ್ಯಾಯತೇ – ತತ್ರೇತ್ಯಾದಿನಾ ॥ ತತ್ರ ಪರವಿದ್ಯಾಯಾಂ ವರ್ತಮಾನಂ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯಾಪಿ ಇಷ್ಯತೇ । ನ ಕೇವಲಂ ಪ್ರಥಮಸೂತ್ರಸ್ಯಾಪಿ ತದರ್ಥತ್ವೇನ ಅನುಸಂಧೇಯ ಇತ್ಯರ್ಥಃ । ತಾರಾರ್ಥೇ ಗುಣಪೂರ್ಣತ್ವ ಏವ ಸರ್ವತ್ರ ತಾತ್ಪರ್ಯಾತ್ । ಅಥಶಬ್ದಾರ್ಥಸ್ಯ ಮಂಗಲಸ್ಯಾಪಿ ಸರ್ವತ್ರ ವಿವಕ್ಷಿತತ್ವಾತ್ । ಸರ್ವತ್ರ ಶಬ್ದತೋಽಪ್ಯನುಗತತ್ವಾದೋಂಕಾರಃ ಪೃಥಗೇವೋಚ್ಚಾರ್ಯತೇ । ನ 'ಅಥ'ಶಬ್ದವತ್ ಸೂತ್ರೇ ನಿಬದ್ಧಃ । ತಸ್ಮಾತ್ ಪ್ರಣವಾನಂತರಮಧ್ಯಯನಸ್ಯ ವಿರಾಮೇ ಸತ್ಯೇವಾಧ್ಯಯನಾರ್ಥಂ ಪುನರೋಂಕುರ್ವತೇ । 'ಪ್ರವೃತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ । ಅನೋಂಕೃತಮಾಸುರಂ ಭವತಿ' ಇತಿ ವಚನಾಚ್ಚ । ತಾರಬ್ರಹ್ಮಶಬ್ದಯೋರರ್ಥಮಾಹ – ಓತತ್ವೇತಿ ॥ ಯೋ ನಾರಾಯಣಪದೋದಿತೋ ವಿಷ್ಣುಃ ಸ ಏವಾಸ್ಯ ಬ್ರಹ್ಮಶಬ್ದಾರ್ಥ ಇತಿ । ಅನಯೋಃ ಶಬ್ದಯೋರ್ಗುಣಪೂರ್ತಿವಾಚಕತ್ವೇನ ಪರ್ಯಾಯತ್ವಾತ್ । ಅಸಾವೋಂಕಾರಶ್ಚ ತದ್ಗುಣೋತತಾಂ ವಕ್ತಿ ಹಿ । ಸ ಏವ

ಗಾಯತ್ರೀಶಬ್ದಪ್ರತಿಪಾದ್ಯತ್ವೇನ ಭರ್ಗಶಬ್ದಾರ್ಥಃ । ವ್ಯಾಹೃತೀನಾಂ ಚ ಸ ಏವಾರ್ಥಃ । ಸೋಽಯಂ 'ಸಹಸ್ರಶೀರ್ಷಾ ಪುರುಷಃ' ಇತ್ಯುಚ್ಯತೇ । ಪಾಪಸ್ಯ ಭಂಜನಾದ್ ಭರ್ಗಃ । ಪುರು ಪ್ರಾಣತ್ವಾತ್ ಪುರುಷಃ । 'ಪಕಾರಃ ಪ್ರಾಣ ಆತ್ಮಾ' ಇತಿ ಹಿ ಶ್ರುತಿಃ । ಏವಮೋಂಕಾರಾದ್ಯಶೇಷವೇದಾರ್ಥಭೂತೋಽಯಂ ನಾರಾಯಣೋಽತ್ರ ಜಿಜ್ಞಾಸ್ಯೋ ವಿಧೀಯತೇ ॥

ಬ್ರಹ್ಮಸೂತ್ರಭಾಷ್ಯದಿಂದ ಸೂತ್ರಕ್ಕೆ ಒಮ್ಮೆ ವ್ಯಾಖ್ಯಾನ ಮಾಡಿದ್ದರೂ ಕೂಡ ಸೂತ್ರಗಳ ಸ್ಪಷ್ಟವಾದ ಅರ್ಥವನ್ನು ತಿಳಿಸುವುದಕ್ಕಾಗಿ ಪುನಃ ಅನುವ್ಯಾಖ್ಯಾನಗ್ರಂಥದಿಂದ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ. ಮೊದಲು ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಪ್ರಥಮಸೂತ್ರಕ್ಕೆ ''ತತ್ರ'' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪರವಿದ್ಯೆಯಲ್ಲಿರುವ 'ತಾರ' ಮತ್ತು 'ಅಥ' ಶಬ್ದಗಳು ಎಲ್ಲಾ ಶಾಸ್ತ್ರಗಳಲ್ಲೂ ಕೂಡ ಪ್ರಾರಂಭದಲ್ಲಿ ಪ್ರಯುಕ್ತವಾಗಿರುತ್ತವೆ. ತಾರಾರ್ಥವೆನಿಸಿದ ಗುಣಪೂರ್ಣತ್ವದಲ್ಲೇ ಎಲ್ಲೆಡೆಯೂ ತಾತ್ಪರ್ಯವು ಇರುತ್ತದೆ. ಅಥಶಬ್ದಕ್ಕೆ ಮಂಗಲ ಎಂಬರ್ಥವೂ ಕೂಡ ಎಲ್ಲೆಡೆಯೂ ವಿವಕ್ಷಿತವಾಗಿರುತ್ತದೆ. ಎಲ್ಲೆಡೆಯೂ ಶಬ್ದತಃ ಅನುಗತವಾದ ಓಂಕಾರವನ್ನು ಪ್ರತ್ಯೇಕವಾಗಿಯೇ ಸೂತ್ರದಲ್ಲಿ ಉಚ್ಚರಿಸಲಾಗಿದೆ. ಅಥಶಬ್ದದಂತೆ ಸೂತ್ರದಲ್ಲಿ ಅದನ್ನು ಸೇರಿಸಿರುವುದಿಲ್ಲ. ಆದ್ದರಿಂದ ಪ್ರಣವದ ನಂತರ ಅಧ್ಯಯನ ಮಾಡಿ ಮುಗಿಸುವಾಗಲೂ, ಪುನಃ ಅಧ್ಯಯನ ಮಾಡುವಾಗ ಓಂಕಾರವನ್ನು ಉಚ್ಚರಿಸುತ್ತಾರೆ. 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ । ಅನೋಂಕೃತಮಾಸುರಂ ಭವತಿ' ಎಂಬ ಮಾತಿನಂತೆ ಮೊದಲು ಮತ್ತು ಕೊನೆಯಲ್ಲಿ ಓಂಕಾರವನ್ನು ಉಚ್ಚಾರ ಮಾಡಲೇ ಬೇಕು. ಓಂಕಾರ ಮತ್ತು ಬ್ರಹ್ಮಶಬ್ದಗಳ ಅರ್ಥವನ್ನು ''ಓತತ್ವವಾಚೀ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಯಾವ ನಾರಾಯಣಪದದಿಂದ ಪ್ರತಿಪಾದ್ಯನಾದ ವಿಷ್ಣುವಿದ್ದಾನೋ ಅವನೇ ಬ್ರಹ್ಮಶಬ್ದದ ಅರ್ಥನಾಗಿದ್ದಾನೆ. ಈ ಎರಡು ಶಬ್ದಗಳು ಗುಣಪೂರ್ಣಕ್ಕೆ ವಾಚಕವಾಗಿರುವುದರಿಂದ ಪರ್ಯಾಯಶಬ್ದಗಳಾಗಿವೆ. ಈ ಓಂಕಾರವು ಕೂಡ ಆ ಗುಣಪೂರ್ಣತ್ವವನ್ನೇ

ಹೇಳುತ್ತದೆ. ಅದನ್ನೇ ಗಾಯತ್ರೀಶಬ್ದವು ಹಾಗೂ ಭರ್ಗಶಬ್ದವು ಕೂಡ ಪ್ರತಿಪಾದನೆ ಮಾಡುತ್ತಿದೆ. ವ್ಯಾಹೃತಿಗಳ ಅರ್ಥವೂ ಕೂಡ ಆ ಗುಣಪೂರ್ಣನೇ ಆಗಿದ್ದಾನೆ. ಅವನೇ 'ಸಹಸ್ರಶೀರ್ಷಾ ಪುರುಷಃ' ಇತ್ಯಾದಿ ಪುರುಷಸೂಕ್ತಪ್ರತಿಪಾದ್ಯನಾಗಿದ್ದಾನೆ. ಪಾಪಗಳ ಭಂಜಕನಾದ್ದರಿಂದ ಭರ್ಗ ಎನಿಸುತ್ತಾನೆ. ಪ್ರಾಣದಾತೃವಾಗಿರುವುದರಿಂದ ಪುರುಷನಾಗಿ-ದ್ದಾನೆ. 'ಷಕಾರಃ ಪ್ರಾಣ ಆತ್ಮಾ' ಎಂಬ ಶ್ರುತಿಯು ಷಕಾರಕ್ಕೆ ಪ್ರಾಣ ಎಂಬರ್ಥವನ್ನು ಹೇಳುತ್ತಿದೆ. ಹೀಗೆ ಓಂಕಾರ ಮೊದಲಾದ ಅಶೇಷವೇದಗಳ ಅರ್ಥವೆನಿಸಿದ ನಾರಾ-ಯಣನೇ ಜಿಜ್ಞಾಸ್ಯನಾಗಿ ವಿಧಿಸಲ್ಪಟ್ಟಿದ್ದಾನೆ.

* * * * * *

-----

'ಶ್ರೀಮನ್ನ್ಯಾಯಸುಧಾ-ಪರಿಮಳವಿಶೇಷಾಧ್ಯಯನ'
ಗ್ರಂಥದಲ್ಲಿ ಎರಡನೆಯ ಸಂಪುಟವು ಶ್ರೀಗುರುರಾಜಾಂತರ್ಗತ-ಮಧ್ವಾಂತರ್ಗತ-
ಶ್ರೀಲಕ್ಷ್ಮೀಹಯವದನಾತ್ಮಕಮೂಲರಾಮದೇವರಿಗೆ ಅರ್ಪಿತವಾಯಿತು.

ಶ್ರೀಮಧ್ವೇಶಾರ್ಪಣಮಸ್ತು



ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲ ಸೂತ್ರ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'.
ಇಲ್ಲಿ ಕಾಣುವುದು ನಾಕ್ಕೈದು ಪದಗಳು ಮಾತ್ರ.
ಆದರೆ ಜಗದ್ಗುರು ಶ್ರೀಮಧ್ವಾಚಾರ್ಯರು ಮಾಡಿದ ವ್ಯಾಖ್ಯಾನ ಎಂಬತ್ತೆಂಟು ಪದ್ಯಗಳು.
ಶ್ರೀ ಜಯತೀರ್ಥರ ಟೀಕೆ ನೂರಾರು ಪತ್ರಗಳು.
ರಾಯರೇ ಮೊದಲಾದ ಮಹನೀಯರ ಟಿಪ್ಪಣಿಗಳ ಪತ್ರಗಳು ಸಾವಿರಾರು.
'ಪರಿಮಳ ವಿಶೇಷಾಧ್ಯಯನ' ಎಂಬ ಬೃಹತ್ ಯೋಜನೆಯ ಪ್ರಥಮ ಸಂಪುಟದಲ್ಲಿ
ಕೇವಲ ಮೂರು ಶ್ಲೋಕಗಳ ಅನುವಾದವಿದೆ. ಇದರಲ್ಲಿ ಮುಂದಿನ ಐದು ಶ್ಲೋಕಗಳ
ಅನುವಾದವಿದೆ. ಹಾಗಾದರೆ 88ರಲ್ಲಿ ಆದದ್ದು 8 ಮಾತ್ರ. ಉಳಿದದ್ದು 80.
ಅಲ್ಲಿಗೆ ಮುಗಿಯಲಿಲ್ಲ. ಇನ್ನೂ ಸಾವಿರಾರು ಇವೆ. ಭಯವಿಲ್ಲ.
ಎದುರು ಶ್ರೀಸುಬುಧೇಂದ್ರತೀರ್ಥರಿದ್ದಾರೆ.

ಲೇಖಕ ....

ಪ್ರಕಾಶನ :
ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀ ರಾಘವೇಂದ್ರಸ್ವಾಮಿಗಳ ಮಠ
ಮಂತ್ರಾಲಯ – 518 345 (ಆಂಧ್ರ ಪ್ರದೇಶ)